ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಶ್ರೀ ಶಂಕರಾಚಾರ್ಯರವರ ಗ್ರಂಥಗಳು

# ಶ್ರೀಮದ್ಭಗವದ್ಗೀತಾಭಾಷ್ಯ

## ಸಂಪುಟ ೨

(೯—೧೮ ಅಧ್ಯಾಯಗಳು)

ಆಸ್ಥಾನವಿದ್ವಾನ್
**ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ**



ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
೧೯೪೭

# ಪ್ರಕಾಶಕರ ಬಿನ್ನಹ

ಶ್ರೀಶಂಕರಾಚಾರ್ಯರವರ ಅಮೋಘವಾದ ಕೃತಿಗಳನ್ನೆಲ್ಲ ಕನ್ನಡಿಸಿ ಮಹಾಜನರ ಮುಂದೆ ಇಡುವ ಸುಯೋಗವು ಕಾರ್ಯಾಲಯಕ್ಕೆ ಇದೀಗ ಲಭಿಸಿರುತ್ತದೆ. ನಮ್ಮನ್ನಾಳುವ ಶ್ರೀಮತ್ಕರ್ಣಾಟಕಸಿಂಹಾಸನಾಧೀಶ್ವರರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್**, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಸ್ವಾಮಿಯವರು ಜಗತ್ಪ್ರಸಿದ್ಧರಾದ ಆಚಾರ್ಯರವರ ಗ್ರಂಥಗಳೆಲ್ಲವನ್ನೂ ಪರಿಶೋಧಿಸಿ ಸಮೂಲವಾಗಿ ಕನ್ನಡಿಸಿ ಪ್ರಕಟಿಸಬೇಕೆಂದು ಕೊಡಿಸಿರುವ ಉದಾರಾಜ್ಞೆಯನ್ನು ಶಿರಸಾವಹಿಸಿ ಈ ಮಹಾಕಾರ್ಯವನ್ನು ನಾವು ಕೈಗೊಂಡಿರುತ್ತೇವೆ.

ಇದುವರೆಗೆ ನಾವು ಪ್ರಕಟಿಸಿದ್ದ ಕೆಲವು ಗ್ರಂಥಗಳನ್ನು ಈ ಸಲ ಸಂಪೂರ್ಣವಾಗಿ ಪರಿಷ್ಕರಿಸಿ, ಸಂಸ್ಕೃತಮೂಲ, ಕನ್ನಡ ಅನುವಾದ, ಮುಖ್ಯವಿಷಯಗಳನ್ನು ವಿಶದೀಕರಿಸುವ ಟಿಪ್ಪಣಿಗಳು, ಆಚಾರ್ಯರ ಮಿಕ್ಕ ಗ್ರಂಥಗಳಲ್ಲಿ ವಿಷಯವಿವೇಚನೆಯ ಹೋಲಿಕೆಯನ್ನು ಸುಲಭಗೊಳಿಸುವ ಗ್ರಂಥಪರಾಮರ್ಶಿಕೆಗಳು, ಆಯಾ ಗ್ರಂಥದ ಸಾರ, ಮಂತ್ರಗಳ ಅಥವಾ ಶ್ಲೋಕಗಳ ಅಕ್ಷರಾನುಕ್ರಮಣಿಕೆ, ಶಬ್ದಾನುಕ್ರಮಣಿಕೆ–ಇಷ್ಟನ್ನೂ ಸೇರಿಸಿ ಪರಿಪೂರ್ತಿಗೊಳಿಸಿರುತ್ತವೆ. ಉಳಿದ ಗ್ರಂಥಗಳನ್ನು ಮೊದಲನೆಯ ಸಲಕ್ಕೆ ಕನ್ನಡಿಸಿ ಇದೇ ರೀತಿಯ ಸಲಕರಣೆಗಳೊಡನೆ ಹೊರಕ್ಕೆ ತರಲಾಗಿದೆ. ಗ್ರಂಥದ ಪೀಠಿಕೆಯಲ್ಲಿ ಕಾಣುವ ವಿಷಯವಿವೇಚನೆಯು ವಿಚಾರಪ್ರಚೋದಕವಾಗಿರುವಂತೆ ಏರ್ಪಡಿಸಲಾಗಿದೆ. ಮೂಲಭಾಷ್ಯವನ್ನು ತಕ್ಕಂತೆ ಪ್ರಘಟ್ಟಗಳಾಗಿ ವಿಂಗಡಿಸಿ ತಲೆಬರಹಗಳನ್ನು ಸೇರಿಸಿರುವದು; ಮುಖ್ಯ ಪಾಠಭೇದಗಳನ್ನು ಸೂಚಿಸಿರುವದು; ಪ್ರಮಾಣವಚನಗಳ ಸ್ಥಾನವನ್ನು ಅಲ್ಲಲ್ಲಿಯೇ ತೋರಿಸಿರುವದು; ಭಾಷ್ಯ, ಅನುವಾದ, ಟಿಪ್ಪಣಿಗಳು–ಮುಂತಾದವುಗಳು ವಿಂಗಡವಾಗಿ ಕಾಣುವಂತೆ ಬೇರೆಬೇರೆಯ ತರದ ಅಚ್ಚಿನ ಅಕ್ಷರಗಳನ್ನು ಆರಿಸಿಕೊಂಡಿರುವದು–ಇವಿಷ್ಟೂ ಈ ಗ್ರಂಥರತ್ನಮಾಲೆಯ ವಿಶೇಷಗಳು.

ಈ ಗ್ರಂಥಾವಳಿಯ ಪ್ರಯೋಜನವು ಕನ್ನಡನಾಡಿನ ಮಹಾಜನರಿಗೆ ಸತತವಾಗಿ ಲಭಿಸುವಂತೆಯೂ, ಇದಕ್ಕೆ ಉದಾರಹಸ್ತಾವಲಂಬನವನ್ನಿತ್ತು ಕಾರ್ಯಾಲಯದ ಪರಿಪಾಲಕರಾಗಿರುವ ಮಹಾಪ್ರಭುಗಳವರಿಗೆ ಇತೋಽಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯವಿಜಯಕೀರ್ತಿವಂಶಾಭಿವೃದ್ಧ್ಯಾದಿಗಳನ್ನು ಸುರಿಮಳೆಗೈಯುವಂತೆಯೂ, ಅನುಗ್ರಹಿಸಬೇಕೆಂದು ಅಖಿಲಾತ್ಮನೂ ಲೋಕಶಂಕರನೂ ಆದ ಭಗವಂತನನ್ನು ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೩೫

ಶ್ರೀ ಶಂಕರಾಚಾರ್ಯವಿರಚಿತ

# ಶ್ರೀಮದ್ಭಗವದ್ಗೀತಾಭಾಷ್ಯ

ಗೀತೆಯ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ
ಮುಂತಾದವುಗಳೊಡನೆ

ಬರೆದವರು :
ಆಧ್ಯಾತ್ಮಗ್ರಂಥಾವಳಿಯ ಸಂಪಾದಕ
**ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ**

ಎರಡನೆಯ ಸಂಸ್ಕರಣ

ಆಧ್ಯಾತ್ಮಗ್ರಂಥಾವಳಿ ಕ್ರಮಾಂಕ ೧೬

ಆಧ್ಯಾತ್ಮಪ್ರಕಾಶ ಕಾರ್ಯಾಲಯ
ಹೊಳೆನರಸೀಪುರ
೧೯೫೭

# ಹೊಸ ಸಂಸ್ಕರಣದ ಮೊದಲ ಮಾತು

ಗೀತಾಭಾಷ್ಯದ ಮೊದಲನೆಯ ಸಂಪುಟದಲ್ಲಿ ಬರೆದಿರುವದರ ಜೊತೆಗೆ ಹೇಳುವ ಮಾತು ಸ್ವಲ್ಪವೇ ಉಳಿದಿರುತ್ತದೆ. ಈ ಭಾಗವು ನಾನು ನಿರೀಕ್ಷಿಸಿದ್ದ ಕ್ಕಿಂತ ಸ್ವಲ್ಪ ಹೆಚ್ಚು ಗಾತ್ರವುಳ್ಳದ್ದಾಗಿರುತ್ತದೆ. ಆದ್ದರಿಂದ ಮುಂದೆ ಪುನರ್ಮುದ್ರಣ ವನ್ನು ಮಾಡುವದಾದರೆ ಒಂಬತ್ತನೆಯ ಅಧ್ಯಾಯವನ್ನೂ ಮೊದಲನೆಯ ಸಂಪುಟಕ್ಕೇ ಸೇರಿಸಿಬಿಡಬೇಕೆಂಬ ಯೋಚನೆಯಿದೆ.

ಪಾಠಾಂತರಗಳನ್ನು ಮೊದಲನೆಯ ಸಂಪುಟದಲ್ಲಿ ತಿಳಿಸಿರುವಂತೆಯೇ ಇಲ್ಲಿಯೂ ಶೋಧಿಸಿರುವೆನಾದರೂ ನನಗೆ ಈ ಭಾಗದಲ್ಲಿ ಸಹಾಯವನ್ನು ಮಾಡಿರುವ ಬ್ರ॥ಶ್ರೀ॥ ವಿದ್ವಾನ್ ಕೊಡೂರು ಕೃಷ್ಣಜೋಯಿಸರವರಿಗಾಗಲಿ ನನಗಾಗಲಿ ಕಣ್ಣಿಗೆ ಬೀಳದೆ ಇರುವ ಇನ್ನೂ ಹಲವು ಪಾಠಾಂತರಗಳಿವೆ ಎಂದೇ ನನ್ನ ಭಾವನೆ. ಬೇರೆಬೇರೆ ಪ್ರಾಚೀನಪುಸ್ತಕಕೋಶಾಗಾರಗಳಲ್ಲಿ ಸಿಕ್ಕಬಹುದಾದ ಕೈಬರಹದ ಪ್ರತಿಗಳನ್ನು ನೋಡಿದಹೊರತು ಪಾಠಶೋಧನೆಯು ಪರಿಪೂರ್ಣವಾಯಿತೆಂದು ನಂಬುವ ಹಾಗಿಲ್ಲ.

ಭಗವದ್ಗೀತೆಯ ಅನುವಾದವನ್ನು ನಾನು ಆನಂದಗಿರೀಯವ್ಯಾಖ್ಯಾನವನ್ನಾ ಗಲಿ ಅಥವಾ ಬೇರೆಯ ಪ್ರಸಿದ್ಧವಾದ ಗೀತಾವ್ಯಾಖ್ಯಾನಗಳನ್ನಾಗಲಿ ಹೋಲಿಸಿ ನೋಡಿಯೇ ಮಾಡಿರುತ್ತೇನಾದರೂ ಯಾವದಾದರೊಂದು ವ್ಯಾಖ್ಯಾನವನ್ನು ಮೊದ ಲಿಂದಲೂ ಕೊನೆಯವರೆಗೂ ಆಧಾರವಾಗಿಟ್ಟುಕೊಂಡಿರುವದಿಲ್ಲ. ಆನಂದಗಿರಿ ಗಳೆಂಬವರು "ಹಿಂದಿನ ಆಚಾರ್ಯರ ಹಾದಿಯನ್ನು ಹಿಡಿದು ಭಾಷ್ಯಕ್ಕೆ ವ್ಯಾಖ್ಯಾನ ವನ್ನು ಮಾಡಿರುತ್ತೇನೆ" ಎಂದು ತಮ್ಮ ವ್ಯಾಖ್ಯಾನದ ಕೊನೆಯಲ್ಲಿ ಹೇಳಿಕೊಂಡಿರು ತ್ತಾರೆ. ಅವರು ಭಾಷ್ಯವ್ಯಾಖ್ಯಾನಗಳು ಕೆಲವನ್ನು ಅಲ್ಲಲ್ಲಿ ಪರಾಮರ್ಶಿಸಿ ಯಥಾ ಸಂಭವವಾಗಿ ತಮ್ಮ ಒಪ್ಪಿಗೆಯನ್ನೋ ಅಸಮ್ಮತಿಯನ್ನೋ ಸೂಚಿಸಿರುತ್ತಾರೆ. ಇದಲ್ಲದೆ ಭಾಷ್ಯದಲ್ಲ ಕಾಣಬರದೆ ಇರುವ ಅನಿರ್ವಚನೀಯಾವಿದ್ಯೋಪಾದಾನವಾದ ವನ್ನೂ ಅನುವಾದಮಾಡಿಕೊಂಡು ಭಾಷ್ಯಕ್ಕೆ ಟೀಕೆಯನ್ನು ಬರೆದಿರುತ್ತಾರೆ. ಈ ಎಲ್ಲಾ ಕಾರಣಗಳಿಂದ ನಾನು ಅವರ ವ್ಯಾಖ್ಯಾನವನ್ನು ಭಾಷ್ಯಾರ್ಥನಿರ್ಣಯಕ್ಕೆ ಹೆಚ್ಚಾಗಿ ಅವಲಂಬಿಸುವದನ್ನು ಬಿಟ್ಟು ಉಪನಿಷದ್ಭಾಷ್ಯಗಳಲ್ಲಿಯೂ ಸೂತ್ರಭಾಷ್ಯದಲ್ಲಿಯೂ ಇದೇ ಬಗೆಯ ಅಭಿಪ್ರಾಯಗಳ ಜಾಡನ್ನು ಹಿಡಿದು ಗೀತಾಭಾಷ್ಯವಾಕ್ಯಗಳಿಗೂ ಅರ್ಥವನ್ನುಮಾಡಿ, ಟೀಕಾಕಾರರ ಅಭಿಪ್ರಾಯವು ಹೊಂದುವದಿಲ್ಲವೆಂದು ನನಗೆ ತೋರಿದ ಕಡೆಗಳಲ್ಲಿ ಟಿಪ್ಪಣಿಯಲ್ಲಿ ಆ ಅಭಿಪ್ರಾಯವನ್ನು ಸೂಚಿಸಿರುತ್ತೇನೆ.

ಈ ನನ್ನ ಭಾಷ್ಯಾನುವಾದದಿಂದ ತತ್ತ್ವಜಿಜ್ಞಾಸುಗಳಿಗೆ ಒಂದಿಷ್ಟಾದರೂ ಪ್ರಯೋಜನವುಂಟಾದರೆ ನಾನು ಧನ್ಯನು.

ಅಧ್ಯಾತ್ಮಕುಟೀರ,
ಸರ್ವಜಿತು, ಆಷಾಢಶುದ್ಧ ಏಕಾದಶಿ.

ಯ. ಸುಬ್ರಹ್ಮಣ್ಯಶರ್ಮಾ.

# ಪೀಠಿಕೆ

## ಗೀತೋಕ್ತವಾದ ಧರ್ಮದ್ವಯ

ಶ್ರೀಶಂಕರಾಚಾರ್ಯರವರ ಅಭಿಪ್ರಾಯದಂತೆ ಗೀತೆಯಲ್ಲಿ ವೇದೋಕ್ತವಾದ ಪ್ರವೃತ್ತಿಧರ್ಮ, ನಿವೃತ್ತಿಧರ್ಮ-ಎಂಬ **ಎರಡು ಧರ್ಮಗಳನ್ನೂ ವಾಸುದೇವನೆಂಬ ಪರಮಾರ್ಥತತ್ತ್ವವನ್ನೂ** ತಿಳಿಸಿಕೊಟ್ಟಿರುತ್ತದೆ (೧, ೨, ೬)-ಎಂದು ಹಿಂದಿನ ಸಂಪುಟದ ಪೀಠಿಕೆಯಲ್ಲಿ ತಿಳಿಸಿರುತ್ತೇವೆ. ಪ್ರವೃತ್ತಿಧರ್ಮವೆಂದರೆ ಆಯಾ ವರ್ಣದವರೂ ಆಶ್ರಮದವರೂ ಮಾಡಬೇಕೆಂದು ವಿಧಿಸಿರುವ ಧರ್ಮವು ; ಅದಕ್ಕೆ ಸ್ವರ್ಗವೇ ಮುಂತಾದ ಸ್ಥಾನಗಳನ್ನು ಪಡೆಯುವದೆಂಬ ಅಭ್ಯುದಯವು ಫಲವು (೧೮-೪೪; ೫).† ನಿವೃತ್ತಿಧರ್ಮವೆಂದರೆ ಸರ್ವಕರ್ಮಸಂನ್ಯಾಸಪೂರ್ವಕವಾದ ಆತ್ಮಜ್ಞಾನನಿಷ್ಠೆಯು (ಅವ. ೪) ; ಅದಕ್ಕೆ ಸದ್ಯೋಮುಕ್ತಿ ಎಂಬ ನೈಷ್ಕರ್ಮ್ಯರೂಪವಾದ ನಿಃಶ್ರೇಯಸವು (೧೮-೪೯,೪) ಫಲವು. ಪ್ರವೃತ್ತಿಧರ್ಮವು ಮೇಲೆ ಹೇಳಿದಂತೆ ಅಭ್ಯುದಯಕ್ಕೆ ಕಾರಣವಾದರೂ ದ್ವಂದ್ವಪ್ರಹಾಣಪೂರ್ವಕವಾಗಿ ಈಶ್ವರಾರ್ಪಣಬುದ್ಧಿಯಿಂದ ಮಾಡಿದರೆ ದುರಿತಕ್ಷಯ, ಸತ್ತ್ವಶುದ್ಧಿ, ಜ್ಞಾನನಿಷ್ಠಾಯೋಗ್ಯತೆ, ಜ್ಞಾನೋತ್ಪತ್ತಿ, ಸರ್ವಕರ್ಮಸಂನ್ಯಾಸ, ಜ್ಞಾನನಿಷ್ಠೆ-ಎಂಬ ಕ್ರಮದಿಂದ ನಿಃಶ್ರೇಯಸಕ್ಕೂ ಕಾರಣವಾಗುತ್ತದೆ (ಅವ. ೫; ೩-೪, ೧೫೩; ೫-೧೨; ೩೪೦; ೧೮-೪೫ ಮತ್ತು ೪೬, ೫೦ ಭಾ. ಭಾ. ೫೩೫, ೫೩೬). ಹೀಗೆ ಪ್ರವೃತ್ತಿಧರ್ಮವು ನಿವೃತ್ತಿಧರ್ಮದ ಮೂಲಕವೂ ನಿವೃತ್ತಿಧರ್ಮವು ನೇರಾಗಿಯೂ ಮೋಕ್ಷಕ್ಕೆ ಉಪಾಯವು ಎಂಬುದು ಗೀತೆಯಲ್ಲಿ ಹೇಳಿರುವ ಸಾಧನವಿಷಯವಾದ ಉಪದೇಶದ ಸಾರವು.

## ಗೀತೋಕ್ತವಾದ ಭಕ್ತಿ

ಈ ಎರಡು ಧರ್ಮಗಳೂ ವಾಸುದೇವನೆಂಬ ಪರಮಾತ್ಮನಿಗೆ ಸಂಬಂಧಿಸಿರುತ್ತವೆ ಎಂಬದು ಮುಖ್ಯವಾಗಿ ನೆನಪಿಡತಕ್ಕ ವಿಷಯವಾಗಿದೆ. ಪ್ರವೃತ್ತಿಧರ್ಮವನ್ನು ಈಶ್ವರನ ಅಭ್ಯರ್ಚನೆಯೆಂದು ಮಾಡಿದರೆ ಜ್ಞಾನನಿಷ್ಠಾಯೋಗ್ಯತೆ ಎಂಬ ಸಂಸಿದ್ಧಿಯು ದೊರಕುವದು (೧೮-೪೫, ೫೩೫); ಅದೇ ಭಕ್ತಿಯೋಗವು (೧೮-೫೬, ೫೬೮). ಆದ್ದರಿಂದ ಯಾವದನ್ನು ನಾವು ಕರ್ಮಪ್ರಧಾನವಾದ ದೃಷ್ಟಿಯಿಂದ **ಕರ್ಮಯೋಗವೆಂದು** ಕರೆಯುವೆವೋ, ಅದೇ ಈಶ್ವರಪ್ರಧಾನವಾದ ದೃಷ್ಟಿಯಿಂದ **ಭಕ್ತಿಯೋಗವೆನಿಸುತ್ತದೆ.** ಕರ್ಮವು ಧ್ಯಾನಯೋಗವನ್ನೇರುವದಕ್ಕೆ ಬೇಕಾದ ಹೊರಗಿನ

† ಇಲ್ಲಿ ಅಧ್ಯಾಯಶ್ಲೋಕಗಳ ಸಂಖ್ಯೆಗಳನ್ನು ಮೊದಲು ಕೊಟ್ಟು ಆಮೇಲೆ ಭಾಷ್ಯಭಾಗದ ಸಂಖ್ಯೆಯನ್ನು ಕೊಟ್ಟಿದೆ.

ಸಾಧನವು, ಸರ್ವಕರ್ಮಸಂನ್ಯಾಸವು ಒಳಗಿನ ಸಾಧನವು (೬-೩, ೩೭೮). ಮಿಕ್ಕ ದೇವತೆಗಳನ್ನು ಭಜಿಸುವ ಯೋಗಿಗಳೆಲ್ಲರಿಗಿಂತಲೂ ವಾಸುದೇವನನ್ನೇ ಭಜಿಸುವವನು ಯುಕ್ತತಮನು (೬-೪೭, ೪೪೩) ಎಂದು ಹೇಳಿರುವದರಿಂದ ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ–ಇವುಗಳು ಒಂದಕ್ಕಿಂತ ಒಂದು ಮೇಲಿನ ಮಟ್ಟದ ಸಾಧನಗಳೆಂದು ಆಚಾರ್ಯರು ಭಾವಿಸಿರುತ್ತಾರೆಂದು ಹೇಳಬೇಕಾಗುತ್ತದೆ.

ಭಕ್ತಿಯು ಇತರ ದೇವತೆಗಳ ಭಕ್ತಿಯೆಂದೂ ಎಲ್ಲರ ಆತ್ಮನಾದ ವಾಸುದೇವನ ಭಕ್ತಿಯೆಂದೂ ಎರಡು ಬಗೆ. ದೇವತೆಗಳನ್ನು ಪೂಜಿಸುವವರೂ ಸಾತ್ತ್ವಿಕರೇ (೧೭-೪ ; ೪೨೩); ಅವರಿಗೆ ದೇವತೆಗಳ ಸಾಯುಜ್ಯವು ದೊರಕುತ್ತದೆ (೯-೨೫; ೪೩). ಆದರೆ ವಾಸುದೇವನೇ ಎಲ್ಲವೂ ಎಂದು ಆತನನ್ನೇ ಭಜಿಸುವವನು ಮಹಾತ್ಮನು (೭-೧೯ ; ೪೭೩) ಅನ್ಯದೇವತೆಗಳಿಗೂ ವಾಸುದೇವನೇ ಆತ್ಮನಾದ್ದರಿಂದ ದೇವಭಕ್ತರೂ ವಾಸುದೇವನನ್ನೇ ಆರಾಧಿಸುತ್ತಿರುವರು ; ಆದರೂ ಅವರು ಅದನ್ನು ಅರಿಯರಾದ್ದರಿಂದ ಅವರಿಗೆ ಕೊನೆಗಾಣುವ ಫಲವಾಗುತ್ತದೆ. (೯-೨೩, ೯-೨೪ ; ೩೯, ೪೧. ೭-೨೩ ; ೪೮೦) ಪಾಪಿಗಳಿಗೆ ಭಗವದ್ಭಕ್ತಿಯು ರುಚಿಸುವದಿಲ್ಲ. (೭-೧೫ ; ೪೬೬) ; ಭಗವಂತನನ್ನು ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂಬ ನಾಲ್ಕು ಬಗೆಯ ಸುಕೃತಿಗಳು ಭಜಿಸುವರು (೭-೧೬ ; ೪೬೮).

ಅರ್ಥಿತ್ವಾದಿನಿಮಿತ್ತವಿಲ್ಲದೆ ಪ್ರೇಮದಿಂದಲೇ ಭಗವಂತನನ್ನು ಭಜಿಸುವವರಿಗೆ ಆತನು ಬುದ್ಧಿಯೋಗವನ್ನು ಕೊಟ್ಟು ಅವರ ಹೃದಯದಲ್ಲಿಯೇ ತಾನಿದ್ದುಕೊಂಡು ಬೆಳಗುವ ಜ್ಞಾನದೀಪದಿಂದ ಅವರ ಅಜ್ಞಾನದ ಕತ್ತಲೆಯನ್ನು ನೀಗುತ್ತಾನೆ. (೧೦-೧೦, ೧೦-೧೧, ೭೨, ೭೪). ಭಗವತ್ತತ್ತ್ವವು ಸರ್ವಯೋಗ್ಯೈಶ್ವರ್ಯದಿಂದಲೂ ಸರ್ವಜ್ಞಾನಶಕ್ತಿಯಿಂದಲೂ ಕೂಡಿದ ಸೋಪಾಧಿಕವಾದ ಸಗುಣರೂಪ, ಯಾವ ಉಪಾಧಿಯೂ ಇಲ್ಲದ ನಿರ್ವಿಶೇಷರೂಪ–ಎಂದು ಎರಡು ಬಗೆಯಾಗಿರುತ್ತದೆ (೧೨–೧ ; ಅವ. ೧೮೧). ಇವುಗಳೊಳಗೆ ಸಗುಣರೂಪವನ್ನು ಭಜಿಸುವದು ಹೆಚ್ಚು ಸುಲಭವು ; ಸಗುಣೋಪಾಸಕರನ್ನು ಭಗವಂತನೇ ಉದ್ಧಾರಮಾಡುತ್ತಾನೆ (೧೨–೨, ೧೮೪ ; ೧೨–೭, ೧೯೦,೧೯೧). ಆದ್ದರಿಂದ ಸಗುಣರೂಪನಾದ ಭಗವಂತನಲ್ಲಿಯೇ ಮನೋಬುದ್ಧಿಗಳನ್ನಿಟ್ಟುಕೊಂಡು ಆತನ ಕರ್ಮವನ್ನೇ ಮಾಡುತ್ತಾ ಆತನ ಭಕ್ತನಾಗಿರಬೇಕು (೧೧-೫೫, ೧೮೦; ೧೨೮, ೧೯೩). ಇದೇ ಗೀತೋಕ್ತಮುಕ್ತಿಸಾಧನಗಳಲ್ಲೆಲ್ಲ ಶ್ರೇಷ್ಠವಾದದ್ದು (೯-೩೪, ೫೭; ೧೧-೫೫, ೧೮೦; ೧೮-೬೪, ೫೭೯, ೧೮-೬೫ ೫೮೧). ಆದರೆ ಈ ಸಗುಣೋಪಾಸನೆಯೂ ಅಜ್ಞಾನದಿಂದ ಕಲ್ಪಿತವಾಗಿರುವ ಆತ್ಮೇಶ್ವರಭೇದವನ್ನವಲಂಬಿಸಿಯೇ ನಡೆಯಬೇಕಾಗಿರುವದರಿಂದ (೧೨-೧೩ ಅವ. ೨೦೦)

ನಿರುಪಾಧಿಕವಾದ ಬ್ರಹ್ಮದ ಜ್ಞಾನದಿಂದಲೇ ನೇರಾಗಿ ಮುಕ್ತಿಯಾಗುವದು (೧೩-೧೨ ೨೪೬; ೧೩-೧೪, ೧೩-೧೫, ೧೩-೧೬, ೧೩-೧೮; ಭಾ. ಭಾ. ೨೫೫ರಿಂದ ೨೬೨).

## ಗೀತೋಕ್ತಜ್ಞಾನ

ಭಗವದ್ಭಕ್ತಿಯಿಂದ ದೊರಕುವ ಮುಕ್ತಿಸಾಧನವಾದ ಜ್ಞಾನದ ಸ್ವರೂಪ ವೇನು ? ಕ್ಷೇತ್ರಕ್ಷೇತ್ರಜ್ಞರ ಜ್ಞಾನವೇ ನಿಜವಾದ ಜ್ಞಾನವು (೧೩-೨) ಎಂದೂ, ಕ್ಷೇತ್ರವೆಂದರೆ ಶರೀರವು, ಇದನ್ನು ಅರಿಯುವವನೇ ಕ್ಷೇತ್ರಜ್ಞನು (೧೩-೧)-ಎಂದೂ ಭಗವಂತನು ಹೇಳಿರುವದರಿಂದ ಸಾಂಖ್ಯರು ಹೇಳುವ ಪ್ರಕೃತಿಪುರುಷವಿವೇಕವನ್ನು ಅಥವಾ ವೈಶೇಷಿಕರು ಹೇಳುವಂತೆ ಈಶ್ವರನಿಗಿಂತ ಭಿನ್ನನಾದ ಜ್ಞಾತೃವಾದ ಜೀವಾತ್ಮನ ಜ್ಞಾನವನ್ನು ಇಲ್ಲಿ ಹೇಳಿದೆ ಎಂದು ಶಂಕಿಸುವದಕ್ಕೂ ಅವಕಾಶವಿದೆ ಆದರೆ "ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನು ಭಗವಂತನೇ" (೧೩-೨) ಎಂಬ ಗೀತೋಕ್ತಿಯು ಈ ಎರಡು ಮತಗಳಿಗೂ ವಿರುದ್ಧವಾಗಿರುವದರಿಂದ ಗೀತೆಯಲ್ಲಿ ಅನೇಕಾತ್ಮವಾದಕ್ಕಾಗಲಿ ತಟಸ್ಥೇಶ್ವರವಾದಕ್ಕಾಗಲಿ ಅವಕಾಶವಿಲ್ಲವೆಂದು ತೀರ್ಮಾನಿಸಿ ಆಚಾರ್ಯರು ಗೀತಾಶಾಸ್ತ್ರದಲ್ಲಿ ಅದ್ವಿತೀಯಾತ್ಮಜ್ಞಾನವನ್ನೇ ಹೇಳಿದೆ ಎಂದು ವಾದಿಸಿರುತ್ತಾರೆ.

ಗೀತೆಯಲ್ಲಿ ಹೇಳಿರುವದು ಅದ್ವಿತೀಯಾತ್ಮನನ್ನೇ ಎಂಬುದಕ್ಕೆ ಆಚಾರ್ಯರು ಹೇಳಿರುವ ಮುಖ್ಯಸಾಧಕಯುಕ್ತಿಗಳನ್ನು ಇಲ್ಲಿ ಜಿಜ್ಞಾಸುಗಳಿಗಾಗಿ ಸಂಗ್ರಹಿಸಿ ತಿಳಿಸುವೆವು. (೧) ಸಾಂಖ್ಯರು ಹೇಳುವ ಇಪ್ಪತ್ತುನಾಲ್ಕು ತತ್ತ್ವಗಳೂ ಕ್ಷೇತ್ರವೇ (೧೩-೫, ೨೩೬) ಎಂದು ಹೇಳಿದ ಬಳಿಕ ಪರಮಾತ್ಮನು ಎಲ್ಲಾ ಕ್ಷೇತ್ರಗಳಲ್ಲಿರುವ ಕ್ಷೇತ್ರಜ್ಞನು (೧೩-೨, ೨೧೪), ಸರ್ವಪ್ರಾಣಿಗಳಲ್ಲಿಯೂ ವಿಭಕ್ತನಾಗಿರುವಂತೆ ತೋರಿದರೂ ಅವಿಭಕ್ತನಾಗಿರುವನು (೧೩-೧೬, ೨೫೮). ಸಾಕ್ಷಿಯು ಅಥವಾ ಉಪದ್ರಷ್ಟೃ (೯-೧೮, ೩೦ ; ೧೩-೨೨, ೨೬೩) ಎಂದು ಹೇಳಿರುವದು ನಿರೀಶ್ವರವಾದಿಗಳೂ ಅನೇಕಪುರುಷವಾದಿಗಳೂ ಆದ ಸಾಂಖ್ಯರ ಸಿದ್ಧಾಂತಕ್ಕೆ ಅತ್ಯಂತವಿರುದ್ಧವಾಗಿರುತ್ತದೆ. (೨) ಇಚ್ಛಾ, ಚೇತನಾ-ಮುಂತಾದವುಗಳು ಕ್ಷೇತ್ರವೇ (೧೩-೬, ೨೩೯) ಎಂದಿರುವದು ಇವು ಆತ್ಮನ ಗುಣಗಳೆನ್ನುವ ವೈಶೇಷಿಕರ ಮತಕ್ಕೆ ವಿರುದ್ಧವಾಗಿದೆ. (೩) ಎಲ್ಲಾ ಭೂತಗಳ ಆತ್ಮನೇ ತಾನೆಂದಿರುವದು ಅವರ ತಟಸ್ಥೇಶ್ವರವಾದಕ್ಕೆ ವಿರುದ್ಧವಾಗಿದೆ ಎಂಬುದು ಸ್ಪಷ್ಟವೇ ಆಗಿದೆ. ಶಂಕರಾಚಾರ್ಯರ ಹಿಂದೆಯೂ ಕೆಲವರು ಅದ್ವೈತವನ್ನು ಗೀತಾರ್ಥವೆಂದು ಹೇಳುತ್ತಿದ್ದರಾದರೂ ಅವರು ಜೀವನು ಜ್ಞಾನಕರ್ಮಸಮುಚ್ಚಯದಿಂದ ಅಥವಾ ಕೇವಲಧ್ಯಾನದಿಂದ ಈಶ್ವರಸಾಯುಜ್ಯವನ್ನು ಸತ್ತಬಳಿಕ ಪಡೆಯುತ್ತಾನೆಂದು ಹೇಳುತ್ತಿದ್ದರು. ಅವರೂ ಆಚಾರ್ಯರಿಗಿಂತ ಈಚೆಗೆ ಬಂದಿರುವ ಭಾಷ್ಯ

ಕಾರರೂ ಹೇಳುವ ಜ್ಞಾನವು ಗೀತೋಕ್ತಜ್ಞಾನವಲ್ಲ, ಆಚಾರ್ಯರಿಗೆ ಸಮ್ಮತವಾದ ಜ್ಞಾನವೇ ಗೀತೆಯಲ್ಲಿ ಪ್ರತಿಪಾದಿತವಾಗಿದೆ ಎಂಬುದಕ್ಕೆ ಸಾಧಕಯುಕ್ತಿಗಳು ಯಾವವೆಂದರೆ: (ಕ) ಅಸತ್ತು ಹುಟ್ಟುವದಿಲ್ಲ, ಸತ್ತು ನಾಶವಾಗುವದಿಲ್ಲ-ಎಂಬ ಸತ್ಕಾರ್ಯವಾದವನ್ನು ಹೂಡಿದ ಬಳಿಕ ಭಗವಂತನು ಶರೀರವು ಅನಿತ್ಯವಾದರಿಂದ ಅಸತ್ತೆಂಬದನ್ನೂ ಆತ್ಮನು ಅವಿನಾಶಿಯಾದ್ದರಿಂದ ಸತ್ತೆಂಬದನ್ನೂ ಸ್ಪಷ್ಟಪಡಿಸಿರುತ್ತಾನೆ (೨-೧೬ರಿಂದ ೧೮). (ಖ) ಆತ್ಮನು ಅವಿಕ್ರಿಯನಾದ್ದರಿಂದ ಅವನಿಗೆ ನಾಶವಿಲ್ಲವೆಂದು ತಿಳಿದವನು ಯಾವ ಕರ್ಮವನ್ನೂ ಮಾಡುವದಿಲ್ಲ (೨-೨೧); ಜ್ಞಾನಿಯು ತನ್ನ ಸ್ವರೂಪದಲ್ಲಿ ಕಾಣುವ ಕರ್ಮವನ್ನು ಅಕರ್ಮವೆಂದು ಅರಿತುಕೊಂಡಿರುತ್ತಾನೆ; ಅವನು ನಿಜವಾಗಿ ಯಾವ ಕರ್ಮವನ್ನೂ ಮಾಡುವದೂ ಇಲ್ಲ. ಪ್ರಕೃತಿಯೇ ಕರ್ಮವನ್ನು ಮಾಡುವದು, ಆತ್ಮನಲ್ಲ ಎಂದು ತಿಳಿದವನೇ ಸರಿಯಾಗಿ ತಿಳಿದವನು (೪-೧೮, ೫-೮, ೫-೧೩; ೧೩-೨೯)-ಇಂಥ ವಾಕ್ಯಗಳು ಆತ್ಮನು ಕರ್ತೃವಲ್ಲವೆಂಬುದನ್ನು ತಿಳಿಸುತ್ತವೆ. (ಗ) ಜ್ಞಾನಿಯು ಭಗವಂತನ ಆತ್ಮನೇ (೭-೧೮), ಸಮದರ್ಶನವುಳ್ಳ ಜ್ಞಾನಿಯು ತನ್ನ ಆತ್ಮನಲ್ಲಿಯೂ ಭಗವಂತನಲ್ಲಿಯೂ ಸರ್ವಪ್ರಾಣಿಗಳೂ ಸರ್ವಪ್ರಾಣಿಗಳಲ್ಲಿ ತನ್ನ ಆತ್ಮನಾದ ಭಗವಂತನೂ ಇರುವರೆಂದು ಕಂಡುಕೊಳ್ಳುತ್ತಾನೆ (೬-೨೯, ೩೦); ಜ್ಞಾನಿಯು ಬ್ರಹ್ಮವನ್ನು ಅರಿತುಕೊಂಡು ಬ್ರಹ್ಮದಲ್ಲಿಯೇ ಸೇರಿಹೋಗುತ್ತಾನೆ (೧೮-೫೫)-ಇಂಥ ವಾಕ್ಯಗಳು ಬ್ರಹ್ಮಾತ್ಮೈಕತ್ವಜ್ಞಾನವೇ ಜ್ಞಾನವೆಂದು ಸಾರುತ್ತವೆ. ಇವೇ ಮುಂತಾದ ಕಾರಣಗಳಿಂದ ತಾವು ಹೇಳುವ ಅದ್ವೈತಜ್ಞಾನವೇ ಗೀತೆಯಲ್ಲಿ ಉಕ್ತವಾಗಿದೆ ಎಂದು ಆಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ.

## ಜ್ಞಾನನಾಶ್ಯವಾದ ಅಜ್ಞಾನ, ಮಾಯೆ

ಅಜ್ಞಾನ, ಮಾಯೆ ಎಂಬ ಎರಡು ಶಬ್ದಗಳು ಗೀತೆಯಲ್ಲಿ ಅಲ್ಲಲ್ಲಿ ಬರುತ್ತವೆ. ಆಚಾರ್ಯರು ಈ ಮಾತುಗಳಿಗೆ ಯಾವ ಅರ್ಥವನ್ನು ಕೊಟ್ಟಿರುತ್ತಾರೆಂಬುದು ವಿಚಾರಾರ್ಹವಾಗಿರುತ್ತದೆ. ಮಾಯೆಯು ಈಶ್ವರನ ಶಕ್ತಿ ಎಂದು (೧೩-೫, ೨೩೭) ಆಚಾರ್ಯರೂ ಇತರ ಭಾಷ್ಯಕಾರರಂತೆ ಬರೆದಿರುತ್ತಾರಾದರೂ ಅವರು ಹೇಳುವ ಮಾಯೆಯು ಪರಮಾರ್ಥವಾಗಿರುವದಲ್ಲ. ಅದು ಅಜ್ಞರಾದ ಪಾಪಿಜೀವರುಗಳಿಗೆ ಮೋಹವನ್ನುಂಟುಮಾಡುವ ತ್ರಿಗುಣಾತ್ಮಕಪ್ರಕೃತಿಯಾಗಿರುತ್ತದೆ. (೩-೨೯, ೧೯೪; ೭-೧೩, ೪೬೨). ಈಶ್ವರನಿಗೆ ಪಂಚಭೂತಗಳು, ಬುದ್ಧಿ, ಅಹಂಕಾರ, ಅವ್ಯಕ್ತ-ಎಂಬ ರೂಪದ ಅಪರಪ್ರಕೃತಿಯೆಂದೂ ಜೀವರೂಪವಾಗಿರುವ ಪರಪ್ರಕೃತಿಯೆಂದೂ ಎರಡು ಬಗೆಯ ಪ್ರಕೃತಿಗಳಿರುವುವು. (೭-೪, ೪೫೧ ; ೭-೫, ೪೫೨); ಪರಮಾತ್ಮನು ಮಾಯೆ

ಯಿಂದ ಹುಟ್ಟಿದಂತೆಯೂ ದೇಹವುಳ್ಳವನಂತೆಯೂ ಕಾಣಿಸುತ್ತಾನೆ (೪-೬ ; ೨೩೧) ಮಾಯೆಯಿಂದ ಸರ್ವಪ್ರಾಣಿಗಳನ್ನೂ ಭ್ರಾಂತಿಗೊಳಿಸುತ್ತಾನೆ, (೧೮-೬೧, ೫೭೫); ಭಗವಂತನೇ ತಮ್ಮ ಆತ್ಮನೆಂದು ತಿಳಿದವರು ಅದನ್ನು ದಾಟುತ್ತಾರೆ (೭-೧೪, ೪೬೪). ಇಂಥ ಗೀತಾವಾಕ್ಯಗಳ ಆಧಾರದಿಂದ **ಮಾಯೆ ಎಂದರೆ ಅವಿದ್ಯೆಯಿಂದ ತೋರುತ್ತಿರುವ ಭ್ರಾಂತಿಕಾರಕವಾದ** ಪ್ರಕೃತಿಯೇ ಎಂದು ಆಚಾರ್ಯರು ನಿರ್ಣಯಿಸಿರುತ್ತಾರೆ. (೫-೧೪, ೪೫ ; ೧೩-೨೩, ೨೭೪ ; ೧೩-೩೪,೩೦೧)

ಇನ್ನು ಭಾಷ್ಯಕಾರರು ಹೇಳುವ ಅವಿದ್ಯೆಯು ಅಥವಾ ಅಜ್ಞಾನವು ಯಾವದು ?-ಎಂಬುದನ್ನು ವಿಚಾರಮಾಡಬೇಕಷ್ಟೆ. ಸೂತ್ರಭಾಷ್ಯದ ಪೀಠಿಕೆಯಲ್ಲಿ ಇದನ್ನು ವಿಸ್ತಾರವಾಗಿ ವಿವೇಚಿಸಬೇಕೆಂದಿರುವದರಿಂದ ಇಲ್ಲಿ ಕೆಲವು ಗೀತಾಭಾಷ್ಯ ವಾಕ್ಯಗಳನ್ನು ಮಾತ್ರ ವಿಮರ್ಶೆಗೆ ತೆಗೆದುಕೊಳ್ಳುವೆವು. ಅವಿದ್ಯೆ, ಅಜ್ಞಾನ-ಎಂಬ ಶಬ್ದಗಳು ತಿಳಿಯದಿರುವದು, ತಪ್ಪುತಿಳಿವಳಿಕೆ ಎಂಬರ್ಥದಲ್ಲಿ ಲೋಕದಲ್ಲಿ ರೂಢವಾಗಿವೆ. ಆದ್ದರಿಂದ ಆತ್ಮಜ್ಞಾನದಿಂದ ನಾಶವಾಗುವ ಅಜ್ಞಾನವು, ಅಥವಾ ಅವಿದ್ಯೆಯು ಆತ್ಮನನ್ನರಿಯದೆ ಇರುವದರಿಂದಾಗುವ ತಪ್ಪುತಿಳಿವಳಿಕೆ ಎಂದು ಭಾವಿಸುವದು ಸ್ವಾಭಾವಿಕವಾಗಿರುತ್ತದೆ. ಇದಕ್ಕನುಗುಣವಾಗಿಯೇ ಗೀತಾಭಾಷ್ಯದಲ್ಲಿ ವಚನಗಳು ಸಿಕ್ಕುತ್ತವೆ. ಹೇಗೆಂದರೆ (೧) "ಅವಿವೇಕದಿಂದ ಮಿಥ್ಯಾಪ್ರತ್ಯಯವು ಹುಟ್ಟುತ್ತದೆ, ಅದನ್ನು ಜ್ಞಾನವು ತೊಲಗಿಸುತ್ತದೆ" (೧೦-೧೧, ೭೪) ಎಂಬ ವಾಕ್ಯದಲ್ಲಿ ಅಜ್ಞಾನವೆಂದರೆ ಅವಿವೇಕವೆಂದೂ ತಮವೆಂದರೆ ಮಿಥ್ಯಾಪ್ರತ್ಯಯರೂಪವಾದ ಮೋಹವೆಂದೂ ಹೇಳಿದೆ. (೨) "ಬೇರೆಬೇರೆಯ ಸ್ವಭಾವದವುಗಳಾದ ಕ್ಷೇತ್ರಕ್ಷೇತ್ರಜ್ಞರ ಸ್ವರೂಪವನ್ನು ವಿಂಗಡಿಸಿ ಅರಿತುಕೊಳ್ಳದೆ ಇರುವ ಕಾರಣದಿಂದ ಒಂದರಲ್ಲಿ ಮತ್ತೊಂದನ್ನೂ ಮತ್ತೊಂದರ ಧರ್ಮವನ್ನೂ ಹುಟ್ಟುಗಟ್ಟುವ **ಅಧ್ಯಾಸವೇ** ಕ್ಷೇತ್ರಕ್ಷೇತ್ರಜ್ಞಸಂಯೋಗವು ; ಅದು ಮಿಥ್ಯಾಜ್ಞಾನರೂಪವಾಗಿರುತ್ತದೆ" (೧೩-೨೬, ೨೮೩) ಎಂಬ ವಾಕ್ಯದಲ್ಲಿ ಅಧ್ಯಾಸ, ಮಿಥ್ಯಾಜ್ಞಾನ-ಇವುಗಳನ್ನು ಕ್ಷೇತ್ರಕ್ಷೇತ್ರಜ್ಞರ ವೈಲಕ್ಷಣ್ಯವನ್ನು ಅರಿತುಕೊಳ್ಳುವದರಿಂದ ಕಳೆದುಕೊಳ್ಳಬಹುದು ಎಂದು ಹೇಳಿದೆ. ಸೂತ್ರಭಾಷ್ಯದಲ್ಲಿ ಈ ಮಿಥ್ಯಾಜ್ಞಾನವನ್ನೇ ಅವಿದ್ಯೆ ಎಂದು ಕರೆದಿರುತ್ತದೆ. (೧) ಹದಿಮೂರನೆಯ ಅಧ್ಯಾಯದ ಎರಡನೆಯ ಶ್ಲೋಕದ ಭಾಷ್ಯದಲ್ಲಿ ಅವಿದ್ಯಾವಿಷಯಕವಾದ ವಿಸ್ತಾರವಾದ ಚರ್ಚೆಯಿದೆ. ಅದರಲ್ಲಿ ಸಂಸಾರವು ಅವಿದ್ಯಾಕೃತವಾಗಿದೆ (ಭಾ. ೨೧೬, ೨೧೭) ; ಅಗ್ರಹಣ, ಅನ್ಯಥಾಗ್ರಹಣ, ಸಂಶಯ–ಈ ಮೂರೂ ಅವಿದ್ಯೆಯೇ (೨೧೮) ; ಇವು ಮೂರೂ ಅಂತಃಕರಣಧರ್ಮಗಳೇ(೨೧೮)-ಎಂದು ಸ್ಪಷ್ಟಪಡಿಸಿರುತ್ತದೆ. (೪) ಲೌಕಿಕ ವೈದಿಕವ್ಯವಹಾರವೆಲ್ಲವೂ ಅವಿದ್ಯಾಕಾರ್ಯವು (೨-೬೯, ೧೨೬), ಕ್ರಿಯಾಕಾರಕಾದಿ

ವ್ಯವಹಾರವೆಲ್ಲ ಅವಿದ್ಯಾಭೂಮಿಯಲ್ಲಿಯೇ (೪-೧೮, ೨೫೪), ಅಂತ್ಯಪ್ರಮಾಣವಾದ ಆತ್ಮಜ್ಞಾನವು ಪ್ರಮಾಣವ್ಯವಹಾರವನ್ನೇ ತೊಲಗಿಸುತ್ತದೆ (೨-೬೯, ೧೨೯)-ಎಂಬ ವಾಕ್ಯಗಳಲ್ಲಿ!ಆತ್ಮಾನಾತ್ಮರ ಅಧ್ಯಾಸವೇ ಪ್ರಮಾಣಪ್ರಮೇಯ, ಕ್ರಿಯಾಕಾರಕಫಲಾದಿ ವ್ಯವಹಾರಗಳಿಗೆ ನಿಮಿತ್ತವೆಂದು ಹೇಳಿದಂತಾಗಿರುತ್ತದೆ. (೫) " ದೇಹಾದಿಗಳೇ ತಾವೆಂಬ ಭ್ರಾಂತಿಯಿಂದ ಸ್ವಪ್ನಮಾಯಾದಿಗಳಲ್ಲಿ ಹೇಗೋ ಹಾಗೆ ಕರ್ತೃತ್ವ ಭೋಕ್ತೃತ್ವವು ಉಂಟಾಗಿರುತ್ತದೆ; ಈ ಭ್ರಾಂತಿಯಿಲ್ಲದ ಸುಷುಪ್ತಿಸಮಾಧ್ಯಾದಿಗಳಲ್ಲಿ ಕರ್ತೃತ್ವ ಭೋಕ್ತೃತ್ವಾದ್ಯನರ್ಥವು ಇರುವದಿಲ್ಲ-ಎಂದು (೧೮-೬೬, ೬೦೧) ಹೇಳಿರುವದರಿಂದ ಅವಿದ್ಯೆಯೆಂದರೂ ಅನಾತ್ಮವಾದ ದೇಹಗಳಲ್ಲಿರುವ ಆತ್ಮತ್ವಭ್ರಾಂತಿ ಎಂದರೂ ಒಂದೇ ಎಂಬುದು ಆಚಾರ್ಯರ ಮತವೆಂದು ಏರ್ಪಡುತ್ತದೆ. (೫) "ಅವಿವೇಕವಿಜ್ಞಾನ ರೂಪವಾದ ಅವಿದ್ಯೆಯೆಂಬ ಬುದ್ಧಿವೃತ್ತಿಯಿಂದ ಆತ್ಮನು ಶಬ್ದಾದಿಗಳ ಜ್ಞಾತೃವೆನಿಸುತ್ತಾನೆ; ವಿವೇಕರೂಪವಾದ ವಿದ್ಯೆಯೆಂಬ ಬುದ್ಧಿವೃತ್ತಿಯಿಂದ ಆತ್ಮಜ್ಞಾನಿ ಎನ್ನಿಸಿಕೊಳ್ಳುತ್ತಾನೆ; ಅವಿದ್ಯೆಯಂತೆ ವಿದ್ಯೆಯೂ ಅಪರಮಾರ್ಥವೇ" (೨-೨೧,೩೮) ಎಂದು ಹೇಳುವ ಭಾಷ್ಯವಚನವನ್ನು ನೋಡಿದರೆ ವಿದ್ಯಾವಿದ್ಯೆಗಳು ಅಂತಃಕರಣದ ವೃತ್ತಿಯ ರೂಪವಾಗಿರುತ್ತವೆ, ಆತ್ಮನಿಗೆ ಸಂಬಂಧಿಸಿಲ್ಲ-ಎಂಬುದೇ ಭಾಷ್ಯಕಾರರ ಅಭಿಪ್ರಾಯವೆಂದು ಸಿದ್ಧವಾಗುತ್ತದೆ. ಆತ್ಮವಿಷಯವಾದ ಅಗ್ರಹಣ, ಅನ್ಯಥಾಗ್ರಹಣ, ಸಂಶಯ, ಅಧ್ಯಾಸ, ಭ್ರಾಂತಿ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ-ಮುಂತಾದ ಶಬ್ದಗಳಿಂದ ಹೇಳುವ ಬುದ್ಧಿವೃತ್ತಿಯಲ್ಲದೆ ಬೇರೊಂದು ಅವಿದ್ಯೆಯನ್ನು ಆಚಾರ್ಯರು ಒಪ್ಪಿರುತ್ತಾರೆಂಬುದಕ್ಕೆ ಗೀತಾಭಾಷ್ಯದಲ್ಲಿ ಯಾವ ಆಧಾರವೂ ದೊರೆಯುವದಿಲ್ಲ.

## ಜ್ಞಾನನಿಷ್ಠೆ ಎಂದರೇನು?

ಗೀತೆಯಲ್ಲಿ ಜ್ಞಾನ, ವಿಜ್ಞಾನ-ಎಂಬ ಎರಡು ಶಬ್ದಗಳನ್ನುಪಯೋಗಿಸಿ ತತ್ತ್ವಜ್ಞಾನವನ್ನು ಪರಾಮರ್ಶಿಸಿರುತ್ತದೆ. ಇಂಥ ಕಡೆಗಳಲ್ಲಿ "ಜ್ಞಾನವೆಂದರೆ ಶಾಸ್ತ್ರಾಚಾರ್ಯರುಗಳ ಉಪದೇಶದಿಂದ ಉಂಟಾಗುವ ಆತ್ಮಜ್ಞಾನವು; ವಿಜ್ಞಾನವೆಂದರೆ ವಿಶೇಷವಾಗಿ ಉಂಟಾಗುವ ಆತ್ಮಾನುಭವವು" (೩-೪೧,೨೧೭; ೭-೨,೪೪೭) ಎಂದು ವಿವರಿಸಿರುತ್ತದೆ. ಈ ವಿವರಣೆಯ ಬಲದಿಂದ ಕೆಲವರು ಶಾಸ್ತ್ರದಿಂದ ಉಂಟಾಗುವ ಜ್ಞಾನವನ್ನು ಚೆನ್ನಾಗಿ ಆವೃತ್ತಿಮಾಡಿದರೇ ಸರಿಯಾದ ಅನುಭವರೂಪವಾದ ಜ್ಞಾನವುಂಟಾಗುತ್ತದೆ ಎಂದು ಆಚಾರ್ಯರು ಅಭಿಪ್ರಾಯಪಟ್ಟಿರುವರೆಂದು ಭ್ರಾಂತರಾಗಿರುತ್ತಾರೆ. ಆದರೆ ಈ ಜ್ಞಾನಾಭ್ಯಾಸವಾದವು ಆಚಾರ್ಯರಿಗೆ ಸಮ್ಮತವಿಲ್ಲವೆಂಬುದಕ್ಕೆ ಅವರ ಗ್ರಂಥಗಳಲ್ಲಿಯೇ ಸಾಕಾದಷ್ಟು ಆಧಾರವು ದೊರೆಯುತ್ತದೆ. ಹೇಗೆಂದರೆ ಉಪದೇಶಸಾಹಸ್ರಿ, ಬೃಹದಾರಣ್ಯಕಭಾಷ್ಯ, ಸೂತ್ರಭಾಷ್ಯ, ಮಾಂಡೂಕ್ಯಭಾಷ್ಯ-ಇವುಗಳಲ್ಲಿ

ವಾಕ್ಯಜ್ಞಾನವನ್ನು ಬಲವಾಗಿ ಅಭ್ಯಾಸಮಾಡಿದಮೇಲೆಯೇ ಅವಿದ್ಯೆಯು ಪೂರ್ಣ ವಾಗಿ ಹೋಗುವದೆಂಬ **ಪ್ರಸಂಖ್ಯಾನವಾದವನ್ನೂ** ವಾಕ್ಯಜನ್ಯಜ್ಞಾನವನ್ನು ಅಭ್ಯಾಸಮಾಡಿದ ಬಳಿಕ ಹುಟ್ಟುವ ಸಾಕ್ಷಾತ್ಕಾರವೆಂಬ ಹೊಸ ಜ್ಞಾನವೇ ನಿಜವಾಗಿ ಅಜ್ಞಾನವನ್ನು ತೊಲಗಿಸುವದೆಂಬವರ ವಾದವನ್ನೂ ಖಂಡಿಸಿರುತ್ತದೆ. ಪ್ರಕೃತವಾದ ಗೀತೆಯಲ್ಲಿಯೇ (೧೮-೫೫, ೫೬೫) ಜ್ಞಾನನಿಷ್ಠೆ ಎಂದರೆ ಜ್ಞಾನಾವೃತ್ತಿ-ಎಂಬ ಪಕ್ಷ ವನ್ನು ಪೂರ್ವಪಕ್ಷಿಯ ಮೂಲಕವಾಗಿ ಖಂಡಿಸಿ ಹೇಳಿರುವದೇನೆಂದರೆ: "ಯಾವಾಗ ಯಾವ ವಿಷಯದಲ್ಲಿ ಜ್ಞಾನವುಂಟಾಗುತ್ತದೆಯೋ ಆಗಲೇ ಆ ವಿಷಯವನ್ನು ಗೊತ್ತಾಗಿ ಅರಿತುಕೊಂಡುಬಿಡುತ್ತಾರಾದ್ದರಿಂದ ಜ್ಞಾನಾವೃತ್ತಿಯೇನೂ ಬೇಕಿರುವ ದಿಲ್ಲ. ಆದ್ದರಿಂದ ಜ್ಞಾನದಿಂದ ಅರಿತುಕೊಳ್ಳುವದಿಲ್ಲವೆಂದೂ ಜ್ಞಾನಾವೃತ್ತಿರೂಪವಾದ ಜ್ಞಾನನಿಷ್ಠೆಯಿಂದ ಅರಿತುಕೊಳ್ಳುತ್ತಾನೆಂದೂ ಹೇಳಿರುವದು ವಿರುದ್ಧವು" ಇದೇ ಸಂದರ್ಭದಲ್ಲಿ 'ಜ್ಞಾನನಿಷ್ಠೆ' ಎಂದರೇನೆಂಬ ಬಗ್ಗೆ ಅವರು ತಮ್ಮ ಮತವನ್ನು ಹೀಗೆ ವರ್ಣಿಸಿರುತ್ತಾರೆ: "**ಶಾಸ್ತ್ರಾಚಾರ್ಯೋಪದೇಶೇನ ಜ್ಞಾನೋತ್ಪತ್ತಿಪರಿಪಾಕ ಹೇತುಂ ಸಹಕಾರಿ ಕಾರಣಂ ಬುದ್ಧಿವಿಶುದ್ಧ್ಯಾದಿ ಅಮಾನಿತ್ವಾದಿ ಚ ಅಪೇಕ್ಷ್ಯ ಜನಿತಸ್ಯ ಕ್ಷೇತ್ರಜ್ಞಪರಮಾತ್ಮೈಕತ್ವಜ್ಞಾನಸ್ಯ ಕರ್ತೃತ್ವಾದಿಕಾರಕಭೇದ ಬುದ್ಧಿನಿಬನ್ಧನಕರ್ಮಸಂನ್ಯಾಸಸಹಿತಸ್ಯ ಸ್ವಾತ್ಮಾನುಭವನಿಶ್ಚಯರೂಪೇಣ ಯದವಸ್ಥಾನಂ ಸಾ ಪರಾ ಜ್ಞಾನನಿಷ್ಠಾ ಇತ್ಯುಚ್ಯತೇ**". ಈ ವಾಕ್ಯದಲ್ಲಿ ಅಡಕ ವಾಗಿರುವ ಹೇಳಿಕೆಗಳನ್ನು ಒಂದೊಂದಾಗಿ ಬಿಡಿಸಿ ನೋಡಿದರೆ ತಿಳಿಯ ಬರುವದೇ ನೆಂದರೆ : (೧) ಜ್ಞಾನವುಂಟಾಗುವದಕ್ಕೆ ಶಾಸ್ತ್ರಶ್ರವಣವನ್ನೂ ಆಚಾರ್ಯೋಪದೇಶದ ಸಹಾಯದಿಂದ ಮನನವನ್ನೂ ಮಾಡಿರಬೇಕು. (೨) ಅದು ಹುಟ್ಟುವದಕ್ಕೂ ಪರಿ ಪಕ್ವವಾಗುವದಕ್ಕೂ ಚಿತ್ತಶುದ್ಧಿಯೇ ಮುಂತಾದದ್ದೂ ಅಮಾನಿತ್ವವೇ ಮುಂತಾದ ಸಹಕಾರಿಸಾಧನವೂ ಬೇಕು. (೩) ಜ್ಞಾನವು ಅಭೇದಬುದ್ಧಿರೂಪವಾಗಿರುವದರಿಂದ ಭೇದಬುದ್ಧಿನಿಮಿತ್ತವಾದ ಕರ್ಮಗಳೆಲ್ಲವನ್ನೂ ಸಂನ್ಯಾಸಮಾಡಿಯೇ ಈ ಸಾಧನಗ ಳನ್ನು ಕೈಕೊಂಡಿರಬೇಕು. (೪) ಕ್ಷೇತ್ರಜ್ಞ, ಪರಮಾತ್ಮ-ಎಂಬ ಶಬ್ದಗಳಿಂದ ಶಾಸ್ತ್ರವು ಹೇಳುತ್ತಿರುವದು ಒಂದೇ ತತ್ತ್ವವು ಎಂಬ ನಿಶ್ಚಿತವಾದ ಬುದ್ಧಿಯು ಈ ಸಾಧನ ಗಳಿಂದಲೇ ಉಂಟಾಗುತ್ತದೆ. ಈ ನಿಶ್ಚಯವೇ **ಜ್ಞಾನನಿಷ್ಠೆಯು**. ಅಮಾನಿತ್ವಾದಿ ಗಳನ್ನು ಅಭ್ಯಾಸಮಾಡುವದರಿಂದ ಜ್ಞಾನನಿಷ್ಠೆಗೆ ಯೋಗ್ಯತೆಯು ಬರುವದೆಂದೂ ಆ ಗುಣಗಳು ಯಾವನಲ್ಲಿ ಆಯತ್ನವಾಗಿ ನಿಂತಿರುವವೋ ಅವನು ಜ್ಞಾನನಿಷ್ಠನೆಂದೂ (೧೩-೭, ೨೪೦) ಹೇಳಿರುವದರ ಮರ್ಮವೇ ಇದು. ಆದ್ದರಿಂದಲೇ ಆಚಾರ್ಯರು ಈ ಜ್ಞಾನನಿಷ್ಠೆಯೇ ಆರ್ತಾದಿಗೌಣಭಕ್ತಿಗಳಿಗಿಂತ ಬೇರೆಯಾಗಿ ನಾಲ್ಕನೆಯದಾದ

**ಪರಭಕ್ತಿಯೆಂದೂ ಈ ಭಕ್ತಿಯಿಂದಲೇ ಕ್ಷೇತ್ರಜ್ಞಪರಮಾತ್ಮರು ಬೇರೆ ಎಂಬ ಬುದ್ಧಿಯು ನಿಶ್ಶೇಷವಾಗಿ ತೊಲಗುವದೆಂದೂ (೧೮-೫೫, ೫೬೬) ಹೇಳಿರುತ್ತಾರೆ.**

## ಜ್ಞಾನನಿಷ್ಠೆಯುಂಟಾಗುವದು ಸಾಧ್ಯವೆ ?

ಜ್ಞಾನನಿಷ್ಠೆಯು ಅಥವಾ ವಿಜ್ಞಾನವು ಎಂದರೆ ಬ್ರಹ್ಮಾತ್ಮೈಕ್ಯವು ಅನುಭವಕ್ಕೆ ಬರುವದು ಎಂಬುದು ಆಚಾರ್ಯರ ಮತವಷ್ಟೆ. ಈ ವಿಜ್ಞಾನವು ಉಂಟಾಗುವದು ಸಾಧ್ಯವೇ ಇಲ್ಲ ಎಂಬ ಪೂರ್ವಪಕ್ಷವನ್ನು ಬೇರೆಬೇರೆಯ ದೃಷ್ಟಿಕೋಣಗಳಿಂದ ತೆಗೆದು ಗೀತಾಭಾಷ್ಯದಲ್ಲಿ ಸಮಾಧಾನವನ್ನು ಕೊಟ್ಟಿರುತ್ತದೆ. (೧) "ಅವಿಕ್ರಿಯನಾದ ಅಕರ್ತೃವಾದ ಆತ್ಮನು ನಾನು ಎಂಬ ಜ್ಞಾನವು ಯಾರಿಗೂ ಉಂಟಾಗಲೇ ಆರದು ; ಅದು ಉಂಟಾಗುವಹಾಗಿದ್ದರೆ ಸರ್ವಕರ್ಮಸಂನ್ಯಾಸವು ಸಾಧ್ಯವಾಗುತ್ತಿತ್ತು" (೨-೨೧, ೪೦) ಎಂಬುದು ಮೀಮಾಂಸಕರ ಮತ್ತು ಅವರ ಪ್ರಕ್ರಿಯೆಯನ್ನು ಅವಲಂಬಿಸುವ ವೇದಾಂತಿಗಳ ಆಕ್ಷೇಪವು. ನಾನು ಕರ್ತೃವಲ್ಲ, ಭೋಕ್ತೃವಲ್ಲ ಎಂಬ ಜ್ಞಾನವು ಯಾವನಿಗೆ ಉಂಟಾಗುವದೋ ಅವನು ಮಾತ್ರ ಎಲ್ಲಾ ಕರ್ಮಗಳನ್ನೂ ಕೈಬಿಡಬಲ್ಲನು (೧೮-೧೨, ೪೮೪) ಎಂದು ಆಚಾರ್ಯರು ಹೇಳುತ್ತಾರೆ. ಗೃಹಸ್ಥನಿಗೆ ವಿಧಿಸಿರುವ ಅಗ್ನಿಹೋತ್ರಾದಿಕರ್ಮಗಳನ್ನು ಮಾಡದೆ ಬಿಟ್ಟ ಸಂನ್ಯಾಸಿಯುಕೂಡ ಭಿಕ್ಷಾಟನವೇ ಮುಂತಾದ ತನ್ನ ಆಶ್ರಮದ ಕರ್ಮಗಳನ್ನೂ, ನೋಡುವದು, ಕೇಳುವದು, ಮೂಸುವದು, ಮುಟ್ಟುವದು-ಮುಂತಾದ ಅವರ್ಜನೀಯವಾದ ಶರೀರೇಂದ್ರಿಯಕರ್ಮಗಳನ್ನೂ ಮಾಡಲೇಬೇಕಾಗುವದಲ್ಲವೆ ? ಹೀಗಿರುವಲ್ಲಿ ಅಕರ್ತ್ರಾತ್ಮಜ್ಞಾನವು ಯಾರಿಗೆತಾನೆ ಹೇಗೆ ಉಂಟಾದೀತು ?-ಎಂಬುದು ಆಕ್ಷೇಪಕನ ಆಶಯವು. ಇದಕ್ಕೆ ಆಚಾರ್ಯರ ಸಮಾಧಾನವೇನೆಂದರೆ **ಅಕರ್ತ್ರಾತ್ಮಜ್ಞಾನವು ಯಾರಿಗೂ ಉಂಟಾಗದೆ ಇದ್ದರೆ ಅದನ್ನೂ ಅದಕ್ಕೆ ಸಾಧನವೆಂದು ಶಮಾದಿಗಳನ್ನೂ ಶಾಸ್ತ್ರದಲ್ಲಿ ಉಪದೇಶಿಸಿರುವದು ವ್ಯರ್ಥವಾಗುವದು.** ಕರ್ಮವನ್ನು ಶಾಸ್ತ್ರವು ಉಪದೇಶಿಸಿದ ಮಾತ್ರದಿಂದ ಧರ್ಮಾಧರ್ಮಾದಿಗಳುಂಟೆಂಬ ಜ್ಞಾನವೂ ಜನ್ಮಾಂತರಲೋಕಾಂತರಗಳಿರುವವೆಂಬ ಜ್ಞಾನವೂ ಉಂಟಾಗುವವೆಂದು ಒಪ್ಪುವ ಮೀಮಾಂಸಕರು ಅದೇ ಶಾಸ್ತ್ರದ ಉಪದೇಶದಿಂದ ಅಧಿಕಾರಿಯಾದವನಿಗೆ ಆತ್ಮಜ್ಞಾನವೂ ಉಂಟಾಗುವದೆಂದು ಏತಕ್ಕೆ ಒಪ್ಪಬಾರದು ? ಆದ್ದರಿಂದ ಶಾಸ್ತ್ರವು ಪ್ರಮಾಣವೆಂದು ಒಪ್ಪುವವರು ಈ ಆಕ್ಷೇಪವನ್ನು ಮಾಡಬಾರದು. (೨) ಆತ್ಮನನ್ನು ಅರಿತುಕೊಳ್ಳುವದಕ್ಕೆ ಕರಣವೇ ಇಲ್ಲ ; ಆತ್ಮನು ಕರಣಕ್ಕೆ ವಿಷಯನೂ ಅಲ್ಲ, ನಿರಾಕಾರನೂ ಆಗಿರುತ್ತಾನೆ ; ಆದ್ದರಿಂದ ಆತ್ಮವಿಷಯವಾದ ವಿಜ್ಞಾನವು

ಉಂಟಾಗುವದು ಶಕ್ಯವಲ್ಲ ಎಂಬುದು ಮತ್ತೊಂದು ಪೂರ್ವಪಕ್ಷವು. ಹೊರಗಿನ ವಸ್ತುಗಳನ್ನು ಯಾವಾಗಲೂ ಕರಣದಿಂದಲೇ ಅರಿಯುತ್ತೇವೆ. ಅಂತಃಕರಣವು ಯಾವ ವಿಷಯವನ್ನು ಅರಿಯಬೇಕೋ ಅದರ ಆಕಾರವನ್ನು ತಳೆಯಬೇಕು. ಆದರೆ ಆತ್ಮನು ವಿಷಯವಲ್ಲ, ವಿಷಯಿ ; ಸಾಕಾರನಲ್ಲ, ನಿರಾಕಾರನು ; ಆದ್ದರಿಂದ ಆತ್ಮನು ಅಂತಃಕರಣಕ್ಕೆ ಗೋಚರನಾಗುವ ಸಂಭವವೇ ಇಲ್ಲ ಎಂಬುದು ಆಕ್ಷೇಪಕನ ಆಶಯವು. ಇದಕ್ಕೆ ಭಾಷ್ಯಕಾರರ ಸಮಾಧಾನವೇನೆಂದರೆ (ಕ) " ಮನಸ್ಸಿನಿಂದಲೇ ಈ ಆತ್ಮನನ್ನು ಕಂಡುಕೊಳ್ಳಬೇಕು '' (ಬೃ. ೪-೪-೧೯) ಎಂದು ಶ್ರುತಿ ಹೇಳುತ್ತಿದೆಯಾದ್ದರಿಂದ **ಮನಸ್ಸೇ ಆತ್ಮದರ್ಶನಕ್ಕೆ ಕರಣವು**; ಸಾಮಾನ್ಯಜನರಿಗೂ ಮನಸ್ಸಿದೆಯಾದರೂ ಅವರಿಗೆ ಶ್ರುತ್ಯುಕ್ತವಾದ ಶಮದಮಾದಿಗಳ ಸಂಸ್ಕಾರವಿಲ್ಲದ್ದರಿಂದ ಅವರ ಅಂತಃಕರಣವು ಆತ್ಮನನ್ನು ಅರಿತುಕೊಳ್ಳಲಾರದೆ ಇದೆ. ಆದ್ದರಿಂದ ಆತ್ಮವಿಜ್ಞಾನಕ್ಕೆ ಕರಣವಿಲ್ಲವೆಂಬುದು ಸರಿಯಲ್ಲ (೨-೨೧, ೪೦) (ಖ) ಆತ್ಮವಿಜ್ಞಾನಕ್ಕೆ ಆತ್ಮನು ವಿಷಯನಾಗಬೇಕಾದದ್ದೇನೂ ಇಲ್ಲ ; ಆತ್ಮನು ಸಾಕಾರನಾಗಿರಬೇಕಾದದ್ದೂ ಇಲ್ಲ. ವಿಷಯವನ್ನು ಅರಿಯುವ ಅಂತಃಕರಣವು ವಿಷಯದಂತೆ ಆಗಬೇಕು ; ಅದರಂತೆ **ಆತ್ಮನನ್ನು ಅರಿತುಕೊಳ್ಳುವದಕ್ಕೆ ಅಂತಃಕರಣವು ಆತ್ಮನಂತೆ ನಿರ್ಮಲವಾಗಿ ಸ್ವಚ್ಛವಾಗಿ ಸೂಕ್ಷ್ಮವಾಗಬೇಕು** (೧೮-೫೦, ೫೫೬). ನಿರಾಕಾರನಾದ ಆತ್ಮನನ್ನು ಅರಿತುಕೊಳ್ಳುವದಕ್ಕೆ ಪ್ರಯತ್ನಮಾಡುವದಾದರೂ ಹೇಗೆ ? ಎಂದರೆ ಆತ್ಮಚೈತನ್ಯಕ್ಕೆ ಸಂಬಂಧಪಡದೆ ಸಾಕಾರವಿಷಯವೂ ತಿಳಿಯಬರುವದೇ ಇಲ್ಲ ; ಚೈತನ್ಯಕ್ಕೆ ಸಂಬಂಧಪಡದ ವಿಷಯವನ್ನು ಕಲ್ಪಿಸಿಕೊಳ್ಳುವದುಕೂಡ ಆಗುವ ಹಾಗಿಲ್ಲ. ಆದ್ದರಿಂದ ವಿಷಯಗಳ ಜ್ಞಾನವಾಗುವಾಗಲೆಲ್ಲ ಆತ್ಮಚೈತನ್ಯದೊಡಗೂಡಿದ ವಿಷಯದ ಜ್ಞಾನವೇ ಆಗುತ್ತಿರುತ್ತದೆ. ಆದಕಾರಣ **ಆತ್ಮಜ್ಞಾನವನ್ನು ಹೊಸದಾಗಿ ಮಾಡಿಕೊಳ್ಳಬೇಕಾಗಿರುವದಿಲ್ಲ, ಹೊರಗಿನ ವಿಷಯಾಕಾರವಾದಬುದ್ಧಿಯನ್ನು ಬಿಟ್ಟರೆ ಸಾಕು, ಜ್ಞಾನನಿಷ್ಠೆಯಾದಂತೆಯೇ**(೧೮-೫೦, ೫೫೬)**ಆತ್ಮನು ಪ್ರಮಾತೃಸ್ವರೂಪನಾಗಿರುವದರಿಂದಲೂ ಸ್ವತಃಸಿದ್ಧನಾಗಿರುವದರಿಂದಲೂ ಅವನನ್ನು ಅರಿಯುವದಕ್ಕೆ ಪ್ರಮಾಣವೇ ಬೇಕಿಲ್ಲ** (೨-೧೮, ೬೯ ; ೧೮-೫೦, ೫೫೬). ಶಾಸ್ತ್ರವು ಆತ್ಮನನ್ನು ತಿಳಿಸಿಕೊಡುವದೆಂಬುದುಕೂಡ ಅವನಲ್ಲಿ ಕಲ್ಪಿತವಾಗಿರುವ ಪ್ರಮಾತೃತ್ವವನ್ನು ಕಳೆದು ಪ್ರಮಾಣಪ್ರಮೇಯವ್ಯವಹಾರವನ್ನು ಹುಸಿಗೈಯುವದರಿಂದಲೇ. ಆದ್ದರಿಂದಲೇ ಅದು ' ಅಂತ್ಯಪ್ರಮಾಣ 'ವೆನಿಸಿರುತ್ತದೆ (೨-೧೮, ೬೯). (ಗ) ಜ್ಞಾನವೂ ನಿರಾಕಾರವು, ಆತ್ಮನೂ ನಿರಾಕಾರನು ; ಹೀಗಿರುವಲ್ಲಿ ಆತ್ಮವಿಜ್ಞಾನವು ಉಂಟಾಗುವದಾದರೂ ಹೇಗೆ ?-ಎಂಬುದು ಮತ್ತೊಂದು ಪೂರ್ವಪಕ್ಷವು. ಇದಕ್ಕೆ ಸಮಾಧಾನವೇನೆಂದರೆ **ಜ್ಞೇಯದ ಅರಿವು ಜ್ಞಾನಾಧೀನವಾಗಿರುವ**

**ಜ್ಞಾನವು ಅತ್ಯಂತಪ್ರಸಿದ್ಧವೆಂದು ಒಪ್ಪಬೇಕು; ಹಾಗಿಲ್ಲದಿದ್ದರೆ ಅದನ್ನು ಅರಿಯುವದಕ್ಕೂ ಜ್ಞಾನಾಂತರವು ಬೇಕೆಂದಾಗಿ ಅನವಸ್ಥೆಯುಂಟಾಗುವದು. ಹೀಗೆಯೇ ಜ್ಞಾತೃವಾದ ಆತ್ಮನೂ ಅತ್ಯಂತವಾಗಿ ಪ್ರಸಿದ್ಧನೆಂದು ಒಪ್ಪಬೇಕು; ಇಲ್ಲದಿದ್ದರೆ ಅವನನ್ನರಿಯುವದಕ್ಕೂ ಬೇರೆಯ ಜ್ಞಾತೃಜ್ಞಾನಗಳು ಬೇಕಾಗುವದರಿಂದ ಅನವಸ್ಥೆಯುಂಟಾಗುವದು. ಆದ್ದರಿಂದ ಆತ್ಮಜ್ಞಾನವು ಸಿದ್ಧವೇ ಆಗಿದೆ; ಅನಾತ್ಮದಲ್ಲಿರುವ ಆತ್ಮಬುದ್ಧಿಯನ್ನು ಮಾತ್ರ ಶಾಸ್ತ್ರಾಚಾರ್ಯರ ಉಪದೇಶದಿಂದ ತೊಲಗಿಸಿಕೊಳ್ಳಬೇಕಾದದ್ದು ಅವಶ್ಯ. ಈ ಯತ್ನದ ಫಲವನ್ನೇ ಜ್ಞಾನನಿಷ್ಠೆ ಎಂದು ಕರೆಯುತ್ತಾರೆ** (೧೮-೫೦, ೫೫೬).

## ಗೀತೋಕ್ತವಿಶ್ವವ್ಯಾಪಕಧರ್ಮ

ಶ್ರೀ ಶಂಕರಾಚಾರ್ಯರ ಅಭಿಪ್ರಾಯದಂತೆ ಸಕಲ ಪ್ರಾಣಿಗಳಿಗೂ ಆತ್ಮನಾಗಿರುವ ವಾಸುದೇವನೆಂಬ ಹೆಸರಿನ ಪರಮಾರ್ಥತತ್ತ್ವವನ್ನು ತಿಳಿಸುವದೇ ಗೀತೆಯ ಗುರಿಯು. ಈ ತತ್ತ್ವವು ಸ್ವತಃಸಿದ್ಧವಾಗಿರುವದರಿಂದ ಯಾವದೊಂದು ಶಾಸ್ತ್ರವಚನವನ್ನು ಅಥವಾ ಆಪ್ತವಚನವನ್ನು ಪ್ರಮಾಣವೆಂದು ಶ್ರದ್ಧೆಯಿಂದ ನಂಬಿದರೇ ವಚನಪ್ರಾಮಾಣ್ಯದ ಬಲದಿಂದ ಸಿದ್ಧವಾಗುವದೆಂಬುದೇನೂ ಅಲ್ಲ. ಶಾಸ್ತ್ರಾಚಾರ್ಯರ ಉಪದೇಶವು ನಾವು ಸ್ವಾಭಾವಿಕವಾಗಿ ಅವಲಂಬಿಸಿರುವ ತಪ್ಪುತಿಳಿವಳಿಕೆಯನ್ನು ಕಳೆದುಕೊಳ್ಳುವದಕ್ಕೇ ಹೊರತು ಈ ತತ್ತ್ವವನ್ನು ವಿಷಯೀಕರಿಸುವ ಹೊಸ ಪ್ರಮಾಣಜ್ಞಾನವನ್ನುಂಟುಮಾಡುವದಕ್ಕಲ್ಲ. ಸಾರ್ವತ್ರಿಕಾನುಭವದ ಆಧಾರದಿಂದಲೇ ಅಧಿಕಾರಿಗಳೆಲ್ಲರೂ ಮನಗಾಣಬಹುದಾದ ಈ ಸಿದ್ಧಾಂತದ ಅಡಿಗಲ್ಲಿನ ಮೇಲೆ ಧರ್ಮಕ್ಕೆ ಬೇಕಾದ ನೀತಿಯ ತತ್ತ್ವಗಳೂ ಈಶ್ವರನ ವಿಷಯವಾದ ಭಕ್ತಿಧ್ಯಾನಗಳೂ ಭದ್ರವಾಗಿ ನಿಲ್ಲುವದಕ್ಕೆ ಆಗುತ್ತದೆ. ಆದ್ದರಿಂದ ಗೀತೆಯಲ್ಲಿ ಹೇಳಿರುವದು ವಿಶ್ವವ್ಯಾಪಕವಾದ ಧರ್ಮವಾಗಿರುತ್ತದೆ.

ಆದರೆ ವಿಶ್ವವ್ಯಾಪಕವಾದ ಧರ್ಮವೆಂದರೇನೆಂಬುದನ್ನು ನಾವು ನಿಶ್ಚಯಿಸಿಕೊಳ್ಳಬೇಕು. ಸಮುದ್ರದಲ್ಲಿರುವ ದೊಡ್ಡ ಮೀನೊಂದು ಹಲವು ಸಣ್ಣಪುಟ್ಟ ಮೀನುಗಳನ್ನು ನುಂಗುವಂತೆ ಭೂಮಂಡಲದಲ್ಲಿರುವ ಯಾವದಾದರೊಂದು ಪ್ರಬಲವಾದ ಧರ್ಮವು ಮಿಕ್ಕ ಧರ್ಮದವರನ್ನೆಲ್ಲ ವಿವಿಧೋಪಾಯಗಳಿಂದ ಮತಾಂತರಗೊಳಿಸಿ ಎಲ್ಲೆಲ್ಲಿಯೂ ತಾನೊಂದೇ ಧರ್ಮವಾಗಿ ಉಳಿಯುವದು ಸಾಧ್ಯವೂ ಅಲ್ಲ, ಯಾರಿಗೂ ಇಷ್ಟವೂ ಅಲ್ಲ. ಎಲ್ಲರ ಸ್ವಾತಂತ್ರ್ಯವನ್ನೂ ಬದಿಗೊತ್ತಿ ತನ್ನ ಉಪದೇಶಗಳನ್ನು ಅವರ ತಲೆಯಮೇಲೆ ಹೊರಿಸುವ ಒಂದು ತಂಡದವರು ತರುವ ಉಪದೇಶಕ್ಕೆ 'ಧರ್ಮ'ವೆಂಬ ಘನತೆಯ ಹೆಸರು ಎಂದಿಗೂ ಸಲ್ಲಲಾರದು. ಅವರವರಿಗೆ

ಇಷ್ಟವಾದ ದೇವತೆಯಲ್ಲಿಯೇ ಶ್ರದ್ಧೆಯನ್ನು ಹೆಚ್ಚಿಸಿ ಆ ದೇವತೆಯ ಆರಾಧನೆಯ ಮೂಲಕವಾಗಿಯೇ ಅವರ ಇಷ್ಟಾರ್ಥಗಳನ್ನು ತಾನು ಕೊಡುವೆನೆಂದೇ ಗೀತೋಕ್ತ ನಾದ ವಾಸುದೇವಭಗವಂತನು ವಾಗ್ದಾನಮಾಡಿರುತ್ತಾನೆ (೭-೨೧). ಗೀತೋಕ್ತ ವಾಗಿರುವ ವಿಶ್ವವ್ಯಾಪಕಧರ್ಮದ ತತ್ತ್ವವನ್ನು ಅರಿತ ಜ್ಞಾನಿಯ ನಿಶ್ಚಯವು ಹೇಗಿರುವದೆಂದರೆ, "ನನ್ನ ಆತ್ಮನಾಗಿರುವ ವಾಸುದೇವನೇ ಬ್ರಹ್ಮಾದಿಸ್ತಂಬ ಪರ್ಯಂತವಾದ ಭೂತಗಳಲ್ಲಿಯೂ ಆತ್ಮನಾಗಿರುತ್ತಾನೆ". ಈ ನಿಶ್ಚಯ ವುಳ್ಳವನು ಯಾವ ಪ್ರಾಣಿಗೂ ಯಾವ ಹಿಂಸೆಯನ್ನೂ ಮಾಡುವದಿಲ್ಲ (೧೩-೨೮), ಸರ್ವಭೂತಗಳಿಗೂ ಹಿತವನ್ನುಂಟುಮಾಡುವದರಲ್ಲಿಯೇ ನಿರತನಾಗಿರುತ್ತಾನೆ (೫-೨೫, ೧೨-೪). ಈ ರೀತಿಯಲ್ಲಿ ನೋಡಿದರೆ ವಿಶ್ವಪ್ರೇಮವೇ, ವಿಶ್ವೇಶ್ವರನಾದ ವಾಸುದೇವನ ಭಜನೆಯು; ವಿಶ್ವಾತ್ಮನಾದ ವಾಸುದೇವನ ಜ್ಞಾನವೇ ಪರಮ ಪುರುಷಾರ್ಥಕ್ಕೆ ಸಾಧನವು; ಸ್ವಧರ್ಮವನ್ನು ಆತನ ಆರಾಧನೆಯನ್ನಾಗಿ ತಿರುಗಿಸಿ ಕೊಳ್ಳುವ ಕರ್ಮಯೋಗವೇ ಆತನ ಜ್ಞಾನಕ್ಕೆ ಉಪಾಯವು. ಹೀಗೆಂಬುದು ಶಂಕರಾಚಾರ್ಯರ ಭಾಷ್ಯದಿಂದ ನಮಗೆ ಲಭಿಸಿರುವ ಮಂಗಲಕರವಾದ ಉಪದೇಶವು.

ಯ. ಸುಬ್ರಹ್ಮಣ್ಯಶರ್ಮ



# ವಿಷಯಾನುಕ್ರಮಣಿಕೆ

## ಒಂಬತ್ತನೆಯ ಅಧ್ಯಾಯ

### (ರಾಜವಿದ್ಯಾರಾಜಗುಹ್ಯಯೋಗ)



## ಹತ್ತನೆಯ ಅಧ್ಯಾಯ

### (ವಿಭೂತಿಯೋಗ)



## ಹನ್ನೊಂದನೆಯ ಅಧ್ಯಾಯ

### (ವಿಶ್ವರೂಪದರ್ಶನಯೋಗ)

# ಹನ್ನೆರಡನೆಯ ಅಧ್ಯಾಯ

## (ಭಕ್ತಿಯೋಗ)



# ಹದಿಮೂರನೆಯ ಅಧ್ಯಾಯ

## (ಕ್ಷೇತ್ರಕ್ಷೇತ್ರಜ್ಞಯೋಗ)

# ಹದಿನಾಲ್ಕನೆಯ ಅಧ್ಯಾಯ

## (ಗುಣತ್ರಯವಿಭಾಗಯೋಗ)



# ಹದಿನೈದನೆಯ ಅಧ್ಯಾಯ

## (ಪುರುಷೋತ್ತಮಯೋಗ)



# ಹದಿನಾರನೆಯ ಅಧ್ಯಾಯ

## (ದೈವಾಸುರಸಂಪದ್ವಿಭಾಗಯೋಗ)

## ಹದಿನೇಳನೆಯ ಅಧ್ಯಾಯ

### (ಶ್ರದ್ಧಾತ್ರಯವಿಭಾಗಯೋಗ)



## ಹದಿನೆಂಟನೆಯ ಅಧ್ಯಾಯ

### (ಉಪಸಂಹಾರ)

## ಸಂಕೇತಗಳ ವಿವರಣೆ

ಇಲ್ಲಿ ಕೊಡದೆ ಇರುವ ಸಂಕೇತಗಳನ್ನು ಒಂದನೆಯ ಸಂಪುಟದಲ್ಲಿಯೂ ಈ ಗ್ರಂಥರತ್ನಮಾಲೆಯ ಉಳಿದ ಭಾಷ್ಯಗ್ರಂಥಗಳಲ್ಲಿಯೂ ವಿವರಿಸಿದೆ.

| | |
|---|---|
| ಅ. ಕಾಂ. | ಅಧ್ಯಾಯ, ಕಾಂಡ. |
| ಅನು. | ಅನುಶಾಸನಪರ್ವ. |
| ಆದಿ. | ಆದಿಪರ್ವ. |
| ಉದ್ಯೋ. | ಉದ್ಯೋಗಪರ್ವ. |
| ಉ.ಸಾ.ಗ. | ಉಪದೇಶಸಾಹಸ್ರೀ ಗದ್ಯ. |
| ಋ, ಋ. ಮಂ. | ಋಗ್ವೇದ ಮಂಡಲ. |
| ಕ.ತ.ಪ. | ಕಲ್ಪತರುಪರಿಮಳ, ಭಾಮತಿಯ ವ್ಯಾಖ್ಯಾನದ ಮೇಲಿನ ವ್ಯಾಖ್ಯಾನ, ಅಪ್ಪಯ್ಯದೀಕ್ಷಿತಕೃತ. |
| ಕೌ.ಕೌ.ಉ. | ಕೌಶೀತಕ್ಯುಪನಿಷತ್. |
| ನ್ಯಾ.ಸೂ. | ನ್ಯಾಯಸೂತ್ರ. |
| ಪಾ.ಸೂ. | ಪಾಣಿನೀಯಸೂತ್ರ. |
| ಭಾಗ. | ಭಾಗವತ. |
| ಸಾಂ.ಪು. | ಸಾಂಬಪುರಾಣ. |
| ಹ.ವಂ. | ಹರಿವಂಶ. |

---

## ಓದುಗರಿಗೆ

ಗೀತೆಯ ಒಂದನೆಯ ಅಧ್ಯಾಯದಲ್ಲಿ ೧೩ನೆಯ ಶ್ಲೋಕವಾದ ಬಳಿಕ ಈ ವಿಷಯವನ್ನು ದಯವಿಟ್ಟು ಸೇರಿಸಿಕೊಳ್ಳಬೇಕು.

"೧೩. ಆಮೇಲೆ ಶಂಖಗಳೂ ಭೇರಿಗಳೂ ತಮಟೆ, ನಗಾರಿ, ದುಮದುಮಿ- ಇವುಗಳೂ ಕೂಡಲೆ ಬಾರಿಸಲ್ಪಟ್ಟವು. ಆ ಶಬ್ದದಿಂದ ಬಹು ದೊಡ್ಡ ಗದ್ದಲವಾಯಿತು.

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯನ್ದನೇ ಸ್ಥಿತೌ ।**
**ಮಾಧವಃ ಪಾಣ್ಡವಶ್ಚೈವ ದಿವ್ಯೌ ಶಙ್ಖೌ ಪ್ರದಧ್ಮತುಃ ॥೧೪॥"**

ಮತ್ತು ಗೀತೆಯ ಹದಿಮೂರನೆಯ ಅಧ್ಯಾಯದಲ್ಲಿ ೭೫೩ನೆಯ ಪುಟದಲ್ಲಿ ಭಾಷ್ಯಭಾಗ ೨೪೭ರ ಮೇಲೆ ಈ ವಿಷಯವನ್ನು ಸೇರಿಸಿಕೊಳ್ಳಬೇಕು.

**ಜ್ಞೇಯಂ ಯತ್ ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।**
**ಅನಾದಿಮತ್ ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥೧೨॥**

೧೨. ಯಾವದು ಜ್ಞೇಯವೋ ಅದನ್ನು ಹೇಳುವೆನು ; ಅದನ್ನರಿತುಕೊಂಡರೆ ಅಮೃತವನ್ನು ಹೊಂದುತ್ತಾನೆ. (ಅದು ಯಾವದೆಂದರೆ) ಅನಾದಿಮತ್ತಾದ ಪರಬ್ರಹ್ಮವು ; ಅದು ಸತ್ತೆ (ನ್ನಿಸುವದಿಲ್ಲ), ಅಸತ್ತೆನಿಸುವದೂ ಇಲ್ಲ.

---

॥ ಓಂ ॥

ಶಾಂಕರಭಾಷ್ಯ ಸಮೇತವಾದ

# ಶ್ರೀಮದ್ಭಗವದ್ಗೀತೆ

## ಒಂಭತ್ತನೆಯ ಅಧ್ಯಾಯ

## (ರಾಜವಿದ್ಯಾ ರಾಜಗುಹ್ಯ ಯೋಗ)

## ಜ್ಞಾನದಿಂದ ನೇರಾಗಿ ಮೋಕ್ಷಪ್ರಾಪ್ತಿ

(ಭಾಷ್ಯ)

೧. ಅಷ್ಟಮೇ ನಾಡೀದ್ವಾರೇಣ ಧಾರಣಾಯೋಗಃ ಸಗುಣ ಉಕ್ತಃ । ತಸ್ಯ ಚ ಫಲಮ್ ಅಗ್ನ್ಯರ್ಚಿರಾದಿಕ್ರಮೇಣ ಕಾಲಾನ್ತರೇ ಬ್ರಹ್ಮಪ್ರಾಪ್ತಿಲಕ್ಷಣ ಮೇವ ಅನಾವೃತ್ತಿರೂಪಂ ನಿರ್ದಿಷ್ಟಮ್ । ತತ್ರ ಅನೇನೈವ ಪ್ರಕಾರೇಣ ಮೋಕ್ಷ ಪ್ರಾಪ್ತಿಫಲಮ್ ಅಧಿಗಮ್ಯತೇ ನಾನ್ಯಥಾ ಇತಿ ತದಾಶಙ್ಕಾವ್ಯಾವಿವರ್ತಯಿಷಯಾ ಶ್ರೀ ಭಗವಾನ್ ಉವಾಚ -

(ಭಾಷ್ಯಾರ್ಥ)

ಎಂಟನೆಯ (ಅಧ್ಯಾಯದಲ್ಲಿ ಸುಷುಮ್ನಾ) ನಾಡಿಯ ಮೂಲಕವಾಗಿ (ಪರ ಮಾತ್ಮನ ಉಪಾಸನೆಯನ್ನು ಮಾಡುವ) ಧಾರಣಾಯೋಗವನ್ನು [1] ಅದರ ಅಂಗ ಗಳೊಡನೆ [2] ಹೇಳಿದ್ದಾಯಿತು. ಅದಕ್ಕೆ ಅಗ್ನಿ, ಜ್ಯೋತಿ ಮುಂತಾದ ಕ್ರಮದಿಂದ [3]

---

1. ಪ್ರಾಣವನ್ನು ಮೂರ್ಧಪ್ರದೇಶದಲ್ಲಿ ಧಾರಣೆಮಾಡಬೇಕೆಂದು ಹೇಳಿರುವದರಿಂದಲೂ ಓಂಕಾರದಮೂಲಕವಾಗಿ ಧ್ಯಾನವನ್ನು ಮಾಡಬೇಕೆಂದು ಹೇಳಿರುವದರಿಂದಲೂ ಇದು ಧಾರಣಾಯೋಗವು.

2. ಸರ್ವದ್ವಾರಸಂಯಮ, ಭ್ರೂಮಿಜಯ, ಓಂಕಾರಜಪ_ಮುಂತಾದವು ಇದರ ಅಂಗಗಳು.

3. ೮_೨೪.

(ಹೋಗಿ) ಕಾಲಾಂತರದಲ್ಲಿ ಬ್ರಹ್ಮವನ್ನು ಪಡೆದುಕೊಳ್ಳುವದೆಂಬ (ಸಂಸಾರಕ್ಕೆ) ಮರಳಿ ಬಾರದ ಫಲವನ್ನೂ ತಿಳಿಸಿದ್ದಾಯಿತು. ಇಲ್ಲಿ ಮೋಕ್ಷವನ್ನು ಪಡೆದುಕೊಳು ವದೆಂಬ ಫಲವು ಇದೇ ಪ್ರಕಾರದಿಂದ ದೊರಕುವದೇ ಹೊರತು ಬೇರೆಯ ರೀತ್ಯಿ ಯಿಂದ (ದೊರಕ)ಲಾರದು ಎಂಬೀ ಶಂಕೆಯನ್ನು ನೀಗುವದಕ್ಕೋಸ್ಕರ ಶ್ರೀಭಗವಂತನು ಇಂತೆಂದನು :—

**ಶ್ರೀ ಭಗವಾನ್ ಉವಾಚ**

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥**

೧. ಆದರೆ ಅಸೂಯಾರಹಿತನಾದ ನಿನಗೆ ಈ ಗುಹ್ಯತಮವಾದ, ವಿಜ್ಞಾನದಿಂದೊಡಗೂಡಿದ ಜ್ಞಾನವನ್ನು ಹೇಳುವೆನು. ಇದನ್ನು ತಿಳಿದು ಕೊಂಡರೆ ಅಶುಭದಿಂದ ಮುಕ್ತನಾಗುವೆ.

(ಭಾಷ್ಯ)

೨. ಇದಂ ಬ್ರಹ್ಮಜ್ಞಾನಂ ವಕ್ಷ್ಯಮಾಣಮ್ ಉಕ್ತಂ ಚ ಪೂರ್ವೇಷು ಅಧ್ಯಾಯೇಷು । ತತ್ ಬುದ್ಧೌ ಸಂನಿಧೀಕೃತ್ಯ ಇದಮ್ ಇತ್ಯಾಹ । ತುಶಬ್ದಃ ವಿಶೇಷನಿರ್ಧಾರಣಾರ್ಥಃ[1] । ಇದಮೇವ ತು ಸಮ್ಯಗ್ಜ್ಞಾನಂ ಸಾಕ್ಷಾತ್ ಮೋಕ್ಷ ಪ್ರಾಪ್ತಿಸಾಧನಮ್ "ವಾಸುದೇವಃ ಸರ್ವಮಿತಿ" (೭-೧೯), "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ಏಕಮೇವಾದ್ವಿತೀಯಮ್" (ಛಾಂ. ೬-೨-೧), ಇತ್ಯಾದಿಶ್ರುತಿಸ್ಮೃತಿಭ್ಯಃ । ನಾನ್ಯತ್ । "ಅಥ ತೇ ಯೇಽನ್ಯಥಾತೋ ವಿದುರನ್ಯರಾಜಾ ನಸ್ತೇ ಕ್ಷಯ್ಯಲೋಕಾ ಭವನ್ತಿ" (ಛಾಂ. ೭-೨೫-೨) ಇತ್ಯಾದಿಶ್ರುತಿಭ್ಯಶ್ಚ । ತೇ ತುಭ್ಯಂ ಗುಹ್ಯತಮಂ ಗೋಪ್ಯತಮಂ ಪ್ರವಕ್ಷ್ಯಾಮಿ ಕಥಯಿಷ್ಯಾಮಿ ಅನಸೂಯವೇ ಅಸೂಯಾರಹಿತಾಯ । ಕಿಂ ತತ್ ? ಜ್ಞಾನಮ್ । ಕಿಂವಿಶಿಷ್ಟಮ್ ? ವಿಜ್ಞಾನ ಸಹಿತಮ್ ಅನುಭವಯುಕ್ತಮ್ । ಯತ್ ಜ್ಞಾನಂ ಜ್ಞಾತ್ವಾ ಪ್ರಾಪ್ಯ ಮೋಕ್ಷ್ಯಸೇ ಅಶುಭಾತ್ ಸಂಸಾರಬನ್ಧನಾತ್ ॥

(ಭಾಷ್ಯಾರ್ಥ)

ಈ ಎಂದರೆ ಮುಂದೆ ಹೇಳುವ ಮತ್ತು ಹಿಂದಿನ ಅಧ್ಯಾಯಗಳಲ್ಲಿ ಹೇಳಿರುವ

---

1 "ವಿಶೇಷಣಾರ್ಥಃ" ನಿ॥, "ವಿಶೇಷಾರ್ಥಃ" ಮ॥

ಬ್ರಹ್ಮಜ್ಞಾನವು ; ಅದನ್ನು ಬುದ್ಧಿಯಲ್ಲಿ ಹತ್ತಿರವಾಗಿಸಿಕೊಂಡು 'ಇದಮ್' (ಈ) ಎಂದು ಹೇಳಿರುತ್ತಾನೆ. ತು (ಆದರೆ) ಎಂಬ ಶಬ್ದವು ವಿಶೇಷವಾಗಿ (ಇಂಥದ್ದೆಂದು) ಗೊತ್ತುಪಡಿಸಿ ಹೇಳುವದಕ್ಕೆ. ಈ ಸಮ್ಯಗ್ಜ್ಞಾನವೇ ಮೋಕ್ಷವನ್ನು ಪಡೆಯುವ ದಕ್ಕೆ ನೇರಾದ ಸಾಧನವು.[1] "ವಾಸುದೇವನೇ ಸರ್ವವು" (೭-೧೯), "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨) "ಎರಡನೆಯದಿಲ್ಲದ ಒಂದೇ" (ಛಾಂ. ೬-೨-೧)- ಮುಂತಾದ ಶ್ರುತಿಸ್ಮೃತಿಗಳಲ್ಲಿ (ಈ ಜ್ಞಾನವನ್ನು ತಿಳಿಸಿರುತ್ತದೆ). ಮಿಕ್ಕ ಯಾವದೂ[2] (ಮೋಕ್ಷಕ್ಕೆ ನೇರಾದ ಸಾಧನ)ವಲ್ಲ. "ಇನ್ನು ಯಾರು ಇದಕ್ಕಿಂತ ಬೇರೆಯಾಗಿ ತಿಳಿ ಯುವರೋ (ತಮಗೆ) ಅನ್ಯರಾಜನಿರುವ ಅವರು ನಾಶವಾಗುವ ಲೋಕವುಳ್ಳವರಾಗು ವರು" (ಛಾಂ. ೭-೨೫-೨) ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. ಗುಹ್ಯ ತಮವಾದ ಅತ್ಯಂತವಾಗಿ ಗುಟ್ಟಾಗಿರುವ[3] ಇದನ್ನು ಅನಸೂಯನಾದ ಅಸೂಯೆ ಯಿಲ್ಲದ[4] (ತೇ ತುಭ್ಯಮ್) ನಿನಗೆ ಹೇಳುವೆನು ತಿಳಿಸುವೆನು. ಅದು ಯಾವದು ? ಎಂದರೆ ಜ್ಞಾನವು. ಎಂಥ (ಜ್ಞಾನವು) ? ಎಂದರೆ ವಿಜ್ಞಾನಸಹಿತವಾದದ್ದು ಅನು ಭವದಿಂದೊಡಗೂಡಿರುವದು. ಈ ಜ್ಞಾನವನ್ನು ತಿಳಿದುಕೊಂಡರೆ ಪಡೆದು ಕೊಂಡರೆ ಅಶುಭದಿಂದ ಎಂದರೆ (ಅಮಂಗಲವಾದ) ಸಂಸಾರದ ಬಂಧದಿಂದ ಮುಕ್ತ ನಾಗುವೆ.

## ಪರಮಾತ್ಮಜ್ಞಾನದ ಹೆಚ್ಚುಗಾರಿಕೆ

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥**

೨. ಇದು ರಾಜವಿದ್ಯೆ, ರಾಜಗುಹ್ಯವು, ಉತ್ತಮವಾದ ಪವಿತ್ರವು. ಪ್ರತ್ಯಕ್ಷವಾಗಿ ತಿಳಿಯಬರುವಂಥದ್ದು, ಧರ್ಮ್ಯವಾದದ್ದು, ಮಾಡುವದಕ್ಕೆ ಬಹು ಸುಲಭವಾದದ್ದು, ಅವ್ಯಯವಾದದ್ದು.

---

1. ಮತ್ತೊಂದು ಕಾಲದಲ್ಲಿ ಮತ್ತೊಂದು ದೇಶದಲ್ಲಿ ಇನ್ನೊಂದರ ಮೂಲಕ ಫಲ ವನ್ನು ಕೊಡುವ ಸಾಧನವಲ್ಲ.

2. ಕರ್ಮವಾಗಲಿ ಉಪಾಸನೆಯಾಗಲಿ.

3. ಕರ್ಮವು ಗುಟ್ಟು (ಗುಹ್ಯ). ಉಪಾಸನೆಯು ಅದಕ್ಕಿಂತ ಗುಟ್ಟು (ಗುಹ್ಯತರ), ಜ್ಞಾನವು ಎಲ್ಲಕ್ಕೂ ಹೆಚ್ಚಿನ ಗುಟ್ಟು (ಗುಹ್ಯತಮ).

4. ೧೮-೬೭ ನೋಡಿ.

(ಭಾಷ್ಯ)

೨. ತಚ್ಚ [1] ರಾಜವಿದ್ಯಾ ವಿದ್ಯಾನಾಂ ರಾಜಾ । ದೀಪ್ತ್ಯತಿಶಯತ್ವಾತ್ । ದೀಪ್ಯತೇ ಹಿ ಇಯಮ್ ಅತಿಶಯೇನ ಬ್ರಹ್ಮವಿದ್ಯಾ ಸರ್ವವಿದ್ಯಾನಾಮ್ । ತಥಾ [2] ರಾಜಗುಹ್ಯಂ ಗುಹ್ಯಾನಾಂ ರಾಜಾ । ಪವಿತ್ರಂ ಪಾವನಮ್ ಇದಮ್ ಉತ್ತಮಮ್ । ಸರ್ವೇಷಾಂ ಪಾವನಾನಾಂ ಶುದ್ಧಿಕಾರಣಂ ಬ್ರಹ್ಮಜ್ಞಾನಮ್ ಉತ್ಕೃಷ್ಟತಮಮ್ । ಅನೇಕಜನ್ಮಸಹಸ್ರಸಞ್ಚಿತಮಪಿ ಧರ್ಮಾಧರ್ಮಾದಿ (?) ಸಮೂಲಂ ಕರ್ಮ ಕ್ಷಣಮಾತ್ರಾದೇವ ಭಸ್ಮೀಕರೋತಿ ಯತಃ ಅತಃ [3] ಕಿಂ ತಸ್ಯ ಪಾವನತ್ವಂ ವಕ್ತವ್ಯಮ್? ಕಿಂಚ ಪ್ರತ್ಯಕ್ಷಾವಗಮಂ ಪ್ರತ್ಯಕ್ಷೇಣ ಸುಖಾದೇರಿವ ಅವಗಮಃ ಯಸ್ಯ ತತ್ ಪ್ರತ್ಯಕ್ಷಾವಗಮಮ್ । ಅನೇಕಗುಣವತೋಽಪಿ ಧರ್ಮವಿರುದ್ಧತ್ವಂ ದೃಷ್ಟಮ್ । ನ ತಥಾ ಆತ್ಮಜ್ಞಾನಂ ಧರ್ಮವಿರೋಧಿ, ಕಿಂ ತು ಧರ್ಮ್ಯಂ ಧರ್ಮಾತ್ ಅನಪೇತಮ್ । ಏವಮಪಿ ಸ್ಯಾತ್ ದುಃಖಸಂಪಾದ್ಯಮ್ [4] ಇತ್ಯತ ಆಹ–ಸುಸುಖಂ ಕರ್ತುಮ್ । ಯಥಾ ರತ್ನವಿವೇಕವಿಜ್ಞಾನಮ್ । ತತ್ರ ಅಲ್ಪಾಯಾಸಾನಾಮ್ ಅನ್ಯೇಷಾಂ ಕರ್ಮಣಾಂ ಸುಖಸಂಪಾದ್ಯಾನಾಮ್ ಅಲ್ಪಫಲತ್ವಂ ದುಷ್ಕರಾಣಾಂ ಚ ಮಹಾಫಲತ್ವಂ ದೃಷ್ಟಮ್ ಇತಿ ಇದಂ ತು [5] ಸುಖಸಂಪಾದ್ಯತ್ವಾತ್ ಫಲಕ್ಷಯಾತ್ ವ್ಯೇತಿ ಇತಿ ಪ್ರಾಪ್ತೇ [6] ಆಹ–ಅವ್ಯಯಮ್ ಇತಿ । ನ ಅಸ್ಯ ಕರ್ಮವತ್ ಫಲತಃ ವ್ಯಯಃ ಅಸ್ತಿ ಇತ್ಯವ್ಯಯಮ್ । ಅತಃ ಶ್ರದ್ಧೇಯಮ್ ಆತ್ಮಜ್ಞಾನಮ್ ॥

(ಭಾಷ್ಯಾರ್ಥ)

ಮತ್ತು ಈ (ಜ್ಞಾನವು) ರಾಜವಿದ್ಯೆ, ವಿದ್ಯೆಗಳ ರಾಜನು ; ಏಕೆಂದರೆ ಇದರಲ್ಲಿ ಹೆಚ್ಚಿನ ಬೆಳಕಿರುವದು. [7] ಈ ಬ್ರಹ್ಮವಿದ್ಯೆಯು ವಿದ್ಯೆಗಳಲ್ಲೆಲ್ಲ ಮಿಗಿಲಾಗಿ

---

1. 'ತಚ್ಚ ಸ್ತೌತಿ' ನಿ॥
2. 'ಈ ಮಾತು ಸಿ॥ ಪಾಠದಂತೆ ಇಲ್ಲಿಯೇ ಇರಬೇಕು'.
3. "ಇತ್ಯತಃ" ಮು॥ ಮೈ॥ ವಾ॥
4. ದುಃಸಂಪಾದ್ಯಮ್' ನಿ॥
5. ಇದು ಕೆಲವು ಪಾಠಗಳಲ್ಲಿಲ್ಲ.
6. 'ಪ್ರಾಪ್ತಮ್ ಅತ ಆಹ' ನಿ॥ ಗು॥
7. ರಾಜ್ ಎಂಬ ಧಾತುವಿಗೆ ಬೆಳಗುವದು ಎಂಬರ್ಥವಿದೆ.

ಬೆಳಗುತ್ತಿರುವದಲ್ಲವೆ ? [1] (ಆದ್ದರಿಂದ ರಾಜವಿದ್ಯೆ.) ಇದರಂತೆ ರಾಜಗುಹ್ಯವು, ಗುಟ್ಟುಗಳ ರಾಜನು. ಇದು ಉತ್ತಮವಾದ ಪವಿತ್ರವು, ಪಾವನವಾದದ್ದು. ಪಾವನಗೊಳಿಸುವ (ಸಾಧನಗಳಲ್ಲೆ)ಲ್ಲ ಬ್ರಹ್ಮಜ್ಞಾನವು ಅತ್ಯಂತ ಉತ್ಕೃಷ್ಟವಾದ ಶುದ್ಧಿಸಾಧನವಾಗಿರುತ್ತದೆ. [2] ಅನೇಕ ಜನ್ಮಸಹಸ್ರಗಳಲ್ಲಿ ರಾಶಿಹಾಕಿಕೊಂಡಿರುವ ಧರ್ಮಾಧರ್ಮಗಳೆಂಬ [3] ಕರ್ಮವನ್ನು ಕೂಡ ಒಂದೇ ಕ್ಷಣದಲ್ಲಿ ಬೂದಿಗೈದುಬಿಡುವದರಿಂದ ಅದು ಪವಿತ್ರವಾದದ್ದೆಂಬುದನ್ನು ಹೇಳುವದೇನಿದೆ ? ಮತ್ತು ಪ್ರತ್ಯಕ್ಷವಾಗಿ ತಿಳಿಯಬರುವಂಥದ್ದು, ಸುಖವೇ ಮುಂತಾದದ್ದರಂತೆ ಪ್ರತ್ಯಕ್ಷವಾಗಿ [4] ಅದರ ಅರಿವು ಆಗುವದರಿಂದ ಅದು ಪ್ರತ್ಯಕ್ಷಾವಗಮವಾದದ್ದು (ಎಂದಿದೆ). ಬಹು ಗುಣಗಳುಳ್ಳದ್ದಾದರೂ ಧರ್ಮಕ್ಕೆ ವಿರುದ್ಧವಾಗಿರುವದು ಕಂಡುಬರುತ್ತದೆ; ಆತ್ಮಜ್ಞಾನವು ಹಾಗೆ ಧರ್ಮಕ್ಕೆ ವಿರೋಧಿಯಲ್ಲ, ಮತ್ತೇನೆಂದರೆ ಧರ್ಮ್ಯವಾದದ್ದು, ಧರ್ಮವನ್ನು ಬಿಟ್ಟು ಹೋಗುವದಿಲ್ಲ. [5] ಹೀಗಿದ್ದರೂ ಇದನ್ನು ಪಡೆದುಕೊಳ್ಳುವದು ಕಷ್ಟವಾಗಿರಬಹುದು ಎಂದರೆ ಅದಕ್ಕೆ (ಭಗವಂತನು) ಹೇಳುತ್ತಾನೆ: "ಮಾಡುವದಕ್ಕೆ ಬಹು ಸುಲಭವಾದದ್ದು" ರತ್ನವನ್ನು ವಿಂಗಡಿಸುವ ಅರಿವಿನಂತೆ [6] (ಇದು ಸುಲಭವಾಗಿ ಬರುತ್ತದೆ). ಇಲ್ಲಿ ಸ್ವಲ್ಪ ಆಯಾಸದಿಂದ [7] ಮಾಡಬಹುದಾದ ಉಳಿದ ಕರ್ಮಗಳು ಸುಲಭವಾಗಿ ಸಿಕ್ಕಿದರೂ ಅವುಗಳಿಗೆ ಸ್ವಲ್ಪವೇ ಫಲವಿರುವದೂ ಮಾಡುವದಕ್ಕೆ ಕಷ್ಟವಾಗಿರುವ (ಕರ್ಮಗಳಿಗೆ) ಹೆಚ್ಚಿನ ಫಲವಿರುವದೂ ಕಂಡುಬಂದಿದೆ. ಇದನ್ನು

---

1. ಏಕೆಂದರೆ ಅಜ್ಞಾನಾಂಧಕಾರವನ್ನೆಲ್ಲ ಇದು ಕಳೆದುಬಿಡುತ್ತದೆ. ಕೇ. ಭಾ. ಭಾ. ೨೩ 'ಬಹುಶೋಭಮಾನಾಮ್' ಎಂಬುದರ ವ್ಯಾಖ್ಯಾನವನ್ನೂ ಮುಂ. ಭಾ. ಭಾ. ೮ 'ಸರ್ವವಿದ್ಯಾಪ್ರತಿಷ್ಠಾಮ್' ಎಂಬುದರ ವ್ಯಾಖ್ಯಾನವನ್ನೂ ನೋಡಿ

2. ಪ್ರಾಯಶ್ಚಿತ್ತಕರ್ಮಗಳಿಗಿಂತ ಜ್ಞಾನದಿಂದ ಹೆಚ್ಚಿನ ಬಗೆಯ ಪಾಪನಾಶವಾಗುತ್ತದೆ; ಏಕೆಂದರೆ ಕರ್ತೃತ್ವಬುದ್ಧಿಯೇ ಅದರಿಂದ ಹೋಗಿಬಿಡುತ್ತದೆ. ಸೂ. ಭಾ. ೪-೧-೧೩.

3. ಸೂ. ಭಾ. ೪-೧-೧೪. ಮೂಲದಲ್ಲಿರುವ ಆದಿ ಎಂಬ ಮಾತು ಹೆಚ್ಚಾಗಿರುವದರಿಂದ ಕನ್ನಡಿಸಿಲ್ಲ.

4. ನೇರಾಗಿ ಎಂದರ್ಥ. ಸುಖದುಃಖಗಳು ಹೇಗೆ ನಮಗೆ ನೇರಾಗಿಯೇ ತಿಳಿಯುವವೋ ಹಾಗೆಯೇ ಜ್ಞಾನವೂ ತಿಳಿಯಬರುತ್ತದೆ. ಅದು ಕಾಲಾಂತರದಲ್ಲಿ ದೇಶಾಂತರದಲ್ಲಿ ದೊರೆಯುವ ಫಲದಂತೆ ಹೊರಗಿರುವದಲ್ಲ.

5. ಜ್ಞಾನವು ಧರ್ಮದಿಂದ ದೊರೆಯುತ್ತದೆ, ಧರ್ಮವನ್ನು ಮೀರಿರುತ್ತದೆ; ಅದರ ವಿರುದ್ಧವಾಗಿರುವದಿಲ್ಲ.

6. ರತ್ನದ ಜ್ಞಾನವನ್ನು ಸಂಪಾದಿಸುವದಕ್ಕೆ ದೇಹಶ್ರಮವೇನೂ ಬೇಕಿಲ್ಲ.

7. ದೇಹಾಯಾಸವಿಲ್ಲದೆ.

ಪಡೆದುಕೊಳ್ಳುವದು ಸುಲಭವಾಗಿರುವದರಿಂದ (ಇದು) ಫಲವು ಸವೆದು ತಾನೂ ಸವೆಯುಬಹುದು ಎಂದಾಯಿತು. (ಇದಕ್ಕೆ ಭಗವಂತನು) ಹೇಳುತ್ತಾನೆ. (ಇದು) ಅವ್ಯಯುವು; ಕರ್ಮದಂತೆ ಇದಕ್ಕೆ ಫಲ (ನಾಶದ)ಮೂಲಕ ವ್ಯಯುವಾಗುವಂತಿಲ್ಲ ವಾದ್ದರಿಂದ ಇದು ಅವ್ಯಯುವು. ಆದ್ದರಿಂದ ಆತ್ಮಜ್ಞಾನದಲ್ಲಿ ಶ್ರದ್ಧೆಯಿಡಬೇಕು.

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತನ್ತೇ ಮೃತ್ಯುಸಂಸಾರವರ್ತ್ಮನಿ ॥ ೩ ॥**

೩. ಎಲೈ ಪರಂತಪನೆ, ಈ ಧರ್ಮದಲ್ಲಿ ಶ್ರದ್ಧೆಯನ್ನಿಡದ ಜನರು ನನ್ನನ್ನು ಹೊಂದದೆ ಮೃತ್ಯುಸಂಸಾರದ ಮಾರ್ಗಕ್ಕೆ ಹಿಂತಿರುಗುತ್ತಾರೆ.

(ಭಾಷ್ಯ)

೪. ಯೇ ಪುನಃ ಅಶ್ರದ್ದಧಾನಾಃ .ಶ್ರದ್ಧಾವಿರಹಿತಾಃ ಆತ್ಮಜ್ಞಾನಸ್ಯ ಧರ್ಮಸ್ಯ ಅಸ್ಯ ಸ್ವರೂಪೇ ತತ್ಫಲೇ ಚ ನಾಸ್ತಿಕಾಃ ಪಾಪಕಾರಿಣಃ ಅಸುರಾಣಾಮ್ ಉಪನಿಷದಂ ದೇಹಮಾತ್ರಾತ್ಮದರ್ಶನಮೇವ ಪ್ರತಿಪನ್ನಾಃ ಅಸುತೃಪಃ ಪಾಪಾಃ ಪುರುಷಾಃ ಅಶ್ರದ್ದಧಾನಾಃ ಪರಂತಪ ಅಪ್ರಾಪ್ಯ ಮಾಂ ಪರಮೇಶ್ವರಮ್ । ಮತ್ಪ್ರಾಪ್ತೌ ನೈವ ಆಶಙ್ಕಾ ಇತಿ ಮತ್ಪ್ರಾಪ್ತಿಮಾರ್ಗಭೇದಭಕ್ತಿಮಾತ್ರಮಪಿ ಅಪ್ರಾಪ್ಯ ಇತ್ಯರ್ಥಃ । ನಿವರ್ತನ್ತೇ, ನಿಶ್ಚಯೇನ ವರ್ತನ್ತೇ[1] । ಕ್ವ ? ಮೃತ್ಯುಸಂಸಾರವರ್ತ್ಮನಿ ಮೃತ್ಯುಯುಕ್ತಃ ಸಂಸಾರಃ ಮೃತ್ಯುಸಂಸಾರಃ । ತಸ್ಯ ವರ್ತ್ಮ ನರಕತಿರ್ಯಗಾದಿಪ್ರಾಪ್ತಿಮಾರ್ಗಃ । ತಸ್ಮಿನ್ನೇವ ವರ್ತನ್ತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಆದರೆ ಯಾರು ಈ ಆತ್ಮಜ್ಞಾನವೆಂಬ ಧರ್ಮದಲ್ಲಿ ಶ್ರದ್ಧೆಯನ್ನಿಡದವರೋ, ಇದರ ಸ್ವರೂಪದಲ್ಲಿಯೂ ಫಲದಲ್ಲಿಯೂ (ನಂಬಿಕೆಯಿಲ್ಲದ) ನಾಸ್ತಿಕರಾಗಿ ಪಾಪವನ್ನೇ ಮಾಡುತ್ತಿರುವರೋ **ಅಸುರರ ಉಪನಿಷತ್ತಾದ[2] ದೇಹವೇ ಆತ್ಮನೆಂಬ ದರ್ಶನವನ್ನು ಹಿಡಿದುಕೊಂಡಿರುವರೋ,** ಹೊಟ್ಟೆಯನ್ನು ಹೊರೆಯುವ[3] ಪಾಪಿಗಳಾದ ಶ್ರದ್ಧಾವಂತರಲ್ಲದ (ಆ) ಜನರು, ಎಲೈ ಪರಂತಪನೆ, ಪರಮೇಶ್ವರನಾದ

1. ಇದು ನಿ॥ ಗು॥ ಪಾಠ.
2. ಛಾಂ. ೮-೮-೫.
3. ಋ. ಮಂ. ೧೦-೬-೮೨-೭.

**ನನ್ನನ್ನು ಪಡೆಯದೆ–ಅವರು ನನ್ನನ್ನು ಪಡೆಯುವರೆಂಬ ಶಂಕೆಯೇ ಇಲ್ಲವಾದ್ದರಿಂದ ನನ್ನನ್ನು ಪಡೆಯುವದಕ್ಕೆ ಮಾರ್ಗವಿಶೇಷವಾದ ಭಕ್ತಿಯನ್ನು ಕೂಡ ಪಡೆಯದೆ**[1] ಎಂದರ್ಥ–ಹಿಂತಿರುಗುವರು, ನಿಶ್ಚಯವಾಗಿ ಈ ಮಾರ್ಗಕ್ಕೆ ಮತ್ತೆ ಬರುತ್ತಿರುವರು. ಎಲ್ಲಿಗೆ ? ಎಂದರೆ ಮೃತ್ಯುಸಂಸಾರಮಾರ್ಗಕ್ಕೆ. ಮೃತ್ಯುವಿನಿಂದೊಡಗೂಡಿದ ಸಂಸಾರವೇ ಮೃತ್ಯುಸಂಸಾರವು ; ಅದರ ಮಾರ್ಗವು ಎಂದರೆ ನರಕ, ತಿರ್ಯಕ್‌ಪ್ರಾಣಿಗಳ(ಜನ್ಮ)ವೇ ಮುಂತಾದದ್ದನ್ನು ಪಡೆಯುವ ಮಾರ್ಗವು. ಅದರಲ್ಲಿಯೇ (ಅವರು) ಇರುತ್ತಾರೆ ಎಂದರ್ಥ.

(ಭಾಷ್ಯ)

೫. ಸ್ತುತ್ವಾ[2] ಅರ್ಜುನಮ್ ಅಭಿಮುಖೀಕೃತ್ಯ ಆಹ—

(ಭಾಷ್ಯಾರ್ಥ)

(ಹೀಗೆ ಜ್ಞಾನವನ್ನು) ಹೊಗಳಿ ಅರ್ಜುನನನ್ನು ತನ್ನ ಕಡೆಗೆ ತಿರುಗಿಸಿಕೊಂಡು (ಭಗವಂತನು)[3] ಹೇಳುತ್ತಾನೆ :—

## ಪರಮಾತ್ಮನಿಗೆ ಪ್ರಪಂಚದ ಸೋಂಕಿಲ್ಲ

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥**

೪. ಈ ಜಗತ್ತೆಲ್ಲವೂ ಅವ್ಯಕ್ತಮೂರ್ತಿಯಾದ ನನ್ನಿಂದ ವಿತತವಾಗಿರುತ್ತದೆ. ಸರ್ವಭೂತಗಳೂ ನನ್ನಲ್ಲಿರುವವು, ನಾನು ಅವುಗಳಲ್ಲಿಲ್ಲ.

(ಭಾಷ್ಯ)

೬. ಮಯಾ ಮಮ ಯಃ ಪರೋ ಭಾವಃ ತೇನ ತತಂ ವ್ಯಾಪ್ತಂ ಸರ್ವಮಿದಂ ಜಗತ್ ಅವ್ಯಕ್ತಮೂರ್ತಿನಾ ನ ವ್ಯಕ್ತಾ ಮೂರ್ತಿಃ ಸ್ವರೂಪಂ ಯಸ್ಯ ಮಮ ಸೋಽಹಮ್ ಅವ್ಯಕ್ತಮೂರ್ತಿಃ ತೇನ ಮಯಾ ಅವ್ಯಕ್ತಿಮೂರ್ತಿನಾ ಕರಣಾಗೋಚರಸ್ವರೂಪೇಣ ಇತ್ಯರ್ಥಃ । ತಸ್ಮಿನ್ ಮಯಿ ಅವ್ಯಕ್ತಮೂರ್ತೌ ಸ್ಥಿತಾನಿ ಮತ್ಸ್ಥಾನಿ

---

1. ಭಕ್ತಿಯಿಂದ ಜ್ಞಾನವು ಬಂದು ಭಗವತ್ಪ್ರಾಪ್ತಿಯಾಗಬೇಕು. ೧೦-೧೧.
2. "ಜ್ಞಾನಸ್ತುತ್ವಾ" ಶಿ||
3. 'ಭಗವಾನ್' ಎಂದು ಮ|| ಮೈ|| ಗು||ಗಳಲ್ಲಿದ್ದೇ ಇದೆ.

ಸರ್ವಭೂತಾನಿ ಬ್ರಹ್ಮಾದೀನಿ ಸ್ತಂಬಪರ್ಯನ್ತಾನಿ [1] । ನ ಹಿ ನಿರಾತ್ಮಕಂ ಕಿಂಚಿತ್ ಭೂತಂ ವ್ಯವಹಾರಾಯ ಅವಕಲ್ಪತೇ । ಅತಃ ಮತ್ಸ್ಥಾನಿ ಮಯಾ ಆತ್ಮನಾ ಆತ್ಮವತ್ತ್ವೇನ ಸ್ಥಿತಾನಿ । ಅತಃ ಮಯಿ ಸ್ಥಿತಾನಿ ಇತಿ ಉಚ್ಯನ್ತೇ । ತೇಷಾಂ ಭೂತಾನಾಮ್ ಅಹಮೇವ ಆತ್ಮಾ ಇತ್ಯತಃ ತೇಷು ಸ್ಥಿತಃ ಇತಿ ಮೂಢಬುದ್ಧೀನಾಮ್ ಅವಭಾಸತೇ । ಅತಃ ಬ್ರವೀಮಿ "ನ ಚಾಹಂ ತೇಷು ಭೂತೇಷು ಅವಸ್ಥಿತಃ" ಮೂರ್ತವತ್ ಸಂಶ್ಲೇಷಾಭಾವೇನ । ಆಕಾಶಸ್ಯಾಪಿ ಅನ್ತರತಮೋ ಹಿ ಅಹಮ್ । ನ ಹಿ ಅಸಂಸರ್ಗಿವಸ್ತು ಕ್ವಚಿತ್ ಆಧೇಯಭಾವೇನ ಅವಸ್ಥಿತಂ ಭವತಿ ॥

(ಭಾಷ್ಯಾರ್ಥ)

ನನ್ನಿಂದ ಎಂದರೆ ನನ್ನ ಹೆಚ್ಚಿನ ಸ್ವಭಾವವಿದೆಯಲ್ಲ, ಅದರಿಂದ ಈ ಜಗತ್ತೆಲ್ಲವೂ ವಿತತವಾಗಿರುವದು ವ್ಯಾಪ್ತವಾಗಿರುವದು. ಅವ್ಯಕ್ತಮೂರ್ತಿಯಾದ-ವ್ಯಕ್ತವಲ್ಲದ ಮೂರ್ತಿಯು ಸ್ವರೂಪವು ನನಗೆ ಇರುವದರಿಂದ ನಾನು ಅವ್ಯಕ್ತಮೂರ್ತಿಯು, ಅಂಥ-ನನ್ನಿಂದ (ಯಾವ) ಕರಣಕ್ಕೂ ಗೋಚರನಲ್ಲದ (ನನ್ನಿಂದ ವ್ಯಾಪ್ತವಾಗಿರುವದು) ಎಂದರ್ಥ. ಆ ಅವ್ಯಕ್ತಮೂರ್ತಿಯಾದ ನನ್ನಲ್ಲಿ ಬ್ರಹ್ಮಾದಿಯಾಗಿ ಸ್ತಂಬದವರೆಗಿನ ಸರ್ವಭೂತಗಳೂ ಇರುವದರಿಂದ (ಅವು) ನನ್ನಲ್ಲಿರುವವು. ಯಾವ ಭೂತವೇ ಆಗಲಿ ಆತ್ಮನಿಲ್ಲದೆ ವ್ಯವಹಾರಕ್ಕೆ ತಕ್ಕದ್ದಾಗಿರುವದಿಲ್ಲ ; ಆದ್ದರಿಂದ (ಅವು) ನನ್ನಲ್ಲಿರುವವು, ಎಂದರೆ ಆತ್ಮನಾದ ನನ್ನಿಂದ ಆತ್ಮವಂತಗಳಾಗಿರುವವು. ಆದ್ದರಿಂದ ನನ್ನಲ್ಲಿ ಇವೆ [2] ಎಂದು ಹೇಳಿರುವೆನು. ಆ ಭೂತಗಳಿಗೆ ನಾನೇ ಆತ್ಮನು ಎಂಬ ಕಾರಣದಿಂದ ಮೂಢಬುದ್ಧಿಗಳಾದವರಿಗೆ ಅವುಗಳಲ್ಲಿ ನಾನು ಇರುವೆನು ಎಂದು ತೋರುತ್ತಿರುತ್ತದೆ. ಆದ್ದರಿಂದ [3] ನಾನು ಆ ಭೂತಗಳಲ್ಲಿರುವದಿಲ್ಲ ಎಂದು ಹೇಳುತ್ತಿದೇನೆ, ಅದೇಕೆಂದರೆ ಮೂರ್ತವಸ್ತುವಿನಂತೆ ನಾನು (ಯಾವದಕ್ಕೂ) ಅಂಟಿಕೊಂಡಿ

---

1. ಈ ಮಾತು ಪು॥ ವ್ಯ॥ ಗು॥ ಗಳಲ್ಲಿಲ್ಲ.

2. ಆತ್ಮನಲ್ಲಿ ಭೂತಗಳು ಇರುವವೆಂಬುದು ಗಿಂಡಿಯಲ್ಲಿ ನೀರು ಇರುವಂತೆ ಅಲ್ಲ ; ಆತ್ಮನನ್ನು ಬಿಟ್ಟರೆ ಅವು ತೋರಿಕೊಳ್ಳಲಾರವು ಎಂಬ ಅರ್ಥದಲ್ಲಿ ಮಾತ್ರ ಆತ್ಮನಲ್ಲಿರುವವು.

3. ಭೂತಗಳಲ್ಲಿ ಆತ್ಮನಿರುವನೆಂಬ ತಿಳಿವಳಿಕೆಯುಂಟಾದರಲ್ಲವೆ, ಹಾಗಿಲ್ಲವೆಂಬ ಮಾತು ಬರಬೇಕು ?_ಎಂಬ ಶಂಕೆಗೆ ಪರಿಹಾರವಿದು. ಮೂಢರಿಗೆ ಪಂಚಭೂತಗಳಿಂದಾಗಿರುವ ಶರೀರದಲ್ಲಿ ಆತ್ಮನಿದಾನೆಂಬ ಭಾವನೆಯಿರುತ್ತದೆ.

ರುವದಿಲ್ಲ. ಆಕಾಶಕ್ಕಿಂತಲೂ ನಾನು ಒಳಗಡೆ ಇರುವವನಲ್ಲವೆ[1]? ಅಸಂಸರ್ಗಿಯಾದ ವಸ್ತು[2] ಏತರಲ್ಲಿಯೂ ಆಧೇಯಭಾವದಿಂದ ಇದ್ದುಕೊಂಡಿರುವದಿಲ್ಲವಷ್ಟೆ.

(ಭಾಷ್ಯ)

೭. ಅತ ಏವ ಅಸಂಸರ್ಗಿತ್ವಾತ್ ಮಮ—

(ಭಾಷ್ಯಾರ್ಥ)

ಹೀಗೆ ನಾನು ಯಾವದಕ್ಕೂ ಸಂಬಂಧಿಸದ (ಸ್ವಭಾವದವ) ನಾಗಿರುವದರಿಂದಲೇ

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

೫. ಮತ್ತು ಭೂತಗಳು ನನ್ನಲ್ಲಿರುವದೂ ಇಲ್ಲ. ನನ್ನ ಐಶ್ವರಯೋಗವನ್ನು ನೋಡು ! ಭೂತಭಾವನನಾದ ನನ್ನ ಆತ್ಮನು ಭೂತಭೃತ್ತೂ (ಆಗಿರುವನು), ಭೂತಸ್ಥನೂ ಅಲ್ಲ.

(ಭಾಷ್ಯ)

೮. ನ ಚ ಮತ್ಸ್ಥಾನಿ ಭೂತಾನಿ ಬ್ರಹ್ಮಾದೀನಿ । ಪಶ್ಯ ಮೇ ಯೋಗಂ ಯುಕ್ತಿಂ ಘಟನಂ[3] ಮೇ ಮಮ ಐಶ್ವರಮ್ ಈಶ್ವರಸ್ಯ ಇಮಮ್[4] ಐಶ್ವರಮ್ ಯೋಗಮ್ ಆತ್ಮನಃ ಯಾಥಾತ್ಮ್ಯಮ್ ಇತ್ಯರ್ಥಃ। ತಥಾ ಚ ಶ್ರುತಿಃ ಅಸಂಸರ್ಗಿತ್ವಾತ್ ಅಸಙ್ಗತಾಂ ದರ್ಶಯತಿ "ಅಸಙ್ಗೋ ನ ಹಿ ಸಜ್ಜತೇ" (ಬೃ. ೩-೯-೨೬) ಇತಿ । ಇದಂ ಚ ಆಶ್ಚರ್ಯಮ್ ಅನ್ಯತ್ ಪಶ್ಯ ಭೂತಭೃತ್ ಅಸಙ್ಗೋಽಪಿ ಸನ್ ಭೂತಾನಿ ಬಿಭರ್ತಿ । ನ ಚ ಭೂತಸ್ಥಃ ಯಥೋಕ್ತೇನ ನ್ಯಾಯೇನ ದರ್ಶಿತತ್ವಾತ್ ಭೂತಸ್ಥತ್ವಾನುಪಪತ್ತೇಃ । ಕಥಂ ಪುನರುಚ್ಯತೇ ಅಸೌ ಮಮ ಆತ್ಮಾ ಇತಿ? ವಿಭಜ್ಯ

---

1. ಆಕಾಶವೇ ಎಲ್ಲಕ್ಕೂ ಒಳಗಿರುವ ವಸ್ತು ; ಅದು ತನ್ನ ಕಾರ್ಯಕ್ಕೆ ಯಾವದಕ್ಕೂ ಸಂಬಂಧಪಟ್ಟಿರುವದಿಲ್ಲ ; ಆಕಾಶಕ್ಕೂ ಕಾರಣನಾಗಿ ಅದರೊಳಗಿರುವ ಆತ್ಮನು ಏತಕ್ಕೂ ಸಂಬಂಧಿಸಿರುವದಿಲ್ಲವೆ-ಬುದನ್ನು ಹೇಳುವದೇನು ?

2. ಏತಕ್ಕೂ ಸಂಬಂಧವಿಲ್ಲದ ವಸ್ತು ಮತ್ತೊಂದು ಆಧಾರವನ್ನು ಬಯಸುವದಿಲ್ಲ.

3. "ಸಂಘಟನಮ್" ಮ|| ಮೈ||

4. 'ಈಶ್ವರಸ್ಯ ಇಮಮ್' ಎಂಬ ಮಾತುಗಳು ಮ|| ಮೈ|| ಗಳಲ್ಲಿಲ್ಲ.

ದೇಹಾದಿಸಙ್ಘಾತಂ ತಸ್ಮಿನ್ ಅಹಂಕಾರಮ್ ಅಧ್ಯಾರೋಪ್ಯ ಲೋಕಬುದ್ಧಿಮ್ ಅನುಸರ್ರ ವ್ಯಪದಿಶತಿ 'ಮಮ ಆತ್ಮಾ' ಇತಿ । ನ ಪುನಃ ಆತ್ಮನಃ ಆತ್ಮಾ ಅನ್ಯ ಇತಿ ಲೋಕವತ್ ಅಜಾನನ್ । ತಥಾ ಭೂತಭಾವನಃ ಭೂತಾನಿ ಭಾವಯತಿ ಉತ್ಪಾದಯತಿ ವರ್ಧಯತಿ ಇತಿ ವಾ ಭೂತಭಾವನಃ ॥

(ಭಾಷ್ಯಾರ್ಥ)

ಬ್ರಹ್ಮನೇ ಮುಂತಾದ ಭೂತಗಳು ನನ್ನಲ್ಲಿಲ್ಲವೂ ಇಲ್ಲ[1]. ನೋಡಿದೆಯ, ಐಶ್ವರವಾದ ಎಂದರೆ ಈಶ್ವರನಾದ ನನ್ನ, ಯೋಗವನ್ನು ಯುಕ್ತಿಯನ್ನು ಘಟನೆಯನ್ನು [2]? ಇಂಥ ಯೋಗವನ್ನು ಎಂದರೆ ಆತ್ಮನ ಯಾಥಾತ್ಮ್ಯವನ್ನು ಎಂದರ್ಥ. ಆದ್ದರಿಂದಲೇ ಶ್ರುತಿಯು ಆತ್ಮನು ಮತ್ತೊಂದಕ್ಕೆ ಅಂಟಿಕೊಳ್ಳುವ ಸ್ವಭಾವದವನಲ್ಲವೆಂಬುದರ ಮೇಲೆ "(ಆತನು) ಅಸಂಗನು, ಏಕೆಂದರೆ ಏತಕ್ಕೂ ಅಂಟಿಕೊಳ್ಳುವದಿಲ್ಲ" (ಬೃ. ೩-೯-೨೬) ಎಂದು (ಅವನು) ಅಸಂಗನೆಂದು ತಿಳಿಸುತ್ತದೆ. ಇದೂ ಅಲ್ಲದೆ ಮತ್ತೊಂದು ಆಶ್ಚರ್ಯವನ್ನು ನೋಡು! ಭೂತಭೃತ್ತೂ (ಆಗಿರುವನು), ಅಸಂಗನಾದರೂ ಭೂತಗಳನ್ನು ಧರಿಸಿರುತ್ತಾನೆ, ಆದರೆ ಭೂತಸ್ಥನಲ್ಲ; ಏಕೆಂದರೆ ಹಿಂದೆ ಹೇಳಿರುವ ಯುಕ್ತಿಯಿಂದ ಆತ್ಮನು ಯಾವ ಭೂತಗಳಲ್ಲಿಯೂ ಇರುವದೆಂಬುದು ಹೊಂದುವದಿಲ್ಲ.

(ಆಕ್ಷೇಪ) :—"ಇವನು ನನ್ನ ಆತ್ಮನು" ಎಂದು ಹೇಳಿದ್ದಾದರೂ ಹೇಗೆ ಸರಿ?

(ಪರಿಹಾರ) :—ದೇಹವೇ ಮುಂತಾದವುಗಳ ಗುಂಪನ್ನು ವಿಂಗಡಿಸಿಕೊಂಡು ಅದರಲ್ಲಿ ಅಹಂಕಾರವನ್ನು ಅಧ್ಯಾರೋಪಿಸಿ ಸಾಮಾನ್ಯ ಜನರ ಬುದ್ಧಿಯನ್ನನುಸರಿಸಿ 'ನನ್ನ ಆತ್ಮನು' ಎಂದು ಕರೆದಿರುತ್ತಾನೆ. ಇಷ್ಟೇ ಹೊರತು ತನ್ನ ಆತ್ಮನು ತನಗಿಂತ ಬೇರೆಯಾಗಿರುವನೆಂದು ಸಾಮಾನ್ಯಜನರಂತೆ ಅಜ್ಞನಾಗಿ (ಹೇಳಿರುವದಿಲ್ಲ) [3].

ಮತ್ತು ಈ ಆತ್ಮನು ಭೂತಭಾವನನು ಎಂದರೆ ಭೂತಗಳನ್ನು ಉಂಟುಮಾಡುವವನು ಅಥವಾ ಬೆಳೆಯುವಂತೆ ಮಾಡುವವನು.

(ಭಾಷ್ಯ)

೯. ಯಥೋಕ್ತೇನ ಶ್ಲೋಕದ್ವಯೇನ ಉಕ್ತಮರ್ಥಂ ದೃಷ್ಟಾನ್ತೇನ ಉಪಪಾದಯನ್ ಆಹ

---

1. ಆತ್ಮನಿಗೆ ಯಾವದೊಂದು ಆಧಾರವೂ ಇಲ್ಲ, ಆಧೇಯವೂ ಇಲ್ಲ. ಈ ಅರ್ಥದಲ್ಲಿ ಆತ್ಮನು ಏತರಲ್ಲಿಯೂ ಇಲ್ಲ, ಆತ್ಮನಲ್ಲಿಯೂ ಯಾವದೂ ಇಲ್ಲ.

2. ೭—೨೫ ರ ಭಾಷ್ಯವನ್ನು ನೋಡಿ.

3. ಆದ್ದರಿಂದ ನನ್ನ ಆತ್ಮವೆಂದರೆ ನಾನು ಎಂದೇ ಅರ್ಥ.

(ಭಾಷ್ಯಾರ್ಥ)

ಹಿಂದೆ ಹೇಳಿದ ಎರಡು ಶ್ಲೋಕಗಳಲ್ಲಿ ಹೇಳಿರುವ ವಿಷಯವನ್ನು ದೃಷ್ಟಾಂತ ದಿಂದ ತಿಳಿಸಿಕೊಡುವದಕ್ಕಾಗಿ (ಭಗವಂತನು) ಹೇಳುತ್ತಾನೆ:—

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

೬. ಹೇಗೆ ಸರ್ವತ್ರಗವಾದ ಮಹಾವಾಯುವು ಯಾವಾಗಲೂ ಆಕಾಶದಲ್ಲಿರುವದೋ ಅದರಂತೆ ಎಲ್ಲಾ ಭೂತಗಳೂ ನನ್ನಲ್ಲಿರುವವೆಂದು ನಿಶ್ಚಯಿಸು.

(ಭಾಷ್ಯ)

೧೦. ಯಥಾ ಲೋಕೇ ಆಕಾಶಸ್ಥಿತಃ ಆಕಾಶೇ ಸ್ಥಿತಃ ನಿತ್ಯಂ ಸದಾ ವಾಯುಃ ಸರ್ವತ್ರ ಗಚ್ಛತಿ ಇತಿ ಸರ್ವತ್ರಗಃ, ಮಹಾನ್ ಪರಿಮಾಣತಃ, ತಥಾ (ಸರ್ವಾಣಿ ಭೂತಾನಿ)[1] ಆಕಾಶವತ್ ಸರ್ವಗತೇ ಮಯಿ ಅಸಂಶ್ಲೇಷೇಣೈವ ಸ್ಥಿತಾನಿ ಇತಿ ಏವಮ್ ಉಪಧಾರಯ ವಿಜಾನೀಹಿ ॥

(ಭಾಷ್ಯಾರ್ಥ)

ಹೇಗೆ ಲೋಕದಲ್ಲಿ ಸರ್ವತ್ರಗವಾದ ಎಂದರೆ ಎಲ್ಲೆಲ್ಲಿಯೂ ಸಂಚರಿಸುತ್ತಿರುವ ಪರಿಮಾಣದಿಂದ ದೊಡ್ಡದಾದ ಗಾಳಿಯು ಆಕಾಶಸ್ಥಿತವಾಗಿರುವದೋ ಆಕಾಶದಲ್ಲಿ ಇದ್ದುಕೊಂಡಿರುವದೋ ಹಾಗೆ ಆಕಾಶದಂತೆ ಸರ್ವಗತನಾಗಿರುವ [2] ನನ್ನಲ್ಲಿ (ಯಾವ) ಸಂಬಂಧವೂ ಇಲ್ಲದೆಯೇ ಎಲ್ಲಾ ಭೂತಗಳೂ ಇರುವವೆಂದು ನಿಶ್ಚಯಿಸು, ಅರಿತುಕೊ.

(ಭಾಷ್ಯ)

೧೧. ಏವಂ ವಾಯುಃ ಆಕಾಶೇ ಇವ ಮಯಿ ಸ್ಥಿತಾನಿ ಸರ್ವಭೂತಾನಿ ಸ್ಥಿತಿಕಾಲೇ । ತಾನಿ —

(ಭಾಷ್ಯಾರ್ಥ)

ಹೀಗೆ ವಾಯುವು ಆಕಾಶದಲ್ಲಿರುವಂತೆ ಎಲ್ಲಾ ಭೂತಗಳೂ ಸ್ಥಿತಿಕಾಲದಲ್ಲಿ ನನ್ನಲ್ಲಿರುವವು. ಅವು—

---

1. ಈ ಎರಡು ಶಬ್ದಗಳು ಅಚ್ಚಿನ ಪುಸ್ತಕದಲ್ಲಿ ಬಿಟ್ಟುಹೋಗಿವೆ.
2. "ಆಕಾಶವತ್ ಸರ್ವಗತಶ್ಚ ನಿತ್ಯಃ" ಎಂಬ ಶ.ಬ್ರಾ. ೧೦-೬-೩-೨ ರ ಸೂಚನೆ. ಆಕಾಶಕ್ಕಿಂತಲೂ ಹೆಚ್ಚಿನ ವ್ಯಾಪಕವಸ್ತುವು ಲೋಕದಲ್ಲಿಲ್ಲವಾದ್ದರಿಂದ ಅದಕ್ಕೆ ಹೋಲಿಸಿದೆ.

**ಸರ್ವಭೂತಾನಿ ಕೌನ್ತೇಯ ಪ್ರಕೃತಿಂ ಯಾನ್ತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**

೭. ಎಲೈ ಕೌಂತೇಯನೆ, ಕಲ್ಪವು ಕ್ಷಯವಾಗುವಾಗ ಸರ್ವಭೂತಗಳೂ ನನ್ನ ಪ್ರಕೃತಿಯನ್ನು ಸೇರುತ್ತವೆ; ಕಲ್ಪದ ಆದಿಯಲ್ಲಿ ಮತ್ತೆ ನಾನು ಅವುಗಳನ್ನು ಸೃಷ್ಟಿಮಾಡುತ್ತೇನೆ.

(ಭಾಷ್ಯ)

೧೨. ಸರ್ವಭೂತಾನಿ ಕೌನ್ತೇಯ ಪ್ರಕೃತಿಂ ತ್ರಿಗುಣಾತ್ಮಿಕಾಂ ಅಪರಾಂ ನಿಕೃಷ್ಟಾಂ ಯಾನ್ತಿ ಮಾಮಿಕಾಂ ಮದೀಯಾಂ ಕಲ್ಪಕ್ಷಯೇ ಪ್ರಲಯಕಾಲೇ । ಪುನಃ ಭೂಯಃ ತಾನಿ ಭೂತಾನಿ ಉತ್ಪತ್ತಿಕಾಲೇ ಕಲ್ಪಾದೌ ವಿಸೃಜಾಮಿ ಉತ್ಪಾದಯಾಮಿ ಅಹಂ ಪೂರ್ವವತ್ ॥

(ಭಾಷ್ಯಾರ್ಥ)

ಕೌಂತೇಯನೆ, ಎಲ್ಲಾ ಭೂತಗಳೂ ಮೂರು ಗುಣಗಳಿಂದಾಗಿರುವ ನನ್ನ ನನಗೆ ಸೇರಿರುವ ಕೀಳ್ತರದ[1] ಪ್ರಕೃತಿಯನ್ನು ಕಲ್ಪವು ಕ್ಷಯವಾಗುವಾಗ ಎಂದರೆ ಪ್ರಲಯಕಾಲದಲ್ಲಿ ಸೇರುತ್ತವೆ. ಮತ್ತೆ ಇನ್ನೊಂದು ಸಲ ಆ ಭೂತಗಳನ್ನು ಹುಟ್ಟುವ ಕಾಲವಾದ ಕಲ್ಪಾದಿಯಲ್ಲಿ ನಾನು ಸೃಷ್ಟಿಮಾಡುತ್ತೇನೆ, ಮುನ್ನಿನಂತೆಯೇ ಉಂಟು ಮಾಡುತ್ತೇನೆ.

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥**

೮. ನನ್ನ ಪ್ರಕೃತಿಯನ್ನು ಇಟ್ಟುಕೊಂಡು ಮತ್ತೆಮತ್ತೆ ಪ್ರಕೃತಿಯ ವಶದಿಂದ ಪರವಶವಾಗಿರುವ ಈ ಭೂತಗ್ರಾಮವೆಲ್ಲವನ್ನೂ ಮತ್ತೆ ಮತ್ತೆ ಸೃಷ್ಟಿಮಾಡುತ್ತಿರುವೆನು.

(ಭಾಷ್ಯ)

೧೩. ಏವಮ್ ಅವಿದ್ಯಾಲಕ್ಷಣಾಂ ಪ್ರಕೃತಿಂ ಸ್ವಾಂ ಸ್ವೀಯಾಮ್ ಅವಷ್ಟಭ್ಯ ಆಶ್ರಿತ್ಯ[2] ವಿಸೃಜಾಮಿ ಪುನಃ ಪುನಃ ಪಕೃತಿತೋ ಜಾತಂ ಭೂತಗ್ರಾಮಂ ಭೂತ

---

1. ೭-೫ ರ ಭಾಷ್ಯವನ್ನು ನೋಡಿ.
2. "ವಶೀಕೃತ್ಯ" ಅ॥ಸಿ॥ಗು॥ವಾ॥

ಸಮುದಾಯಮ್ ಇಮಂ ವರ್ತಮಾನಂ ಕೃತ್ಸ್ನಂ ಸಮಗ್ರಮ್[1] ಅವಶಮ್ ಅಸ್ವತನ್ತ್ರಮ್ ಅವಿದ್ಯಾದಿದೋಷೈಃ ಪರವಶೀಕೃತಂ ಪ್ರಕೃತೇಃ ವಶಾತ್ ಸ್ವಭಾವ ವಶಾತ್ ||

(ಭಾಷ್ಯಾರ್ಥ)

**ಹೀಗೆ ಅವಿದ್ಯಾಲಕ್ಷಣವಾದ**[2] **ನನ್ನ ಪ್ರಕೃತಿಯನ್ನು** ನನ್ನದಾದ ಪ್ರಕೃತಿಯನ್ನು ಇಟ್ಟುಕೊಂಡು ಆಶ್ರಯಿಸಿಕೊಂಡು[3] ಪ್ರಕೃತಿಯಿಂದ ಹುಟ್ಟುವ ಈ ಈಗಿರುವ ಭೂತಗ್ರಾಮವನ್ನು ಭೂತಸಮುದಾಯವೆಲ್ಲವನ್ನೂ ಸಮಸ್ತವನ್ನೂ ಪರವಶವಾಗಿರುವ **ಅವಿದ್ಯೆಯೇ ಮುಂತಾದ ದೋಷಗಳಿಂದ, ಪ್ರಕೃತಿಯ ವಶದಿಂದ ಎಂದರೆ ಸ್ವಭಾವಕ್ಕೊಳಗಾಗುವದರಿಂದ ಪರತಂತ್ರವಾಗಿರುವ**[4] (ಭೂತಸಮುದಾಯವನ್ನು) ಮತ್ತೆ ಮತ್ತೆ ಸೃಷ್ಟಿಮಾಡುತ್ತಿರುವೆನು.

(ಭಾಷ್ಯ)

೧೪. ತರ್ಹಿ ತಸ್ಯ ತೇ ಪರಮೇಶ್ವರಸ್ಯ ಭೂತಗ್ರಾಮಮ್ ಇಮಂ ವಿಷಮಂ ವಿದಧತಃ ತನ್ನಿಮಿತ್ತಾಭ್ಯಾಂ ಧರ್ಮಾಧರ್ಮಾಭ್ಯಾಂ ಸಂಬನ್ಧಃ ಸ್ಯಾತ್ ಇತಿ । ಇದಮಾಹ ಭಗವಾನ್—

(ಭಾಷ್ಯಾರ್ಥ)

ಹಾಗಾದರೆ ಈ ಭೂತಗ್ರಾಮವನ್ನು ಹೆಚ್ಚುಕಡಿಮೆಯ (ಸ್ವರೂಪ)ದಿಂದ ಮಾಡುವ ಆ ಪರಮೇಶ್ವರನಾದ ನಿನಗೆ ಅದರ ನಿಮಿತ್ತವಾಗಿ (ಉಂಟಾಗುವ) ಧರ್ಮಾಧರ್ಮಗಳ ಸಂಬಂಧವುಂಟಾದೀತು!-ಎಂದರೆ ಭಗವಂತನು ಇದನ್ನು ಹೇಳುತ್ತಾನೆ :—

---

1. ' ಸಮಸ್ತಮ್ ' ಮು||ವ್ಯಾ||

2. ಪ್ರಕೃತಿಯು ಅವಿದ್ಯಾಕಲ್ಪಿತವೆಂಬುದನ್ನು, ನಿಜವಾಗಿ ಆತ್ಮನಿಗಿಂತ ಭಿನ್ನವಾದ ಪ್ರಕೃತಿಯೆಂಬುದೇ ಇಲ್ಲವೆಂಬುದನ್ನು, ನೆನಪುಕೊಡುವದಕ್ಕೆ ಈ ವಿಶೇಷಣ. ೮-೨೦ ರ ಭಾಷ್ಯವನ್ನು ನೋಡಿ.

3. ಅದರ ಮೂಲಕವಾಗಿಯೇ, ಅದನ್ನು ಬಿಟ್ಟಲ್ಲ. ೮-೬ ರ ಭಾಷ್ಯವನ್ನು ನೋಡಿ.

4. ಅವಿದ್ಯಾಕಾಮಕರ್ಮಗಳು ಪ್ರಾಣಿಗಳಿಗೆ ಸ್ವಾಭಾವಿಕ ; ಜ್ಞಾನದಿಂದ ಇವುಗಳ ನಾಶ.

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನನ್ತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**

೯. ಆದರೆ ಧನಂಜಯನೆ, ಆ ಕರ್ಮಗಳಲ್ಲಿ ಉದಾಸೀನನಂತೆ ಇರುವ ಅಸಕ್ತನಾಗಿರುವ ನನ್ನನ್ನು ಆ ಕರ್ಮಗಳು ಕಟ್ಟಿಹಾಕುವದಿಲ್ಲ.

(ಭಾಷ್ಯ)

೧೫. ನ ಚ ಮಾಮ್ ಈಶ್ವರಮ್ ತಾನಿ ಭೂತಗ್ರಾಮಸ್ಯ ವಿಷಮಸರ್ಗ ನಿಮಿತ್ತಾನಿ ಕರ್ಮಾಣಿ ನಿಬಧ್ನನ್ತಿ ಧನಞ್ಜಯ । ತತ್ರ ಕರ್ಮಣಾಮ್ ಅಸಂಬನ್ಧಿತ್ವೇ[1] ಕಾರಣಮ್ ಆಹ–ಉದಾಸೀನವತ್ ಆಸೀನಮ್ । ಯಥಾ ಉದಾಸೀನಃ ಉಪೇಕ್ಷಕಃ ಕಶ್ಚಿತ್ ತದ್ವತ್ ಆಸೀನಮ್ ಆತ್ಮನಃ ಅವಿಕ್ರಿಯತ್ವಾತ್[2] । ಅಸಕ್ತಂ ಫಲಾಸಙ್ಗರಹಿತಮ್ ಅಭಿಮಾನವರ್ಜಿತಮ್, "ಅಹಂ ಕರೋಮಿ" ಇತಿ ತೇಷು ಕರ್ಮಸು । ಅತಃ ಅನ್ಯಸ್ಯಾಪಿ ಕರ್ತೃತ್ವಾಭಿಮಾನಾಭಾವಃ ಫಲಾಸಙ್ಗಾಭಾವಶ್ಚ ಅಬನ್ಧಕಾರಣಮ್[3], ಅನ್ಯಥಾ ಕರ್ಮಭಿರ್ಬಧ್ಯತೇ ಮೂಢಃ ಕೋಶಕಾರವತ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಆದರೆ ಈಶ್ವರನಾದ ನನ್ನನ್ನು ಭೂತಗ್ರಾಮವನ್ನು ಹೆಚ್ಚುಕಡಿಮೆಯ (ಸ್ವರೂಪ)ದಿಂದ ಸೃಷ್ಟಿಸಿದ ನಿಮಿತ್ತದಿಂದಾದ ಆ ಕರ್ಮಗಳು ಕಟ್ಟಿಹಾಕುವದಿಲ್ಲ. ಇಲ್ಲಿ ಕರ್ಮಗಳು (ತನ್ನನ್ನು) ಕಟ್ಟಿಹಾಕದಿರುವದಕ್ಕೆ ಕಾರಣವನ್ನು (ಭಗವಂತನು) ಹೇಳುತ್ತಾನೆ. ಉದಾಸೀನನಂತೆ ಇರುವ-ಯಾವನಾದರೊಬ್ಬ ಉದಾಸೀನನು ಉಪೇಕ್ಷಕನಾದವನು ಹೇಗೆ ಇರುವನೋ ಹಾಗಿರುವ (ಎಂದರ್ಥ); ಏಕೆಂದರೆ ಆತ್ಮನು ಯಾವ ಮಾರ್ಪಾಡೂ ಇಲ್ಲದವನಾಗಿರುತ್ತಾನೆ. ಅಸಕ್ತನಾಗಿರುವ ಎಂದರೆ ಫಲಸಂಗ ವಿಲ್ಲದ ಆ ಕರ್ಮಗಳಲ್ಲಿ "(ಇದನ್ನು) ನಾನು ಮಾಡುತ್ತೇನೆ" ಎಂಬ ಅಭಿಮಾನ ವಿಲ್ಲದ (ನನ್ನನ್ನು ಅವು ಕಟ್ಟಿಹಾಕುವದಿಲ್ಲ). **ಆದ್ದರಿಂದ ಮತ್ತೊಬ್ಬನಿಗೂ (ಹೀಗೆಯೇ) ನಾನು ಮಾಡುವೆನೆಂಬ ಅಭಿಮಾನವಿಲ್ಲದಿರುವದೂ ಫಲಸಂಗ**

1. 'ಅಸಂಬದ್ಧತ್ವೇ' ನಿ॥ಗು. 'ಅಬಂಧತ್ವೇ' ಎಂದೇ **ಭಾಷ್ಯಕಾರರು** ಬರೆದಿರ ಬಹುದು.

2. 'ಅವಿಕ್ರಿಯತ್ವಜ್ಞಾಮ್' ಮ॥ ಮೈ॥

3. 'ಅಸಂಬನ್ಧಕಾರಣಮ್' ಎಂದೇ ನಿ॥ ಹೊರತು ಮಿಕ್ಕ ಎಲ್ಲಾ ಪುಸ್ತಕಗಳ ಪಾಠವಾದರೂ ಈ ಪಾಠವೇ ಉತ್ತಮ.

4. ೪-೧೩, ೧೪ ರ ಭಾಷ್ಯವನ್ನೂ ಸೂ. ಭಾ. ೨-೧-೩೪ ನ್ನೂ ನೋಡಿ.

ವಿಲ್ಲದಿರುವದೂ ಬಂಧವಾಗದಿರುವದಕ್ಕೆ ಕಾರಣವು; ಹಾಗಿಲ್ಲದೆ ಇದ್ದರೆ ಮೂಢನಾದವನು ರೇಷ್ಮೆಯ ಹುಳುವಿನಂತೆ ಕಟ್ಟುವಡೆಯುತ್ತಾನೆ ಎಂದಭಿಪ್ರಾಯ.

(ಭಾಷ್ಯ)

೧೬. ತತ್ರ "ಭೂತಗ್ರಾಮಮಿಮಂ ವಿಸೃಜಾಮಿ" (೯-೮), "ಉದಾಸೀನವದಾಸೀನಮ್" (೯-೯) ಇತಿ ಚ ವಿರುದ್ಧಮ್ ಉಚ್ಯತೇ ಇತಿ। ತತ್ಪರಿಹಾರಾರ್ಥಮ್ ಆಹ—

(ಭಾಷ್ಯಾರ್ಥ)

ಇಲ್ಲಿ "ಭೂತಗ್ರಾಮವನ್ನು ಸೃಷ್ಟಿಮಾಡುತ್ತೇನೆ" (೯-೮) "ಉದಾಸೀನನಂತೆ ಇರುವ (ನನಗೆ ಬಂಧಕವಾಗುವದಿಲ್ಲ)" (೯-೯) ಎಂದು ಹೇಳಿರುವದು (ಒಂದಕ್ಕೊಂದು) ವಿರುದ್ಧವಾಗಿದೆ ಎಂದರೆ ಅದನ್ನು ಪರಿಹರಿಸುವದಕ್ಕಾಗಿ ಭಗವಂತನು ಹೇಳುತ್ತಾನೆ:—

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌನ್ತೇಯ ಜಗದ್ವಿಪರಿವರ್ತತೇ ॥ ೧೦ ॥**

೧೦. ಅಧ್ಯಕ್ಷನಾದ ನನ್ನಿಂದ ಪ್ರಕೃತಿಯು ಚರಾಚರವೆಲ್ಲವನ್ನೂ ಹಡೆಯುವದು. ಈ ಹೇತುವಿನಿಂದ, ಕೌಂತೇಯನೆ, ಜಗತ್ತು ಸುತ್ತುತ್ತಿರುವದು.

(ಭಾಷ್ಯ)

೧೭. ಮಯಾ ಸರ್ವತಃ ದೃಶಿಮಾತ್ರಸ್ವರೂಪೇಣ ಅವಿಕ್ರಿಯಾತ್ಮನಾ ಅಧ್ಯಕ್ಷೇಣ ಮಮ ಮಾಯಾ ತ್ರಿಗುಣಾತ್ಮಿಕಾ ಅವಿದ್ಯಾಲಕ್ಷಣಾ ಪ್ರಕೃತಿಃ ಸೂಯತೇ ಉತ್ಪಾದಯತಿ ಸಚರಾಚರಂ ಜಗತ್ । ತಥಾ ಚ ಮನ್ತ್ರವರ್ಣಃ-"ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾಃ ಕೇವಲೋ ನಿರ್ಗುಣಶ್ಚ" (ಶ್ವೇ. ೬-೧೧) ಹೇತುನಾ ನಿಮಿತ್ತೇನ ಅನೇನ ಅಧ್ಯಕ್ಷತ್ವೇನ ಕೌನ್ತೇಯ ಜಗತ್ ಸಚರಾಚರಂ ವ್ಯಕ್ತಾವ್ಯಕ್ತಾತ್ಮಕಂ ವಿಪರಿವರ್ತತೇ ಸರ್ವಾಸು ಅವಸ್ಥಾಸು । ದೃಶಿಕರ್ಮತ್ವಾಪತ್ತಿನಿಮಿತ್ತಾ ಹಿ ಜಗತಃ ಸರ್ವಾ ಪ್ರವೃತ್ತಿಃ 'ಅಹಮ್ ಇದಂ ಭೋಕ್ಷ್ಯೇ', 'ಪಶ್ಯಾಮಿ ಇದಮ್', 'ಶೃಣೋಮಿ ಇದಮ್' 'ಸುಖಮ್ ಅನುಭವಾಮಿ', 'ದುಃಖಮ್

ಅನುಭವಾಮಿ', ' ತದರ್ಥಮ್[1] ಇದಂ ಕರಿಷ್ಯೇ ' 'ಇದಂ ಜ್ಞಾಸ್ಯಾಮಿ ' ಇತ್ಯಾದ್ಯಾ ಅವಗತಿನಿಷ್ಠಾ ಅವಗತ್ಯವಸಾನೈವ । " ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ " (ಋ. ೮-೭-೧೭-೭ ತೈ. ಬ್ರಾ ೨-೮-೯) ಇತ್ಯಾದಯಶ್ಚ ಮನ್ತ್ರಾ ಏತಮರ್ಥಂ ದರ್ಶಯನ್ತಿ । ತತಶ್ಚ ಏಕಸ್ಯ ದೇವಸ್ಯ ಸರ್ವಾಧ್ಯಕ್ಷಭೂತಚೈತನ್ಯಮಾತ್ರಸ್ಯ ಪರಮಾರ್ಥತಃ ಸರ್ವಭೋಗಾನಭಿಸಂಬನ್ಧಿನಃ ಅನ್ಯಸ್ಯ ಚೇತನಾನ್ತರಸ್ಯ ಅಭಾವೇ ಭೋಕ್ತುಃ ಅನ್ಯಸ್ಯ ಅಭಾವಾತ್ ಕಿಂನಿಮಿತ್ತಾ ಇಯಂ ಸೃಷ್ಟಿಃ ? ಇತ್ಯತ್ರ ಪ್ರಶ್ನಪ್ರತಿವಚನೇ ಅನುಪಪನ್ನೇ । " ಕೋ ಅದ್ಧಾ ವೇದ ಕ ಇಹ ಪ್ರವೋಚತ್ । ಕುತ ಆಜಾತಾ ಕುತ ಇಯಂ ವಿಸೃಷ್ಟಿಃ " (ಋ. ೮-೭-೧೭-೮, ತೈ. ಭಾ. ೨-೮-೯) ಇತ್ಯಾದಿ ಮನ್ತ್ರವರ್ಣೇಭ್ಯಃ । ದರ್ಶಿತಂ ಚ ಭಗವತಾ " ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ " (೫-೧೫) ಇತಿ ॥

(ಭಾಷ್ಯಾರ್ಥ)

ಎಲ್ಲವನ್ನೂ ನೋಡುವ (ಚೈತನ್ಯ)ಮಾತ್ರ ಸ್ವರೂಪನಾಗಿ ಯಾವ ವಿಕಾರವೂ ಇಲ್ಲದಿರುವ ನಾನು ಅಧ್ಯಕ್ಷನಾಗಿರುವಲ್ಲಿ **ತ್ರಿಗುಣಾತ್ಮಕವಾದ ನನ್ನ ಮಾಯೆಯು, ಅವಿದ್ಯಾಲಕ್ಷಣವಾದ ಪ್ರಕೃತಿಯು**, ಸ್ಥಾವರಜಂಗಮಗಳಿಂದೊಡಗೂಡಿದ ಜಗತ್ತನ್ನು ಹಡೆಯುತ್ತಿರುವದು, ಉಂಟುಮಾಡುತ್ತಿರುವದು ಆದ್ದರಿಂದಲೇ ಮಂತ್ರವರ್ಣವು (ಹೀಗೆಂದು ಹೇಳುತ್ತಿರುವದು): " ಸರ್ವವ್ಯಾಪಿಯೂ ಸರ್ವಭೂತಗಳ ಅಂತರಾತ್ಮನೂ ಆಗಿರುವ ಒಬ್ಬನೇ ದೇವನು ಸರ್ವಭೂತಗಳಲ್ಲಿಯೂ ಅಡಗಿರುವನು. (ಆತನು) ಕರ್ಮಗಳ ಅಧ್ಯಕ್ಷನು, ಸರ್ವಭೂತಗಳಲ್ಲಿಯೂ ವಾಸವಾಗಿರುವವನು, ಸಾಕ್ಷಿಯು, ಚೈತನ್ಯಸ್ವರೂಪನು, (ತಾನೇ) ಬೇರೆಯಾಗಿರುವವನು, ಮತ್ತು ನಿರ್ಗುಣನು " (ಶ್ವೇ. ೬-೧೧).

ಎಲೈ ಕೌಂತೇಯನೆ, (ನಾನು) ಅಧ್ಯಕ್ಷನಾಗಿರುವೆನೆಂಬ ಈ ಹೇತುವಿನಿಂದ ನಿಮಿತ್ತದಿಂದ ಚರಾಚರಗಳೊಡಗೂಡಿರುವ ವ್ಯಕ್ತ, ಅವ್ಯಕ್ತ-ಎಂಬ ರೂಪಗಳಲ್ಲಿರುವ ಜಗತ್ತು ಎಲ್ಲಾ ಅವಸ್ಥೆಗಳಲ್ಲಿಯೂ ಸುತ್ತುತ್ತಿರುವದು. ಜಗತ್ತಿನ ಪ್ರವೃತ್ತಿಯೆಲ್ಲವೂ ಎಂದರೆ ' ನಾನು ಇದನ್ನು ಅನುಭವಿಸುವೆನು ', ' ಇದನ್ನು ಕಾಣುತ್ತಿರುವೆನು ', ' ಇದನ್ನು ಕೇಳುತ್ತಿರುವೆನು ', ' ಸುಖವನ್ನು ಅನುಭವಿಸುತ್ತಿರುವೆನು ', ' ದುಃಖವನ್ನು ಅನುಭವಿಸುತ್ತಿರುವೆನು ', ' ಇದಕ್ಕಾಗಿ ಇದನ್ನು ಮಾಡುವೆನು ',

1. ' ಏತದರ್ಥಮ್ ' ಪಿ|| ಗು||

'ಇದನ್ನು ಅರಿತುಕೊಳ್ಳುವೆನು' ಎಂದು ಮುಂತಾಗಿರುವ **(ಪ್ರವೃತ್ತಿಯೆಲ್ಲ) ನೋಡುವ (ಚೈತನ್ಯಕ್ಕೆ) ವಿಷಯವಾಗಿರುವ ನಿಮಿತ್ತದಿಂದಲೇ ನಡೆಯು ತ್ತಿರುವದು.**[1] **(ಅದೆಲ್ಲವೂ) ಅರಿವಿನಲ್ಲಿಯೇ ನಿಂತಿರುವದು, ಅರಿವಿನಲ್ಲಿಯೇ ಕೊನೆಗಾಣುತ್ತಿರುವದು.** "ಯಾವಾತನು ಪರಮಾಕಾಶದಲ್ಲಿದ್ದುಕೊಂಡು ಇದಕ್ಕೆ ಅಧ್ಯಕ್ಷನಾಗಿರುವನೋ" (ಋ. ೮-೭-೧೭-೭) ಮುಂತಾದ ಮಂತ್ರಗಳೂ ಈ ಅರ್ಥ ವನ್ನು ತಿಳಿಸುತ್ತಿರುವವು.

ಹೀಗಿರುವದರಿಂದ **ಎಲ್ಲಕ್ಕೂ ಸಾಕ್ಷಿಯಾಗಿರುವ ಬರಿಯ ಚೈತನ್ಯವಾಗಿ ರುವ ಯಾವ ಭೋಗದ ಸಂಬಂಧವೂ ಇಲ್ಲದ** ಒಬ್ಬನೇ ಒಬ್ಬ **ದೇವನಿಗಿಂತ** ಬೇರೆಯಾದ ಚೈತನ್ಯವೇ ಇಲ್ಲದ್ದರಿಂದ **ಮತ್ತೊಬ್ಬ ಭೋಕ್ತೃವು ಇಲ್ಲವಾದ** ಕಾರಣ "ಈ ಸೃಷ್ಟಿಗೆ ನಿಮಿತ್ತವೇನು?" ಎಂಬ ವಿಷಯದಲ್ಲಿ ಪ್ರಶ್ನೋತ್ತರಗಳು ಯುಕ್ತವಲ್ಲ. "ಈ ಬಗೆಬಗೆಯ ಸೃಷ್ಟಿಯು ಎಲ್ಲಿಂದ ಬಂದಿತೋ ಏತರಿಂದಾಗಿರು ವದೋ-(ಇದನ್ನು) ಸರಿಯಾಗಿ ಬಲ್ಲವರು ಯಾರು?" (ಋ. ೮-೭-೧೭-೮) ಮುಂ ತಾದ ಮಂತ್ರವರ್ಣಗಳು ಇದಕ್ಕೆ ಪ್ರಮಾಣವು. "ಜ್ಞಾನವು ಅಜ್ಞಾನದಿಂದ ಮುಚ್ಚಿ ಹೋಗಿರುತ್ತದೆ; ಆದರಿಂದ ಜೀವರುಗಳು ಭ್ರಾಂತರಾಗುತ್ತಾರೆ" (೫-೧೫) ಎಂದು ಭಗವಂತನು ಮೊದಲೇ ಹೇಳಿಯೂ ಇರುತ್ತಾನೆ.

## ದೈವಸಂಪತ್ತಿನ ಜನರು ಮಾತ್ರ ಪರಮಾತ್ಮನನ್ನು ಭಜಿಸುವರು

(ಭಾಷ್ಯ)

೧೮. ಏವಂ ಮಾಂ ನಿತ್ಯಶುದ್ಧಬುದ್ಧಮುಕ್ತಸ್ವಭಾವಂ ಸರ್ವಜ್ಞಂ ಸರ್ವ ಜನ್ತೂನಾಮ್ ಆತ್ಮಾನಮಪಿ ಸನ್ತಮ್--

(ಭಾಷ್ಯಾರ್ಥ)

ಹೀಗೆ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿ ಸರ್ವಜ್ಞನಾಗಿ (ನಾನು) ಸರ್ವ ಪ್ರಾಣಿಗಳ ಆತ್ಮನಾಗಿದ್ದರೂ--

**ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್ ॥೧೧॥**

---

1. ಸೂ. ಭಾ. ೨-೨-೨.

೧೧. ಭೂತಗಳ ಮಹೇಶ್ವರನಾಗಿರುವ ನನ್ನ ಪರ ಭಾವವನ್ನು ಅರಿಯದೆ ಮೂಢರು ಮನುಷ್ಯತನುವನ್ನು ಆಶ್ರಯಿಸಿರುವ ನನ್ನನ್ನು ತಿರಸ್ಕರಿಸುತ್ತಾರೆ.

(ಭಾಷ್ಯ)

೧೯. ಅವಜಾನನ್ತಿ ಅವಜ್ಞಾಂ ಪರಿಭವಂ ಕುರ್ವನ್ತಿ ಮಾಂ ಮೂಢಾಃ ಅವಿವೇಕಿನಃ ಮಾನುಷೀಂ ಮನುಷ್ಯಸಂಬನ್ಧಿನೀಂ ತನುಂ ದೇಹಮ್ ಆಶ್ರಿತಮ್ । ಮನುಷ್ಯದೇಹೇನ ವ್ಯವಹರನ್ತಮ್ ಇತ್ಯೇತತ್ । ಪರಂ ಪ್ರಕೃಷ್ಟಂ ಭಾವಂ ಪರಮಾತ್ಮತತ್ತ್ವಮ್ [1] ಆಕಾಶಕಲ್ಪಮ್ ಆಕಾಶಾದಪಿ ಅನ್ತರತಮಮ್ ಅಜಾನನ್ತಃ ಮಮ ಭೂತಮಹೇಶ್ವರಂ ಸರ್ವಭೂತಾನಾಂ ಮಹಾನ್ತಮ್ ಈಶ್ವರಂ ಸ್ವಮ್ ಆತ್ಮಾನಮ್ [2] ||

(ಭಾಷ್ಯಾರ್ಥ)

ಮಾನುಷವಾದ ಎಂದರೆ ಮನುಷ್ಯಸಂಬಂಧವಾದ ತನುವನ್ನು ದೇಹವನ್ನು ಆಶ್ರಯಿಸಿರುವ; ಮನುಷ್ಯದೇಹದಿಂದ ವ್ಯವಹಾರಮಾಡುತ್ತಿರುವ[3] ಎಂದರ್ಥ. ನನ್ನನ್ನು ಮೂಢರು 'ಅವಜಾನನ್ತಿ' ಅವಜ್ಞೆಯನ್ನು ತಿರಸ್ಕಾರವನ್ನು ಮಾಡುತ್ತಾರೆ. ನನ್ನ ಪರಭಾವವನ್ನು ಎಂದರೆ ಆಕಾಶದಂತಿರುವ ಆಕಾಶಕ್ಕಿಂತಲೂ ಒಳಗಿರುವ [4] ಭೂತಮಹೇಶ್ವರವಾದ ಸರ್ವಭೂತಗಳಿಗೂ ದೊಡ್ಡ ಈಶ್ವರನಾಗಿರುವ ತಮ್ಮ ಆತ್ಮನೇ ನಾನೆಂಬ ಹೆಚ್ಚಿನ ಪರಮಾತ್ಮತತ್ತ್ವವನ್ನು ಅರಿಯದೆ (ಹೀಗೆ ಅಸಡ್ಡೆ ಮಾಡುತ್ತಿರುವರು).

(ಭಾಷ್ಯ)

೨೦. ತತಶ್ಚ ತಸ್ಯ ಮಮ ಅವಜ್ಞಾನಭಾವನೇನ ಆಹತಾಃ [5] ವರಾಕಾಸ್ತೇ । ಕಥಮ್ ?

---

1. 'ಪರಮಾರ್ಥತತ್ತ್ವಮ್' ಮ||
2. 'ಸ್ವಾತ್ಮಾನಮ್' ಮ||
3. ಅವತಾರದಲ್ಲಿ ಧರಿಸಿರುವ ಮನುಷ್ಯದೇಹದಿಂದ ವ್ಯವಹಾರಮಾಡುತ್ತಿರುವ ಎಂಬರ್ಥವೇ ಅಲ್ಲದೆ, ಎಲ್ಲಾ ಮನುಷ್ಯರಿಗೂ ಆತ್ಮನಾಗಿ ವ್ಯವಹರಿಸುವ ಎಂಬರ್ಥವೂ ಆಗಬಹುದು.
4. ಸರ್ವಾಂತರನಾದ.
5. 'ಹತಾಃ' ಎಂದಿಷ್ಟೇ ಇದ್ದರೂ ಸಾಕು.

(ಭಾಷ್ಯಾರ್ಥ)

ಅಂಥ, ನನ್ನನ್ನು ತಿರಸ್ಕಾರಮಾಡುವ ಭಾವನೆಯಿಂದ ಪಾಪ! ಆ ಪ್ರಾಣಿಗಳು ಕೆಟ್ಟುಹೋಗುವರು. (ಅದು) ಹೇಗೆಂದರೆ :—

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥೧೨॥**

೨೨. ಮೋಘಾಶರೂ ಮೋಘಕರ್ಮರೂ ಮೋಘಜ್ಞಾನರೂ ವಿಚೇತಸರೂ ಆಗಿ ರಾಕ್ಷಸಿಯಾದ ಮತ್ತು ಅಸುರಿಯಾದ ಮೋಹಕಪ್ರಕೃತಿಯನ್ನು ಆಶ್ರಯಿಸುತ್ತಾರೆ.

(ಭಾಷ್ಯ)

೨೧. ಮೋಘಾಶಾಃ ವೃಥಾ ಆಶಾಃ ಆಶಿಷಃ ಯೇಷಾಂ ತೇ ಮೋಘಾಶಾಃ । ಮೋಘಕರ್ಮಾಣಃ ಯಾನಿ ಚ ಅಗ್ನಿಹೋತ್ರಾದೀನಿ ತೈಃ ಅನುಷ್ಠೀಯಮಾನಾನಿ ಕರ್ಮಾಣಿ ತಾನಿ ಚ ತೇಷಾಂ ಭಗವತ್ಪರಿಭವಾತ್ ಸ್ವಾತ್ಮಭೂತಸ್ಯ ಅವಜ್ಞಾನಾತ್ ಮೋಘಾನ್ಯೇವ ನಿಷ್ಫಲಾನಿ ಕರ್ಮಾಣಿ ಭವನ್ತಿ ಇತಿ ಮೋಘಕರ್ಮಾಣಃ । ತಥಾ ಮೋಘಜ್ಞಾನಾಃ ನಿಷ್ಫಲಜ್ಞಾನಾಃ[1] । ಜ್ಞಾನಮಪಿ ತೇಷಾಂ ನಿಷ್ಫಲಮೇವ ಸ್ಯಾತ್ । ವಿಚೇತಸಃ ವಿಗತವಿವೇಕಾಶ್ಚ ತೇ ಭವನ್ತಿ ಇತ್ಯಭಿಪ್ರಾಯಃ । ಕಿಂ ಚ ತೇ ಭವನ್ತಿ ? ರಾಕ್ಷಸೀಂ ರಕ್ಷಸಾಂ ಪ್ರಕೃತಿಂ ಸ್ವಭಾವಮ್ ಆಸುರೀಮ್ ಅಸುರಾಣಾಂ ಚ ಪ್ರಕೃತಿಂ ಮೋಹಿನೀಂ ಮೋಹಕರೀಂ ದೇಹಾತ್ಮವಾದಿನೀಮ್[2] । ಆಶ್ರಿತಾಃ 'ಛಿನ್ಧಿ' 'ಬಿನ್ಧಿ[3]', 'ಪಿಬ' 'ಖಾದ', 'ಪರಸ್ವಮುಪಹರ'-ಇತ್ಯೇವಂವದನಶೀಲಾಃ ಕ್ರೂರಕರ್ಮಾಣೋ ಭವನ್ತಿ ಇತ್ಯರ್ಥಃ । "ಅಸುರ್ಯಾ ನಾಮ ತೇ ಲೋಕಾಃ" (ಈ-೩) ಇತಿ ಶ್ರುತೇಃ[4] ॥

(ಭಾಷ್ಯಾರ್ಥ)

ಮೋಘಾಶರು ವ್ಯರ್ಥವಾದ ಆಶೆಗಳು ಬಯಕೆಗಳು ಯಾರಿಗಿರುವವೋ ಅಂಥವರು. ಮೋಘಕರ್ಮರು : ಅಗ್ನಿಹೋತ್ರವೇ ಮುಂತಾದ ಅವರು ಅನುಷ್ಠಾನ

1. 'ನಿಷ್ಫಲಂ ಜ್ಞಾನಂ ಯೇಷಾಂ ತೇ' ಎಂದು ಸಿ॥ಮೈ॥ ಪಾಃ
2. ಮು॥ ಮೈ॥ ಗಳಲ್ಲಿಲ್ಲ.
3. ತೈ. ಆ. ೪-೧೭
4. ವಾಕ್ಯವು ಮು॥ ಮೈ॥ ಗಳಲ್ಲಿಲ್ಲ.

ಮಾಡುವ ಕರ್ಮಗಳು ಇರುವವಲ್ಲ, ಅವೂ ಅವರು ಭಗವಂತನನ್ನು ಅಸಡ್ಡೆಮಾಡಿದ್ದರಿಂದ ತಮ್ಮ ಆತ್ಮನೇ ಆಗಿರುವ (ಅವನನ್ನು) ತಿರಸ್ಕಾರಮಾಡಿದ್ದರಿಂದ, ಮೋಘಗಳೇ ಎಂದರೆ ನಿಷ್ಫಲವಾದ ಕರ್ಮಗಳೇ ಆಗಿರುವವು ; ಆದ್ದರಿಂದ (ಅವರು) ಮೋಘಕರ್ಮರು. ಹಾಗೂ ಮೋಘಜ್ಞಾನರು ಎಂದರೆ ನಿಷ್ಫಲವಾದ ಜ್ಞಾನವುಳ್ಳವರು. ಅವರ ಜ್ಞಾನವೂ ನಿಷ್ಫಲವೇ [1] ಆಗಿರುವದು. ವಿಚೇತಸರು ಎಂದರೆ ಅವರು ವಿವೇಕವಿಲ್ಲದವರೂ [2] ಆಗಿರುವರು ಎಂದು ಅಭಿಪ್ರಾಯ. ಅವರು ಮತ್ತೂ ಏನಾಗುವರು ? ಎಂದರೆ : ರಾಕ್ಷಸಿಯಾದ ರಕ್ಕಸರ ಪ್ರಕೃತಿಯನ್ನೂ ಎಂದರೆ ಸ್ವಭಾವವನ್ನೂ ಆಸುರಿಯಾದ ಎಂದರೆ ಅಸುರರ ಪ್ರಕೃತಿಯನ್ನೂ-ಮೋಹಕವಾದ ಎಂದರೆ ಮೋಹವನ್ನುಂಟುಮಾಡುವ ದೇಹವೇ ಆತ್ಮನೆಂದು ವಾದಿಸುವ (ಪ್ರಕೃತಿಯನ್ನು) ಆಶ್ರಯಿಸುತ್ತಾರೆ. ಕಡಿ ! ಹೊಡಿ ! ಕುಡಿ ! ತಿನ್ನು ! ಮತ್ತೊಬ್ಬರ ಸ್ವತ್ತನ್ನು ಕಸಿದುಕೊ-ಎಂದೀಪರಿಯಲ್ಲಿ ಹೇಳಿಕೊಳ್ಳುತ್ತಾ ಕ್ರೂರಕರ್ಮ(ಗಳನ್ನು ಮಾಡುವವ)ರಾಗುತ್ತಾರೆ ಎಂದರ್ಥ. "ಅಸುರ್ಯವೆಂಬ ಲೋಕಗಳಿವೆಯಲ್ಲ, (ಅವನ್ನು ಪಡೆಯುತ್ತಾರೆ)" (ಈ. ೩) ಎಂಬ ಶ್ರುತಿ ಇದಕ್ಕೆ ಪ್ರಮಾಣವು.

(ಭಾಷ್ಯ)

೨೨. ಯೇ ಪುನಃ ಶ್ರದ್ಧಧಾನಾಃ ಭಗವದ್ಭಕ್ತಿಲಕ್ಷಣೇ ಮೋಕ್ಷಮಾರ್ಗೇ ಪ್ರವೃತ್ತಾಃ [3]—

(ಭಾಷ್ಯಾರ್ಥ)

ಆದರೆ ಯಾರು ಶ್ರದ್ಧೆಯುಳ್ಳವರಾಗಿ **ಭಗವದ್ಭಕ್ತಿಯೆಂಬ ಮೋಕ್ಷಮಾರ್ಗದಲ್ಲಿ** [4] ಹೊರಟಿರುವರೋ—

---

1. ಅವರ ಜ್ಞಾನವು ತಾವೇ ಊಹಿಸಿಕೊಂಡು ಸ್ವೇಚ್ಛಾಪ್ರವೃತ್ತಿಗೆ ಕಾರಣವಾಗಿರುವದರಿಂದ ಶಾಸ್ತ್ರದಲ್ಲಿ ಹೇಳಿದ ಸತ್ಫಲವು ಆದಕ್ಕೆ ಆಗಲಾರದು ಎಂದು ಭಾವ. ಆ ಜ್ಞಾನಕ್ಕೆ ಫಲವೇ ಇಲ್ಲವೆಂದು ಅಭಿಪ್ರಾಯವಲ್ಲ.

2. ಯುಕ್ತಾಯುಕ್ತವಿವೇಕವೇ ಇರುವದಿಲ್ಲ ; ಪರಮಾರ್ಥದ ವಿವೇಕವಂತೂ ಅವರಿಗೆ ದಕ್ಕುವದೇ ಇಲ್ಲ.

3. 'ಪ್ರವೃತ್ತಾಸ್ತೇ' ಮು|| ಮೈ||

4. ಭಕ್ತಿಯೇ ಮುಕ್ತಿಗೆ ಜ್ಞಾನದ ಮೂಲಕವಾಗಿ ಹೋಗುವ ದಾರಿ. ೯-೩ ರ ಭಾಷ್ಯವನ್ನು ನೋಡಿ.

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೩ ॥**

೧೩. ಆದರೆ, ಪಾರ್ಥನೆ, ಮಹಾತ್ಮರು ದೈವಪ್ರಕೃತಿಯನ್ನು ಆಶ್ರಯಿಸಿದವರಾಗಿ ನನ್ನನ್ನು ಅವ್ಯಯನಾದ ಭೂತಾದಿಯೆಂದು ತಿಳಿದುಕೊಂಡು ಅನನ್ಯಮನರಾಗಿ ಭಜಿಸುವರು.

(ಭಾಷ್ಯ)

೨೩. ಮಹಾತ್ಮಾನಸ್ತು ಅಕ್ಷುದ್ರಚಿತ್ತಾಃ ಮಾಮ್ ಈಶ್ವರಂ ಪಾರ್ಥ ದೈವೀಂ ದೇವಾನಾಂ ಪ್ರಕೃತಿಂ ಶಮದಮದಯಾಶ್ರದ್ಧಾದಿಲಕ್ಷಣಾಮ್ ಆಶ್ರಿತಾಃ ಸನ್ತಃ ಭಜನ್ತಿ ಸೇವನ್ತೇ ಅನನ್ಯಮನಸಃ ಅನನ್ಯಚಿತ್ತಾಃ ಜ್ಞಾತ್ವಾ ಭೂತಾದಿಂ ಭೂತಾನಾಂ ವಿಯದಾದೀನಾಂ ಪ್ರಾಣಿನಾಂ ಚ [1] ಆದಿಂ ಕಾರಣಮ್ ಅವ್ಯಯಮ್॥

(ಭಾಷ್ಯಾರ್ಥ)

ಆದರೆ ಮಹಾತ್ಮರು, ಅಲ್ಪ ಚಿತ್ತದವರಲ್ಲದವರು, ಈಶ್ವರನಾದ ನನ್ನನ್ನು ಎಲೈ ಪಾರ್ಥನೆ, ದೈವವಾದ ಎಂದರೆ ದೇವತೆಗಳ ಪ್ರಕೃತಿಯನ್ನು [2] ಶಮ, ದಮ, ದಯೆ, ಶ್ರದ್ಧೆ–ಮುಂತಾದ ರೂಪದ (ಸ್ವಭಾವವನ್ನು) ಆಶ್ರಯಿಸಿದವರಾಗಿ ಅನನ್ಯಮನರಾಗಿ ಅನನ್ಯಚಿತ್ತರಾಗಿ, ಭೂತಾದಿಯೆಂದು ಎಂದರೆ ಆಕಾಶಾದಿಭೂತಗಳಿಗೂ ಪ್ರಾಣಿಗಳಿಗೂ (ನಾನು) ಆದಿಯು ಎಂದರೆ ಕಾರಣವು ಎಂದು ತಿಳಿದುಕೊಂಡು, ಭಜಿಸುವರು, ಸೇವಿಸುವರು.

## ಭಗವಂತನ ಉಪಾಸನೆಯ ಪ್ರಕಾರಗಳು

**ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ ।**
**ನಮಸ್ಯನ್ತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥**

೧೪. ಯಾವಾಗಲೂ ನನ್ನನ್ನು ಕೀರ್ತನೆಮಾಡುತ್ತಲೂ ಪ್ರಯತ್ನಿಸು

1. 'ಆದಿಕಾರಣಮ್' ಶಿ॥ ಗು॥; 'ಪ್ರಾಣಿನಾಂ ಚ' ಎಂಬುದು ಮ॥ ಮೈ॥ ಗಳಲ್ಲಿಲ್ಲ. ಶಿ॥ ಪಾಠದಲ್ಲಿ 'ಮಾಂ ಭೂತಾದಿಮ್' ಎಂದಿದೆ.

2. ಹಿಂದಿನ ಶ್ಲೋಕದಲ್ಲಿ ಹೇಳಿರುವ ಆಸುರಪ್ರಕೃತಿಯನ್ನೂ ಇಲ್ಲಿ ಹೇಳಿರುವ ದೈವಪ್ರಕೃತಿಯನ್ನೂ ಹದಿನಾರನೆಯ ಅಧ್ಯಾಯದಲ್ಲಿ ವಿಸ್ತರಿಸಿದೆ.

ತ್ತಲೂ ದೃಢವ್ರತರಾಗಿ, ನನ್ನನ್ನು ಭಕ್ತಿಯಿಂದ ನಮಸ್ಕರಿಸುತ್ತಲೂ ನಿತ್ಯ ಯುಕ್ತರಾಗಿ ಉಪಾಸನೆಮಾಡುತ್ತಾರೆ.

(ಭಾಷ್ಯ)

೨೪. ಕಥಮ್ ? ಸತತಂ ಸರ್ವದಾ ಭಗವನ್ತಂ ಬ್ರಹ್ಮಸ್ವರೂಪಂ ಮಾಂ ಕೀರ್ತಯನ್ತಃ ಯತನ್ತಶ್ಚ ಇನ್ದ್ರಿಯೋಪಸಂಹಾರಶಮದಮದಯಾಹಿಂಸಾದಿ ಲಕ್ಷಣೈಃ [1] ಧರ್ಮೈಃ ಪ್ರಯತನ್ತಶ್ಚ । ದೃಢವ್ರತಾಃ ದೃಢಂ ಸ್ಥಿರಮ್ ಅಚಾಲ್ಯಮ್ ವ್ರತಂ ಯೇಷಾಂ ತೇ ದೃಢವ್ರತಾಃ । ನಮಸ್ಯನ್ತಶ್ಚ ಮಾಂ ಹೃದಯೇಶಯಮ್ [2] ಆತ್ಮಾನಂ ಭಕ್ತ್ಯಾ । ನಿತ್ಯಯುಕ್ತಾಃ ಸನ್ತಃ ಉಪಾಸತೇ ಸೇವನ್ತೇ ॥

(ಭಾಷ್ಯಾರ್ಥ)

ಹೇಗೆಂದರೆ, ಯಾವಾಗಲೂ ಸರ್ವಕಾಲದಲ್ಲಿಯೂ ಭಗವಂತನೂ ಬ್ರಹ್ಮ ಸ್ವರೂಪನೂ ಆಗಿರುವ ನನ್ನನ್ನು ಕೀರ್ತನಮಾಡುತ್ತಲೂ ; ಯತ್ನಮಾಡುತ್ತಲೂ ಇಂದ್ರಿಯಗಳನ್ನು ಹಿಂಜಗ್ಗುವದು, ಶಮ, ದಯೆ, ಅಹಿಂಸೆ-ಮುಂತಾದ ರೂಪದ ಧರ್ಮಗಳಿಂದ ಪ್ರಯತ್ನಿಸುತ್ತಲೂ ದೃಢವ್ರತರಾಗಿ, ದೃಢವಾದ ನಿಂತಿರುವ ಅಲು ಗಾಡದ ವ್ರತವು ಯಾರಿಗಿರುವದೋ ಅಂಥ ದೃಢವ್ರತರಾಗಿಯೂ ; ಮತ್ತು (ತಮ್ಮ) ಹೃದಯದಲ್ಲಿರುವ ಆತ್ಮನಾದ ನನ್ನನ್ನು ಭಕ್ತಿಯಿಂದ ನಮಸ್ಕರಿಸುತ್ತಲೂ-ನಿತ್ಯ ಯುಕ್ತರಾಗಿ [3] ಉಪಾಸನೆಮಾಡುತ್ತಾರೆ, ಸೇವಿಸುತ್ತಾರೆ.

(ಭಾಷ್ಯ)

೨೫. ತೇ ಕೇನ ಕೇನ ಪ್ರಕಾರೇಣ ಉಪಾಸತೇ ಇತಿ ? ಉಚ್ಯತೇ —

(ಭಾಷ್ಯಾರ್ಥ)

ಅವರು ಯಾವ ಯಾವ ಪ್ರಕಾರದಿಂದ ಉಪಾಸನೆಮಾಡುತ್ತಾರೆ ? ಎಂದರೆ (ಭಗವಂತನು) ಹೇಳುತ್ತಾನೆ :—

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫ ॥**

---

1. ‘ ಇನ್ದ್ರಿಯೋಪಸಂಹಾರೈಃ ಶಮದಮದಯಾಹಿಂಸಾದಿಧರ್ಮೈಃ ’ ಮ॥ ಮೈ॥
2. ‘ ಹೃದಯೇಶಯಾನಮ್ ’ ಮ॥
3. ಪರಮಾತ್ಮನಲ್ಲಿಯೇ ನೆಟ್ಟ ಚಿತ್ತವುಳ್ಳವರಾಗಿ.

೧೫. ಕೆಲವರು ಜ್ಞಾನಯಜ್ಞದಿಂದಲೂ ನನ್ನನ್ನು ಪೂಜಿಸುತ್ತಾ ಉಪಾಸನೆಮಾಡುತ್ತಾರೆ. (ಕೆಲವರು) ಏಕತ್ವದಿಂದ, (ಕೆಲವರು) ಪೃಥಕ್ತ್ವದಿಂದಲೂ (ಇನ್ನು ಕೆಲವರು) ವಿಶ್ವತೋಮುಖನೆಂದೂ ಬಹುಪ್ರಕಾರವಾಗಿ ಉಪಾಸನೆಮಾಡುತ್ತಾರೆ.

(ಭಾಷ್ಯ)

೨೬. ಜ್ಞಾನಯಜ್ಞೇನ ಜ್ಞಾನಮೇವ ಭಗವದ್ವಿಷಯಂ ಯಜ್ಞಃ ತೇನ ಜ್ಞಾನಯಜ್ಞೇನ ಯಜನ್ತಃ ಪೂಜಯನ್ತಃ ಮಾಮ್ ಈಶ್ವರಂ ಚಾಪಿ ಅನ್ಯೇ ಅನ್ಯಾಮ್ ಉಪಾಸನಾಂ ಪರಿತ್ಯಜ್ಯ ಉಪಾಸತೇ । ತಚ್ಚ ಜ್ಞಾನಮ್ ಏಕತ್ವೇನ ‘ ಏಕಮೇವ ಪರಂ ಬ್ರಹ್ಮ ’ ಇತಿ ಪರಮಾರ್ಥದರ್ಶನೇನ ಯಜನ್ತಃ ಉಪಾಸತೇ । ಕೇಚಿತ್ತು ಪೃಥಕ್ತ್ವೇನ ಆದಿತ್ಯಚನ್ದ್ರಾದಿಭೇದೇನ ಸ ಏವ ಭಗವಾನ್ ವಿಷ್ಣುಃ ಅವಸ್ಥಿತಃ ಇತಿ ಉಪಾಸತೇ । ಕೇಚಿತ್ ಬಹುಧಾ ಅವಸ್ಥಿತಃ ಸ ಏವ ಭಗವಾನ್ ಸರ್ವತೋಮುಖಃ ವಿಶ್ವರೂಪಃ ಇತಿ ತಂ ವಿಶ್ವರೂಪಂ ಸರ್ವತೋಮುಖಂ [1](?) ಬಹುಧಾ ಬಹುಪ್ರಕಾರೇಣ ಉಪಾಸತೇ ॥

(ಭಾಷ್ಯಾರ್ಥ)

ಜ್ಞಾನಯಜ್ಞದಿಂದ-ಭಗವಂತನ ವಿಷಯವಾದ ಜ್ಞಾನವೇ ಯಜ್ಞವು; ಆ ಜ್ಞಾನಯಜ್ಞದಿಂದ–ಯಾಗಮಾಡುತ್ತಾ ಎಂದರೆ ಪೂಜಿಸುತ್ತಾ ಈಶ್ವರನಾದ ನನ್ನನ್ನು ಕೆಲವರು ಮಿಕ್ಕ ಉಪಾಸನೆಯನ್ನು ಬಿಟ್ಟು [1] ಉಪಾಸನೆಮಾಡುತ್ತಾರೆ. ಆ ಜ್ಞಾನವೆಂಬುದು ಏಕತ್ವದಿಂದ, ಪರಬ್ರಹ್ಮವು ಒಂದೇ ಎಂಬ ಪರಮಾರ್ಥದರ್ಶನದಿಂದ (ಅದರಿಂದ) ಉಪಾಸನೆಮಾಡುತ್ತಾರೆ [2]. ಆದರೆ ಇನ್ನು ಕೆಲವರು **ಪೃಥಕ್ತ್ವ**ದಿಂದ ಎಂದರೆ **ಆದಿತ್ಯ, ಚಂದ್ರ-ಮುಂತಾದ (ರೂಪ) ಭೇದದಿಂದ** ಆ ಭಗ

1. ಇಲ್ಲಿ ವಿಶ್ವತೋಮುಖಮ್ ಎಂಬ ಮೂಲದ ಮಾತು ಭಾಷ್ಯದಲ್ಲಿ ಬಿಟ್ಟಿದೆ; ‘ ಸರ್ವತೋಮುಖಃ ವಿಶ್ವತೋಮುಖಃ ’ ಇತಿ ಮ||, ‘ ಸರ್ವತೋಮುಖಃ ವಿಶ್ವರೂಪಃ ’ ಇತಿ ವಾ|| ಎಂಬ ಪಾಠಾಂತರಗಳೂ ಇವೆ. ‘ ತಂ ವಿಶ್ವತೋಮುಖಂ ಸರ್ವತೋಮುಖಮ್ ’ ಎಂದಿದ್ದರೆ ಸರಿಯಾಗಿರುತ್ತಿತ್ತು.

2. ಜ್ಞಾನದಲ್ಲಿಯೇ ಮಿಕ್ಕ ಉಪಾಸನೆಗಳ ಫಲವೆಲ್ಲವೂ ಅಡಕವಾಗಿರುತ್ತದೆ.–ಎಂದು ಭಾವ.

**ವಂತನಾದ ವಿಷ್ಣುವೇ ಇರುವನು**[1] ಎಂದು ಉಪಾಸನೆಮಾಡುತ್ತಿರುವರು. ಮತ್ತೆ ಕೆಲವರು ಸರ್ವತೋಮುಖನಾದ ಆ ಭಗವಂತನಾದ ವಿಶ್ವರೂಪನೇ ಬಹು ಪ್ರಕಾರವಾಗಿ ಇದ್ದುಕೊಂಡಿರುತ್ತಾನೆ ಎಂದು ಆ ವಿಶ್ವತೋಮುಖನಾದ ಸರ್ವತೋಮುಖನನ್ನು ಬಹುಪ್ರಕಾರವಾಗಿ ಉಪಾಸನೆಮಾಡುತ್ತಾರೆ.[2]

## ಭಗವಂತನ ವಿಭೂತಿಗಳು

(ಭಾಷ್ಯ)

೨೭. ಯದಿ ಬಹುಭಿಃ ಪ್ರಕಾರೈಃ ಉಪಾಸತೇ, ಕಥಂ ತ್ವಾಮೇವ ಉಪಾಸತೇ ಇತಿ ? ಅತ ಆಹ—

(ಭಾಷ್ಯಾರ್ಥ)

ಬಹು ಪ್ರಕಾರಗಳಿಂದ ಉಪಾಸನೆಮಾಡುತ್ತಾರಾದರೆ ನಿನ್ನನ್ನೇ ಉಪಾಸನೆ ಮಾಡುವರೆಂಬುದು ಹೇಗೆ? ಎಂದರೆ ಅದಕ್ಕೆ (ಭಗವಂತನು) ಹೇಳುತ್ತಾನೆ:—

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮನ್ತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬ ॥**

೧೬. ನಾನೇ ಕ್ರತು, ನಾನೇ ಯಜ್ಞ, ನಾನೇ ಸ್ವಧಾ, ನಾನೇ ಔಷಧವು, ನಾನೇ ಮಂತ್ರವು, ನಾನೇ ಆಜ್ಯವು, ನಾನೇ ಅಗ್ನಿಯು, ನಾನೇ ಹುತವು.

(ಭಾಷ್ಯ)

೨೮. ಅಹಂ ಕ್ರತುಃ ಶ್ರೌತಕರ್ಮಭೇದಃ ಅಹಮೇವ । ಅಹಂ ಯಜ್ಞಃ

1. ಬೃ. ೨-೧-೨ ರಿಂದ ೧೩ ರ ವರೆಗಿನ ಮಂತ್ರಗಳಲ್ಲಿ ಹೇಳಿರುವ ಉಪಾಸನೆಗಳನ್ನು ನೋಡಿರಿ. ಅವು ಅಪರಬ್ರಹ್ಮದ ಉಪಾಸನೆಗಳಾದರೂ ಪರಬ್ರಹ್ಮವೇ ಉಪಾಧಿವಶದಿಂದ ಅಪರವಾಗಿರುವದರಿಂದ ಜ್ಞಾನಯಜ್ಞಪ್ರಕಾರಗಳಲ್ಲಿ ಅವನ್ನೂ ಸೇರಿಸಿದೆ.

2. ಪರಮಾತ್ಮನೇ ಪರಮಾರ್ಥವೆಂಬ ಜ್ಞಾನವು ಏಕತ್ವೋಪಾಸನೆ, ಸೂರ್ಯಚಂದ್ರಾದಿಗಳ ರೂಪದಿಂದ ತೋರುವವನು ಪರಮಾತ್ಮನೇ ಎಂದು ಉಪಾಸನೆಮಾಡುವವು ಪೃಥಕ್ತ್ವೋಪಾಸನೆ. ಜಗತ್ತೆಲ್ಲವೂ ಪರಮಾತ್ಮನೇ, ಎತ್ತನೋಡಿದರೂ ಪರಮಾತ್ಮನೇ, ಎಂಬುದು ವಿಶ್ವರೂಪೋಪಾಸನೆ. ಇಲ್ಲಿ ಅದ್ವೈತವನ್ನೂ ದ್ವೈತವನ್ನೂ ಹೇಳಿದೆ ಎಂದು ವಿರುದ್ಧಭಾವನೆಯನ್ನು ಮಾಡಿಕೊಳ್ಳಬಾರದು.

ಸ್ಮಾರ್ತಃ । ಕಿಂಚ ಸ್ವಧಾ ಅನ್ನಮ್ ಅಹಮ್ । ಪಿತೃಭ್ಯೋ ಯದ್ ದೀಯತೇ । ಅಹಮ್ ಔಷಧಮ್ । ಸರ್ವಪ್ರಾಣಿಭಿಃ ಯತ್ ಅದ್ಯತೇ ತತ್ ಔಷಧಶಬ್ದವಾಚ್ಯಂ ವ್ರೀಹಿಯವಾದಿಸಾಧಾರಣಮ್ । ಅಥವಾ ಸ್ವಧಾ ಇತಿ ಸರ್ವಪ್ರಾಣಿಸಾಧಾರಣಮ್ ಅನ್ನಮ್, ಔಷಧಮ್ ಇತಿ ವ್ಯಾಧ್ಯುಪಶಮಾರ್ಥಂ ಭೇಷಜಮ್ । ಮನ್ತ್ರಃ ಅಹಮ್ ಯೇನ ಪಿತೃಭ್ಯಃ ದೇವತಾಭ್ಯಶ್ಚ ಹವಿಃ ದೀಯತೇ । ಅಹಮೇವ ಆಜ್ಯಂ ಹವಿಶ್ಚ । ಅಹಮ್ ಅಗ್ನಿಃ । ಯಸ್ಮಿನ್ ಹೂಯತೇ ಹವಿಃ ಸೋಽಗ್ನಿಃ ಅಹಮ್ । ಅಹಂ ಹುತಂ ಹವನಕರ್ಮ ಚ ॥

(ಭಾಷ್ಯಾರ್ಥ)

ನಾನೇ ಕ್ರತು, ಶ್ರೌತಕರ್ಮವಿಶೇಷವು ನಾನೇ ; ನಾನೇ ಯಜ್ಞವು, ಸ್ಮಾರ್ತ (ಯಜ್ಞವು)[1]. ಮತ್ತು ನಾನೇ ಪಿತೃಗಳಿಗೆ ಕೊಡುವರಲ್ಲ, (ಅ) ಸ್ವಧಾ ಎಂಬ ಅನ್ನವು. ನಾನೇ ಔಷಧವು, ಪ್ರಾಣಿಗಳು ತಿನ್ನುವ ಬತ್ತ, ಜವೆ ಮುಂತಾದ (ಪ್ರಾಣಿಗಳಿಗೆ) ಸಾಧಾರಣವಾಗಿರುವ ಆಹಾರವು. ಅಥವಾ ಸ್ವಧಾ ಎಂದರೆ ಪ್ರಾಣಿಗಳಿಗೆಲ್ಲಕ್ಕೂ ಸಮಾನವಾಗಿರುವ ಅನ್ನವು ; ಔಷಧವೆಂದರೆ ರೋಗವನ್ನು ಶಾಂತಿಗೊಳಿಸುವ (ವೈದ್ಯರ) ದ್ರವ್ಯವು. ನಾನೇ ಪಿತೃಗಳಿಗೂ ದೇವತೆಗಳಿಗೂ ಹವಿಸ್ಸನ್ನು ಕೊಡುವದಕ್ಕೆ ಉಪಯೋಗಿಸುವ ಮಂತ್ರವು. ನಾನೇ ಆಜ್ಯವು, ಮತ್ತು ಹವಿಯು. ನಾನೇ ಅಗ್ನಿಯು; ಯಾವದರಲ್ಲಿ ಹವಿಸ್ಸನ್ನು ಹೋಮಮಾಡುವರೋ ಆ ಅಗ್ನಿಯು ನಾನೇ. ನಾನೇ ಹುತವು, ಎಂದರೆ ಹೋಮಕರ್ಮವು.[2]

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ॥ ೧೭ ॥**

೧೭. ನಾನು ಈ ಜಗತ್ತಿಗೆ ತಂದೆ, ತಾಯಿ, ಧಾತನು, ಅಜ್ಜನು, ವೇದ್ಯವು. ಪವಿತ್ರವು, ಓಂಕಾರವು, ಋಕ್ಕು, ಸಾಮ, ಮತ್ತು ಯಜುಸ್ಸೂ (ನಾನೇ).

---

1. ಕ್ರತು, ಯಜ್ಞವೆಂಬ ಪದಗಳಿಗೆ ಪುನರುಕ್ತಿಯುಂಟಾಗದೆ ಇರಲೆಂದು ಈ ಅರ್ಥಗಳನ್ನು ಹೇಳಿದೆ. ಶ್ರೌತಕರ್ಮವೆಂದರೆ ಅಗ್ನಿಷ್ಟೋಮಾದಿಗಳು, ಸ್ಮಾರ್ತವೆಂದರೆ ವೈಶ್ವದೇವಾದಿ ಮಹಾಯಜ್ಞಗಳು.

2. ಯಜ್ಞದಿಂದಲೇ ಜಗತ್ತೆಲ್ಲವೂ ಆಗಿರುವದೆಂದು ಶ್ರುತಿಸ್ಮೃತಿಗಳಲ್ಲಿದೆ; ಭಗವಂತನೇ ಯಜ್ಞದ ಸಾಮಗ್ರಿ ಎಂದು ಇಲ್ಲಿ ಉಪಾಸನೆಯನ್ನು ಹೇಳಿದೆ.

(ಭಾಷ್ಯ)

೨೯. ಪಿತಾ ಜನಯಿತಾ ಅಹಮ್ ಅಸ್ಯ ಜಗತಃ । ಮಾತಾ ಜನಯಿತ್ರೀ । ಧಾತಾ ಕರ್ಮಫಲಸ್ಯ ಪ್ರಾಣಿಭ್ಯೋ ವಿಧಾತಾ । ಪಿತಾಮಹಃ ಪಿತುಃ ಪಿತಾ । ವೇದ್ಯಂ ವೇದಿತವ್ಯಂ ಪವಿತ್ರಂ ಪಾವನಮ್, ಓಂಕಾರಃ, ಋಕ್, ಸಾಮ, ಯಜು ರೇವ ಚ ॥

(ಭಾಷ್ಯಾರ್ಥ)

ನಾನು ಈ ಜಗತ್ತಿಗೆ ತಂದೆಯು (ಇದನ್ನು) ಉಂಟುಮಾಡುವವನು. ತಾಯಿ, ಹಡೆದವನು[1], ಧಾತನು, ಎಂದರೆ ಪ್ರಾಣಿಗಳಿಗೆ ಕರ್ಮದ ಫಲವನ್ನು ವಿಂಗಡಿಸಿ ಕೊಡುವವನು. ಅಜ್ಜನು ತಂದೆಯ ತಂದೆ[2] ವೇದ್ಯವು ಎಂದರೆ ತಿಳಿಯಬೇಕಾದ (ಪರಮಾರ್ಥವು). ಪವಿತ್ರವು ಎಂದರೆ ಪಾವನವಾದ (ಯಜ್ಞಾದಿಗಳು) ಓಂಕಾರವು, ಋಕ್ಕು, ಸಾಮ, ಮತ್ತು ಯಜುಸ್ಸು[3] (ಇವುಗಳೂ ನಾನೇ).

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ ೧೮ ॥**

೧೮. ಗತಿಯು, ಭರ್ತನು, ಪ್ರಭು, ಸಾಕ್ಷಿ, ನಿವಾಸವು, ಶರಣು, ಸುಹೃತ್ತು. ಪ್ರಭವವು, ಪ್ರಲಯವು, ಸ್ಥಾನವು, ನಿಧಾನವು, ಅವ್ಯಯವಾದ ಬೀಜವು.

(ಭಾಷ್ಯ)

೩೦. ಗತಿಃ ಕರ್ಮಫಲಮ್ । ಭರ್ತಾ ಪೋಷ್ಟಾ[4] । ಪ್ರಭುಃ ಸ್ವಾಮೀ । ಸಾಕ್ಷೀ ಪ್ರಾಣಿನಾಂ ಕೃತ್ಯಾಕೃತ್ಯಸ್ಯ । ನಿವಾಸಃ ಯಸ್ಮಿನ್ ಪ್ರಾಣಿನಃ ನಿವಸನ್ತಿ । ಶರಣಮ್ ಆರ್ತಾನಾಂ ಪ್ರಪನ್ನಾನಾಮ್ ಆರ್ತಿಹರಃ । ಸುಹೃತ್ ಪ್ರತ್ಯುಪಕಾರಾನಪೇಕ್ಷಃ ಸನ್ ಉಪಕಾರೀ । ಪ್ರಭವಃ ಉತ್ಪತ್ತಿಃ ಜಗತಃ । ಪ್ರಲಯಃ ಪ್ರಲೀಯನ್ತೇ ಅಸ್ಮಿನ್ ಇತಿ । ತಥಾ ಸ್ಥಾನಮ್ ' ತಿಷ್ಠತಿ ಅಸ್ಮಿನ್ ಇತಿ । ನಿಧಾನಂ ನಿಕ್ಷೇಪಃ,

---

1. ತಂದೆ ಎಂದರೆ ನಿಮಿತ್ತಕಾರಣ, ತಾಯಿ ಎಂದರೆ ಉಪಾದಾನಕಾರಣ.
2. ಮೂಲಕಾರಣ, ಕಾರಣವನ್ನು ಬಯಸದ ಕಾರಣ-ಎಂದರ್ಥ.
3. ಋಗಾದಿ ರೂಪದಲ್ಲಿರುವ ವೇದವು.
4. 'ಪೋಷಕಃ' ಮ॥

ಕಾಲಾನ್ತರೋಪಭೋಗ್ಯಂ ಪ್ರಾಣಿನಾಮ್ । ಬೀಜಂ ಪ್ರರೋಹಕಾರಣಂ ಪ್ರರೋಹಧರ್ಮಿಣಾಮ್ ಅವ್ಯಯಮ್ । ಯಾವತ್ ಸಂಸಾರಭಾವಿ ಇತಿ ಅವ್ಯಯಮ್ । ನ ಹಿ ಅಬೀಜಂ ಕಿಂಚಿತ್ ಪ್ರರೋಹತಿ । ನಿತ್ಯಂ ಚ ಪ್ರರೋಹದರ್ಶನಾತ್ ಬೀಜಸನ್ತತಿಃ ನ ವ್ಯೇತಿ ಇತಿ ಗಮ್ಯತೇ ॥

(ಭಾಷ್ಯಾರ್ಥ)

ಗತಿ ಎಂದರೆ ಕರ್ಮದ ಫಲವು. ಭರ್ತನು ಎಂದರೆ ಪೋಷಣೆಮಾಡುವವನು. ಪ್ರಭು ಎಂದರೆ ಒಡೆಯನು. ಸಾಕ್ಷಿಯು ಎಂದರೆ ಪ್ರಾಣಿಗಳು ಮಾಡುವ ಮತ್ತು ಬಿಡುವ ಕರ್ಮಗಳನ್ನು ನೋಡುತ್ತಿರುವವನು. ನಿವಾಸವು, ಎಂದರೆ ಪ್ರಾಣಿಗಳು ಎಲ್ಲಿ ವಾಸಮಾಡುತ್ತಿರುವವೋ (ಆ ಆಸರೆಯು). ಶರಣು ಎಂದರೆ (ಸಂಕಟದಿಂದ) ಬಳಿಗೆ ಬಂದವರಿಗೆ ಸಂಕಟವನ್ನು ಪರಿಹರಿಸುವವನು. ಸುಹೃತ್ತು (ಯಾವ) ಪ್ರತ್ಯುಪಕಾರವನ್ನೂ ಬಯಸದೆ ಉಪಕಾರವನ್ನು ಮಾಡುವವನು. ಪ್ರಭವವು ಎಂದರೆ ಜಗತ್ತಿನ ಉತ್ಪತ್ತಿ (ಕಾರಣವು). ಪ್ರಲಯವು ಎಂದರೆ ಯಾವದರಲ್ಲಿ ಲಯವಾಗುವವೋ (ಆಸ್ಥಾನವು). ಸ್ಥಾನವು, ಯಾವದರಲ್ಲಿ ಜಗತ್ತು ನಿಂತಿರುವದೋ ಆ (ಆಸರೆ). ನಿಧಾನವು ಎಂದರೆ ಬೇರೊಂದು ಕಾಲದಲ್ಲಿ ಪ್ರಾಣಿಗಳು ಅನುಭವಿಸಬೇಕಾಗಿರುವ ನಿಕ್ಷೇಪವು.[1] ಬೀಜವು, ಹುಟ್ಟುವ ಸ್ವಭಾವವುಳ್ಳ (ವಸ್ತು)ಗಳು ಮೊಳಕೆಯಾಗುವದಕ್ಕೆ ಕಾರಣವು; ಅದು ಅವ್ಯಯವಾದದ್ದು, ಏಕೆಂದರೆ ಸಂಸಾರವಿರುವವರೆಗೂ ಮತ್ತೆ ಮತ್ತೆ ಹುಟ್ಟುವದಕ್ಕೆ (ಕಾರಣವಾದ ಬೀಜವು) ಇದ್ದೇ ಇರುವದರಿಂದ ಅದು ಅವ್ಯಯವು. ಬೀಜವಿಲ್ಲದೆ ಯಾವದೂ ಮೊಳಕೆಯಾಗದು ; ಯಾವಾಗಲೂ ಹುಟ್ಟುತ್ತಲೇ ಇರುವದರಿಂದ ಈ ಬೀಜಸಂತತಿಯು ನಾಶವಾಗುವ ಹಾಗಿಲ್ಲವೆಂದೂ ತಿಳಿಯಬೇಕಾಗಿದೆ.[2]

ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥

೧೯. ಅರ್ಜುನನೆ, ನಾನು ತಪಿಸುವೆನು ; ನಾನು ಮಳೆಯನ್ನು

---

1. ಪರಮಾತ್ಮನ ರೂಪದಲ್ಲಿದ್ದುಕೊಂಡು ಕಾಲಾಂತರದಲ್ಲಿ ಭೋಗಿಸುವದಕ್ಕೆ ಬರುವ ಕರ್ಮಫಲವು.

1. ಕಾರ್ಯಕಾರಣಭಾವವು ಅಜ್ಞಾನಕಲ್ಪಿತವಾಗಿರುವದರಿಂದ ಅಜ್ಞಾನವು ಹೋಗುವವರೆಗೆ ನಾಶವಾಗುವ ಹಾಗಿಲ್ಲ.

(ಭಾಷ್ಯ)

೩೧ ಕಿಂಚ ತಪಾಮ್ಯಹಮ್ ಆದಿತ್ಯೋ ಭೂತ್ವಾ ಕೈಶ್ಚಿತ್ ರಶ್ಮಿಭಿಃ ಉಲ್ಬಣೈಃ [1] । ಅಹಂ ವರ್ಷಂ ಕೈಶ್ಚಿತ್ ರಶ್ಮಿಭಿಃ ಉತ್ಸೃಜಾಮಿ ಉತ್ಸೃಜ್ಯ ಪುನಃ ನಿಗೃಹ್ಣಾಮಿ ಕೈಶ್ಚಿತ್ ರಶ್ಮಿಭಿಃ ಅಷ್ಟಭಿಃ ಮಾಸೈಃ । ಪುನರುತ್ಸೃಜಾಮಿ [2] ಪ್ರಾವೃಷಿ । ಅಮೃತಂ ಚೈವ ದೇವಾನಾಂ ಮೃತ್ಯುಶ್ಚ ಮರ್ತ್ಯಾನಾಮ್ । ಸತ್ ಯಸ್ಯ ಯತ್ ಸಂಬನ್ಧಿತಯಾ ವಿದ್ಯಮಾನಂ ತತ್ । ತದ್ವಿಪರೀತಮ್ ಅಸಚ್ಚೈವ [3] ಅಹಮ್ ಅರ್ಜುನ । ನ ಪುನಃ ಅತ್ಯನ್ತಮೇವ ಅಸತ್ ಭಗವಾನ್ ಸ್ವಯಮ್ [4] । ಕಾರ್ಯಕಾರಣೇ ವಾ ಸದಸತೀ ॥

(ಭಾಷ್ಯಾರ್ಥ)

ನಾನು ಸೂರ್ಯನಾಗಿ ಕೆಲವು ಪ್ರಚಂಡವಾದ ಕಿರಣಗಳಿಂದ ಸುಡುತ್ತಿರುವೆನು. ನಾನು ಕೆಲವು ಕಿರಣಗಳಿಂದ ಮಳೆಯನ್ನು ಬಿಡುವೆನು. ಹೀಗೆ ಬಿಟ್ಟಮೇಲೆ ಮತ್ತೆ ಎಂಟು ತಿಂಗಳವರೆಗೆ ಬೇರೆಯ ಕಿರಣಗಳಿಂದ ಸೆಳೆದುಕೊಳ್ಳುವೆನು, ಮತ್ತೆ ಮಳೆಗಾಲದಲ್ಲಿ ಬಿಡುವೆನು. ದೇವತೆಗಳಿಗೆ ಅಮೃತವೂ ಮರ್ತ್ಯರಿಗೆ ಮೃತ್ಯುವೂ ನಾನೇ. ಯಾವ ವಸ್ತುವಿನ ಸಂಬಂಧದಿಂದ ಯಾವದು ಇರುವದೋ ಅದು ಸತ್ತು; ಅದಕ್ಕೆ ವಿರುದ್ಧವಾದದ್ದು ಅಸತ್ತು. [5] ಇಷ್ಟೇ ಹೊರತು ಭಗವಂತನು ತಾನೇ ಅತ್ಯಂತ ಅಸತ್ತಾಗಿಯೇ ಇರುವನೆಂದು ತಿಳಿಯಬಾರದು. ಅಥವಾ ಕಾರ್ಯಕಾರಣಗಳನ್ನೇ ಸತ್ತು, ಅಸತ್ತು–ಎಂದು ಹೇಳಿದೆ (ಎಂದಾದರೂ ಅರ್ಥಮಾಡಬಹುದು). [6]

---

1. ಮ|| ವ್ಯಾ|| ಗಳಲ್ಲಿ ಈ ಮಾತಿಲ್ಲ.

2. ಇದರ ಮುಂದೆ ' ಚತುರೋ ಮಾಸಾನ್ ' ಎಂದು ಹೆಚ್ಚಾಗಿ ಮ||

3. ' ಯತ್ ' ಎಂಬ ಮಾತಿಲ್ಲದ ಸಿ|| ' ಸದಸದ್....ಅಸದೇವ ' ಎಂಬ ಮ|| ಪಾಠಗಳಿಗಿಂತ ಈ ವ್ಯಾ|| ವಾ|| ಪಾಠವೇ ಮೇಲು.

4. ಈ ಮಾತು ಮ|| ವ್ಯಾ|| ಗಳಲ್ಲಿಲ್ಲ.

5. ಯಾವದನ್ನು ಅವಲಂಬಿಸಿಯೇ ಮತ್ತೊಂದು ಇರಬೇಕಾಗಿದೆಯೋ ಆ ಅವಲಂಬನೆಯು ಸತ್ತು, ಯಾವದು ಮತ್ತೊಂದನ್ನು ಅವಲಂಬಿಸಿಯೇ ಇರಬೇಕೋ ಆ ಅವಲಂಬಿಸುವ ವಸ್ತು ಅಸತ್ತು–ಎಂದರ್ಥ.

6. ಕಾರ್ಯಪ್ರಪಂಚವು ಸತ್ತು, ಕಾರಣವಾಗಿರುವ ಅವ್ಯಾಕೃತವು ಅಸತ್ತು ಎಂದರ್ಥ. ತೈ. ಭಾ, ೨-೭ (ಭಾ. ಭಾ. ೧೮೨).

## ಅನ್ಯದೇವತೆಗಳನ್ನು ಪೂಜಿಸುವವರಿಗೆ ಅನಿತ್ಯಫಲ

(ಭಾಷ್ಯ)

೩೨. ಯೇ ಪೂರ್ವೋಕ್ತೈಃ ನಿವೃತ್ತಿಪ್ರಕಾರೈಃ[1] ಏಕತ್ವಪೃಥಕ್ತ್ವಾದಿ ವಿಜ್ಞಾನೈಃ ಯಜ್ಞೈಃ ಪೂಜಯನ್ತಃ ಉಪಾಸತೇ ಜ್ಞಾನವಿದಃ, ತೇ ಯಥಾವಿಜ್ಞಾನಂ ಮಾಮೇವ ಪ್ರಾಪ್ನುವನ್ತಿ । ಯೇ ಪುನರಜ್ಞಾಃ ಕಾಮಕಾಮಾಃ—

(ಭಾಷ್ಯಾರ್ಥ)

ಯಾರು ಹಿಂದೆ ಹೇಳಿರುವ ನಿವೃತ್ತಿ (ಮಾರ್ಗದ) ಪ್ರಕಾರಗಳಾದ ಏಕತ್ವ, ಪೃಥಕ್ತ್ವ-ಮುಂತಾದ ವಿಜ್ಞಾನಗಳೆಂಬ ಯಜ್ಞಗಳಿಂದ ನನ್ನನ್ನು ಪೂಜಿಸುತ್ತಾ ಉಪಾಸನೆಮಾಡುವರೋ ಆ ಜ್ಞಾನ (ಸ್ವರೂಪ)ವನ್ನು ಬಲ್ಲ (ಜನರು) ಅವರ ವಿಜ್ಞಾನಕ್ಕೆ ಅನುಗುಣವಾಗಿ ನನ್ನನ್ನೇ ಪಡೆಯುತ್ತಾರೆ.[2] ಆದರೆ ಯಾರು ಅಜ್ಞರಾಗಿ ಕಾಮಗಳನ್ನೇ ಬಯಸುತ್ತಿರುವರೋ (ಅವರು)—

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ ।**
**ತೇ ಪುಣ್ಯಮಾಸಾದ್ಯ ಸುರೇನ್ದ್ರಲೋಕ-**
**ಮಶ್ನನ್ತಿ ದಿವ್ಯಾನ್ ದಿವಿ ದೇವಭೋಗಾನ್ ॥೨೦॥**

೨೦. ತ್ರೈವಿದ್ಯರು ಸೋಮಪರಾಗಿ ಪೂತಪಾಪರಾಗಿ ಯಜ್ಞಗಳಿಂದ ಪೂಜಿಸಿ ಸ್ವರ್ಗತಿಯನ್ನು ಪ್ರಾರ್ಥಿಸುತ್ತಾರೆ. ಅವರು ಪುಣ್ಯವಾದ ಸುರೇಂದ್ರಲೋಕವನ್ನು ಹೊಂದಿ ಸ್ವರ್ಗದಲ್ಲಿ ದಿವ್ಯವಾದ ದೇವಭೋಗಗಳನ್ನು ಉಣ್ಣುವರು.

(ಭಾಷ್ಯ)

೩೩. ತ್ರೈವಿದ್ಯಾಃ ಋಗ್ಯಜುಃಸಾಮವಿದಃ ಮಾಂ ವಸ್ವಾದಿದೇವರೂಪಿಣಂ ಸೋಮಪಾಃ ಸೋಮಂ ಪಿಬನ್ತಿ ಇತಿ ಸೋಮಪಾಃ ತೇನೈವ ಸೋಮಪಾನೇನ

---

1. ' ಅನುವೃತ್ತಿಪ್ರಕಾರೈಃ ' ಶ॥ ಗು॥

2. ಏಕತ್ವೋಪಾಸಕರು ನನ್ನಲ್ಲಿ ಏಕತ್ವವನ್ನು ಪಡೆಯುತ್ತಾರೆ ; ಪೃಥಕ್ತ್ವದ್ಯುಪಾಸಕರು ಆಯಾ ಗುಣಗಳಿಂದ ಕೂಡಿದ ನನ್ನನ್ನು ಪಡೆಯುತ್ತಾರೆ-ಎಂದರ್ಥ.

ಪೂತಪಾಪಾಃ ಶುದ್ಧಕಿಲ್ಬಿಷಾಃ ಯಜ್ಞೈಃ ಅಗ್ನಿಷ್ಟೋಮಾದಿಭಿಃ ಇಷ್ಟ್ವಾ ಪೂಜಯಿತ್ವಾ ಸ್ವರ್ಗತಿಂ ಸ್ವರ್ಗಮನಂ[1] ಸ್ವರೇವ ಗತಿಃ ಸ್ವರ್ಗತಿಃ ತಾಂ ಪ್ರಾರ್ಥಯನ್ತೇ । ತೇ ಚ ಪುಣ್ಯಂ ಪುಣ್ಯಫಲಮ್ ಆಸಾದ್ಯ ಸಂಪ್ರಾಪ್ಯ ಸುರೇನ್ದ್ರಲೋಕಂ ಶತಕ್ರತೋಃ ಸ್ಥಾನಮ್ ಅಶ್ನನ್ತಿ ಭುಞ್ಜತೇ ದಿವ್ಯಾನ್ ದಿವಿ ಭವಾನ್ ಅಪ್ರಾಕೃತಾನ್ ದೇವ ಭೋಗಾನ್ ದೇವಾನಾಂ ಭೋಗಾನ್ ॥

(ಭಾಷ್ಯಾರ್ಥ)

ತ್ರೈವಿದ್ಯರು ಎಂದರೆ ಋಕ್ಕು, ಯಜುಸ್ಸು, ಸಾಮ–ಇವನ್ನು ಬಲ್ಲವರು ನನ್ನನ್ನು ವಸುಗಳೇ ಮುಂತಾದ ರೂಪದಲ್ಲಿರುವ[2] (ನನ್ನನ್ನು) ಸೋಮಪರಾಗಿ–ಸೋಮವನ್ನು ಪಾನಮಾಡುವವರಾದ್ದರಿಂದ ಸೋಮಪರು (ಅಂಥವರಾಗಿ)–ಅದೇ ಸೋಮಪಾನದಿಂದ ಪೂತಪಾಪರಾಗಿ ಎಂದರೆ ಪಾಪವನ್ನು (ನೀಗಿ) ಶುದ್ಧಿಮಾಡಿ ಕೊಂಡವರಾಗಿ ಯಜ್ಞಗಳಿಂದ ಎಂದರೆ ಅಗ್ನಿಷ್ಟೋಮಾದಿಗಳಿಂದ ಯಾಗಮಾಡಿ ಪೂಜಿಸಿ ಸ್ವರ್ಗತಿಯನ್ನು, ಸ್ವರ್ಗಮನವನ್ನು–ಸ್ವರ್ಲೋಕವೆಂಬ ಗತಿಯು ಸ್ವರ್ಗತಿಯು, ಅದನ್ನು–ಪ್ರಾರ್ಥಿಸುತ್ತಾರೆ. ಮತ್ತು ಅವರು ಪುಣ್ಯವಾದ ಪುಣ್ಯದ ಫಲವಾದ ಸುರೇಂದ್ರಲೋಕವನ್ನು ಶತಕ್ರತುವಿನ ಸ್ಥಾನವನ್ನು ಹೊಂದಿ ಪಡೆದುಕೊಂಡು ದಿವ್ಯವಾದ ಸ್ವರ್ಗದಲ್ಲಿ (ಮಾತ್ರ) ಇರುವ ಅಪ್ರಾಕೃತವಾದ ದೇವಭೋಗಗಳನ್ನು ದೇವತೆಗಳ ಭೋಗಗಳನ್ನು (ಸ್ವರ್ಗದಲ್ಲಿ)[3] ಉಣ್ಣುವರು, ಅನುಭವಿಸುತ್ತಾರೆ.

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭನ್ತೇ ॥ ೨೧ ॥**

---

1. 'ಸ್ವರ್ಗಗಮನಂ' ಎಂದು ವಿ॥ಗು॥ಪಾಠ; ಈ ಮಾತಿಲ್ಲದಿದ್ದರೂ ಸಾಗುತ್ತದೆ.

2. ವಸುಗಳು, ರುದ್ರರು, ಆದಿತ್ಯರು-ಮುಂತಾದ ರೂಪದಲ್ಲಿಯೂ ಪರಮಾತ್ಮನೇ ಇರುತ್ತಾನೆ; ಆದ್ದರಿಂದ ವಸ್ವಾದಿಗಳಿಗಾಗಿ ಯಾಗವನ್ನು ಮಾಡಿದವರೂ ಪರಮಾತ್ಮನನ್ನೇ ಪೂಜಿಸಿದಂತೆ.

3. ಅಪ್ರಾಕೃತಾನ್ ಆದಬಳಿಕ 'ದಿವಿ' ಎಂಬ ಮಾತು ಇರಬೇಕಾದದ್ದು ಭಾಷ್ಯದಲ್ಲಿ ಬಿಟ್ಟುಹೋಗಿದೆ.

೨೧. ಅವರು ವಿಶಾಲವಾದ ಆ ಸ್ವರ್ಗಲೋಕವನ್ನು ಭೋಗಿಸಿ ಪುಣ್ಯವು ಕ್ಷೀಣವಾಗಲು ಮರ್ತ್ಯಲೋಕವನ್ನು ಪ್ರವೇಶಿಸುವರು. ಹೀಗೆ ತ್ರಯೀಧರ್ಮವನ್ನು ಸೇರಿದ ಕಾಮಕಾಮರು ಗತಾಗತವನ್ನು ಪಡೆಯುತ್ತಾರೆ.

(ಭಾಷ್ಯ)

೩೪. ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ವಿಸ್ತೀರ್ಣಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಮ್ ಇಮಂ ವಿಶನ್ತಿ ಆವಿಶನ್ತಿ । ಏವಂ ಯಥೋಕ್ತೇನ ಪ್ರಕಾರೇಣ ತ್ರಯೀಧರ್ಮಂ ಕೇವಲಂ ವೈದಿಕಂ ಕರ್ಮ ಅನುಪ್ರಪನ್ನಾಃ ಗತಾಗತಂ ಗತಂ ಚ ಆಗತಂ ಚ ಗತಾಗತಂ ಗಮನಾಗಮನಂ ಕಾಮಕಾಮಾಃ ಕಾಮಾನ್ ಕಾಮಯನ್ತೇ ಇತಿ ಕಾಮಕಾಮಾಃ ಲಭನ್ತೇ ಗತಾಗತಮೇವ । ನ ತು ಸ್ವಾತನ್ತ್ರ್ಯಂ ಕ್ವಚಿತ್ ಲಭನ್ತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಅವರು ವಿಶಾಲವಾದ ಹರಡಿರುವ ಆ ಸ್ವರ್ಗಲೋಕವನ್ನು ಭೋಗಿಸಿ ಪುಣ್ಯವು ಕ್ಷೀಣವಾಗಲು ಈ ಮರ್ತ್ಯಲೋಕವನ್ನು ಪ್ರವೇಶಿಸುವರು, ಹೊಗುವರು. ಹೀಗೆ ಮೇಲೆ ಹೇಳಿದಂತೆ ತ್ರಯೀಧರ್ಮವನ್ನು ಬರಿಯ ವೈದಿಕ ಕರ್ಮವನ್ನು[1] ಸೇರಿದವರಾದ ಕಾಮಕಾಮರು ಕಾಮಗಳನ್ನೇ ಬಯಸುತ್ತಿರುವದರಿಂದ (ಅವರು) ಕಾಮಕಾಮರು ; (ಅವರು) ಗತಾಗತವನ್ನು (ಸ್ವರ್ಗಕ್ಕೆ) ಹೋಗುವದು, (ಈ ಲೋಕಕ್ಕೆ) ಮರಳಿ ಬರುವದು–ಎಂಬೀ ಗತಾಗತವನ್ನೇ ಪಡೆಯುತ್ತಾರೆಯೇ ಹೊರತು ಎಲ್ಲಿಯೂ ಅವರಿಗೆ ಸ್ವಾತಂತ್ರ್ಯವು ಸಿಕ್ಕುವದಿಲ್ಲ[2] ಎಂದರ್ಥ.

(ಭಾಷ್ಯ)

೩೫ ಯೇ ಪುನರ್ನಿಷ್ಕಾಮಾಃ ಸಮ್ಯಗ್ದರ್ಶಿನಃ—

(ಭಾಷ್ಯಾರ್ಥ)

ಆದರೆ ಯಾರು ಯಾವ ಬಯಕೆಯೂ ಇಲ್ಲದ ಸಮ್ಯಗ್ದರ್ಶನವುಳ್ಳವರೋ—

1. ಉಪಾಸನೆಯ ಸಮುಚ್ಚಯವಿಲ್ಲದ ಬರಿಯ ಕರ್ಮವನ್ನು.

2. ಪುಣ್ಯಕರ್ಮವನ್ನು ಮಾಡಿದರೆ ಒಲ್ಲೆನೆಂದರೂ ಸ್ವರ್ಗಲೋಕಕ್ಕೆ ಹೋಗಬೇಕಾಗುವದು, ಪುಣ್ಯವು ತೀರಿದರೆ ಇನ್ನಿಷ್ಟುಕಾಲ ಅಲ್ಲಿಯೇ ಇರಬೇಕೆಂದು ಇಚ್ಛಿಸಿದರೂ ಭೂಲೋಕಕ್ಕೆ ಬಂದುಬಿಡಬೇಕಾಗುವದು. ಸಕಾಮಕರ್ಮಿಗಳಿಗೆ ಎಲ್ಲಿಯೂ ಸ್ವಾತಂತ್ರ್ಯವಿಲ್ಲ. ಮುಂ. ಭಾ. ೧-೨-೭ (ಭಾ. ಭಾ. ೩೮); ಬೃ. ಭಾ. ೪-೪-೬ ; ಛಾ. ಭಾ. ೭-೨೫-೨.

**ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

೨೨. ಯಾವ ಜನರು ಅನನ್ಯರಾಗಿ ನನ್ನನ್ನು ಉಪಾಸನೆಮಾಡುತ್ತಲಿರುವರೋ ನಿತ್ಯಾಭಿಯುಕ್ತರಾದ ಅವರ ಯೋಗಕ್ಷೇಮವನ್ನು ನಾನು ವಹಿಸುವೆನು.

(ಭಾಷ್ಯ)

೩೬. ಅನನ್ಯಾಃ ಅಪೃಥಗ್ಭೂತಾಃ ಪರಂ ದೇವಂ ನಾರಾಯಣಂ ಮಾಮ್[1] ಆತ್ಮತ್ವೇನ ಗತಾಃ ಸನ್ತಃ ಚಿನ್ತಯನ್ತಃ ಮಾಂ ಯೇ ಜನಾಃ ಸಂನ್ಯಾಸಿನಃ ಪರ್ಯುಪಾಸತೇ ತೇಷಾಂ ಪರಮಾರ್ಥದರ್ಶಿನಾಂ ನಿತ್ಯಾಭಿಯುಕ್ತಾನಾಂ ಸತತಾಭಿಯೋಗಿನಾಂ ಯೋಗಕ್ಷೇಮಮ್–ಯೋಗಃ ಅಪ್ರಾಪ್ತಸ್ಯ ಪ್ರಾಪಣಮ್ ಕ್ಷೇಮಃ ತದ್ರಕ್ಷಣಮ್ । ತದುಭಯಮ್ ವಹಾಮಿ ಪ್ರಾಪಯಾಮಿ ಅಹಮ್ । "ಜ್ಞಾನೀ ತು ಆತ್ಮೈವ ಮೇ ಮತಮ್" (೭-೧೮), "ಸ ಚ ಮಮ ಪ್ರಿಯಃ" (೭-೧೭) ಇತಿ ಪೂರ್ವಮೇವ ಉಕ್ತತ್ವಾತ್[2] । ತಸ್ಮಾತ್ ತೇ ಮಮ ಆತ್ಮಭೂತಾಃ ಪ್ರಿಯಾಶ್ಚ ಇತಿ ॥

(ಭಾಷ್ಯಾರ್ಥ)

ಅನನ್ಯರಾಗಿ ಬೇರೆಯಾಗದವರಾಗಿ ಪರದೇವನಾದ **ನಾರಾಯಣನಾದ** ನನ್ನನ್ನು ಆತ್ಮನನ್ನಾಗಿ ಮಾಡಿಕೊಂಡವರಾಗಿ ಧ್ಯಾನಿಸುತ್ತಾ ನನ್ನನ್ನು ಯಾವ ಜನರು ಎಂದರೆ ಸಂನ್ಯಾಸಿಗಳು ಉಪಾಸನೆಮಾಡುತ್ತಲಿರುವರೋ ಪರಮಾರ್ಥದರ್ಶಿಗಳಾದ ಅವರ ಯೋಗಕ್ಷೇಮವನ್ನು–ಯೋಗವೆಂದರೆ ಪಡೆಯದೆ ಇದ್ದದ್ದನ್ನು ಪಡೆದುಕೊಳ್ಳುವದು, ಕ್ಷೇಮವೆಂದರೆ ಅದನ್ನು ಕಾಪಾಡಿಕೊಳ್ಳುವದು. ಆ ಎರಡನ್ನೂ–ವಹಿಸುವೆನು ಎಂದರೆ ಅವರಿಗೆ ಉಂಟುಮಾಡಿಕೊಡುವೆನು. "ಜ್ಞಾನಿಯಾದರೆ ನನ್ನ ಆತ್ಮನೇ ಎಂಬುದು ನನ್ನ ಮತವು" (೭-೧೮), "ಅವನೂ ನನಗೆ ಪ್ರಿಯನು" (೭-೧೭) ಎಂದು ಮೊದಲೇ ಹೇಳಿತ್ತಲ್ಲವೆ? ಆದ್ದರಿಂದ ಅವರು ನನಗೆ ಆತ್ಮನಾದವರೂ ಪ್ರಿಯರೂ ಆಗಿರುತ್ತಾರೆ.

---

1. ಇದು ಮು॥ ಪಾಠದಲ್ಲಿ ಮಾತ್ರ ಇದೆಯಾದರೂ ಇದ್ದರೆ ಒಳ್ಳೆಯದು.

2. ಇದು ಮು॥ ಪಾಠದಲ್ಲಿ ಮಾತ್ರಇದೆಯಾದರೂ 'ಯಸ್ಮಾತ್' ಎಂಬ ಪಾಠಕ್ಕಿಂತ ವಾಕ್ಯಕ್ಕೆ ಹೆಚ್ಚು ಹೊಂದುತ್ತದೆ. "ಉಕ್ತಂ ಯಸ್ಮಾತ್" ಎಂಬ ಪಾಠವಿದ್ದರೆ ಮತ್ತೂ ಚೆನ್ನಾಗಿತ್ತು.

(ಭಾಷ್ಯ)

೩೭. ನನು ಅನ್ಯೇಷಾಮಪಿ ಭಕ್ತಾನಾಂ ಯೋಗಕ್ಷೇಮಂ ವಹತ್ಯೇವ ಭಗವಾನ್ । ಸತ್ಯಮ್ ವಹತ್ಯೇವ । ಕಿಂ ತು ಅಯಂ ವಿಶೇಷಃ । ಅನ್ಯೇ ಯೇ ಭಕ್ತಾಃ ತೇ ಆತ್ಮಾರ್ಥಂ ಸ್ವಯಮಪಿ ಯೋಗಕ್ಷೇಮಮ್ ಈಹನ್ತೇ । ಅನನ್ಯದರ್ಶಿನಸ್ತು ನ ಆತ್ಮಾರ್ಥಂ[1] ಯೋಗಕ್ಷೇಮಮ್ ಈಹನ್ತೇ । ನ ಹಿ ತೇ ಜೀವಿತೇ ಮರಣೇ ವಾ ಆತ್ಮನೋ ಗೃದ್ಧಿಂ ಕುರ್ವನ್ತಿ। ಕೇವಲಮೇವ ಭಗವಚ್ಛರಣಾಸ್ತೇ। ಅತಃ ಭಗವಾನೇವ ತೇಷಾಂ ಯೋಗಕ್ಷೇಮಂ ವಹತಿ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ):—ಮಿಕ್ಕ ಭಕ್ತರ[2] ಯೋಗಕ್ಷೇಮವನ್ನೂ ಭಗವಂತನು ವಹಿಸಿಯೇ ವಹಿಸುತ್ತಾನಲ್ಲವೆ ?

(ಪರಿಹಾರ) :—ನಿಜ, ವಹಿಸಿಯೇ ವಹಿಸುತ್ತಾನೆ. ಆದರೆ ಇದೊಂದು ವಿಶೇಷವುಂಟು : ಮಿಕ್ಕ ಭಕ್ತರಿರುತ್ತಾರಲ್ಲ, ಅವರು ತಮಗಾಗಿ ತಾವೂ ಯೋಗಕ್ಷೇಮಕ್ಕೆ ಪ್ರಯತ್ನಿಸುತ್ತಿರುವರು. ಅನನ್ಯದರ್ಶಿಗಳಾದರೋ ತಮಗಾಗಿ ಯೋಗಕ್ಷೇಮವನ್ನು ಪಡೆಯುವದಕ್ಕೆ ಪ್ರಯತ್ನಿಸುತ್ತಿರುವದಿಲ್ಲ. ಅವರು "ಬದುಕಿರಬೇಕೆಂದಾಗಲಿ ಸಾಯಬೇಕೆಂದಾಗಲಿ ಇಚ್ಛೆಯನ್ನು ಮಾಡುವದೇ ಇಲ್ಲ[3]." ಭಗವಂತನೊಬ್ಬನನ್ನೇ ಅವರು ಶರಣುಹೊಕ್ಕಿರುತ್ತಾರೆ. ಆದ್ದರಿಂದ ಭಗವಂತನೇ ಅವರ ಯೋಗಕ್ಷೇಮವನ್ನು ವಹಿಸುತ್ತಾನೆ.

(ಭಾಷ್ಯ)

೩೮. ನನು ಅನ್ಯಾ ಅಪಿ ದೇವತಾಃ ತ್ವಮೇವ ಚೇತ್ ತದ್ಭಕ್ತಾಶ್ಚ ತ್ವಾಮೇವ ಯಜನ್ತೇ[4]। ಸತ್ಯಮೇವಮ್—

(ಭಾಷ್ಯಾರ್ಥ)

(ಆಕ್ಷೇಪ) :—ಮಿಕ್ಕ ದೇವತೆಗಳೂ ನೀನೇ ಆದರೆ ಅವರ ಭಕ್ತರೂ ನಿನ್ನನ್ನೇ ಪೂಜಿಸುತ್ತಾರೆಂದಾಯಿತಲ್ಲ !

1. 'ಸ್ವಾತ್ಮಾರ್ಥಮ್' ಮ॥
2. ಆರ್ತ, ಜಿಜ್ಞಾಸು, ಅರ್ಥಾರ್ಥಿ–ಮುಂತಾದವರ, ಅನನ್ಯದರ್ಶಿಗಳಲ್ಲದವರ.
3. ಇಲ್ಲಿ ಒಂದು ಶ್ರುತಿಯನ್ನು ಸೂಚಿಸಿದೆ. ಇದನ್ನು ಈಶಾವಾಸ್ಯದ ಎರಡನೆಯ ಮಂತ್ರದ ಭಾಷ್ಯದಲ್ಲಿಯೂ ಉದಾಹರಿಸಿದೆ. ಇದು ಯಾವ ಶ್ರುತಿಯೆಂಬುದು ತಿಳಿಯದು.
4. "ಭಜನ್ತೇ" ಮ॥ವ್ಯೆ॥ಗು॥ ಎಂಬ ಪಾಠಕ್ಕಿಂತ ಇದು ಮೇಲು.

(ಪರಿಹಾರ) :—ನಿಜ, ಹಾಗೆಯೇ ಸರಿ :—

**ಯೇಽಪ್ಯನ್ಯದೇವತಾಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ॥೨೩॥**

೨೩. ಕೌಂತೇಯನೆ, ಯಾರು ಮಿಕ್ಕ ದೇವತೆಗಳ ಭಕ್ತರಾಗಿ ಶ್ರದ್ಧೆಯಿಂದ ಕೂಡಿ ಪೂಜಿಸುತ್ತಿರುವರೋ ಅವರೂ ನನ್ನನ್ನೇ ಅವಿಧಿಪೂರ್ವಕವಾಗಿ ಪೂಜಿಸುತ್ತಿರುತ್ತಾರೆ.

(ಭಾಷ್ಯ)

೩೯. ಯೇಽಪಿ ಅನ್ಯದೇವತಾಭಕ್ತಾಃ ಅನ್ಯಾಸು ದೇವತಾಸು ಭಕ್ತಾಃ ಅನ್ಯದೇವತಾ ಭಕ್ತಾಃ ಸನ್ತಃ ಯಜನ್ತೇ ಪೂಜಯನ್ತಿ ಶ್ರದ್ಧಯಾ ಆಸ್ತಿಕಬುದ್ಧ್ಯಾ ಅನ್ವಿತಾಃ ಅನುಗತಾಃ ತೇಽಪಿ ಮಾಮೇವ ಕೌನ್ತೇಯ ಯಜನ್ತಿ ಅವಿಧಿಪೂರ್ವಕಮ್ । ಅವಿಧಿಃ ಅಜ್ಞಾನಮ್। ತತ್ಪೂರ್ವಕಮ್। ಅಜ್ಞಾನಪೂರ್ವಕಂ ಯಜನ್ತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಯಾರು ಅನ್ಯದೇವತಾಭಕ್ತರಾಗಿ–ಬೇರೆಯ ದೇವತೆಗಳಲ್ಲಿ ಭಕ್ತರಾದವರು ಅನ್ಯದೇವತಾಭಕ್ತರು. (ಅಂಥವ)ರಾಗಿ-ಶ್ರದ್ಧೆಯಿಂದ ಎಂದರೆ ಆಸ್ತಿಕ್ಯಬುದ್ಧಿಯಿಂದ ಕೂಡಿದವರಾಗಿ (ಆ ಬುದ್ಧಿಯಿಂ)ದೊಡಗೂಡಿದವರಾಗಿ ಯಾಗಮಾಡುವರೋ ಎಂದರೆ ಪೂಜಿಸುವರೋ ಅವರು ಕೂಡ, ಎಲೈ ಕೌಂತೇಯನೆ, ನನ್ನನ್ನೇ ಅವಿಧಿಪೂರ್ವಕವಾಗಿ ಪೂಜಿಸುತ್ತಾರೆ. ಅವಿಧಿ ಎಂದರೆ ಅಜ್ಞಾನವು. ಅದರ ಪೂರ್ವಕವಾಗಿ[2]–ಅಜ್ಞಾನದಿಂದೊಡಗೂಡಿ ಪೂಜಿಸುತ್ತಾರೆ ಎಂದರ್ಥ.

(ಭಾಷ್ಯ)

೪೦. ಕಸ್ಮಾತ್ ತೇ ಅವಿಧಿಪೂರ್ವಕಂ ಯಜನ್ತೇ ಇತ್ಯುಚ್ಯತೇ? ಯಸ್ಮಾತ್–

(ಭಾಷ್ಯಾರ್ಥ)

(ಪ್ರಶ್ನೆ) :—ಅವರು ಅವಿಧಿಪೂರ್ವಕವಾಗಿ ಪೂಜಿಸುತ್ತಾರೆ ಎಂದು ಹೇಳಿದ್ದೇಕೆ ?

---

1. ವಿಧಿಯಲ್ಲಿ ಹೇಳಿದೆ ಎಂಬ ಜ್ಞಾನವಿಲ್ಲದೆ ; ಶಾಸ್ತ್ರದಲ್ಲಿ ಯಾವ ದೇವತೆಗೆಂದು ವಿಧಿಸಿದ್ದರೂ ಅದು ನಿಜವಾಗಿ ಪರಮಾತ್ಮನಿಗೇ ಮುಟ್ಟುತ್ತದೆ ಎಂಬ ನಿಜದ ಅರಿವಿಲ್ಲದೆ ಎಂದರ್ಥ.

(ಉತ್ತರ) :—ಏಕೆಂದರೆ :—

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ॥ ೨೪ ॥**

೨೪. ಸರ್ವಯಜ್ಞಗಳಿಗೂ ಭೋಕ್ತೃವೂ ಪ್ರಭುವೂ ನಾನೇ ಅಲ್ಲವೆ? ಆದರೆ ನನ್ನನ್ನು ಅವರು ತತ್ತ್ವದಿಂದ ತಿಳಿಯರು. ಆದ್ದರಿಂದ ಅವರು ಜಾರಿಬೀಳುವರು.

(ಭಾಷ್ಯ)

೪೧. ಅಹಂ ಹಿ ಸರ್ವಯಜ್ಞಾನಾಂ ಶ್ರೌತಾನಾಂ ಸ್ಮಾರ್ತಾನಾಂ ಚ ಸರ್ವೇಷಾಂ ಯಜ್ಞಾನಾಂ ದೇವತಾತ್ಮತ್ವೇನ ಭೋಕ್ತಾ ಚ । ಪ್ರಭುರೇವ ಚ । ಮತ್ಸ್ವಾಮಿಕೋ ಹಿ ಯಜ್ಞಃ । "ಅಧಿಯಜ್ಞೋಽಹಮೇವಾತ್ರ" (೮-೪) ಇತಿ ಹಿ ಉಕ್ತಮ್ । ತಥಾ ನ ತು ಮಾಮ್ ಅಭಿಜಾನನ್ತಿ ತತ್ತ್ವೇನ ಯಥಾವತ್ । ಅತಶ್ಚ ಅವಿಧಿಪೂರ್ವಕಮ್ ಇಷ್ಟ್ವಾ ಯಾಗಫಲಾತ್ ಚ್ಯವನ್ತಿ ಪ್ರಚ್ಯವನ್ತೇ ತೇ ॥

(ಭಾಷ್ಯಾರ್ಥ)

ಶ್ರೌತ ಮತ್ತು ಸ್ಮಾರ್ತ ಎಂಬ ಸರ್ವಯಜ್ಞಗಳಿಗೂ ಯಜ್ಞಗಳಿಗೆಲ್ಲ ದೇವತಾ ಸ್ವರೂಪದಿಂದ ಭೋಕ್ತನೂ[1] ನಾನೇ. ಮತ್ತು (ಅವಕ್ಕೆ) ಒಡೆಯನೂ ನಾನೇ. ಏಕೆಂದರೆ ಯಜ್ಞಕ್ಕೆ ನಾನೇ ಸ್ವಾಮಿಯು. "ಇಲ್ಲಿ ಅಧಿಯಜ್ಞನು ನಾನೇ" (೮-೪) ಎಂದಲ್ಲವೆ, ಹಿಂದೆ ಹೇಳಿದೆ? ಆದರೆ ನನ್ನನ್ನು ತತ್ತ್ವದಿಂದ ಎಂದರೆ ನಾನು ಇರುವಂತೆಯೇ (ಅವರು) ಗುರುತಿಸಿ ತಿಳಿದುಕೊಳ್ಳದೆ ಇರುವರು; ಆದ್ದರಿಂದ ಅವಿಧಿಪೂರ್ವಕವಾಗಿ ಯಾಗಮಾಡಿ ಯಾಗಫಲದಿಂದ ಅವರು ಜಾರಿಬೀಳುವರು[2], ಅದನ್ನು ತಪ್ಪಿಸಿಕೊಳ್ಳುವರು.

(ಭಾಷ್ಯ)

೪೨. ಯೇಽಪಿ ಅನ್ಯದೇವತಾಭಕ್ತಿಮತ್ತ್ವೇನ ಅವಿಧಿಪೂರ್ವಕಂ ಯಜನ್ತೇ ತೇಷಾಮಪಿ ಯಾಗಫಲಮ್ ಅವಶ್ಯಂಭಾವಿ । ಕಥಮ್?

---

1. ೫-೨೯ರ ಭಾಷ್ಯವನ್ನು ನೋಡಿ.

2. ಪರಮಾತ್ಮನೇ ಯಜ್ಞದೊಡೆಯನೆಂದರಿಯದೆ ಇರುವದರಿಂದ ಅವರು ಸ್ವರ್ಗಾದಿ ಫಲವನ್ನು ಪಡೆದು ಮತ್ತೆ ಭೂಲೋಕದಲ್ಲಿ ಹುಟ್ಟುವರು.

(ಭಾಷ್ಯಾರ್ಥ)

ಯಾರು ಬೇರೆ ದೇವತೆಗಳಲ್ಲಿ ಭಕ್ತಿಯನ್ನಿಟ್ಟು ಅವಿಧಿಪೂರ್ವಕವಾಗಿ ಪೂಜಿಸುವರೋ ಅವರಿಗೂ ಯಾಗದ ಫಲವು ಅವಶ್ಯವಾಗಿ ಆಗಿಯೇ ತೀರುವದು. ಹೇಗೆಂದರೆ :—

**ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ ।**
**ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯಾಜಿನೋಽಪಿ ಮಾಮ್ ॥**

೨೫. ದೇವವ್ರತರಾದವರು ದೇವತೆಗಳನ್ನು ಹೋಗಿ ಸೇರುವರು. ಪಿತೃವ್ರತರಾದವರು ಪಿತೃಗಳನ್ನು ಸೇರುವರು. ಭೂತೇಜ್ಯರು ಭೂತಗಳನ್ನು ಹೋಗಿ ಸೇರುವರು. ನನ್ನನ್ನು ಕುರಿತು ಯಾಗಮಾಡುವವರೂ ನನ್ನನ್ನು ಸೇರುತ್ತಾರೆ.

(ಭಾಷ್ಯ)

೪೩. ಯಾನ್ತಿ ಗಚ್ಛನ್ತಿ ದೇವವ್ರತಾಃ ದೇವೇಷು ವ್ರತಂ ನಿಯಮಃ ಭಕ್ತಿಶ್ಚ ಯೇಷಾಂ ತೇ ದೇವವ್ರತಾಃ ದೇವಾನ್ ಯಾನ್ತಿ । ಪಿತೄನ್ ಅಗ್ನಿಷ್ವಾತ್ತಾದೀನ್ ಯಾನ್ತಿ ಪಿತೃವ್ರತಾಃ ಶ್ರಾದ್ಧಾದಿಕ್ರಿಯಾಪರಾಃ ಪಿತೃಭಕ್ತಾಃ । ಭೂತಾನಿ ವಿನಾಯಕಮಾತೃಗಣಚತುರ್ಭಗಿನ್ಯಾದೀನಿ ಯಾನ್ತಿ ಭೂತೇಜ್ಯಾಃ ಭೂತಾನಾಂ ಪೂಜಕಾಃ । ಯಾನ್ತಿ ಮದ್ಯಾಜಿನಃ ಮದ್ಯಜನಶೀಲಾಃ ವೈಷ್ಣವಾ ಅಪಿ ಮಾಮೇವ । ಸಮಾನೇಽಪಿ ಆಯಾಸೇ ಮಾಮೇವ ನ ಭಜನ್ತೇ ಅಜ್ಞಾನಾತ್ । ತೇನ ತೇ ಅಲ್ಪಫಲಭಾಜೋ ಭವನ್ತಿ ಇತ್ಯರ್ಥಃ ॥

(ಭಾಷ್ಯಾರ್ಥ)

ದೇವವ್ರತರಾದವರು–ದೇವತೆಗಳಲ್ಲಿ ವ್ರತವು ಎಂದರೆ ನಿಯಮವೂ ಭಕ್ತಿಯೂ ಯಾರಿಗೆ ಇರುವದೋ ಅಂಥ ದೇವವ್ರತರು–ದೇವತೆಗಳನ್ನು ಹೋಗಿ ಪಡೆಯುವರು, (ಅವರಲ್ಲಿಗೆ) ತೆರಳುತ್ತಾರೆ. ಪಿತೃವ್ರತರು ಎಂದರೆ ಶ್ರಾದ್ಧವೇ ಮುಂತಾದ ಕರ್ಮಗಳಲ್ಲಿ ತಾತ್ಪರ್ಯವುಳ್ಳ ಪಿತೃಭಕ್ತರು **ಅಗ್ನಿಷ್ವಾತ್ತರೇ** ಮುಂತಾದ ಪಿತೃಗಳನ್ನು ಹೋಗಿ ಸೇರುವರು. ಭೂತೇಜ್ಯರು ಎಂದರೆ ಭೂತಗಳನ್ನು ಪೂಜಿಸುವವರು ಭೂತಗಳನ್ನು ಎಂದರೆ **ವಿನಾಯಕ, ಮಾತೃಗಣ, ಚತುರ್ಭಗಿನೀ**[1] ಮುಂತಾದವುಗಳನ್ನು ಹೋಗಿ ಸೇರುವರು. (ಇದರಂತೆ) ಮದ್ಯಾಜಿಗಳು ಎಂದರೆ ನನ್ನನ್ನೇ ಪೂಜಿಸುವ ಸ್ವಭಾವದವರಾದ ವೈಷ್ಣವರುಕೂಡ ನನ್ನನ್ನೇ ಬಂದು ಸೇರುತ್ತಾರೆ. (ಹೀಗೆ)

1. ಈ ಹೆಸರುಗಳು ತಂತ್ರಶಾಸ್ತ್ರದಲ್ಲಿ ಕಂಡುಬರುತ್ತವೆ.

**ಆಯಾಸವು (ಎಲ್ಲಾ ಪೂಜೆಗೂ) ಸಮಾನವೇ ಆಗಿರುತ್ತಿದ್ದರೂ (ಇವರು) ಅಜ್ಞಾನದಿಂದ ನನ್ನನ್ನೇ ಭಜಿಸದೆ ಇರುವರು; ಅದರಿಂದ ಅವರು ಅಲ್ಪ ಫಲವನ್ನು ಹೊಂದುವವರಾಗುತ್ತಾರೆ[1] ಎಂದರ್ಥ.**

## ಭಕ್ತಿಯ ಸೌಲಭ್ಯ, ಅದರಿಂದಾಗುವ ಫಲ

(ಭಾಷ್ಯ)

೪೪. ನ ಕೇವಲಂ ಮದ್ಭಕ್ತಾನಾಮ್ ಅನಾವೃತ್ತಿಲಕ್ಷಣಮ್ ಅನನ್ತಫಲಮ್। ಸುಖಾರಾಧನಶ್ಚ ಅಹಮ್ । ಕಥಮ್ ?—

(ಭಾಷ್ಯಾರ್ಥ)

ನನ್ನ ಭಕ್ತರಿಗೆ ಮತ್ತೆ ಹಿಂತಿರಳದ ಅನಂತಫಲವಾಗುವದೆಂಬುದಿಷ್ಟೇ ಅಲ್ಲ; ನನ್ನನ್ನು ಆರಾಧನೆಮಾಡುವದೂ ಸುಲಭವು. ಹೇಗೆಂದರೆ :—

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥**

೨೬. ಯಾವನು ನನಗೆ ಪತ್ರವನ್ನು, ಪುಷ್ಪವನ್ನು, ಫಲವನ್ನು, ನೀರನ್ನು, ಭಕ್ತಿಯಿಂದ ಕೊಡುವನೋ ಪ್ರಯತಾತ್ಮನಾದ (ಅವನು) ಭಕ್ತಿಯಿಂದ ಕೊಟ್ಟ ಅದನ್ನು ನಾನು ತಿನ್ನುವೆನು.

(ಭಾಷ್ಯ)

೪೫. ಪತ್ರಂ ಪುಷ್ಪಂ ಫಲಮ್ ತೋಯಮ್ ಉದಕಂ ಯಃ ಮೇ ಮಹ್ಯಂ ಭಕ್ತ್ಯಾ ಪ್ರಯಚ್ಛತಿ ತತ್ ಅಹಂ ಪತ್ರಾದಿ ಭಕ್ತ್ಯಾ ಉಪಹೃತಂ ಭಕ್ತಿಪೂರ್ವಕಂ ಪ್ರಾಪಿತಂ ಭಕ್ತ್ಯುಪಹೃತಮ್ ಅಶ್ನಾಮಿ ಗೃಹ್ಣಾಮಿ ಪ್ರಯತಾತ್ಮನಃ ಶುದ್ಧಬುದ್ಧೇಃ॥

(ಭಾಷ್ಯಾರ್ಥ)

ಒಂದು ಎಲೆ, ಒಂದು ಹೂವು, ಒಂದು ಹಣ್ಣು, ಒಂದಿಷ್ಟು ತೋಯ ಎಂದರೆ ನೀರು-(ಇವುಗಳಲ್ಲಿ ಯಾವದಾದರೊಂದನ್ನು) ಭಕ್ತಿಯಿಂದ[2] ಯಾವಾತನು (ಮೇ= ಮಹ್ಯಮ್) ನನಗೆ ಕೊಡುವನೋ ಭಕ್ತ್ಯುಪಹೃತವಾದ–ಭಕ್ತಿಯಿಂದ ಉಪಹೃತವಾದ

1. ೭-೨೩, ೮-೬, ೧೭-೪ ಈ ಶ್ಲೋಕಗಳನ್ನು ನೋಡಿ.
2. ಅವರವರಲ್ಲಿದ್ದಷ್ಟನ್ನು ಪ್ರೇಮದಿಂದ ಸಮರ್ಪಣೆಮಾಡುವದು ಮುಖ್ಯವೆಂದ ಭಾವ.

ಎಂದರೆ ಭಕ್ತಿಪೂರ್ವಕವಾಗಿ ತಂದುಕೊಟ್ಟ-ಆ ಎಲೆಯೇ ಮುಂತಾದದ್ದನ್ನು ನಾನು ತಿನ್ನುವೆನು, ಸ್ವೀಕರಿಸುವೆನು. ಪ್ರಯತಾತ್ಮನಾದ ಶುದ್ಧಾಂತಃಕರಣನಾದ (ಅವನು ತಂದದ್ದನ್ನು ಸ್ವೀಕರಿಸುವೆನು).

(ಭಾಷ್ಯ)

೪೬. ಯತ ಏವಮ್—

(ಭಾಷ್ಯಾರ್ಥ)

ಹೀಗಿರುವದರಿಂದ :—

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ॥ ೨೭ ॥**

೨೭. ಕೌಂತೇಯನೆ, ಯಾವದನ್ನು ಮಾಡುವೆಯೋ, ಯಾವದನ್ನು ತಿನ್ನುವೆಯೋ, ಯಾವದನ್ನು ಹೋಮಮಾಡುವೆಯೋ, ಯಾವದನ್ನು ದಾನ ಮಾಡುವೆಯೋ, ಯಾವದನ್ನು ತಪಸ್ಸುಮಾಡುವೆಯೋ ಅದನ್ನು ನನಗೆ ಅರ್ಪಣೆಮಾಡು.

(ಭಾಷ್ಯ)

೨೭. ಯತ್ ಕರೋಷಿ ಸ್ವತಃ ಪ್ರಾಪ್ತಮ್, ಯತ್ ಅಶ್ನಾಸಿ, ಯತ್ ಜುಹೋಷಿ, ಹವನಂ ನಿರ್ವರ್ತಯಸಿ ಶ್ರೌತಂ ಸ್ಮಾರ್ತಂ ವಾ ಯತ್ ದದಾಸಿ ಪ್ರಯಚ್ಛಸಿ ಬ್ರಾಹ್ಮಣಾದಿಭ್ಯಃ ಹಿರಣ್ಯಾನ್ನಾದಿ ಯತ್ ತಪಸ್ಯಸಿ ತಪಶ್ಚರಸಿ ಕೌನ್ತೇಯ, ತತ್ ಕುರುಷ್ವ ಮದರ್ಪಣಂ ಮತ್ಸಮರ್ಪಣಮ್ ॥

(ಭಾಷ್ಯಾರ್ಥ)

ತಾನಾಗಿಯೇ ಒದಗಿದ ಯಾವದನ್ನು ಮಾಡುವೆಯೋ[1] ಯಾವದನ್ನು ತಿನ್ನುವೆಯೋ ಯಾವದನ್ನು ಹೋಮಮಾಡುವೆಯೋ ಎಂದರೆ ಶ್ರೌತ ಅಥವಾ ಸ್ಮಾರ್ತ ಹೋಮವನ್ನು ಮಾಡುವೆಯೋ, ಬ್ರಾಹ್ಮಣರೇ ಮೊದಲಾದವರಿಗೆ ಚಿನ್ನ, ಅನ್ನ-ಮುಂತಾಗಿ[2] ಏನನ್ನು ಕೊಡುವೆಯೋ, ಯಾವದನ್ನು ತಪಸ್ಸುಮಾಡುವೆಯೋ ಎಂದರೆ

---

1. ಮಾಡುವ ಲೌಕಿಕಕರ್ಮಗಳನ್ನುಕೂಡ ಭಗವಂತನಿಗೆ ಅರ್ಪಿಸಬೇಕು ಎಂಬ ಭಾವ ೧೨-೧೧ ನೋಡಿ.

2. ಹಿರಣ್ಯಾನ್ನಾದಿ ಎಂಬ ಮೂ॥ ಪಾಠವನ್ನಿಟ್ಟುಕೊಂಡಿದೆ. ಬ್ರಾಹ್ಮಣರಿಗೆ ಹಣವನ್ನೂ ಉಳಿದವರಿಗೆ ಅನ್ನ, ಬಟ್ಟೆ-ಮುಂತಾದವನ್ನೂ ಎಂಬ ಅರ್ಥವು ಇದರಿಂದ ಹೊರಡುತ್ತದೆ.

**ಯಾವ ತಪಸ್ಸನ್ನು ಆಚರಿಸುವೆಯೋ, ಎಲೈ ಕೌಂತೇಯನೆ, ಅದನ್ನು ಮದರ್ಪಣ ವಾಗಿ ಮಾಡು, ನನಗೆ ಸಮರ್ಪಣೆ–(ಮಾಡು).**

(ಭಾಷ್ಯ)

೪೮. ಏವಂ ಕುರ್ವತಃ ತವ ಯದ್ ಭವತಿ, ತತ್ ಶೃಣು—

(ಭಾಷ್ಯಾರ್ಥ)

ಹೀಗೆ ಮಾಡುತ್ತಿದ್ದರೆ ನಿನಗೆ ಯಾವ (ಫಲವಾಗು)ವದೆಂದರೆ, ಕೇಳು :—

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬನ್ಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥೨೮॥**

೨೮. ಹೀಗಾದರೆ ಶುಭಾಶುಭಫಲಗಳುಳ್ಳ ಕರ್ಮಬಂಧನಗಳಿಂದ ಮುಕ್ತನಾಗುತ್ತೀಯೆ. ಸಂನ್ಯಾಸಯೋಗಯುಕ್ತಾತ್ಮನಾಗಿ ವಿಮುಕ್ತನಾಗಿ ನನ್ನ ಬಳಿಗೆ ಬರುವೆ.

(ಭಾಷ್ಯ)

೪೯. ಶುಭಾಶುಭಫಲೈಃ ಶುಭಾಶುಭೇ ಇಷ್ಟಾನಿಷ್ಟೇ ಫಲೇ [1] ಯೇಷಾಂ ತಾನಿ ಶುಭಾಶುಭಫಲಾನಿ ಕರ್ಮಾಣಿ ತೈಃ ಶುಭಾಶುಭಫಲೈಃ ಕರ್ಮಬನ್ಧನೈಃ ಕರ್ಮಾಣ್ಯೇವ ಬನ್ಧನಾನಿ ತೈಃ ಕರ್ಮಬನ್ಧನೈಃ ಏವಂ ಮದರ್ಪಣಂ ಕುರ್ವನ್ ಮೋಕ್ಷ್ಯಸೇ। ಸೋಽಯಂ ಸಂನ್ಯಾಸಯೋಗೋ ನಾಮ। ಸಂನ್ಯಾಸಶ್ಚ ಅಸೌ ಮತ್ಸಮರ್ಪಣತಯಾ, ಕರ್ಮತ್ವಾತ್ ಯೋಗಶ್ಚ ಅಸೌ ಇತಿ । ತೇನ ಸಂನ್ಯಾಸಯೋಗೇನ ಯುಕ್ತ ಆತ್ಮಾ ಅನ್ತಃಕರಣಮ್ ಯಸ್ಯ ತವ ಸ ತ್ವಂ ಸಂನ್ಯಾಸಯೋಗಯುಕ್ತಾತ್ಮಾ ಸನ್ ವಿಮುಕ್ತಃ ಕರ್ಮಬನ್ಧನೈಃ ಜೀವನ್ನೇವ ಪತಿತೇ ಚ ಅಸ್ಮಿನ್ ಶರೀರೇ ಮಾಮ್ ಉಪೈಷ್ಯಸಿ ಆಗಮಿಷ್ಯಸಿ ॥

(ಭಾಷ್ಯಾರ್ಥ)

ಶುಭಾಶುಭಫಲಗಳುಳ್ಳ–ಶುಭಾಶುಭಗಳು, ಎಂದರೆ ಬೇಕಾದ (ಒಳ್ಳೆಯ) ಫಲಗಳು, ಬೇಡವಾದ (ಕೆಟ್ಟ) ಫಲಗಳು ; ಇವು ಯಾವ (ಕರ್ಮಗಳಿಗೆ) ಫಲಗಳೋ ಆ ಕರ್ಮಗಳು ಶುಭಾಶುಭಫಲಗಳುಳ್ಳವು. ಅಂಥ ಶುಭಾಶುಭಫಲಗಳುಳ್ಳ–ಕರ್ಮ ಬಂಧನಗಳಿಂದ ಹೀಗೆ (ಪತ್ರಾದಿಗಳನ್ನು) ನನಗೆ ಅರ್ಪಣೆಮಾಡುತ್ತಿದ್ದರೆ ಬಿಡುಗಡೆ

---

1. 'ಇಷ್ಟಾನಿಷ್ಟಫಲೇ' ಎಂಬ ಪಾಠಕ್ಕಿಂತ ಈ ಮ॥ನ್ಯೆ॥ ಪಾಠವು ಮೇಲು.

ಯನ್ನು ಹೊಂದುವೆ. ಆ ಇದಕ್ಕೆ **ಸಂನ್ಯಾಸಯೋಗವೆಂದು** ಹೆಸರು. (ಎಲ್ಲವನ್ನೂ) ನನಗೆ ಸಮರ್ಪಣೆಮಾಡುವದರಿಂದ ಇದು **ಸಂನ್ಯಾಸವೆನಿಸುವದು**; ಕರ್ಮವಾಗಿರುವದರಿಂದ ಇದು **ಯೋಗವೆನಿಸುವದು**. ಈ ಸಂನ್ಯಾಸಯೋಗದಿಂದ ಕೂಡಿದ ಆತ್ಮವು ಎಂದರೆ ಅಂತಃಕರಣವು ಇರುವದರಿಂದ ನೀನು ಸಂನ್ಯಾಸಯೋಗಯುಕ್ತಾತ್ಮನು. ಅಂಥವನಾಗಿ **ಬದುಕಿರುವಾಗಲೇ ಕರ್ಮದ ಕಟ್ಟುಗಳಿಂದ ಬಿಡುಗಡೆಯನ್ನು ಹೊಂದಿ ಈ ಶರೀರವು ಬಿದ್ದ ಬಳಿಕ ನನ್ನ ಬಳಿಗೆ ಬರುವೆ, ನನ್ನನ್ನು ಬಂದು ಸೇರುವೆ.**[1]

## ಪರಮಾತ್ಮನಿಗೆ ಯಾರಲ್ಲಿಯೂ ಪಕ್ಷಪಾತವಿಲ್ಲ

(ಭಾಷ್ಯ)

೩೦. ರಾಗದ್ವೇಷವಾನ್ ತರ್ಹಿ ಭಗವಾನ್ ಯತಃ ಭಕ್ತಾನ್ ಅನುಗೃಹ್ಣಾತಿ ನೇತರಾನ್ ಇತಿ । ತನ್ನ—

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಭಗವಂತನಲ್ಲಿ ರಾಗದ್ವೇಷಗಳಿರುವವೆಂದಾಯಿತು. ಏಕೆಂದರೆ (ಆತನು) ಭಕ್ತರಿಗೆ ಅನುಗ್ರಹಮಾಡುತ್ತಾನೆಯೇ ಹೊರತು ಮಿಕ್ಕವರಿಗೆ (ಮಾಡುವ)ದಿಲ್ಲ.

(ಪರಿಹಾರ) :—ಹಾಗಲ್ಲ. (ಏಕೆಂದರೆ) :—

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್॥**

೨೯. ನಾನು ಸರ್ವಭೂತಗಳಲ್ಲಿಯೂ ಸಮನಾಗಿರುವೆನು. ನನಗೆ ದ್ವೇಷ್ಯನೂ ಇಲ್ಲ, ಪ್ರಿಯನೂ ಇಲ್ಲ. ಆದರೆ ಯಾರು ನನ್ನನ್ನು ಭಕ್ತಿಯಿಂದ ಭಜಿಸುವರೋ ಅವರು ನನ್ನಲ್ಲಿ(ರುವರು), ನಾನೂ ಅವರಲ್ಲಿ(ರುವೆನು).

(ಭಾಷ್ಯ)

೩೧. ಸಮಃ ತುಲ್ಯಃ ಅಹಂ ಸರ್ವಭೂತೇಷು । ನ ಮೇ ದ್ವೇಷ್ಯಃ ಅಸ್ತಿ ನ ಪ್ರಿಯಃ । ಅಗ್ನಿವತ್ ಅಹಮ್ । ದೂರಸ್ಥಾನಾಂ ಯಥಾ ಅಗ್ನಿಃ ಶೀತಂ ನಾಪ

---

1. ಕರ್ಮವನ್ನು ಭಗವಂತನಿಗೆ ಸಮರ್ಪಣೆಮಾಡುತ್ತಲೇ ಇರುವವನಿಗೆ ಸತ್ತಬಳಿಕ ಭಗವತ್ಪ್ರಾಪ್ತಿಯೇ ಫಲವಾಗುವದು.

ನಯತಿ ಸಮೀಪಮ್ ಉಪಸರ್ಪತಾಮ್ ಅಪನಯತಿ ತಥಾ ಅಹಂ ಭಕ್ತಾನ್ ಅನುಗೃಹ್ಣಾಮಿ ನೇತರಾನ್ । ಯೇ ಭಜನ್ತಿ ತು ಮಾಮ್ ಈಶ್ವರಂ ಭಕ್ತ್ಯಾ ಮಯಿ ತೇ ಸ್ವಭಾವತ ಏವ ವರ್ತನ್ತೇ ನ ಮಮ ರಾಗನಿಮಿತ್ತಂ[1] ವರ್ತನ್ತೇ । ತೇಷು ಚಾಪಿ ಅಹಂ ಸ್ವಭಾವತ ಏವ ವರ್ತೇ ನ ಇತರೇಷು । ನ ಏತಾವತಾ ತೇಷು ದ್ವೇಷೋ ಮಮ ॥

(ಭಾಷ್ಯಾರ್ಥ)

ನಾನು ಸರ್ವಭೂತಗಳಲ್ಲಿಯೂ ಸಮನಾಗಿರುವೆನು, ಒಂದೇ ಆಗಿರುವೆನು. ನನಗೆ ಹಗೆಯಾಗಲಿ ಬೇಕಾದವನಾಗಲಿ ಇರುವದಿಲ್ಲ. ನಾನು ಬೆಂಕಿಯಂತೆ. ಹೇಗೆ ಬೆಂಕಿಯು ದೂರದಲ್ಲಿರುವವರ ಚಳಿಯನ್ನು ಕಳೆಯದೆ ಇರುವದೋ ಹತ್ತಿರಕ್ಕೆ ಬರುತ್ತಿರುವವರ (ಚಳಿಯನ್ನು ಹೇಗೆ) ಕಳೆಯುವದೋ, ಹಾಗೆ (ನಾನು) ಭಕ್ತರನ್ನು ಅನುಗ್ರಹಿಸುತ್ತೇನೆ, ಮಿಕ್ಕವರನ್ನು ಇಲ್ಲ. **ಯಾರಾದರೆ ಭಕ್ತಿಯಿಂದ ಈಶ್ವರನಾದ ನನ್ನನ್ನು ಭಕ್ತಿಯಿಂದ ಭಜಿಸುವರೋ ಅವರು ಸ್ವಭಾವದಿಂದಲೇ ನನ್ನಲ್ಲಿ(ರುತ್ತಾರೆ), (ಅವರಲ್ಲಿ) ನನಗೆ ರಾಗವಿರುವದೆಂಬ ಕಾರಣದಿಂದ ಇರುವದಿಲ್ಲ. ಮತ್ತು ಅವರಲ್ಲಿಯೂ ನಾನು ಸ್ವಭಾವದಿಂದಲೇ (ಇರುವೆನು), ಮಿಕ್ಕವರಲ್ಲಿರುವದಿಲ್ಲ. ಇಷ್ಟುಮಾತ್ರದಿಂದ ಅವರಲ್ಲಿ ನನಗೆ (ಯಾವ) ದ್ವೇಷವೂ ಇರುವದಿಲ್ಲ**

## ಭಕ್ತಿಯ ಹೆಚ್ಚುಗಾರಿಕೆ

(ಭಾಷ್ಯ)

೫೨. ಶೃಣು ಮದ್ಭಕ್ತೇಃ ಮಾಹಾತ್ಮ್ಯಮ್—

(ಭಾಷ್ಯಾರ್ಥ)

ನನ್ನ ಭಕ್ತಿಯ ಹೆಚ್ಚುಗಾರಿಕೆಯನ್ನು ಕೇಳು :-

**ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮನ್ತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**

೩೦. ಸುದುರಾಚಾರಿಯಾದರೂ ನನ್ನನ್ನು ಅನನ್ಯಭಜನನಾಗಿ ಭಜಿಸಿದರೆ ಅವನು ಸಾಧುವೆಂದೇ ತಿಳಿಯತಕ್ಕವನು. ಏಕೆಂದರೆ ಅವನು ಸರಿಯಾದ ವ್ಯವಸಾಯವುಳ್ಳವನಾಗಿರುತ್ತಾನೆ.

---

1. ಶಿ|| ಗು||ಗಳಲ್ಲಿ ಇಲ್ಲಿ 'ಮಯಿ' ಎಂದು ಹೆಚ್ಚಾಗಿದೆ.

ಅಂಥವರು, ಅವರು ಯಾರು? ಎಂದರೆ ಹೇಳುತ್ತಾನೆ. ಹೆಂಗಸರು, ವೈಶ್ಯರು ಮತ್ತು ಶೂದ್ರರು [1] ಅವರುಕೂಡ ಹೆಚ್ಚಿನ ಉತ್ತಮವಾದ ಗತಿಯನ್ನು ಹೊಂದುವರು, ಸೇರುವರು. (ಹಿ = ಯಸ್ಮಾತ್) ಹೀಗಿರುವದಷ್ಟೆ.

(ಭಾಷ್ಯ)

೫೬. ಕಿಂ ಪುನಃ ಬ್ರಾಹ್ಮಣಾಃ ಪುಣ್ಯಾಃ ಪುಣ್ಯಯೋನಯಃ ಭಕ್ತಾಃ ರಾಜರ್ಷಯಃ ತಥಾ । ರಾಜಾನಶ್ಚ ತೇ ಋಷಯಶ್ಚ ಇತಿ ರಾಜರ್ಷಯಃ । ಯತ ಏವಮ್ ಅತಃ ಅನಿತ್ಯಂ ಕ್ಷಣಭಙ್ಗುರಮ್ ಅಸುಖಂ ಚ ಸುಖವರ್ಜಿತಮ್ ಇಮಂ ಲೋಕಂ ಮನುಷ್ಯಲೋಕಂ ಪ್ರಾಪ್ಯ ಪುರುಷಾರ್ಥಸಾಧನಂ ದುರ್ಲಭಂ ಮನುಷ್ಯತ್ವಂ ಲಬ್ಧ್ವಾ ಭಜಸ್ವ ಸೇವಸ್ವ ಮಾಮ್ ॥

(ಭಾಷ್ಯಾರ್ಥ)

ಇನ್ನು ಪುಣ್ಯವಾದ ಎಂದರೆ ಪುಣ್ಯಯೋನಿಯಲ್ಲಿ ಹುಟ್ಟಿದ, ಭಕ್ತರಾದ ಬ್ರಾಹ್ಮಣರೂ [2] ರಾಜರ್ಷಿಗಳೂ–ರಾಜರೂ ಋಷಿಗಳೂ ಆಗಿರುವವರು ರಾಜರ್ಷಿಗಳು. (ಅವರು–ಪರಮಗತಿಯನ್ನು ಹೊಂದುವರೆಂದು) ಹೇಳುವದೇನಿದೆ?

ಹೀಗಿರುವದರಿಂದ ಈ ಕಾರಣದಿಂದ ಅನಿತ್ಯವಾದ, ಕ್ಷಣದಲ್ಲಿ ನಾಶವಾಗುವಂಥದ್ದೂ ಅಸುಖವೂ ಸುಖವರ್ಜಿತವೂ ಆಗಿರುವ, ಈ ಲೋಕವನ್ನು ಎಂದರೆ ಮನುಷ್ಯಲೋಕವನ್ನು ಪಡೆದಿರುವ ಪುರುಷಾರ್ಥವನ್ನು ಸಾಧನಮಾಡುವ ದುರ್ಲಭವಾದ ಮನುಷ್ಯತ್ವವನ್ನು [3] ಪಡೆದಿರುವ (ನೀನು) ನನ್ನನ್ನು ಭಜಿಸು, ಸೇವಿಸು.

## ಅರ್ಜುನನಿಗೆ ಉಪದೇಶ

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥**

---

1. ಸ್ತ್ರೀಯರೂ, ಶೂದ್ರರೂ, ವೈಶ್ಯರೂ-ಎಲ್ಲರೂ ಪಾಪಿಗಳೆಂದರ್ಥವಲ್ಲ. ಅವರು ಹಿಂದಿನ ಜನ್ಮದ ಪಾಪದ ದೆಸೆಯಿಂದ ಭಕ್ತಿಗೆ ಅಡ್ಡಿ ಬರಬಹುದಾದ ಜನ್ಮದಲ್ಲಿ ಹುಟ್ಟಿರುತ್ತಾರೆ. ಆದರೆ ಅವರಿಗೆ ಭಕ್ತಿಯನ್ನು ಮಾಡುವದಕ್ಕಾಗಲಿ ಪರಗತಿಯನ್ನು ಪಡೆಯುವದಕ್ಕಾಗಲಿ ಅಡ್ಡಿಯಿಲ್ಲ.

2. ಪುಣ್ಯಾಃ ಭಕ್ತಾಃ ಎಂಬುದನ್ನು ಬ್ರಾಹ್ಮಣರಿಗೂ ರಾಜರ್ಷಿಗಳಿಗೂ ಸೇರಿಸಬೇಕು. ಅವರಿಬ್ಬರಿಗೂ ಆತ್ಮನಿಷ್ಠೆಯೇ ಕರ್ತವ್ಯವಾಗಿರುವದರಿಂದ ಅವರು ಪರಮಗತಿಯನ್ನು ಪಡೆಯುವರೆಂಬುದನ್ನು ಹೇಳಬೇಕಾದದ್ದೇ ಇಲ್ಲ.

3. ಮನುಷ್ಯತ್ವವು ಅನಿತ್ಯ, ದುಃಖಮಯ; ಆದರೂ ಪುರುಷಾರ್ಥವನ್ನು ಸಾಧಿಸುವದಕ್ಕೆ ಉಪಯುಕ್ತವಾದದ್ದು.

೩೪. ಮನ್ಮನನಾಗಿರು, ಮದ್ಭಕ್ತನಾಗಿರು, ಮದ್ಯಾಜಿಯಾಗಿರು, ನನ್ನನ್ನೇ ನಮಸ್ಕರಿಸು. ಹೀಗೆ ಯೋಗವನ್ನು ಮಾಡುತ್ತಿದ್ದರೆ ಮತ್ಪರಾಯಣ ನಾಗಿ ಆತ್ಮನಾದ ನನ್ನನ್ನೇ ಬಂದು ಸೇರುವೆ.

(ಭಾಷ್ಯ)

೫೭. ಮಯಿ ವಾಸುದೇವೇ ಮನಃ ಯಸ್ಯ ತವ ಸ ತ್ವಂ ಮನ್ಮನಾಃ ಭವ । ತಥಾ ಮದ್ಭಕ್ತಃ ಭವ । ಮದ್ಯಾಜೀ ಮದ್ಯಜನಶೀಲಃ ಭವ । ಮಾಮೇವ ಚ ನಮಸ್ಕುರು । ಮಾಮೇವ ಈಶ್ವರಮ್ ಏಷ್ಯಸಿ ಆಗಮಿಷ್ಯಸಿ । ಯುಕ್ತ್ವಾ ಸಮಾಧಾಯ ಚಿತ್ತಮ್ ಏವಮ್ । ಆತ್ಮಾನಮ್ ಮಾಮ್ [1] । ಅಹಂ ಹಿ ಸರ್ವೇಷಾಂ ಭೂತಾನಾಮ್ ಆತ್ಮಾ ಪರಾ ಚ ಗತಿಃ ಪರಮ್ ಅಯನಮ್ । ತಂ ಮಾಮ್ ಏವಂ ಭೂತಮ್ ಏಷ್ಯಸಿ ಇತಿ ಅತೀತೇನ ಸಂಬನ್ಧಃ । ಮತ್ಪರಾಯಣಃ ಸನ್ ಇತ್ಯರ್ಥಃ ॥

(ಭಾಷ್ಯಾರ್ಥ)

ವಾಸುದೇವನಾದ ನನ್ನಲ್ಲಿ ಮನಸ್ಸುಳ್ಳವನಾದ್ದರಿಂದ ನೀನು ಮನ್ಮನನು, ಅಂಥ (ಮನ್ಮನ)ನಾಗು. ಹೀಗೆಯೇ ಮದ್ಭಕ್ತನು (ನನ್ನ ಭಕ್ತನು) ಆಗು. ಮದ್ಯಾಜಿ ಎಂದರೆ ನನ್ನನ್ನೇ ಪೂಜಿಸುವ ಸ್ವಭಾವದವನು ಆಗು. ಮತ್ತು ನನ್ನನ್ನೇ ನಮಸ್ಕರಿಸುತ್ತಿರು. ಹೀಗೆ 'ಯುಕ್ತ್ವಾ' ಚಿತ್ತವನ್ನು ಸಮಾಧಾನಮಾಡಿಕೊಂಡಿದ್ದರೆ ಈಶ್ವರನಾದ ನನ್ನನ್ನೇ ಬಂದು ಸೇರುವೆ. ಆತ್ಮನಾದ ನನ್ನನ್ನೇ–ನಾನೇ ಅಲ್ಲವೆ, ಸಕಲ ಪ್ರಾಣಿಗಳಿಗೂ ಆತ್ಮನು ಮತ್ತು ಹೆಚ್ಚಿನ ಗತಿಯಾದ ಪರವಾದ ಅಯನವು?–ಇಂಥ ನನ್ನನ್ನು 'ಬಂದು ಸೇರುವೆ' ಎಂದು ಹಿಂದಿನ (ಮಾತಿಗೆ ಇದನ್ನು) ಸಂಬಂಧಿಸಿಕೊಳ್ಳಬೇಕು. ಮತ್ಪರಾಯಣನಾಗಿ (ನಾನೇ ಕೊನೆಗೆ ಹೋಗಿ ಸೇರಬೇಕಾದ ಗತಿ ಎಂದು ತಿಳಿದವನಾಗಿ ಸೇರುವೆ) ಎಂದು ಅರ್ಥ.

ಇತಿ ಶ್ರೀಮದ್ಭಗವದ್ಗೀತಾಭಾಷ್ಯೇ ರಾಜವಿದ್ಯಾರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ

---

1. ಈ ಮಾತು ಅ॥ ನಿ॥ ವಾ॥ಗಳಲ್ಲಿಲ್ಲ ; 'ತಂ ಮಾಮ್' ಎಂಬಲ್ಲಿ 'ಮಾಮ್' ಇದೆ ಎಂಬುದರ ಮೇಲೆ ಯಾರೋ ಅದನ್ನು ಕೈಬಿಟ್ಟಿರಬೇಕೆಂದು ತೋರುತ್ತದೆ.

*

# ಒಂಬತ್ತನೆಯ ಅಧ್ಯಾಯದ ಸಾರ

೧—೩. ಭಗವಂತನು ಹೇಳಿದ್ದೇನೆಂದರೆ :— " ಎಲ್ಲಕ್ಕೂ ಹೆಚ್ಚಿನ ಗುಟ್ಟೊಂದನ್ನು ಈಗ ಹೇಳುವೆನು ಕೇಳು. ಇದೇ ಜ್ಞಾನವು ಮತ್ತು ವಿಜ್ಞಾನವು. ಇದನ್ನು ಅರಿತುಕೊಂಡರೆ ಸಂಸಾರಬಂಧದಿಂದ ಮುಕ್ತನಾಗುವೆ. ಇದು ವಿದ್ಯೆಗಳಲ್ಲೆಲ್ಲ ಹೆಚ್ಚಿನದು, ಅತ್ಯಂತ ಪವಿತ್ರ ವಾದದ್ದು, ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವಂಥದ್ದು. ಸುಲಭವಾಗಿ ಪಡೆದುಕೊಳ್ಳಬಹು ದಾದದ್ದು, ಎಂದಿಗೂ ಸವೆಯದ ಫಲವುಳ್ಳದ್ದು. ಇದರಲ್ಲಿ ನಂಬಿಕೆಯಿಲ್ಲದವರು ಸಂಸಾರ ದಲ್ಲಿ ತೊಳಲುವರು.

೪—೧೦. ಈ ಜಗತ್ತೆಲ್ಲವೂ ಅವ್ಯಕ್ತರೂಪನಾದ ನನ್ನಿಂದ ವ್ಯಾಪ್ತವಾಗಿರುತ್ತದೆ. ಬ್ರಹ್ಮನು ಮೊದಲಾಗಿ ಸ್ತಂಬದವರೆಗಿನ ಪ್ರಾಣಿಗಳೆಲ್ಲವೂ ನನ್ನನ್ನೇ ಅವಲಂಬಿಸಿವೆಯಾದರೂ ಪರಮಾರ್ಥದೃಷ್ಟಿಯಿಂದ ನೋಡಿದರೆ ಅವು ನನ್ನಲ್ಲಿರುವದಿಲ್ಲ; ಆಕಾಶದಲ್ಲಿ ವಾಯುವಿರು ವಂತೆ ನನಗೆ ಯಾವ ಸಂಬಂಧವೂ ಇಲ್ಲದೆಯೇ ನನ್ನಲ್ಲಿ ಸರ್ವಭೂತಗಳೂ ಇರುತ್ತಿರುವವು. ಹೀಗೆ ಸ್ಥಿತಿಕಾಲದಲ್ಲಿ ನನ್ನಲ್ಲಿರುವ ಭೂತಗಳು ಕಲ್ಪಾಂತದಲ್ಲಿ ನನ್ನ ಪ್ರಕೃತಿಯಲ್ಲಿಯೇ ಲಯವಾಗುವವು; ಆ ಪ್ರಕೃತಿಯ ಮೂಲಕ ನಾನೇ ಅವುಗಳನ್ನು ಹೊಸ ಕಲ್ಪದ ಆದಿಯಲ್ಲಿ ಸೃಷ್ಟಿಮಾಡುವೆನು. ಅವಿದ್ಯಾಕಲ್ಪಿತವಾಗಿರುವ ಈ ಪ್ರಕೃತಿಯ ಮೂಲಕವಾಗಿ ನಡೆಯು ತ್ತಿರುವ ಸೃಷ್ಟಿಸ್ಥಿತಿಲಯಗಳಲ್ಲಿ ನಾನು ಉದಾಸೀನನಾಗಿರುವದರಿಂದ ನನಗೆ ಯಾವ ಕರ್ಮ ಬಂಧವೂ ಇಲ್ಲ; ಕೇವಲ ಸಾಕ್ಷಿಯಾಗಿರುವ ನನ್ನ ಸನ್ನಿಧಿಯಲ್ಲಿ ಪ್ರಕೃತಿಯು ಸ್ಥಾವರಜಂಗಮ ರೂಪವಾಗಿ ಮಾರ್ಪಡುತ್ತಿರುವದು.

೧೧—೧೩. ಇಂಥ ನಿತ್ಯಶುದ್ಧಸ್ವರೂಪನಾದ ನಾನೇ ಎಲ್ಲರ ಆತ್ಮನೆಂಬುದನ್ನು ತಿಳಿಯದೆ ಮೂಢರು ಅಸುರಸಂಪತ್ತಿನಿಂದ ಕೂಡಿ ಒಬ್ಬರನ್ನೊಬ್ಬರು ಹಿಂಸೆಮಾಡುವರು. ಮಹಾತ್ಮ ರಾದವರು ನಾನೇ ಸಕಲ ಭೂತಗಳಿಗೂ ಕಾರಣನೆಂಬುದನ್ನು ಅರಿತುಕೊಂಡು ದೈವಸಂಪತ್ತಿ ನಿಂದ ಕೂಡಿ ನನ್ನನ್ನು ಯಾವಾಗಲೂ ಭಜಿಸುತ್ತಾರೆ.

೧೪—೧೯. " ದೈವಸ್ವಭಾವದ ಜನರು ಅದ್ವಿತೀಯವಾದ ಬ್ರಹ್ಮರೂಪದಿಂದಲೂ ಸೂರ್ಯಚಂದ್ರರೇ ಮುಂತಾದ ಪೃಥಗ್ರೂಪದಿಂದಲೂ ಇಡಿಯ ವಿಶ್ವದ ರೂಪದಿಂದಲೂ ಇರು ವವನು ನಾನೇ ಎಂದು ತಿಳಿದು ಜ್ಞಾನಯಜ್ಞಗಳಿಂದ ನನ್ನನ್ನೇ ಯಾವಾಗಲೂ ಪೂಜಿಸುತ್ತಿರು ವರು."

೨೦—೨೫. " ಈ ತತ್ತ್ವವನ್ನು ಅರಿಯದೆ ಸ್ವರ್ಗಸುಖಕ್ಕಾಗಿ ವೇದೋಕ್ತಕರ್ಮವನ್ನು ಮಾಡುವವರು ಸ್ವರ್ಗವನ್ನು ಹೊಂದಿ ತಾವು ಮಾಡಿದ ಪುಣ್ಯವು ಸವೆಯಲು ಮತ್ತೆ ಮನುಷ್ಯ ಲೋಕವನ್ನು ಹೊಂದುವರು. ನಿಷ್ಕಾಮರಾಗಿ ನನ್ನನ್ನೇ ಸೇವಿಸುವವರ ಯೋಗಕ್ಷೇಮವನ್ನು ಕೂಡ ನಾನೇ ವಹಿಸುವೆನು. ಸಕಾಮಿಗಳೂ ನಿಷ್ಕಾಮಿಗಳೂ ನನ್ನನ್ನೇ ಪೂಜಿಸುತ್ತಾರೆ. ಏಕೆಂದರೆ ನಾನೇ ಸರ್ವಯಜ್ಞಗಳನ್ನೂ ಆಯಾ ದೇವತೆಗಳ ರೂಪದಿಂದ ಸ್ವೀಕರಿಸುವವನು.

ಆದರೂ ಈ ತತ್ತ್ವವನ್ನು ಸಕಾಮರು ಅರಿಯರಾದ್ದರಿಂದ ಅವರು ಪರಮಗತಿಯಾದ ನನ್ನನ್ನು ಪಡೆಯದೆ ಮರಳಿ ಸಂಸಾರದಲ್ಲಿ ಬೀಳುವರು. ಇಂದ್ರಾದಿದೇವತೆಗಳು, ಅಗ್ನಿಷ್ವಾತ್ತಾದಿ ಪಿತೃಗಳು, ಮಾತೃಗಣಾದಿಭೂತಗಳು—ಇವುಗಳನ್ನು ಸೇವಿಸುವವರು ಆಯಾ ದೇವತಾದಿಗಳನ್ನು ಪಡೆಯುವರು ; ಇದರಂತೆ ನನ್ನನ್ನೇ ಸೇವಿಸುವವರು ನನ್ನನ್ನೇ ಪಡೆಯುವರು. ಹೀಗೆ ನನ್ನನ್ನು ಸೇವಿಸುವದಕ್ಕೇನೂ ಹೆಚ್ಚಿನ ಆಯಾಸವು ಬೇಕಿಲ್ಲ ''.

೨೬—೨೯. '' ನನ್ನನ್ನು ಆರಾಧನೆಮಾಡುವದಕ್ಕೆ ಸಾಮಗ್ರಿಯೇನೂ ಹೆಚ್ಚಾಗಿ ಬೇಕಿರುವದಿಲ್ಲ. ಒಂದು ಎಲೆ, ಒಂದು ಹೂವು, ಒಂದು ಹಣ್ಣು, ಒಂದಿಷ್ಟು ನೀರು—ಇವುಗಳಲ್ಲಿ ಒಂದನ್ನು ಭಕ್ತಿಯಿಂದ ಕೊಟ್ಟರೂ ಅಷ್ಟರಿಂದಲೇ ನಾನು ತೃಪ್ತನಾಗುವೆನು. ಆದ್ದರಿಂದ ನೀನು ಸ್ವಭಾವದಿಂದ ಮಾಡುವದನ್ನೂ ತಿನ್ನುವದನ್ನೂ ನನಗೆ ಅರ್ಪಿಸು ; ನೀನು ಮಾಡುವ ಹೋಮ, ದಾನ, ತಪಸ್ಸು—ಇವುಗಳನ್ನು ನನಗೇ ಅರ್ಪಿಸು. ಇದರಿಂದ ಪಾಪಪುಣ್ಯಗಳನ್ನು ಮೀರಿ ಕರ್ಮಬಂಧಗಳಿಂದ ಮುಕ್ತನಾಗಿ ನನ್ನನ್ನೇ ಸೇರುವೆ. ನಾನು ಎಲ್ಲರಲ್ಲಿಯೂ ಸಮನಾಗಿಯೇ ವರ್ತಿಸುವೆನು ; ಆದರೆ ನನ್ನ ಭಕ್ತರು ನನ್ನಲ್ಲಿಯೇ ಸ್ವಭಾವದಿಂದ ಇದ್ದುಕೊಂಡಿರುವರು ; ನಾನು ಅವರಲ್ಲಿಯೇ ಇರುವೆನು ''.

೩೦—೩೪. '' ಎಂಥ ದುರಾಚಾರವುಳ್ಳವನಾಗಿರಲಿ, ನನ್ನನ್ನು ಅನನ್ಯಭಕ್ತಿಯಿಂದ ಭಜನೆ ಮಾಡುವದಕ್ಕೆ ಮೊದಲುಮಾಡಿದನೆಂದರೆ ಅಂಥವನು ಭಕ್ತಿಯ ಸಾಮರ್ಥ್ಯದಿಂದ ಒಳ್ಳೆಯ ನಡತೆಯನ್ನು ಹೊಂದಿ ಶಾಂತಿಯನ್ನು ಪಡೆಯುತ್ತಾನೆ. ಪಾಪನಿಮಿತ್ತದಿಂದ ಸ್ತ್ರೀವೈಶ್ಯಶೂದ್ರಜನ್ಮಗಳಲ್ಲಿ ಹುಟ್ಟಿರುವವರು ಕೂಡ ನನ್ನನ್ನು ಆಶ್ರಯಿಸಿದರೆ ಉತ್ತಮಗತಿಯನ್ನೈದುವರು ; ಇನ್ನು ಉತ್ತಮಜನ್ಮವನ್ನು ಪಡೆದು ಭಕ್ತರಾಗುವ ಬ್ರಾಹ್ಮಣರೂ ರಾಜರ್ಷಿಗಳೂ ಉತ್ತಮಗತಿಯನ್ನು ಹೊಂದುವರೆಂಬುದನ್ನು ಬೇರೆ ಹೇಳಬೇಕೆ ? ಈ ಮನುಷ್ಯಜನ್ಮವು ಅನಿತ್ಯವಾದದ್ದು, ಇದರಲ್ಲಿ ಸುಖವು ಎಳ್ಳಷ್ಟೂ ಇರುವದಿಲ್ಲ; ಆದರೆ ಇದರಲ್ಲಿ ಪರಮಪುರುಷಾರ್ಥವನ್ನು ಪಡೆಯುವ ಭಕ್ತಿಯನ್ನು ಹೊಂದಬಹುದಾಗಿದೆ. ಇಂಥ ದುರ್ಲಭವಾದ ಮನುಷ್ಯಜನ್ಮದಲ್ಲಿ ಕ್ಷತ್ರಿಯನಾಗಿ ಹುಟ್ಟಿರುವ ನೀನು ನನ್ನಲ್ಲಿಯೇ ಮನಸ್ಸಿಟ್ಟು ನನ್ನ ಭಕ್ತನಾಗಿ, ನನ್ನನ್ನೇ ಪೂಜಿಸುತ್ತಲೂ ನಮಸ್ಕರಿಸುತ್ತಲೂ ಇರು. ಹೀಗಿದ್ದರೆ ನನ್ನನ್ನೇ ಬಂದು ಸೇರುವೆ''.



# ಹತ್ತನೆಯ ಅಧ್ಯಾಯ

## (ವಿಭೂತಿಯೋಗ)

## ಪರಮಾತ್ಮನ ವಿಭೂತಿ ಮತ್ತು ಯೋಗ

(ಭಾಷ್ಯ)

೫೮. ಸಪ್ತಮೇ ಅಧ್ಯಾಯೇ ಭಗವತಃ ತತ್ತ್ವಂ ವಿಭೂತಯಶ್ಚ ಪ್ರದರ್ಶಿತಾಃ। ನವಮೇ[1] ಚ । ಅಥ ಇದಾನೀಂ ಯೇಷು ಯೇಷು ಭಾವೇಷು ಚಿನ್ತ್ಯಃ ಭಗವಾನ್ ತೇ ತೇ ಭಾವಾ ವಕ್ತವ್ಯಾಃ । ತತ್ತ್ವಂ ಚ ಭಗವತೋ ವಕ್ತವ್ಯಮ್ ಉಕ್ತಮಪಿ । ದುರ್ವಿಜ್ಞೇಯತ್ವಾತ್ । ಇತ್ಯತಃ ಶ್ರೀ ಭಗವಾನ್ ಉವಾಚ –

(ಭಾಷ್ಯಾರ್ಥ)

ಏಳನೆಯ ಅಧ್ಯಾಯದಲ್ಲಿ ಭಗವಂತನ ತತ್ತ್ವವನ್ನೂ ವಿಭೂತಿಗಳನ್ನೂ ತಿಳಿಸಿದ್ದಾಗಿದೆ; ಒಂಬತ್ತನೆಯ (ಅಧ್ಯಾಯ)ದಲ್ಲಿಯೂ ಹೇಳಿದ್ದಾಗಿದೆ. ಇನ್ನು ಈಗ ಯಾವ ಯಾವ ಭಾವಗಳಲ್ಲಿ ಭಗವಂತನನ್ನು ಧ್ಯಾನಮಾಡತಕ್ಕದ್ದೋ ಆಯಾ ಭಾವಗಳನ್ನು ಹೇಳಬೇಕಾಗಿದೆ. ಭಗವಂತನ ತತ್ತ್ವವನ್ನೂ ಆಗಲೇ ಹೇಳಿದ್ದರೂ (ಅದು) ತಿಳಿದುಕೊಳ್ಳುವದಕ್ಕೆ ಕಷ್ಟವಾದದ್ದಾದ್ದರಿಂದ (ಮತ್ತೆ) ಹೇಳಬೇಕಾಗಿದೆ. ಇದಕ್ಕಾಗಿ ಶ್ರೀ ಭಗವಂತನು ಇಂತೆಂದನು :—

**ಶ್ರೀ ಭಗವಾನ್ ಉವಾಚ—**

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್[2] ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ॥೧॥**

೧. ಶ್ರೀ ಭಗವಂತನಿಂತೆಂದನು :—ಎಲೈ ಮಹಾಬಾಹುವೆ, ನನ್ನ ಪರಮವಚನವನ್ನು ಮತ್ತೂ (ಒಮ್ಮೆ) ಕೇಳು. ಇದನ್ನು ನಾನು ಸಂತೋಷಪಡುವ ನಿನಗೆ ಹಿತಕಾಮನೆಯಿಂದ ಹೇಳುವೆನು.

---

1. 'ಅಷ್ಟಮೇ ನವಮೇ ಚ' ಎಂಬ ಮು॥ ಪಾಠದಲ್ಲಿ 'ಅಷ್ಟಮೇ' ಹೆಚ್ಚು.
2. ಇದು ಮು॥ ಮೈ॥ ಗಳಲ್ಲಿಲ್ಲ; ಮು॥ ದಲ್ಲಿ 'ಯತ್' ಎಂಬುದೂ ಇಲ್ಲ.

(ಭಾಷ್ಯ)

೫೯. ಭೂಯ ಏವ ಭೂಯಃ ಪುನಃ ಹೇ ಮಹಾಬಾಹೋ ಶೃಣು ಮೇ ಮದೀಯಂ ಪರಮಂ ಪ್ರಕೃಷ್ಟಂ ನಿರತಿಶಯವಸ್ತುನಃ ಪ್ರಕಾಶಕಂ ವಚಃ ವಾಕ್ಯಂ[1] ಯತ್ ಪರಮಂ ತೇ ತುಭ್ಯಂ ಪ್ರೀಯಮಾಣಾಯ ಮದ್ವಚನಾತ್ ಪ್ರೀಯಸೇ ತ್ವಮ್ ಅತೀವ ಅಮೃತಮಿವ ಪಿಬನ್ ತತಃ ವಕ್ಷ್ಯಾಮಿ ಹಿತಕಾಮ್ಯಯಾ ಹಿತೇಚ್ಛಯಾ ||

(ಭಾಷ್ಯಾರ್ಥ)

ಮತ್ತೂ (ಒಮ್ಮೆ), ಇನ್ನೂ (ಒಂದು ಸಲ), ಎಲೈ ಮಹಾಬಾಹುವೆ, ನನ್ನ ಸಂಬಂಧವಾದ ಪರಮವಾದ ಹೆಚ್ಚಿನ ಮಿಗಿಲಿಲ್ಲದ (ಆತ್ಮ) ವಸ್ತುವನ್ನು ತಿಳಿಸುವ ವಚನವನ್ನು ವಾಕ್ಯವನ್ನು ಕೇಳು. ಆ ಪರಮ (ವಾಕ್ಯವನ್ನು) ಸಂತೋಷಪಡುವ ನೀನು ನನ್ನ ಮಾತನ್ನು ಕೇಳಿದರೆ ಅಮೃತವನ್ನು ಕುಡಿಯುತ್ತಿರುವವನಂತೆ ಬಹಳವಾಗಿ ನಲಿಯುತ್ತೀಯೆ—ಅದರಿಂದ (ನಿನಗೆ) ಹಿತಕಾಮನೆಯಿಂದ ಒಳ್ಳೆಯದಾಗ (ಲೆಂಬ) ಇಚ್ಛೆಯಿಂದ ಹೇಳುವೆನು.

(ಭಾಷ್ಯ)

೬೦. ಕಿಮರ್ಥಮ್ ಅಹಂ ವಕ್ಷ್ಯಾಮಿ ಇತಿ? ಅತ ಆಹ—

(ಭಾಷ್ಯಾರ್ಥ)

ನಾನೇ ಹೇಳುತ್ತಿರುವೆನೆಂಬುದೇಕೆ? ಎಂದರೆ (ಭಗವಂತನು) ಹೇಳುತ್ತಾನೆ:—

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ || ೨ ||**

೨. ನನ್ನ ಪ್ರಭವವನ್ನು ಸುರಗಣಗಳಾಗಲಿ ಮಹರ್ಷಿಗಳಾಗಲಿ ಅರಿಯರು. ಏಕೆಂದರೆ ದೇವತೆಗಳಿಗೂ ಮಹರ್ಷಿಗಳಿಗೂ ಎಲ್ಲಾ ರೀತಿಯಿಂದಲೂ ನಾನೇ ಆದಿಯಾಗಿರುವೆನು.

(ಭಾಷ್ಯ)

೬೧. ನ ಮೇ ವಿದುಃ ನ ಜಾನನ್ತಿ ಸುರಗಣಾಃ ಬ್ರಹ್ಮಾದಯಃ[2] । ಕಿಂ ತೇ ನ ವಿದುಃ? ಮಮ ಪ್ರಭವಂ ಪ್ರಭಾವಂ ಪ್ರಭುಶಕ್ತ್ಯತಿಶಯಮ್ । ಅಥವಾ ಪ್ರಭವಂ

---

1. ಮ|| ಮೈ|| ಗಳಲ್ಲಿಲ್ಲ.
2. 'ಇನ್ದ್ರಾದಯಃ' ಮ|| ಮೈ|| ನಲ್ಲಿ ಈ ಮಾತೇ ಇಲ್ಲ.

ಪ್ರಭವನಮ್ ಉತ್ಪತ್ತಿಮ್[1] । ನಾಪಿ[2] ಮಹರ್ಷಯಃ ಭೃಗ್ವಾದಯಃ ವಿದುಃ । ಕಸ್ಮಾತ್ ತೇ ನ ವಿದುಃ ಇತಿ? ಉಚ್ಯತೇ । ಅಹಮ್ ಆದಿಃ ಕಾರಣಂ ಹಿ ಯಸ್ಮಾತ್ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ಸರ್ವಪ್ರಕಾರೈಃ ॥

(ಭಾಷ್ಯಾರ್ಥ)

ಬ್ರಹ್ಮನೇ ಮೊದಲಾದ ದೇವತೆಗಳ ಗಣಗಳು ನನ್ನದನ್ನು ಅರಿಯರು. ನನ್ನ ಯಾವದನ್ನು ಅರಿಯರು? ಎಂದರೆ ನನ್ನ ಪ್ರಭವವನ್ನು ಎಂದರೆ ಪ್ರಭಾವವನ್ನು, ಪ್ರಭುಶಕ್ತಿಯ ಮೇಲ್ಮೆಯನ್ನು; ಅಥವಾ ಪ್ರಭವವನ್ನು ಎಂದರೆ ಆಗೋಣವನ್ನು ಉತ್ಪತ್ತಿಯನ್ನು (ದೇವಗಣಗಳು ಅರಿಯವು). **ಭೃಗು** ಮೊದಲಾದ ಮಹರ್ಷಿಗಳೂ ಅರಿಯರು. ಅವರು ಏಕೆ ಅರಿಯರು? ಎಂದರೆ (ಭಗವಂತನು) ಹೇಳುತ್ತಾನೆ: 'ಹಿ' ಏಕೆಂದರೆ ದೇವತೆಗಳಿಗೂ ಮಹರ್ಷಿಗಳಿಗೂ ಎಲ್ಲಾ ರೀತಿಯಿಂದಲೂ ಎಂದರೆ ಸರ್ವ ಪ್ರಕಾರಗಳಿಂದಲೂ ನಾನೇ ಆದಿಯು ಕಾರಣವು.

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩ ॥**

೩. ಯಾವನು ನನ್ನನ್ನು ಅಜನೆಂದೂ ಅನಾದಿಯೆಂದೂ ಲೋಕ ಮಹೇಶ್ವರನೆಂದೂ ತಿಳಿಯುತ್ತಾನೋ ಆತನು ಮನುಷ್ಯರಲ್ಲಿ ಸಮ್ಮೂಢನಲ್ಲದವನಾಗಿ ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

(ಭಾಷ್ಯ)

೬೨. ಕಿಂಚ ಯೋ ಮಾಮ್ ಅಜಮ್ ಅನಾದಿಂ ಚ ಯಸ್ಮಾತ್ ಅಹಮ್ ಆದಿಃ ದೇವಾನಾಂ ಮಹರ್ಷೀಣಾಂ ಚ ನ ಮಮ ಅನ್ಯಃ ಆದಿಃ ವಿದ್ಯತೇ ಅತಃ ಅಹಮ್ ಅಜಃ, ಅನಾದಿಶ್ಚ । ಅನಾದಿತ್ವಮ್ ಅಜತ್ವೇ ಹೇತುಃ । ತಂ ಮಾಮ್ ಅಜಮ್ ಅನಾದಿಂ ಚ ಯಃ ವೇತ್ತಿ ವಿಜಾನಾತಿ ಲೋಕಮಹೇಶ್ವರಂ ಲೋಕಾನಾಂ ಮಹಾನ್ತಮ್ ಈಶ್ವರಂ ತುರೀಯಮ್ ಅಜ್ಞಾನತತ್ಕಾರ್ಯವರ್ಜಿತಮ್[3] ಅಸಂಮೂಢಃ ಸಂಮೋಹವರ್ಜಿತಃ ಸಃ ಮರ್ತ್ಯೇಷು, ಮನುಷ್ಯೇಷು ಸರ್ವಪಾಪೈಃ ಸರ್ವೈಃ ಪಾಪೈಃ ಮತಿಪೂರ್ವಾಮತಿಪೂರ್ವಕೃತೈಃ ಪ್ರಮುಚ್ಯತೇ ಪ್ರಮೋಕ್ಷ್ಯತೇ ॥

---

1. 'ಪ್ರಭವಮ್ ಉತ್ಪತ್ತಿಂ ವಾ' ಮ॥ 'ಉತ್ಪತ್ತಿಂ' ವಾ॥ ಮೈ॥
2. 'ನ' ಮ॥ ಮೈ॥
3. "ತುರೀಯಮ್........ವರ್ಜಿತಮ್" ಈ ಮಾತುಗಳು ಮ॥ ಮೈ॥ ಗಳಲ್ಲಿಲ್ಲ.

(ಭಾಷ್ಯಾರ್ಥ)

ಮತ್ತು ಯಾವನು ನನ್ನನ್ನು ಅಜನೆಂದೂ ಅನಾದಿಯೆಂದೂ–ನಾನೇ ದೇವತೆಗಳಿಗೂ ಮಹರ್ಷಿಗಳಿಗೂ ಆದಿಯಾಗಿದ್ದು ನನಗೆ ಮತ್ತೊಬ್ಬನು ಆದಿ ಇಲ್ಲವಷ್ಟೆ; ಆದ್ದರಿಂದ ನಾನು ಜನ್ಮರಹಿತನು, ಮತ್ತು ಅನಾದಿಯು. (ನಾನು) ಅನಾದಿಯಾಗಿರುವೆನೆಂಬುದು ಅಜನಾಗಿರುವೆನೆಂಬುದಕ್ಕೆ ಹೇತು. ಹೀಗೆ ಅಜನೂ ಅನಾದಿಯೂ ಆಗಿರುವ ನನ್ನನ್ನು ಲೋಕಮಹೇಶ್ವರನೆಂದು ಲೋಕಗಳಿಗೆ ದೊಡ್ಡ ಈಶ್ವರನೆಂದು, ಅಜ್ಞಾನವಾಗಲಿ ಅದರ ಕಾರ್ಯವಾಗಲಿ ಇಲ್ಲದ **ತುರೀಯ**ನೆಂದು, ಅರಿತುಕೊಳ್ಳುತ್ತಾನೋ ಮನವರಿಕೆಮಾಡಿಕೊಳ್ಳುತ್ತಾನೋ ಅವನು ಮನುಷ್ಯರಲ್ಲೆಲ್ಲ ಅಸಂಮೂಢನಾದ ಸಂಮೋಹರಹಿತನಾದ ಅವನು ಸಕಲ ಪಾಪಗಳಿಂದಲೂ ತಿಳಿದು ಮಾಡಿದ ಮತ್ತು ತಿಳಿಯದೆ ಮಾಡಿದ (ಸಕಲ ಪಾಪಗಳಿಂದಲೂ) ವಿಮುಕ್ತನಾಗುತ್ತಾನೆ, ಬಿಡುಗಡೆಯನ್ನು ಹೊಂದುತ್ತಾನೆ.

(ಭಾಷ್ಯ)

೬೩. ಇತಶ್ಚ ಅಹಂ ಮಹೇಶ್ವರೋ ಲೋಕಾನಾಮ್—

(ಭಾಷ್ಯಾರ್ಥ)

ಈ ಕಾರಣದಿಂದಲೂ ನಾನು ಲೋಕಗಳಿಗೆ ಮಹೇಶ್ವರನು :—

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥೪॥**
**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥**

೪-೫. ಬುದ್ಧಿಯು, ಜ್ಞಾನವು, ಸಂಮೋಹವಿಲ್ಲದಿರುವದು, ಕ್ಷಮೆ, ಸತ್ಯ, ದಮ, ಶಮ, ಸುಖ, ದುಃಖ, ಭವ, ಅಭಾವ, ಭಯ, ಅಭಯ, ಅಹಿಂಸೆ, ಸಮತೆ, ತುಷ್ಟಿ, ತಪಸ್ಸು, ದಾನ, ಯಶಸ್ಸು, ಅಯಶಸ್ಸು–(ಈ) ಬೇರೆಬೇರೆಯ ಪ್ರಕಾರದ ಭಾವಗಳು ಭೂತಗಳಿಗೆ ನನ್ನಿಂದಲೇ ಆಗುವವು.

(ಭಾಷ್ಯ)

೬೪. ಬುದ್ಧಿಃ ಅನ್ತಃಕರಣಸ್ಯ ಸೂಕ್ಷ್ಮಾದ್ಯರ್ಥಾವಬೋಧನಸಾಮರ್ಥ್ಯಮ್। ತದ್ವನ್ತಂ ಬುದ್ಧಿಮಾನ್ ಇತಿ ಹಿ ವದನ್ತಿ । ಜ್ಞಾನಮ್ ಆತ್ಮಾದಿಪದಾರ್ಥಾನಾಮ್ **ಅವಬೋಧಃ** । ಅಸಂಮೋಹಃ ಪ್ರತ್ಯುತ್ಪನ್ನೇಷು ಬೋದ್ಧವ್ಯೇಷು ವಿವೇಕಪೂರ್ವಿಕಾ

ಪ್ರವೃತ್ತಿಃ[1] । ಕ್ಷಮಾ ಆಕ್ರುಷ್ಟಸ್ಯ ತಾಡಿತಸ್ಯ ವಾ ಅವಿಕೃತಚಿತ್ತತಾ । ಸತ್ಯಂ ಯಥಾದೃಷ್ಟಸ್ಯ ಯಥಾಶ್ರುತಸ್ಯ ಚ[2] ಆತ್ಮಾನುಭವಸ್ಯ ಪರಬುದ್ಧಿಸಙ್ಕ್ರಾನ್ತಯೇ ತಥೈವ ಉಚ್ಚಾರ್ಯಮಾಣಾ ವಾಕ್ ಸತ್ಯಮ್ ಉಚ್ಯತೇ । ದಮಃ ಬಾಹ್ಯೇನ್ದ್ರಿಯೋಪಶಮಃ । ಶಮಃ ಅನ್ತಃಕರಣಸ್ಯ ಉಪಶಮಃ । ಸುಖಮ್ ಆಹ್ಲಾದಃ । ದುಃಖಂ ಸನ್ತಾಪಃ । ಭವಃ ಉದ್ಭವಃ ಅಭಾವಃ ತದ್ವಿಪರ್ಯಯಃ । ಭಯಂ ಚ ತ್ರಾಸಃ ಅಭಯಮೇವ ಚ ತದ್ವಿಪರೀತಮ್[3] ॥

(ಭಾಷ್ಯಾರ್ಥ)

ಬುದ್ಧಿ ಎಂದರೆ ಅಂತಃಕರಣಕ್ಕಿರುವ ಸೂಕ್ಷ್ಮ (ವಸ್ತು)ವೇ ಮುಂತಾದ ಪದಾರ್ಥಗಳನ್ನು ಅರಿತುಕೊಳ್ಳುವ ಸಾಮರ್ಥ್ಯವು. ಆ (ಬುದ್ಧಿ)ಯಿರುವವನನ್ನೇ ಬುದ್ಧಿವಂತನು'[4] ಎಂದು ಕರೆಯುತ್ತಾರೆ. 'ಜ್ಞಾನ'ವೆಂದರೆ ಆತ್ಮನೇ ಮೊದಲಾದ ಪದಾರ್ಥಗಳನ್ನು ಅರಿತುಕೊಳ್ಳುವದು[5]. ಅಸಂಮೋಹ ಎಂದರೆ ತಿಳಿಯಬೇಕಾಗಿ ಎದುರಿಗೆ ಬಂದಿರುವ (ವಿಷಯ)ಗಳಲ್ಲಿ ವಿವೇಕಪೂರ್ವಕವಾಗಿ ಪ್ರವರ್ತಿಸುವದು. ಕ್ಷಮೆ ಎಂದರೆ (ಮತ್ತೊಬ್ಬರು ತನ್ನನ್ನು) ಬಯ್ದರೆ ಅಥವಾ ಹೊಡೆದರೆ ಚಿತ್ತದಲ್ಲಿ ಏರುಪೇರಿಲ್ಲದೆ ಇರುವದು. ಸತ್ಯವು ಕಂಡದ್ದನ್ನು ಕಂಡಂತೆಯೂ ಕೇಳಿದ್ದನ್ನು ಕೇಳಿದಂತೆಯೂ ತನ್ನ ಅನುಭವವು ಮತ್ತೊಬ್ಬರ ಬುದ್ಧಿಗೆ ಹಿಡಿಯಲೆಂದು ಹಾಗೆಯೇ (ಎಂದರೆ ಕಂಡಂತೆಯೇ, ಕೇಳಿದಂತೆಯೇ) ಹೇಳುವ ವಾಕ್ಯವನ್ನು ಸತ್ಯವೆನ್ನುವರು. ದಮ ಎಂದರೆ ಹೊರಗಿನ ಇಂದ್ರಿಯಗಳನ್ನು ಬಿಗಿಹಿಡಿಯುವದು. ಶಮವೆಂದರೆ ಒಳಗಿನ ಕರಣ(ವಾದ ಮನಸ್ಸನ್ನು) ಬಿಗಿಹಿಡಿಯುವದು. ಸುಖ ಎಂದರೆ ಹಿಗ್ಗುವದು; ದುಃಖ ಎಂದರೆ ಮನಸ್ಸಿನಲ್ಲಿ ಬೇಗುದಿಗೊಳ್ಳುವದು. ಭವ ಎಂದರೆ ಹುಟ್ಟುವದು; ಅಭಾವ ಎಂದರೆ ಅದಕ್ಕೆ ವಿರುದ್ಧವಾದದ್ದು.

(ಭಾಷ್ಯ)

೬೫. ಅಹಿಂಸಾ ಅಪೀಡಾ ಪ್ರಾಣಿನಾಮ್ । ಸಮತಾ ಸಮಚಿತ್ತತಾ । ತುಷ್ಟಿಃ ಸನ್ತೋಷಃ ಪರ್ಯಾಪ್ತಬುದ್ಧಿಃ ಲಾಭೇಷು । ತಪಃ ಇನ್ದ್ರಿಯಸಂಯಮಪೂರ್ವಕಂ ಶರೀರಪೀಡನಮ್ । ದಾನಂ ಯಥಾಶಕ್ತಿಸಂವಿಭಾಗಃ । ಯಶಃ ಧರ್ಮನಿಮಿತ್ತಾ

1. 'ಮತಿಪ್ರವೃತ್ತಿಃ' ಮು॥
2. 'ವಾ' ॥ ಮು॥ ಮೈ॥
3. 'ತದಭಾವಃ' ಮು॥ ಮೈ॥
4. ಬುದ್ಧಿ ಎಂದರೆ ಅಂತಃಕರಣವಲ್ಲ, ವಸ್ತುವನ್ನು ನಿಶ್ಚಯಿಸುವ ಸಾಮರ್ಥ್ಯ.
5. ಇದು ತಿಳಿವಳಿಕೆಯೇ, ಬರಿಯ ಸಾಮರ್ಥ್ಯವಲ್ಲ.

ಕೀರ್ತಿಃ । ಅಯಶಸ್ತು ಅಧರ್ಮನಿಮಿತ್ತಾ ಅಕೀರ್ತಿಃ । ಭವನ್ತಿ ಭಾವಾ ಯಥೋಕ್ತಾ ಬುದ್ಧ್ಯಾದಯಃ ಭೂತಾನಾಂ ಪ್ರಾಣಿನಾಂ ಮತ್ತ ಏವ ಈಶ್ವರಾತ್ ಪೃಥಗ್ವಿಧಾಃ ನಾನಾವಿಧಾಃ ಸ್ವಕರ್ಮಾನುರೂಪೇಣ ॥

(ಭಾಷ್ಯಾರ್ಥ)

ಅಹಿಂಸೆ ಎಂದರೆ ಪ್ರಾಣಿಗಳನ್ನು ಕೋಟಲೆಗೊಳಿಸದೆ ಇರುವದು, ಸಮತೆ ಎಂದರೆ ಚಿತ್ತವನ್ನು ಏರುಪೇರಿಲ್ಲದೆ ಇಟ್ಟುಕೊಂಡಿರುವದು. ತುಷ್ಟಿ ಎಂದರೆ ತೃಪ್ತಿ, ಏನಾದರೂ ಸಿಕ್ಕಿದರೆ ಇಷ್ಟೇ ಸಾಕೆಂಬ ಬುದ್ಧಿ. ತಪಸ್ಸು ಎಂದರೆ ಇಂದ್ರಿಯಗಳನ್ನು ಬಿಗಿಹಿಡಿಯುವ ಮೂಲಕ ಶರೀರವನ್ನು ದಂಡಿಸುವದು. ದಾನ ಎಂದರೆ ತನ್ನ ಶಕ್ತಿಯಿದ್ದಮಟ್ಟಿಗೆ (ತನ್ನ ವಸ್ತುಗಳನ್ನು ಮತ್ತೊಬ್ಬರಿಗೆ)ಹಂಚುವದು. ಯಶಸ್ಸು ಎಂದರೆ ಧರ್ಮದ ನಿಮಿತ್ತದಿಂದ (ಬರುವ) ಕೀರ್ತಿ; ಅಯಶಸ್ಸು ಎಂದರೆ ಅಧರ್ಮದ ನಿಮಿತ್ತದಿಂದ (ಬರುವ) ಕೆಟ್ಟ ಹೆಸರು.

ಮೇಲೆ ಹೇಳಿದ ಬುದ್ಧಿಯೇ ಮುಂತಾದ ಬೇರೆಬೇರೆಯ ಪ್ರಕಾರದ ಭಾವಗಳು ಭೂತಗಳಿಗೆ ಎಂದರೆ ಪ್ರಾಣಿಗಳಿಗೆ ನನ್ನಿಂದಲೇ ಈಶ್ವರನಿಂದಲೇ ಅವರವರ ಕರ್ಮಕ್ಕೆ ತಕ್ಕಂತೆ ಆಗುವವು.

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥೬॥**

೬. ಹಿಂದಿನ ಏಳು ಮಹರ್ಷಿಗಳೂ ಮತ್ತು ನಾಲ್ಕು ಜನ ಮನುಗಳೂ ಮದ್ಭಾವರಾಗಿ ಮಾನಸ(ಪುತ್ರ)ರಾಗಿ ಉಂಟಾದರು. ಲೋಕದಲ್ಲಿರುವ ಈ ಪ್ರಜೆಗಳು ಅವರಿಗೆ (ಸೇರಿದವರೇ).

(ಭಾಷ್ಯ)

೬೬. ಕಿಂಚ ಮಹರ್ಷಯಃ ಸಪ್ತ ಭೃಗ್ವಾದಯಃ ಪೂರ್ವೇ ಅತೀತಕಾಲಸಂಬನ್ಧಿನಃ ಚತ್ವಾರಃ ಮನವಃ ತಥಾ ಸಾವರ್ಣಾ ಇತಿ ಪ್ರಸಿದ್ಧಾಃ। ತೇ ಚ ಮದ್ಭಾವಾ ಮದ್ಗತಭಾವನಾಃ ವೈಷ್ಣವೇನ ಸಾಮರ್ಥ್ಯೇನ ಉಪೇತಾಃ ಮಾನಸಾ ಮನಸೈವ ಉತ್ಪಾದಿತಾಃ ಮಯಾ ಜಾತಾ ಉತ್ಪನ್ನಾಃ। ಯೇಷಾಂ ಮನೂನಾಂ ಮಹರ್ಷೀಣಾಂ ಚ ಸೃಷ್ಟಿಃ[1] ಲೋಕೇ ಇಮಾಃ ಸ್ಥಾವರಜಙ್ಗಮಲಕ್ಷಣಾಃ ಪ್ರಜಾಃ ॥

---

1. ' ಸೃಷ್ಟಿಜಾಃ ' ಮ॥ ವ್ಯೆ॥

(ಭಾಷ್ಯಾರ್ಥ)

ಮಹರ್ಷಿಗಳು ಏಳು ಜನ, ಭೃಗುವೇ ಮೊದಲಾದವರು[1]; ಇವರು ಹಿಂದಿನವರು ಹಿಂದಿನ ಕಾಲಕ್ಕೆ ಸಂಬಂಧಪಟ್ಟವರು. ಮತ್ತು ನಾಲ್ಕು ಜನ ಮನುಗಳು, **ಸಾವರ್ಣರು**[2] ಎಂದು ಪ್ರಸಿದ್ಧರಾಗಿರುವವರು. **ಇವರು** ಮದ್ಭಾವರಾದವರು ಎಂದರೆ ನನ್ನಲ್ಲಿಯೇ ಇಟ್ಟ ಭಾವನೆಯುಳ್ಳವರು, ವೈಷ್ಣವಸಾಮರ್ಥ್ಯದಿಂದ ಕೂಡಿದವರು; ಮಾನಸರು ಎಂದರೆ ಮನಸ್ಸಿನಿಂದಲೇ ಉತ್ಪಾದಿತರಾಗಿ ಉಂಟಾದವರು, ಹುಟ್ಟಿದವರು. (ಈ) ಲೋಕದಲ್ಲಿರುವ ಸ್ಥಾವರಜಂಗಮರೂಪರಾದ ಪ್ರಜೆಗಳೆಲ್ಲರೂ (ಪ್ರಾಣಿಗಳೆಲ್ಲವೂ) ಈ ಮನುಗಳ ಮತ್ತು ಮಹರ್ಷಿಗಳ ಸೃಷ್ಟಿಯೇ.

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಮ್ಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥**

೭. ಈ ನನ್ನ ವಿಭೂತಿಯನ್ನೂ ಯೋಗವನ್ನೂ ಯಾವನು ತತ್ತ್ವತಃ ತಿಳಿದುಕೊಳ್ಳುವನೋ ಅವನು ಅವಿಕಂಪವಾದ ಯೋಗದಿಂದ ಕೂಡಿಸಲ್ಪಡುವನು. ಇದರಲ್ಲಿ ಸಂಶಯವಿಲ್ಲ.

(ಭಾಷ್ಯ)

೬೭. ಏತಾಂ ಯಥೋಕ್ತಾಂ ವಿಭೂತಿಂ ವಿಸ್ತಾರಂ ಯೋಗಂ ಚ ಯುಕ್ತಿಂ ಚ ಆತ್ಮನಃ ಘಟನಮ್ । ಅಥವಾ ಯೋಗೈಶ್ವರ್ಯಸಾಮರ್ಥ್ಯಂ ಸರ್ವಜ್ಞತ್ವಂ ಯೋಗಜಂ ಯೋಗಃ ಉಚ್ಯತೇ । ಮಮ ಮದೀಯಂ ಯೋಗಂ ಯೋ ವೇತ್ತಿ ತತ್ತ್ವತಃ ತತ್ತ್ವೇನ ಯಥಾವತ್ ಇತ್ಯೇತತ್ । ಸಃ ಅವಿಕಮ್ಪೇನ ಅಪ್ರಚಲಿತೇನ

---

1. ಭೃಗು, ನಭ, ವಿವಸ್ವಂತ, ಸುಧಾಮಾ, ವಿರಜಾಃ, ಅತಿನಾಮಾ, ಸಹಿಷ್ಣು—ಇವರು ಹಿಂದಿನ ಚಾಕ್ಷುಷಮನ್ವಂತರದವರಾದ್ದರಿಂದ 'ಪೂರ್ವೇ' ಎಂಬ ವಿಶೇಷಣವನ್ನು ಇವರಿಗೆ ಉಪಯೋಗಿಸಿದೆ ಎಂದು ಕೆಲವರು. ಭೃಗು, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ—ಎಂಬವರೇ ಈ ಮಹರ್ಷಿಗಳೆಂದು ಮತ್ತೆ ಕೆಲವರು. **ನಾರಾಯಣೀಯದಲ್ಲಿ** ಇವರನ್ನು ಪ್ರವೃತ್ತಿಧರ್ಮಕ್ಕೆ ಕಾರಣರಾದ ಋಷಿಗಳೆಂದಿರುವದರಿಂದ ಈ ಪಕ್ಷವೇ ಯುಕ್ತವೆಂದು ತೋರುತ್ತದೆ. ಈ ಅಧ್ಯಾಯದ ೨೫ನೆಯ ಶ್ಲೋಕವನ್ನು ನೋಡಿ.

2. ಸ್ವಾಯಂಭುವ, ಸ್ವಾರೋಚಿಷ, ಔತ್ತಮಿ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ—ಎಂಬ ೧೪ ಮನುಗಳಲ್ಲಿ ಮುಂದೆ ಬರುವ ಸಾವರ್ಣಿಗಳೆಂಬ ನಾಲ್ಕೇ ಜನರನ್ನು ಏಕೆ ಆರಿಸಿಕೊಂಡಿದೆ ಎಂಬುದು ತಿಳಿಯದು.

ಯೋಗೇನ ಸಮ್ಯಗ್ದರ್ಶನಸ್ಥೈರ್ಯಲಕ್ಷಣೇನ ಯುಜ್ಯತೇ ಸಂಬಧ್ಯತೇ । ನಾತ್ರ-ಸಂಶಯಃ ನಾಸ್ಮಿನ್ ಅರ್ಥೇ ಸಂಶಯಃ ಅಸ್ತಿ ॥

(ಭಾಷ್ಯಾರ್ಥ)

ಈ ಮೇಲೆ ಹೇಳಿದ ವಿಭೂತಿಯನ್ನೂ (ನನ್ನ ಮಾಹಾತ್ಮ್ಯದ) ವಿಸ್ತಾರವನ್ನೂ ಮತ್ತು **ಯೋಗ**ವನ್ನೂ ಎಂದರೆ ನಾನು ಮಾಡಿರುವ ಯೋಜನೆಯನ್ನೂ ಘಟನೆಯನ್ನೂ (ಎಂದರ್ಥ). ಅಥವಾ ಯೋಗದಿಂದ ಉಂಟಾಗಿರುವ ಯೋಗೈಶ್ವರ್ಯ ಸಾಮರ್ಥ್ಯವಾದ ಸರ್ವಜ್ಞತ್ವವನ್ನೇ (ಇಲ್ಲಿ) ಯೋಗವೆಂದು ಕರೆದಿದೆ (ಎಂದಾದರೂ ಅರ್ಥಮಾಡಬಹುದು). ನನ್ನ (ಈ) ಯೋಗವನ್ನು ಯಾವನು ತತ್ತ್ವತಃ ಎಂದರೆ ತತ್ತ್ವದಿಂದ ಎಂದರೆ ಇದ್ದದ್ದು ಇದ್ದಂತೆ[1] ತಿಳಿದುಕೊಳ್ಳುವನೋ ಎಂದರ್ಥ. ಅವನು ಅವಿಕಂಪವಾದ ಸ್ವಲ್ಪವೂ ಅಲುಗಾಡದ ಸಮ್ಯಗ್ದರ್ಶನವು ನೆಲೆನಿಲ್ಲುವದೆಂಬ **ಯೋಗ**ದಿಂದ ಕೂಡಿಸಲ್ಪಡುವನು, (ಅದರ) ಸಂಬಂಧವನ್ನು (ಪಡೆಯುವನು. ಅವನು ಇಂಥ ಯೋಗವನ್ನು ಪಡೆಯುವನೆಂಬ) ಇದರಲ್ಲಿ ಸಂಶಯವು ಈ ವಿಷಯದಲ್ಲಿ ಸಂದೇಹವು ಇರುವದಿಲ್ಲ.

## ವಿಭೂತಿಗಳನ್ನರಿತವನಿಗೆ ದೊರೆಯುವ ಯೋಗ

(ಭಾಷ್ಯ)

೭೮. ಕೀದೃಶೇನ ಅವಿಕಂಪೇನ ಯೋಗೇನ ಯುಜ್ಯತೇ ಇತಿ ? ಉಚ್ಯತೇ –

(ಭಾಷ್ಯಾರ್ಥ)

ಎಂಥ ಅಲುಗಾಡದ ಯೋಗದಿಂದೊಡಗೂಡುವನು ? ಎಂದರೆ (ಭಗವಂತನು) ಹೇಳುತ್ತಾನೆ :—

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥**

೮. ನಾನು ಎಲ್ಲಕ್ಕೂ ಪ್ರಭವನು, ನನ್ನಿಂದ ಎಲ್ಲವೂ ಪ್ರವರ್ತಿಸುತ್ತಿರುವದು. ಹೀಗೆಂದು ತಿಳಿದು ಬುಧರು ಭಾವಸಮನ್ವಿತರಾಗಿ ನನ್ನನ್ನು ಭಜಿಸುವರು.

---

1. ಪರಮಾತ್ಮನೇ ಸಕಲಜಗದಾದಿ, ಸರ್ವಜ್ಞನು ; ಮಹರ್ಷಿಗಳು, ದೇವತೆಗಳು, ಮನುಗಳು. ಇವರು ಆತನಿಂದಲೇ ತಮ್ಮ ಐಶ್ವರ್ಯವನ್ನೂ ಜ್ಞಾನವನ್ನೂ ಹೊಂದಿರುವರು ಎಂದು.

(ಭಾಷ್ಯ)

೬೯. ಅಹಂ ಪರಂ ಬ್ರಹ್ಮ ವಾಸುದೇವಾಖ್ಯಂ ಸರ್ವಸ್ಯ ಜಗತಃ ಪ್ರಭವಃ ಉತ್ಪತ್ತಿಃ। ಮತ್ತ ಏವ ಸ್ಥಿತಿನಾಶಕ್ರಿಯಾಫಲೋಪಭೋಗಲಕ್ಷಣಂ ವಿಕ್ರಿಯಾರೂಪಂ ಸರ್ವಂ ಜಗತ್ ಪ್ರವರ್ತತೇ। ಇತಿ ಏವಂ ಮತ್ವಾ ಭಜನ್ತೇ ಸೇವನ್ತೇ ಮಾಂ ಬುಧಾಃ ಅವಗತಪರಮಾರ್ಥತತ್ತ್ವಾಃ[1] ಭಾವಸಮನ್ವಿತಾಃ ಭಾವಃ ಭಾವನಾ ಪರಮಾರ್ಥತತ್ತ್ವಾಭಿನಿವೇಶಃ ತೇನ ಸಮನ್ವಿತಾಃ ಸಂಯುಕ್ತಾಃ ಇತ್ಯರ್ಥಃ ॥

(ಭಾಷ್ಯಾರ್ಥ)

ನಾನು ಎಂದರೆ **ವಾಸುದೇವ**ನೆಂಬ ಹೆಸರಿನ ಪರಬ್ರಹ್ಮವು ಜಗತ್ತಿಗೆಲ್ಲಕ್ಕೂ ಪ್ರಭವವು, ಎಂದರೆ ಉತ್ಪತ್ತಿ(ಯನ್ನುಂಟುಮಾಡುವವನು;) ನನ್ನಿಂದಲೇ ಇರುವದು-ನಾಶವಾಗುವದು, ಕೆಲಸವನ್ನು ಮಾಡುವದು, (ಅದರ) ಫಲವನ್ನು ಕೊಡುವದು–ಎಂಬ ಮಾರ್ಪಾಡಿನ ರೂಪದಲ್ಲಿರುವ ಸಕಲ ಜಗತ್ತೂ (ತನ್ನ ತನ್ನ ಕೆಲಸದಲ್ಲಿ) ತೊಡಗುತ್ತಿರುವದು. ಹೀಗೆಂದು ತಿಳಿದು ಬುಧರು ಎಂದರೆ ಪರಮಾರ್ಥದ ತತ್ತ್ವವನ್ನು ಅರಿತುಕೊಂಡವರು ಭಾವಸಮನ್ವಿತರಾಗಿ–ಭಾವವೆಂದರೆ ಭಾವನೆಯು, ಪರಮಾರ್ಥತತ್ತ್ವದಲ್ಲಿಯೇ ಹೆಚ್ಚಿನ ಅಭಿಮಾನವು ; ಅದರಿಂದ ಸಮನ್ವಿತರಾಗಿ ಎಂದರೆ (ಅದರಿಂ) ದೊಡಗೂಡಿ–ನನ್ನನ್ನು ಭಜಿಸುತ್ತಾರೆ, ಸೇವಿಸುತ್ತಾರೆ ಎಂದರ್ಥ.

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯನ್ತಃ ಪರಸ್ಪರಮ್ ।**
**ಕಥಯನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥ ೯ ॥**

೯. ಮಚ್ಚಿತ್ತರಾಗಿ ಮದ್ಗತಪ್ರಾಣರಾಗಿ ಒಬ್ಬರಿಗೊಬ್ಬರು ಬೋಧಿಸುತ್ತಾ ನಿತ್ಯವೂ ನನ್ನನ್ನು ತಿಳಿಯಹೇಳುತ್ತಾ ತೃಪ್ತರಾಗಿ ರಮಿಸುತ್ತಿರುವರು.

(ಭಾಷ್ಯ)

೭೦. ಕಿಂಚ ಮಚ್ಚಿತ್ತಾಃ ಮಯಿ ಚಿತ್ತಂ ಯೇಷಾಂ ತೇ **ಮಚ್ಚಿತ್ತಾಃ**। ಮದ್ಗತಪ್ರಾಣಾಃ ಮಾಂ ಗತಾಃ ಪ್ರಾಪ್ತಾಃ ಚಕ್ಷುರಾದಯಃ ಪ್ರಾಣಾಃ **ಯೇಷಾಂ** ತೇ ಮದ್ಗತಪ್ರಾಣಾಃ। ಮಯಿ ಉಪಸಂಹೃತಕರಣಾ ಇತ್ಯರ್ಥಃ। ಅಥವಾ ಮದ್ಗತಪ್ರಾಣಾಃ ಮದ್ಗತಜೀವನಾಃ **ಇತ್ಯೇತತ್**। ಬೋಧಯನ್ತಃ[2] ಅವಗಮಯನ್ತಃ

---

2. 'ಅವಗತತತ್ತ್ವಾರ್ಥಾಃ' ನಿ||ಗು||
1. 'ತತ್ತ್ವಮ್ ಅವಗಮಯನ್ತಃ' ಮ||

ಪರಸ್ಪರಮ್ ಅನ್ಯೋನ್ಯಮ್ । ಕಥಯನ್ತಶ್ಚ ಜ್ಞಾನಬಲವೀರ್ಯಾದಿಧರ್ಮೈಃ [1] ವಿಶಿಷ್ಟಂ ಮಾಮ್ । ತುಷ್ಯನ್ತಿ ಚ ಪರಿತೋಷಮುಪಯಾನ್ತಿ ಚ ರಮನ್ತಿ ಚ ರತಿಂ ಚ ಪ್ರಾಪ್ನುವನ್ತಿ ಪ್ರಿಯಸಂಗತ್ಯಾ ಇವ ॥

(ಭಾಷ್ಯಾರ್ಥ)

ಮತ್ತು ಮಚ್ಚಿತ್ತರಾದ, ನನ್ನಲ್ಲಿಯೇ (ಇಟ್ಟ) ಚಿತ್ತವು ಯಾರಿಗೆ ಇರುವದೋ ಅವರು ಮಚ್ಚಿತ್ತರು; ಮದ್ಗತಪ್ರಾಣರು, ನನ್ನನ್ನು ಹೊಂದಿದ (ನನ್ನನ್ನೇ) ಸೇರಿದ ಚಕ್ಷುರಿಂದ್ರಿಯವೇ ಮುಂತಾದ ಪ್ರಾಣಗಳು [2] ಯಾರಿಗಿರುವವೋ ಅವರು ಮದ್ಗತ ಪ್ರಾಣರು ; ತಮ್ಮ ಕರಣಗಳನ್ನು ನನ್ನಲ್ಲಿಯೇ ಉಪಸಂಹಾರಮಾಡಿದವರು ಎಂದರ್ಥ. ಅಥವಾ ಮದ್ಗತಪ್ರಾಣರು ಎಂದರೆ ನನ್ನನ್ನು ಹೊಂದಿದ ಜೀವನವುಳ್ಳವರು [3] ಎಂದರ್ಥ. ಪರಸ್ಪರವಾಗಿ ಒಬ್ಬರಿಗೊಬ್ಬರು ಬೋಧಿಸುತ್ತಾ ಎಂದರೆ ತಿಳಿಸಿ ಕೊಡುತ್ತಾ, ಜ್ಞಾನ, ಬಲ, ವೀರ್ಯ ಮುಂತಾದ ಗುಣಗಳಿಂದ ಕೂಡಿದ ನನ್ನ ಕಥೆಯನ್ನು ಹೇಳುತ್ತಾ ತೃಪ್ತರಾಗಿರುವರು, ತೃಪ್ತಿಯನ್ನು ಹೊಂದುತ್ತಿರುವರು ; ಮತ್ತು ಪ್ರಿಯನೊಡನೆ ಸೇರಿದವರಂತೆ ರಮಿಸುತ್ತಲೂ ಆನಂದವನ್ನು ಹೊಂದುತ್ತಲೂ ಇರುವರು.

(ಭಾಷ್ಯ)

೭೧. ಯೇ ಯಥೋಕ್ತೈಃ ಪ್ರಕಾರೈಃ ಭಜನ್ತೇ ಮಾಂ ಭಕ್ತಾಃ ಸನ್ತಃ—

(ಭಾಷ್ಯಾರ್ಥ)

ಯಾರು ಮೇಲೆ ಹೇಳಿದ ರೀತಿಗಳಲ್ಲಿ ಭಕ್ತರಾಗಿ ನನ್ನನ್ನು ಭಜಿಸುತ್ತಿರುವರೋ—

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ ॥೧೦॥**

೧೦. ಸತತಯುಕ್ತರಾಗಿ ಪ್ರೀತಿಪೂರ್ವಕವಾಗಿ ಭಜಿಸುತ್ತಿರುವ ಅವರಿಗೆ ಆ ಬುದ್ಧಿಯೋಗವನ್ನು ಕೊಡುವೆನು, ಅದರಿಂದ ಅವರು ನನ್ನನ್ನೇ ಸೇರುವರು.

---

1. 'ಜ್ಞಾನಬಲೈಶ್ವರ್ಯಾದಿಧರ್ಮೈಃ' ಮ॥
2. ಕರಣಗಳು.
3. ನನಗಾಗಿಯೇ ಬಾಳಿಕೊಂಡಿರುವವರು.

(ಭಾಷ್ಯ)

೭೨. ತೇಷಾಂ ಸತತಯುಕ್ತಾನಾಂ ನಿತ್ಯಾಭಿಯುಕ್ತಾನಾಂ ನಿವೃತ್ತಸರ್ವಬಾಹ್ಯೈಷಣಾನಾಂ ಭಜತಾಂ ಸೇವಮಾನಾನಾಮ್ । ಕಿಮ್ ಅರ್ಥಿತ್ವಾದಿನಾ ಕಾರಣೇನ? ನ, ಇತ್ಯಾಹ—ಪ್ರೀತಿಪೂರ್ವಕಮ್ । ಪ್ರೀತಿಃ ಸ್ನೇಹಃ ತತ್ಪೂರ್ವಕಂ ಮಾಂ ಭಜತಾಮ್ ಇತ್ಯರ್ಥಃ । ದದಾಮಿ ಪ್ರಯಚ್ಛಾಮಿ ಬುದ್ಧಿಯೋಗಂ ಬುದ್ಧಿಃ ಸಮ್ಯಗ್ದರ್ಶನಂ ಮತ್ತತ್ತ್ವವಿಷಯಮ್ । ತೇನ ಯೋಗಃ ಬುದ್ಧಿಯೋಗಃ ತಂ ಬುದ್ಧಿಯೋಗಂ ಯೇನ ಬುದ್ಧಿಯೋಗೇನ ಸಮ್ಯಗ್ದರ್ಶನಲಕ್ಷಣೇನ ಮಾಂ ಪರಮೇಶ್ವರಮ್ ಆತ್ಮಭೂತಮ್ ಆತ್ಮತ್ವೇನ ಉಪಯಾನ್ತಿ ಪ್ರತಿಪದ್ಯನ್ತೇ । ಕೇ ತೇ ? ಯೇ ಮಚ್ಚಿತ್ತತ್ವಾದಿಪ್ರಕಾರೈಃ ಮಾಂ ಭಜನ್ತೇ ॥

(ಭಾಷ್ಯಾರ್ಥ)

ಸತತಯುಕ್ತರಾಗಿ ಯಾವಾಗಲೂ (ಮನಸ್ಸನ್ನು) ನನ್ನಲ್ಲಿಯೇ ನಿಲ್ಲಿಸಿಕೊಂಡು ಹೊರಗಿನ ಏಷಣೆಗಳನ್ನೆಲ್ಲ ತೊರೆದು (ನನ್ನನ್ನೇ) ಭಜಿಸುತ್ತಿರುವ ಸೇವಿಸುತ್ತಿರುವ ಅವರಿಗೆ–ಅರ್ಥಿತ್ವವೇ ಮುಂತಾದ ಕಾರಣದಿಂದ (ಭಜಿಸುತ್ತಿರುವ)ರೇನು ? ಎಂದರೆ ಹಾಗಲ್ಲ. ಪ್ರೀತಿಪೂರ್ವಕವಾಗಿ, ಪ್ರೀತಿ ಎಂದರೆ ಪ್ರೇಮವು ; ಅದರಿಂದೊಡಗೂಡಿ ನನ್ನನ್ನು ಭಜಿಸುತ್ತಿರುವ (ಅವರಿಗೆ)–ಎಂದರ್ಥ. (ಅವರಿಗೆ) **ಬುದ್ಧಿಯೋಗವನ್ನು**-ಬುದ್ಧಿ ಎಂದರೆ ನನ್ನ ತತ್ತ್ವದ ವಿಷಯವಾದ ಸಮ್ಯಗ್ದರ್ಶನವು ; ಅದರ ಸಂಬಂಧವು ಯೋಗವು. ಆ ಬುದ್ಧಿಯೋಗವನ್ನು-ಕೊಡುವೆನು, ಈವೆನು. ಆ ಸಮ್ಯಗ್ದರ್ಶನವೆಂಬ ಯೋಗದಿಂದ (ತಮ್ಮ) ಆತ್ಮನಾಗಿರುವ ಪರಮೇಶ್ವರನಾದ ನನ್ನನ್ನು ತಮ್ಮ ಆತ್ಮನೆಂದು ಸೇರುವರು, ಎಂದರೆ ಅರಿತುಕೊಳ್ಳುವರು. ಅವರು ಯಾರು ? ಎಂದರೆ ಯಾರು ಮಚ್ಚಿತ್ತರಾಗಿರುವದೇ ಮುಂತಾದ ಪ್ರಕಾರಗಳಿಂದ ನನ್ನನ್ನು ಭಜಿಸುವರೋ (ಅವರು).

(ಭಾಷ್ಯ)

೭೩. ಕಿಮರ್ಥಂ ಕಸ್ಯ ವಾ ತ್ವತ್ಪ್ರಾಪ್ತಿಪ್ರತಿಬನ್ಧಹೇತೋಃ ನಾಶಕಂ ಬುದ್ಧಿಯೋಗಂ ತೇಷಾಂ ತ್ವದ್ಭಕ್ತಾನಾಂ ದದಾಸಿ ? ಇತ್ಯಪೇಕ್ಷಾಯಾಮ್ [1] ಆಹ—

(ಭಾಷ್ಯಾರ್ಥ)

ಆ ನಿನ್ನ ಭಕ್ತರಿಗೆ ಏತಕ್ಕೆ ಬುದ್ಧಿಯೋಗವನ್ನು ಕೊಡುತ್ತೀಯೆ ? ಅಥವಾ

1. 'ಇತ್ಯಾಕಾಙ್ಕ್ಷಾಯಾಮ್' ಸ॥ಗು॥ವಾ॥

ನಿನ್ನನ್ನು ಹೊಂದುವದಕ್ಕೆ ಅಡ್ಡಿಯಾಗಿರುವ ಯಾವ ಕಾರಣವನ್ನು ನಾಶಮಾಡುವ (ಬುದ್ಧಿಯೋಗವನ್ನು ಕೊಡುತ್ತೀಯೆ) ? ಎಂದು ಕೇಳಿದರೆ (ಅದಕ್ಕೆ ಭಗವಂತನು) ಹೇಳುತ್ತಾನೆ :—

**ತೇಷಾಮೇವಾನುಕಮ್ಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

೧೧. ಅವರ ಮೇಲೆಯೇ ಅನುಕಂಪೆ(ಯನ್ನು ತೋರಿಸುವ)ದಕ್ಕಾಗಿ ನಾನು ಅಜ್ಞಾನದಿಂದ ಹುಟ್ಟಿರುವ ತಮಸ್ಸನ್ನು ಬೆಳಗುತ್ತಿರುವ ಜ್ಞಾನದೀಪದಿಂದ ಆತ್ಮಭಾವದಲ್ಲಿದ್ದುಕೊಂಡು ನಾಶಗೊಳಿಸುವೆನು.

(ಭಾಷ್ಯ)

೭೪. ತೇಷಾಮೇವ ಕಥಂ ನು ನಾಮ ಶ್ರೇಯಃ ಸ್ಯಾತ್ ಇತಿ ಅನುಕಮ್ಪಾರ್ಥಂ ದಯಾಹೇತೋಃ ಅಹಮ್ ಅಜ್ಞಾನಜಮ್ ಅವಿವೇಕತಃ ಜಾತಂ ಮಿಥ್ಯಾಪ್ರತ್ಯಯಲಕ್ಷಣಂ ಮೋಹಾನ್ಧಕಾರಂ ತಮಃ ನಾಶಯಾಮಿ ಆತ್ಮಭಾವಸ್ಥಃ ಆತ್ಮನಃ ಭಾವಃ ಅನ್ತಃಕರಣಾಶಯಃ ತಸ್ಮಿನ್ನೇವ ಸ್ಥಿತಃ ಸನ್ ಜ್ಞಾನದೀಪೇನ ವಿವೇಕಪ್ರತ್ಯಯರೂಪೇಣ ಭಕ್ತಿಪ್ರಸಾದಸ್ನೇಹಾಭಿಷಿಕ್ತೇನ [1] ಮದ್ಭಾವನಾಭಿನಿವೇಶವಾತೇರಿತೇನ ಬ್ರಹ್ಮಚರ್ಯಾದಿಸಾಧನಸಂಸ್ಕಾರವತ್ಪ್ರಜ್ಞಾವರ್ತಿನಾ ವಿರಕ್ತಾನ್ತಃಕರಣಾಧಾರೇಣ ವಿಷಯವ್ಯಾವೃತ್ತಚಿತ್ತರಾಗದ್ವೇಷಾಕಲುಷಿತ [2] ನಿವಾತಾಪವರಕಸ್ಥೇನ ನಿತ್ಯಪ್ರವೃತ್ತೈಕಾಗ್ರ್ಯಧ್ಯಾನಜನಿತಸಮ್ಯಗ್ದರ್ಶನಭಾಸ್ವತಾ ಜ್ಞಾನದೀಪೇನ ಇತ್ಯರ್ಥಃ ॥

(ಭಾಷ್ಯಾರ್ಥ)

ಅವರ ಮೇಲೆಯೇ ಅನುಕಂಪೆ(ಯನ್ನು ತೋರಿಸು)ವದಕ್ಕಾಗಿ–(ಇವರಿಗೆ) ಹೇಗಾದರೂ ಶ್ರೇಯಸ್ಸಾಗಲಿ! ಎಂಬ (ಮರುಕದಿಂದ) ದಯೆಯಿಂದ–ನಾನು **ಅಜ್ಞಾನಜವಾದ ಎಂದರೆ ಅವಿವೇಕದಿಂದ ಹುಟ್ಟಿದ ಮಿಥ್ಯಾಪ್ರತ್ಯಯವೆಂಬ ಮೋಹದ ಕತ್ತಲೆಯೆನ್ನುವ ತಮಸ್ಸನ್ನು** [3] ನಾಶಗೊಳಿಸುವೆನು. ಆತ್ಮಭಾವದಲ್ಲಿದ್ದುಕೊಂಡು–ಆತ್ಮದ ಭಾವವು ಎಂದರೆ ಅಂತಃಕರಣಾಶಯವು [4]; ಅದರಲ್ಲಿಯೇ

1. 'ಭಕ್ತಿಸ್ನೇಹಸಿಕ್ತೇನ' ಮ॥ ; 'ಭಕ್ತಿಪ್ರಸಾದಸ್ನೇಹಸಿಕ್ತೇನ' ಮೈ॥
2. 'ದ್ವೇಷಾದ್ಯಕಲುಷೀಕೃತ' ಮ॥
3. ಮಿಥ್ಯಾಜ್ಞಾನಕ್ಕೆ ಆತ್ಮ, ಅನಾತ್ಮ–ಇವುಗಳನ್ನು ವಿಂಗಡಿಸದಿರುವದೇ ಕಾರಣವು.
4. ಅಂತಃಕರಣದ ಆಶಯವೆಂದರೆ ವಾಸನೆಗಳಿರುವ ಸ್ಥಾನ; ಆತ್ಮನು ಅದಕ್ಕೆ ಸಾಕ್ಷಿಯಾಗಿರುವನು.

ಇದ್ದುಕೊಂಡು-(ನಾಶಗೊಳಿಸುವೆನು). ಜ್ಞಾನದೀಪದಿಂದ ಎಂದರೆ ವಿವೇಕ ಪ್ರತ್ಯಯರೂಪವಾದ[1], ಭಕ್ತಿಯಿಂದಾದ ಪ್ರಸನ್ನತೆಯೆಂಬ ಎಣ್ಣೆಯನ್ನು ಹಾಕಿ ನನ್ನ ಭಾವನೆಯಲ್ಲಿಯೇ ಇಟ್ಟಿರುವ ಹೆಚ್ಚಿನ ಅಭಿಮಾನವೆಂಬ ವಾಯುವಿನಿಂದ ಉರಿಯುತ್ತಿರುವದಾಗಿಯೂ, ಬ್ರಹ್ಮಚರ್ಯವೇಮುಂತಾದ ಸಾಧನಗಳ ಸಂಸ್ಕಾರವುಳ್ಳ ಪ್ರಜ್ಞೆಯೆಂಬ ಬತ್ತಿ (ತಕ್ಕಿಗಾಡಿಸು) ಯಿಂದ ಕೂಡಿದ್ದಾಗಿಯೂ, ವಿರಾಗದಿಂದ ಕೂಡಿದ ಅಂತಃಕರಣವೆಂಬ ದೀಪದ ಕಂಬದಲ್ಲಿರುವದಾಗಿಯೂ ಚಿತ್ತವು ವಿಷಯಗಳಿಂದ ಹಿಮ್ಮೆಟ್ಟಿ ರಾಗದ್ವೇಷಗಳಿಂದ ಕದಡದೆ ಇರುವದೆಂಬ ಗಾಳಿಯಿಲ್ಲದ ಕೋಣೆಯಲ್ಲಿ (ಉರಿಯುತ್ತಿ) ರುವದಾಗಿಯೂ, ಯಾವಾಗಲೂ ಸಾಧನಮಾಡಿದ ಏಕಾಗ್ರತೆಯ ಧ್ಯಾನದಿಂದುಂಟಾದ ಸಮ್ಯಗ್ದರ್ಶನದಿಂದ ಬೆಳಗುತ್ತಿರುವದಾಗಿಯೂ ಇರುವ ಜ್ಞಾನದೀಪದಿಂದ (ಮೋಹದ ಕತ್ತಲೆಯನ್ನು ನಾಶಗೊಳಿಸುವೆನು) ಎಂದರ್ಥ.

## ಅರ್ಜುನನ ಪ್ರಶ್ನೆ

(ಭಾಷ್ಯ)

೭೫. ಯಥೋಕ್ತಾಂ ಭಗವತಃ ವಿಭೂತಿಂ ಯೋಗಂ ಚ ಶ್ರುತ್ವಾ ಅರ್ಜುನ ಉವಾಚ—

(ಭಾಷ್ಯಾರ್ಥ)

ಇದುವರೆಗೆ ಹೇಳಿದ ಭಗವಂತನ ವಿಭೂತಿಯನ್ನೂ ಯೋಗವನ್ನೂ ಕೇಳಿ ಅರ್ಜುನನು ಇಂತೆಂದನು :—

**ಅರ್ಜುನ ಉವಾಚ—**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨ ॥**
**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥೧೩॥**

೧೨-೧೩. ಅರ್ಜುನನಿಂತೆಂದನು :—ನೀನು ಪರಬ್ರಹ್ಮ, ಪರಮಧಾಮವು, ಪರಮ ಪವಿತ್ರವು. (ನೀನು) ಶಾಶ್ವತನಾದ ಪುರುಷನೆಂದೂ

1. ಆತ್ಮನೇ ಸತ್ಯ, ಮಿಕ್ಕದ್ದು ಮಿಥ್ಯೆ-ಎಂಬ ವಿವೇಕಪ್ರತ್ಯಯವೇ ಜ್ಞಾನ.

ದಿವ್ಯನೆಂದೂ ಆದಿದೇವನೆಂದೂ ಅಜನೆಂದೂ ವಿಭುವೆಂದೂ ಋಷಿಗಳೆಲ್ಲರೂ ಹೇಳುತ್ತಾರೆ. ದೇವರ್ಷಿಯಾದ ನಾರದನೂ ಅಸಿತ ದೇವಲನೂ ವ್ಯಾಸನೂ (ಹಾಗೆಂದು) ಹೇಳುತ್ತಾರೆ. ನೀನೂ (ಹಾಗೆಂದೇ) ನನಗೆ ಹೇಳುತ್ತಿರುವೆ.

(ಭಾಷ್ಯ)

೭೬. ಪರಂ ಬ್ರಹ್ಮ ಪರಮಾತ್ಮಾ ಪರಂ ಧಾಮ ಪರಂ ತೇಜಃ ಪವಿತ್ರಂ ಪಾವನಂ ಪರಮಂ ಪ್ರಕೃಷ್ಟಂ ಭವಾನ್ । ಪುರುಷಂ ಶಾಶ್ವತಂ ನಿತ್ಯಂ ದಿವ್ಯಂ ದಿವಿ ಭವಮ್ ಆದಿದೇವಂ ಸರ್ವದೇವಾನಾಮ್ ಆದೌ ಭವಮ್ ಆದಿದೇವಮ್ ಅಜಂ ವಿಭುಂ ವಿಭವನಶೀಲಮ್ ॥ ೧೨ ॥ ಈದೃಶಮ್ ಆಹುಃ ಕಥಯನ್ತಿ ತ್ವಾಮ್ ಋಷಯಃ ವಸಿಷ್ಠಾದಯಃ ಸರ್ವೇ । ದೇವರ್ಷಿಃ ನಾರದಃ ತಥಾ । ಅಸಿತಃ ದೇವಲೋಽಪಿ ಏವಮೇವ ಆಹ । ವ್ಯಾಸಶ್ಚ । ಸ್ವಯಂ ಚೈವ ತ್ವಂ ಚ ಬ್ರವೀಷಿ ಮೇ ॥

(ಭಾಷ್ಯಾರ್ಥ)

ನೀನು ಪರಬ್ರಹ್ಮವು ಎಂದರೆ ಪರಮಾತ್ಮನು. ಪರಮಧಾಮವು ಎಂದರೆ ಹೆಚ್ಚಿನ ತೇಜಸ್ಸು. ಪರಮ ಪವಿತ್ರವು ಹೆಚ್ಚಿನ ಪಾವನ ವಸ್ತು ನೀನು. ನೀನು ಶಾಶ್ವತನಾದ ಪುರುಷನೆಂದೂ ದಿವ್ಯನಾದ ಎಂದರೆ ಸ್ವರ್ಗದಲ್ಲಿರುವ ಆದಿದೇವನು ಎಂದರೆ ಎಲ್ಲಾ ದೇವತೆಗಳಿಗಿಂತಲೂ ಮೊದಲು ಇದ್ದವನೆಂದೂ ಅಜನೆಂದೂ ವಿಭು ಎಂದರೆ ವ್ಯಾಪನಶೀಲನೆಂದೂ (೧೨॥) ಹೀಗೆಲ್ಲ ಇರುವವನೆಂದೂ ವಸಿಷ್ಠನೇ ಮೊದಲಾದ ಋಷಿಗಳೆಲ್ಲರೂ ಹೇಳುತ್ತಾರೆ, ತಿಳಿಸುತ್ತಾರೆ. ದೇವರ್ಷಿಯಾದ ನಾರದನು ಕೂಡ ಹಾಗೆಯೇ (ಹೇಳುತ್ತಾನೆ). ಅಸಿತ ದೇವಲನೂ[1] ಹೀಗೆಂದೇ ಹೇಳುತ್ತಾನೆ. ವ್ಯಾಸನೂ (ಹಾಗೆಯೇ). ನೀನೂ ಸ್ವಂತವಾಗಿ ನನಗೆ (ಹಾಗೆಂದೇ) ಹೇಳುತ್ತಿದ್ದೀಯೆ.

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪ ॥**

೧೪. ಕೇಶವನೆ, (ನೀನು) ಯಾವದನ್ನು ನನಗೆ ಹೇಳುತ್ತಿರುವೆಯೋ ಇದೆಲ್ಲವನ್ನೂ ನಿಜವೆಂದೇ ತಿಳಿಯುತ್ತೇನೆ. ಭಗವಂತನೆ, ದೇವತೆಗಳಾಗಲಿ ದಾನವರಾಗಲಿ ನಿನ್ನ ವ್ಯಕ್ತಿಯನ್ನು ಅರಿಯಲೇ ಆರರು.

---

1. ಅಸಿತ, ದೇವಲ-ಎಂದು ಇಬ್ಬರಲ್ಲ; ಇದು ಒಬ್ಬನೇ ಋಷಿಯ ಹೆಸರು. ದೇವಲ ಎಂಬ ಹೆಸರಿನ ಬೇರೆಯವರಲ್ಲವೆಂದು ತಿಳಿಸುವದಕ್ಕೆ ಈ ವಿಶೇಷಣ. ಮೋ. ಧ. ೨೨೯-೪ ನೋಡಿ.

(ಭಾಷ್ಯ)

೭೭. ಸರ್ವಮ್ ಏತತ್ ಯಥೋಕ್ತಮ್ ಋಷಿಭಿಃ ತ್ವಯಾ ಚ ಏತದ್ ಋತಂ ಸತ್ಯಮೇವ ಮನ್ಯೇ ಯತ್ ಮಾಂ ಪ್ರತಿ ವದಸಿ ಭಾಷಸೇ ಹೇ ಕೇಶವ । ನ ಹಿ ತೇ ತವ ಭಗವನ್ ವ್ಯಕ್ತಿಂ ಪ್ರಭವಂ ವಿದುಃ ನ ದೇವಾಃ ನ ದಾನವಾಃ । ಯತಃ ತ್ವಂ ದೇವಾದೀನಾಮ್ ಆದಿಃ[1] ॥

(ಭಾಷ್ಯಾರ್ಥ)

ಎಲೈ ಕೇಶವನೆ, ಇದೆಲ್ಲವೂ ಎಂದರೆ ಋಷಿಗಳೂ ನೀನೂ ಹೇಳಿರುವದು ಋತವು ಸತ್ಯವು ಎಂದೇ ನಂಬುತ್ತೇನೆ. ನನಗೆ (ನೀನು) ಯಾವದನ್ನು ಹೇಳುತ್ತಿರುವೆಯೋ ತಿಳಿಸಿರುವೆಯೋ (ಅದೆಲ್ಲವೂ ಸತ್ಯವೆಂದೇ ತಿಳಿಯುತ್ತೇನೆ). ಭಗವಂತನೆ, (ತೇ = ತವ) ನಿನ್ನ ವ್ಯಕ್ತಿಯನ್ನು ಎಂದರೆ ಉತ್ಪತ್ತಿಯನ್ನು ದೇವತೆಗಳಾಗಲಿ, ದಾನವರಾಗಲಿ ಅರಿಯಲೇ ಆರರು ; ಏಕೆಂದರೆ ನೀನು (ಆ) ದೇವತೆಗಳೇ ಮೊದಲಾದವರಿಗೂ ಆದಿ.

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥**

೧೫. ಪುರುಷೋತ್ತಮನೆ, ಭೂತಭಾವನನೆ, ಭೂತೇಶನೆ, ದೇವದೇವನೆ, ಜಗತ್ಪತಿಯೆ, ನೀನು ನೀನೇ ನಿನ್ನನ್ನು ನಿನ್ನಿಂದಲೇ ಅರಿತುಕೊಂಡಿರುವೆ.

(ಭಾಷ್ಯ)

೭೮. ಅತಃ ಸ್ವಯಮೇವ ಆತ್ಮನಾ ಆತ್ಮಾನಂ ವೇತ್ಥ ಜಾನಾಸಿ ತ್ವಂ ನಿರತಿಶಯಜ್ಞಾನೈಶ್ವರ್ಯಬಲಾದಿಶಕ್ತಿಮನ್ತಮ್ ಈಶ್ವರಂ ಪುರುಷೋತ್ತಮ । ಭೂತಾನಿ ಭಾವಯತಿ ಇತಿ ಭೂತಭಾವನಃ । ಹೇ ಭೂತಭಾವನ । ಭೂತೇಶ ಭೂತಾನಾಮ್ ಈಶಃ । ಹೇ ದೇವದೇವ ಜಗತ್ಪತೇ ॥

---

1. ಈ ವಾಕ್ಯವು ಮುಂದಿನ ಶ್ಲೋಕಕ್ಕಿಂತಲೂ ಈ ಶ್ಲೋಕದ ಭಾಷ್ಯಕ್ಕೇ ಹೆಚ್ಚು ಒಪ್ಪುತ್ತದೆ.

(ಭಾಷ್ಯಾರ್ಥ)

ಆದ್ದರಿಂದ, ಎಲೈ ಪುರುಷೋತ್ತಮನೆ, ನೀನು ನೀನೇ ನಿನ್ನಿಂದಲೇ [1] ನಿನ್ನನ್ನು ಮಿಗಿಲಿಲ್ಲದ ಜ್ಞಾನ, ಐಶ್ವರ್ಯ, ಬಲ, ಮುಂತಾದ ಶಕ್ತಿಗಳುಳ್ಳ ಈಶ್ವರನೆಂದು ಅರಿತುಕೊಂಡಿರುವೆ, ಬಲ್ಲವನಾಗಿದ್ದೀಯೆ. ಎಲೈ ಭೂತಭಾವನನೆ, ಭೂತಗಳನ್ನು ಉಂಟುಮಾಡುವವನು ಭೂತಭಾವನನು ; (ಅಂಥ) ಭೂತಭಾವನನೆ, ಭೂತೇಶನೆ, ಎಂದರೆ ಭೂತಗಳನ್ನು ಆಳುವವನೆ. ಎಲೈ ದೇವದೇವನೆ ಜಗದೊಡೆಯನೆ (ನಿನ್ನನ್ನು ಮತ್ತಾರೂ ಅರಿಯರು).

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂ ಸ್ತ್ವಂ ವ್ಯಾಪ್ಯ ತಿಷ್ಠಸಿ ॥೧೬॥**

೧೬. ನಿನ್ನ ದಿವ್ಯವಾದ ವಿಭೂತಿಗಳನ್ನು ಒಂದೂ ಬಿಡದಂತೆ ಹೇಳಬೇಕು. ಯಾವ ವಿಭೂತಿಗಳಿಂದ ಈ ಲೋಕಗಳನ್ನು ನೀನು ವ್ಯಾಪಿಸಿಕೊಂಡು ಇರುವೆಯೋ (ಅವುಗಳನ್ನು ಹೇಳುವನಾಗು).

(ಭಾಷ್ಯ)

೭೯. ವಕ್ತುಂ ಕಥಯಿತುಮ್ ಅರ್ಹಸಿ ಅಶೇಷೇಣ । ದಿವ್ಯಾಃ ಹಿ ಆತ್ಮವಿಭೂತಯಃ ಆತ್ಮನೋ ವಿಭೂತಯಃ ಯಾಃ ತಾಃ ವಕ್ತುಮ್ ಅರ್ಹಸಿ । ಯಾಭಿಃ ವಿಭೂತಿಭಿಃ ಆತ್ಮನೋ ಮಾಹಾತ್ಮ್ಯವಿಸ್ತರೈಃ ಇಮಾನ್ ಲೋಕಾನ್ ತ್ವಂ ವ್ಯಾಪ್ಯ ತಿಷ್ಠಸಿ ॥

(ಭಾಷ್ಯಾರ್ಥ)

ಒಂದೂ ಬಿಡದಂತೆ ಹೇಳಬೇಕು, ತಿಳಿಸಬೇಕು. ದಿವ್ಯವಾದ ನಿನ್ನ ವಿಭೂತಿಗಳುಂಟಷ್ಟೆ. ಆತ್ಮ ವಿಭೂತಿಗಳು ಎಂದರೆ ನಿನ್ನ ವಿಭೂತಿಗಳು. ಅವು ಯಾವ ಯಾವವಿರುವವೋ ಅವನ್ನು ಹೇಳಬೇಕು. ಯಾವ ವಿಭೂತಿಗಳಿಂದ ಎಂದರೆ ನಿನ್ನ ಮಾಹಾತ್ಮ್ಯವನ್ನು ವಿಸ್ತರಿಸುವ ರೂಪಗಳಿಂದ ಈ ಲೋಕಗಳನ್ನು ನೀನು ಹಬ್ಬಿಕೊಂಡಿರುವೆಯೋ (ಅವನ್ನು ಹೇಳು).

---

1. ಪರಮಾತ್ಮನು ತನ್ನ ಸ್ವರೂಪಜ್ಞಾನದಿಂದಲೇ ತನ್ನನ್ನು ಅರಿತುಕೊಳ್ಳುತ್ತಾನೆ ; ಅವನಿಗೆ ಕರಣಾದಿಗಳೊಂದೂ ಬೇಡ.

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿನ್ತಯನ್ ।**
**ಕೇಷು ಕೇಷು ಚ ಭಾವೇಷು ಚಿನ್ತ್ಯೋಽಸಿ ಭಗವನ್ಮಯಾ ॥ ೧೭ ॥**

೧೭. ಎಲೈ ಯೋಗಿಯೆ, ನಿನ್ನನ್ನು ಯಾವಾಗಲೂ ಚಿಂತಿಸುತ್ತಾ ನಾನು ಹೇಗೆ ತಿಳಿದುಕೊಳ್ಳಲಿ? ಮತ್ತು ಭಗವಂತನೆ, ಯಾವ ಯಾವ ಭಾವಗಳಲ್ಲಿ ನನಗೆ (ನೀನು) ಚಿಂತ್ಯನಾಗಿರುವೆ?

(ಭಾಷ್ಯ)

೮೦. ಕಥಂ ವಿದ್ಯಾಂ ವಿಜಾನೀಯಾಮ್ ಅಹಂ ಹೇ ಯೋಗಿನ್ ತ್ವಾಂ ಸದಾ ಪರಿಚಿನ್ತಯನ್ । ಕೇಷು ಕೇಷು ಚ ಭಾವೇಷು ವಸ್ತುಷು ಚಿನ್ತ್ಯೋಽಸಿ ಧ್ಯೇಯೋಽಸಿ ಭಗವನ್ ಮಯಾ ॥

(ಭಾಷ್ಯಾರ್ಥ)

ಎಲೈ ಯೋಗಿಯೆ, ನಿನ್ನನ್ನು ಯಾವಾಗಲೂ ಧ್ಯಾನಮಾಡುತ್ತಾ ನಾನು ಹೇಗೆ ತಿಳಿದುಕೊಳ್ಳಲಿ[1]? ಮತ್ತು ಭಗವಂತನೆ, ಯಾವ ಯಾವ ಭಾವಗಳಲ್ಲಿ ಎಂದರೆ ವಸ್ತುಗಳಲ್ಲಿ (ನಿನ್ನನ್ನು) ನಾನು ಚಿಂತಿಸಬೇಕು, ಎಂದರೆ ಧ್ಯಾನಿಸಬೇಕು?

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥**

೧೮. ಎಲೈ ಜನಾರ್ದನನೆ, ನಿನ್ನ ಯೋಗವನ್ನೂ ವಿಭೂತಿಯನ್ನೂ ವಿಸ್ತಾರವಾಗಿ ಮತ್ತೂ ಹೇಳು. ಏಕೆಂದರೆ (ಈ) ಅಮೃತವನ್ನು (ಕೇಳಿಯೂ) ನನಗೆ ತೃಪ್ತಿಯಿಲ್ಲ.

(ಭಾಷ್ಯ)

೮೧. ವಿಸ್ತರೇಣ ಆತ್ಮನಃ ಯೋಗಂ ಯೋಗೈಶ್ವರ್ಯಶಕ್ತಿವಿಶೇಷಂ ವಿಭೂತಿಂ ಚ ವಿಸ್ತರಂ ಧ್ಯೇಯಪದಾರ್ಥಾನಾಮ್ ಹೇ ಜನಾರ್ದನ । ಅರ್ದತೇಃ ಗತಿಕರ್ಮಣಃ ರೂಪಮ್ । ಅಸುರಾಣಾಂ ದೇವಪ್ರತಿಪಕ್ಷಭೂತಾನಾಂ ಜನಾನಾಂ ನರಕಾದಿ

---

1. ಎಲ್ಲಾ ಜಗತ್ತಿಗೂ ನಾನೇ ಕಾರಣನೆಂದು ಭಗವಂತನು ೮ನೆಯ ಶ್ಲೋಕದಲ್ಲಿ ಹೇಳಿರುತ್ತಾನಾದರೂ ಪರಮಾತ್ಮನ ಯೋಗದ ವಿವರವನ್ನು ಕೇಳಬೇಕೆಂದು ಪ್ರಶ್ನೆ. 'ಹೇಗೆ ತಿಳಿದುಕೊಳ್ಳಲಿ?' ಎಂದರೆ 'ಹೇಗೆ ಭಾವನೆಮಾಡುವದು ನನಗೆ ಶ್ರೇಯಸ್ಕರ?' ಎಂದೇ ಅಭಿಪ್ರಾಯ.

ಗಮಯಿತೃತ್ವಾತ್ ಜನಾರ್ದನಃ । ಅಭ್ಯುದಯನಿಃಶ್ರೇಯಸಪುರುಷಾರ್ಥಪ್ರಯೋಜನಂ ಸರ್ವೈಃ ಜನೈಃ ಯಾಚ್ಯತೇ ಇತಿ ವಾ । ಭೂಯಃ ಪೂರ್ವಮ್ ಉಕ್ತಮಪಿ ಕಥಯ । ತೃಪ್ತಿಃ ಪರಿತೋಷಃ ಹಿ ಯಸ್ಮಾತ್ ನಾಸ್ತಿ ಮೇ ಶೃಣ್ವತಃ ತ್ವನ್ಮುಖನಿಃಸೃತವಾಕ್ಯಾಮೃತಮ್ ॥

(ಭಾಷ್ಯಾರ್ಥ)

ನಿನ್ನ **ಯೋಗ**ವನ್ನೂ ಎಂದರೆ ಯೋಗದಿಂದುಂಟಾದ ಅಸಾಧಾರಣವಾದ ಐಶ್ವರ್ಯಶಕ್ತಿಯನ್ನೂ ವಿಭೂತಿಯನ್ನೂ ಎಂದರೆ ಧ್ಯಾನಮಾಡತಕ್ಕ ಪದಾರ್ಥಗಳ ವಿವರವನ್ನೂ, ಎಲೈ ಜನಾರ್ದನನೆ,—ಹೋಗು ಎಂಬರ್ಥದ ಅರ್ದ್ ಎಂಬ ಧಾತುವಿನಿಂದ (ಜನಾರ್ದನನೆಂಬ ಶಬ್ದ) ರೂಪವು (ಆಗಿರುತ್ತದೆ). ದೇವತೆಗಳಿಗೆ ಎದುರು ಪಕ್ಷದವರಾದ ಅಸುರಜನರನ್ನು ನರಕವೇ ಮುಂತಾದ (ಸ್ಥಾನಗಳಿಗೆ) ಕಳುಹಿಸುವದರಿಂದ **ಜನಾರ್ದನ** (ಎಂದು ಹೆಸರು). ಅಥವಾ ಅಭ್ಯುದಯನಿಃಶ್ರೇಯಸ-ಎಂಬ ಪುರುಷಾರ್ಥಪ್ರಯೋಜನಕ್ಕಾಗಿ ಎಲ್ಲಾ ಜನರೂ (ಈತನನ್ನೇ) ಬೇಡುವರು[1] ಎಂಬ ಕಾರಣದಿಂದಲಾದರೂ (ಜನಾರ್ದನ ಎಂಬ ಹೆಸರು ಬಂದಿದೆ ಎಂದೂ (ಹೇಳಬಹುದು) ?–ಹಿಂದೆ (ನೀನು) ಹೇಳಿಯೇ ಇರುವೆಯಾದರೂ ಮತ್ತೂ (ಒಮ್ಮೆ) ಹೇಳು. ಏಕೆಂದರೆ ನಿನ್ನ ಮುಖದಿಂದ ಹರಿದುಬರುವ ವಾಕ್ಯಾಮೃತವನ್ನು (ಎಷ್ಟು) ಕೇಳಿದರೂ ನನಗೆ ತೃಪ್ತಿಯಾಗುವ (ಹಾಗಿ)ಲ್ಲ.

## ಭಗವಂತನು ತನ್ನ ವಿಭೂತಿಗಳನ್ನು ವಿಸ್ತರಿಸಿದ್ದು

**ಶ್ರೀ ಭಗವಾನ್ ಉವಾಚ—**

**ಹನ್ತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥ ೧೯ ॥**

೧೯. ಶ್ರೀ ಭಗವಂತನಿಂತೆಂದನು :—ಅಯ್ಯ, ಕುರುಶ್ರೇಷ್ಠನೆ, ಈಗ ದಿವ್ಯವಾದ ಆತ್ಮವಿಭೂತಿಗಳಿವೆಯಲ್ಲ, ಇವನ್ನು ನಿನಗೆ ಪ್ರಾಧಾನ್ಯತೆಯಿಂದ ತಿಳಿಸುವೆನು. ನನ್ನ ವಿಸ್ತಾರಕ್ಕೆ ಕೊನೆಯಿಲ್ಲ.

———

1. ಅರ್ದ್ ಎಂಬ ಧಾತುವಿಗೆ ಹೋಗು ಎಂಬರ್ಥವಲ್ಲದೆ ಬೇಡು ಎಂಬರ್ಥವೂ ಇದೆ. ಸತ್ಕರ್ಮಗಳಿಗೆ ಒಳ್ಳೆಯ ಫಲಗಳೂ ದುಷ್ಕರ್ಮಗಳಿಗೆ ಕೆಟ್ಟ ಫಲಗಳೂ ಭಗವಂತನಿಂದಲೇ ಆಗುವವು.

(ಭಾಷ್ಯ)

೮೨. ಹನ್ತ ಇದಾನೀಂ ತೇ ತವ ದಿವ್ಯಾ ದಿವಿ ಭವಾಃ ಆತ್ಮವಿಭೂತಯಃ ಆತ್ಮನೋ ಮಮ ವಿಭೂತಯಃ ಯಾಃ ತಾಃ ಕಥಯಿಷ್ಯಾಮಿ ಇತ್ಯೇತತ್ ಪ್ರಾಧಾನ್ಯತಃ ಯತ್ರ ಯತ್ರ ಪ್ರಧಾನಾ ಯಾ ಯಾ ವಿಭೂತಿಃ ತಾಂ ತಾಂ ಪ್ರಧಾನಾಂ ಪ್ರಾಧಾನ್ಯತಃ ಕಥಯಿಷ್ಯಾಮಿ ಅಹಂ ಕುರುಶ್ರೇಷ್ಠ। ಅಶೇಷತಸ್ತು ವರ್ಷಶತೇನಾಪಿ ನ ಶಕ್ಯಾಃ ವಕ್ತುಮ್। ಯತಃ ನಾಸ್ತಿ ಅನ್ತಃ ವಿಸ್ತರಸ್ಯ ಮೇ ಮಮ ವಿಭೂತೀನಾಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಅಯ್ಯ, ಕುರುಶ್ರೇಷ್ಠನೆ, ಈಗ ನಿನಗೆ ದಿವ್ಯವಾದ ಉತ್ತಮಲೋಕದಲ್ಲಿ ಉಂಟಾಗಿರುವ [1] ಆತ್ಮವಿಭೂತಿಗಳು ಎಂದರೆ (ಆತ್ಮನಃ) ನನ್ನ ವಿಭೂತಿಗಳು ಯಾವವಿರುವವೋ ಅವನ್ನು ಹೇಳುವೆನು ಎಂದರ್ಥ. ಪ್ರಾಧಾನ್ಯವಾಗಿ ಎಲ್ಲೆಲ್ಲಿ ಯಾವ ಯಾವ ವಿಭೂತಿಯು ಪ್ರಧಾನವಾಗಿರುವದೋ ಆಯಾ ಪ್ರಧಾನವಾದ (ವಿಭೂತಿಯನ್ನು) ನಾನು ಮುಖ್ಯವಾಗಿ ಹೇಳುತ್ತೇನೆ. ಆದರೆ (ಅವನ್ನು) ಒಂದೂ ಬಿಡದಂತೆ [2] ಹೇಳುವದಕ್ಕೆ ನೂರು ವರ್ಷವಾದರೂ ಶಕ್ಯವಿಲ್ಲ. ಏಕೆಂದರೆ ನನ್ನ ವಿಸ್ತರಕ್ಕೆ ಎಂದರೆ ವಿಭೂತಿಗಳಿಗೆ ಎಂದರ್ಥ ; (ಅವಕ್ಕೆ) ಕೊನೆಯಿಲ್ಲ.

(ಭಾಷ್ಯ)

೮೩. ತತ್ರ ಪ್ರಥಮಮೇವ ತಾವತ್ ಶೃಣು—

(ಭಾಷ್ಯಾರ್ಥ)

ಇವುಗಳಲ್ಲಿ ಮೊಟ್ಟಮೊದಲನೆಯ (ವಿಭೂತಿಯನ್ನೇ) ಈಗ ಕೇಳು :—

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ॥ ೨೦ ॥**

೨೦. ಎಲೈ ಗುಡಾಕೇಶನೆ, ಸರ್ವಭೂತಗಳ ಆಶಯದಲ್ಲಿರುವ ಆತ್ಮನು ನಾನು. ಭೂತಗಳಿಗೆ ಆದಿಯೂ ಮಧ್ಯವೂ ಅಂತವೂ ನಾನೇ.

---

1. ಸಾಮಾನ್ಯವಾಗಿ ಎಲ್ಲೆಲ್ಲಿಯೂ ಇರುವವಲ್ಲ, ಶ್ರೇಷ್ಠವಾದವು ಎಂದರ್ಥ. ದಿವಿ ಭವಾಃ ಎಂದದ್ದರಿಂದ ಸ್ವರ್ಗದಲ್ಲಿ ಹುಟ್ಟತಕ್ಕಷ್ಟು ಶ್ರೇಷ್ಠವಾದವು ಎಂದಂತಾಯಿತು.

2. ಹಿಂದೆ ೧೬ನೆಯ ಶ್ಲೋಕದಲ್ಲಿ ಅರ್ಜುನನು ಕೇಳಿದ್ದಂತೆ.

(ಭಾಷ್ಯ)

೮೪. ಅಹಮ್ ಆತ್ಮಾ ಪ್ರತ್ಯಗಾತ್ಮಾ ಗುಡಾಕೇಶ । ಗುಡಾಕಾ ನಿದ್ರಾ ತಸ್ಯಾ ಈಶಃ ಗುಡಾಕೇಶಃ ಜಿತನಿದ್ರಃ ಇತ್ಯರ್ಥಃ । ಘನಕೇಶಃ ಇತಿ ವಾ । ಸರ್ವ ಭೂತಾಶಯಸ್ಥಿತಃ ಸರ್ವೇಷಾಂ ಭೂತಾನಾಮ್ ಆಶಯೇ ಅನ್ತಃ ಹೃದಿ ಸ್ಥಿತಃ ಅಹಮ್ ಆತ್ಮಾ ಪ್ರತ್ಯಗಾತ್ಮಾ ನಿತ್ಯಂ ಧ್ಯೇಯಃ । ತದಶಕ್ತೇನ ಚ ಉತ್ತರೇಷು ಭಾವೇಷು ಚಿನ್ತ್ಯಃ ಅಹಮ್[1] । ಯಸ್ಮಾತ್ ಅಹಮೇವ ಆದಿಃ ಭೂತಾನಾಂ ಕಾರಣಂ ತಥಾ ಮಧ್ಯಂ ಚ ಸ್ಥಿತಿಃ ಅನ್ತಃ ಪ್ರಲಯಶ್ಚ ॥

(ಭಾಷ್ಯಾರ್ಥ)

ನಾನು ಆತ್ಮನು, ಒಳಗಿರುವ ಆತ್ಮನು. **ಗುಡಾಕೇಶನೆ**–ಗುಡಾಕಾ ಎಂದರೆ ನಿದ್ರೆ; ಅದರ ಈಶ ಎಂದರೆ ಒಡೆಯನು, ನಿದ್ರೆಯನ್ನು ಗೆದ್ದವನು ಎಂದರ್ಥ. ಅಥವಾ (ಗುಡಾಕೇಶನೆಂದರೆ) ದಟ್ಟತಲೆಗೂದಲುಳ್ಳವನು (ಎಂದಾದರೂ ಅರ್ಥವನ್ನು ಮಾಡಬಹುದು)–ಸರ್ವಭೂತಗಳ ಆಶಯದಲ್ಲಿರುವ ಎಂದರೆ ಎಲ್ಲಾ ಪ್ರಾಣಿಗಳ **ಆಶಯದಲ್ಲಿ ಎಂದರೆ ಹೃದಯದ ಒಳಗೆ ಇರುವ ಆತ್ಮನು ನಾನು ಪ್ರತ್ಯಗಾತ್ಮನು ಎಂದು ಯಾವಾಗಲೂ ಚಿಂತಿಸುತ್ತಿರಬೇಕು.[2] ಹೀಗೆ (ಚಿಂತಿಸು) ವದು ಕೈಯಲ್ಲಾಗದವನು ಮುಂದೆ ಹೇಳುವ ವಸ್ತುಗಳಲ್ಲಿ ನನ್ನನ್ನು ಚಿಂತಿಸ ಬೇಕು.[3]** ಏಕೆಂದರೆ ನಾನೇ ಭೂತಗಳಿಗೆ ಆದಿಯು, ಕಾರಣವು; ವತ್ತು ಮಧ್ಯವು, ಸ್ಥಿತಿಗೆ (ಆಶ್ರಯನಾದವನು); ಅಂತವು ಎಂದರೆ ಅಡಗುವ ಸ್ಥಾನವು[4] ಕೂಡ(ನಾನೇ).

(ಭಾಷ್ಯ)

೮೫. ಏವಂ ಚ ಧ್ಯೇಯೋಽಹಮ್—

---

1. 'ಚಿನ್ತಯಿತುಂ ಶಕ್ಯಃ ಅಹಮ್' ಎಂಬ ಸಿ|| ಪಾಠಕ್ಕಿಂತ ಈ ಪಾಠವೇ ಉತ್ತಮ.

2. ಆತ್ಮನನ್ನು ಪರಮಾತ್ಮನೆಂದು ಧ್ಯಾನಿಸಬೇಕು–ಎಂದು ಮುಖ್ಯವಿಭೂತಿಯಾಗಿ ಹೇಳಿದೆ.

3. ಇಲ್ಲಿ ಆತ್ಮನೆಂಬುದನ್ನು ಯೋಗವನ್ನು ತಿಳಿಸುವದಕ್ಕಾಗಿಯೂ ಮಿಕ್ಕವುಗಳನ್ನು ವಿಭೂತಿಗಳನ್ನು ತಿಳಿಸುವದಕ್ಕಾಗಿಯೂ ಹೇಳಿದೆ ಎಂದು ಕೆಲವರು ಭಾವಿಸುತ್ತಾರೆ. ಆದರೆ ೭ನೆಯ ಶ್ಲೋಕದಲ್ಲಿ ಹೇಳಿರುವಂತೆ ಪರಮಾತ್ಮನ ಯೋಗೈಶ್ವರ್ಯಸಾಮರ್ಥ್ಯವೇ ಯೋಗ ವಾಗಿರುವದರಿಂದ ಇಷ್ಟು ವಿಭೂತಿಗಳ ರೂಪದಲ್ಲಿಯೂ ತೋರಿಕೊಂಡು ತನ್ನ ರೂಪದಿಂದ ಇರುವದೇ ಯೋಗ ಎನ್ನುವದು ಉತ್ತಮ.

4. ಆದ್ದರಿಂದ ಆತ್ಮನು.

(ಭಾಷ್ಯಾರ್ಥ)

ನನ್ನನ್ನು ಹೀಗೂ ಚಿಂತಿಸಬಹುದು :—

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥**

೨೧. ನಾನು ಆದಿತ್ಯರಲ್ಲಿ ವಿಷ್ಣು, ಜ್ಯೋತಿಸ್ಸುಗಳಲ್ಲಿ ಅಂಶುಮಂತನಾದ ರವಿ, ಮರುತ್ತುಗಳಲ್ಲಿ ಮರೀಚಿಯು, ನಕ್ಷತ್ರಗಳಲ್ಲಿ ನಾನು ಚಂದ್ರನು.

(ಭಾಷ್ಯ)

೮೬. ಆದಿತ್ಯಾನಾಂ ದ್ವಾದಶಾನಾಂ ವಿಷ್ಣುರ್ನಾಮ ಆದಿತ್ಯಃ ಅಹಮ್ । ಜ್ಯೋತಿಷಾಂ ರವಿಃ ಪ್ರಕಾಶಯಿತ್ರೄಣಾಮ್ ಅಂಶುಮಾನ್ ರಶ್ಮಿಮಾನ್ । ಮರೀಚಿಃ ನಾಮ ಮರುತಾಂ ಮರುದ್ದೇವತಾಭೇದಾನಾಮ್ ಅಸ್ಮಿ । ನಕ್ಷತ್ರಾಣಾಮ್ ಅಹಂ ಶಶೀ ಚನ್ದ್ರಮಾಃ ॥

(ಭಾಷ್ಯಾರ್ಥ)

ಹನ್ನೆರಡು ಮಂದಿ ಆದಿತ್ಯರೊಳಗೆ[1] **ವಿಷ್ಣು**ವೆಂಬ ಆದಿತ್ಯನು ನಾನು. **ಜ್ಯೋತಿ**ಗಳಲ್ಲಿ ಎಂದರೆ ಬೆಳಗಿ ತೋರುವವರಲ್ಲಿ ಅಂಶುಮಂತನಾದ ಕಿರಣಗಳಿಂದ ಕೂಡಿದ ರವಿಯು (ಸೂರ್ಯನು) ನಾನು. **ಮರುತ್ತು**ಗಳಲ್ಲಿ ಬೇರೆಬೇರೆಯ ಮರುದ್ದೇವತೆಗಳಲ್ಲಿ[2] ಮರೀಚಿಯಾಗಿರುತ್ತೇನೆ. ನಕ್ಷತ್ರಗಳಲ್ಲಿ ನಾನು **ಚಂದ್ರನು**.[3]

---

1. ಧಾತೃ, ಮಿತ್ರ, ಆರ್ಯಮ, ಶಕ್ರ, ವರುಣ, ಅಂಶ. ಭಗ, ವಿವಸ್ವನ್ತ, ಪೂಷ, ಸವಿತೃ, ತ್ವಷ್ಟೃ, ವಿಷ್ಣು (ಆದಿ. ೬೫-೧೫, ೧೬ ; ಬೇರೆಯ ಕ್ರಮದಿಂದ ಮೋ. ಧ. ೨೦೮-೧೬); ಅಂಶ, ಭಗ, ಮಿತ್ರ, ವರುಣ, ಧಾತೃ, ಆರ್ಯಮ, ಜಯಂತ, ಭಾಸ್ಕರ, ತ್ವಷ್ಟೃ ಪೂಷ, ಇಂದ್ರ, ವಿಷ್ಣು (ಅನು. ೧೫೦-೧೫)—ಇವರು ಆದಿತಿಯ ಮಕ್ಕಳು.

2. ವಿಷ್ಣುಧರ್ಮೋತ್ತರ (೨-೨೨-೫೧ರಿಂದ ೫೭), ಅಗ್ನಿಪುರಾಣ (೨೧೯-೨೮ರಿಂದ ೩೪) ಗರುಡಪುರಾಣ (ಆ. ಕಾಂ. ೬-೬೫ರಿಂದ ೭೧)-ಇವುಗಳಲ್ಲಿ ಏಕಜ್ಯೋತಿ ಮುಂತಾದವರು, ವಿಷ್ಣುರಹಸ್ಯದಲ್ಲಿ (೨೩-೨೦-೨೫) ಪ್ರಾಣಾದಿಗಳು ಎಂದೂ ದಿತಿಯ ಮಕ್ಕಳುಗಳಾದ ನಲವತ್ತೊಂಬತ್ತು ಮರುದ್ದೇವತೆಗಳನ್ನು ಇಂದ್ರಾನುಚರರೆಂದೂ ಹೇಳಿದೆ. ಇವರ ವಿಷಯವು ಆದಿಪರ್ವಶಾಂತಿಪರ್ವಗಳಲ್ಲಿ ಪರಾಮೃಷ್ಟವಾಗಿದೆ. ಆದರೆ ಇವರೊಳಗೆ ಮರೀಚಿ ಎಂಬ ಹೆಸರಿಲ್ಲ. ಆದ್ದರಿಂದ 'ಮರೀಚಿ' ಎಂದರೆ ಮರುದ್ದೇವತೆಗಳ ಕಾಂತಿ ಎಂದು ಕೆಲವರು ಅರ್ಥಮಾಡಿರುತ್ತಾರೆ.

3. ಇಲ್ಲಿ ಚಂದ್ರನು ನಕ್ಷತ್ರಸಂಜ್ಞಕರಾದ ದಕ್ಷಕನ್ಯೆಯರಿಗೆ ಪತಿಯೆಂಬ ಪುರಾಣಪ್ರಸಿದ್ಧಿಯಿಂದ ನಕ್ಷತ್ರಗಳಿಗಿಂತ ಬೇರೆಯಾಗಿರುತ್ತಾನೆ. ಈ ಅಧ್ಯಾಯದಲ್ಲಿರುವ ಷಷ್ಠೀವಿಭಕ್ತಿಗಳಲ್ಲಿ ಕೆಲವು ನಿರ್ಧಾರಣಷಷ್ಠಿಗಳು (ಎಂದರೆ ಇವುಗಳಲ್ಲೆಲ್ಲ ಎಂಬರ್ಥದವು), ಮತ್ತೆ ಕೆಲವು ಸಂಬಂಧಷಷ್ಠಿಗಳು. ಇಲ್ಲಿ ಸಂಬಂಧಷಷ್ಠೀವಿಭಕ್ತಿಯನ್ನುಪಯೋಗಿಸಿದೆ ಎಂದು ತಿಳಿಯಬೇಕು. ಅಥವಾ ಅಂತರಿಕ್ಷದಲ್ಲಿ ತಿರುಗಾಡುವದಕ್ಕೆ ಯೋಗ್ಯವಾಗಿರುವ ಸೂರ್ಯಾದಿಗಳೆಲ್ಲ ನಕ್ಷತ್ರಗಳೇ ಎಂದು ಭಾವಿಸಿದರೆ ಬಲು ಬೇಗನೆ ತಿರುಗುವ ಚಂದ್ರನು ಅವುಗಳಲ್ಲಿ ಮುಖ್ಯವಾದ ವಿಭೂತಿ ಎಂದೂ ಅರ್ಥಮಾಡಬಹುದು.

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇನ್ದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥**

೨೨. ವೇದಗಳಲ್ಲಿ ಸಾಮವೇದವಾಗಿರುವೆನು ; ದೇವತೆಗಳಲ್ಲಿ ವಾಸವನಾಗಿರುವೆನು, ಇಂದ್ರಿಯಗಳಲ್ಲಿ ಮನಸ್ಸಾಗಿರುವೆನು ; ಭೂತಗಳಲ್ಲಿ ಚೇತನವಾಗಿರುವೆನು.

(ಭಾಷ್ಯ)

೮೬. ವೇದಾನಾಂ ಮಧ್ಯೇ ಸಾಮವೇದಃ ಅಸ್ಮಿ । ದೇವಾನಾಂ ರುದ್ರಾದಿತ್ಯಾದೀನಾಂ ವಾಸವಃ ಇನ್ದ್ರಃ ಅಸ್ಮಿ । ಇನ್ದ್ರಿಯಾಣಾಮ್ ಏಕಾದಶಾನಾಂ ಚಕ್ಷುರಾದೀನಾಂ ಮನಶ್ಚಾಸ್ಮಿ ಸಙ್ಕಲ್ಪವಿಕಲ್ಪಾತ್ಮಕಂ[1] ಮನಶ್ಚ ಅಸ್ಮಿ । ಭೂತಾನಾಮ್ ಅಸ್ಮಿ ಚೇತನಾ । ಕಾರ್ಯಕರಣಸಙ್ಘಾತೇ ನಿತ್ಯಾಭಿವ್ಯಕ್ತಾ[2] ಬುದ್ಧಿವೃತ್ತಿಃ ಚೇತನಾ ॥

(ಭಾಷ್ಯಾರ್ಥ)

ವೇದಗಳೊಳಗೆ ಸಾಮವೇದವಾಗಿರುವೆನು. ದೇವತೆಗಳಲ್ಲಿ ರುದ್ರರು, ಆದಿತ್ಯರು–ಮುಂತಾದವರಲ್ಲಿ ವಾಸವನು ಎಂದರೆ ಇಂದ್ರನಾಗಿರುವೆನು. ಇಂದ್ರಿಯಗಳಲ್ಲಿ ಎಂದರೆ **ಚಕ್ಷುಸ್ಸು ಮುಂತಾದ ಹನ್ನೊಂದು (ಇಂದ್ರಿಯ)ಗಳಲ್ಲಿ** ಸಂಕಲ್ಪವಿಕಲ್ಪಾತ್ಮಕವಾದ ಮನಸ್ಸೂ[3] ಆಗಿರುವೆನು. ಭೂತಗಳಲ್ಲಿ ಚೇತನವಾಗಿರುವೆನು. ಕಾರ್ಯಕಾರಣಸಂಘಾತದಲ್ಲಿ[4] ಯಾವಾಗಲೂ ಹೊರತೋರಿಕೊಂಡಿರುವ ಬುದ್ಧಿವೃತ್ತಿಯು **ಚೇತನವು**[5] (ಆ ಚೇತನವಾಗಿರುವೆನು).

**ರುದ್ರಾಣಾಂ ಶಙ್ಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥ ೨೩ ॥**

೨೩. ರುದ್ರರಿಗೆ ಶಂಕರನಾಗಿರುವೆನು, ಯಕ್ಷರಾಕ್ಷಸರಿಗೆ ವಿತ್ತೇಶನು, ಪಶುಗಳಲ್ಲಿ ಪಾವಕನಾಗಿರುವೆನು, ಶಿಖರಿಗಳಲ್ಲಿ ನಾನು ಮೇರು.

---

1. ಈ ಮಾತು ಮ॥ಮ್ಯೆ॥ಗಳಲ್ಲಿಲ್ಲ.
2. ಮ॥ಮ್ಯೆ॥ಗಳಲ್ಲಿ ‘ ನಿತ್ಯ ’ ಎಂಬುದಿಲ್ಲ ; ಇಲ್ಲದಿದ್ದರೂ ಆಗುತ್ತದೆ.
3. ಮನಸ್ಸನ್ನೂ ಇಂದ್ರಿಯಗಳಲ್ಲಿ ಸೇರಿಸಬಹುದೆಂಬುದಕ್ಕೆ ಸೂ.ಭಾ. ೨-೪-೬ ನೋಡಿ.
4. ಶರೀರೇಂದ್ರಿಯಗಳು ಒಟ್ಟಾಗಿ ಕೆಲಸಮಾಡುತ್ತಿರುವ ಗುಂಪಿನಲ್ಲಿ.
5. ಸಾಮಾನ್ಯವಾದ ಅರಿವಿನ ರೂಪದ ವೃತ್ತಿ.

(ಭಾಷ್ಯ)

೮೮. ರುದ್ರಾಣಾಮ್ ಏಕಾದಶಾನಾಂ ಶಙ್ಕರಶ್ಚ ಅಸ್ಮಿ । ವಿತ್ತೇಶಃ ಕುಬೇರಃ ಯಕ್ಷರಕ್ಷಸಾಂ ಯಕ್ಷಾಣಾಂ ರಕ್ಷಸಾಂ ಚ । ವಸೂನಾಮ್ ಅಷ್ಟಾನಾಂ ಪಾವಕಶ್ಚ ಅಸ್ಮಿ ಅಗ್ನಿಃ । ಮೇರುಃ ಶಿಖರಿಣಾಂ ಶಿಖರವತಾಮ್ ಅಹಮ್ ॥

(ಭಾಷ್ಯಾರ್ಥ)

ಹನ್ನೊಂದು ಜನ **ರುದ್ರರಿಗೆ**[1] ಶಂಕರನಾಗಿರುತ್ತೇನೆ. ಯಕ್ಷರಾಕ್ಷಸರುಗಳಿಗೆ[2] ವಿತ್ತೇಶನು; (ಧನಕ್ಕೆ ಅಧಿಪತಿಯಾದ) ಕುಬೇರನು. ಎಂಟು ಜನ **ವಸುಗಳಲ್ಲಿ**[3] ಪಾವಕನು ಎಂದರೆ ಅಗ್ನಿಯಾಗಿರುವೆನು. ಶಿಖರಿಗಳಿಗೆ ಎಂದರೆ ಕೋಡುಗಲ್ಲುಗಳುಳ್ಳ (ಕುಲಪರ್ವತಗಳಿಗೆ) **ಮೇರುಪರ್ವತವು** ನಾನು.

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀಮಹಂ ಸ್ಕನ್ದಃ ಸರಸಾಮಸ್ಮಿ ಸಾಗರಃ ॥ ೨೪ ॥**

೨೪. ಪಾರ್ಥನೆ, ಪುರೋಧರಲ್ಲಿ ಮುಖ್ಯನಾದ ಬೃಹಸ್ಪತಿಯನ್ನಾಗಿ ನನ್ನನ್ನು ತಿಳಿದುಕೊ. ಸೇನಾನಿಗಳಲ್ಲಿ ನಾನು ಸ್ಕಂದನು; ಸರಸ್ಸುಗಳಿಗೆ ಸಾಗರವಾಗಿರುವೆನು.

(ಭಾಷ್ಯ)

೮೯. ಪುರೋಧಸಾಂ ಚ ರಾಜಪುರೋಹಿತಾನಾಂ ಚ ಮುಖ್ಯಂ ಪ್ರಧಾನಂ ಮಾಂ ವಿದ್ಧಿ ಜಾನೀಹಿ[4] ಹೇ ಪಾರ್ಥ ಬೃಹಸ್ಪತಿಮ್ । ಸ ಹಿ ಇನ್ದ್ರಸ್ಯ ಇತಿ ಮುಖ್ಯಃ

---

1. ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕಿ, ಅಪರಾಜಿತ, ಋತ, ಪಿತೃರೂಪ, ತ್ರ್ಯಂಬಕ, ವೃಷಾಕಪಿ, ಶಂಭು, ಹವನ, ಈಶ್ವರ (ಅನು. ೧೫೦-೧೩). ಹರಿವಂಶ, ಬ್ರಹ್ಮಪುರಾಣ-ಇವುಗಳಲ್ಲಿ ಹರ, ಬಹುರೂಪ, ತ್ರ್ಯಂಬಕ, ಅಪರಾಜಿತ, ವೃಷಾಕಪಿ, ಶಂಭು, ಕಪರ್ದಿ, ರೈವತ, ಮೃಗವ್ಯಾಧ, ಶರ್ವ, ಕಪಾಲಿ_ಎಂಬ ಹೆಸರುಗಳಿವೆ. ಪದ್ಮಪುರಾಣದಲ್ಲಿ ಅಜೈಕಪಾತ್, ಅಹಿರ್ಬುಧ್ನ್ಯ, ವಿರೂಪಾಕ್ಷ, ರೈವತ, ಹರ, ಬಹುರೂಪ, ತ್ರ್ಯಂಬಕ, ಸಾವಿತ್ರ, ಜಯಂತ, ಪಿನಾಕಿ, ಅಪರಾಜಿತ_ಎಂದಿವೆ. ಇವುಗಳಲ್ಲಿ ಶಂಕರನೆಂಬ ಹೆಸರಿಲ್ಲ. ಆದ್ದರಿಂದ ರುದ್ರರಿಗೆ ಅಧಿಪತಿಯಾದ ಶಂಕರನು ಎಂದು ಅರ್ಥಮಾಡಬೇಕು.

2. ಮಣಿಭದ್ರಾದಿ ಯಕ್ಷರು, ಹೇತಿ ಮುಂತಾದ ರಾಕ್ಷಸರು.

3. ಧರ, ಧ್ರುವ, ಸೋಮ, ಸಾವಿತ್ರ, ಅನಿಲ, ಪ್ರತ್ಯೂಷ, ಪ್ರಭಾಸ (ಅನು. ೧೫೦-೧೬) ಸಾವಿತ್ರನಿಗೆ ಅಹನೆಂಬ ಹೆಸರೂ ಉಂಟು (ಆದಿ. ೬೬-೧೮).

4. 'ವಿಜಾನೀಹಿ' ಮ॥; ವೈ॥ ವಾ॥ಗಳಲ್ಲಿ ಈ ಮಾತಿಲ್ಲ.

ಸ್ಯಾತ್ ಪುರೋಧಾಃ । ಸೇನಾನೀನಾಮ್ ಸೇನಾಪತೀನಾಂ ಅಹಂ ಸ್ಕನ್ದಃ ದೇವ ಸೇನಾಪತಿಃ । ಸರಸಾಂ ಯಾನಿ ದೇವಖಾತಾನಿ ಸರಾಂಸಿ ತೇಷಾಂ ಸರಸಾಂ ಸಾಗರಃ ಅಸ್ಮಿ ಭವಾಮಿ ॥

(ಭಾಷ್ಯಾರ್ಥ)

ಎಲೈ ಪಾರ್ಥನೆ, ಪುರೋಧರಲ್ಲಿ ಎಂದರೆ ರಾಜರಿಗೆ ಪುರೋಹಿತರಾಗಿರುವವರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನು ಎಂದು ತಿಳಿ, ಅರಿತುಕೊ. ಏಕೆಂದರೆ ಅವನು ಇಂದ್ರನ (ಪುರೋಹಿತ)ನಾಗಿರುವದರಿಂದ ಮುಖ್ಯ ಪುರೋಧನಾಗಿರುತ್ತಾನೆ. ಸೇನಾನಿಗಳಲ್ಲಿ ಎಂದರೆ ಸೇನಾಪತಿಗಳಲ್ಲಿ ನಾನು ದೇವತೆಗಳ ಸೇನಾಪತಿಯಾದ ಸ್ಕಂದನು. 'ಸರಸಾಮ್': ಯಾವವು ದೇವಖಾತಗಳಿರುವವೋ[1] (ಅವು) ಸರಸ್ಸುಗಳು; ಆ ಸರಸ್ಸುಗಳಲ್ಲಿ ಸಾಗರವಾಗಿರುತ್ತೇನೆ, (ಸಾಗರ)ವಾಗಿರುವೆನು.

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥**

೨೫. ಮಹರ್ಷಿಗಳಲ್ಲಿ ಭೃಗು ನಾನು; ಮಾತುಗಳಲ್ಲಿ ಒಂದಕ್ಷರವಾಗಿರುವೆನು. ಯಜ್ಞಗಳಲ್ಲಿ ಜಪಯಜ್ಞವಾಗಿರುವೆನು, ಸ್ಥಾವರಗಳಲ್ಲಿ ಹಿಮಾಲಯವು.

(ಭಾಷ್ಯ)

೯೦. ಮಹರ್ಷೀಣಾಂ ಭೃಗುಃ ಅಹಮ್ । ಗಿರಾಂ ವಾಚಾಂ ಪದಲಕ್ಷಣಾನಾಮ್ ಏಕಮ್ ಅಕ್ಷರಮ್ ಓಂಕಾರಃ ಅಸ್ಮಿ । ಯಜ್ಞಾನಾಂ ಜಪಯಜ್ಞಃ ಅಸ್ಮಿ । ಸ್ಥಾವರಾಣಾಂ ಸ್ಥಿತಿಮತಾಂ ಹಿಮಾಲಯಃ ॥

(ಭಾಷ್ಯಾರ್ಥ)

ಮಹರ್ಷಿಗಳಲ್ಲಿ ಭೃಗು ನಾನು. ಮಾತುಗಳಲ್ಲಿ ಪದರೂಪವಾದ ನುಡಿಗಳಲ್ಲಿ ಒಂದಕ್ಷರವು ಎಂದರೆ ಓಂಕಾರವಾಗಿರುವೆನು (ನಾನು). ಯಜ್ಞಗಳಲ್ಲಿ ಜಪಯಜ್ಞವಾಗಿರುವೆನು.[2] ಸ್ಥಾವರಗಳಲ್ಲಿ ನಿಂತಿರುವ (ವಸ್ತು)ಗಳಲ್ಲಿ ಹಿಮಾಲಯವು.

---

1. ಯಾರೂ ಅಗೆಯದೆ ತಾವೇ ಆಗಿರುವವೋ.

2. ಹಿಂಸಾದಿಗಳು ಇಲ್ಲದಿರುವದರಿಂದ ಇವು ಶ್ರೇಷ್ಠವೆಂದು ಆ॥ ಟೀಕೆ. ಇನ್ನೇನು ಮಾಡದಿದ್ದರೂ ಬರಿಯ ಜಪದಿಂದಲೇ ಸಿದ್ಧಿಯಾಗುವದು ಎಂದು ಮನುಸ್ಮೃತಿ.

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗನ್ಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥೨೬॥**

೨೬. ವೃಕ್ಷಗಳಲ್ಲೆಲ್ಲ ಅಶ್ವತ್ಥವು ; ಮತ್ತು ದೇವರ್ಷಿಗಳಲ್ಲಿ ನಾರದನು. ಗಂಧರ್ವರಲ್ಲಿ ಚಿತ್ರರಥನು ; ಸಿದ್ಧರಲ್ಲಿ ಕಪಿಲ ಮುನಿಯು.

(ಭಾಷ್ಯ)

೯೧. ಅಶ್ವತ್ಥಃ ಸರ್ವವೃಕ್ಷಾಣಾಮ್ । ದೇವರ್ಷೀಣಾಂ ಚ ನಾರದಃ । ದೇವಾ ಏವ ಸನ್ತಃ ಋಷಿತ್ವಂ ಪ್ರಾಪ್ತಾ ಮನ್ತ್ರದರ್ಶಿತ್ವಾತ್[1] ತೇ ದೇವರ್ಷಯಃ । ತೇಷಾಂ ನಾರದಃ ಅಸ್ಮಿ । ಗನ್ಧರ್ವಾಣಾಂ ಚೈತ್ರರಥಃ ನಾಮ ಗನ್ಧರ್ವೋಽಸ್ಮಿ । ಸಿದ್ಧಾನಾಂ ಜನ್ಮನೈವ ಧರ್ಮಜ್ಞಾನವೈರಾಗ್ಯೈಶ್ವರ್ಯಾತಿಶಯಂ ಪ್ರಾಪ್ತಾನಾಂ ಕಪಿಲಃ ಮುನಿಃ ॥

(ಭಾಷ್ಯಾರ್ಥ)

ಮರಗಳಲ್ಲೆಲ್ಲ ಆರಳಿಯಮರವು (ನಾನು). ಮತ್ತು ದೇವರ್ಷಿಗಳಲ್ಲಿ ನಾರದನು. **ದೇವತೆಗಳೇ ಆಗಿದ್ದು ಮಂತ್ರಗಳನ್ನು ಕಂಡುಹಿಡಿದದ್ದರಿಂದ ಋಷಿತ್ವವನ್ನು ಹೊಂದಿದವರಾದ್ದರಿಂದ ಅವರು ದೇವರ್ಷಿಗಳು ;** ಅವರಲ್ಲಿ ನಾರದನಾಗಿರುವೆನು. ಸಿದ್ಧರುಗಳಲ್ಲಿ, ಎಂದರೆ ಧರ್ಮ, ಜ್ಞಾನ, ವೈರಾಗ್ಯ ಐಶ್ವರ್ಯ–ಇವುಗಳಲ್ಲಿ ಹೆಚ್ಚಿಗೆಯನ್ನುಹುಟ್ಟಿದಂದಿನಿಂದಲೇ ಪಡೆದುಕೊಂಡಿರುವವರಲ್ಲಿ, ಕಪಿಲನೆಂಬ[2] ಮುನಿಯು.

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇನ್ದ್ರಾಣಾಂ ನರಾಣಾಂ ಚ ನರಾಧಿಪಮ್ ॥ ೨೭ ॥**

೨೭. ಕುದುರೆಗಳಲ್ಲಿ ಉಚ್ಚೈಃಶ್ರವಸ್ಸೆಂಬ ಅಮೃತೋದ್ಭವವಾದ (ಕುದುರೆ) ಎಂದು ನನ್ನನ್ನು ತಿಳಿ ; ಗಜೇಂದ್ರರುಗಳಲ್ಲಿ ಐರಾವತವೆಂದೂ ನರರಲ್ಲಿ ನರಾಧಿಪನೆಂದೂ (ತಿಳಿ).

---

1. ‘ ಮನ್ತ್ರದರ್ಶಿನಃ ’ ಮ॥

2. ಸಗರಪುತ್ರರನ್ನು ದಾಹಮಾಡಿದ ಕಪಿಲನೆಂಬ ಮುನಿಯನ್ನು ಹೇಳಿದೆ ; ಸಾಂಖ್ಯದರ್ಶನ ಪ್ರವರ್ತಕನನ್ನಲ್ಲ ಎಂದು ಕೆಲವರ ಅಭಿಪ್ರಾಯ. ವೇದಾವಿರುದ್ಧಾಂಶದಲ್ಲಿ ಸಾಂಖ್ಯದರ್ಶನವೂ ಗೀತೆಗೆ ಮಾನ್ಯವೇ ಎಂದು ಭಾಷ್ಯಕಾರರು ಮುಂದೆ ಹೇಳಿರುವದರಿಂದ ಆ ದರ್ಶನದ ಪ್ರವರ್ತಕನಾದ ಕಪಿಲನೆಂದು ಅರ್ಥಮಾಡಿದರೂ ಯಾವ ತೊಂದರೆಯೂ ಕಾಣುವದಿಲ್ಲ.

(ಭಾಷ್ಯ)

೯೨. ಉಚ್ಚೈಃಶ್ರವಸಮ್ ಅಶ್ವಾನಾಮ್ ಉಚ್ಚೈಃಶ್ರವಾ ನಾಮ ಅಶ್ವರಾಜಃ ತಂ ಮಾಂ ವಿದ್ಧಿ ವಿಜಾನೀಹಿ ಅಮೃತೋದ್ಭವಮ್ ಅಮೃತನಿಮಿತ್ತಮಥನೋದ್ಭವಮ್[1] । ಐರಾವತಮ್ ಇರಾವತ್ಯಾ ಅಪತ್ಯಂ ಗಜೇನ್ದ್ರಾಣಾಂ ಹಸ್ತೀಶ್ವರಾಣಾಮ್, ತಂ ಮಾಂ 'ವಿದ್ಧಿ' ಇತಿ ಅನುವರ್ತತೇ । ನರಾಣಾಂ ಚ ಮನುಷ್ಯಾಣಾಂ ಚ ನರಾಧಿಪಂ ರಾಜಾನಂ ಮಾಂ ವಿದ್ಧಿ ಜಾನೀಹಿ[2] ॥

(ಭಾಷ್ಯಾರ್ಥ)

ಕುದುರೆಗಳಲ್ಲಿ ಉಚ್ಚೈಃಶ್ರವಸ್ಸು. ಉಚ್ಚೈಃಶ್ರವಸ್ಸೆಂಬುದು ಅಶ್ವರಾಜನು ; ಅಮೃತೋದ್ಭವವಾದ, ಅಮೃತಕ್ಕಾಗಿ (ಸಮುದ್ರವನ್ನು) ಕಡೆದದ್ದರಿಂದ ಹುಟ್ಟಿದ[3] ಅದು ನಾನು ಎಂದು ತಿಳಿ, ಅರಿತುಕೊ. ಐರಾವತವೆಂಬುದು ಇರಾವತಿಯ ಮಗನು[4]; ಗಜೇಂದ್ರರಲ್ಲಿ ಎಂದರೆ ಶ್ರೇಷ್ಠವಾದ ಆನೆಗಳಲ್ಲಿ ಆ (ಐರಾವತವು) 'ನಾನು ಎಂದು ತಿಳಿ' ಎಂದು ಇಲ್ಲಿಯೂ ಸೇರಿಕೊಳ್ಳುವ (ಮಾತು). ಮತ್ತು ನರರಲ್ಲಿ ಎಂದರೆ ಮನುಷ್ಯರಲ್ಲಿ ನರಾಧಿಪನು ಎಂದರೆ ಅರಸನು ನಾನು ಎಂದು ತಿಳಿ, ಅರಿತುಕೊ.

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕನ್ದರ್ಪಃ ಸರ್ಪಾಣಾಸ್ಮಿ ವಾಸುಕಿಃ ॥ ೨೮ ॥**

೨೮. ಆಯುಧಗಳಲ್ಲಿ ನಾನು ವಜ್ರವು, ಧೇನುಗಳಲ್ಲಿ ಕಾಮಧೇನುವಾಗಿರುವೆನು. ಮತ್ತು ಪ್ರಜನನಾದ ಕಂದರ್ಪನಾಗಿರುವೆನು, ಸರ್ಪಗಳಲ್ಲಿ ವಾಸುಕಿಯಾಗಿರುವೆನು.

(ಭಾಷ್ಯ)

೯೩. ಆಯುಧಾನಾಮ್ ಅಹಂ ವಜ್ರಂ ದಧೀಚ್ಯಸ್ಥಿಸಂಭವಮ್ ।

---

1. ಈ ಮಾತು ಮ॥ವ್ಯೆ॥ಗಳಲ್ಲಿಲ್ಲ.

2. ಮ॥ವ್ಯೆ॥ಗಳಲ್ಲಿಲ್ಲ.

3. ಅಮೃತದ ಸಂಬಂಧದಿಂದಲೂ ಇಂದ್ರನ ವಾಹನವಾದ್ದರಿಂದಲೂ ಈ ಕುದುರೆಯನ್ನು ವಿಭೂತಿಯಾಗಿ ಗಣಿಸಿದೆ.

4. ಮಂಗಲನು ರಥಂತರಸಾಮವನ್ನು ಗಾನಮಾಡುತ್ತಿರಲು ಈ ಆನೆಯು ಹುಟ್ಟಿತೆಂದೂ ಅದನ್ನು ಇರಾವತಿಗೆ ಮಗನಾಗಿ ಕೊಟ್ಟನೆಂದೂ ಬ್ರಹ್ಮಾಂಡಪುರಾಣ.

ಧೇನೂನಾಂ ದೋಗ್ಧ್ರೀಣಾಮ್ ಅಸ್ಮಿ ಕಾಮಧುಕ್, ವಸಿಷ್ಠಸ್ಯ ಸರ್ವಕಾಮಾನಾಂ ದೋಗ್ಧ್ರೀ ಸಾಮಾನ್ಯಾ ವಾ ಕಾಮಧುಕ್। ಪ್ರಜನಃ ಪ್ರಜನಯಿತಾ ಅಸ್ಮಿ ಕನ್ದರ್ಪಃ ಕಾಮಃ ಸರ್ಪಾಣಾಂ ಸರ್ಪಭೇದಾನಾಮ್ ಅಸ್ಮಿ ವಾಸುಕಿಃ ಸರ್ಪರಾಜಃ ॥

(ಭಾಷ್ಯಾರ್ಥ)

ಆಯುಧಗಳಲ್ಲಿ ದಧೀಚಿಯ ಎಲುಬಿನಿಂದ ಉಂಟಾದ[1] ವಜ್ರವು ನಾನು. ಧೇನುಗಳಲ್ಲಿ ಎಂದರೆ ಹಾಲುಕರೆಯುವ (ಹಸು)ಗಳಲ್ಲಿ ಕಾಮಧೇನು ಎಂದರೆ ವಸಿಷ್ಠನಿಗೆ ಸಕಲ ಕಾಮಗಳನ್ನೂ ಕರೆದಿರುವ (ಕಾಮಧೇನು), ಅಥವಾ (ಎಲ್ಲರಿಗೂ) ಸಮಾನವಾಗಿರುವ ಕಾಮಧೇನು[2] (ಎಂದಾದರೂ ಅರ್ಥವನ್ನು ಮಾಡಬಹುದು). ಪ್ರಜನನಾದ ಎಂದರೆ ಪ್ರಜೆಗಳನ್ನು ಉಂಟುಮಾಡುವ ಕಂದರ್ಪನಾಗಿರುವೆನು. ಸರ್ಪಗಳಲ್ಲಿ ಬಗೆಬಗೆಯ ಹಾವುಗಳಲ್ಲಿ ವಾಸುಕಿ ಎಂಬ ಸರ್ಪರಾಜನಾಗಿರುವೆನು.[3]

**ಅನನ್ತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೃಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥೨೯॥**

೨೯. ಮತ್ತು ನಾಗಗಳಲ್ಲಿ ಅನಂತನಾಗಿರುವೆನು, ಯಾದಸ್ಸುಗಳಿಗೆ ವರುಣನು ನಾನು, ಪಿತೃಗಳಲ್ಲಿ ಅರ್ಯಮನಾಗಿರುವೆನು, ಮತ್ತು ಸಂಯಮನ ಮಾಡುವವರಲ್ಲಿ ಯಮನು ನಾನು.

(ಭಾಷ್ಯ)

೯೪. ಅನನ್ತಶ್ಚ ಅಸ್ಮಿ ನಾಗಾನಾಂ ನಾಗಾನಾಂ ನಾಗವಿಶೇಷಾಣಾಂ ನಾಗರಾಜಶ್ಚ ಅಸ್ಮಿ[4] । ವರುಣಃ ಯಾದಸಾಮ್ ಅಹಮ್ ಅಬ್ದೇವತಾನಾಂ ರಾಜಾ

---

1. ಆತನ ತಪಸ್ಸಿನ ತೇಜಸ್ಸಿನಿಂದ ಕೂಡಿದ.

2. ವಸಿಷ್ಠರ ಕಾಮಧೇನು ಎಂದು ಕಾಮಧೇನುವಿಶೇಷವನ್ನು ಮೊದಲು ಹೇಳಿತ್ತು. ಈಗ ಪುಣ್ಯವಂತರಿಗೆಲ್ಲ ಸ್ವರ್ಗದಲ್ಲಿ ಕಾಮಗಳನ್ನು ಕರೆಯುವದೆಂಬ ಸಾಮಾನ್ಯಾರ್ಥದಲ್ಲಿ ಉಪಯೋಗಿಸಿದೆ ಎಂದು ವಿವರಿಸಿದೆ.

3. ಸರ್ಪ, ನಾಗ–ಎಂಬೆರಡಕ್ಕೂ ಸ್ವಲ್ಪ ಒಳಭೇದವಿದೆ ; ಹೆಡೆಯಿರುವ ಸರ್ಪಗಳು ಮಾತ್ರ ನಾಗ ಎನಿಸುವವು. ಸರ್ಪಗಳು ಮಹಾತಲದಲ್ಲಿಯೂ ನಾಗಗಳು ಪಾತಾಲದಲ್ಲಿಯೂ ಇರುವವೆಂದು (ಭಾಗ. ೫-೨೪-೨೯, ೩೧) ಪುರಾಣ.

4. ‘ ಅನನ್ತೋ ನಾಮ ನಾಗೋಽಸ್ಮಿ ನಾಗಾನಾಂ ನಾಗಭೇದಾನಾಂ ನಾಗರಾಜಃ ’ ಮ॥ವ್ಯಾ॥

ಅಹಮ್ । ಪಿತ್ರ್ಯಾಣಾಮ್ ಅರ್ಯಮಾ ನಾಮ ಪಿತೃರಾಜಶ್ಚ ಅಸ್ಮಿ । ಯಮಃ ಸಂಯಮತಾಂ ಸಂಯಮನಂ ಕುರ್ವತಾಮ್ ಅಹಮ್ ॥

(ಭಾಷ್ಯಾರ್ಥ)

ನಾಗರುಗಳಲ್ಲಿ ಬಗೆಬಗೆಯ ನಾಗರುಗಳಲ್ಲಿ ಅನಂತನಾಗಿರುವೆನು, ನಾಗರಾಜನಾಗಿರುವೆನು. ಜಲಚರಗಳಿಗೆ ನಾನು ಜಲದೇವತೆಗಳ ಅರಸನಾದ ವರುಣನು ನಾನು. ಪಿತೃಗಳಲ್ಲಿ ಅರ್ಯಮನೆಂಬ ಪಿತೃರಾಜನಾಗಿರುವೆನು. ಸಂಯಮಮಾಡುವವರಲ್ಲಿ ದಂಡನೆಯನ್ನು ಮಾಡುವವರಲ್ಲಿ ಯಮನು ನಾನು.

**ಪ್ರಹ್ಲಾದಶ್ಚ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇನ್ದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥**

೩೦. ದೈತ್ಯರಲ್ಲಿ ಪ್ರಹ್ಲಾದನು, ಎಣಿಸುವವರಲ್ಲಿ ಕಾಲನು ನಾನು. ಮೃಗಗಳಲ್ಲಿ ಮೃಗೇಂದ್ರನೂ ನಾನು, ಮತ್ತು ಪಕ್ಷಿಗಳಲ್ಲಿ ವೈನತೇಯನು. ।

(ಭಾಷ್ಯ)

೩೦. ಪ್ರಹ್ಲಾದಃ ನಾಮ ಚ ಅಸ್ಮಿ ದೈತ್ಯಾನಾಂ ದಿತಿವಂಶ್ಯಾನಾಮ್ ಕಾಲಃ ಕಲಯತಾಮ್ ಕಲನಂ ಗಣನಂ ಕುರ್ವತಾಮ್ ಅಹಮ್ । ಮೃಗಾಣಾಂ ಚ ಮೃಗೇನ್ದ್ರಃ ಸಿಂಹಃ ವ್ಯಾಘ್ರೋ ವಾ ಅಹಮ್ । ವೈನತೇಯಶ್ಚ ಗರುತ್ಮಾನ್ ವಿನತಾಸುತಃ ಪಕ್ಷಿಣಾಂ ಪತತ್ರಿಣಾಮ್ ॥

(ಭಾಷ್ಯಾರ್ಥ)

ಮತ್ತು ದೈತ್ಯರಲ್ಲಿ ಎಂದರೆ **ದಿತಿಯ** ವಂಶದಲ್ಲಿ ಹುಟ್ಟಿದವರಲ್ಲಿ ಪ್ರಹ್ಲಾದನೆಂಬವನಾಗಿರುವೆನು 'ಕಲಯತಾಮ್' (ಎಣಿಸುವವರಲ್ಲಿ) ಕಲನವೆಂದರೆ ಲೆಕ್ಕವು ; (ಅದನ್ನು) ಮಾಡುವವರಲ್ಲಿ ಕಾಲವು ನಾನು. ಮತ್ತು ಮೃಗಗಳಲ್ಲಿ ನಾನು ಮೃಗೇಂದ್ರನು ಎಂದರೆ ಸಿಂಹವು ಅಥವಾ ಹುಲಿಯು. ಮತ್ತು ಪಕ್ಷಿಗಳಲ್ಲಿ ರೆಕ್ಕೆಯ (ಪ್ರಾಣಿ)ಗಳಲ್ಲಿ ವೈನತೇಯನು ಎಂದರೆ ವಿನತೆಯ ಮಗನಾದ ಗರುತ್ಮಂತನು.

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧ ॥**

೩೧. ಪಾವನಮಾಡುವವರಲ್ಲಿ ಪವನನಾಗಿರುವೆನು. ಶಸ್ತ್ರಧಾರಿ

ಗಳಲ್ಲಿ ರಾಮನು ನಾನು. ಝಷಗಳಲ್ಲಿ ಮಕರವೂ ಆಗಿರುವೆನು. ಸ್ರೋತಸ್ಸು ಗಳಲ್ಲಿ ಜಾಹ್ನವಿಯಾಗಿರುವೆನು.

(ಭಾಷ್ಯ)

೯೬. ಪವನಃ ವಾಯುಃ ಪವತಾಂ ಪಾವಯಿತೄಣಾಮ್ ಅಸ್ಮಿ। ಶಸ್ತ್ರಭೃತಾನಾಮ್ ಅಹಮ್। ಶಸ್ತ್ರಾಣಾಂ ಧಾರಯಿತೄಣಾಂ ದಾಶರಥಿಃ ರಾಮಃ ಅಹಮ್। ಝಷಾಣಾಂ ಮತ್ಸ್ಯಾದೀನಾಂ ಮಕರೋ ನಾಮ ಜಾತಿವಿಶೇಷಃ ಅಹಮ್। ಸ್ರೋತಸಾಂ ಸ್ರವನ್ತೀನಾಮ್ ಅಸ್ಮಿ ಜಾಹ್ನವೀ ಗಙ್ಗಾ ॥

(ಭಾಷ್ಯಾರ್ಥ)

ಪಾವನಮಾಡುವವರಲ್ಲಿ ಶುದ್ಧಿಗೊಳಿಸುವವರಲ್ಲಿ ಪವನನು ಎಂದರೆ ವಾಯು ವಾಗಿರುತ್ತೇನೆ. ಶಸ್ತ್ರಧಾರಿಗಳಲ್ಲಿ ರಾಮನು ನಾನು, ಶಸ್ತ್ರವನ್ನು ಧರಿಸಿ (ಯುದ್ಧ ಮಾಡುವವರಲ್ಲಿ) ದಶರಥಪುತ್ರನಾದ ರಾಮನು ನಾನು. ಝಷಗಳಲ್ಲಿ ಎಂದರೆ ಮೀನು ಮುಂತಾದವುಗಳಲ್ಲಿ ಮಕರವೆಂಬ ಜಾತಿಗೆ ಸೇರಿದ (ಪ್ರಾಣಿಯು) ನಾನು. ಸ್ರೋತಸ್ಸುಗಳಲ್ಲಿ ಹರಿಯುವ (ನದಿ)ಗಳಲ್ಲಿ ಜಾಹ್ನವಿಯು ಎಂದರೆ ಗಂಗೆಯು ನಾನು.

**ಸರ್ಗಾಣಾಮಾದಿರನ್ತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨ ॥**

೩೨. ಅರ್ಜುನನೆ, ಸರ್ಗಗಳಿಗೆ ಆದಿ, ಅಂತ, ಮಧ್ಯವೂ ನಾನು. ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯು (ನಾನು). ವಾದಮಾಡುವವರ ವಾದವು ನಾನು.

(ಭಾಷ್ಯ)

೯೭. ಸರ್ಗಾಣಾಂ ಸೃಷ್ಟೀನಾಮ್ ಆದಿಃ ಅನ್ತಶ್ಚ ಮಧ್ಯಂ ಚೈವ ಅಹಮ್ ಉತ್ಪತ್ತಿಸ್ಥಿತಿಲಯಾ ಅಹಮ್ ಅರ್ಜುನ। ಭೂತಾನಾಂ ಜೀವಾದಿಷ್ಠಿತಾನಾಮೇವ[1]। ಆದಿಃ, ಅನ್ತಶ್ಚ ಇತ್ಯಾದ್ಯುಕ್ತಮ್[2] ಉಪಕ್ರಮೇ। ಇಹ ತು ಸರ್ವಸ್ಯೈವ ಸರ್ಗ ಮಾತ್ರಸ್ಯ ಇತಿ ವಿಶೇಷಃ। ಅಧ್ಯಾತ್ಮವಿದ್ಯಾ ವಿದ್ಯಾನಾಂ ಮೋಕ್ಷಾರ್ಥತ್ವಾತ್

---

1. ‘ಜೀವಾವಿಷ್ಟಾನಾಮ್’ ಎಂಬ ಮು॥ಪ್ರೈ॥ ಪಾಠಗಳಿಗಿಂತ ಇದು ಉತ್ತಮ.
2. ‘ಇತ್ಯುಕ್ತಮ್’ ಮು॥ಪ್ರೈ॥

ಪ್ರಧಾನಮ್ ಅಸ್ಮಿ । ವಾದಃ ಅರ್ಥನಿರ್ಣಯಹೇತುತ್ವಾತ್ ಪ್ರವದತಾಂ ಪ್ರಧಾನಂ ಅತಃ ಸಃ ಅಹಮ್ ಅಸ್ಮಿ । ಪ್ರವಕ್ತೃದ್ವಾರೇಣ ವದನಭೇದಾನಾಮೇವ ವಾದಜಲ್ಪ ವಿತಣ್ಡಾನಾಮ್ ಇಹ ಗ್ರಹಣಮ್ 'ಪ್ರವದತಾಮ್' ಇತಿ ॥

(ಭಾಷ್ಯಾರ್ಥ)

ಸರ್ಗಗಳಿಗೆ ಎಂದರೆ ಸೃಷ್ಟಿಗಳಿಗೆ, ಎಲೈ ಅರ್ಜುನನೆ, ಆದಿಯೂ ಅಂತವೂ ಮಧ್ಯವೂ ನಾನೇ; ಹುಟ್ಟು, ಇರವು, ಹೊಂದು-ಇವುಗಳು ನಾನೇ. (ಈ ಅಧ್ಯಾಯದ) ಮೊದಲಿನಲ್ಲಿ (೧೦-೨೦) ಜೀವರು ವಾಸಮಾಡುವ ಭೂತ (ಶರೀರ)ಗಳಿಗೆ ಮಾತ್ರ ಆದಿಯೂ ಅಂತವೂ ಮುಂತಾದದ್ದು (ನಾನೇ) ಎಂದು ಹೇಳಿತ್ತು; ಆದರೆ ಇಲ್ಲಿಯೋ (ಎಂದರೆ) ಇಡಿಯ ಸೃಷ್ಟಿಗೇ[1] ಆದಿಯೂ ಅಂತವೂ ಎಂದು ಹೇಳಿದೆ ಎಂಬುದು (ಇಲ್ಲಿಯ) ವಿಶೇಷವು.

ವಿದ್ಯೆಗಳಲ್ಲಿ ಮೋಕ್ಷವೆಂಬ ಪ್ರಯೋಜನವುಳ್ಳದ್ದಾದ್ದರಿಂದ ಪ್ರಧಾನವಾದ ಅಧ್ಯಾತ್ಮವಿದ್ಯೆಯಾಗಿರುವೆನು.[2] ವಾದಮಾಡುವವರಿಗೆ, ವಿಷಯವನ್ನು ನಿರ್ಣಯ ಮಾಡುವದಕ್ಕೆ ಕಾರಣವಾಗಿರುವದರಿಂದ ವಾದವು ಮುಖ್ಯವೆನಿಸುವದು. ಆದ್ದರಿಂದ ಅದು ನಾನು ಆಗಿರುವೆನು. (ಇಲ್ಲಿ) ವಾದಮಾಡುವವರಿಗೆ (ಎಂದು ಹೇಳುವ) ಮೂಲಕ ಚರ್ಚೆಯ ಭೇದಗಳಾದ **ವಾದ**, ಜಲ್ಪ, **ವಿತಂಡಾ**[3]-ಎಂಬ ಮೂರು ಬಗೆಗಳನ್ನೇ ತೆಗೆದುಕೊಂಡಿರುತ್ತದೆ (ಎಂದು ತಿಳಿಯಬೇಕು).

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲಃ ಧಾತಾಹಂ ವಿಶ್ವತೋಮುಖಃ ॥ ೩೩ ॥**

೩೩. ಅಕ್ಷರಗಳಲ್ಲಿ ಅಕಾರವಾಗಿರುವೆನು; ಮತ್ತು ಸಾಮಾಸಿಕಕ್ಕೆ ದ್ವಂದ್ವವು. ನಾನೇ ಅಕ್ಷಯವಾದ ಕಾಲವು, ವಿಶ್ವತೋಮುಖನಾದ ಧಾತನು ನಾನು.

---

1. ಸೃಷ್ಟಿಗಳು ಲೆಕ್ಕವಿಲ್ಲದಷ್ಟಿರುವದರಿಂದ ಮೂಲದಲ್ಲಿ ಸೃಷ್ಟಿಗಳು ಎಂದು ಬಹು ವಚನವನ್ನು ಉಪಯೋಗಿಸಿದೆ. ಸೃಷ್ಟಿಮಾತ್ರಕ್ಕೇ ಪರಮಾತ್ಮನು ಆಧಾರನು ಎಂದು ಭಾವ.

2. ಮಿಕ್ಕವಿದ್ಯೆಗಳು ಸಂಸಾರಕ್ಕೆ ಮೂಲವಾಗಿರುವ ಅವಿದ್ಯೆಯನ್ನು ಕಳೆಯಲಾರ ವಾದ್ದರಿಂದ ಮುಖ್ಯಾರ್ಥದಲ್ಲಿ ಅವು ವಿದ್ಯೆಗಳಲ್ಲ.

3. ಎದುರಾಳಿಯನ್ನು ಗೆಲ್ಲಬೇಕೆಂಬ ಉದ್ದೇಶದಿಂದ ಚರ್ಚಿಸುವದು ಜಲ್ಪ; ತನ್ನ ಪಕ್ಷವನ್ನು ನಿರ್ಣಯಮಾಡುವ ಗೋಜಿಗೆ ಹೋಗದೆ ಮತ್ತೊಬ್ಬರ ಪಕ್ಷವನ್ನು ಖಂಡಿಸುವ ಚರ್ಚೆಯು ವಿತಂಡಾ; ತತ್ತ್ವವನ್ನು ನಿರ್ಣಯಿಸುವದಕ್ಕಾಗಿ ಮಾಡುವ ಚರ್ಚೆಯು ವಾದ.

(ಭಾಷ್ಯ)

೯೮. ಅಕ್ಷರಾಣಾಂ ವರ್ಣಾನಾಮ್ ಅಕಾರೋ ವರ್ಣಃ ಅಸ್ಮಿ । ದ್ವನ್ದ್ವಃ ಸಮಾಸಃ ಅಸ್ಮಿ ಸಾಮಾಸಿಕಸ್ಯ ಚ ಸಮಾಸಸಮೂಹಸ್ಯ । ಕಿಂಚ ಅಹಮೇವ ಅಕ್ಷಯಃ ಅಕ್ಷೀಣಃ ಕಾಲಃ ಪ್ರಸಿದ್ಧಃ ಕ್ಷಣಾದ್ಯಾಖ್ಯಃ । ಅಥವಾ ಪರಮೇಶ್ವರಃ ಕಾಲಸ್ಯಾಪಿ ಕಾಲಃ ಅಸ್ಮಿ[1] । ಧಾತಾ ಅಹಂ ಕರ್ಮಫಲಸ್ಯ ವಿಧಾತಾ ಸರ್ವಜಗತಃ ವಿಶ್ವತೋಮುಖಃ ಸರ್ವತೋಮುಖಃ ॥

(ಭಾಷ್ಯಾರ್ಥ)

ಅಕ್ಷರಗಳಲ್ಲಿ ವರ್ಣಗಳಲ್ಲಿ ಅಕಾರವೆಂಬ[2] ವರ್ಣವಾಗಿರುತ್ತೇನೆ ಸಾಮಾಸಿಕಕ್ಕೆ ಸಮಾಸಗಳ ಗುಂಪಿಗೆ ನಾನು ದ್ವಂದ್ವವೆಂಬ[3] ಸಮಾಸವಾಗಿರುವೆನು. ಮತ್ತು ನಾನು ಅಕ್ಷಯವಾದ ಎಂದರೆ ಸವೆಯದ ಕಾಲವು, ಕ್ಷಣ ಮುಂತಾದ ಹೆಸರುಳ್ಳ ಪ್ರಸಿದ್ಧವಾದ (ಕಾಲವು). **ಅಥವಾ ಕಾಲಕ್ಕೂ ಕಾಲನಾದ ಪರಮೇಶ್ವರನಾಗಿರುವೆನು.**[4] ವಿಶ್ವತೋಮುಖನಾದ ಎಂದರೆ ಎಲ್ಲೆಲ್ಲಿಯೂ ಮುಖವುಳ್ಳ[5] ಧಾತನು, ಜಗತ್ತಿಗೆಲ್ಲ ಕರ್ಮಫಲವನ್ನು ಗೊತ್ತುಮಾಡುವವನು, ನಾನು.

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥**

೩೪. ಸರ್ವಹರನಾದ ಮೃತ್ಯುವು ನಾನು, ಮತ್ತು ಮುಂದೆ ಆಗತಕ್ಕವರಿಗೆ ಉದ್ಭವವು (ನಾನು). ನಾರಿಯರಲ್ಲಿ ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇಧೆ. ಧೃತಿ, ಕ್ಷಮೆ.

---

1. 'ಪರಮೇಶ್ವರೋ ವಾ ಕಾಲಸ್ಯಾಪಿ ಕಾಲಃ' ಮು॥ ಮೈ॥

2. ಅಕಾರವು ಎಲ್ಲಾ ಅಕ್ಷರಗಳಲ್ಲಿಯೂ ಸೇರಿಕೊಂಡೇ ಇರುವದೆಂದು ಶ್ರುತಿ (ಐ.ಆ.) ಉಚ್ಚಾರಣೆಯಲ್ಲಿ ಗಂಟಲು ತೆಗೆಯದೆ ಯಾವ ವರ್ಣವೂ ಹುಟ್ಟದು; ತೆಗೆದಮಾತ್ರದಿಂದ ಅಕಾರವು ಹೊರತೋರಿಕೊಳ್ಳುವದು.

3. ದ್ವಂದ್ವಸಮಾಸದಲ್ಲಿ ಹಿಂದಿನ ಮುಂದಿನ ಎರಡು ಪದಗಳ ಅರ್ಥವೂ ಮುಖ್ಯವಾಗಿರುವದು.

4. ಕಾಲಕ್ಕಿಂತಲೂ ಪರಮೇಶ್ವರನಿಗೆ ಅಕ್ಷಯನೆಂಬ ವಿಶೇಷಣವು ಹೆಚ್ಚು ಒಪ್ಪುತ್ತದೆ.

5. ಸರ್ವಜ್ಞನಾದ.

(ಭಾಷ್ಯ)

೯೯. ಮೃತ್ಯುಃ ದ್ವಿವಿಧಃ ಧನಾದಿಹರಃ[1] ಪ್ರಾಣಹರಶ್ಚ। ತತ್ರ ಯಃ ಪ್ರಾಣಹರಃ ಸ ಸರ್ವಹರ ಉಚ್ಯತೇ । ಸೋಽಹಮ್ ಇತ್ಯರ್ಥಃ । ಅಥವಾ ಪರ ಈಶ್ವರಃ ಪ್ರಲಯೇ ಸರ್ವಹರಣಾತ್ ಸರ್ವಹರಃ । ಸೋಽಹಮ್ । ಉದ್ಭವಃ ಉತ್ಕರ್ಷಃ ಅಭ್ಯುದಯಃ ತತ್ಪ್ರಾಪ್ತಿಹೇತುಶ್ಚ ಅಹಮ್ । ಕೇಷಾಮ್ ? ಭವಿಷ್ಯತಾಂ ಭಾವಿಕಲ್ಯಾಣಾನಾಮ್ ಉತ್ಕರ್ಷಪ್ರಾಪ್ತಿಯೋಗ್ಯಾನಾಮ್ ಇತ್ಯರ್ಥಃ । ಕೀರ್ತಿಃ ಶ್ರೀಃ ವಾಕ್ಚ ನಾರೀಣಾಂ ಸ್ಮೃತಿಃ ಮೇಧಾ ಧೃತಿಃ ಕ್ಷಮಾ-ಇತ್ಯೇತಾಃ ಉತ್ತಮಾಃ ಸ್ತ್ರೀಣಾಮ್[2] ಅಹಮ್ ಅಸ್ಮಿ । ಯಾಸಾಮ್ ಆಭಾಸಮಾತ್ರಸಂಬನ್ಧೇನಾಪಿ ಲೋಕಃ ಕೃತಾರ್ಥಮ್ ಆತ್ಮಾನಂ ಮನ್ಯತೇ[3] ॥

(ಭಾಷ್ಯಾರ್ಥ)

ಮೃತ್ಯು ಎರಡು ಬಗೆ, ಧನವೇ ಮುಂತಾದದ್ದನ್ನು ಅಪಹರಿಸುವದು (ಒಂದು) ಪ್ರಾಣವನ್ನೇ ಅಪಹರಿಸುವದು (ಇನ್ನೊಂದು); ಇವುಗಳಲ್ಲಿ ಯಾವದು ಪ್ರಾಣವನ್ನೇ ಅಪಹರಿಸುವದೋ ಅದಕ್ಕೆ ಸರ್ವಹರ (ಮೃತ್ಯು) ಎಂದು ಹೆಸರು. ಅದು ನಾನು ಎಂದರ್ಥ. **ಅಥವಾ ಪ್ರಲಯಕಾಲದಲ್ಲಿ ಎಲ್ಲವನ್ನೂ ನಾಶಗೊಳಿಸುವದರಿಂದ ಪರಮೇಶ್ವರನು ಸರ್ವಹರ (ಮೃತ್ಯು)**; ಅವನು ನಾನು. ಉದ್ಭವವು ಎಂದರೆ ಹೆಚ್ಚಿಗೆ, ಏಳಿಗೆ ಮತ್ತು ಅದನ್ನು ಪಡೆದುಕೊಳ್ಳುವ ಸಾಧನವು ನಾನು. ಯಾರಿಗೆ ? ಎಂದರೆ ಮುಂದೆ ಆಗತಕ್ಕವರಿಗೆ, ಮುಂದೆ ಮಂಗಲವು ಆಗಬೇಕಾಗಿರುವವರಿಗೆ ಹೆಚ್ಚಿಗೆಯನ್ನು ಪಡೆಯುವ ಯೋಗ್ಯತೆಯಿರುವವರಿಗೆ (ಆಗುವ ಉತ್ಕರ್ಷವು ನಾನು) ಎಂದರ್ಥ. **ನಾರಿಯರಲ್ಲಿ, ಸ್ತ್ರೀಯರಲ್ಲಿ, ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇಧೆ, ಧೃತಿ, ಕ್ಷಮೆ–ಎಂಬೀ ಉತ್ತಮರಾಗಿರುವೆನು,[4] ನಾನು. ಇವರ ಬರಿಯ ನೆರಳಿನ ಸಂಬಂಧವಿದ್ದರೆ ಸಾಕು, (ಅಷ್ಟರಿಂದಲೇ) ಮನುಷ್ಯನು ತಾನು ಕೃತಾರ್ಥನೆಂದುಕೊಳ್ಳುವನು.**

---

1. ' ಧನಹರಃ ' ಮು॥ ಮೈ.
2. ' ಉತ್ತಮೋತ್ತಮಸ್ತ್ರೀಣಾಮ್ ' ಮು॥
3. ಲೋಕಾಃ ...ಮನ್ಯನ್ತೇ ' ಮು॥
4. ಕೀರ್ತಿ ಮುಂತಾದವು ಆಯಾ ದೇವತೆಗಳ ಹೆಸರುಗಳು-ವಾಕ್ಕನ್ನು ಬಿಟ್ಟರೆ ಮಿಕ್ಕವರೆಲ್ಲರೂ ದಕ್ಷನ ಮಕ್ಕಳೆಂದು ಪುರಾಣ ; ವಾಗ್ದೇವಿಯು ಬ್ರಹ್ಮನ ಮಾನಸಪುತ್ರಿ.

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛನ್ದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥**

೩೫. ಹಾಗೂ ಸಾಮಗಳಲ್ಲಿ ಬೃಹತ್ಸಾಮವು, ಛಂದಸ್ಸುಗಳಲ್ಲಿ ಗಾಯತ್ರಿ ನಾನು. ಮಾಸಗಳಲ್ಲಿ ಮಾರ್ಗಶೀರ್ಷವು ನಾನು. ಋತುಗಳಲ್ಲಿ ಕುಸುಮಾಕರವು.

(ಭಾಷ್ಯ)

೧೦೦. ಬೃಹತ್ಸಾಮ ತಥಾ ಸಾಮ್ನಾಂ ಪ್ರಧಾನಮ್ ಅಸ್ಮಿ । ಗಾಯತ್ರೀ ಛನ್ದಸಾಮ್ ಅಹಮ್ । ಗಾಯತ್ರ್ಯಾದಿಚ್ಛನ್ದೋವಿಶಿಷ್ಟಾನಾಮ್ ಋಚಾಂ ಗಾಯತ್ರೀ ಋಕ್ ಅಹಮ್ ಅಸ್ಮಿ ಇತ್ಯರ್ಥಃ । ಮಾಸಾನಾಂ ಮಾರ್ಗಶೀರ್ಷಃ ಅಹಮ್ । ಋತೂನಾಂ ಕುಸುಮಾಕರಃ ವಸನ್ತಃ ॥

(ಭಾಷ್ಯಾರ್ಥ)

ಮತ್ತು ಸಾಮಗಳಲ್ಲೆಲ್ಲ ಮುಖ್ಯವಾದ ಬೃಹತ್ಸಾಮವಾಗಿರುವೆನು.[1] ಛಂದಸ್ಸುಗಳಲ್ಲಿ ಗಾಯತ್ರಿಯು[2] ನಾನು. ಗಾಯತ್ರಿಯೇ ಮುಂತಾದ ಛಂದಸ್ಸುಗಳಿಂದ ಕೂಡಿದ ಋಕ್ಕುಗಳಲ್ಲಿ ನಾನು ಗಾಯತ್ರಿ ಎಂಬ ಋಕ್ಕಾಗಿರುವೆನು ಎಂದರ್ಥ. ಮಾಸಗಳಲ್ಲಿ ಮಾರ್ಗಶೀರ್ಷವು[3] ನಾನು. ಋತುಗಳಲ್ಲಿ ಕುಸುಮಾಕರವು ಎಂದರೆ ವಸಂತವು.[4]

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥**

---

1. "ತ್ವಾಮಿದ್ಧಿ ಹವಾಮಹೇ" (ಋ. ೪-೭-೨೧-೧, ಸಾಮ. ೩-೧-೫-೨) ಎಂಬ ಇಂದ್ರಪಾರಮ್ಯವನ್ನು ಹೇಳುವ ಸಾಮ.

2. ದ್ವಿಜತ್ವಹೇತುವಾದದ್ದು ; ಇಲ್ಲಿ ಛಂದಸ್ಸುಗಳೆಂದರೆ ವೇದಮಂತ್ರಗಳು.

3. ಪೈರುಗಳು ಪಕ್ವವಾಗುವ ಕಾಲವು ಮಾರ್ಗಶೀರ್ಷವು. ಹಿಂದಿನವರು ಮಾರ್ಗಶೀರ್ಷದಿಂದ ಮೊದಲು ಮಾಡಿಕೊಂಡೇ ತಿಂಗಳುಗಳನ್ನು ಎಣಿಸುತ್ತಿದ್ದರೆಂದು ಕೆಲವರ ನಂಬಿಕೆ. ತಿಲಕರವರ **ಓರಿಯನ್** ಎಂಬ ಗ್ರಂಥವನ್ನು ನೋಡಿರಿ.

4. ನೋಡುವದಕ್ಕೆ ರಮಣೀಯವಾಗಿರುವ ಋತು.

೩೬. ಛಲವನ್ನು ಮಾಡುವವರಲ್ಲಿ ದ್ಯೂತವಾಗಿರುವೆನು ; ತೇಜಸ್ವಿಗಳ ತೇಜಸ್ಸು ನಾನು. ಜಯವಾಗಿರುವೆನು, ವ್ಯವಸಾಯವಾಗಿರುವೆನು, ಸತ್ತ್ವವಂತರ ಸತ್ತ್ವವು ನಾನು.

(ಭಾಷ್ಯ)

೧೦೧. ದ್ಯೂತಮ್ ಅಕ್ಷದೇವನಾದಿಲಕ್ಷಣಂ ಛಲಯತಾಂ ಛಲಸ್ಯ ಕರ್ತೄಣಾಮ್ ಅಸ್ಮಿ । ತೇಜಃ ತೇಜಸ್ವಿನಾಮ್ ಅಹಮ್ । ಜಯಃ ಅಸ್ಮಿ ಜೇತೄಣಾಮ್ । ವ್ಯವಸಾಯೋಽಸ್ಮಿ ವ್ಯವಸಾಯಿನಾಮ್ ಸತ್ತ್ವಂ ಸತ್ತ್ವವತಾಂ ಸಾತ್ತ್ವಿಕಾನಾಮ್ ಅಹಮ್ ॥

(ಭಾಷ್ಯಾರ್ಥ)

ಛಲಯತಾಮ್ ಛಲವನ್ನು ಮಾಡುವವರಿಗೆ (ಮೋಸಮಾಡುವವರಿಗೆ) ಪಗಡೆಯಾಟವೇ ಮುಂತಾದ ರೂಪದ ಜೂಜಾಗಿರುವೆನು. ತೇಜಸ್ವಿಗಳಲ್ಲಿ ತೇಜವು ನಾನು. ಗೆಲ್ಲುವವರಿಗೆ ಜಯವಾಗಿರುವೆನು ; ನಿಶ್ಚಯವಂತರಿಗೆ ವ್ಯವಸಾಯ (ನಿಶ್ಚಯ)ವಾಗಿರುವೆನು. ಸತ್ತ್ವವಂತರ ಸಾತ್ತ್ವಿಕರ ಸತ್ತ್ವವು ನಾನು.

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಣ್ಡವಾನಾಂ ಧನಞ್ಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ೩೭ ॥**

೩೭. ವೃಷ್ಣಿಗಳಲ್ಲಿ ವಾಸುದೇವನಾಗಿರುವೆನು ; ಪಾಂಡವರಲ್ಲಿ ಧನಂಜಯನು. ಮುನಿಗಳಲ್ಲಿ ವ್ಯಾಸನಾಗಿರುವೆನು. ಕವಿಗಳಲ್ಲಿ ಉಶನನೆಂಬ ಕವಿಯು.

(ಭಾಷ್ಯ)

೧೦೨. ವೃಷ್ಣೀನಾಂ ಯಾದವಾನಾಂ ವಾಸುದೇವಃ ಅಸ್ಮಿ । ಅಯಮೇವಾಹಂ ತ್ವತ್ಸಖಾ । ಪಾಣ್ಡವಾನಾಂ ಧನಞ್ಜಯಃ । ತ್ವಮೇವ । ಮುನೀನಾಂ ಮನನಶೀಲಾನಾಂ ಸರ್ವಪದಾರ್ಥಜ್ಞಾನಿನಾಮಪಿ ಅಹಂ ವ್ಯಾಸಃ । ಕವೀನಾಂ ಕ್ರಾನ್ತದರ್ಶಿನಾಮ್ ಉಶನಾ ಕವಿಃ ಅಸ್ಮಿ ॥

(ಭಾಷ್ಯಾರ್ಥ)

ವೃಷ್ಣಿಗಳಲ್ಲಿ[1] ಎಂದರೆ ಯಾದವರಲ್ಲಿ **ವಾಸುದೇವ**ನಾಗಿರುವೆನು.[2] ಇಗೋ ಈ ನಿನ್ನ ಸ್ನೇಹಿತನಾದ ನಾನೇ. ಪಾಂಡವರಲ್ಲಿ **ಧನಂಜಯನು**, ನೀನೇ. ಮುನಿಗಳಲ್ಲಿ ಮನನಶೀಲರಾದವರಲ್ಲಿ ಸರ್ವಪದಾರ್ಥಗಳನ್ನೂ ಅರಿತವರಲ್ಲಿ ನಾನು ವ್ಯಾಸನು. ಕವಿಗಳಲ್ಲಿ ಎಂದರೆ ದೂರದರ್ಶಿಗಳಲ್ಲಿ ಉಶನನೆಂಬ ಕವಿಯಾಗಿರುವೆನು.

**ದಣ್ಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥**

೩೮. ದಮನಮಾಡುವವರಲ್ಲಿ ದಂಡವಾಗಿರುವೆನು. ಜಿಗೀಷುಗಳಲ್ಲಿ ನೀತಿಯಾಗಿರುವೆನು. ಗುಹ್ಯಗಳಲ್ಲಿ ಮೌನವಾಗಿರುವೆನು. ಜ್ಞಾನವುಳ್ಳವರ ಜ್ಞಾನವು ನಾನು.

(ಭಾಷ್ಯ)

೧೦೩. ದಣ್ಡಃ ದಮಯತಾಮ್ ದಮಯಿತೄಣಾಮ್ । ಅಸ್ಮಿ ಅದಾನ್ತಾನಾಂ ದಮನಕಾರಣಮ್ । ನೀತಿಃ ಅಸ್ಮಿ ಜಿಗೀಷತಾಂ ಜೇತುಮ್ ಇಚ್ಛತಾಮ್ । ಮೌನಂ ಚೈವ ಅಸ್ಮಿ ಗುಹ್ಯಾನಾಂ **ಗೋಪ್ಯಾನಾಮ್** । ಜ್ಞಾನಂ ಜ್ಞಾನವತಾಮ್ ಅಹಮ್ ॥

(ಭಾಷ್ಯಾರ್ಥ)

ದಮನಮಾಡುವವರಲ್ಲಿ ಎಂದರೆ ದಂಡಿಸುವವರಲ್ಲಿ ದಾಂತರಲ್ಲದವರನ್ನು ಪಳಗಿಸುವದಕ್ಕೆ ಕಾರಣವಾಗಿರುವ ದಂಡವಾಗಿರುವೆನು. ಜಿಗೀಷುಗಳಲ್ಲಿ ಗೆಲ್ಲಬೇಕೆಂಬವರಲ್ಲಿ (ರಾಜ) ನೀತಿಯಾಗಿರುವೆನು. ಗುಹ್ಯಗಳಲ್ಲಿ ಎಂದರೆ ಗುಟ್ಟುಗಳಲ್ಲಿ ಮೌನವಾಗಿರುವೆನು. ಜ್ಞಾನವಂತರಲ್ಲಿ ಜ್ಞಾನವು ನಾನು.

---

1. ಮಧುವಿನ ವಂಶದಲ್ಲಿ ವೃಷಣನೆಂಬವನು ಹುಟ್ಟಿದ್ದನು; ಅವನಿಂದ ಆ ವಂಶದವರಿಗೆ **ವೃಷ್ಣಿ**ಗಳೆಂದು ಹೆಸರಾಯಿತು. ಇದರಂತೆ ಮಧುವಿನ ವಂಶದವರೆಂಬ ಕಾರಣದಿಂದ **ಮಾಧವರೆಂದೂ** ಹೆಸರಾಯಿತು–ಎಂದು **ಹರಿವಂಶ, ಬ್ರಹ್ಮಪುರಾಣ**ಗಳಲ್ಲಿ ಹೇಳಿದೆ.

2. ವಸುದೇವನು ಹುಟ್ಟಿದ ಕಾಲಕ್ಕೆ ದೇವತೆಗಳು ನಗಾರಿಯನ್ನು ಬಾರಿಸಿದರು ಎಂದು ಪುರಾಣ. ಅವನ ಮಗನಾದ್ದರಿಂದಲೂ ಮತ್ತು ಸ್ವತಃ ಚತುರ್ಭುಜಾದಿವಿಶೇಷ ರೂಪಗಳಿಂದಲೂ ಅಮಾನುಷಲೀಲೆಗಳಿಂದ ಪ್ರಸಿದ್ಧನಾದವನಾದ್ದರಿಂದಲೂ ವಾಸುದೇವರೂಪದಿಂದ ವಿಭೂತಿಗಳಲ್ಲಿ ಪರಿಗಣಿತನಾಗಿರುತ್ತಾನೆ. ಪರಮಾತ್ಮರೂಪವನ್ನು ಲೆಕ್ಕಕ್ಕೆ ತರಬೇಕಾದದ್ದಿಲ್ಲ.

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥ ೩೯ ॥**

೩೯. ಮತ್ತು ಎಲೈ ಅರ್ಜುನನೆ, ಸರ್ವಭೂತಗಳಿಗೂ ಯಾವದು ಬೀಜವೋ ಅದು ನಾನು. ನಾನಿಲ್ಲದೆ ಇರಬಹುದಾದ ಯಾವ ಚರಾಚರ ಭೂತವೂ ಇರುವದಿಲ್ಲ.

(ಭಾಷ್ಯ)

೧೦೪. ಯಚ್ಚಾಪಿ ಸರ್ವಭೂತಾನಾಂ ಬೀಜಂ ಪ್ರರೋಹಕಾರಣಂ **ತತ್** ಅಹಮ್ ಅರ್ಜುನ । ಪ್ರಕರಣೋಪಸಂಹಾರಾರ್ಥಂ ವಿಭೂತಿಸಂಕ್ಷೇಪಮ್ ಆಹ–**ನ ತತ್** ಅಸ್ತಿ ಭೂತಂ ಚರಾಚರಂ ಚರಮ್ ಅಚರಂ ವಾ ಮಯಾ ವಿನಾ **ಯತ್** ಸ್ಯಾತ್ ಭವೇತ್ । ಮಯಾ ಅಪಕೃಷ್ಟಂ ಪರಿತ್ಯಕ್ತಂ ನಿರಾತ್ಮಕಂ ಶೂನ್ಯಂ ಹಿ ತತ್ ಸ್ಯಾತ್ । ಅತಃ ಮದಾತ್ಮಕಂ ಸರ್ವಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಮತ್ತು, ಎಲೈ ಅರ್ಜುನನೆ, ಎಲ್ಲಾ ಭೂತಗಳಿಗೂ ಬೀಜವು, ಯಾವದು ಹುಟ್ಟುವದಕ್ಕೆ ಕಾರಣವೋ ಅದು, ನಾನು. (ಈಗ ಈ) ಪ್ರಕರಣವನ್ನು ಉಪಸಂಹಾರ ಮಾಡಬೇಕೆಂದು ವಿಭೂತಿಗಳ (ವಿಷಯವನ್ನು) ಸಂಗ್ರಹವಾಗಿ ಹೇಳುತ್ತಾನೆ :– **ನಾನು ಇಲ್ಲದೆ ಇರಬಹುದೆಂಬ ಯಾವ** ಚರಾಚರ**ಭೂತವೂ ಇರುವದಿಲ್ಲ ;** ಸ್ಥಾವರನಾಗಲಿ ಜಂಗಮನಾಗಲಿ (ಯಾವದೊಂದೂ ನಾನಿಲ್ಲದೆ ಇಲ್ಲ). ಏಕೆಂದರೆ ನನ್ನನ್ನು ಬಿಟ್ಟರೆ, (ನಾನು) ಇಲ್ಲದಿದ್ದರೆ ಅದಕ್ಕೆ ಆತ್ಮನೇ ಇಲ್ಲ ವಾಗಿ ಶೂನ್ಯವಾಗಿ ಬಿಡುವದು. ಆದ್ದರಿಂದ ನಾನು ಎಲ್ಲಕ್ಕೂ ಆತ್ಮನೇ ಎಂದರ್ಥ.[1]

## ಭಗವದ್ವಿಭೂತಿಯನ್ನು ಗುರುತಿಸುವದಕ್ಕೆ ಸೂಚನೆ

**ನಾನ್ತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರನ್ತಪ ।**
**ಏಷತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥**

---

1. ಯಾವದು ಇದೆ ಎಂದರೂ ಆತ್ಮನ ಆಧಾರದಿಂದಲೇ ಇರುತ್ತದೆಯೇ ಹೊರತು ಆತ್ಮನನ್ನು ಬಿಟ್ಟು ತಾನೇ ಇರುವದಿಲ್ಲ, ಅದಕ್ಕೆ ಆತ್ಮನ ಸಂಬಂಧವಿಲ್ಲದ ಇರವನ್ನು ಮನಸಿನಲ್ಲಿ ಕಲ್ಪಿಸುವದಕ್ಕೂ ಬರುವದಿಲ್ಲ. ಶೂನ್ಯಕಲ್ಪನೆಗೆಕೂಡ ಆತ್ಮನು ಸಾಕ್ಷಿಯಾಗಿರಬೇಕಾಗುತ್ತದೆ. ಆದ್ದರಿಂದ ಯಾವದೊಂದನ್ನು ನೋಡಿದರೂ ನನ್ನ ವಿಭೂತಿಯೆಂದು ಭಾವಿಸಬಹುದು ಎಂದು ಭಾವ.

೪೦. ಎಲೈ ಪರಂತಪನೆ, ನನ್ನ ದಿವ್ಯ ವಿಭೂತಿಗಳಿಗೆ ಅಂತವಿಲ್ಲ. ಆದರೆ ಈ ವಿಭೂತಿಯ ವಿಸ್ತರವನ್ನು ನಾನು ಉದ್ದೇಶದಿಂದ ಹೇಳಿದ್ದಾಗಿದೆ.

(ಭಾಷ್ಯ)

೧೦೫. ನ ಅನ್ತಃ ಅಸ್ತಿ ಮಮ ದಿವ್ಯಾನಾಂ ವಿಭೂತೀನಾಂ ವಿಸ್ತರಾಣಾಂ ಪರಂತಪ । ನ ಹಿ ಈಶ್ವರಸ್ಯ ಸರ್ವಾತ್ಮನಃ ದಿವ್ಯಾನಾಂ ವಿಭೂತೀನಾಮ್ ಇಯತ್ತಾ ಶಕ್ಯಾ ವಕ್ತುಂ ಜ್ಞಾತುಂ ವಾ ಕೇನಚಿತ್ । ಏಷ ತು ಉದ್ದೇಶತಃ ಏಕದೇಶೇನ ಪ್ರೋಕ್ತಃ ವಿಭೂತೇಃ ವಿಸ್ತರಃ ಮಯಾ ॥

(ಭಾಷ್ಯಾರ್ಥ)

ಎಲೈ ಪರಂತಪನೆ, ನನ್ನ ದಿವ್ಯವಾದ ವಿಭೂತಿಗಳಿಗೆ ವಿಸ್ತಾರಗಳಿಗೆ ಕೊನೆ ಇರುವದಿಲ್ಲ. **ಸರ್ವಾತ್ಮನಾಗಿರುವ ಈಶ್ವರನ ದಿವ್ಯವಾದ ವಿಭೂತಿಗಳು ಇಷ್ಟೇ ಎಂದು ಹೇಳುವದಕ್ಕಾಗಲಿ ತಿಳಿಯುವದಕ್ಕಾಗಲಿ ಯಾರಿಂದಲೂ ಆಗಲೇ ಆರದು**[1]. ಆದರೆ ಈ ವಿಭೂತಿಯ ವಿಸ್ತಾರವನ್ನು ಉದ್ದೇಶದಿಂದ ಅದರ ಒಂದು ಭಾಗವನ್ನು (ತಿಳಿಸಬೇಕೆಂದು) ನಾನು ಹೇಳಿರುತ್ತೇನೆ.

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ ೪೧ ॥**

೪೧. ಯಾವ ಯಾವ ಸತ್ತ್ವವು ವಿಭೂತಿಯುಳ್ಳದ್ದೋ, ಶ್ರೀಯುಕ್ತವೋ, ಅಥವಾ ಊರ್ಜಿತವಾಗಿರುವದೋ ಅದದನ್ನೇ ನೀನು ನನ್ನ ತೇಜೋಂಶ ಸಂಭವವಾಗಿರುವದೆಂದು ಅರಿತುಕೊ.

(ಭಾಷ್ಯ)

೧೦೯. ಯದ್ಯದ್ ಲೋಕೇ ವಿಭೂತಿಮತ್ ವಿಭೂತಿಯುಕ್ತಂ ಸತ್ತ್ವಂ ವಸ್ತು ಶ್ರೀಮತ್ ಊರ್ಜಿತಮೇವ ವಾ[2] ಶ್ರೀಃ ಲಕ್ಷ್ಮೀಃ ತಯಾ ಸಹಿತಮ್ ।

---

1. ಭಗವಂತನು ಎಲ್ಲದರ ರೂಪದಿಂದಲೂ ಆಗಿರುವದರಿಂದ ಎಲ್ಲವೂ ಅವನ ವಿಭೂತಿಯೇ. ಆದ್ದರಿಂದ ವಿಭೂತಿಗಳನ್ನು ಲೆಕ್ಕಮಾಡಿ ಹೇಳುವದು ಯಾರಿಂದಲೂ ಆಗುವಂತಿಲ್ಲ.

2. ಈ ಮಾತು 'ಉತ್ಸಾಹೋಪೇತಂ' ಎಂಬುದರ ಹಿಂದೆ ಇರಬೇಕಾದರೂ ಮುದ್ರಿತ ಪುಸ್ತಕಗಳಲ್ಲಿ ಇಲ್ಲಿಯೇ ಇದೆ.

ಉತ್ಸಾಹೋಪೇತಂ ವಾ ತತ್ತದೇವ ಅವಗಚ್ಛ ತ್ವಂ ಜಾನೀಹಿ ಮಮ ಈಶ್ವರಸ್ಯ ತೇಜೋಂಽಶಸಮ್ಭವಂ ತೇಜಸಃ ಅಂಶಃ ಏಕದೇಶಃ ಸಂಭವಃ ಯಸ್ಯ ತತ್ ತೇಜೋಂಽಶಸಮ್ಭವಮ್ ಇತಿ ಅವಗಚ್ಛ ತ್ವಮ್ ||

(ಭಾಷ್ಯಾರ್ಥ)

ಲೋಕದಲ್ಲಿ ಯಾವ ಯಾವ ಸತ್ತ್ವವು ಎಂದರೆ ವಸ್ತು ವಿಭೂತಿಯುಳ್ಳದ್ದೋ ವಿಭೂತಿಯಿಂದ ಕೂಡಿರುವದೋ, ಶ್ರೀಯುಕ್ತವೋ ಶ್ರೀ ಎಂದರೆ ಲಕ್ಷ್ಮಿಯು (ಸಂಪತ್ತು), ಅದರಿಂದೊಡಗೂಡಿರುವದೋ, ಅಥವಾ ಊರ್ಜಿತವಾಗಿರುವದೋ ಎಂದರೆ ಉತ್ಸಾಹ (ಶಕ್ತಿ)ಯಿಂದೊಡಗೂಡಿರುವದೋ ಅದದನ್ನೇ ಈಶ್ವರನಾದ ನನ್ನ ತೇಜೋಂಶಸಂಭವವೆಂದು ತೇಜಸ್ಸಿನ ಅಂಶವೆಂದರೆ ಒಂದು ಭಾಗವು; (ಅದು) ಯಾವದಕ್ಕೆ ಉತ್ಪತ್ತಿ (ಕಾರಣ)ವಾಗಿರುವದೋ ಅದು ತೇಜೋಂಶಸಂಭವವು. (ಅಂಥದ್ದೆಂದು)–ಅರಿತುಕೊ (ನಿಶ್ಚಯಿಸಿ) ತಿಳಿದುಕೊ.

## ಉಪಸಂಹಾರ

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ |**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ || ೪೨ ||**

೪೨. ಅಥವಾ, ಅರ್ಜುನನೆ, ಇಷ್ಟೊಂದು ಬಹಳವಾಗಿ ತಿಳಿದುಕೊಂಡು ನಿನಗೆ ಏನು (ಆಗಬೇಕು)? ನಾನು ಈ ಜಗತ್ತೆಲ್ಲವನ್ನೂ ಒಂದಂಶದಿಂದ ಹಿಡಿದಿಟ್ಟುಕೊಂಡು ಇರುವೆನು.

(ಭಾಷ್ಯ)

೧೦೭. ಅಥವಾ ಬಹುನಾ ಏತೇನ ಏವಮಾದಿನಾ ಕಿಂ ಜ್ಞಾತೇನ ತವ ಅರ್ಜುನ ಸ್ಯಾತ್ ಸಾವಶೇಷೇಣ? ಅಶೇಷತಃ ತ್ವಮ್ ಇಮಮ್ ಉಚ್ಯಮಾನಮ್ ಅರ್ಥಮ್ ಶೃಣು | ವಿಷ್ಟಭ್ಯ ವಿಶೇಷತಃ ಸ್ತಮ್ಭನಂ ದೃಢಂ[1] ಕೃತ್ವಾ ಇದಂ ಕೃತ್ಸ್ನಂ ಜಗತ್ ಏಕಾಂಶೇನ ಏಕಾವಯವೇನ ಏಕಪಾದೇನ ಸರ್ವಭೂತಸ್ವರೂಪೇಣ ಇತ್ಯೇತತ್ | ತಥಾ ಚ ಮನ್ತ್ರವರ್ಣಃ "ಪಾದೋಽಸ್ಯ ವಿಶ್ವಾ ಭೂತಾನಿ" (ಋ. ೮-೪-೧೭-೩) ಇತಿ ಸ್ಥಿತಃ ಅಹಮ್[2] ಇತಿ ||

1. ಮು|| ವ್ಯೈ||ಗಳಲ್ಲಿಲ್ಲ.
2. ನಿ|| ವ್ಯೈ|| ವಾ||ಗಳಲ್ಲಿಲ್ಲ.

(ಭಾಷ್ಯಾರ್ಥ)

**ಅಥವಾ** ಇಷ್ಟೊಂದು ಬಹಳವಾಗಿ ಇದೇ ಮುಂತಾದದ್ದನ್ನು ತಿಳಿದುಕೊಂಡರೆ, ಇನ್ನೂ ಉಳಿದೇ ಇರುವದರಿಂದ, ಎಲೈ ಅರ್ಜುನನೆ, (ಇದರಿಂದ) ನಿನಗೆ ಏನು (ಪ್ರಯೋಜನವಾದೀತು) ? ಸ್ವಲ್ಪವೂ ಉಳಿಯದಂತೆ ಈ (ಮುಂದೆ) ಹೇಳುವ ವಿಷಯವನ್ನು ನೀನು ಕೇಳು ; ಈ ಇಡಿಯ ಜಗತ್ತನ್ನು ಏಕಾಂಶದಿಂದ, ಒಂದು ಭಾಗದಿಂದ ಸರ್ವಭೂತಗಳ ಸ್ವರೂಪವಾಗಿರುವ ಒಂದೇ ಪಾದದಿಂದ ಎಂದರ್ಥ ; (ಒಂದು ಅಂಶದಿಂದ) ಹಿಡಿದಿಟ್ಟುಕೊಂಡು (ವಿಷ್ಟಭ್ಯ) ಎಂದರೆ ವಿಶೇಷವಾಗಿ, ಗಟ್ಟಿಯಾಗಿ ಹಿಡಿದುಕೊಂಡು ನಾನು ಇರುತ್ತಿರುವೆನು. ಆದ್ದರಿಂದಲೇ **ಮಂತ್ರವರ್ಣವು** " ಎಲ್ಲಾ ಭೂತಗಳೂ ಈತನ ಒಂದು ಪಾದವು " (ಋ. ೮-೪-೧೭-೩) ಎಂದು (ಹೇಳುತ್ತಿದೆ).

ಇತಿ ಶ್ರೀ ಭಗವದ್ಗೀತಾಭಾಷ್ಯೇ ವಿಭೂತಿಯೋಗೋ ನಾಮ ದಶಮೋಽಧ್ಯಾಯಃ



# ಹತ್ತನೆಯ ಅಧ್ಯಾಯದ ಸಾರ

---

೧-೧೧. ಭಗವಂತನು ಹೇಳಿದ್ದೇನೆಂದರೆ "ಅರ್ಜುನನೆ, ನಿನಗೆ ಒಳ್ಳೆಯದಾಗಲೆಂದು ಮತ್ತೊಮ್ಮೆ ಹೇಳುವೆನು, ಕೇಳು, ನನ್ನ ಆದಿಯನ್ನು ದೇವತೆಗಳಾಗಲಿ, ಮಹರ್ಷಿಗಳಾಗಲಿ ಅರಿಯರು; ಏಕೆಂದರೆ ನಾನೇ ಅವರಿಬ್ಬರಿಗೂ ಆದಿಯು. ನಾನು ಜನ್ಮರಹಿತನೆಂದೂ ಅನಾದಿ ಯೆಂದೂ ಪ್ರಪಂಚದ ಎಲ್ಲಾ ಪ್ರಾಣಿಗಳಿಗೂ ಬುದ್ಧಿಯೇ ಮುಂತಾದ ಭಾವಗಳನ್ನು ಅನುಗ್ರಹಿಸು ವವನೆಂದೂ ಸೃಷ್ಟಿಕರ್ತರಾದ ಮಹರ್ಷಿಗಳೂ ಮನುಗಳೂ ನನ್ನ ಸಂಕಲ್ಪಮಾತ್ರದಿಂದ ಉಂಟಾಗಿರುವರೆಂದೂ ತಿಳಿದವರು ಪಾಪರಹಿತರಾಗಿ ಸ್ಥಿರವಾದ ಭಕ್ತಿಯೋಗವನ್ನು ಪಡೆಯು ತ್ತಾರೆ. ಆ ಯೋಗದ ಫಲವಾಗಿ ಅಜ್ಞಾನದಿಂದುಂಟಾಗುವ ಮೋಹವನ್ನೆಲ್ಲ ತೊಲಗಿಸುವ ಜ್ಞಾನದ ಬೆಳಕನ್ನೂ ನಾನು ಅವರ ಹೃದಯದಲ್ಲಿಯೇ ಇದ್ದುಕೊಂಡು ಅನುಗ್ರಹಿಸುವೆನು."

೧೨-೩೮. ಅರ್ಜುನನು ಭಗವಂತನ ವಿಭೂತಿಯನ್ನೂ ಯೋಗವನ್ನೂ ವಿವರವಾಗಿ ತಿಳಿಯಬೇಕೆಂಬ ಕುತೂಹಲವನ್ನು ತೋರಿಸಲು ಆಗ ಭಗವಂತನಿಂತೆಂದನು: "ಅಯ್ಯ, ನನ್ನ ವಿಭೂತಿಗಳಿಗೆ ಇಷ್ಟೆಂಬ ಲೆಕ್ಕವಿಲ್ಲ; ಆದ್ದರಿಂದ ಮುಖ್ಯವಾದವನ್ನು ಮಟ್ಟಿಗೆ ತಿಳಿಸುವೆನು ಎಲ್ಲರ ಹೃದಯದಲ್ಲಿರುವ ನಾನು, ಅವರ ಆತ್ಮನೇ; ಎಲ್ಲಕ್ಕೂ ಸೃಷ್ಟಿಸ್ಥಿತಿಲಯಗಳಿಗೆ ಕಾರಣನು. ವಿಷ್ಣುವೆಂಬ ಆದಿತ್ಯನು, ಸೂರ್ಯನು, ಮರೀಚಿಯು, ಚಂದ್ರನು, ಸಾಮವೇದ, ಇಂದ್ರ, ಮನಸ್ಸು, ಚೇತನಾವೃತ್ತಿ, ಶಂಕರ, ಕುಬೇರ, ಪಾವಕವಸು, ಮೇರುಪರ್ವತ, ಬೃಹಸ್ಪತಿ, ಸ್ಕಂದ, ಸಾಗರ, ಭೃಗುಮಹರ್ಷಿ, ಓಂಕಾರ, ಜಪಯಜ್ಞ, ಹಿಮಾಲಯ, ಅಶ್ವತ್ಥ, ನಾರದ, ಚಿತ್ರರಥ, ಕಪಿಲ, ಉಚ್ಚೈಃಶ್ರವಸ್ಸು, ಐರಾವತ, ವಜ್ರಾಯುಧ, ಕಾಮಧೇನು, ಮನ್ಮಥ, ವಾಸುಕಿ, ಅನಂತ, ವರುಣ, ಅರ್ಯಮ, ಯಮ, ಪ್ರಹ್ಲಾದ, ಕಾಲ, ಮೃಗೇಂದ್ರ, ವೈನತೇಯ, ವಾಯು, ದಶರಥರಾಮ, ಮಕರ, ಜಾಹ್ನವೀನದಿ-ಇವುಗಳೆಲ್ಲವೂ ನಾನೆಂದು ಚಿಂತಿಸು. ಸೃಷ್ಟಿಗಳಿಗೆಲ್ಲ ಆದಿ, ಮಧ್ಯ, ಅಂತ—ಮೂರೂ ನಾನೇ. ಅಧ್ಯಾತ್ಮವಿದ್ಯೆ, ವಾದ, ಅಕಾರ, ದ್ವಂದ್ವ, ಕಾಲ, ಧಾತನು, ಮೃತ್ಯು, ಕಲ್ಯಾಣಕಾರಣ, ಕೀರ್ತಿ ಮೊದಲಾದ ದೇವತಾಸ್ತ್ರೀಯರು, ಬೃಹತ್ಸಾಮ, ಗಾಯತ್ರೀಮಂತ್ರ, ಮಾರ್ಗಶೀರ್ಷಮಾಸ, ವಸಂತಋತು, ಜೂಜಿನ ಆಟ, ತೇಜಸ್ಸು, ವಾಸುದೇವ, ಅರ್ಜುನ, ವ್ಯಾಸ, ಶುಕ್ರಾಚಾರ್ಯ, ದಂಡ, ರಾಜನೀತಿ, ಮೌನ, ಜ್ಞಾನ, ಸರ್ವಭೂತಗಳಿಗೂ ಕಾರಣ—ಇವೆಲ್ಲವೂ ನಾನೇ.

೩೯-೪೨. ನನ್ನನ್ನು ಬಿಟ್ಟು ಯಾವದೊಂದೂ ಇರಲಾರದು. ನನ್ನ ವಿಭೂತಿಗಳಿಗೆ ಕೊನೆಯೆಂಬುದೇ ಇಲ್ಲವಾದ್ದರಿಂದ ಸ್ವಲ್ಪಮಟ್ಟಿಗೆ ಹೇಳಿರುತ್ತೇನೆ. ಲೋಕದಲ್ಲಿ ಯಾವ ಯಾವದು ವಿಭೂತಿ, ಶ್ರೀ, ಉತ್ಸಾಹ—ಇವುಗಳಿಂದ ಕೂಡಿರುವದೋ ಅದದೆಲ್ಲ ನನ್ನ ತೇಜಸ್ಸಿನ ಒಂದಂಶದಿಂದ ಹುಟ್ಟಿರುವದೆಂದು ಭಾವಿಸು. ಅಥವಾ ಇಷ್ಟೆಲ್ಲ ಏತಕ್ಕೆ? ನಾನು ಒಂದೇ ಒಂದಂಶದಿಂದ ಇಡಿಯ ಜಗತ್ತೇ ಆಗಿರುವೆನು ಎಂದು ತಿಳಿದುಕೊ."



# ಹನ್ನೊಂದನೆಯ ಅಧ್ಯಾಯ

## (ವಿಶ್ವರೂಪದರ್ಶನಯೋಗ)

## ಅರ್ಜುನನ ಪ್ರಾರ್ಥನೆ

(ಭಾಷ್ಯ)

೧೨೮. ಭಗವತೋ ವಿಭೂತಯಃ ಉಕ್ತಾಃ । ತತ್ರ ಚ "ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್" (೧೦-೪೨) ಇತಿ ಭಗವತಾ ಅಭಿಹಿತಂ ಶ್ರುತ್ವಾ ಯತ್ ಜಗದಾತ್ಮರೂಪಮ್ ಆದ್ಯಮ್ ಐಶ್ವರಮ್, ತತ್ ಸಾಕ್ಷಾತ್ಕರ್ತುಮಿಚ್ಛನ್ ಅರ್ಜುನಃ ಉವಾಚ—

(ಭಾಷ್ಯಾರ್ಥ)

ಭಗವಂತನ ವಿಭೂತಿಗಳನ್ನು ಹೇಳಿದ್ದಾಯಿತು. ಅದರಲ್ಲಿ "ನಾನು ಈ ಇಡಿಯ ಜಗತ್ತನ್ನು (ನನ್ನ) ಒಂದಂಶದಿಂದ ಹಿಡಿದಿಟ್ಟುಕೊಂಡು ಇರುವೆನು" ಎಂದು ಭಗವಂತನು ಹೇಳಿದ್ದನ್ನು ಕೇಳಿ, ಜಗದಾತ್ಮಕವಾಗಿರುವ[1] ಆ ಈಶ್ವರನ ಮೊದಲನೆಯ ರೂಪವುಂಟಲ್ಲ[2], ಅದನ್ನು ನೇರಾಗಿ (ನಾನು) ಕಾಣಬೇಕು ಎಂಬ ಇಚ್ಛೆಯುಳ್ಳವನಾಗಿ ಅರ್ಜುನನಿಂತೆಂದನು :—

**ಅರ್ಜುನ ಉವಾಚ—**

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥**

೧. ಅರ್ಜುನನಿಂತೆಂದನು :—ನನ್ನಲ್ಲಿ ಅನುಗ್ರಹಮಾಡುವದಕ್ಕಾಗಿ ಅಧ್ಯಾತ್ಮವೆಂಬ ಹೆಸರಿನ ಯಾವ ಪರಮ ಗುಹ್ಯವನ್ನು ನೀನು ಹೇಳಿದೆಯೋ ಆದರಿಂದ ನನ್ನೀ ಮೋಹವು ತೊಲಗಿತು.

---

1. ಜಗತ್ತಿನ ರೂಪದಿಂದಲೇ ತೋರುವ.

2. ಸೃಷ್ಟಿಯ ಆದಿಯಲ್ಲಿಯೇ ಪರಮೇಶ್ವರನು ಧರಿಸುವ (ವಿರಾಡ್ರೂಪ)ವನ್ನು ಎಂದರ್ಥ.

(ಭಾಷ್ಯ)

೧೦೯. ಮದನುಗ್ರಹಾಯ ಮಮ[1] ಅನುಗ್ರಹಾರ್ಥಮ್ ಪರಮಂ ನಿರತಿಶಯಂ ಗುಹ್ಯಂ ಗೋಪ್ಯಮ್ ಅಧ್ಯಾತ್ಮಸಂಜ್ಞಿತಮ್ ಆತ್ಮಾನಾತ್ಮವಿವೇಕವಿಷಯಂ ಯತ್ ತ್ವಯಾ ಉಕ್ತಂ ವಚಃ ವಾಕ್ಯಂ ತೇನ ತೇ[2] ವಚಸಾ ಮೋಹಃ ಅಯಂ ವಿಗತಃ ಮಮ ಅವಿವೇಕಬುದ್ಧಿಃ ಅಪಗತಾ ಇತ್ಯರ್ಥಃ ||

(ಭಾಷ್ಯಾರ್ಥ)

ನನ್ನ ಅನುಗ್ರಹಕ್ಕಾಗಿ ನನಗೆ ಅನುಗ್ರಹವನ್ನು ಮಾಡುವದಕ್ಕೋಸ್ಕರ ತಕ್ಕ ಅಧ್ಯಾತ್ಮವೆಂಬ ಹೆಸರಿನ ಎಂದರೆ ಆತ್ಮನನ್ನೂ ಅನಾತ್ಮವನ್ನೂ ವಿಂಗಡಿಸಿ ತಿಳಿಯುವ ವಿಷಯವಾದ ಯಾವ 'ವಚಃ' ವಚನವನ್ನು ನೀನು ಹೇಳಿದೆಯೋ ಆ ನಿನ್ನ ವಚನದಿಂದ ಈ ನನ್ನ ಮೋಹವು ಎಂದರೆ ಅವಿವೇಕಬುದ್ಧಿಯು[3] ತೊಲಗಿತು, ಹೋಗಿಬಿಟ್ಟಿತು ಎಂದರ್ಥ.

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨ ॥**

೨. ಭೂತಗಳ ಭವ, ಅಪ್ಯಯ-ಇವೆರಡನ್ನೂ ವಿಸ್ತರದಿಂದ ನಿನ್ನಿಂದ ನಾನು ಕೇಳಿದ್ದಾಯಿತಷ್ಟೆ. ಎಲೈ ಕಮಲಾಕ್ಷನೆ, ಅವ್ಯಯವಾದ ಮಾಹಾತ್ಮ್ಯವನ್ನೂ (ಕೇಳಿದ್ದಾಗಿದೆಯಷ್ಟೆ).

(ಭಾಷ್ಯ)

೧೧೦. ಕಿಂಚ ಭವಃ ಉತ್ಪತ್ತಿಃ[4] ಅಪ್ಯಯಃ ಪ್ರಲಯಃ ತೌ ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸಶ್ತರಶಃ ನ ಸಂಕ್ಷೇಪತಃ ಮಯಾ[5] ತ್ವತ್ತಃ ತ್ವತ್ಸಕಾಶಾತ್ ಕಮಲಪತ್ರಾಕ್ಷ ಕಮಲಸ್ಯ ಪತ್ರಂ ಕಮಲಪತ್ರಂ ತದ್ವತ್ ಅಕ್ಷಿಣೀ

---

1. 'ಮದನುಗ್ರಹಾರ್ಥಮ್' ಮ|| ಮೈ|| ಮ
2. 'ತೇನ ವಚಸಾ' ಮೈ||
3. ಸದ್ರೂಪನಾದ ಆತ್ಮನನ್ನೂ ಅಸದ್ರೂಪವಾದ ಅನಾತ್ಮವನ್ನೂ ವಿಂಗಡಿಸಿಕೊಳ್ಳದೆ ಕಲೆಬೆರಕೆಮಾಡಿಕೊಂಡು ತಪ್ಪಾಗಿ ತಿಳಿಯುವ ಆತ್ಮವಿಷಯಕಭ್ರಾಂತಿಯು.
4. 'ಉದ್ಭವಃ ಉತ್ಪತ್ತಿಃ' ಮೈ||
5. ಈ ಮಾತು ಸಿ|| ಗು|| ವಾ|| ಗಳಲ್ಲಿ 'ವಿಸ್ತರಶಃ' ಆದಬಳಿಕ ಇದೆ.

ಯಸ್ಯ ತವ ಸ ತ್ವಂ ಕಮಲಪತ್ರಾಕ್ಷಃ ಹೇ ಕಮಲಪತ್ರಾಕ್ಷ । ಮಾಹಾತ್ಮ್ಯಮಪಿ[1] ಚ ಅವ್ಯಯಮ್ ಅಕ್ಷಯಂ ಶ್ರುತಮ್ ಇತಿ ಅನುವರ್ತತೇ ॥

(ಭಾಷ್ಯಾರ್ಥ)

ಮತ್ತು ಭವ ಎಂದರೆ ಹುಟ್ಟುವಿಕೆ, ಅಪ್ಯಯ ಎಂದರೆ ನಾಶ ; ಭೂತಗಳ ಈ ಭವಾಪ್ಯಯಗಳೆರಡನ್ನೂ ಸಂಕ್ಷೇಪವಾಗಿ ಅಲ್ಲ, ವಿಸ್ತಾರವಾಗಿ (ತ್ವತ್ತಃ) ನಿನ್ನಿಂದ ನಾನು ಕೇಳಿದ್ದಾಗಿದೆಯಷ್ಟೆ. ಕಮಲಪತ್ರಾಕ್ಷನೆ-ಕಮಲದ ಎಸಳು ಕಮಲಪತ್ರವು ; ಅದರಂತೆ ಕಣ್ಣುಗಳು ಯಾವನಿಗೆ ಇರುವವೋ ಆ ನೀನು ಕಮಲಪತ್ರಾಕ್ಷನು. ಎಲೈ ಕಮಲಪತ್ರಾಕ್ಷನೆ-ಅವ್ಯಯವಾದ ಎಂದರೆ ನಾಶವಿಲ್ಲದ (ನಿನ್ನ) ಮಾಹಾತ್ಮ್ಯವನ್ನೂ ನಾನು ಕೇಳಿದ್ದಾಗಿದೆ. ಇಲ್ಲಿ ಶ್ರುತಮ್ ಎಂದು (ಹಿಂದಿನ ವಾಕ್ಯದಲ್ಲಿರುವ ಮಾತು) ಇಲ್ಲಿಗೂ ಸೇರಿಸಿಕೊಳ್ಳತಕ್ಕದ್ದಾಗಿದೆ.

ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩ ॥

೩. ಎಲೈ ಪರಮೇಶ್ವರನೆ, ನೀನು ನಿನ್ನನ್ನು ಹೇಗೆಂದು ಹೇಳಿಕೊಂಡಿರುವೆಯೋ, ಇದು ಹೀಗೆಯೇ ಸರಿ. ಎಲೈ ಪುರುಷೋತ್ತಮನೆ, ನಿನ್ನ ಐಶ್ವರ ರೂಪವನ್ನು ನೋಡಲು ಇಚ್ಛಿಸುತ್ತೇನೆ.

(ಭಾಷ್ಯ)

೧೧೧. ಏವಮ್ ಏತತ್, ನಾನ್ಯಥಾ ಯಥಾ ಯೇನ ಪ್ರಕಾರೇಣ ಆತ್ಥ ಕಥಯಸಿ ತ್ವಮ್ ಆತ್ಮಾನಂ ಪರಮೇಶ್ವರ । ತಥಾಪಿ ದ್ರಷ್ಟುಮ್ ಇಚ್ಛಾಮಿ ತೇ ತವ ಜ್ಞಾನೈಶ್ವರ್ಯಶಕ್ತಿಬಲ[2] ವೀರ್ಯತೇಜೋಭಿಃ ಸಂಪನ್ನಮ್ ಐಶ್ವರಂ ವೈಷ್ಣವಂ ರೂಪಂ ಪುರುಷೋತ್ತಮ ॥

(ಭಾಷ್ಯಾರ್ಥ)

ಎಲೈ ಪರಮೇಶ್ವರನೆ, ನೀನು ಹೇಗೆಂದು ಯಾವ ಪ್ರಕಾರದಿಂದ ನಿನ್ನನ್ನು

---

1. "ಮಹಾತ್ಮನೋ ಭಾವಃ ಮಾಹಾತ್ಮ್ಯಮ್" ಮ॥ ವ್ಯ॥ ಎಂಬ ಪಾಠವು ಆ॥ ಟೀಕೆಯನ್ನು ನೋಡಿ ಲೇಖಕರು ಏರ್ಪಡಿಸಿದ್ದೆಂದು ತೋರುತ್ತದೆ.

2. 'ಬಲಶಕ್ತಿ' ಎಂದು ಮ॥ ವ್ಯ॥ ; ಗೀತೆಯ ಸಂಬಂಧ ಭಾಷ್ಯ (೨) ವನ್ನೂ ಅದರ ಟಿಪ್ಪಣಿಯನ್ನೂ ನೋಡಿ.

ಹೇಳುತ್ತಿರುವೆಯೋ ತಿಳಿಸಿಕೊಳ್ಳುತ್ತಿರುವೆಯೋ ಇದು ಹೀಗೆಯೇ, ಬೇರೆಯಲ್ಲ. ಆದರೂ[1], ಎಲೈ ಪುರುಷೋತ್ತಮನೆ, ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸು–ಇವುಗಳಿಂದ ಕೂಡಿದ (ತೇ = ತವ) ನಿನ್ನ ಐಶ್ವರ (ರೂಪವನ್ನು), ವೈಷ್ಣವ ರೂಪವನ್ನು ನೋಡಬಯಸುತ್ತೇನೆ.

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥**

೪. ಪ್ರಭುವೆ, ಅದನ್ನು ನೋಡುವದು ನನ್ನಿಂದ ಶಕ್ಯವೆಂದು (ನೀನು) ತಿಳಿಯುವೆಯಾದರೆ, ಆಗ, ಎಲೈ ಯೋಗೇಶ್ವರನೆ, ನೀನು ಅವ್ಯಯನಾದ ನಿನ್ನ (ರೂಪವ)ನ್ನು ನನಗೆ ತೋರಿಸು.

(ಭಾಷ್ಯ)

೧೧೨. ಮನ್ಯಸೇ ಚಿನ್ತಯಸಿ ಯದಿ ತತ್ ಶಕ್ಯಂ ಮಯಂ ಅರ್ಜುನೇನ[2] ದ್ರಷ್ಟುಮ್ ಇತಿ ಪ್ರಭೋ ಸ್ವಾಮಿನ್ । ಯೋಗೇಶ್ವರ ಯೋಗಿನಃ ಯೋಗಾಃ ತೇಷಾಮ್ ಈಶ್ವರಃ ಯೋಗೇಶ್ವರಃ ಹೇ ಯೋಗೇಶ್ವರ । ಯಸ್ಮಾತ್ ಅಹಮ್ ಅತೀವ ಅರ್ಥೀ ದ್ರಷ್ಟುಮ್, ತತಃ ತಸ್ಮಾತ್ ಮೇ ಮದರ್ಥಂ ದರ್ಶಯ ತ್ವಮ್ ಆತ್ಮಾನಮ್ ಅವ್ಯಯಮ್ ॥

(ಭಾಷ್ಯಾರ್ಥ)

ಪ್ರಭುವೆ, ಸ್ವಾಮಿಯೆ, (ಈ) ಅರ್ಜುನನೆಂಬ ನನ್ನಿಂದ ಅದನ್ನು ನೋಡುವದು ಆಗಬಹುದೆಂದು ನೀನು ಎಣಿಸುವೆಯಾದರೆ, ಯೋಗೇಶ್ವರನೆ–ಯೋಗರು ಎಂದರೆ ಯೋಗಿಗಳು; ಅವರಿಗೆ ಒಡೆಯನಾದವನು ಯೋಗೇಶ್ವರನು. ಎಲೈ ಯೋಗೇಶ್ವರನೆ[3]–ನಾನು (ಅದನ್ನು) ನೋಡಬೇಕೆಂದು ಬಹಳವಾಗಿ ಬಯಸಿರು

---

1. ಜಗತ್ತಿನ ಸೃಷ್ಟಿಪ್ರಲಯಗಳು ನಿನ್ನಿಂದಲೇ ಆಗುವವೆಂದು ನೀನೇ ವರ್ಣಿಸಿರುವದರಿಂದ ಇದು ಹೀಗೆಯೇ ಇರಬೇಕು; ಆದರೂ ಸೃಷ್ಟಿಪ್ರಲಯಗಳನ್ನು ಮಾಡುವ ನಿನ್ನ ವಿಶ್ವರೂಪವನ್ನು ಕಣ್ಣಾರೆ ನೋಡಬೇಕೆಂಬ ಆಸೆಯಿದೆ ಎಂದರ್ಥ.

2. 'ಮಯಾ ಅರ್ಜುನೇನ' ಎಂಬುದು ಆ॥ ನಿ|| ಗು|| ವಾ|| ಗಳಲ್ಲಿ ತತ್ ಎಂಬುದರ ಹಿಂದೆ.

3. ಯೋಗೇಶ್ವರನಾದ ನೀನೇ ನಿನ್ನ ಯೋಗವನ್ನು ತಿಳಿಸಬಲ್ಲೆ ಎಂದು ಭಾವ.

ವೆನು ; ಆಗ ಆದ್ದರಿಂದ ನನಗೆ ನನಗೋಸ್ಕರ ನೀನು ನಾಶವಿಲ್ಲದ (ಆ) ನಿನ್ನ (ರೂಪ) ವನ್ನು ತೋರಿಸು.

## ಭಗವಂತನು ಅರ್ಜುನನಿಗೆ ದಿವ್ಯದೃಷ್ಟಿಯನ್ನು ಕೊಟ್ಟದ್ದು

(ಭಾಷ್ಯ)

೧೧೩. ಏವಂ ಚೋದಿತಃ ಅರ್ಜುನೇನ ಶ್ರೀ ಭಗವಾನ್ ಉವಾಚ --

(ಭಾಷ್ಯಾರ್ಥ)

ಹೀಗೆಂದು ಅರ್ಜುನನು ಕೇಳಲು ಶ್ರೀಭಗವಂತನಿಂತೆಂದನು : --

**ಶ್ರೀ ಭಗವಾನ್ ಉವಾಚ—**

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥**

೫. ಶ್ರೀ ಭಗವಂತನಿಂತೆಂದನು :- ಪಾರ್ಥನೆ, ನೂರುಗಟ್ಟಲೆಯು ಮತ್ತು ಸಾವಿರಗಟ್ಟಲೆಯು ನಾನಾವಿಧವಾದ ನಾನಾವರ್ಣಾಕೃತಿಗಳ ನನ್ನ ರೂಪಗಳನ್ನು ನೋಡು.

(ಭಾಷ್ಯ)

೧೧೪. ಪಶ್ಯ ಮೇ ಪಾರ್ಥ ರೂಪಾಣಿ ಶತಶಃ ಅಥ ಸಹಸ್ರಶಃ ಅನೇಕಶಃ ಇತ್ಯರ್ಥಃ । ತಾನಿ ಚ ನಾನಾವಿಧಾನಿ ಅನೇಕಪ್ರಕಾರಾಣಿ । ದಿವಿ ಭವಾನಿ ದಿವ್ಯಾನಿ ಅಪ್ರಾಕೃತಾನಿ । ನಾನಾವರ್ಣಾಕೃತೀನಿ ಚ ನಾನಾ ವಿಲಕ್ಷಣಾಃ ನೀಲಪೀತಾದಿ ಪ್ರಕಾರಾಃ ವರ್ಣಾಃ ತಥಾ ಆಕೃತಯಃ ಅವಯವಸಂಸ್ಥಾನವಿಶೇಷಾಃ ಯೇಷಾಂ ರೂಪಾಣಾಂ ತಾನಿ ನಾನಾವರ್ಣಾಕೃತೀನಿ ಚ ॥

(ಭಾಷ್ಯಾರ್ಥ)

ಎಲೈ ಪಾರ್ಥನೆ, ನೂರುಗಟ್ಟಲೆಯಾಗಿಯೂ ಸಾವಿರಗಟ್ಟಲೆಯಾಗಿಯೂ ಇರುವ ನನ್ನ ರೂಪಗಳನ್ನು ನೋಡು ; ಅನೇಕವಾಗಿರುವ (ರೂಪಗಳನ್ನು ನೋಡು) ಎಂದರ್ಥ. ಅವು ನಾನಾವಿಧವಾಗಿರುವವು ಹಲವು ಪ್ರಕಾರವಾಗಿರುವವು ; ದಿವ್ಯವಾಗಿ ರುವವು, ಸ್ವರ್ಗದಲ್ಲಿರತಕ್ಕವು, ಅಪ್ರಾಕೃತವಾಗಿರುವವು ; ನಾನಾವರ್ಣಾಕೃತಿಗಳವು- ನಾನಾ ಎಂದರೆ ಬೇರೆಬೇರೆಯ ಪ್ರಕಾರದ ಕಪ್ಪು ಹಳದಿ-ಮುಂತಾದ ವರ್ಣಗಳೂ

ಮತ್ತು ಆಕೃತಿಗಳೂ ಎಂದರೆ ಅವಯವಗಳ ಜೋಡಣೆಗಳೂ ಯಾವ ರೂಪಗಳಿಗಿರುವವೋ ಅಂಥ ನಾನಾವರ್ಣಾಕೃತಿಗಳ (ರೂಪಗಳು).

**ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬ ॥**

೬. ಭಾರತನೆ, ಆದಿತ್ಯರನ್ನೂ ವಸುಗಳನ್ನೂ ರುದ್ರರನ್ನೂ ಅಶ್ವಿನರನ್ನೂ ಮರುತ್ತುಗಳನ್ನೂ ನೋಡು. ಅದೃಷ್ಟಪೂರ್ವವಾದ ಬಹಳ ಆಶ್ಚರ್ಯಗಳನ್ನು ನೋಡು.

(ಭಾಷ್ಯ)

೧೧೫. ಪಶ್ಯ ಆದಿತ್ಯಾನ್ ದ್ವಾದಶ, ವಸೂನ್ ಅಷ್ಟೌ, ರುದ್ರಾನ್ ಏಕಾದಶ, ಅಶ್ವಿನೌ ದ್ವೌ, ಮರುತಃ ಸಪ್ತ ಸಪ್ತಗಣಾ ಯೇ ತಾನ್ । ತಥಾ ಚ ಬಹೂನಿ ಅನ್ಯಾನ್ಯಪಿ[1] ಅದೃಷ್ಟಪೂರ್ವಾಣಿ ಮನುಷ್ಯಲೋಕೇ ತ್ವಯಾ ತ್ವತ್ತಃ ಅನ್ಯೇನ ವಾ ಕೇನಚಿತ್ ಪಶ್ಯ ಆಶ್ಚರ್ಯಾಣಿ ಅದ್ಭುತಾನಿ ಭಾರತ ॥

(ಭಾಷ್ಯಾರ್ಥ)

ಎಲೈ ಭಾರತನೆ, ಹನ್ನೆರಡು ಜನ **ಆದಿತ್ಯರನ್ನೂ**[2], ಎಂಟು ಜನ ವಸುಗಳನ್ನೂ ಏಕಾದಶ **ರುದ್ರರನ್ನೂ**, ಇಬ್ಬರು **ಅಶ್ವಿನೀದೇವತೆಗಳನ್ನೂ**[3], **ಮರುತ್ತುಗಳನ್ನೂ** ಏಳೇಳರ ಗುಂಪಾಗಿರುವರಲ್ಲ, ಅವರನ್ನೂ, ನೋಡು. ಮತ್ತು ಮನುಷ್ಯಲೋಕದಲ್ಲಿ ನೀನಾಗಲಿ ನೀನಲ್ಲದೆ ಬೇರೆಯವರಾಗಲಿ ಯಾರೂ ಹಿಂದೆ ಎಂದೂ ನೋಡದೆ ಇರುವ ಇನ್ನೂ ಬೇರೆಯ ಆಶ್ಚರ್ಯಗಳನ್ನೂ ಎಂದರೆ ಅದ್ಭುತಗಳನ್ನೂ ನೋಡು.

(ಭಾಷ್ಯ)

೧೧೬. ನ ಕೇವಲಮ್ ಏತಾವದೇವ—

---

1. ಮ॥ ನ್ಯೈ॥

2. ಆದಿತ್ಯರೇ ಮೊದಲಾದ ವೈದಿಕದೇವತೆಗಳ ಹೆಸರುಗಳನ್ನು ಹಿಂದಿನ ಅಧ್ಯಾಯದ ಭಾಷ್ಯದ ಟಿಪ್ಪಣಿಯಲ್ಲಿ ಅಲ್ಲಲ್ಲಿ ಕೊಟ್ಟಿದೆ. ಭಾರತದ ಆದಿಪರ್ವ, ಅನುಶಾಸನಿಕಪರ್ವ, ಶಾಂತಿಪರ್ವ–ಇವುಗಳಲ್ಲಿ ಈ ವಿವರವನ್ನು ಕಾಣಬಹುದು. ಪರಮಾತ್ಮನು ಸರ್ವದೇವತಾಮಯನೆಂಬುದಕ್ಕೆ ಇದೊಂದು ನಿದರ್ಶನವಾದಂತಾಯಿತು.

3. ನಾಸತ್ಯ, ದಸ್ರ–ಎಂಬ ಇಬ್ಬರು.

(ಭಾಷ್ಯಾರ್ಥ)

ಬರಿಯ ಇಷ್ಟೇ ಅಲ್ಲ.

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭ ॥**

೭. ಗುಡಾಕೇಶನೆ, ಇಲ್ಲಿ ನನ್ನ ದೇಹದಲ್ಲಿ ಒಂದೇ ಕಡೆಯಲ್ಲಿ ಸಚರಾಚರವಾದ ಜಗತ್ತೆಲ್ಲವೂ (ಇರುವದನ್ನು) ಈಗ ನೋಡು; ಮತ್ತು ಬೇರೆ ಯಾವದನ್ನು ನೋಡಲಿಚ್ಛಿಸುವೆಯೋ (ಅವನ್ನೆಲ್ಲ ನೋಡು).

(ಭಾಷ್ಯ)

೧೧೭. ಇಹ ಏಕಸ್ಥಮ್ ಏಕಸ್ಮಿನ್ನೇವ ಸ್ಥಿತಂ ಜಗತ್ ಕೃತ್ಸ್ನಂ ಸಮಸ್ತಂ ಪಶ್ಯ ಅದ್ಯ ಇದಾನೀಂ ಸಚರಾಚರಂ ಸಹ ಚರೇಣ ಅಚರೇಣ ಚ ವರ್ತತೇ[1] ಮಮ ದೇಹೇ ಗುಡಾಕೇಶ । ಯಚ್ಚ ಅನ್ಯತ್ ಜಯಪರಾಜಯಾದಿ ಯತ್ ಶಙ್ಕಸೇ, "ಯದ್ವಾ ಜಯೇಮ ಯದಿ ವಾ ನೋ ಜಯೇಯುಃ" (೨-೬) ಇತಿ ಯತ್ ಅವೋಚಃ, ತದಪಿ ದ್ರಷ್ಟುಂ ಯದಿ ಇಚ್ಛಸಿ ॥

(ಭಾಷ್ಯಾರ್ಥ)

ಇಲ್ಲಿ ಏಕಸ್ಥವಾದ ಒಂದೇ ಕಡೆಯಲ್ಲಿ ಇರುವ ಇಡಿಯ ಸಮಸ್ತವಾದ ಜಗತ್ತೂ ಇರುವದನ್ನು ಈಗ ನೋಡು. ಸಚರಾಚರವಾದ ಎಂದರೆ ಸ್ಥಾವರ ಗಳಿಂದಲೂ ಜಂಗಮಗಳಿಂದಲೂ ಕೂಡಿರುವ (ಜಗತ್ತು) ನನ್ನ ದೇಹದಲ್ಲಿ (ನೋಡಯ್ಯ), ಗುಡಾಕೇಶನೆ, ಮತ್ತು ಇನ್ನೂ ಗೆಲವು, ಸೋಲು-ಮುಂತಾದ ಬೇರೆ ಯಾವದನ್ನೇ ಆಗಲಿ; (ಅದರ ವಿಷಯದಲ್ಲಿ) ಶಂಕೆಯನ್ನು ತೆಗೆದಿದ್ದೆಯಲ್ಲ, "ನಾವು ಜಯಿಸುತ್ತೇವೆಯೋ, ಅಥವಾ ನಮ್ಮನ್ನೇ ಗೆಲ್ಲುವರೋ" (೨-೬) ಎಂದಿದ್ದೆಯಲ್ಲ, ಅದನ್ನೂ-ನೋಡಬೇಕೆಂಬ ಇಚ್ಛೆಯಿದ್ದರೆ (ನೋಡು).

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥ ೮ ॥**

೮. ಆದರೆ ನಿನ್ನದಾದ ಇದೇ ಕಣ್ಣಿನಿಂದ ನನ್ನನ್ನು ನೀನು ನೋಡಲು

---

1. ಮ॥ ಮೈ॥ಗಳಲ್ಲಿಲ್ಲ.

ಶಕ್ತನಾಗಲಾರೆ. ನಿನಗೆ ದಿವ್ಯವಾದ ಚಕ್ಷುಸ್ಸನ್ನು ಕೊಡುವೆನು. ನನ್ನ ಐಶ್ವರ ಯೋಗವನ್ನು ನೋಡು.

(ಭಾಷ್ಯ)

೧೧೮. ಕಿಂ ತು ನ ತು ಮಾಂ ವಿಶ್ವರೂಪಧರಂ ಶಕ್ಯಸೇ ದ್ರಷ್ಟುಮ್ ಅನೇನೈವ ಪ್ರಾಕೃತೇನ ಸ್ವಚಕ್ಷುಷಾ ಸ್ವಕೀಯೇನ ಚಕ್ಷುಷಾ। ಯೇನ ತು[1] ಶಕ್ಯಸೇ ದ್ರಷ್ಟುಂ ದಿವ್ಯೇನ ತತ್ ದಿವ್ಯಂ ದದಾಮಿ ತೇ ತುಭ್ಯಂ ಚಕ್ಷುಃ। ತೇನ ಪಶ್ಯ ಮೇ ಯೋಗಮ್ ಐಶ್ವರಮ್ ಈಶ್ವರಸ್ಯ ಮಮ[2] ಐಶ್ವರಂ ಯೋಗಂ ಯೋಗ ಶಕ್ತ್ಯತಿಶಯಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಆದರೆ ವಿಶ್ವರೂಪಧರನಾದ ನನ್ನನ್ನು ಇದೇ ಪ್ರಾಕೃತವಾದ ಸ್ವಚಕ್ಷುಸ್ಸಿನಿಂದ ನಿನ್ನ ಕಣ್ಣಿಂದಲೇ ನೋಡಲಾರೆ. ಯಾವ ದಿವ್ಯಚಕ್ಷುವಿನಿಂದಲಾದರೆ ನೋಡ ಲಾಪೆಯೋ ಆ ದಿವ್ಯಚಕ್ಷುಸ್ಸನ್ನು (ತೇ - ತುಭ್ಯಂ) ನಿನಗೆ ಕೊಡುತ್ತೇನೆ. ಆ (ಚಕ್ಷುಸ್ಸಿ)ನಿಂದ ನನ್ನ ಐಶ್ವರ ಯೋಗವನ್ನು ಎಂದರೆ ಈಶ್ವರನಾದ ನನ್ನ ಯೋಗ ಶಕ್ತಿಯ ಹೆಚ್ಚುಗಾರಿಕೆಯನ್ನು ನೋಡು ಎಂದರ್ಥ.

## ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ್ದು

**ಸಞ್ಜಯ ಉವಾಚ—**

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ ೯ ॥**

೯. ಸಂಜಯನಿಂತೆಂದನು :—ರಾಜನೆ, ಮಹಾಯೋಗೇಶ್ವರನಾದ ಹರಿಯು ಹೀಗೆಂದು ನುಡಿದು ಆಮೇಲೆ ಪಾರ್ಥನಿಗೆ ಐಶ್ವರವಾದ ಪರಮ ರೂಪವನ್ನು ತೋರಿಸಿದನು.

---

1. ' ತ್ವಂ ' ಮ॥ ಮೈ॥ ; ' ತ್ವಂ ಶಕ್ಷ್ಯಸೇ ' ಮ॥
2. ' ಈಶ್ವರಸಂಬನ್ಧಿನಮ್ ' ಮ॥ ಮೈ ॥

(ಭಾಷ್ಯ)

೧೧೯. ಏವಂ ಯಥೋಕ್ತಪ್ರಕಾರೇಣ[1] ಉಕ್ತ್ವಾ ತತಃ ಅನನ್ತರಂ ರಾಜನ್ ಧೃತರಾಷ್ಟ್ರ, ಮಹಾಯೋಗೇಶ್ವರಃ ಮಹಾಂಶ್ಚ ಅಸೌ ಯೋಗೇಶ್ವರಶ್ಚ ಹರಿಃ ನಾರಾಯಣಃ ದರ್ಶಯಾಮಾಸ ದರ್ಶಿತವಾನ್ ಪಾರ್ಥಾಯ ಪೃಥಾಸುತಾಯ ಪರಮಂ ರೂಪಂ[2] ವಿಶ್ವರೂಪಮ್ ಐಶ್ವರಮ್ ||

(ಭಾಷ್ಯಾರ್ಥ)

ಹೀಗೆ ಮೇಲೆ ಹೇಳಿದ ಪ್ರಕಾರವಾಗಿ ನುಡಿದು ಆಮೇಲೆ ಆ ಬಳಿಕ ರಾಜನೆ, ಧೃತರಾಷ್ಟ್ರನೆ, ಮಹಾಯೋಗೇಶ್ವರನಾದ ದೊಡ್ಡವನೂ ಯೋಗಿಗಳೊಡೆಯನೂ ಆದ ಹರಿಯು, **ನಾರಾಯಣನು**, ಪೃಥೆಯ ಮಗನಾದ (ಅರ್ಜುನ)ನಿಗೆ ಐಶ್ವರವಾದ ಪರಮರೂಪವನ್ನು (ಈಶ್ವರನಾದ ತನ್ನ) ವಿಶ್ವರೂಪವನ್ನು ತೋರಿಸಿದನು.

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦ ॥**

೧೦. ಅನೇಕ ವಕ್ತ್ರನಯನಗಳುಳ್ಳದ್ದಾಗಿಯೂ ಅನೇಕಾದ್ಭುತ ದರ್ಶನಗಳುಳ್ಳದ್ದಾಗಿಯೂ ಅನೇಕ ದಿವ್ಯಾಭರಣಗಳುಳ್ಳದ್ದಾಗಿಯೂ ದಿವ್ಯವಾದ ಅನೇಕೋದ್ಯತಾಯುಧಗಳನ್ನುಳ್ಳದ್ದಾಗಿಯೂ (ಇರುವ ರೂಪವನ್ನು ತೋರಿಸಿದನು)

(ಭಾಷ್ಯ)

೧೨೦. ಅನೇಕವಕ್ತ್ರನಯನಮ್ ಅನೇಕಾನಿ ವಕ್ತ್ರಾಣಿ ನಯನಾನಿ ಚ ಯಸ್ಮಿನ್ ರೂಪೇ ತತ್ ಅನೇಕವಕ್ತ್ರನಯನಮ್ । ಅನೇಕಾದ್ಭುತದರ್ಶನಮ್ ಅನೇಕಾನಿ ಅದ್ಭುತಾನಿ ವಿಸ್ಮಾಪಕಾನಿ ದರ್ಶನಾನಿ ಯಸ್ಮಿನ್ ರೂಪೇ ತತ್ ಅನೇಕಾದ್ಭುತದರ್ಶನಮ್ । ತಥಾ ಅನೇಕದಿವ್ಯಾಭರಣಮ್ ಅನೇಕಾನಿ ದಿವ್ಯಾನಿ ಆಭರಣಾನಿ ಯಸ್ಮಿನ್ ತತ್ ಅನೇಕ ದಿವ್ಯಾಭರಣಮ್ । ತಥಾ ದಿವ್ಯಾನೇಕೋದ್ಯತಾಯುಧಂ ದಿವ್ಯಾನಿ ಅನೇಕಾನಿ ಅಸ್ತ್ರಾದೀನಿ[3] ಉದ್ಯತಾನಿ ಆಯುಧಾನಿ ಯಸ್ಮಿನ್ ತತ್ ದಿವ್ಯಾನೇಕೋದ್ಯತಾಯುಧಮ್ । 'ದರ್ಶಯಾಮಾಸ' ಇತಿ ಪೂರ್ವೇಣ ಸಂಬನ್ಧಃ ||

---

1. 'ಯಥೋಕ್ತೇನ ಪ್ರಕಾರೇಣ' ಮ|| ಮೈ||
2. ಮ|| ಮೈ||ಗಳಲ್ಲಿಲ್ಲ.
1. ಈ ಮಾತು ಶಿ|| ಗು|| ವಾ||ಗಳಲ್ಲಿಲ್ಲ.

(ಭಾಷ್ಯಾರ್ಥ)

(ಅದು) ಅನೇಕವಕ್ತ್ರನಯನಗಳುಳ್ಳದ್ದು ; ಅನೇಕವಾದ ಮುಖಗಳೂ ಕಣ್ಣುಗಳೂ ಆ ರೂಪದಲ್ಲಿದ್ದವಾದ್ದರಿಂದ ಅದು ಅನೇಕವಕ್ತ್ರನಯನವಾಗಿತ್ತು. ಅನೇಕಾದ್ಭುತದರ್ಶನಗಳುಳ್ಳದ್ದು ; ಅನೇಕವಾದ ಅದ್ಭುತಗಳು ಎಂದರೆ ಅಚ್ಚರಿಗೊಳಿಸುವ ನೋಟಗಳು ಆ ರೂಪದಲ್ಲಿದ್ದವಾದ್ದರಿಂದ ಅದು ಅನೇಕಾದ್ಭುತದರ್ಶನವಾಗಿತ್ತು. ಇದರಂತೆ ಅನೇಕದಿವ್ಯಾಭರಣಗಳುಳ್ಳದ್ದು, ಅನೇಕವಾದ ದಿವ್ಯವಾದ ಒಡವೆಗಳು ಅದರಲ್ಲಿದ್ದವಾದ್ದರಿಂದ ಅದು ಅನೇಕದಿವ್ಯಾಭರಣವಾಗಿತ್ತು. ಮತ್ತು ದಿವ್ಯಾನೇಕೋದ್ಯತಾಯುಧಗಳುಳ್ಳದ್ದು. ದಿವ್ಯವಾದ ಅನೇಕವಾದ ಕತ್ತಿಯೇ ಮುಂತಾದ ಎತ್ತಿ ಹಿಡಿದ ಆಯುಧಗಳು ಆ (ರೂಪದಲ್ಲಿದ್ದ)ದ್ದರಿಂದ ಅದು ದಿವ್ಯಾನೇಕೋದ್ಯತಾಯುಧವಾಗಿತ್ತು. (ಆ ರೂಪವನ್ನು) ತೋರಿಸಿದನು ಎಂದು ಹಿಂದಿನ (ಶ್ಲೋಕದಲ್ಲಿರುವ ಮಾತಿಗೆ) ಸಂಬಂಧ(ವನ್ನು ಮಾಡಿಕೊಳ್ಳಬೇಕು)

**ದಿವ್ಯಮಾಲ್ಯಾಮ್ಬರಧರಂ ದಿವ್ಯಗನ್ಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನನ್ತಂ ವಿಶ್ವತೋಮುಖಮ್ ॥**

೧೧. ದಿವ್ಯಮಾಲ್ಯಾಂಬರಧರನಾದ ದಿವ್ಯಗಂಧಾನುಲೇಪನನಾದ ಸರ್ವಾಶ್ಚರ್ಯಮಯನಾದ ಅನಂತನಾದ ವಿಶ್ವತೋಮುಖನಾದ ದೇವನನ್ನು (ನೋಡಿದನು.)

(ಭಾಷ್ಯ)

೧೨೧. ಕಿಂಚ ದಿವ್ಯಮಾಲ್ಯಾಮ್ಬರಧರಂ ದಿವ್ಯಾನಿ ಮಾಲ್ಯಾನಿ ಪುಷ್ಪಾಣಿ ಅಮ್ಬರಾಣಿ ವಸ್ತ್ರಾಣಿ ಚ ಧ್ರಿಯನ್ತೇ ಯೇನ ಈಶ್ವರೇಣ ತಂ ದಿವ್ಯಮಾಲ್ಯಾಮ್ಬರಧರಮ್ । ದಿವ್ಯಗನ್ಧಾನುಲೇಪನಂ ದಿವ್ಯಂ ಗನ್ಧಾನುಲೇಪನಂ ಯಸ್ಯ ತಂ ದಿವ್ಯಗನ್ಧಾನುಲೇಪನಮ್ । ಸರ್ವಾಶ್ಚರ್ಯಮಯಂ ಸರ್ವಾಶ್ಚರ್ಯಪ್ರಾಯಂ ದೇವಮ್ । ಅನನ್ತಂ ನ ಅಸ್ಯ ಅನ್ತಃ ಅಸ್ತಿ ಇತಿ ಅನನ್ತಃ ತಮ್ । ವಿಶ್ವತೋಮುಖಂ ಸರ್ವತೋಮುಖಮ್। ಸರ್ವಭೂತಾತ್ಮಭೂತತ್ವಾತ್। 'ತಂ ದರ್ಶಯಾಮಾಸ,' 'ಅರ್ಜುನೋ ದದರ್ಶ' ಇತಿ ವಾ ಅಧ್ಯಾಹ್ರಿಯತೇ ॥

(ಭಾಷ್ಯಾರ್ಥ)

ಮತ್ತು ದಿವ್ಯಮಾಲ್ಯಾಂಬರಧರನು : ದಿವ್ಯವಾದ ಮಾಲ್ಯಗಳನ್ನೂ ಎಂದರೆ ಹೂಗಳನ್ನೂ ಅಂಬರಗಳನ್ನೂ ಎಂದರೆ ವಸ್ತ್ರಗಳನ್ನೂ ಯಾವನು ಧರಿಸಿದ್ದನೋ ಆ ಈಶ್ವರನು ದಿವ್ಯಮಾಲ್ಯಾಂಬರಧರನು. ದಿವ್ಯಗಂಧಾನುಲೇಪನನು : ದಿವ್ಯನಾದ

ಗಂಧವನ್ನು ಪೂಸಿಕೊಂಡಿದ್ದನಲ್ಲ, ಆ (ಈಶ್ವರನು) ದಿವ್ಯಗಂಧಾನುಲೇಪನನು. ಸರ್ವಾಶ್ಚರ್ಯಮಯನು, ಎಲ್ಲಾ ಆಶ್ಚರ್ಯ(ವಾದ ನೋಟಗಳೂ, ಅವನಲ್ಲಿ) ಪ್ರಚುರ ವಾಗಿ ಕಾಣಿಸಿಕೊಂಡಿದ್ದವು. (ಅಂಥ) ದೇವನನ್ನು (ಎಂದರ್ಥ). ಅನಂತನಾದ : ಆತ ನಿಗೆ ಅಂತವೇ ಇರಲಿಲ್ಲವಾದ್ದರಿಂದ ಅನಂತನು. (ಅಂಥ); ವಿಶ್ವತೋಮುಖನಾದ, ಎಲ್ಲೆಲ್ಲಿಯೂ ಮುಖವುಳ್ಳವನಾದ (ಎಂದರ್ಥ); ಏಕೆಂದರೆ ಎಲ್ಲಾ ಪ್ರಾಣಿಗಳಿಗೂ (ಅವನೇ) ಆತ್ಮನಾಗಿರುತ್ತಾನೆ. ಇಂಥ (ದೇವನನ್ನು) 'ತೋರಿಸಿದನು' ಅಥವಾ 'ಅರ್ಜುನನು ಕಂಡನು' ಎಂದು ಅಧ್ಯಾಹಾರವನ್ನು (ಮಾಡಿಕೊಳ್ಳಬೇಕು.)

(ಭಾಷ್ಯ)

೧೨೨. ಯಾ ಪುನಃ ಭಗವತಃ ವಿಶ್ವರೂಪಸ್ಯ ಭಾಃ, ತಸ್ಯಾಃ ಉಪಮಾ **ಉಚ್ಯತೇ—**

(ಭಾಷ್ಯಾರ್ಥ)

ಇನ್ನು ವಿಶ್ವರೂಪನಾದ ಭಗವಂತನ ಪ್ರಕಾಶವುಂಟಷ್ಟೆ, ಅದಕ್ಕೆ ಉಪಮಾನ ವನ್ನು ಹೇಳುತ್ತಾರೆ :—

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥**

೧೨. ದ್ಯುಲೋಕದಲ್ಲಿ ಸೂರ್ಯಸಹಸ್ರದ ಬೆಳಕು ಒಮ್ಮೆಗೇ ಎದ್ದುಕೊಳ್ಳುವದಾದರೆ ಅದು ಆ ಮಹಾತ್ಮನ ಬೆಳಕಿಗೆ ಸಮಾನವಾದೀತು!

(ಭಾಷ್ಯ)

೧೨೩. ದಿವಿ ಅನ್ತರಿಕ್ಷೇ ತೃತೀಯಸ್ಯಾಂ ವಾ ದಿವಿ ಸೂರ್ಯಾಣಾಂ ಸಹಸ್ರಂ ಸೂರ್ಯಸಹಸ್ರಂ ತಸ್ಯ ಯುಗಪತ್ ಉತ್ಥಿತಸ್ಯ ಸೂರ್ಯಸಹಸ್ರಸ್ಯ ಯಾ ಯುಗಪತ್ ಉತ್ಥಿತಾ ಭಾಃ,ಸಾ ಯದಿ ಸದೃಶೀ ಸ್ಯಾತ್ ತಸ್ಯ ಮಹಾತ್ಮನಃ ವಿಶ್ವರೂಪಸ್ಯ[1] ಭಾಸಃ । ಯದಿ ವಾ ನ ಸ್ಯಾತ್[2] । ತತಃ ವಿಶ್ವರೂಪಸ್ಯೈವ ಭಾಃ ಅತಿರಿಚ್ಯತೇ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ದಿವಿ ಎಂದರೆ ಅಂತರಿಕ್ಷದಲ್ಲಿ ಎಂದಾಗಲಿ ಮೂರನೆಯದಾದ ಸ್ವರ್ಗದಲ್ಲಿ ಎಂದಾ

1. "ವಿಶ್ವರೂಪಸ್ಯೈವ" ಎಂಬ ಆ॥ ಗು॥ ವಾ॥ ಪಾಠದಲ್ಲಿ ಏವ ಹೆಚ್ಚು.
2. 'ವಿದ್ಯತೇ' ಎಂಬ ಮ॥ ಮೈ॥ ಪಾಠಕ್ಕಿಂತ ಇದೇ ಮೇಲು.

ಗಲಿ (ಅರ್ಥ). ಸೂರ್ಯರ ಸಹಸ್ರವು ಸೂರ್ಯಸಹಸ್ರವು; ಒಮ್ಮೆಗೇ ಹುಟ್ಟಿದ ಅಂಥ ಸೂರ್ಯಸಹಸ್ರದಿಂದ ಒಮ್ಮೆಗೇ ಎದ್ದುಕೊಳ್ಳುವದಲ್ಲ ಬೆಳಕು, ಆ ಬೆಳಕು ಆ ಮಹಾತ್ಮನ ಎಂದರೆ ವಿಶ್ವರೂಪನ ಬೆಳಕಿಗೆ ಸಮಾನವಾದೀತೊ, ಅಥವಾ ಆಗದೊ! ಅದಕ್ಕಿಂತಲೂ (ಆ) ವಿಶ್ವರೂಪನ ಬೆಳಕೇ ಹೆಚ್ಚಾದೀತು![1]–ಎಂದಭಿಪ್ರಾಯ.

**ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಣ್ಡವಸ್ತದಾ ॥ ೧೩ ॥**

೧೩. ಅನೇಕಪ್ರಕಾರವಾಗಿ ವಿಂಗಡವಾಗಿರುವ ಜಗತ್ತೆಲ್ಲವೂ ಅಲ್ಲಿ ದೇವದೇವನ ಶರೀರದಲ್ಲಿ ಏಕಸ್ಥವಾಗಿದ್ದದ್ದನ್ನು ಆಗ ಪಾಂಡವನು ಕಂಡನು.

(ಭಾಷ್ಯ)

೧೨೪. ಕಿಂಚ ತತ್ರ ತಸ್ಮಿನ್ ವಿಶ್ವರೂಪೇ ಏಕಸ್ಮಿನ್ ಸ್ಥಿತಮ್ ಏಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮ್ ಅನೇಕಧಾ ದೇವಪಿತೃಮನುಷ್ಯಾದಿಭೇದೈಃ ಅಪಶ್ಯತ್ ದೃಷ್ಟವಾನ್ ದೇವದೇವಸ್ಯ ಹರೇಃ ಶರೀರೇ ಪಾಣ್ಡವಃ ಅರ್ಜುನಃ ತದಾ ॥

(ಭಾಷ್ಯಾರ್ಥ)

ಮತ್ತು ಅಲ್ಲಿ ಆ ವಿಶ್ವರೂಪದಲ್ಲಿ ಅನೇಕ ಪ್ರಕಾರವಾಗಿ ಎಂದರೆ ದೇವತೆಗಳು, ಪಿತೃಗಳು, ಮನುಷ್ಯರು–ಇವೇ ಮುಂತಾದ ಭೇದಗಳಿಂದ ವಿಂಗಡವಿಂಗಡವಾಗಿರುವ ಜಗತ್ತೆಲ್ಲವೂ ದೇವತೆಗಳಿಗೆಲ್ಲ ದೇವನಾದ ಹರಿಯ ಶರೀರದಲ್ಲಿ ಏಕಸ್ಥವಾಗಿರುವದನ್ನು ಎಂದರೆ ಒಕ್ಕಡೆಯಲ್ಲಿ ಇರುವದನ್ನು ಪಾಂಡವನು ಅರ್ಜುನನು, ಆಗ ಕಂಡನು, ನೋಡಿದವನಾದನು.

## ಅರ್ಜುನನು ಕಂಡ ವಿಶೇಷಗಳು, ಆಡಿದ ಮಾತು

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಞ್ಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಞ್ಜಲಿರಭಾಷತ ॥ ೧೪ ॥**

---

1. ಸಾವಿರ ಸೂರ್ಯರು ಒಮ್ಮೆಗೇ ಉದಿಸಿದರೆ ಅವರ ಬೆಳಕನ್ನು ನೋಡುವದಾಗಲಿ ಅದರ ಪರಿಣಾಮವನ್ನು ಗೊತ್ತುಹಚ್ಚುವದಾಗಲಿ ಆಗಲಾರದು. ಒಂದು ವೇಳೆ ಅದನ್ನು ಗೊತ್ತುಮಾಡುವದಾದರೂ ಭಗವಂತನ ಪ್ರಕಾಶವನ್ನು ಇಷ್ಟೆಂದು ನಿರ್ಣಯಿಸುವದು ಆಗಲಾರದು ಎಂದು ಭಾವ.

೧೪. ಬಳಿಕ ವಿಸ್ಮಯಾವಿಷ್ಟನಾಗಿ ಹೃಷ್ಟರೋಮನಾದ ಧನಂಜಯನು (ಆ) ದೇವನಿಗೆ ಶಿರಸ್ಸಿನಿಂದ ಪ್ರಣಾಮಮಾಡಿ ಕೃತಾಂಜಲಿಯಾಗಿ ಇಂತೆಂದನು.

(ಭಾಷ್ಯ)

೧೨೫. ತತಃ ತಂ ದೃಷ್ಟ್ವಾ ಸ ವಿಸ್ಮಯೇನ ಆವಿಷ್ಟಃ ವಿಸ್ಮಯಾವಿಷ್ಟಃ ಹೃಷ್ಟಾನಿ ರೋಮಾಣಿ ಯಸ್ಯ ಸೋಽಯಂ ಹೃಷ್ಟರೋಮಾ ಚ ಅಭವತ್ ಧನಞ್ಜಯಃ। ಪ್ರಣಮ್ಯ ಪ್ರಕರ್ಷೇಣ ನಮನಂ ಕೃತ್ವಾ ಪ್ರಹ್ವೀಭೂತಃ ಸನ್ ಶಿರಸಾ ದೇವಂ ವಿಶ್ವರೂಪಧರಂ ಕೃತಾಞ್ಜಲಿಃ ನಮಸ್ಕಾರಾರ್ಥಂ ಸಮ್ಪುಟೀಕೃತಹಸ್ತಃ ಸನ್ ಅಭಾಷತ ಉಕ್ತವಾನ್ ॥

(ಭಾಷ್ಯಾರ್ಥ)

ಬಳಿಕ ಆತನನ್ನು ಕಂಡು ಆ ಧನಂಜಯನು ವಿಸ್ಮಯಾವಿಷ್ಟನಾಗಿ ವಿಸ್ಮಯದಿಂದ ತುಂಬಿದವನಾಗಿ ಹೃಷ್ಟರೋಮನಾದನು ಎಂದರೆ ನೆಟ್ಟಗೆ ಎದ್ದು ನಿಂತ ಮೈಗೂದಲುಳ್ಳವನಾದನು. ವಿಶ್ವರೂಪಧರನಾದ (ಆ) ದೇವನಿಗೆ ಶಿರಸ್ಸಿನಿಂದ ಪ್ರಣಾಮಮಾಡಿ ಎಂದರೆ ಚೆನ್ನಾಗಿ ತಲೆಬಾಗಿ ಅಡ್ಡಬಿದ್ದವನಾಗಿ, ಕೃತಾಂಜಲಿಯಾಗಿ ಎಂದರೆ ನಮಸ್ಕಾರಕ್ಕಾಗಿ ಕೈಮುಗಿದುಕೊಂಡವನಾಗಿ ಇಂತೆಂದನು, ನುಡಿದನು.

(ಭಾಷ್ಯ)

೧೨೬. ಕಥಮ್ ? ಯತ್ ತ್ವಯಾ ದರ್ಶಿತಂ ವಿಶ್ವರೂಪಮ್, ತತ್ ಅಹಂ ಪಶ್ಯಾಮಿ ಇತಿ ಸ್ವಾನುಭವಮ್ ಆವಿಷ್ಕುರ್ವನ್ ಅರ್ಜುನ ಉವಾಚ—

(ಭಾಷ್ಯಾರ್ಥ)

ಹೇಗೆಂದರೆ, ನೀನು ತೋರಿಸಿದೆಯಲ್ಲ, ಆ ವಿಶ್ವರೂಪವು ನನಗೆ (ಹೀಗೆ) ಕಾಣಿಸುತ್ತಿದೆ ಎಂದು ಸ್ವಾನುಭವವನ್ನು ತೋರ್ಪಡಿಸುವುದಕ್ಕಾಗಿ ಅರ್ಜುನನಿಂತೆಂದನು :—

**ಅರ್ಜುನ ಉವಾಚ—**

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಙ್ಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಂ**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥**

೧೫. ಅರ್ಜುನನಿಂತೆಂದನು :— ದೇವನೇ, ನಿನ್ನ ದೇಹದಲ್ಲಿ ಎಲ್ಲಾ ದೇವತೆಗಳನ್ನೂ ಹಾಗೂ (ಎಲ್ಲಾ) ಭೂತವಿಶೇಷಸಂಘಗಳನ್ನೂ ಕಮಲಾಸನ

ನಾದ ಈಶನಾದ ಬ್ರಹ್ಮನನ್ನೂ ಸರ್ವ ಋಷಿಗಳನ್ನೂ ದಿವ್ಯರಾದ ಉರಗರನ್ನೂ ಕಾಣುತ್ತಿದೇನೆ.

(ಭಾಷ್ಯ)

೧೫. ಪಶ್ಯಾಮಿ ಉಪಲಭೇ ಹೇ ದೇವ ತವ ದೇಹೇ ದೇವಾನ್ ಸರ್ವಾನ್ ತಥಾ ಭೂತವಿಶೇಷಸಙ್ಘಾನ್ ಭೂತವಿಶೇಷಾಣಾಂ ಸ್ಥಾವರಜಙ್ಗಮಾನಾಂ ನಾನಾಸಂಸ್ಥಾನವಿಶೇಷಾಣಾಂ ಸಙ್ಘಾಃ ಭೂತವಿಶೇಷಸಙ್ಘಾಃ, ತಾನ್ । ಕಿಂಚ ಬ್ರಹ್ಮಾಣಂ ಚತುರ್ಮುಖಮ್ ಈಶಮ್ ಈಶಿತಾರಮ್ ಪ್ರಜಾನಾಂ ಕಮಲಾಸನಸ್ಥಂ ಪೃಥಿವೀಪದ್ಮಮಧ್ಯೇ ಮೇರುಕರ್ಣಿಕಾಸನಸ್ಥಮ್ ಇತ್ಯರ್ಥಃ । ಋಷೀಂಶ್ಚ ವಸಿಷ್ಠಾದೀನ್ ಸರ್ವಾನ್ ಉರಗಾಂಶ್ಚ ವಾಸುಕಿಪ್ರಭೃತೀನ್ ದಿವ್ಯಾನ್ ದಿವಿ ಭವಾನ್ ॥

(ಭಾಷ್ಯಾರ್ಥ)

ಎಲೈ ದೇವನೆ, ನಿನ್ನ ದೇಹದಲ್ಲಿ ಎಲ್ಲಾ ದೇವತೆಗಳನ್ನೂ ಭೂತವಿಶೇಷಗಳ ಸಂಘಗಳನ್ನೂ–ಸ್ಥಾವರಜಂಗಮಗಳೆಂಬ ಬಗೆಬಗೆಯ ಆಕಾರವಿಶೇಷಗಳುಳ್ಳ ಬೇರೆ ಬೇರೆಯ ಪ್ರಾಣಿಗಳ ಗುಂಪುಗಳೇ ಭೂತವಿಶೇಷಸಂಘಗಳು ; ಅವುಗಳನ್ನೂ-ಮತ್ತು ಈಶ್ವರನಾದ ಎಂದರೆ ಪ್ರಜೆಗಳ ಒಡೆಯನಾದ **ಚತುರ್ಮುಖಬ್ರಹ್ಮನು** ಕಮಲಾಸನದಲ್ಲಿರುವದನ್ನೂ ಎಂದರೆ ಭೂಮಿಯೆಂಬ ತಾವರೆಯ ನಡುವೆ ಮೇರುವೆಂಬ ಕರ್ಣಿಕೆಯಮೇಲೆ ಕುಳಿತಿರುವ[1] (ಬ್ರಹ್ಮನನ್ನೂ) ಎಂದರ್ಥ. ವಸಿಷ್ಠರೇ ಮೊದಲಾದ ಸರ್ವ **ಋಷಿ**ಗಳನ್ನೂ ದಿವ್ಯರಾದ ದೇವಲೋಕದಲ್ಲಿರುವ ವಾಸುಕಿಯೇ ಮೊದಲಾದ **ಉರಗ**ರನ್ನೂ ಕಾಣುತಲಿದೇನೆ.

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾ ಸರ್ವತೋಽನನ್ತರೂಪಮ್ ।**
**ನಾನ್ತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬ ॥**

೧೬. ನಿನ್ನನ್ನು ಅನೇಕ ಬಾಹೂದರವಕ್ತ್ರನೇತ್ರಗಳುಳ್ಳವನನ್ನಾಗಿಯೂ ಅನಂತರೂಪನನ್ನಾಗಿಯೂ, ಎಲ್ಲಾ ಕಡೆಯಲ್ಲಿಯೂ ಕಾಣುತ್ತಿದೇನೆ. ವಿಶ್ವೇಶ್ವರನೆ, ವಿಶ್ವರೂಪನೆ, ನಿನ್ನ ಅಂತವನ್ನಾಗಲಿ, ಮಧ್ಯವನ್ನಾಗಲಿ, ಮತ್ತು ಆದಿಯನ್ನಾಗಲಿ ಕಾಣದಿರುವೆನು.

---

1. ಮೋ.ಧ. ೧೮೨-೩೨ರಲ್ಲಿ ಈ ವರ್ಣನೆಯಿದೆ.

(ಭಾಷ್ಯ)

೧೨೮. ಅನೇಕಬಾಹೂದರವಕ್ತ್ರನೇತ್ರಮ್ ಅನೇಕೇ ಬಾಹವಃ ಉದರಾಣಿ ವಕ್ತ್ರಾಣಿ ನೇತ್ರಾಣಿ ಚ ಯಸ್ಯ ತವ ಸ ತ್ವಮ್ ಅನೇಕಬಾಹೂದರವಕ್ತ್ರನೇತ್ರಃ । ತಮ್ ಅನೇಕಬಾಹೂದರವಕ್ತ್ರನೇತ್ರಮ್ । ಪಶ್ಯಾಮಿ ತ್ವಾ ತ್ವಾಂ ಸರ್ವತಃ ಸರ್ವತ್ರ ಅನನ್ತರೂಪಮ್ ಅನನ್ತಾನಿ ರೂಪಾಣಿ ಅಸ್ಯ ಇತಿ ಅನನ್ತರೂಪಃ । ತಮ್ ಅನನ್ತ ರೂಪಮ್ । ನ ಅನ್ತಮ್ । ಅನ್ತಃ ಅವಸಾನಮ್ । ನ ಮಧ್ಯಮ್। ಮಧ್ಯಂ ನಾಮ ದ್ವಯೋಃ ಕೋಟ್ಯೋಃ ಅನ್ತರಮ್ । ನ ಪುನಃ ತವ ಆದಿಮ್ । ತವ ದೇವಸ್ಯ ನ[1] ಅನ್ತಂ ಪಶ್ಯಾಮಿ, ನ ಮಧ್ಯಂ ಪಶ್ಯಾಮಿ ನ ಪುನಃ ಆದಿಂ ಪಶ್ಯಾಮಿ ಹೇ ವಿಶ್ವೇಶ್ವರ! ವಿಶ್ವರೂಪ[2]!

(ಭಾಷ್ಯಾರ್ಥ)

ಅನೇಕಬಾಹೂದರವಕ್ತ್ರನೇತ್ರಗಳುಳ್ಳವನನ್ನಾಗಿಯೂ ಅನೇಕವಾದ ತೋಳು ಗಳೂ ಹೊಟ್ಟೆಗಳೂ ಬಾಯಿಗಳೂ ಕಣ್ಣುಗಳೂ ಇರುವವನಾದ್ದರಿಂದ ನೀನು ಅನೇಕ ಬಾಹೂದರವಕ್ತ್ರನೇತ್ರನು ; ಅಂಥ ಅನೇಕಬಾಹೂದರವಕ್ತ್ರಗಳುಳ್ಳವನನ್ನಾಗಿಯೂ, ಅನಂತರೂಪನನ್ನಾಗಿಯೂ : ಲೆಕ್ಕವಿಲ್ಲದಷ್ಟು ರೂಪಗಳು ಇವನಿಗೆ ಇರುವವಾದ್ದರಿಂದ ಅನಂತರೂಪನು ; ಅಂಥ ಅನಂತರೂಪನನ್ನಾಗಿಯೂ ಎಲ್ಲಾ ಕಡೆಯಲ್ಲಿಯೂ ಎಲ್ಲೆಲ್ಲಿಯೂ (ತ್ವಾ = ತ್ವಾಮ್) ನಿನ್ನನ್ನು ನೋಡುತಲಿದೇನೆ. ಅಂತವನ್ನು ಕಾಣುತ್ತ ಲಿಲ್ಲ ; ಅಂತ ಎಂದರೆ ಕೊನೆ. ಮಧ್ಯವನ್ನು (ಕಾಣುತ್ತ)ಲಿಲ್ಲ; ಮಧ್ಯ ಎಂದರೆ ಎರಡು ಕಡೆಗಳ ನಡುವಣ (ಭಾಗ). ನಿನ್ನ ಆದಿಯನ್ನೂ ಕಾಣುತ್ತಲಿಲ್ಲ! ಎಲ್ಲಕ್ಕೂ ಈಶ್ವರನಾದವನೆ, ವಿಶ್ವರೂಪನೆ, ದೇವನಾದ ನಿನ್ನ ಅಂತವನ್ನೂ ಕಾಣುತ್ತಲಿಲ್ಲ, ಮಧ್ಯವನ್ನೂ ಕಾಣುತ್ತಲಿಲ್ಲ. ಮತ್ತು ಆದಿಯನ್ನೂ ಕಾಣುತ್ತಲಿಲ್ಲ (ಎಂದಭಿಪ್ರಾಯ).

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋದೀಪ್ತಿಮನ್ತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮನ್ತಾದ್**
**ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥ ೧೭ ॥**

೧೭. ಕಿರೀಟಿಯೂ ಗದಿಯೂ ಚಕ್ರಿಯೂ ತೇಜೋರಾಶಿಯೂ

1. " ನ ದೇವಸ್ಯ ಅನ್ತಂ ಪಶ್ಯಾಮಿ " ಮ॥ವ್ಯಾ॥
2. ' ಹೇ ವಿಶ್ವರೂಪ ' ಎಂದು ಮ॥ವ್ಯಾ॥ ಹೊರತು ಉಳಿದವುಗಳ ಪಾಠ.

ಸರ್ವತೋದೀಪ್ತಿಮಂತನೂ ದುರ್ನಿರೀಕ್ಷ್ಯನೂ ಆಗಿ ಎಲ್ಲೆಲ್ಲಿಯೂ ದೀಪ್ತಾನಲಾರ್ಕದ್ಯುತಿಯಾಗಿ ಅಪ್ರಮೇಯನಾಗಿರುವ ನಿನ್ನನ್ನು ಕಾಣುತಲಿದೇನೆ.

(ಭಾಷ್ಯ)

೧೭. ಕಿಂಚ ಕಿರೀಟಿನಮ್ ಕಿರೀಟಂ ನಾಮ ಶಿರೋಭೂಷಣವಿಶೇಷಃ ತದ್ ಯಸ್ಯ ಅಸ್ತಿ ಸಃ ಕಿರೀಟೀ ತಂ ಕಿರೀಟಿನಮ್ । ತಥಾ ಗದಿನಂ ಗದಾ ಅಸ್ಯ ವಿದ್ಯತೇ ಇತಿ ಗದೀ ತಂ ಗದಿನಮ್ । ತಥಾ ಚಕ್ರಿಣಂ ಚಕ್ರಮ್ ಅಸ್ಯ ಅಸ್ತಿ ಇತಿ ಚಕ್ರೀ ತಂ ಚಕ್ರಿಣಂ ಚ । ತೇಜೋರಾಶಿಂ ತೇಜಃಪುಞ್ಜಮ್ । ಸರ್ವತೋದೀಪ್ತಿಮನ್ತಮ್, ಸರ್ವತಃ ದೀಪ್ತಿಃ ಅಸ್ಯ ಅಸ್ತಿ ಇತಿ ಸರ್ವತೋದೀಪ್ತಿಮಾನ್ ತಂ ಸರ್ವತೋದೀಪ್ತಿಮನ್ತಮ್ । ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ದುಃಖೇನ ನಿರೀಕ್ಷ್ಯಃ ದುರ್ನಿರೀಕ್ಷ್ಯಃ ತಂ ದುರ್ನಿರೀಕ್ಷ್ಯಮ್[1] । ಸಮನ್ತಾತ್ ಸರ್ವತಃ[2] ಸರ್ವತ್ರ । ದೀಪ್ತಾನಲಾರ್ಕದ್ಯುತಿಮ್ । ಅನಲಶ್ಚ ಅರ್ಕಶ್ಚ ಅನಲಾರ್ಕೌ, ದೀಪ್ತೌ ಅನಲಾರ್ಕೌ ದೀಪ್ತಾನಲಾರ್ಕೌ। ತಯೋಃ ದೀಪ್ತಾನಲಾರ್ಕಯೋಃ ದ್ಯುತಿರಿವ ದ್ಯುತಿಃ ತೇಜಃ ಯಸ್ಯ ತವ ಸ ತ್ವಂ ದೀಪ್ತಾನಲಾರ್ಕದ್ಯುತಿಃ, ತಂ ತ್ವಾಂ ದೀಪ್ತಾನಲಾರ್ಕದ್ಯುತಿಮ್ । ಅಪ್ರಮೇಯಮ್ ನ ಪ್ರಮೇಯಮ್ ಅಶಕ್ಯಪರಿಚ್ಛೇದಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಮತ್ತು ಕಿರೀಟಿಯೂ : ಕಿರೀಟ ಎಂದರೆ ತಲೆಗೆ ಹಾಕಿಕೊಳ್ಳುವ ಒಂದಾನೊಂದು ಒಡವೆ; ಅದು ಯಾವನಿಗಿರುವದೋ ಅವನು ಕಿರೀಟಿಯು ; ಅಂಥ ಕಿರೀಟಿಯೂ. ಮತ್ತು ಗದಿಯೂ : ಗದೆಯು ಇವನಿಗೆ ಇರುವದರಿಂದ ಗದಿಯು ; ಅಂಥ ಗದಿಯೂ. ಆದರಂತೆ ಚಕ್ರಿಯೂ : ಚಕ್ರವು ಇವನಿಗೆ ಇರುವದರಿಂದ ಚಕ್ರಿಯು ; ಅಂಥ ಚಕ್ರಿಯೂ. ತೇಜೋರಾಶಿಯೂ ಎಂದರೆ ಬೆಳಕಿನ ಒಟ್ಟುಗೂಡಿಸಲೂ ಸರ್ವತೋ ದೀಪ್ತಿಮಂತನೂ: ಎಲ್ಲೆಲ್ಲಿಯೂ ಬೆಳಕು ಇವನಿಗೆ ಇರುವದರಿಂದ ಸರ್ವತೋದೀಪ್ತಿ ಮಂತನು ; (ಅಂಥ) ಸರ್ವತೋದೀಪ್ತಿಮಂತನೂ. ದುರ್ನಿರೀಕ್ಷ್ಯನೂ : (ಇವನನ್ನು) ನೋಡುವದು ಕಷ್ಟವಾದ್ದರಿಂದ ದುರ್ನಿರೀಕ್ಷ್ಯನು ; ಅಂಥ ದುರ್ನಿರೀಕ್ಷ್ಯನೂ. ಸಮಂತಾತ್ ಎಂದರೆ ಎಲ್ಲೆಲ್ಲಿಯೂ ಎಲ್ಲಾ ಕಡೆಯಲ್ಲಿಯೂ, ದೀಪ್ತಾನಲಾರ್ಕ ದ್ಯುತಿಯೂ : ಬೆಂಕಿಯೂ ಸೂರ್ಯನೂ ಅನಲಾರ್ಕರು ; ಝುಗಝುಗಿಸುವ

---

1, ದುರ್ನಿರೀಕ್ಷಮ್ ಎಂದು ಮು|| ವ್ಯಾ|| ಗಳ ಗೀತಾ ಪಾಠ ; ' ದುಃಖೇನ ನಿರೀಕ್ಷ್ಯಮ್ ' ಎಂದು ಭಾಷ್ಯಪಾಠ.

2. ' ಸಮನ್ತತಃ ' ಎಂದಿಷ್ಟೇ ಮು||ವ್ಯಾ||; ' ಸಮನ್ತತಃ ಸರ್ವತ್ರ' ನಿ|| ಅ||

ಅನಲಾರ್ಕರು ದೀಪ್ತಾನಲಾರ್ಕರು. ಆ ದೀಪ್ತಾನಲಾರ್ಕರ ದ್ಯುತಿಯಂತೆ ದ್ಯುತಿ ಎಂದರೆ ಕಾಂತಿಯು ಯಾವನಿಗಿರುವದೋ ಆ ನೀನು ದೀಪ್ತಾನಲಾರ್ಕದ್ಯುತಿಯು; ಅಂಥ ದೀಪ್ತಾನಲಾರ್ಕದ್ಯುತಿಯೂ. (ಹೀಗಿದ್ದು) ಅಪ್ರಮೇಯನಾಗಿರುವ ಎಂದರೆ ಪ್ರಮೇಯನಲ್ಲದಿರುವ (ಪ್ರಮಾಣಗಳಿಂದ) ಗೊತ್ತುಪಡಿಸುವದಕ್ಕೆ ಅಶಕ್ಯನಾಗಿರುವ ನಿನ್ನನ್ನು ಕಾಣುತ್ತಲಿದೇನೆ ಎಂದರ್ಥ.

(ಭಾಷ್ಯ)

೧೩೦. ಇತ ಏವ ತೇ ಯೋಗಶಕ್ತಿದರ್ಶನಾತ್ ಅನುಮಿನೋಮಿ—

(ಭಾಷ್ಯಾರ್ಥ)

ಹೀಗೆ ನಿನ್ನ ಯೋಗಶಕ್ತಿಯನ್ನು ಕಂಡದ್ದರಿಂದಲೇ ನಾನು ಊಹಿಸುವದೇನೆಂದರೆ :—

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥

೧೮. ಅರಿತುಕೊಳ್ಳಬೇಕಾಗಿರುವ ಪರಮ ಅಕ್ಷರವು ನೀನು; ಈ ವಿಶ್ವಕ್ಕೆ ಪರ ನಿಧಾನವು ನೀನು; ಅವ್ಯಯನು ನೀನು; ಶಾಶ್ವತಧರ್ಮಗೊಪ್ತೃ (ನೀನು). ಸನಾತನನಾದ ಪುರುಷನು ನೀನು ಎಂದು ನನ್ನ ಮತವು.

(ಭಾಷ್ಯ)

೧೩೧. ತ್ವಮ್ ಅಕ್ಷರಂ ನ ಕ್ಷರತಿ ಇತಿ [1] । ಪರಮಂ ಬ್ರಹ್ಮ ವೇದಿತವ್ಯಮ್ ಜ್ಞಾತವ್ಯಂ ಮುಮುಕ್ಷುಭಿಃ । ತ್ವಮ್ ಅಸ್ಯ ವಿಶ್ವಸ್ಯ ಸಮಸ್ತಸ್ಯ ಜಗತಃ ಪರಂ ಪ್ರಕೃಷ್ಟಂ ನಿಧಾನಂ ನಿಧೀಯತೇ ಅಸ್ಮಿನ್ ಇತಿ ನಿಧಾನಮ್ । ಪರಂ ಆಶ್ರಯಃ ಇತ್ಯರ್ಥಃ । ಕಿಂಚ ತ್ವಮ್ ಅವ್ಯಯಃ ನ ತವ ವ್ಯಯಃ ವಿದ್ಯತೇ ಇತಿ ಅವ್ಯಯಃ । ಶಾಶ್ವತಧರ್ಮಗೋಪ್ತಾ ಶಶ್ವತ್ ಭವಃ ಶಾಶ್ವತಃ ನಿತ್ಯಃ ಧರ್ಮಃ, ತಸ್ಯ ಗೋಪ್ತಾ ಶಾಶ್ವತಧರ್ಮಗೋಪ್ತಾ । ಸನಾತನಃ ಚಿರನ್ತನಃ ತ್ವಂ ಪುರುಷಃ ಪರಃ ಮತಃ ಅಭಿಪ್ರೇತಃ ಮೇ ಮಮ ॥

---

1. 'ಅಕ್ಷರಮ್' ಎಂದು ಇದರ ಮುಂದೆ ಹೆಚ್ಚಾಗಿ ಮು॥ ಮೈ॥

(ಭಾಷ್ಯಾರ್ಥ)

ನೀನು ಮುಮುಕ್ಷುಗಳು ಅರಿತುಕೊಳ್ಳಬೇಕಾಗಿರುವ ಮನಗಾಣಬೇಕಾಗಿರುವ ಅಕ್ಷರವು-ನಾಶವಾಗದಿರುವದರಿಂದ (ಅಕ್ಷರವೆನಿಸಿರುವ) ಪರಬ್ರಹ್ಮವು. ನೀನು **ಈ** ವಿಶ್ವಕ್ಕೆ ಎಂದರೆ ಎಲ್ಲಾ ಜಗತ್ತಿಗೆ ಪರ ಎಂದರೆ ಉತ್ತಮವಾದ ನಿಧಾನವು-ಇದರಲ್ಲಿ ಇಡುವರಾದ್ದರಿಂದ ಇದಕ್ಕೆ ನಿಧಾನವೆಂದು ಹೆಸರು-ಹೆಚ್ಚಿನ ಆಶ್ರಯವು ಎಂದರ್ಥ. ಮತ್ತು ನೀನು ಅವ್ಯಯನು, ಎಂದರೆ ನಿನಗೆ (ಯಾವ ಬಗೆಯ) ಸವೆಯುವಿಕೆಯೂ ಇಲ್ಲದ್ದರಿಂದ ಅವ್ಯಯನು. ಶಾಶ್ವತಧರ್ಮಗೋಪ್ತನು. ಶಾಶ್ವತವಾದ ಎಂದರೆ ಯಾವಾಗಲೂ ಇರುವ, ನಿತ್ಯವಾದ, ಧರ್ಮವು (ಶಾಶ್ವತಧರ್ಮವು); ಅದನ್ನು ಕಾಪಾಡುವವನು ಶಾಶ್ವತಧರ್ಮಗೋಪ್ತನು. ನೀನು ಸನಾತನನಾದ ಎಂದೆಂದಿಗೂ ಇರುವ ಪರಮ ಪುರುಷನು ಎಂದು (ಮೇ = ಮಮ) ನನ್ನ ಮತವು, ಅಭಿಪ್ರಾಯವು.

**ಅನಾದಿಮಧ್ಯಾಂತಮನಂತವೀರ್ಯ-**
**ಮನಂತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪಂತಮ್ ॥ ೧೯ ॥**

೧೯. ಅನಾದಿಮಧ್ಯಾಂತನಾದ, ಅನಂತವೀರ್ಯನಾದ, ಅನಂತ ಬಾಹುವಾದ, ಶಶಿಸೂರ್ಯನೇತ್ರನಾದ ದೀಪ್ತಹುತಾಶವಕ್ತ್ರನಾದ ನಿನ್ನ ತೇಜಸ್ಸಿನಿಂದ ಈ ವಿಶ್ವವನ್ನು ತಪಿಸುತ್ತಿರುವ ನಿನ್ನನ್ನು ನೋಡುತ್ತಲಿದೇನೆ.

(ಭಾಷ್ಯ)

೧೬೨. ಕಿಂಚ ಅನಾದಿಮಧ್ಯಾನ್ತಮ್ ಆದಿಶ್ಚ ಮಧ್ಯಂ ಚ ಅನ್ತಶ್ಚ ನ ವಿದ್ಯತೇ ಯಸ್ಯ ಸೋಽಯಮ್ ಅನಾದಿಮಧ್ಯಾನ್ತಃ । ತಂ ತ್ವಾಮ್ ಅನಾದಿಮಧ್ಯಾನ್ತಮ್। ಅನನ್ತವೀರ್ಯಂ ನ ತವ ವೀರ್ಯಸ್ಯ ಅನ್ತಃ ಅಸ್ತಿ[1] ಇತಿ ಅನನ್ತವೀರ್ಯಃ । ತಂ ತ್ವಾಮ್ [2] ಅನನ್ತವೀರ್ಯಮ್ । ತಥಾ ಅನನ್ತಬಾಹುಮ್ ಅನನ್ತಾಃ ಬಾಹವಃ ಯಸ್ಯ ತವ ಸ ತ್ವಮ್ ಅನನ್ತಬಾಹುಃ । ತಂ ತ್ವಾಮ್ ಅನನ್ತಬಾಹುಮ್ । ಶಶಿಸೂರ್ಯನೇತ್ರಮ್ ಶಶಿಸೂರ್ಯೌ ನೇತ್ರೇ ಯಸ್ಯ ತವ ಸ ತ್ವಂ ಶಶಿಸೂರ್ಯನೇತ್ರಃ । ತಂ ತ್ವಾಂ ಶಶಿಸೂರ್ಯನೇತ್ರಮ್। ಚನ್ದ್ರಾದಿತ್ಯನಯನಮ್ । ಪಶ್ಯಾಮಿ

1. 'ವಿದ್ಯತೇ' ಮ॥
2. ಮ॥ ಮೈ॥ ಗಳಲ್ಲಿಲ್ಲ.

ತ್ವಾಂ ದೀಪ್ತಹುತಾಶವಕ್ತ್ರಮ್। ದೀಪ್ತಶ್ಚ ಅಸೌ ಹುತಾಶಶ್ಚ ಸ ವಕ್ತ್ರಂ ಯಸ್ಯ ತವ ಸ ತ್ವಂ ದೀಪ್ತಹುತಾಶವಕ್ತ್ರಃ । ತಂ ತ್ವಾಂ ದೀಪ್ತಹುತಾಶವಕ್ತ್ರಮ್ । ಸ್ವತೇಜಸಾ ವಿಶ್ವಮ್ ಇದಂ ಸಮಸ್ತಂ[1] ತಪನ್ತಂ ತಾಪಯನ್ತಮ್[2] ॥

(ಭಾಷ್ಯಾರ್ಥ)

ಮತ್ತು ಅನಾದಿಮಧ್ಯಾಂತನಾದ ಯಾವಾತನಿಗೆ ಮೊದಲು, ನಡುವೆ, ಕೊನೆ-ಇವಿಲ್ಲವೋ ಅಂಥವನು ಅನಾದಿಮಧ್ಯಾಂತನು ; ಅಂಥ ಅನಾದಿ ಮಧ್ಯಾಂತನಾದ ನಿನ್ನನ್ನು. ಅನಂತವೀರ್ಯನಾದ : ನಿನ್ನ ವೀರ್ಯಕ್ಕೆ ಕೊನೆಯಿಲ್ಲವಾದ್ದರಿಂದ ನೀನು ಅನಂತವೀರ್ಯನು ; ಅಂಥ ಅನಂತವೀರ್ಯನಾದ ನಿನ್ನನ್ನು. ಹೀಗೆಯೇ ಅನಂತಬಾಹುವಾದಃ ಲೆಕ್ಕವಿಲ್ಲದಷ್ಟು ತೋಳುಗಳು ಯಾವನಿಗಿರುವವೋ ಆ ನೀನು ಅನಂತಬಾಹು : ಅಂಥ ಅನಂತಬಾಹುವಾದ ನಿನ್ನನ್ನು. ಶಶಿಸೂರ್ಯನೇತ್ರನಾದ : ಶಶಿಸೂರ್ಯರೇ ಯಾವನಿಗೆ ಕಣ್ಣುಗಳೋ ಆ ನೀನು ಶಶಿಸೂರ್ಯನೇತ್ರನು ; ಅಂಥ ಶಶಿಸೂರ್ಯನೇತ್ರನಾದ ನಿನ್ನನ್ನು, ಚಂದ್ರಸೂರ್ಯರೆಂಬ ಕಂಗಳುಳ್ಳ (ನಿನ್ನನ್ನು). ದೀಪ್ತಹುತಾಶವಕ್ತ್ರನಾದ : ಹೊತ್ತಿಕೊಂಡುರಿಯುತ್ತಿರುವ ಬೆಂಕಿಯಿದೆಯಲ್ಲ, ಅದು ಯಾವನಿಗೆ ಮುಖವೋ ಆ ನೀನು ದೀಪ್ತಹುತಾಶವಕ್ತ್ರನು ; ಅಂಥ ದೀಪ್ತಹುತಾಶ ವಕ್ತ್ರನಾದ ನಿನ್ನನ್ನು. ನಿನ್ನ ತೇಜಸ್ಸಿನಿಂದ ಈ ವಿಶ್ವವೆಲ್ಲವನ್ನೂ ಸುಡುತ್ತಿರುವ, (ಅದಕ್ಕೆ) ತಾಪವನ್ನುಂಟುಮಾಡುತ್ತಿರುವ (ನಿನ್ನನ್ನು) ನೋಡುತ್ತಲಿದೇನೆ.

**ದ್ಯಾವಾಪೃಥಿವ್ಯೋರಿದಮನ್ತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥**

೨೦. ಸ್ವರ್ಗಲೋಕಭೂಲೋಕಗಳ ಈ ನಡುವಣ ಭಾಗವೂ ಎಲ್ಲಾ ದಿಕ್ಕುಗಳೂ ನಿನ್ನೊಬ್ಬನಿಂದಲೇ ವ್ಯಾಪ್ತವಾಗಿರುವವು. ಮಹಾತ್ಮನೆ, ಅದ್ಭುತವಾದ ನಿನ್ನ ಉಗ್ರವಾದ ಈ ರೂಪವನ್ನು ಕಂಡು ಲೋಕತ್ರಯವೂ ಪ್ರವ್ಯಥಿತವಾಗಿರುತ್ತದೆ.

(ಭಾಷ್ಯ)

೧೩೩. ದ್ಯಾವಾಪೃಥಿವ್ಯೋಃ ಇದಮ್ ಅನ್ತರಂ ಹಿ ಅನ್ತರಿಕ್ಷಂ ವ್ಯಾಪ್ತಂ

---

1. ನಿ॥ಗು॥ ಪಾಠಗಳಲ್ಲಿಲ್ಲ.
2. ‘ ಸನ್ತಾಪಯನ್ತಮ್ ’ ಮ॥ಮೈ॥

ತ್ವಯಾ ಏಕೇನ ವಿಶ್ವರೂಪಧರೇಣ[1]। ದಿಶಶ್ಚ ಸರ್ವಾ ವ್ಯಾಪ್ತಾಃ। ದೃಷ್ಟ್ವಾ ಉಪಲಭ್ಯ ಅದ್ಭುತಂ ವಿಸ್ಮಾಪಕಂ ರೂಪಮ್ ಇದಂ ತವ ಉಗ್ರಂ ಕ್ರೂರಂ ಲೋಕಾನಾಂ ತ್ರಯಂ ಲೋಕತ್ರಯಂ ಪ್ರವ್ಯಥಿತಂ ಭೀತಂ ಪ್ರಚಲಿತಂ[2] ವಾ ಹೇ ಮಹಾತ್ಮನ್ ಅಕ್ಷುದ್ರಸ್ವಭಾವ ||

(ಭಾಷ್ಯಾರ್ಥ)

ಸ್ವರ್ಗ ಮತ್ತು ಭೂಲೋಕ-ಇವುಗಳ ನಡುವೆ ಇರುವದಲ್ಲ, ಈ ಅಂತರಿಕ್ಷವು ವಿಶ್ವರೂಪಧರನಾದ ನಿನ್ನೊಬ್ಬನಿಂದಲೇ ವ್ಯಾಪ್ತವಾಗಿರುವದು, ಎಲ್ಲಾ ದಿಕ್ಕುಗಳೂ (ನಿನ್ನಿಂದಲೇ) ವ್ಯಾಪ್ತವಾಗಿರುವವು. ಎಲೈ ಮಹಾತ್ಮನೆ, ಸಾಮಾನ್ಯವಾದ ಸ್ವಭಾವದವನಲ್ಲದ (ಭಗವಂತನೆ), ಈ ಅದ್ಭುತವಾದ ಆಶ್ಚರ್ಯವನ್ನುಂಟುಮಾಡುವ ನಿನ್ನ ಉಗ್ರವಾದ ಕ್ರೂರವಾದ ರೂಪವನ್ನು ಕಂಡು ನೋಡಿ ಲೋಕತ್ರಯವೂ ಮೂರು ಲೋಕವೂ ಪ್ರವ್ಯಥಿತವಾಗಿದೆ, ಹೆದರಿರುತ್ತದೆ, ಅಥವಾ ಚದರುತ್ತಿದೆ.

(ಭಾಷ್ಯ)

೧೩೪. ಅಥ ಅಧುನಾ[3] ಪುರಾ[4] "ಯದ್ವಾ ಜಯೇಮ ಯದಿ ವಾ ನೋ ಜಯೇಯುಃ" (೨-೬) ಇತ್ಯರ್ಜುನಸ್ಯ ಯಃ ಸಂಶಯಃ ಆಸೀತ್ ತನ್ನಿರ್ಣಯಾಯ ಪಾಣ್ಡವಜಯಮ್[5] ಐಕಾನ್ತಿಕಂ ದರ್ಶಯಾಮಿ ಇತಿ ಪ್ರವೃತ್ತೋ ಭಗವಾನ್। ತಂ ಪಶ್ಯನ್ ಆಹ—

(ಭಾಷ್ಯಾರ್ಥ)

ಇನ್ನು ಈಗ "(ನಾವು) ಗೆಲ್ಲುವೆವೋ ನಮ್ಮನ್ನೇ ಜಯಿಸುವರೋ" ಎಂದು (೨-೬) ಅರ್ಜುನನಿಗೆ ಹಿಂದೆ ಸಂಶಯವುಂಟಾಗಿತ್ತಷ್ಟೆ, ಅದನ್ನು (ಹೀಗೆಯೇ ಸರಿ) ಎಂದು ತೀರ್ಮಾನಮಾಡಿ ಪಾಂಡವರು ಗೆಲ್ಲುವರೆಂಬುದು ನಿಶ್ಚಯವೆಂಬುದನ್ನು ತೋರಿಸೋಣವೆಂದು ಭಗವಂತನು ಹೊರಟಿರುತ್ತಾನೆ. ಆತನನ್ನು ಕಂಡು (ಅರ್ಜುನನು) ಹೇಳುತ್ತಾನೆ:—

---

1. 'ವ್ಯಾಪ್ತಂ ಹಿ ತ್ವಯಾ ವಿಶ್ವರೂಪಧರೇಣ ಏಕೇನ' ಮು|| ವ್ಯೈ||
2. 'ಚಲಿತಂ' ಮು|| ವ್ಯೈ||
3. 'ಇದಾನೀಂ' ಮು|| ವ್ಯೈ||
4. ಮು|| ವ್ಯೈ ||ಗಳಲ್ಲಿಲ್ಲ.
5. 'ವಿಜಯಂ' ಮು|| ವ್ಯೈ ||

**ಅಮೀ ಹಿ ತ್ವಾ ಸುರಸಙ್ಘಾ ವಿಶನ್ತಿ**
**ಕೇಚಿದ್ ಭೀತಾಃ ಪ್ರಾಞ್ಜಲಯೋ ಗೃಣನ್ತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಙ್ಘಾಃ**
**ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥**

೨೧. ಈ ಸುರಸಂಘಗಳು ನಿನ್ನನ್ನೇ ಹೊಗುತ್ತಿರುವವು. ಕೆಲವರು ಹೆದರಿ ಕೈಮುಗಿದುಕೊಂಡು ಸ್ತುತಿಸುತ್ತಿರುವರು, ಮಹರ್ಷಿಸಿದ್ಧಸಂಘಗಳು 'ಸ್ವಸ್ತಿ' ಎಂದು ಹೇಳುತ್ತಾ ನಿನ್ನನ್ನು ಪುಷ್ಕಲವಾದ ಸ್ತುತಿಗಳಿಂದ ಸ್ತುತಿಗೈಯುತ್ತಿರುವವು.

(ಭಾಷ್ಯ)

೧೩೫. ಕಿಂಚ ಅಮೀ ಹಿ ಯುಧ್ಯಮಾನಾಃ ಯೋದ್ಧಾರಃ[1] ತ್ವಾ ತ್ವಾಂ[2] ಸುರಸಙ್ಘಾ ಯೇ ಅತ್ರ ಭೂಭಾರಾವತಾರಾಯ ಅವತೀರ್ಣಾಃ ವಸ್ವಾದಿದೇವಸಙ್ಘಾಃ ಮನುಷ್ಯಸಂಸ್ಥಾನಾಃ ತೇ ತ್ವಾಂ ವಿಶನ್ತಿ ಪ್ರವಿಶನ್ತೋ ದೃಶ್ಯನ್ತೇ । ತತ್ರ ಕೇಚಿತ್ ಭೀತಾಃ ಪ್ರಾಞ್ಜಲಯಃ ಸನ್ತಃ ಗೃಣನ್ತಿ ಸ್ತುವನ್ತಿ ತ್ವಾಮ್ ಅನ್ಯೇ[3] ಪಲಾಯನೇಽಪಿ ಅಶಕ್ತಾಃ ಸನ್ತಃ । ಯುದ್ಧೇ ಪ್ರತ್ಯುಪಸ್ಥಿತೇ ಉತ್ಪಾತಾದಿನಿಮಿತ್ತಾನಿ ಉಪಲಕ್ಷ್ಯ[4] ಸ್ವಸ್ತ್ಯಸ್ತು ಜಗತಃ ಇತಿ ಉಕ್ತ್ವಾ ಮಹರ್ಷಿಸಿದ್ಧಸಙ್ಘಾಃ ಮಹರ್ಷೀಣಾಂ ಸಿದ್ಧಾನಾಂ ಚ ಸಙ್ಘಾಃ ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ಸಂಪೂರ್ಣಾಭಿಃ ॥

(ಭಾಷ್ಯಾರ್ಥ)

ಮತ್ತು ಯುದ್ಧಮಾಡುತ್ತಿರುವ ಈ ಪಟುಭಟರಿರುವರಲ್ಲ, (ಅವರು) ಭೂಮಿಯ ಭಾರವನ್ನು ಇಳಿಸುವದಕ್ಕಾಗಿ ಯಾವ ಸುರಸಂಘಗಳು, ವಸುಗಳೇ ಮುಂತಾದ ದೇವತೆಗಳ ಗಣಗಳು ಇಲ್ಲಿ ಮನುಷ್ಯರ ರೂಪದಲ್ಲಿ ಅವತರಿಸಿರುವರೋ, ಅವರು (ತ್ವಾ=ತ್ವಾಂ) ನಿನ್ನನ್ನೇ ಹೊಗುತ್ತಿರುವರು, ನಿನ್ನನ್ನು ಒಳಹೊಗುತ್ತಿರುವದು ಕಂಡುಬರುತ್ತಿದೆ. ಅವರಲ್ಲಿ ಇನ್ನೂ ಕೆಲವರು ಹೆದರಿ ಕೈಮುಗಿದುಕೊಂಡು ಓಡಿ

---

1. 'ಯೇ ಯೋದ್ಧಾರಃ' ಮು|| ಮೈ||
2. 'ತ್ವಾಂ' ಎಂದೇ ಗೀತಾಪಾಠವೂ ಇದಕ್ಕೆ ಅನುಗುಣವಾಗಿ 'ತ್ವಾ' ಇಲ್ಲದ ಭಾಷ್ಯಪಾಠವೂ ಮು|| ಮೈಗಳಲ್ಲಿದೆ.
3. 'ತ್ವಾಮ್ ಅನ್ಯೇ' ಮು|| ಮೈ||ಗಳಲ್ಲಿಲ್ಲ.
4. 'ಉಪಲಭ್ಯ' ಮು||

ಹೋಗುವದಕ್ಕೂ ಆಗದೆ, ನಿನ್ನನ್ನು ಸ್ತುತಿಸುತ್ತಿರುವರು, ಹೊಗಳುತ್ತಿರುವರು. ಯುದ್ಧವು ಮೊದಲಾಗಲು (ಉಂಟಾದ) ಉತ್ಪಾತಗಳೇ ಮುಂತಾದ[1] (ಕೆಟ್ಟ) ಶಕುನಗಳನ್ನು ಕಂಡು ' ಜಗತ್ತಿಗೆ ಕಲ್ಯಾಣವಾಗಲಿ ! ' ಎನ್ನುತ್ತಾ ಮಹರ್ಷಿಸಿದ್ಧಸಂಘಗಳು ಮಹರ್ಷಿಗಳ ಮತ್ತು ಸಿದ್ಧರ ಗುಂಪುಗಳು ಪುಷ್ಕಲವಾದ ಸಂಪೂರ್ಣವಾದ ಸ್ತುತಿಗಳಿಂದ ನಿನ್ನನ್ನು ಸ್ತುತಿಗೈಯುತ್ತಿರುವವು.

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗನ್ಧರ್ವಯಕ್ಷಾಸುರಸಿದ್ಧಸಙ್ಘಾ**
**ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ ೨೨ ॥**

೨೨. ರುದ್ರಾದಿತ್ಯರು, ವಸುಗಳು ಮತ್ತು ಸಾಧ್ಯರಿದಾರಲ್ಲ (ಅವರು) ವಿಶ್ವರು, ಅಶ್ವಿನರು, ಮರುತ್ತುಗಳು, ಊಷ್ಮಪರು, ಗಂಧರ್ವಯಕ್ಷಾಸುರ ಸಿದ್ಧಸಂಘಗಳು–ಎಲ್ಲರೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಿರುವರು.

(ಭಾಷ್ಯ)

೧೩೬. ಕಿಂಚ ಅನ್ಯತ್ । ರುದ್ರಾದಿತ್ಯಾಃ ವಸವಃ ಯೇ ಚ ಸಾಧ್ಯಾಃ । ರುದ್ರಾದಯೋ ಗಣಾಃ[2] । ವಿಶ್ವೇ (ವಿಶ್ವೇ) ದೇವಾಃ ಅಶ್ವಿನೌ ಚ ದ್ವೌ ದೇವೌ[3] । ಮರುತಶ್ಚ । ಊಷ್ಮಪಾಶ್ಚ ಪಿತರಃ । ಗನ್ಧರ್ವಯಕ್ಷಾಸುರಸಿದ್ಧಸಙ್ಘಾಃ । ಗನ್ಧರ್ವಾ ಹಾಹಾಹೂಹೂಪ್ರಭೃತಯಃ । ಯಕ್ಷಾಃ ಕುಬೇರಪ್ರಭೃತಯಃ ಅಸುರಾಃ ವಿರೋಚನಪ್ರಭೃತಯಃ । ಸಿದ್ಧಾಃ ಕಪಿಲಾದಯಃ । ತೇಷಾಂ ಸಙ್ಘಾಃ ಗನ್ಧರ್ವಯಕ್ಷಾಸುರಸಿದ್ಧಸಙ್ಘಾಃ[4] ತೇ ವೀಕ್ಷನ್ತೇ ಪಶ್ಯನ್ತಿ ತ್ವಾಂ ವಿಸ್ಮಿತಾಃ ವಿಸ್ಮಯಮ್ ಆಪನ್ನಾಃ ಸನ್ತಃ ತ ಏವ ಸರ್ವೇ ॥

---

1. ಶಕುನಶಾಸ್ತ್ರದಲ್ಲಿ ಹೇಳಿದ ಅಮಂಗಳ ಶಕುನಗಳನ್ನು ಇಲ್ಲಿ ಮುಂತಾದ ಎಂಬ ಹೆಸರಿನಿಂದ ಹೇಳಿದೆ.

2. ಮು|| ಮೈ||ಗಳಲ್ಲಿ ಈ ವಾಕ್ಯವಿಲ್ಲ.

3. ' ವಿಶ್ವೇಽಶ್ವಿನೌ ' ನಿ|| ' ವಿಶ್ವೇ ದೇವಾ ಅಶ್ವಿನೌ ಚ ದೇವೌ ' ಮೈ|| ನಿ|| ವಾ|| ಅ|| ಇಲ್ಲಿ ಕೊಟ್ಟಿರುವದು ಮು|| ಪಾಠ. ವಿಶ್ವೇದೇವಾಃ ಎಂದಿರಬೇಕು.

4. ಸಾಧ್ಯರು ಹನ್ನೆರಡು ಮಂದಿ : ಮನ, ಅನುಮಂತೃ, ಪ್ರಾಣ, ನರ, ನಾರಾಯಣ, ವೃತ್ತಿ, ತಪ, ಹಯ, ಹಂಸ, ಧರ್ಮ, ವಿಭು, ಪ್ರಭು, (ಸಾಂ. ಪು. ೧೬-೧೮). ಇತರರು ಸಾಧ್ಯಾ ಎಂಬ ದಕ್ಷನ ಮಗಳ ಮಕ್ಕಳು. (ಮ. ಪು. ೫-೧೬)

(ಭಾಷ್ಯಾರ್ಥ)

ಇನ್ನೂ ಬೇರೆ (ಕಾಣಿಸುತ್ತಿದೆ): ರುದ್ರರು, ಆದಿತ್ಯರು, ವಸುಗಳು, ಸಾಧ್ಯರು. ಎಂಬವರಿದಾರಲ್ಲ (ಅವರು. ಇಲ್ಲಿ) ರುದ್ರರೇ ಮೊದಲಾದವರು **ಗಣದೇವತೆಗಳು.** ವಿಶ್ವರು ಎಂದರೆ ವಿಶ್ವೇದೇವತೆಗಳು[1]. ಅಶ್ವಿನರು, (ಅಶ್ವಿನೀ) ದೇವತೆಗಳಿಬ್ಬರು[2] ಮತ್ತು ಮರುತ್ತುಗಳು ಊಷ್ಮಪರೆಂಬ ಪಿತೃಗಳು[3]. ಗಂಧರ್ವಯಕ್ಷಾಸುರಸಿದ್ಧ ಸಂಘಗಳು: ಹಾಹಾಹೂಹೂ ಮೊದಲಾದವರು ಗಂಧರ್ವರು, ಕುಬೇರನೇ ಮೊದಲಾದವರು ಯಕ್ಷರು, ವಿರೋಚನನೇ ಮೊದಲಾದವರು ಅಸುರರು, ಕಪಿಲನೇ ಮೊದಲಾದವರು ಸಿದ್ಧರು; ಇವರ ಗುಂಪುಗಳನ್ನು ಗಂಧರ್ವಯಕ್ಷಾಸುರಸಿದ್ಧಸಂಘಗಳು (ಎಂದಿದೆ). ಆ (ಸಂಘಗಳು) ನಿನ್ನನ್ನು ವಿಸ್ಮಿತರಾಗಿ ಬೆರಗಾದವರಾಗಿ ನೋಡುತ್ತಿರುವರು ನಿಟ್ಟಿಸುತ್ತಿರುವರು ; ಅವರೆಲ್ಲರೂ (ನೋಡುತ್ತಿರುವರು.)

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥ ೨೩ ॥**

೨೩. ಮಹಾಬಾಹುವೆ, ಬಹುವಕ್ತ್ರನೇತ್ರಗಳುಳ್ಳ, ಬಹುಬಾಹೂರುಪಾದಗಳುಳ್ಳ, ಬಹೂದರಗಳುಳ್ಳ, ಬಹುದಂಷ್ಟ್ರಾಕರಾಲವಾಗಿರುವ ನಿನ್ನ ಮಹಾರೂಪವನ್ನು ಕಂಡು ಲೋಕಗಳೂ ನಾನೂ ಪ್ರವ್ಯಥಿತರಾಗಿದೇವೆ.

(ಭಾಷ್ಯ)

೧೩೭. ಯಸ್ಮಾತ್ ರೂಪಂ ಮಹತ್ ಅತಿಪ್ರಮಾಣಂ ತೇ ತವ ಬಹುವಕ್ತ್ರನೇತ್ರಂ ಬಹೂನಿ ವಕ್ತ್ರಾಣಿ ಮುಖಾನಿ ನೇತ್ರಾಣಿ ಚಕ್ಷೂಂಷಿ ಚ ಯಸ್ಮಿನ್ ತದ್ ರೂಪಂ

---

1. ವಿಶ್ವಾ ಎಂಬ ದಕ್ಷಕನ್ಯೆಯ ಮಕ್ಕಳು ಹತ್ತು ಮಂದಿ: ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾಮ, ಧುರಿ, ಲೋಚನ, ಆದ್ರವ, ಪುರೂರವ. (ಸಾಂ. ಪು. ೧೪-೧೪).

2. ಸೂರ್ಯನ ಹೆಂಡತಿಯಾದ ಸಂಜ್ಞಾದೇವಿಯ ಮಕ್ಕಳಾದ (ಆದಿ. ಪ. ೬೬-೩೫) ನಾಸತ್ಯ, ದಸ್ರ, (ಹ. ವಂ. ೧-೯-೫೫) ಎಂಬ ದೇವವೈದ್ಯರು.

3. ಮನುವಿನ ಮಕ್ಕಳಾದ ಮರೀಚ್ಯಾದಿಋಷಿಗಳ ಮಕ್ಕಳು ಪಿತೃಗಣಗಳು. ಸೋಮಸದರು ಸಾಧ್ಯರಿಗೆ; ಅಗ್ನಿಷ್ವಾತ್ತರು ದೇವತೆಗಳಿಗೆ; ಬರ್ಹಿಷದರು ದೈತ್ಯದಾನವಾದಿಗಳಿಗೆ; ಸೋಮಪರು, ಹವಿರ್ಭುಜರು, ಆಜ್ಯಪರು, ಸುಕಾಲಿಗಳು—ಇವರು ಬ್ರಾಹ್ಮಣಾದಿ ಮನುಷ್ಯರಿಗೆ ಪಿತೃಗಳು (ಮನು ೩). ಬಿಸಿಯೂಟದಲ್ಲಿ ಇವರಿಗೆ ಮೆಚ್ಚಿಗೆ ಇರುವದರಿಂದ ಇವರನ್ನು ಊಷ್ಮಪರು ಎಂದಿದೆ.

ಬಹುವಕ್ತ್ರನೇತ್ರಮ್ । ಹೇ ಮಹಾಬಾಹೋ । ಬಹುಬಾಹೂರುಪಾದಮ್ ಬಹವಃ ಬಾಹವಃ ಊರವಃ ಪಾದಾಶ್ಚ ಯಸ್ಮಿನ್‌ರೂಪೇ ತದ್ ಬಹುಬಾಹೂರುಪಾದಮ್ । ಕಿಂಚ ಬಹೂದರಂ ಬಹೂನಿ ಉದರಾಣಿ ಯಸ್ಮಿನ್ ಇತಿ[1] ಬಹೂದರಮ್ । ಬಹುದಂಷ್ಟ್ರಾಕರಾಲಂ ಬಹ್ವೀಭಿಃ ದಂಷ್ಟ್ರಾಭಿಃ ಕರಾಲಂ ವಿಕೃತಂ[2] ತದ್ ಬಹುದಂಷ್ಟ್ರಾಕರಾಲಮ್ । ದೃಷ್ಟ್ವಾ ರೂಪಮ್ ಈದೃಶಂ ಲೋಕಾಃ ಲೌಕಿಕಾಃ ಪ್ರಾಣಿನಃ ಪ್ರವ್ಯಥಿತಾಃ ಪ್ರಚಲಿತಾಃ ಭಯೇನ । ತಥಾ ಅಹಮಪಿ ॥

(ಭಾಷ್ಯಾರ್ಥ)

ಏಕೆಂದರೆ ಎಲೈ ಮಹಾಬಾಹುವೆ, (ತೇ = ತವ) ನಿನ್ನ ಮಹಾರೂಪವನ್ನು ಬಲು ದೊಡ್ಡದಾದ ಪ್ರಮಾಣದ (ರೂಪವನ್ನು)–ಬಹುವಕ್ತ್ರನೇತ್ರಗಳುಳ್ಳ ಬಹಳ ವಕ್ತ್ರಗಳು ಎಂದರೆ ಮುಖಗಳೂ ನೇತ್ರಗಳೂ ಎಂದರೆ ಕಣ್ಣುಗಳೂ ಯಾವದರಲ್ಲಿರುವವೋ ಆ ರೂಪವು ಬಹುವಕ್ತ್ರನೇತ್ರವು. ಬಹುಬಾಹೂರುಪಾದಗಳುಳ್ಳ : ಬಹಳ ತೋಳುಗಳೂ ತೊಡೆಗಳೂ ಹೆಜ್ಜೆಗಳೂ ಯಾವ ರೂಪದಲ್ಲಿರುವವೋ ಅದು ಬಹುಬಾಹೂರುಪಾದವು. ಮತ್ತು ಬಹೂದರಗಳುಳ್ಳ ಬಹಳ ಹೊಟ್ಟೆಗಳು ಯಾವದರಲ್ಲಿರುವವೋ ಅದು ಬಹೂದರವು. ಬಹುದಂಷ್ಟ್ರಾಕರಾಲವಾಗಿರುವ : ಬಹಳ ಕೋರೆದಾಡೆಗಳಿಂದ ಕರಾಲವಾಗಿರುವ, ವಿಕಾರವಾಗಿರುವದಲ್ಲ, ಅದು ಬಹುದಂಷ್ಟ್ರಾಕರಾಲವು. ಇಂಥ ರೂಪವನ್ನು ನೋಡಿ ಲೋಕಗಳು ಎಂದರೆ ಲೋಕದಲ್ಲಿರುವ ಪ್ರಾಣಿಗಳು ಬಹಳವಾಗಿ ಪ್ರವ್ಯಥಿತರಾಗಿರುವರು, ಭಯದಿಂದ ನಡುಗುತ್ತಿರುವರು ; ನಾನೂ ಹಾಗೆಯೇ (ಹೆದರಿ ನಡುಗುತ್ತಿದ್ದೇನೆ).

(ಭಾಷ್ಯ)

೧೩೮. ತತ್ರ ಇದಂ ಕಾರಣಮ್—

(ಭಾಷ್ಯಾರ್ಥ)

ಇದಕ್ಕೆ ಕಾರಣವೇನೆಂದರೆ :—

**ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ**
**ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥ ೨೪ ॥**

---

1. ' ತದ್ ' ಎಂದಿರಬೇಕಾಗಿತ್ತೆಂದು ತೋರುವದು.
2. ಯತ್ ಎಂಬ ಮಾತು ಇಲ್ಲಿರಬೇಕು, ಅಥವಾ ಅಧ್ಯಾಹೃತವಾಗಿದೆ.

೨೪. ಎಲೈ ವಿಷ್ಣುವೆ, ನಭಃಸ್ಪರ್ಶಿಯಾಗಿ ದೀಪ್ತನಾಗಿ ಅನೇಕ ವರ್ಣನಾಗಿರುವ ವ್ಯಾತ್ತಾನನನಾದ ದೀಪ್ತವಿಶಾಲನೇತ್ರನಾದ ನಿನ್ನನ್ನು ಕಂಡು ಪ್ರವ್ಯಥಿತಾಂತರಾತ್ಮನಾಗಿರುವೆನು. ಧೃತಿಯನ್ನೂ ಶಮವನ್ನೂ ಪಡೆಯದೆ ಇರುವೆನು.

(ಭಾಷ್ಯ)

೧೩೯. ನಭಃಸ್ಪೃಶಂ ದ್ಯುಸ್ಪರ್ಶಮ್[1] ಇತ್ಯರ್ಥಃ । ದೀಪ್ತಂ ಪ್ರಜ್ವಲಿತಮ್[2] ಅನೇಕವರ್ಣಮ್ ಅನೇಕೇ ವರ್ಣಾಃ ಭಯಂಕರಾಃ ನಾನಾಸಂಸ್ಥಾನಾಃ ಯಸ್ಮಿನ್ ತ್ವಯಿ ತಂ ತ್ವಾಮ್ ಅನೇಕವರ್ಣಮ್ । ವ್ಯಾತ್ತಾನನಂ ವ್ಯಾತ್ತಾನಿ ವಿವೃತಾನಿ ಆನನಾನಿ ಮುಖಾನಿ ಯಸ್ಮಿನ್ ತ್ವಯಿ ತಂ ತ್ವಾಂ ವ್ಯಾತ್ತಾನನಮ್ । ದೀಪ್ತವಿಶಾಲನೇತ್ರಂ ದೀಪ್ತಾನಿ ಪ್ರಜ್ವಲಿತಾನಿ ವಿಶಾಲಾನಿ ವಿಸ್ತೀರ್ಣಾನಿ ನೇತ್ರಾಣಿ ಯಸ್ಮಿನ್ ತ್ವಯಿ ತಂ ತ್ವಾಂ ದೀಪ್ತವಿಶಾಲನೇತ್ರಮ್ । ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾನ್ತರಾತ್ಮಾ ಪ್ರವ್ಯಥಿತಃ ಪ್ರಭೀತಃ ಅನ್ತರಾತ್ಮಾ ಮನಃ ಯಸ್ಯ ಮಮ ಸೋಽಹಂ ಪ್ರವ್ಯಥಿತಾನ್ತರಾತ್ಮಾ ಸನ್ ಧೃತಿಂ ಧೈರ್ಯಂ ನ ವಿನ್ದಾಮಿ ನ ಲಭೇ[3] ಶಮಂ ಚ ಉಪಶಮನಂ ಮನಸ್ತುಷ್ಟಿಂ ಹೇ ವಿಷ್ಣೋ ॥

(ಭಾಷ್ಯಾರ್ಥ)

ನಭಃಸ್ಪರ್ಶಿಯಾದ ಎಂದರೆ ಅಂತರಿಕ್ಷವನ್ನು ಮುಟ್ಟುವ ಎಂದರ್ಥ. ದೀಪ್ತವಾದ ಹೊಳೆಹೊಳೆಯುವ ಅನೇಕವರ್ಣವಾದ ಅನೇಕವಾದ ವರ್ಣಗಳು ಎಂದರೆ ಭಯಂಕರವಾದ ಬಗೆಬಗೆಯ ಆಕಾರಗಳು ಯಾವ ನಿನ್ನಲ್ಲಿರುವವೋ ಅಂಥ ಅನೇಕ ವರ್ಣನಾದ ನಿನ್ನನ್ನು. ವ್ಯಾತ್ತಾನನನಾದ: ವ್ಯಾತ್ತವಾದ ತೆರೆದುಕೊಂಡಿರುವ ಆನನಗಳು ಎಂದರೆ ಮುಖಗಳು ಯಾವ ನಿನ್ನಲ್ಲಿರುವವೋ ಅಂಥ ವ್ಯಾತ್ತಾನನನಾದ ನಿನ್ನನ್ನು. ದೀಪ್ತವಿಶಾಲನೇತ್ರನಾದ ದೀಪ್ತವಾದ ಎಂದರೆ ಥಳಥಳಿಸುವ ವಿಶಾಲವಾದ ಅರಳಿಕೊಂಡಿರುವ ನೇತ್ರಗಳು ಯಾವ ನಿನ್ನಲ್ಲಿರುವವೋ ಅಂಥ ದೀಪ್ತವಿಶಾಲನೇತ್ರನಾದ ನಿನ್ನನ್ನು. ಎಲೈ ವಿಷ್ಣುವೆ, (ಇಂಥ) ನಿನ್ನನ್ನು ಕಂಡು ಪ್ರವ್ಯಥಿತಾಂತರಾತ್ಮನಾಗಿರುವೆನು, ಪ್ರವ್ಯಥಿತವಾದ ಎಂದರೆ ಬಹಳವಾಗಿ ಹೆದರಿರುವ ಅಂತರಾತ್ಮವು ಎಂದರೆ ಮನಸ್ಸು ಯಾವ ನನಗಿರುವದೋ ಅಂಥ ನಾನು ಪ್ರವ್ಯಥಿತಾಂತರಾತ್ಮನಾಗಿ

1. ದ್ಯುಸ್ಪೃಶಮ್ ' ಮ॥
2. ' ಜ್ವಲಿತಂ ' ಎಂದೇ ನಿ॥ವ್ಯೆ॥ವಾ॥ಗು॥
3. ' ಧೃತಿಂ ನ ವಿನ್ದಾಮಿ ಧೈರ್ಯಂ ನ ಲಭೇ ' ಮ॥

ಧೃತಿಯನ್ನು ಎಂದರೆ ಧೈರ್ಯವನ್ನೂ ಪಡೆಯದೆ ಇರುವೆನು, ಹೊಂದದೆ ಇರುವೆನು; ಶಮವನ್ನೂ ಎಂದರೆ ಉಪಶಾಂತಿಯನ್ನೂ ಮನಸ್ತುಷ್ಟಿಯನ್ನೂ (ಪಡೆಯದೆ ಇರುವೆನು).

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸಂನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥ ೨೫ ॥**

೨೫. ದಂಷ್ಟ್ರಾಕರಾಲವಾಗಿ ಕಾಲಾನಲಸಂನಿಭವಾಗಿರುವ ನಿನ್ನ ಮುಖಗಳನ್ನು ನೋಡಿಯೇ ದಿಕ್ಕುಗಳನ್ನು ಕಾಣದೆ ಇರುವೆನು, ಶರ್ಮವನ್ನೂ ಪಡೆಯದೆ ಇರುವೆನು. ದೇವೇಶನೆ, ಜಗನ್ನಿವಾಸನೆ, ಪ್ರಸನ್ನನಾಗು.

(ಭಾಷ್ಯ)

೧೪೦. ಕಸ್ಮಾತ್ ? ದಂಷ್ಟ್ರಾಕರಾಲಾನಿ ದಂಷ್ಟ್ರಾಭಿಃ ಕರಾಲಾನಿ ವಿಕೃತಾನಿ ತೇ ತವ ಮುಖಾನಿ ದೃಷ್ಟ್ವೈವ ಉಪಲಭ್ಯ ಕಾಲಾನಲಸಂನಿಭಾನಿ ಪ್ರಲಯಕಾಲೇ ಲೋಕಾನಾಂ ದಾಹಕಃ ಅಗ್ನಿಃ ಕಾಲಾನಲಃ ತತ್ಸಂನಿಭಾನಿ[1] ಕಾಲಾನಲಸದೃಶಾನಿ ದೃಷ್ಟ್ವಾ ಇತ್ಯೇತತ್ । ದಿಶಃ ಪೂರ್ವಾಪರವಿವೇಕೇನ ನ ಜಾನೇ ದಿಙ್ಮೂಢೋ ಜಾತೋಽಸ್ಮಿ । ಅತಃ ನ ಲಭೇ ಚ ನ ಉಪಲಭೇ ಚ ಶರ್ಮ ಸುಖಮ್ । ಅತಃ ಪ್ರಸೀದ ಪ್ರಸನ್ನೋ ಭವ ಹೇ ದೇವೇಶ, ಜಗನ್ನಿವಾಸ ॥

(ಭಾಷ್ಯಾರ್ಥ)

ಏಕೆಂದರೆ ದಂಷ್ಟ್ರಾಕರಾಲವಾದ ಕೋರದಾಡೆಗಳಿಂದ ಕರಾಲವಾಗಿರುವ ವಿಕೃತವಾಗಿರುವ (ತೇ = ತವ) ನಿನ್ನ ಮುಖಗಳನ್ನು ನೋಡಿಯೇ ಕಂಡೇ, ಕಾಲಾನಲಸಂನಿಭವಾದ ಪ್ರಲಯಕಾಲದಲ್ಲಿ ಲೋಕಗಳನ್ನು ಸುಡುವ ಬೆಂಕಿಯು ಕಾಲಾನಲವು; ಅದರ ಸಂನಿಭವಾಗಿರುವ ಕಾಲಾನಲನಂತೆ ಇರುವ (ಮುಖಗಳನ್ನು) ನೋಡಿ ಎಂದಭಿಪ್ರಾಯ. ದಿಕ್ಕುಗಳನ್ನು ಇದು ಪೂರ್ವ, ಇದು ಪಶ್ಚಿಮ–ಎಂದು

---

1. 'ತತ್ಸದೃಶಾನಿ ಕಾಲಾನಲಸಂನಿಭಾನಿ ಮುಖಾನಿ' ಮ||ನ್ಯೈ|| ; 'ತತ್ಸಂನಿಭಾನಿ ಕಾಲಾನಲಸದೃಶಾನಿ ಇತ್ಯೇತತ್' ಗು|| ; 'ತತ್ಸದೃಶಾನಿ ಕಾಲಾನಲಸಂನಿಭಾನಿ ಮುಖಾನಿ ದೃಷ್ಟ್ವಾ ಇತ್ಯೇತತ್' ವಾ|| ಆ||; ಇಲ್ಲಿ ಕೊಟ್ಟಿರುವದು ನಿ|| ಪಾಠ.

ವಿಂಗಡಿಸಿ ಅರಿಯದೆ ದಿಙ್ಮೂಢನಾಗಿರುವೆನು. ಆದ್ದರಿಂದ ಶರ್ಮವನ್ನು ಸುಖವನ್ನು ಪಡೆಯದೆ ಇರುವೆನು, ಹೊಂದದೆ ಇರುವೆನು. ಆದಕಾರಣ, ಎಲೈ ದೇವೇಶನೆ, ಜಗನ್ನಿವಾಸನೆ, ' ಪ್ರಸೀದ ' (ನನ್ನಲ್ಲಿ) ಪ್ರಸನ್ನನಾಗು.

(ಭಾಷ್ಯ)

೧೪೧. ಯೇಭ್ಯಃ ಮಮ ಪರಾಜಯಶಙ್ಕಾ ಯಾ[1] ಆಸೀತ್, ಸಾ ಚ ಅಪಗತಾ । ಯತಃ—

(ಭಾಷ್ಯಾರ್ಥ)

ಯಾರಿಂದ ಸೋಲಾದೀತೆಂದು ನನಗೆ ಯಾವ ಶಂಕೆಯುಂಟಾಗುತ್ತೋ ಅದೂ ಹೋಯಿತು. ಏಕೆಂದರೆ: —

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಙ್ಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬ ॥**
**ವಕ್ತ್ರಾಣಿ ತೇ ತ್ವರಮಾಣಾ ವಿಶನ್ತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ**
**ಕೇಚಿದ್ವಿಲಗ್ನಾ ದಶನಾನ್ತರೇಷು**
**ಸಂದೃಶ್ಯನ್ತೇ ಚೂರ್ಣಿತೈರುತ್ತಮಾಙ್ಗೈಃ ॥ ೨೭ ॥**

೨೬–೨೭. ಮತ್ತು ಅವನಿಪಾಲಸಂಘಗಳಿಂದೊಡಗೂಡಿರುವ ಈ ಧೃತರಾಷ್ಟ್ರನ ಮಕ್ಕಳೆಲ್ಲರೂ–ಭೀಷ್ಮನು, ದ್ರೋಣನು, ಮತ್ತು ಈ ಸೂತಪುತ್ರನು–(ಇವರು) ನಮ್ಮವರಾದ ಯೋಧಮುಖ್ಯರೊಡನೆ ಕೋರದಾಡೆಗಳಿಂದ ವಿಕಾರವಾಗಿ ಭಯಂಕರವಾಗಿರುವ ನಿನ್ನ ಮುಖಗಳನ್ನು ತ್ವರೆ ಮಾಡುತ್ತಾ ಹೊಗುತ್ತಿರುವರು. ಕೆಲವರು ಹಲ್ಲುಸಂದುಗಳಲ್ಲಿ ಸಿಕ್ಕಿಕೊಂಡು ಚೂರ್ಣಿತವಾದ ಉತ್ತಮಾಂಗಗಳೊಡನೆ ಕಾಣಬರುತ್ತಿರುವರು.

(ಭಾಷ್ಯ)

೧೪೨. ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ ದುರ್ಯೋಧನ

---

1. ಈ ಮಾತು ಮೂ॥ ಮೈ॥ ವಾ॥ ಗಳಲ್ಲಿ ಮಾತ್ರವಿದೆ. ಯೇಭ್ಯಃ ಎಂಬುದರ ಬದಲು ' ಏಭ್ಯಃ 'ಎಂದಿದ್ದರೆ ಸರಿಯಾಗಿರುತ್ತಿತ್ತು. ಪ್ರಾಕ್, ಆಸೀತ್ ' ಎಂಬ ಪಾಠವೂ ಉಂಟು.

ಪ್ರಭೃತಯಃ ' ತ್ವರಮಾಣಾ ವಿಶನ್ತಿ' ಇತಿ ವ್ಯವಹಿತೇನ ಸಂಬನ್ಧಃ । ಸರ್ವೇ ಸಹೈವ ಸಹಿತಾಃ[1] ಅವನಿಪಾಲಸಙ್ಘೈಃ ಅವನಿಂ ಪೃಥ್ವೀಂ ಪಾಲಯನ್ತಿ ಇತಿ ಅವನಿಪಾಲಾಃ ತೇಷಾಂ ಸಙ್ಘೈಃ । ಕಿಂಚ ಭೀಷ್ಮಃ ದ್ರೋಣಃ ಸೂತಪುತ್ರಃ ಕರ್ಣಃ ತಥಾ ಅಸೌ ಸಹ ಅಸ್ಮದೀಯೈರಪಿ ಧೃಷ್ಟದ್ಯುಮ್ನಪ್ರಭೃತಿಭಿಃ ಯೋಧಮುಖ್ಯೈಃ ಯೋಧಾನಾಂ ಮುಖ್ಯೈಃ[2] ಪ್ರಧಾನೈಃ ಸಹ ॥ ಕಿಂಚ ವಕ್ತ್ರಾಣಿ ಮುಖಾನಿ ತೇ ತವ ತ್ವರ ಮಾಣಾಃ ತ್ವರಾಯುಕ್ತಾಃ ಸನ್ತಃ ವಿಶನ್ತಿ । ಕಿಂವಿಶಿಷ್ಟಾನಿ ಮುಖಾನಿ[3] ? ದಂಷ್ಟ್ರಾಕರಾಲಾನಿ ಭಯಾನಕಾನಿ ಭಯಂಕರಾಣಿ । ಕಿಂಚ ಕೇಚಿತ್ ಮುಖಾನಿ ಪ್ರವಿಷ್ಟಾನಾಂ ಮಧ್ಯೇ ವಿಲಗ್ನಾಃ ದಶನಾನ್ತರೇಷು ಮಾಂಸಮಿವ ಭಕ್ಷಿತಂ ಸಂದೃಶ್ಯನ್ತೇ ಉಪಲಭ್ಯನ್ತೇ ಚೂರ್ಣಿತೈಃ ಚೂರ್ಣೀಕೃತೈಃ ಉತ್ತಮಾಙ್ಗೈಃ ಶಿರೋಭಿಃ ॥

(ಭಾಷ್ಯಾರ್ಥ)

ಮತ್ತು ಈ ಧೃತರಾಷ್ಟ್ರನ ಮಕ್ಕಳು, ದುರ್ಯೋಧನನೇ ಮುಂತಾದವರು ನಿನ್ನನ್ನು ' ತ್ವರೆಮಾಡುತ್ತಾ ಹೊಗುತ್ತಿರುವರು ' ಎಂದು (ಮುಂದಿನ ಶ್ಲೋಕದಲ್ಲಿ) ದೂರವಾಗಿರುವ (ಮಾತಿಗೆ) ಸಂಬಂಧಿಸಿಕೊಳ್ಳಬೇಕು. ಎಲ್ಲರೂ ಅವನಿಪಾಲ ಸಂಘಗಳ ಸಹ ಜೊತೆಯಲ್ಲಿಯೇ–ಅವನಿಯನ್ನು ಎಂದರೆ ಭೂಮಿಯನ್ನು ಕಾಪಾಡು ವದರಿಂದ ಅವನಿಪಾಲರು ; ಅವರ ಗುಂಪುಗಳೊಡನೆ (ಸೇರಿಕೊಂಡೇ ಹೊಗುತ್ತಿರು ವರು). ಮತ್ತು ಭೀಷ್ಮನು, ದ್ರೋಣನು, ಹಾಗೂ ಈ ಸೂತಪುತ್ರನು, ಕರ್ಣನು ನಮ್ಮವರಾದ ಧೃಷ್ಟದ್ಯುಮ್ನನೇ ಮೊದಲಾದ ಯೋಧಮುಖ್ಯರೊಡನೆ, (ಎಂದರ್ಥ). ॥೨೬॥ ಮತ್ತು (ತೇ = ತವ) ನಿನ್ನ ವಕ್ತ್ರಗಳನ್ನು ಮುಖಗಳನ್ನು ತ್ವರೆಮಾಡುತ್ತಾ ಅವಸರದಿಂದ ಕೂಡಿದವರಾಗಿ ಹೊಗುತ್ತಿರುವರು. ಎಂಥ ಬಾಯಿಗಳನ್ನು ? ಎಂದರೆ ಕೋರೆದಾಡೆಗಳಿಂದ ವಿಕಾರವಾಗಿ ಭಯಾನಕವಾಗಿರುವ, ಭಯಂಕರವಾಗಿ ರುವ (ಬಾಯಿಗಳನ್ನು ಹೊಗುತ್ತಿರುವರು). ಮತ್ತು ಬಾಯಿಗಳನ್ನು ಹೊಕ್ಕವ ರೊಳಗೆ ಕೆಲವರು ಹಲ್ಲುಸಂದುಗಳಲ್ಲಿ ಅಗಿದ ಮಾಂಸದಂತೆ ಸಿಕ್ಕಿಕೊಂಡು ಚೂರ್ಣಿತ ವಾದ ಪುಡಿಪುಡಿಯಾಗಿ ಮಾಡಿದ ತಲೆಗಳುಳ್ಳವರಾಗಿ ಕಾಣಿಸಿಕೊಳ್ಳುತ್ತಿರುವರು, ತೋರುತ್ತಿರುವರು.

---

1. ' ಸಂಹತಾಃ ' ಶಿ॥ಗು॥
2. ಈ ಎರಡು ಮಾತುಗಳು ಮ॥ಮ್ಮೈ॥ಗಳಲ್ಲಿಲ್ಲ.
3. ಮ॥ಮ್ಮೈ॥ಗಳಲ್ಲಿಲ್ಲ.

(ಭಾಷ್ಯ)

೧೪೩. ಕಥಂ ಪ್ರವಿಶನ್ತಿ[1] ಮುಖಾನಿ ಇತಿ ? ಆಹ

(ಭಾಷ್ಯಾರ್ಥ)

ಬಾಯಿಗಳನ್ನು ಹೇಗೆ ಹೊಗುತ್ತಿರುವರು ? ಎಂದರೆ ಹೇಳುತ್ತಾನೆ :—

**ಯಥಾ ನದೀನಾಂ ಬಹವೋಽಮ್ಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವನ್ತಿ ।**
**ತಥಾ ತವಾಮೀ ನರಲೋಕವೀರಾ**
**ವಿಶನ್ತಿ ವಕ್ತ್ರಾಣ್ಯಭಿವಿಜ್ವಲನ್ತಿ ॥ ೨೮ ॥**

೨೮. ಹೇಗೆ ನದಿಗಳ ಬಹಳವಾದ ಅಂಬುವೇಗಗಳು ಸಮುದ್ರಕ್ಕೇ ಅಭಿಮುಖವಾಗಿ ಓಡುತ್ತಿರುವವೋ ಹಾಗೆ ಈ ನರಲೋಕವೀರರು ನಿನ್ನ ಉರಿಯುತ್ತಿರುವ ಬಾಯಿಗಳೊಳಕ್ಕೆ ಹೊಗುತ್ತಿರುವರು.

(ಭಾಷ್ಯ)

೧೪೪ ಯಥಾ ನದೀನಾಂ ಸ್ರವನ್ತೀನಾಂ ಬಹವಃ ಅನೇಕೇ ಅಮ್ಬೂನಾಂ ವೇಗಾಃ ಅಮ್ಬುವೇಗಾಃ ತ್ವರಾವಿಶೇಷಾಃ ಸಮುದ್ರಮೇವ ಅಭಿಮುಖಾಃ ಪ್ರತಿಮುಖಾಃ ದ್ರವನ್ತಿ ಪ್ರವಿಶನ್ತಿ, ತಥಾ ತದ್ವತ್ ತವ ಅಮೀ ಭೀಷ್ಮಾದಯಃ ನರಲೋಕವೀರಾಃ ಮನುಷ್ಯಲೋಕೇ ಶೂರಾಃ[2] ವಿಶನ್ತಿ ವಕ್ತ್ರಾಣಿ ಅಭಿವಿಜ್ವಲನ್ತಿ ಪ್ರಕಾಶಮಾನಾನಿ ॥

(ಭಾಷ್ಯಾರ್ಥ)

ಹೇಗೆ ಹರಿಯುತ್ತಿರುವ ನದಿಗಳ ಬಹಳವಾದ ಅನೇಕವಾದ ಅಂಬುವೇಗಗಳು ಎಂದರೆ ಆಯಾ ಸೆಳವುಗಳು ಸಮುದ್ರಕ್ಕೇ ಅಭಿಮುಖವಾಗಿ ಎದುರಾಗಿ ಓಡುತ್ತಿರುವವೋ (ಹರಿದು ಬಂದು) ಸೇರುತ್ತಿರುವವೋ ಹಾಗೆ ಅದರಂತೆ ಈ ಭೀಷ್ಮನೇ ಮೊದಲಾದವರು, ಉರಿಯುತ್ತಿರುವ ಹೊಳೆಯುತ್ತಿರುವ ನಿನ್ನ ಬಾಯಿಗಳನ್ನು ಹೊಗುತ್ತಿರುವರು.

---

1. ' ವಿಶನ್ತಿ ' ಮ॥ಮ್ಯ॥
2. ' ಮನುಷ್ಯಲೋಕಶೂರಾಃ ' ಬ॥ಗು॥

(ಭಾಷ್ಯ)

೧೪೫. ತೇ ಕಿಮರ್ಥಂ ಪ್ರವಿಶನ್ತಿ, ಕಥಂ ಚ ಇತಿ ? ಆಹ—

(ಭಾಷ್ಯಾರ್ಥ)

ಅವರು ಏತಕ್ಕಾಗಿ[1] ಹೊಗುತ್ತಿರುವರು, ಮತ್ತು ಹೇಗೆ (ಹೋಗುತ್ತಿರುವರು ?) ಎಂದರೆ ಹೇಳುತ್ತಾನೆ :—

**ಯಥಾ ಪ್ರದೀಪ್ತಂ ಜ್ವಲನಂ ಪತಙ್ಗಾ**
**ವಿಶನ್ತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶನ್ತಿ ಲೋಕಾ-**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥**

೨೯. ಹೇಗೆ ಧಗಧಗನೆ ಉರಿಯುತ್ತಿರುವ ಜ್ವಲನವನ್ನು ಪತಂಗಗಳು ನಾಶಕ್ಕಾಗಿ ಸಮೃದ್ಧವೇಗವುಳ್ಳವಾಗಿ ಸೇರುತ್ತಿರುವವೋ ಹಾಗೆಯೇ ಲೋಕಗಳು ನಿನ್ನ ವಕ್ತ್ರಗಳನ್ನೂ ಸಮೃದ್ಧವೇಗವುಳ್ಳವಾಗಿ ನಾಶಕ್ಕಾಗಿ ಸೇರುತ್ತಿರುವವು.

(ಭಾಷ್ಯ)

೧೪೬. ಯಥಾ ಪ್ರದೀಪ್ತಂ ಜ್ವಲನಮ್ ಅಗ್ನಿಂ ಪತಙ್ಗಾಃ ಪಕ್ಷಿಣಃ ವಿಶನ್ತಿ ನಾಶಾಯ ವಿನಾಶಾಯ[2] ಸಮೃದ್ಧವೇಗಾಃ ಸಮೃದ್ಧಃ ಉದ್ಭೂತಃ ವೇಗಃ ಗತಿಃ ಯೇಷಾಂ ತೇ ಸಮೃದ್ಧವೇಗಾಃ, ತಥೈವ ನಾಶಾಯ ವಿಶನ್ತಿ ಲೋಕಾಃ ಪ್ರಾಣಿನಃ ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥

(ಭಾಷ್ಯಾರ್ಥ)

ಹೇಗೆ ಧಗಧಗನೆ ಉರಿಯುತ್ತಿರುವ ಜ್ವಲನವನ್ನು ಬೆಂಕಿಯನ್ನು ಪತಂಗಗಳು ಹಕ್ಕಿಗಳು ಸಮೃದ್ಧವೇಗಗಳಾಗಿ (ಹೆಚ್ಚಾಗಿ) ಎದ್ದ ವೇಗವು ಎಂದರೆ ಗತಿಯು ಯಾವವಕ್ಕೆ (ಇರುವದೋ) ಅವು ಸಮೃದ್ಧವೇಗಗಳು. ಅಂಥವುಗಳಾಗಿ ನಾಶಕ್ಕಾಗಿ ಎಂದರೆ ಸಾವಿಗಾಗಿ (ಬಂದು) ಹೊಗುತ್ತಿರುವವೋ, ಹಾಗೆಯೇ ಲೋಕಗಳು ಪ್ರಾಣಿಗಳು ನಿನ್ನ ಬಾಯಿಗಳನ್ನು ಸಮೃದ್ಧವೇಗವುಳ್ಳವಾಗಿ ನಾಶಕ್ಕಾಗಿ (ಬಂದು) ಹೊಗುತ್ತಿರುವವು.

---

1. ಯಾವ ಫಲಕ್ಕಾಗಿ; ಹೊಗುವದರಿಂದ ಏನು ಫಲವಾಗುವದು ?—ಎಂದು ಪ್ರಶ್ನೆ.
2. ಮು|| ಮೈ||ಗಳಲ್ಲಿಲ್ಲ.

ಲೇಲಿಹ್ಯಸೇ ಗ್ರಸಮಾನಃ ಸಮನ್ತಾ-
ಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।
ತೇಜೋಭಿರಾಪೂರ್ಯ ಜಗತ್ ಸಮಗ್ರಂ
ಭಾಸಸ್ತವೋಗ್ರಾಃ ಪ್ರತಪನ್ತಿ ವಿಷ್ಣೋ ॥ ೩೦ ॥

೩೦. (ನೀನು) ಸುತ್ತಲೂ ಸಮಗ್ರವಾದ ಲೋಕಗಳನ್ನೂ ಉರಿಯುತ್ತಿರುವ ವದನಗಳಿಂದ ನುಂಗುತ್ತಾ ಚಪ್ಪರಿಸುತ್ತಲಿರುವೆ. ಎಲೈ ವಿಷ್ಣುವೆ, ಸಮಗ್ರ ಜಗತ್ತನ್ನೂ ತೇಜಸ್ಸುಗಳಿಂದ ತುಂಬಿಕೊಂಡು ನಿನ್ನ ಪ್ರಭೆಗಳು ತಪಿಸುತ್ತಿರುವವು.

(ಭಾಷ್ಯ)

೧೪೭. ತ್ವಂ ಪುನಃ ಲೇಲಿಹ್ಯಸೇ ಆಸ್ವಾದಯಸಿ ಗ್ರಸಮಾನಃ ಅನ್ತಃ ಪ್ರವೇಶಯನ್ ಸಮನ್ತಾತ್ ಸಮನ್ತತಃ ಲೋಕಾನ್ ಸಮಗ್ರಾನ್ ಸಮಸ್ತಾನ್ ವದನೈಃ ವಕ್ತ್ರೈಃ ಜ್ವಲದ್ಭಿಃ ದೀಪ್ಯಮಾನೈಃ । ತೇಜೋಭಿಃ ಆಪೂರ್ಯ ಸಂವ್ಯಾಪ್ಯ ಜಗತ್ ಸಮಗ್ರಂ ಸಹ ಅಗ್ರೇಣ ಸಮಸ್ತಮ್ ಇತ್ಯೇತತ್ ಕಿಂಚ ಭಾಸಃ ದೀಪ್ತಯಃ ತವ ಉಗ್ರಾಃ ಕ್ರೂರಾಃ ಪ್ರತಪನ್ತಿ ಪ್ರತಾಪಂ[1] ಕುರ್ವನ್ತಿ ಹೇ ವಿಷ್ಣೋ ವ್ಯಾಪನಶೀಲ ॥

(ಭಾಷ್ಯಾರ್ಥ)

ನೀನಾದರೋ ಸುತ್ತಲೂ ಎತ್ತೆತ್ತಲೂ ಸಮಗ್ರವಾದ ಎಲ್ಲಾ ಲೋಕಗಳನ್ನೂ ಉರಿಯುತ್ತಿರುವ ಧಗಧಗಿಸುತ್ತಿರುವ ವದನಗಳಿಂದ ಬಾಯಿಗಳಿಂದ ನುಂಗುತ್ತಾ ಒಳಕ್ಕೆ ಸರಿಯಿಸಿಕೊಳ್ಳುತ್ತಾ ಚಪ್ಪರಿಸುತ್ತಲಿರುವೆ, ಸವಿನೋಡುತ್ತಲಿರುವೆ. ತೇಜಸ್ಸುಗಳಿಂದ ಸಮಗ್ರವಾದ, ಅಗ್ರದೊಡನೆ ಕೂಡಿ, ಎಲ್ಲಾ ಜಗತ್ತನ್ನೂ ಎಂದರ್ಥ; (ತೇಜಸ್ಸುಗಳಿಂದ ಜಗತ್ತನ್ನು) ತುಂಬಿಕೊಂಡು ಚೆನ್ನಾಗಿ ವ್ಯಾಪಿಸಿಕೊಂಡು (ನುಂಗುತ್ತಾ ಚಪ್ಪರಿಸುತ್ತಿರುವೆ). ಮತ್ತು ಎಲೈ ವಿಷ್ಣುವೆ, (ಎಲ್ಲವನ್ನೂ) ವ್ಯಾಪಿಸುವ ಸ್ವಭಾವದವನೆ, ನಿನ್ನ ಉಗ್ರವಾದ ಕ್ರೂರವಾದ ಪ್ರಭೆಗಳು, ಉರಿಗಳು ಪ್ರತಪಿಸುತ್ತಿರುವವು, ಚೆನ್ನಾಗಿ ಕಾಸಿ ಸುಡುತ್ತಿವೆ.

(ಭಾಷ್ಯ)

೧೪೮. ಯತ ಏವಮ್ ಉಗ್ರಸ್ವಭಾವಃ, ಅತಃ --

1. 'ಸನ್ತಾಪಂ' ಮ॥ ಮೈ॥

(ಭಾಷ್ಯಾರ್ಥ)

ನೀನು ಹೀಗೆ ಕ್ರೂರಸ್ವಭಾವನಾಗಿರುವೆಯಷ್ಟೆ ; ಆದ್ದರಿಂದ[1]—

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವನ್ತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ ೩೧ ॥**

೩೧. ಉಗ್ರರೂಪನಾದ ನೀನು ಯಾರು ? ನನಗೆ ಹೇಳು. ದೇವವರನೆ, ನಿನಗೆ ನಮಸ್ಕಾರವಿರಲಿ ! ಪ್ರಸನ್ನನಾಗು ! ಆದ್ಯನಾದ ನಿನ್ನನ್ನು ಅರಿಯಲಿಚ್ಛಿಸುತ್ತೇನೆ ; ಏಕೆಂದರೆ ನಿನ್ನ ಪ್ರವೃತ್ತಿಯನ್ನು ನಾನು ತಿಳಿಯದೆ ಇರುವೆನು.

(ಭಾಷ್ಯ)

೧೪೯. ಆಖ್ಯಾಹಿ ಕಥಯ ಮೇ ಮಹ್ಯಂ ಕೋ ಭವಾನ್ ಉಗ್ರರೂಪಃ ಕ್ರೂರಾಕಾರಃ[2] ನಮಃ ಅಸ್ತು ತೇ ತುಭ್ಯಂ ಹೇ ದೇವವರ ದೇವಾನಾಂ ಪ್ರಧಾನ । ಪ್ರಸೀದ ಪ್ರಸಾದಂ ಕುರು । ವಿಜ್ಞಾತುಂ ವಿಶೇಷೇಣ ಜ್ಞಾತುಮ್ ಇಚ್ಛಾಮಿ ಭವನ್ತಮ್ ಆದ್ಯಂ ಆದೌ ಭವಮ್ ಆದ್ಯಮ್[3] । ನ ಹಿ ಯಸ್ಮಾತ್ ಪ್ರಜಾನಾಮಿ ತವ ತ್ವದೀಯಾಂ ಪ್ರವೃತ್ತಿಂ ಚೇಷ್ಟಾಮ್ ॥

(ಭಾಷ್ಯಾರ್ಥ)

ಉಗ್ರರೂಪನಾದ ಕ್ರೂರವಾದ ಆಕಾರವುಳ್ಳ (ಈ) ನೀನು ಯಾರು ? (ಮೇ = ಮಹ್ಯಮ್) ನನಗೆ ಹೇಳು ತಿಳಿಸುವವನಾಗು. ಎಲೈ ದೇವವರನೆ, ದೇವತೆಗಳಿಗೆ ಮುಖ್ಯನಾದವನೆ, (ತೇ = ತುಭ್ಯಂ) ನಿನಗೆ ನಮಸ್ಕಾರವಿರಲಿ ! ಪ್ರಸನ್ನನಾಗು, (ನನ್ನಲ್ಲಿ) ಪ್ರಸಾದವನ್ನು ಮಾಡು ಆದ್ಯನಾದ ಆದಿಯಲ್ಲಿರುವವ(ನಾದ್ದರಿಂದ) ಆದ್ಯನಾಗಿರುವ ನಿನ್ನನ್ನು ಅರಿತುಕೊಳ್ಳುವದಕ್ಕೆ (ಇಂಥವನೆಂದು) ಗೊತ್ತಾಗಿ ತಿಳಿದುಕೊಳ್ಳುವದಕ್ಕೆ ಇಚ್ಛಿಸುತ್ತೇನೆ. (ಹಿ) ಏಕೆಂದರೆ ನಿನ್ನ ನಿನ್ನ ಸಂಬಂಧವಾದ ಪ್ರವೃತ್ತಿಯನ್ನು ವ್ಯಾಪಾರವನ್ನು ಅರಿಯದೆ ಇರುವೆನು

---

1. ಈ ಕ್ರೂರವೇಷವು ಯಾವ ಸ್ವಭಾವದ್ದು, ಈಗ ಯಾವ ವೇಷದಲ್ಲಿ ಬಂದಿರುವೆ ?—ಎಂದರ್ಥ.

2. ‘ ಅತಿಕ್ರೂರಾಕಾರಃ ’ ಆ||, ‘ ಉಗ್ರಾಕಾರಃ ’ ಮು|| ಮೈ||

3. ಮೊದಲಿನ ‘ ಆದ್ಯಂ ’ ಮು|| ಮೈ||ಗಳಲ್ಲಿಲ್ಲ.

## ಭಗವಂತನು ಭೂಭಾರಹರಣಕ್ಕಾಗಿ ಬಂದಿರುವೆನೆಂದದ್ದು

**ಶ್ರೀ ಭಗವಾನ್ ಉವಾಚ—**

**ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾ ನ ಭವಿಷ್ಯನ್ತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥**

ಶ್ರೀ ಭಗವಂತನಿಂತೆಂದನು :—

೩೨. ಲೋಕಕ್ಷಯಕರ್ತನಾಗಿ ಬೆಳೆದುಕೊಂಡಿರುವ ಕಾಲನಾಗಿರುವೆನು. ಲೋಕಗಳನ್ನು ಸಮಾಹರಣಮಾಡುವದಕ್ಕೆ ಇಲ್ಲಿ ಹೊರಟಿರುವೆನು. ಪ್ರತ್ಯನೀಕಗಳಲ್ಲಿ ಯಾವ ಯೋಧರು ನಿಂತಿರುವರೋ (ಅವರು) ಎಲ್ಲರೂ ನಿನ್ನ ಹೊರತಾಗಿಯೂ ಇಲ್ಲವಾಗುವರು.

(ಭಾಷ್ಯ)

೧೫೦. ಶ್ರೀ ಭಗವಾನ್ ಉವಾಚ । ಕಾಲೋಽಸ್ಮಿ ಲೋಕಕ್ಷಯಕೃತ್ ಲೋಕಾನಾಂ ಕ್ಷಯಂ ಕರೋತಿ ಇತಿ ಲೋಕಕ್ಷಯಕೃತ್ ಪ್ರವೃದ್ಧಃ ವೃದ್ಧಿಂ ಗತಃ । ಯದರ್ಥಂ ಪ್ರವೃದ್ಧಃ[1] ತತ್ ಶೃಣು । ಲೋಕಾನ್ ಸಮಾಹರ್ತುಂ ಸಂಹರ್ತುಮ್ ಇಹ ಅಸ್ಮಿನ್ ಲೋಕೇ[2] ಪ್ರವೃತ್ತಃ । ಋತೇಽಪಿ ವಿನಾಪಿ ತ್ವಾ ತ್ವಾಂ ನ ಭವಿಷ್ಯನ್ತಿ ಭೀಷ್ಮದ್ರೋಣಕರ್ಣಪ್ರಭೃತಯಃ ಯೇಭ್ಯಃ ತವ ಆಶಙ್ಕಾ । ಯೇ ಅವಸ್ಥಿತಾಃ ಪ್ರತ್ಯನೀಕೇಷು ಅನೀಕಮ್ ಅನೀಕಂ ಪ್ರತಿ ಪ್ರತ್ಯನೀಕೇಷು ಪ್ರತಿಪಕ್ಷಭೂತೇಷು ಅನೀಕೇಷು ಯೋಧಾಃ ಯೋದ್ಧಾರಃ ॥

(ಭಾಷ್ಯಾರ್ಥ)

ಶ್ರೀ ಭಗವಂತನಿಂತೆಂದನು : ಲೋಕಕ್ಷಯಕರ್ತನಾಗಿ ಲೋಕಗಳ ನಾಶವನ್ನು ಮಾಡುತ್ತಾನಾದ್ದರಿಂದ ಲೋಕಕ್ಷಯಕರ್ತನು ; (ಅಂಥವನಾಗಿ) ಪ್ರವೃದ್ಧನಾದ

---

1. 'ಪ್ರವೃತ್ತಃ' ಮು॥ ಮ್ಯ॥

2 "ಅಸ್ಮಿನ್ ಲೋಕೇಽಸ್ಮಿನ್ ಕಾಲೇ" ಮು॥; 'ಅಸ್ಮಿನ್ ಕಾಲೇ' ನಿ॥ ಗು॥ ವಾ॥ ಅ॥

3. ಮನುಷ್ಯಲೋಕದಲ್ಲಿ ಭೂಭಾರವನ್ನು ಅಪಹರಿಸುವದಕ್ಕೆ ತೊಡಗಿರುವ ಕಾಲನು ನಾನು,

ಬೆಳೆದುಕೊಂಡಿರುವ ಕಾಲನಾಗಿರುವೆನು. ಏತಕ್ಕೆ ಬೆಳೆದುಕೊಂಡಿರುವೆನೆಂದರೆ ಅದನ್ನು ಕೇಳು. ಲೋಕಗಳನ್ನು ಸಮಾಹರಣಮಾಡುವದಕ್ಕೆ ಎಂದರೆ ಸಂಹರಿಸುವದಕ್ಕೆ ಇಲ್ಲಿ ಈ ಲೋಕದಲ್ಲಿ ಹೊರಟಿರುವೆನು. ಪ್ರತ್ಯನೀಕಗಳಲ್ಲಿ ಎಂದರೆ ಒಂದೊಂದು ಸೇನೆಯಲ್ಲಿಯೂ, ಎದುರುಪಕ್ಷದವರ ಸೇನೆಗಳಲ್ಲಿ ಯೋಧರು ಎಂದರೆ (ಕಾದಾಡುವ) ಕಲಿಗಳು ಯಾರು (ಯಾರು) ನಿಂತಿರುವರೋ, ಯಾರಿಂದ ನಿನಗೆ (ಗೆಲ್ಲುವೆನೋ ಇಲ್ಲವೋ ಎಂಬ) ಶಂಕೆಯಾಗಿರುವದೋ (ಆ) ಭೀಷ್ಮ, ದ್ರೋಣ, ಕರ್ಣ–ಮೊದಲಾದವರೆಲ್ಲ ನಿನ್ನ ಹೊರತಾಗಿಯೂ (ನೀನು) ಇಲ್ಲದಿದ್ದರೂ ಇನ್ನಿಲ್ಲವಾಗುವರು.[1]

**ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಙ್ಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥**

೩೩. ಆದ್ದರಿಂದ ನೀನು ಏಳು, ಯಶಸ್ಸನ್ನು ಪಡೆದುಕೊ, ಶತ್ರುಗಳನ್ನು ಜಯಿಸಿ ಸಮೃದ್ಧವಾದ ರಾಜ್ಯವನ್ನು ಅನುಭವಿಸು. ಇವರು ಮೊದಲೇ ನನ್ನಿಂದಲೇ ಹತರಾಗಿರುವರು. ಸವ್ಯಸಾಚಿಯೆ, (ನೀನು) ಬರಿಯ ನಿಮಿತ್ತವಾಗು.

(ಭಾಷ್ಯ)

ಯಸ್ಮಾತ್ ಏವಮ್, ತಸ್ಮಾತ್ ತ್ವಮ್ ಉತ್ತಿಷ್ಠ । ಭೀಷ್ಮದ್ರೋಣಪ್ರಭೃತಯಃ ಅತಿರಥಾಃ ಅಜೇಯಾಃ ದೇವೈರಪಿ ಅರ್ಜುನೇನ ಜಿತಾ ಇತಿ ಯಶಃ ಲಭಸ್ವ । ಕೇವಲಂ ಪುಣ್ಯೈಃ ಹಿ ತತ್ ಪ್ರಾಪ್ಯತೇ । ಜಿತ್ವಾ ಶತ್ರೂನ್ ದುರ್ಯೋಧನಪ್ರಭೃತೀನ್ ಭುಙ್ಕ್ಷ್ವ ರಾಜ್ಯಂ ಸಮೃದ್ಧಮ್ ಅಸಪತ್ನಮ್ ಅಕಣ್ಟಕಮ್. ಮಯೈವ ಏತೇ ನಿಹತಾಃ ನಿಶ್ಚಯೇನ ಹತಾಃ[2] ಪ್ರಾಣೈಃ ವಿಯೋಜಿತಾಃ ಪೂರ್ವಮೇವ । ನಿಮಿತ್ತಮಾತ್ರಂ ಭವ ತ್ವಂ ಹೇ ಸವ್ಯಸಾಚಿನ್ । ಸವ್ಯೇನ ವಾಮೇನಾಽಪಿ ಹಸ್ತೇನ ಶರಾಣಾಂ ಕ್ಷೇಪ್ತಾ[3] ಸವ್ಯಸಾಚೀ ಇತಿ ಉಚ್ಯತೇ ಅರ್ಜುನಃ ॥

(ಭಾಷ್ಯಾರ್ಥ)

ಹೀಗಿರುವುದರಿಂದ, ಆದ್ದರಿಂದ ನೀನು ಏಳು. ಭೀಷ್ಮ, ದ್ರೋಣ-ಮೊದಲಾದ

1. ನೀನು ಕಾದಾಡದೆ ಸುಮ್ಮನಿದ್ದರೂ ಮಡಿಯುವರು.
2. ಮ॥ ಮೈ॥ಗಳಲ್ಲಿ ಈ ಎರಡು ಮಾತುಗಳಿಲ್ಲ.
3. 'ವಾಮೇನಾಪಿ ಕ್ಷೇಪ್ತಾ' ವಾ॥ ; 'ವಾಮೇನ ಕ್ಷೇಪ್ತಾ' ಮ॥ಮೈ॥

ಅತಿರಥರು ದೇವತೆಗಳಿಂದಲೂ ಸೋಲಿಸುವದಕ್ಕಾಗದವ(ರಾದರೂ) ಅರ್ಜುನನು ಅವರನ್ನು ಸೋಲಿಸಿದನು-ಎಂಬ ಹೆಸರುವಾಸಿಯನ್ನು ಗಳಿಸಿಕೊ. ಪುಣ್ಯವಂತರಿಗೆ ಮಾತ್ರವೇ ಆ (ಹೆಸರು) ಸಲ್ಲುತ್ತದೆ. ದುರ್ಯೋಧನನೇ ಮೊದಲಾದ ಶತ್ರುಗಳನ್ನು ಗೆದ್ದು ಸಮೃದ್ಧವಾದ ಶತ್ರುಗಳಿಲ್ಲದೆ ನಿಷ್ಕಂಟಕವಾಗಿರುವ ರಾಜ್ಯವನ್ನು ಅನುಭವಿಸು. ಇವರು ನನ್ನಿಂದಲೇ ಮೊದಲೇ ನಿಹತರಾಗಿರುವರು, ನಿಜವಾಗಿ ಹತರಾಗಿರುವರು, (ನಾನೇ) ಅವರನ್ನು ಪ್ರಾಣಗಳಿಂದ ಬಿಡಿಸಿರುವೆನು. ಎಲೈ ಸವ್ಯಸಾಚಿಯೆ, ನೀನು ಬರಿಯ ನಿಮಿತ್ತವಾಗು. ಬಲಗೈಯಿಂದಲೂ ಎಡಗೈಯಿಂದಲೂ ಬಾಣಗಳನ್ನು ಬಿಡುವದರಿಂದ ಅರ್ಜುನನನ್ನು 'ಸವ್ಯಸಾಚಿ' ಎಂದು ಕರೆದಿದೆ.

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪ ॥**

೩೪. ದ್ರೋಣನನ್ನೂ ಭೀಷ್ಮನನ್ನೂ ಜಯದ್ರಥನನ್ನೂ ಕರ್ಣನನ್ನೂ ಮತ್ತು ಯೋಧವೀರರಾದ ಬೇರೆಯವರನ್ನೂ, ನನ್ನಿಂದ ಹತರಾದವರನ್ನು ನೀನು ಕೊಲ್ಲು. ವ್ಯಥೆಪಡಬೇಡ, ಯುದ್ಧಮಾಡು, ರಣದಲ್ಲಿ ಸಪತ್ನರನ್ನು ಗೆಲ್ಲುವೆ.

**(ಭಾಷ್ಯ)**

೧೧.೨. ದ್ರೋಣಂ ಚ । ಯೇಷು ಯೇಷು ಯೋಧೇಷು ಅರ್ಜುನಸ್ಯ ಆಶಙ್ಕಾ ತಾಂ ಸ್ತಾನ್[1] ವ್ಯಪದಿಶತಿ ಭಗವಾನ್ ಮಯಾ ಹತಾನ್ 'ಇತಿ । ತತ್ರ ದ್ರೋಣಭೀಷ್ಮಯೋಃ ತಾವತ್ ಪ್ರಸಿದ್ಧಮ್ ಆಶಙ್ಕಾಕಾರಣಮ್ । ದ್ರೋಣಃ[2] ಧನುರ್ವೇದಾಚಾರ್ಯಃ ದಿವ್ಯಾಸ್ತ್ರಸಂಪನ್ನಃ ಆತ್ಮನಶ್ಚ ವಿಶೇಷತಃ ಗುರುಃ ಗರಿಷ್ಠಃ[3] । ಭೀಷ್ಮಃ[4] ಸ್ವಚ್ಛನ್ದಮೃತ್ಯುಃ ದಿವ್ಯಾಸ್ತ್ರಸಂಪನ್ನಶ್ಚ ಪರಶುರಾಮೇಣ ದ್ವಂದ್ವಯುದ್ಧಮ್ ಅಗಮತ್ ನ ಚ ಪರಾಜಿತಃ । ತಥಾ ಜಯದ್ರಥಃ । ಯಸ್ಯ ಪಿತಾ ತಪಃ ಚರತಿ 'ಮಮ ಪುತ್ರಸ್ಯ ಶಿರಃ ಭೂಮೌ ಪಾತಯಿಷ್ಯತಿ[5] ಯಃ ತಸ್ಯಾಪಿ ಶಿರಃ ಪತಿ

---

1. 'ಸರ್ವಾನ್' ಎಂದು ಹೆಚ್ಚಾಗಿ ನಿ॥
2. 'ದ್ರೋಣಸ್ತು' ಮು॥ಮೈ॥
3. 'ಇಷ್ಟಃ' ಮು॥ಮೈ॥
4. ಮು॥ಮೈ॥ಗಳಲ್ಲಿ 'ಭೀಷ್ಮಶ್ಚ'.
5. 'ನಿಪಾತಯಿಷ್ಯತಿ' ವಾ॥ಮೈ॥

ಸ್ಯತಿ ಇತಿ । ಕರ್ಣೋಽಪಿ ವಾಸವದತ್ತಯಾ ಅಮೋಘಯಾ ಶಕ್ತ್ಯಾ[1] ಸಂಪನ್ನಃ ಸೂರ್ಯಪುತ್ರಃ ಅಯಂ[2] ಕಾನೀನಃ[3] । ಅತಃ ತನ್ನಾಮ್ನೈವ ನಿರ್ದೇಶಃ[4] । ಮಯಾ ಹತಾನ್ ತ್ವಂ ಜಹಿ ನಿಮಿತ್ತಮಾತ್ರೇಣ । ಮಾ ವ್ಯಥಿಷ್ಠಾಃ । ತೇಭ್ಯಃ ಭಯಂ ಮಾಕಾರ್ಷೀಃ । ಯುಧ್ಯಸ್ವ । ಜೇತಾಸಿ ದುರ್ಯೋಧನಪ್ರಭೃತೀನ್ ರಣೇ ಯುದ್ಧೇ ಸಪತ್ನಾನ್ ಶತ್ರೂನ್ ॥

(ಭಾಷ್ಯಾರ್ಥ)

'ದ್ರೋಣನನ್ನೂ' (ಎಂದು ಮುಂತಾಗಿ) ಯಾವ ಯಾವ ಕಲಿಗಳ ವಿಷಯದಲ್ಲಿ ಅರ್ಜುನನಿಗೆ (ನಾನು ಇವರನ್ನು ಗೆದ್ದೇನೋ ಇಲ್ಲವೋ ಎಂಬ) ಆಶಂಕೆಯುಂಟಾಗಿತ್ತೋ ಅವರವರನ್ನು ಭಗವಂತನು 'ನನ್ನಿಂದ ಹತರಾದವರನ್ನು (ನೀನು ಕೊಲ್ಲು)' ಎಂದು ಹೇಳಿರುತ್ತಾನೆ. ಇವರಲ್ಲಿ ದ್ರೋಣಭೀಷ್ಮರ ವಿಷಯದಲ್ಲಂತೂ ಆಶಂಕೆಯುಂಟಾಗಲು ಕಾರಣವು ಗೊತ್ತೇ ಇದೆ. ದ್ರೋಣನು ಧನುರ್ವೇದದ ಆಚಾರ್ಯನು, ದಿವ್ಯಾಸ್ತ್ರಗಳ ಸಂಪತ್ತುಳ್ಳವನು, ಮತ್ತು ತನಗೆ ವಿಶೇಷವಾಗಿ ಹೆಚ್ಚಿನ ಗುರುವಾಗಿರುತ್ತಾನೆ. ಭೀಷ್ಮನು ಸ್ವೇಚ್ಛೆಯ ಮರಣವುಳ್ಳವನು, ದಿವ್ಯಾಸ್ತ್ರಗಳ ಸಂಪತ್ತುಳ್ಳವನು, ಪರಶುರಾಮನೊಡನೆ ದ್ವಂದ್ವಯುದ್ಧವನ್ನು ಮಾಡಿದಾಗಲೂ ಸೋಲಲಿಲ್ಲ.[5] ಇದರಂತೆ ಜಯದ್ರಥನು.[6] ಅವನ ತಂದೆಯು ನನ್ನ ಮಗನ ತಲೆಯನ್ನು ಯಾರು ನೆಲದ ಮೇಲ

1. 'ಶಕ್ತ್ಯಾ ತು ಅಮೋಘಯಾ' ನಿ॥ಗು॥ವಾ॥
2. ಮು॥ಮೈ॥ಗಳಲ್ಲಿ ಮಾತ್ರ.
3. 'ಯತಃ' ಎಂಬುದು ಮು॥ದಲ್ಲಿಲ್ಲ; ಇಲ್ಲದಿರುವದೇ ಒಳ್ಳೆಯದು.
4. 'ತನ್ನಾಮ್ನೈವ ನಿರ್ದಿಶತಿ' ಮು॥; 'ಅತಃ ತಂ ನಾಮ್ನೈವ ನಿರ್ದಿಶತಿ' ಮೈ॥

5. ಭೀಷ್ಮನಿಗೆ ತಂದೆಯಾದ ಶಾಂತನುವಿನಿಂದ ಸ್ವೇಚ್ಛಾಮರಣದ ವರವು ಬಂತು. (ಆದಿ. ಪ.); ಕಾಶಿರಾಜನ ಹೆಣ್ಣುಮಕ್ಕಳು ಮೂವರನ್ನೂ ಅಪಹರಿಸಿ ಸಾಲ್ವನನ್ನು ಸೋಲಿಸಿದ ಬಳಿಕ 'ಅಂಬಾ' ಎಂಬಾಕೆಯ ನಿಮಿತ್ತವಾಗಿ ಪರಶುರಾಮನೊಡನೆ ಯುದ್ಧ (ಉದ್ಯೋ ಪ).

6. ಸಿಂಧುದೇಶದ ರಾಜನಾದ ವೃದ್ಧಕ್ಷತ್ರನೆಂಬವನ ಮಗನು ; ಧೃತರಾಷ್ಟ್ರನ ಮಗಳು ದುಃಶಲೆಯ ಗಂಡನು. ದ್ರೌಪದಿಯನ್ನು ವನದಲ್ಲಿ ಅಪಹರಿಸಿದ ನಿಮಿತ್ತದಿಂದ ಅಪಮಾನಿತನಾಗಿ, ತಪಸ್ಸುಮಾಡಿ ಅರ್ಜುನನನ್ನು ಬಿಟ್ಟು ಮಿಕ್ಕ ಪಾಂಡವರನ್ನೆಲ್ಲ ಒಂದು ಸಲ ಗೆಲ್ಲುವ ವರವನು ರುದ್ರನಿಂದ ಪಡೆದುಕೊಂಡಿದ್ದನು. (ಆದಿ., ದ್ರೋಣ., ಉದ್ಯೋ. ವನ.ಪ.) ಮುಂದೆ ಇವನ ತಲೆಯನ್ನು ಅರ್ಜುನನು ಕಡಿದು ಸಂಧ್ಯಾನುಷ್ಠಾನಮಾಡುತ್ತಿದ್ದ ವೃದ್ಧಕ್ಷತ್ರನ ಕೈಯಲ್ಲಿ ಬೀಳುವಂತೆ ಮಾಡಲು, ಅವನು ಅದನ್ನು ನೆಲದಮೇಲೆ ಬಿಸುಟದ್ದರಿಂದ ಅವನ ತಲೆ ಒಡೆದು ಬಿತ್ತು. (ದ್ರೋಣ. ಪ.)

ಕ್ಕೆಳುಹುವನೋ ಅವನ ತಲೆಯೂ ಬೀಳಲಿ!–ಎಂದು ತಪಸ್ಸು ಮಾಡುತ್ತಿರುವನು. ಈ ಕರ್ಣನು ಕೂಡ ಇಂದ್ರನು ಇತ್ತಿರುವ ಅಮೋಘವಾದ ಶಕ್ತಿಯಿಂದೊಡಗೂಡಿ ಕನ್ಯೆಯ ದೆಸೆಯಿಂದ ಹುಟ್ಟಿದ ಸೂರ್ಯಪುತ್ರನು. ಆದ್ದರಿಂದ ಅವರ(ವರ) ಹೆಸರಿನಿಂದಲೇ ಇವರನ್ನು ಹೇಳಿದೆ.[1] (ಇವರೇ ಮೊದಲಾದವರು) ನನ್ನಿಂದ ಹತರಾಗಿರುವರು; (ಅವರನ್ನೇ) ನೀನು ನಿಮಿತ್ತಮಾತ್ರನಾಗಿ ಕೊಲ್ಲು. ವ್ಯಥೆಪಡದಿರು, ಅವರಿಂದ ಹೆದರಿಕೆಯನ್ನು ಮಾಡಿಕೊಳ್ಳದಿರು, ಯುದ್ಧಮಾಡು! ರಣದಲ್ಲಿ ಯುದ್ಧದಲ್ಲಿ ದುರ್ಯೋಧನನೇ ಮೊದಲಾದ ಸಪತ್ನರನ್ನು ಶತ್ರುಗಳನ್ನು ಗೆಲ್ಲುವೆ.

## ಅರ್ಜುನನ ಸ್ತೋತ್ರ ಮತ್ತು ಕ್ಷಮಾಪಣೆ

**ಸಞ್ಜಯ ಉವಾಚ—**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಞ್ಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥**

೩೫. ಸಂಜಯನಿಂತೆಂದನು:—ಕೇಶವನ ಈ ನುಡಿಯನ್ನು ಕೇಳಿ ಕಿರೀಟಿಯು ಕೈಮುಗಿದುಕೊಂಡು ನಡುಗುತ್ತಾ ನಮಸ್ಕರಿಸಿ, ಕೃಷ್ಣನನ್ನು ಭೀತಭೀತನಾಗಿ ನಮಸ್ಕರಿಸಿ ಸಗದ್ಗದವಾಗಿ ಮತ್ತೂ ಇಂತೆಂದನು.

(ಭಾಷ್ಯ)

೧೫೩. ಏತತ್ ಶ್ರುತ್ವಾ ವಚನಂ ಕೇಶವಸ್ಯ ಪೂರ್ವೋಕ್ತಂ ಕೃತಾಞ್ಜಲಿಃ ಸನ್ ವೇಪಮಾನಃ ಕಮ್ಪಮಾನಃ[2] ಕಿರೀಟೀ ನಮಸ್ಕೃತ್ವಾ ಭೂಯಃ ಪುನರೇವ ಆಹ ಉಕ್ತವಾನ್ ಕೃಷ್ಣಂ ಸಗದ್ಗದಂ ಭಯಾವಿಷ್ಟಸ್ಯ ದುಃಖಾಭಿಘಾತಾತ್ ಸ್ನೇಹಾವಿಷ್ಟಸ್ಯ ಚ ಹರ್ಷೋದ್ಭವಾತ್ ಅಶ್ರುಪೂರ್ಣನೇತ್ರತ್ವೇ ಸತಿ ಶ್ಲೇಷ್ಮಣಾ ಕಣ್ಠಾವರೋಧಃ । ತತಶ್ಚ[3] ವಾಚಃ ಅಪಾಟವಂ[4] ಮನ್ದಶಬ್ದತ್ವಂ ಯತ್ ಗದ್ಗದಮ್[5],

---

1. ಈ ವೀರರೆಲ್ಲರೂ ಹತರಾಗಿದ್ದಾರೆಂಬುದನ್ನು ತೋರಿಸಿ ಭಗವಂತನು ಅವರನ್ನು ಹೆಸರಿಟ್ಟು ಹೇಳಿರುತ್ತಾನೆ. 'ತಥಾನ್ಯಾನಪಿ ಯೋಧವೀರಾನ್' ಎಂಬುದರ ಭಾಷ್ಯವು ಏಕೋ ಬಿಟ್ಟಿದೆ.
2. ಮ॥ ಪಾಠದಲ್ಲಿಲ್ಲ.
3. 'ತೇನ' ಮ॥
4. 'ಅಪಾಟವಾತ್' ಮ॥
5. 'ಸಗದ್ಗದಃ' ಎಂಬ ಮ॥ಗು॥ವಾ॥ ಪಾಠಗಳಿಗಿಂತ ಇದು ಮೇಲು.

ತೇನ ಸಹ ವರ್ತತೇ ಇತಿ ಸಗದ್ಗದಮ್ । ವಚನಮ್ ಆಹ ಇತಿ ವಚನಕ್ರಿಯಾ ವಿಶೇಷಣಮ್ ಏತತ್ । ಭೀತಭೀತಃ ಪುನಃಪುನಃ ಭಯಾವಿಷ್ಟಚೇತಾಃ ಸನ್ ಪ್ರಣಮ್ಯ ಪ್ರಹ್ವೋ ಭೂತ್ವಾ 'ಆಹ' ಇತಿ ವ್ಯವಹಿತೇನ ಸಂಬನ್ಧಃ ||

(ಭಾಷ್ಯಾರ್ಥ)

ಹಿಂದೆ ಹೇಳಿದ ಈ ಕೇಶವನ ನುಡಿಯನ್ನು ಕೇಳಿ ಕಿರೀಟಿಯು ಕೈಮುಗಿದು ಕೊಂಡವನಾಗಿ (ವೇಪಮಾನಃ) ನಡುಗುತ್ತಾ ನಮಸ್ಕರಿಸಿ ಮತ್ತೂ ಇನ್ನೊಮ್ಮೆಯೂ ಕೃಷ್ಣನನ್ನು ಕುರಿತು (ಹೀಗೆಂದು) ಹೇಳಿದನು, ನುಡಿದವನಾದನು ಸಗದ್ಗದವಾಗಿ— ತುಂಬ ಹೆದರಿದವನಿಗೆ ದುಃಖದ ಹೊಡೆತವಾದ್ದರಿಂದಲೂ ತುಂಬ ಸ್ನೇಹವುಂಟಾದವ ನಿಗೆ ಹರ್ಷವುಂಟಾದ್ದರಿಂದಲೂ ಕಣ್ಣುಗಳಲ್ಲಿ ನೀರು ತುಂಬಿಕೊಂಡು ಶ್ಲೇಷ್ಮದಿಂದ ಗಂಟಲು ಕಟ್ಟಿಕೊಂಡು ಅದರಿಂದ ಮಾತಿನಲ್ಲಿ ಪಾಟವವಿಲ್ಲದೆ (ಮಾತಿನ) ಸದ್ದು ಸಣ್ಣ ಗಾಗುವ ಗದ್ಗದವೆಂಬುದಿದೆಯಷ್ಟೆ, ಅದರಿಂದೊಡಗೂಡಿರುವದು ಸಗದ್ಗದವು. (ಅಂಥ) ಮಾತನ್ನು ನುಡಿದನು ಎಂದು ಮಾತನಾಡುವದೆಂಬ ಕ್ರಿಯೆಗೆ ಈ (ಸಗದ್ಗದವಾಗಿ) ಎಂಬುದು ವಿಶೇಷಣವು. ಭೀತಭೀತನಾಗಿ ಮತ್ತೆ ಮತ್ತೆ ಹೆದರಿಕೆಯಿಂದ ತುಂಬಿದ ಚಿತ್ತವುಳ್ಳವನಾಗಿ ಪ್ರಣಾಮಮಾಡಿ ತಲೆಬಾಗಿದವನಾಗಿ (ಆಹ) ಇಂತೆಂದನು–ಎಂದು (ಹಿಂದೆ) ದೂರವಾಗಿರುವ (ಮಾತಿಗೆ) ಸಂಬಂಧ(ವನ್ನು ಮಾಡಿಕೊಳ್ಳಬೇಕು).

(ಭಾಷ್ಯ)

೧೫೪. ಅತ್ರ ಅವಸರೇ ಸಞ್ಜಯವಚನಂ ಸಾಭಿಪ್ರಾಯಮ್ । ಕಥಮ್ ? ದ್ರೋಣಾದಿಷು ಅರ್ಜುನೇನ ನಿಹತೇಷು ಅಜೇಯೇಷು[1] ಚತುರ್ಷು ನಿರಾಶ್ರಯಃ ದುರ್ಯೋಧನಃ ನಿಹತ ಏವ ಇತಿ ಮತ್ವಾ ಧೃತರಾಷ್ಟ್ರಃ ಜಯಂ ಪ್ರತಿ ನಿರಾಶಃ ಸನ್ ಸನ್ಧಿಂ ಕರಿಷ್ಯತಿ ತತಃ ಶಾನ್ತಿಃ ಉಭಯೇಷಾಂ ಭವಿಷ್ಯತಿ ಇತಿ। ತದಪಿ ನ ಅಶ್ರೌಷೀತ್ ಧೃತರಾಷ್ಟ್ರಃ ಭವಿತವ್ಯವಶಾತ್ ||

(ಭಾಷ್ಯಾರ್ಥ)

ಈ ಸಂದರ್ಭದಲ್ಲಿ ಸಂಜಯನ ಮಾತು (ಒಂದಾನೊಂದು ವಿಶೇಷವಾದ) ಅಭಿಪ್ರಾಯದಿಂದೊಡಗೂಡಿರುವದು. ಹೇಗೆಂದರೆ (ಯಾರಿಂದಲೂ) ಗೆಲ್ಲಲಾಗದ ದ್ರೋಣನೇ ಮೊದಲಾದ ನಾಲ್ಕುಜನ(ವೀರರೂ) ಅರ್ಜುನನಿಂದ ನಿಹತರಾದರೆ (ಯಾರ) ಆಶ್ರಯವೂ ಇಲ್ಲದ ದುರ್ಯೋಧನನು ನಿಹತ(ನಾದಂತೆ)ಯೇ ಎಂದು ಭಾವಿಸಿ ಧೃತ

1. 'ಅಜಯ್ಯೇಷು' ಮ॥ಮೈ॥

ರಾಷ್ಟ್ರನು (ತಮ್ಮ ಕಡೆಯುವರಿಗೆ) ಗೆಲವು (ಆಗುವ)ದೆಂಬ ಆಶೆಯೇ ಇಲ್ಲದವನಾಗಿ ಸಂಧಿಯನ್ನು ಮಾಡಿಕೊಳ್ಳುವನು ; ಇದರಿಂದ ಇಬ್ಬರಿಗೂ ಶಾಂತಿಯುಂಟಾಗುವದು ಎಂಬುದು (ಅವನ ಅಭಿಪ್ರಾಯವು. ಆದರೆ) ಆಗಬೇಕಾದದ್ದು (ಆಗಲೇಬೇಕಾದದ್ದರಿಂದ ಅದರ) ವಶನಾಗಿ ಧೃತರಾಷ್ಟ್ರನು ಇದನ್ನೂ ಕೇಳದೆ ಹೋದನು.

**ಅರ್ಜುನ ಉವಾಚ—**

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ**
**ಸರ್ವೇ ನಮಸ್ಯನ್ತಿ ಚ ಸಿದ್ಧಸಙ್ಘಾಃ ॥ ೩೬ ॥**

೩೬. ಅರ್ಜುನನಿಂತೆಂದನು :—ಹೃಷೀಕೇಶನೆ, ನಿನ್ನ ಪ್ರಕೀರ್ತಿಯಿಂದ ಜಗತ್ತು ಪ್ರಹರ್ಷದಿಂದೊಡಗೂಡುತ್ತದೆ, ಅನುರಾಗದಿಂದಲೂ ಕೂಡಿಕೊಳ್ಳುತ್ತದೆ. ರಾಕ್ಷಸರು ಭೀತರಾಗಿ ದಿಕ್ಕು (ದಿಕ್ಕು)ಗಳಿಗೆ ಓಡುತ್ತಾರೆ. ಸಿದ್ಧರ ಸಂಘಗಳೆಲ್ಲವೂ ನಮಸ್ಕರಿಸುವವು. ಇದು ಯುಕ್ತವೇ (ತಕ್ಕ ವಿಷಯದಲ್ಲಿಯೇ).

(ಭಾಷ್ಯ)

೧೫೫. ಸ್ಥಾನೇ ಯುಕ್ತಮ್ । ಕಿಂ ತತ್ ? ತವ ಪ್ರಕೀರ್ತ್ಯಾ ತ್ವನ್ಮಾಹಾತ್ಮ್ಯಕೀರ್ತನೇನ ಶ್ರುತೇನ ಹೇ[1] ಹೃಷೀಕೇಶ ಯತ್ ಜಗತ್ ಪ್ರಹೃಷ್ಯತಿ ಪ್ರಹರ್ಷಮ್ ಉಪೈತಿ ತತ್ ಸ್ಥಾನೇ ಯುಕ್ತಮ್ ಇತ್ಯರ್ಥಃ । ಅಥವಾ ವಿಷಯವಿಶೇಷಣಂ 'ಸ್ಥಾನೇ' ಇತಿ । ಯುಕ್ತೋ ಹರ್ಷಾದಿವಿಷಯಃ ಭಗವಾನ್ ಯತಃ ಈಶ್ವರಃ ಸರ್ವಾತ್ಮಾ ಸರ್ವಭೂತಸುಹೃಚ್ಚ ಇತಿ । ತಥಾ ಅನುರಜ್ಯತೇ ಅನುರಾಗಂ ಚ ಉಪೈತಿ । ತಚ್ಚ ವಿಷಯೇ ಇತಿ ವ್ಯಾಖ್ಯೇಯಮ್ । ಕಿಂಚ ರಕ್ಷಾಂಸಿ ಭೀತಾನಿ ಭಯಾವಿಷ್ಟಾನಿ ದಿಶಃ ದ್ರವನ್ತಿ ಗಚ್ಛನ್ತಿ । ತಚ್ಚ ಸ್ಥಾನೇ ವಿಷಯೇ ಸರ್ವೇ ನಮಸ್ಯನ್ತಿ ನಮಸ್ಕುರ್ವನ್ತಿ[2] ಸಿದ್ಧಸಙ್ಘಾಃ ಸಿದ್ಧಾನಾಂ[3] ಸಮುದಾಯಾಃ ಕಪಿಲಾದೀನಾಮ್ । ತಚ್ಚ ಸ್ಥಾನೇ ॥

---

1. ಈ ಮಾತು ಮೈ॥ ಪಾಠದಲ್ಲಿಲ್ಲ.
2. 'ನಮಸ್ಕಾರಂ ಕುರ್ವನ್ತಿ' ಮು॥ಮೈ॥
3. ಇದಾದಬಳಿಕ 'ಸಙ್ಘಾಃ' ಎಂದು ಮು॥

(ಭಾಷ್ಯಾರ್ಥ)

(ಸ್ಥಾನೇ) ಯುಕ್ತವು, ಅದು ಯಾವದು? ಎಂದರೆ ನಿನ್ನ ಪ್ರಕೃತಿಯಿಂದ ನಿನ್ನ ಮಾಹಾತ್ಮ್ಯವನ್ನು ಹೇಳಿದ್ದನ್ನು ಕೇಳಿದ ಮಾತ್ರದಿಂದ, ಎಲೈ ಹೃಷೀಕೇಶನೆ, ಜಗತ್ತು ಪ್ರಹರ್ಷದಿಂದೊಡಗೂಡುತ್ತದೆ. ಹೆಚ್ಚಿನ ಹರ್ಷವನ್ನು ಹೊಂದುತ್ತದೆಯಲ್ಲ, ಅದು 'ಸ್ಥಾನೇ' ಯುಕ್ತವು ಎಂದರ್ಥ. ಅಥವಾ 'ಸ್ಥಾನೇ' ಎಂಬುದು ವಿಷಯವಿಶೇಷಣ (ವೆಂದೂ ಹೇಳಬಹುದು). ಭಗವಂತನು ಹರ್ಷವೇ ಮುಂತಾದವುಗಳಿಗೆ ತಕ್ಕ ವಿಷಯವಾಗಿರುತ್ತಾನೆ, ಏಕೆಂದರೆ (ಅವನು) ಸರ್ವರ ಆತ್ಮನೂ ಸರ್ವಭೂತಗಳಿಗೂ ಉಪಕಾರಮಾಡುವವನೂ ಆದ ಈಶ್ವರನು-ಎಂದು (ಅರ್ಥಮಾಡಬೇಕು). ಹಾಗೆಯೇ 'ಅನುರಜ್ಯತೇ' ಅನುರಾಗವನ್ನೂ ಹೊಂದುತ್ತದೆ. ಅದೂ (ಸರಿಯಾದ) ವಿಷಯದಲ್ಲಿಯೇ ಎಂದು ವ್ಯಾಖ್ಯಾನಮಾಡಬೇಕು. ಮತ್ತು ರಾಕ್ಷಸರು ಹೆದರಿಕೊಂಡು ಅಂಜಿಕೆಯಿಂದ ತುಂಬಿಕೊಂಡವರಾಗಿ ದಿಕ್ಕು (ದಿಕ್ಕು)ಗಳಿಗೆ ಓಡುತ್ತಿರುವರು, ಹೋಗುತ್ತಿರುವರು. ಅದೂ ತಕ್ಕ ವಿಷಯದಲ್ಲಿಯೇ. ಸಿದ್ಧಸಂಘಗಳು ಕಪಿಲರೇ ಮೊದಲಾದ ಸಿದ್ಧರ ಗುಂಪುಗಳು ಎಲ್ಲವೂ ನಮಸ್ಕರಿಸುವವು, ಅಡ್ಡಬೀಳುವವು. ಅದೂ (ತಕ್ಕ) ವಿಷಯದಲ್ಲಿಯೇ.

(ಭಾಷ್ಯ)

೧೫೬. ಭಗವತಃ [1] ಹರ್ಷಾದಿವಿಷಯತ್ವೇ ಹೇತುಂ ದರ್ಶಯತಿ-

(ಭಾಷ್ಯಾರ್ಥ)

ಭಗವಂತನು ಹರ್ಷಾದಿಗಳಿಗೆ (ತಕ್ಕ) ವಿಷಯವೆಂಬುದಕ್ಕೆ ಕಾರಣವನ್ನು ತಿಳಿಸುತ್ತಾನೆ[2] :—

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನನ್ತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ ತತ್ಪರಂ ಯತ್ ॥ ೩೭ ॥**

೩೭. ಮತ್ತು, ಎಲೈ ಮಹಾತ್ಮನೆ, ಬ್ರಹ್ಮನಿಗೆಕೂಡ ಆದಿಕರ್ತೃವಾಗಿರುವ (ಎಲ್ಲರಿಗೂ) ದೊಡ್ಡವನಾದ ನಿನಗೆ ಏತಕ್ಕೆತಾನೆ ನಮಿಸದೆ

---

1. 'ಅತಶ್ಚ ಭಗವತಃ' ಮ॥ ಮೈ॥

2. 'ಅತಶ್ಚ' ಎಂಬ ಪಾಠಕ್ಕೆ 'ಆದ್ದರಿಂದಲೇ' ಎಂದು ವಾಕ್ಯದ ಮೊದಲು ಸೇರಿಸಿಕೊಳ್ಳಬೇಕು.

ಇದ್ದಾರು? ಅನಂತನೆ, ದೇವೇಶನೆ, ಜಗನ್ನಿವಾಸನೆ, ಸತ್ತು, ಅಸತ್ತು-(ಇವೆರಡನ್ನೂ) ಮೀರಿರುವದು ಯಾವದೋ ಆ ಅಕ್ಷರವು ನೀನು.

(ಭಾಷ್ಯ)

೧೫೭. ಕಸ್ಮಾಚ್ಚ ಹೇತೋಃ ತೇ ತುಭ್ಯಂ ನ ನಮೇರನ್ ನ ನಮಸ್ಕುರ್ಯುಃ ಹೇ ಮಹಾತ್ಮನ್, ಗರೀಯಸೇ ಗುರುತರಾಯ । ಯತಃ ಬ್ರಹ್ಮಣಃ ಹಿರಣ್ಯಗರ್ಭಸ್ಯ ಆದಿಕರ್ತಾ ಕಾರಣಮ್ ಅತಃ ತಸ್ಮಾತ್ ಆದಿಕರ್ತ್ರೇ ಕಥಮ್ ಏತೇ ನ ನಮಸ್ಕುರ್ಯುಃ ? ಅತಃ ಹರ್ಷಾದೀನಾಂ ನಮಸ್ಕಾರಸ್ಯ ಚ ಸ್ಥಾನಂ ತ್ವಮ್ ಅರ್ಹಃ ವಿಷಯಃ ಇತ್ಯರ್ಥಃ । ಹೇ ಅನನ್ತ, ದೇವೇಶ, ಹೇ ಜಗನ್ನಿವಾಸ ತ್ವಮ್ ಅಕ್ಷರಂ ತತ್ ಪರಂ ಯತ್ ವೇದಾನ್ತೇಷು ಶ್ರೂಯತೇ । ಕಿಂ ತತ್ ? ಸದಸತ್ ಇತಿ । ಸತ್ ವಿದ್ಯಮಾನಮ್ । ಅಸಚ್ಚ ಯತ್ರ ನಾಸ್ತಿ ಇತಿ ಬುದ್ಧಿಃ । ತೇ ಉಪಧಾನಭೂತೇ[1] ಸದಸತೀ ಯಸ್ಯ ಅಕ್ಷರಸ್ಯ।ಯದ್ದ್ವಾರೇಣ ಸದಸತೀ ಇತಿ ಉಪಚರ್ಯತೇ। ಪರಮಾರ್ಥತಸ್ತು ಸದಸತೋಃ ಪರಂ ತತ್ ಅಕ್ಷರಮ್[2] ಯತ್ ಅಕ್ಷರಂ ವೇದವಿದಃ ವದನ್ತಿ ತತ್ ತ್ವಮೇವ ನಾನ್ಯತ್ ಇತ್ಯಭಿಪ್ರಾಯಃ ।

(ಭಾಷ್ಯಾರ್ಥ)

ಮತ್ತು ಏತಕ್ಕೆ (ಯಾವ) ಕಾರಣದಿಂದ (ತೇ=ತುಭ್ಯಂ) ನಿನಗೆ. (ಅವರು) ಎಲೈ ಮಹಾತ್ಮನೆ, ನಮಿಸದಿರುವರು ನಮಸ್ಕರಿಸದೆ ಇದ್ದಾರು? ಬಹಳ ದೊಡ್ಡವನಾದ (ಎಲ್ಲರಿಗಿಂತಲೂ) ಹಿರಿಯವನಾದ, (ನೀನು) ಬ್ರಹ್ಮನಿಗೂ ಹಿರಣ್ಯಗರ್ಭನಿಗೂ ಆದಿಕರ್ತನು, ಕಾರಣವಷ್ಟೆ ; ಆದ್ದರಿಂದ (ಅಂಥ) ಆದಿಕರ್ತನಾದ (ನಿನಗೆ) ಇವರು ಹೇಗೆ ತಾನೆ ನಮಸ್ಕರಿಸದೆ ಇದ್ದಾರು ? ಆದ್ದರಿಂದ ಹರ್ಷವೇ ಮುಂತಾದವುಗಳಿಗೂ ನಮಸ್ಕಾರಕ್ಕೂ ನೀನು ಸ್ಥಾನವು ತಕ್ಕ ವಿಷಯವು ಎಂದರ್ಥ. ಎಲೈ ಅನಂತನೆ, ದೇವೇಶನೆ, ಎಲೈ ಜಗನ್ನಿವಾಸನೆ, ಯಾವದನ್ನು ಹೆಚ್ಚಿನ ಅಕ್ಷರವೆಂದು ವೇದಾಂತ (ವಚನ) ಗಳಲ್ಲಿ ಹೇಳಿದೆಯೋ ಅದು ನೀನೇ. ಅದು ಯಾವದು ? ಎಂದರೆ ಸದಸತ್ತುಗಳು ಸತ್ತು ಎಂದರೆ ಇರತಕ್ಕದ್ದು, ಮತ್ತು ಅಸತ್ತು ಎಂದರೆ ಯಾವದರ (ವಿಷಯದ)ಲ್ಲಿ 'ಇಲ್ಲ' ಎಂಬ ಬುದ್ಧಿ(ಯುಂಟಾಗುವದೋ) ಅದು. **ಆ ಸದಸತ್ತುಗಳು ಯಾವ ಅಕ್ಷರಕ್ಕೆ ಉಪಾಧಿಗಳಾಗಿರುವವೋ, ಮತ್ತು (ಯಾವದು) ಅವುಗಳ ಮೂಲಕ (ತಾನೂ) ಸದಸತ್ತುಗಳೆಂದು ಉಪಚಾರದಿಂದ ಕರೆಯಲ್ಪಡು**

---

1. 'ಉಪಾಧಿಭೂತೇ' ಮ॥ಮೈ॥
2. 'ತತ್ ಯದಕ್ಷರಮ್' ಎಂದೇ ನಿ॥ಗು॥

**ವದೋ, ಆದರೆ ನಿಜವಾಗಿ ನೋಡಿದರೆ, ವೇದವನ್ನು ಬಲ್ಲವರು ಅಕ್ಷರವೆನ್ನುವ ಯಾವದು ಸದಸತ್ತುಗಳೆರಡಕ್ಕಿಂತಲೂ, ಆಚೆ (ಇರುವದೋ)**[1], ಆ (ಅಕ್ಷರವು) ನೀನೇ ಬೇರೆಯಲ್ಲ ಎಂದು ಅಭಿಪ್ರಾಯ.

(ಭಾಷ್ಯ)

೧೫೮. ಪುನರಪಿ ಸ್ತೌತಿ—

(ಭಾಷ್ಯಾರ್ಥ)

ಮತ್ತೂ (ಭಗವಂತನನ್ನು) ಹೊಗಳುತ್ತಾನೆ : —

**ತ್ವಮಾದಿದೇವಃ ಪುರುಷಃ ಪುರಾಣ-**
**ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನನ್ತರೂಪ ॥ ೩೮ ॥**

೩೮. ನೀನು ಆದಿದೇವನು, ಪುರಾಣಪುರುಷನು ; ನೀನು ಈ ವಿಶ್ವಕ್ಕೆ ಪರ ನಿಧಾನವು. ವೇತ್ತನಾಗಿರುವೆ, ವೇದ್ಯವೂ (ಆಗಿರುವೆ) ; ಪರಧಾಮವೂ (ಆಗಿರುವೆ). ಅನಂತರೂಪನೆ, ವಿಶ್ವವು ನಿನ್ನಿಂದ ತತವಾಗಿರುತ್ತದೆ.

(ಭಾಷ್ಯ)

೧೫೯. ತ್ವಮ್ ಆದಿದೇವಃ ಜಗತಃ ಸ್ರಷ್ಟೃತ್ವಾತ್, ಪುರುಷಃ ಪುರಿ ಶಯನಾತ್ ಪುರಾಣಃ ಚಿರನ್ತನಃ । ತ್ವಮೇವ ಅಸ್ಯ ವಿಶ್ವಸ್ಯ ಪರಂ ಪ್ರಕೃಷ್ಟಂ ನಿಧಾನಂ ನಿಧೀಯತೇ ಅಸ್ಮಿನ್ ಜಗತ್ ಸರ್ವಂ ಮಹಾಪ್ರಲಯಾದೌ ಇತಿ । ಕಿಂಚ ವೇತ್ತಾ ಅಸಿ ವೇದಿತಾ ಅಸಿ ಸರ್ವಸ್ಯೈವ ವೇದ್ಯಜಾತಸ್ಯ । ಯಚ್ಚ ವೇದ್ಯಂ ವೇದನಾರ್ಹಂ ತಚ್ಚ[2] ಅಸಿ । ಪರಂ ಚ ಧಾಮ ಪರಮಂ ಪದಂ ವೈಷ್ಣವಮ್ । ತ್ವಯಾ ತತಂ ವ್ಯಾಪ್ತಂ ವಿಶ್ವಂ ಸಮಸ್ತಂ[3] ಹೇ ಅನನ್ತರೂಪ[4] ಅನ್ತಃ ನ ವಿದ್ಯತೇ ತವ ರೂಪಾಣಾಮ್ ॥

---

1. ಸತ್ತೆಂಬ ವ್ಯಾಕೃತ, ಅಸತ್ತೆಂಬ ಅವ್ಯಾಕೃತ—ಇವೆರಡಕ್ಕಿಂತಲೂ ಬೇರೆ. ಮುಂ. ಭಾ. ೨-೧-೨ (ಭಾ. ಭಾ. ೫೫).
2. 'ತದಪಿ' ಮು॥ಮೈ॥
3. 'ಸಮಸ್ತಂ ವಿಶ್ವಮ್' ಮು॥
4. ಮುಂದಿನ ವಾಕ್ಯವು ಮು॥ಮೈ॥ಗಳಲ್ಲಿಲ್ಲ.

(ಭಾಷ್ಯಾರ್ಥ)

ನೀನು ಜಗತ್ತಿನ ಮೊದಲ ದೇವನು, ಏಕೆಂದರೆ (ನೀನೇ ಅದನ್ನು) ಸೃಷ್ಟಿಸುವವನು. ಪುರಾಣನಾದ ಹಳಬನಾದ ಪುರುಷನು, ಏಕೆಂದರೆ ಪುರದಲ್ಲಿ[1] ಇರುತ್ತೀಯೆ. ನೀನೇ ಈ ವಿಶ್ವಕ್ಕೆ ಪರವಾದ ಹೆಚ್ಚಿನ ನಿಧಾನವು; ಮಹಾಪ್ರಲಯವೇ ಮುಂತಾದ ಕಾಲದಲ್ಲಿ[2] ಈ (ಪರಮಾತ್ಮನಲ್ಲಿ) ಜಗತ್ತೆಲ್ಲವೂ ಇಡಲ್ಪಡುತ್ತದೆಯಾದ್ದರಿಂದ( ಇವನು ನಿಧಾನವು.) **ಮತ್ತು (ನೀನು) ವೇತ್ತನಾಗಿರುವೆ, ತಿಳಿಯಬೇಕಾದ ಎಲ್ಲವನ್ನೂ ತಿಳಿಯುವವನಾಗಿರುವೆ; ಮತ್ತು ವೇದ್ಯವೂ ತಿಳಿಯತಕ್ಕದ್ದು ಏನೇನು (ಇದೆಯೋ)** ಅದೂ ಆಗಿರುವೆ. ಮತ್ತು ಪರ ಧಾಮವು ಹೆಚ್ಚಿನ ವಿಷ್ಣುವಿನ ಸ್ಥಾನವು. ಎಲೈ ಅನಂತರೂಪನೆ, ನಿನ್ನ ರೂಪಗಳಿಗೆ ಅಂತವು ಇರುವದಿಲ್ಲ (ವಾದ್ದರಿಂದ ಅನಂತರೂಪನೆನಿಸಿರುವವನೆ), ನಿನ್ನಿಂದ ವಿಶ್ವವೂ ಎಂದರೆ ಎಲ್ಲವೂ ತತವಾಗಿರುತ್ತದೆ, ವ್ಯಾಪ್ತವಾಗಿರುತ್ತದೆ.

**ವಾಯುರ್ಯಮೋಽಗ್ನಿರ್ವರುಣಃ ಶಶಾಙ್ಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥ ೩೯ ॥**

೩೯. ವಾಯು, ಯಮ, ಅಗ್ನಿ, ವರುಣ, ಶಶಾಂಕ, ಪ್ರಜಾಪತಿ, ಮತ್ತು ಪ್ರಪಿತಾಮಹ-(ಇವರೆಲ್ಲರೂ) ನೀನೇ. ನಿನಗೆ ನಮಸ್ಕಾರ, ಸಾವಿರ ಬಾರಿ ನಮಸ್ಕಾರವಿರಲಿ! ಮತ್ತೂ ಇನ್ನೊಮ್ಮೆ ನಮಸ್ಕಾರ, ನಿನಗೆ ನಮಸ್ಕಾರ!

(ಭಾಷ್ಯ)

೧೬೦. ಕಿಂಚ ವಾಯುಃ ತ್ವಮ್ ಯಮಶ್ಚ । ಅಗ್ನಿಃ[3] ವರುಣಃ ಅಪಾಂ ಪತಿಃ । ಶಶಾಙ್ಕಃ ಚನ್ದ್ರಮಾಃ । ಪ್ರಜಾಪತಿಃ ತ್ವಂ ಕಶ್ಯಪಾದಿಃ । ಪ್ರಪಿತಾಮಹಶ್ಚ ಪಿತಾಮಹಸ್ಯಾಪಿ ಪಿತಾ ಪ್ರಪಿತಾಮಹಃ । ಬ್ರಹ್ಮಣೋಽಪಿ ಪಿತಾ ಇತ್ಯರ್ಥಃ । ನಮೋ ನಮಃ ತೇ ತುಭ್ಯಮ್ ಅಸ್ತು ಸಹಸ್ರಕೃತ್ವಃ । ಪುನಶ್ಚ ಭೂಯೋಽಪಿ ನಮೋ ನಮಃ ತೇ । ಬಹುಶಃ ನಮಸ್ಕಾರಕ್ರಿಯಾಭ್ಯಾವೃತ್ತಿಗಣನಂ[4] ಕೃತ್ವಸುಚಾ- ಉಚ್ಯತೇ । 'ಪುನಶ್ಚ' 'ಭೂಯೋಽಪಿ' ಇತಿ ಶ್ರದ್ಧಾಭಕ್ತ್ಯತಿಶಯಾತ್ ಅಪರಿತೋಷಮ್ ಆತ್ಮನಃ ದರ್ಶಯತಿ ॥

---

1. ಶರೀರದೊಳಗೆ ಹೃದಯದಲ್ಲಿ.
2. ಸುಷುಪ್ತ್ಯವಸ್ಥೆಯೇ ಮುಂತಾದದ್ದರಲ್ಲಿ.
3. 'ಅಗ್ನಿಶ್ಚ' ನಿ॥
4. ಮಾ॥ಮೈ॥ ಗಳ 'ಈ ಪಾಠವೇ ಸರಿ.'

(ಭಾಷ್ಯಾರ್ಥ)

ಮತ್ತು ನೀನು ವಾಯು; ಯಮನೂ ಅಗ್ನಿಯೂ; ನೀರಿಗೆ ಒಡೆಯನಾದ ವರುಣನೂ (ನೀನೇ). ಶಶಾಂಕನು ಚಂದ್ರನು; ನೀನು ಪ್ರಜಾಪತಿ ಎಂದರೆ ಕಶ್ಯಪನೇ ಮೊದಲಾದವರ (ರೂಪದಲ್ಲಿರುವ)ವನು.[1] ಮತ್ತು ಪ್ರಪಿತಾಮಹನು; ಅಜ್ಜನಿಗೂ ತಂದೆಯಾದ್ದರಿಂದ ಪ್ರಪಿತಾಮಹನು; ಬ್ರಹ್ಮನಿಗೂ ತಂದೆ ಎಂದರ್ಥ. ನಮಸ್ಕಾರ; (ತೇ=ತುಭ್ಯಂ) ನಿನಗೆ ಸಾವಿರಬಾರಿ ನಮಸ್ಕಾರವಿರಲಿ! ಮತ್ತೂ ಇನ್ನೊಮ್ಮೆ ನಮಸ್ಕಾರ, ನಿನಗೆ ನಮಸ್ಕಾರ! ('ಸಹಸ್ರಕೃತ್ವಃ' ಎಂಬಲ್ಲಿ) 'ಕೃತ್ವಃ' ಪ್ರತ್ಯಯದಿಂದ ನಮಸ್ಕಾರಕ್ರಿಯೆಯನ್ನು ಬಾರಿಬಾರಿಗೂ (ಮಾಡಿದನೆಂದು) ಎಣಿಸಿ (ಹೇಳಿದಂತಾ)ಯಿತು. 'ಪುನಶ್ಚ', 'ಭೂಯೋಽಪಿ' (ಮತ್ತೂ ಇನ್ನೊಮ್ಮೆ) ಎಂಬ (ಶಬ್ದಗಳಿಂದ) ಹೆಚ್ಚಿನ ಶ್ರದ್ಧಾಭಕ್ತಿಗಳು ಉಂಟಾಗಿ (ಎಷ್ಟು ನಮಸ್ಕಾರಗಳಿಂದಲೂ) ತನಗೆ ತೃಪ್ತಿಯಾಗುವದಿಲ್ಲವೆಂದು ತಿಳಿಸಿರುತ್ತಾನೆ.

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನನ್ತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ ೪೦ ॥**

೪೦. ಸರ್ವನೆ, ನಿನಗೆ ಮುಂದೆ ನಮಸ್ಕಾರ, ಮತ್ತು ಹಿಂದೆಯೂ (ನಮಸ್ಕಾರ), ಎಲ್ಲಾ ಕಡೆಯಲ್ಲಿಯೂ ನಿನಗೆ ನಮಸ್ಕಾರವಿರಲಿ! ನೀನು ಅನಂತವೀರ್ಯನು, ಅಮಿತವಿಕ್ರಮನು. ಸರ್ವವನ್ನೂ ಚೆನ್ನಾಗಿ ವ್ಯಾಪಿಸಿಕೊಂಡಿರುವೆ, ಅದರಿಂದ ಸರ್ವನಾಗಿರುವೆ.

(ಭಾಷ್ಯ)

೧೬೧. ತಥಾ[2] ನಮಃ ಪುರಸ್ತಾತ್ ಪೂರ್ವಸ್ಯಾಂ ದಿಶಿ ತುಭ್ಯಮ್ ಅಥ ಪೃಷ್ಠತಃ ತೇ ಪೃಷ್ಠತೋಽಪಿ ಚ[3] ತೇ ನಮೋಽಸ್ತು ತೇ ಸರ್ವತ ಏವ ಸರ್ವಾಸು ದಿಕ್ಷು ಸರ್ವತ್ರ ಸ್ಥಿತಾಯ ಹೇ ಸರ್ವ! ಅನನ್ತವೀರ್ಯಾಮಿತವಿಕ್ರಮಃ ಅನನ್ತಂ

1. ಕಶ್ಯಪ, ದಕ್ಷ ಮುಂತಾದವರು. ಬ್ರಹ್ಮನ ರೂಪದಲ್ಲಿರುವ ಪರಮಾತ್ಮನಿಂದ ಮರೀಚ್ಯಾದಿಗಳೂ ಮರೀಚಿಯಿಂದ ಕಶ್ಯಪನೂ ಕಶ್ಯಪನಿಂದ ಪ್ರಜೆಗಳೂ ಹುಟ್ಟಿದರೆಂದು ಪುರಾಣ.

2. 'ಕಿಂಚ' ಮು॥

3. 'ಅಥ ಪೃಷ್ಠತೋಽಪಿ ನಮೋಽಸ್ತು ತೇ' ನಿ॥; 'ಅಥ ಪೃಷ್ಠತಸ್ತೇ ಪೃಷ್ಠತೋಽಪಿ ಚ ತೇ ನಮೋಽಸ್ತು' ಮು॥; '..ಅಪಿ ಚ ನಮೋಽಸ್ತು ತೇ' ವ್ಯೆ॥

ವೀರ್ಯಮ್ ಅಸ್ಯ, ಅಮಿತಃ ವಿಕ್ರಮಃ ಅಸ್ಯ । ವೀರ್ಯಂ ಸಾಮರ್ಥ್ಯಂ ವಿಕ್ರಮಃ ಪರಾಕ್ರಮಃ। ವೀರ್ಯವಾನಪಿ ಕಶ್ಚಿತ್ ಶತ್ರುವಧಾದಿವಿಷಯೇ [1] ನ ಪರಾಕ್ರಮತೇ ಮನ್ದಪರಾಕ್ರಮೋ ವಾ । ತ್ವಂ ತು ಅನನ್ತವೀರ್ಯಃ,[2] ಅಮಿತವಿಕ್ರಮಶ್ಚ ಇತಿ ಅನನ್ತವೀರ್ಯಾಮಿತವಿಕ್ರಮಃ। ಸರ್ವಂ ಸಮಸ್ತಂ ಜಗತ್ ಸಮಾಪ್ನೋಷಿ ಸಮ್ಯಕ್ ಏಕೇನಾತ್ಮನಾ ವ್ಯಾಪ್ನೋಷಿ[3] ಯತಃ ತತಃ ತಸ್ಮಾತ್ ಅಸಿ ಭವಸಿ ಸರ್ವಃ ತ್ವಮ್ । ತ್ವಯಾ ವಿನಾಭೂತಂ ನ ಕಿಂಚಿತ್ ಅಸ್ತಿ ಇತ್ಯರ್ಥಃ[4] ॥

(ಭಾಷ್ಯಾರ್ಥ)

ಮತ್ತು ನಿನಗೆ ಮುಂದೆ ಎಂದರೆ ಪೂರ್ವದಿಕ್ಕಿನಲ್ಲಿ ನಮಸ್ಕಾರ. ಮತ್ತು ಹಿಂದೆಯೂ ಹಿಂದುಗಡೆಯೂ ನಿನಗೆ (ನಮಸ್ಕಾರ)! ಎಲ್ಲಾ ಕಡೆಯಲ್ಲಿಯೂ ಎಲ್ಲಾ ದಿಕ್ಕುಗಳಲ್ಲಿಯೂ ಎಲ್ಲೆಲ್ಲಿಯೂ ಇರುವ ನಿನಗೆ, ಎಲೈ ಸರ್ವನೆ, ನಮಸ್ಕಾರ! ಅನಂತವೀರ್ಯಾಮಿತಿವಿಕ್ರಮನು : ಈತನ ವೀರ್ಯವು ಅನಂತವಾದದ್ದು, ಈತನ ವಿಕ್ರಮವು ಅಮಿತವಾದದ್ದು. ವೀರ್ಯವೆಂದರೆ ಸಾಮರ್ಥ್ಯವು, ವಿಕ್ರಮವೆಂದರೆ ಪರಾಕ್ರಮವು. ವೀರ್ಯವಂತನಾದರೂ ಒಬ್ಬೊಬ್ಬನು ಶತ್ರುಗಳನ್ನು ಕೊಲ್ಲುವದೇ ಮುಂತಾದ ವಿಷಯದಲ್ಲಿ ಪರಾಕ್ರಮವನ್ನು ತೋರಿಸುವದಿಲ್ಲ; ಅಥವಾ ಮೆಲ್ಲಗೆ ಪರಾಕ್ರಮ (ವನ್ನು ತೋರಿಸುತ್ತಾನೆ). ಆದರೆ ನೀನು (ಹಾಗಲ್ಲ), ಅನಂತವಾದ ವೀರ್ಯವುಳ್ಳವನು, ಮತ್ತು ಅಮಿತವಾದ ಪರಾಕ್ರಮವುಳ್ಳವನು ; ಆದ್ದರಿಂದ ಅನಂತವೀರ್ಯಾಮಿತವಿಕ್ರಮನು. ಸರ್ವ, ಎಲ್ಲಾ, ಜಗತ್ತನ್ನೂ ನಿನ್ನ ಒಂದೇ ಆತ್ಮಸ್ವರೂಪದಿಂದ ಚೆನ್ನಾಗಿ ವ್ಯಾಪಿಸಿಕೊಂಡಿರುವೆಯಲ್ಲವೆ, ಆದ್ದರಿಂದ ಆದಕಾರಣ ನೀನು ಸರ್ವನಾಗಿರುವೆ ಆಗಿರುತ್ತೀಯೆ. ನಿನ್ನನ್ನು ಬಿಟ್ಟು ಯಾವದೊಂದೂ ಇರುವದಿಲ್ಲ ಎಂದರ್ಥ[5].

---

1. 'ಶಸ್ತ್ರಾದಿವಿಷಯೇ' ನಿ।
2. 'ಅನನ್ತವೀರ್ಯಶ್ಚ' ಮ।
3. 'ಆಪ್ನೋಷಿ ವ್ಯಾಪ್ನೋಷಿ' ಮ॥
4. 'ಇತ್ಯಭಿಪ್ರಾಯಃ' ಮ॥ ಮೈ॥

5. ಎಲ್ಲದರ ಸ್ವರೂಪವೂ ಆತ್ಮನೇ; ತೋರಿಕೆಯ ಹಾವನ್ನು ಹಗ್ಗವು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವಂತೆ ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡಿರುವದರಿಂದ ಜಗತ್ತೆಲ್ಲವೂ ನಿಜವಾಗಿ ಪರಮಾತ್ಮನೇ, ಆತ್ಮನನ್ನು ಬಿಟ್ಟು ಯಾವದೂ ಇಲ್ಲ—ಎಂಬ ಅಭಿಪ್ರಾಯವನ್ನು 'ಸಮಾಪ್ನೋಷಿ' ಎಂಬಲ್ಲಿರುವ 'ಸಮ್' ಎಂಬ ಉಪಸರ್ಗದ ಸ್ವಾರಸ್ಯದಿಂದ ತೆಗೆದಿರುತ್ತದೆ.

(ಭಾಷ್ಯ)

೧೬೨. ಯತೋಽಹಂ ತ್ವನ್ಮಾಹಾತ್ಮ್ಯಾಪರಿಜ್ಞಾನಾತ್[1] ಅಪರಾದ್ಧಃ,ಅತಃ-

(ಭಾಷ್ಯ)

ನಾನು ನಿನ್ನ ಮಾಹಾತ್ಮ್ಯವನ್ನು ಅರಿಯದೆ ಅಪರಾಧಮಾಡಿರುವೆನಲ್ಲವೆ? ಆದ್ದರಿಂದ:--

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥ ४೧ ॥**
**ಯಚ್ಚಾವಹಾಸಾರ್ಥ[2] ಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ४೨ ॥**

४೧-४೨. ಈ ನಿನ್ನದನ್ನು, ಮಹಿಮೆಯನ್ನು ಅರಿಯದೆ (ನೀನು) ಸಖನೆಂದು ಬಗೆದು 'ಎಲೆ ಕೃಷ್ಣ', 'ಎಲೆ ಯಾದವ', 'ಎಲೆ ಗೆಳೆಯ'- ಎಂದು ದಿಟ್ಟತನದಿಂದ, ಪ್ರಮಾದದಿಂದ ಅಥವಾ ಪ್ರಣಯದಿಂದ ಏನು ಹೇಳಿರುವೆನೋ; ಮತ್ತು ವಿಹಾರ, ಶಯ್ಯೆ, ಆಸನ, ಭೋಜನ-ಇವುಗಳಲ್ಲಿ ಅಪಹಾಸಕ್ಕಾಗಿ ನಾನು ಒಬ್ಬನೇ ಇರುವಾಗ ಅಥವಾ ಎದುರಿಗೆ ಹಾಗೆ ಏನು ಅಸತ್ಕಾರಮಾಡಿರುವೆನೋ ಅದನ್ನು ಕ್ಷಮಿಸಬೇಕೆಂದು ಅಪ್ರಮೇಯನಾದ ನಿನ್ನನ್ನು ಬೇಡಿಕೊಳ್ಳುವೆನು.

(ಭಾಷ್ಯ)

೧೬೩. ಸಖಾ ಸಮಾನವಯಾ ಇತಿ ಮತ್ವಾ ಜ್ಞಾತ್ವಾ ವಿಪರೀತಬುದ್ಧ್ಯಾ ಪ್ರಸಭಮ್ ಅಭಿಭೂಯ ಪ್ರಸಹ್ಯ ಯತ್ ಉಕ್ತಂ ಹೇ ಕೃಷ್ಣ ಹೇ ಯಾದವ ಹೇ ಸಖೇ[3] ಇತಿ ಚ ಅಜಾನತಾ ಅಜ್ಞಾನಿನಾ ಮೂಢೇನ । ಕಿಮ್ ಅಜಾನತಾ ಇತಿ? ಆಹ-ಮಹಿಮಾನಂ ಮಾಹಾತ್ಮ್ಯಂ ತವ ಇದಮ್ ಈಶ್ವರಸ್ಯ ವಿಶ್ವರೂಪಮ್ ।

---

1. 'ಪರಿಜ್ಞಾನಾಪರಾದ್ಧಃ' ಆ||; 'ಪರಿಜ್ಞಾನಾದಪರಾಧೀ' ವಿ||ಗು||
2. 'ಅಪಹಾಸಾರ್ಥಮ್' ಮೈ||ಮ||
3 'ಸಖೇತಿ' ಎಂದು ಮೂಲದಲ್ಲಿರುವದು ಆರ್ಷಪ್ರಯೋಗವು.

ತವ ಇದಂ ಮಹಿಮಾನಮ್ ಅಜಾನತಾ ಇತಿ ವೈಯಧಿಕರಣ್ಯೇನ ಸಂಬನ್ಧಃ । 'ತವ ಇಮಮ್' ಇತಿ ಪಾಠಃ ಯದಿ ಅಸ್ತಿ ತದಾ ಸಾಮಾನಾಧಿಕರಣ್ಯಮೇವ । ಮಯಾ ಪ್ರಮಾದಾತ್ ವಿಕ್ಷಿಪ್ತಚಿತ್ತತಯಾ ಪ್ರಣಯೇನ ವಾ ಅಪಿ। ಪ್ರಣಯೋ ನಾಮ ಸ್ನೇಹ ನಿಮಿತ್ತಃ ವಿಸ್ರಮ್ಭಃ । ತೇನಾಪಿ ಕಾರಣೇನ ಯತ್ ಉಕ್ತವಾನಸ್ಮಿ ॥ ೪೧ ॥

ಯಚ್ಚ ಅವಹಾಸಾರ್ಥಂ ಪರಿಹಾಸಪ್ರಯೋಜನಾಯ ಅಸತ್ಕೃತಃ ಪರಿಭೂತಃ ಅಸಿ ಭವಸಿ[1] । ಕ್ವ ? ವಿಹಾರಶಯ್ಯಾಸನಭೋಜನೇಷು ವಿಹರಣಂ ವಿಹಾರಃ ಪಾದ ವ್ಯಾಯಾಮಃ[2] । ಶಯನಂ ಶಯ್ಯಾ । ಆಸನಮ್ ಆಸ್ಥಾಯಿಕಾ । ಭೋಜನಮ್ ಅದನಮ್ । ಇತಿ ಏತೇಷು ವಿಹಾರಶಯ್ಯಾಸನಭೋಜನೇಷು ಏಕಃ ಪರೋಕ್ಷಃ ಸನ್ ಅಸತ್ಕೃತೋಽಸಿ ಪರಿಭೂತೋಽಸಿ[3] । ಅಥವಾ ಅಪಿ ಹೇ ಅಚ್ಯುತ ತತ್ ಸಮಕ್ಷಂ ಸರ್ವಮ್ ತಚ್ಛಬ್ದಃ ಕ್ರಿಯಾವಿಶೇಷಣಾರ್ಥಃ। ಪ್ರತ್ಯಕ್ಷಂ ವಾ ಅಸತ್ಕೃತೋಽಸಿ ತತ್ ಅಪರಾಧಜಾತಂ ಕ್ಷಾಮಯೇ ಕ್ಷಮಾಂ ಕಾರಯೇ ತ್ವಾಮ್ ಅಹಮ್ ಅಪ್ರಮೇಯಂ ಪ್ರಮಾಣಾತೀತಮ್[4] ॥

(ಭಾಷ್ಯಾರ್ಥ)

ಸಖನು, ನನ್ನಷ್ಟೇ ವಯಸ್ಸಿನವನು ಎಂದು ಬಗೆದು ಭಾವಿಸಿಕೊಂಡು ತಪ್ಪು ತಿಳಿವಳಿಕೆಯಿಂದ ದಿಟ್ಟತನದಿಂದ ತಿರಸ್ಕರಿಸಿ ಜೋರಾಗಿ 'ಎಲೆ ಕೃಷ್ಣ,' 'ಎಲೆ ಯಾದವ,' 'ಎಲೆ ಗೆಳೆಯ' ಎಂದು ಅರಿಯದೆ ಮೂಢನಾಗಿ ; ಏನು ಹೇಳಿರು ವೆನೋ. ಏನನ್ನರಿಯದೆ ?–ಎಂದರೆ(ಅರ್ಜುನನು) ಹೇಳುತ್ತಾನೆ : ಮಹಿಮೆಯನ್ನು ಈ ವಿಶ್ವರೂಪವೆಂಬ ಈಶ್ವರನಾದ, ನಿನ್ನ ಮಾಹಾತ್ಮ್ಯೆಯನ್ನು (ಅರಿಯದೆ), (ಇಲ್ಲಿ) 'ತವೇದಂ ಮಹಿಮಾನಮ ಅಜಾನತಾ '(ಎಂಬಲ್ಲಿ 'ಇದಮ್' ಎಂಬುದು ನಪುಂಸಕ ವಾಗಿ 'ಮಹಿಮಾನಮ್' ಎಂಬುದು ಪುಲ್ಲಿಂಗವಾಗಿರುವದರಿಂದ ಇದು ನಿನ್ನ ಮಾಹಾತ್ಮ್ಯೆವು. ಮಹಿಮೆಯನ್ನರಿಯದೆ) ಎಂದು ವೈಯಧಿಕರಣ್ಯವಾಗಿ ಸಂಬಂಧ ವನ್ನು ಮಾಡಿಕೊಳ್ಳಬೇಕು 'ತವ ಇಮಮ್' ಎಂಬ ಪಾಠವಿದ್ದರೆ ('ಈ ನಿನ್ನ ಮಹಿಮೆಯನ್ನು' ಎಂದು) ಸಮಾನಾಧಿಕರಣ (ಸಂಬಂಧ)ವೇ (ಆಗುವದು). ಪ್ರಮಾದದಿಂದ ಚಿತ್ತವು ಎತ್ತಲೋ ಹೋಗಿದ್ದದ್ದರಿಂದ ಅಥವಾ ಪ್ರಣಯದಿಂದ–

---

1. 'ಭವಸಿ ತ್ವಮ್' ಮ॥ಮೈ॥
2. ಮ॥ಮೈ॥ಗು॥ಗಳಲ್ಲಿಲ್ಲ.
3. 'ಪರಿಭೂತೋಽಸಿ ತ್ವಮ್' ಮ॥
4. ನಿ॥ ಗು॥ ಗಳಲ್ಲಿಲ್ಲ.

ಪ್ರಣಯವೆಂದರೆ ಸ್ನೇಹದಿಂದ ಉಂಟಾದ ವಿಶ್ವಾಸವು. ಆ ಕಾರಣದಿಂದಲಾದರೂ– ನಾನು ಏನೇನು ಹೇಳಿರುವೆನೋ ॥ ೪೧ ॥

ಮತ್ತು ಅಪಹಾಸಕ್ಕಾಗಿ ಪರಿಹಾಸ್ಯವೆಂಬ ಪ್ರಯೋಜನಕ್ಕಾಗಿ (ನಿನ್ನನ್ನು) ಏನು ತಿರಸ್ಕಾರಮಾಡಿರುವೆನೋ–ಎಲ್ಲಿ ? ಎಂದರೆ ವಿಹಾರಶಯ್ಯಾಸನಭೋಜನ ಗಳಲ್ಲಿ. ವಿಹಾರವೆಂದರೆ ಓಡಾಡುವದು, ಕಾಲಾಡಿ (ಬರು)ವದು, ಶಯ್ಯೆ ಎಂದರೆ ಮಲಗಿರುವದು, ಆಸನವೆಂದರೆ ಕುಳಿತಿರುವದು, ಭೋಜನ ಎಂದರೆ ಊಟಮಾಡು ವದು– ಈ ವಿಹಾರಶಯ್ಯಾಸನಭೋಜನಗಳಲ್ಲಿ ಒಬ್ಬನೇ, ಪರೋಕ್ಷವಾಗಿದ್ದವನಾಗಿ (ನನ್ನಿಂದ) ಅಸತ್ಕೃತನಾಗಿರುವೆಯೋ ತಿರಸ್ಕೃತನಾಗಿರುವೆಯೋ, ಅಥವಾ ಎಲೈ ಅಚ್ಯುತನೆ, ಸಮಕ್ಷವಾಗಿ ಹಾಗೆ– ಇಲ್ಲಿ ತತ್ ಎಂಬ ಮಾತು (ಹಾಗೆ) ಎಂದು ಕ್ರಿಯಾ ವಿಶೇಷಣಕ್ಕಾಗಿ (ಎಂದಿರುತ್ತದೆ). ಪ್ರತ್ಯಕ್ಷವಾಗಿಯೇ ಆಗಲಿ ತಿರಸ್ಕೃತನಾಗಿರು ವೆಯೋ; ಆ ಅಪರಾಧಸಮೂಹವನ್ನೆಲ್ಲ, ಅಪ್ರಮೇಯನಾದ ಪ್ರಮಾಣಾತೀತನಾದ ನಿನ್ನನ್ನು ಕ್ಷಮಾಪಣೆಮಾಡುತ್ತೇನೆ, ಕ್ಷಮೆಯನ್ನು (ಮಾಡಬೇಕೆಂದು) ಕೇಳಿ ಕೊಳ್ಳುತ್ತೇನೆ.

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ ೪೩ ॥**

೪೩. ಈ ಚರಾಚರಲೋಕಕ್ಕೆ ನೀನು ತಂದೆಯಾಗಿರುವೆ, ಪೂಜ್ಯನೂ ಹೆಚ್ಚಿನ ಗುರುವೂ (ಆಗಿರುವೆ). ಅಪ್ರತಿಮಪ್ರಭಾವನೆ, ಲೋಕತ್ರಯ ದಲ್ಲಿಯೂ ನಿನಗೆ ಸಮನಾದವನು ಇಲ್ಲ ; (ಇನ್ನು ನಿನಗಿಂತ) ಹೆಚ್ಚಿನವನು ಎಲ್ಲಿ(ದ್ದಾನು) ?

(ಭಾಷ್ಯ)

೬೪. ಯತಃ ತ್ವಮ್ ಪಿತಾ ಅಸಿ ಜನಯಿತಾ ಅಸಿ ಲೋಕಸ್ಯ ಪ್ರಾಣಿಜಾತಸ್ಯ ಚರಾಚರಸ್ಯ ಸ್ಥಾವರಜಙ್ಗಮಸ್ಯ[1] । ನ ಕೇವಲಂ ತ್ವಮ್ ಅಸ್ಯ ಜಗತಃ ಪಿತಾ ಪೂಜ್ಯಶ್ಚ ಪೂಜಾರ್ಹಃ । ಯತಃ ಗುರುಃ ಗರೀಯಾನ್ ಗುರುತರಃ । ಕಸ್ಮಾತ್ ಗುರು ತರಃ ತ್ವಮ್ ಇತಿ ? ಆಹ– ನ ತ್ವತ್ಸಮಃ ತ್ವತ್ತುಲ್ಯಃ ಅನ್ಯಃ ಅಸ್ತಿ । ನ ಹಿ ಈಶ್ವರ

1. 'ಜಗತಃ' ಎಂದು ಹೆಚ್ಚಾಗಿ ಮು॥

ದ್ವಯಂ ಸಂಭವತಿ। ಅನೇಕೇಶ್ವರತ್ವೇ ವ್ಯವಹಾರಾನುಪಪತ್ತೇಃ।ತ್ವತ್ಸಮ ಏವ ತಾವತ್ ಅನ್ಯೋ ನ ಸಂಭವತಿ। ಕುತ ಏವ ಅಭ್ಯಧಿಕಃ ಸ್ಯಾತ್। ಲೋಕತ್ರಯೇಽಪಿ ಸರ್ವಸ್ಮಿನ್। ಅಪ್ರತಿಮಪ್ರಭಾವ। ಪ್ರತಿಮೀಯತೇ ಯಯಾ ಸಾ ಪ್ರತಿಮಾ। ನ ವಿದ್ಯತೇ ಪ್ರತಿಮಾ ಯಸ್ಯ ಪ್ರಭಾವಸ್ಯ ಸ ತ್ವಮ್ ಅಪ್ರತಿಮಪ್ರಭಾವಃ। ಹೇ ಅಪ್ರತಿಮಪ್ರಭಾವ ನಿರತಿಶಯಪ್ರಭಾವ ಇತ್ಯರ್ಥಃ ॥

(ಭಾಷ್ಯಾರ್ಥ).

ಏಕೆಂದರೆ ನೀನು ಚರಾಚರವೆಂಬ ಸ್ಥಾವರಜಂಗಮ (ರೂಪ)ವಾದ ಲೋಕಕ್ಕೆ ಪ್ರಾಣಿಜಾತಕ್ಕೆ ತಂದೆಯಾಗಿರುವೆ, ಹಡೆದಿರುವವನಾಗಿರುತ್ತೀಯೆ. ಈ ಜಗತ್ತಿಗೆ ನೀನು ತಂದೆ ಮಾತ್ರವಲ್ಲ, ಪೂಜ್ಯನೂ ಪೂಜೆಗೆ ತಕ್ಕವನೂ (ಆಗಿರುವೆ); ಏಕೆಂದರೆ (ಎಲ್ಲರಿಗೂ) 'ಗರೀಯಾನ್' ಬಹಳ ಹೆಚ್ಚಿನ ಗುರು(ವಾಗಿರುವೆ). ನೀನು (ಎಲ್ಲರಿಗಿಂತಲೂ) ಹೆಚ್ಚಿನವನೆಂಬುದು ಹೇಗೆ?–ಎಂದರೆ ಹೇಳುತ್ತಾನೆ: ನಿನಗೆ ಸಮನಾದವನು ನಿನ್ನನ್ನು ಹೋಲುವವನು ಮತ್ತೊಬ್ಬನು ಇರುವದಿಲ್ಲ. ಈಶ್ವರರು ಇಬ್ಬರೆಂಬುದು ಹೊಂದುವ ಹಾಗೆಯೇ ಇಲ್ಲ; ಏಕೆಂದರೆ ಒಬ್ಬನಿಗಿಂತ ಹೆಚ್ಚು ಈಶ್ವರರಿದ್ದರೆ ವ್ಯವಹಾರವೇ ಸಾಗಲಾರದು.[1] ನಿನಗೆ ಸಮನಾದವನೇ ಮೊದಲು ಇರುವ ಹಾಗಿಲ್ಲ; ಇನ್ನು (ನಿನಗಿಂತ) ಹೆಚ್ಚಿನವನು ಇಡಿಯ ಮೂರು ಲೋಕದಲ್ಲಿಯಾದರೂ ಹೆಚ್ಚಿನವನು ಬೇರೆ ಎಲ್ಲಿದ್ದಾನು? ಎಲೈ ಅಪ್ರತಿಮಪ್ರಭಾವನೆ: ಯಾವ (ಹೋಲಿಕೆಯಿಂದ) ಅಳೆಯಲ್ಪಡುವದೋ ಅದು ಪ್ರತಿಮೆ; ಅಂಥ ಯಾವನ ಪ್ರಭಾವಕ್ಕೆ ಪ್ರತಿಮೆಯಿಲ್ಲವೋ ಅಂಥ(ವನಾದ್ದರಿಂದ) ನೀನು ಅಪ್ರತಿಮಪ್ರಭಾವನು. ಎಲೈ ಅಪ್ರತಿಮಪ್ರಭಾವನೆ, ಎಂದರೆ ಮಿಗಿಲಿಲ್ಲದ ಪ್ರಭಾವವುಳ್ಳಾತನೆ, ಎಂದರ್ಥ.

**ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪ ॥**

೪೪. ಆದ್ದರಿಂದ ಪ್ರಣಾಮಮಾಡಿ ಕಾಯವನ್ನು ಪ್ರಣಿಧಾನಮಾಡಿ ಈಡ್ಯನಾದ ಈಶನಾದ ನಿನ್ನನ್ನು ಪ್ರಸಾದನಮಾಡುತ್ತಿದೇನೆ. ತಂದೆಯು ಮಗನ, ಗೆಳೆಯನು ಗೆಳೆಯನ, ಪ್ರಿಯನು ಪ್ರಿಯಳ (ಅಪರಾಧವನ್ನು ಸಹಿಸುವಂತೆ) ದೇವನೆ, ಸಹಿಸಿಕೊಳ್ಳಬೇಕು.

---

1. ಸೂ. ಭಾ. ೪-೪-೧೪.

(ಭಾಷ್ಯ)

೧೬೫. ಯತ ಏವಂ ತಸ್ಮಾತ್ ಪ್ರಣಮ್ಯ ನಮಸ್ಕೃತ್ಯ ಪ್ರಣಿಧಾಯ ಪ್ರಕರ್ಷೇಣ ನೀಚೈಃ ಧೃತ್ವಾ ಕಾಯಂ ಶರೀರಂ ಪ್ರಸಾದಯೇ ಪ್ರಸಾದಂ ಕಾರಯೇ ತ್ವಾಮ್ ಅಹಮ್ ಈಶಮ್ ಈಶಿತಾರಮ್ ಈಡ್ಯಂ ಸ್ತುತ್ಯಮ್ । ತ್ವಂ ಪುನಃ ಪುತ್ರಸ್ಯ ಅಪರಾಧಂ ಪಿತಾ ಯಥಾ ಕ್ಷಮತೇ ಸರ್ವಮ್ ಸಖೇವ ಚ ಸಖ್ಯುಃ ಅಪರಾಧಮ್, ಯಥಾ ವಾ ಪ್ರಿಯಃ ಪ್ರಿಯಾಯಾಃ ಅಪರಾಧಂ ಕ್ಷಮತೇ, ಏವಮ್ ಅರ್ಹಸಿ ಹೇ ದೇವ ಸೋಢುಂ ಪ್ರಸಹಿತುಂ ಕ್ಷನ್ತುಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗಿರುವದಷ್ಟೆ, ಆದ್ದರಿಂದ ಪ್ರಣಾಮಮಾಡಿ ನಮಸ್ಕರಿಸಿ ಕಾಯವನ್ನು ಶರೀರವನ್ನು ಪ್ರಣಿಧಾನಮಾಡಿ ಚೆನ್ನಾಗಿ (ಪ್ರ) ಕೆಳಕ್ಕೆ (ನಿ) ಇಟ್ಟು, (ಅಡ್ಡ ಬಿದ್ದು) ಈಶನೂ ಆಳುವವನೂ, ಈಡ್ಯನೂ ಸ್ತುತಿಗೆ ಅರ್ಹನೂ ಆಗಿರುವ ನಿನ್ನನ್ನು ನಾನು ಪ್ರಸಾದನಮಾಡುತ್ತಿದೇನೆ, ಪ್ರಸನ್ನನಾಗೆಂದು ಬೇಡಿಕೊಳ್ಳುತ್ತಲಿದೇನೆ. ನೀನಾದರೋ ಮಗನ ತಪ್ಪನ್ನು ತಂದೆಯು ಹೇಗೆ ಎಲ್ಲವನ್ನೂ ಮನ್ನಿಸುವನೋ ಗೆಳೆಯನು ಗೆಳೆಯನ ತಪ್ಪನ್ನು (ಹೇಗೆ ಮನ್ನಿಸುವನೋ) ಅಥವಾ ಪ್ರಿಯನು ಪ್ರಿಯಳ[1] ತಪ್ಪನ್ನು ಹೇಗೆ (ಮನ್ನಿಸುವನೋ) ಹಾಗೆ (ನನ್ನ ತಪ್ಪೆಲ್ಲವನ್ನೂ), ಎಲೈ ದೇವನೆ, ಸಹಿಸಬೇಕು, ಮನ್ನಿಸಬೇಕು ಎಂದರ್ಥ.

## ಅರ್ಜುನನ ಪ್ರಾರ್ಥನೆ

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥**

೪೫. ಅದೃಷ್ಟಪೂರ್ವವಾದ (ರೂಪವನ್ನು) ಕಂಡು (ನಾನು) ಹೃಷಿತನಾಗಿರುವೆನು, ಮತ್ತು ನನ್ನ ಮನಸ್ಸು ಭಯದಿಂದ ಪ್ರವ್ಯಥಿತವಾಗಿರುತ್ತದೆ. ದೇವನೆ, ಅದೇ ರೂಪವನ್ನು ನನಗೆ ತೋರಿಸು: ದೇವೇಶನೆ, ಜಗನ್ನಿವಾಸನೆ, ಪ್ರಸನ್ನನಾಗು.

---

1. 'ಪ್ರಿಯಾಯಾರ್ಹಸಿ' ಎಂಬಲ್ಲಿ ಸಂಧಿಯಾಗಿರುವದು ಆರ್ಷ. ಉಪಮಾನೋಪಮೇಯಗಳಿಗೆ ವಿಭಕ್ತಿಯೊಂದೇ ಸಮಾನವಾಗಿದ್ದರೂ ಸಾಕು, ಲಿಂಗವಚನಗಳೂ ಒಂದೇ ಆಗಿರಬೇಕೆಂಬ ನಿರ್ಬಂಧವಿಲ್ಲ.

(ಭಾಷ್ಯ)

೧೬೬. ಅದೃಷ್ಟಪೂರ್ವಂ ನ ಕದಾಚಿದಪಿ ದೃಷ್ಟಪೂರ್ವಮಿದಂ ವಿಶ್ವರೂಪಂ ತವ ಮಯಾ ಅನ್ಯೈರ್ವಾ । ತತ್ ಅಹಂ ದೃಷ್ಟ್ವಾ ಹೃಷಿತಃ ಅಸ್ಮಿ । ಭಯೇನ ಚ ಪ್ರವ್ಯಥಿತಂ ಮನಃ ಮೇ । ಅತಃ ತದೇವ ಮೇ ಮಮ ದರ್ಶಯ ಹೇ ದೇವ ರೂಪಂ ಯತ್ ಮತ್ಸಖಮ್ । ಪ್ರಸೀದ ದೇವೇಶ ಜಗನ್ನಿವಾಸ ಜಗತಃ ನಿವಾಸಃ ಜಗನ್ನಿವಾಸಃ । ಹೇ ಜಗನ್ನಿವಾಸ ॥

(ಭಾಷ್ಯಾರ್ಥ)

ಅದೃಷ್ಟಪೂರ್ವಕವಾದ-ನಾನಾಗಲಿ ಮತ್ತೊಬ್ಬರಾಗಲಿ ನಿನ್ನ ಈ ವಿಶ್ವರೂಪವನ್ನು ಹಿಂದೆ ಎಂದೂ ಕಂಡಿರಲಿಲ್ಲ; ಇದನ್ನು ನಾನು ಕಂಡು ಹೃಷಿತನಾಗಿರುತ್ತೇನೆ.[1] ಮತ್ತು ನನ್ನ ಮನಸ್ಸು ಅಂಜಿಕೆಯಿಂದ ತಲ್ಲಣಗೊಂಡಿದೆ. ಆದ್ದರಿಂದ, ಎಲೈ ದೇವನೆ, ನನ್ನ ಗೆಳೆಯನಾಗಿದ್ದ ಅದೇ ರೂಪವನ್ನೇ (ಮೇ = ಮಮ) ನನಗೆ ತೋರಿಸು. ದೇವೇಶನೆ, ಜಗನ್ನಿವಾಸನೆ-ಜಗತ್ತಿಗೆ(ಲ್ಲ) ಆಶ್ರಯನಾಗಿರುವವನು, ಜಗನ್ನಿವಾಸನು; ಎಲೈ ಜಗನ್ನಿವಾಸನೆ-(ನನ್ನಲ್ಲಿ) ಪ್ರಸನ್ನನಾಗು.

**ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥**

೪೬. ಕಿರೀಟಿಯೂ ಗದಿಯೂ ಚಕ್ರಹಸ್ತನೂ ಆಗಿ (ಮೊದಲಿನ) ಹಾಗೆಯೇ ಇರುವ ನಿನ್ನನ್ನು ನಾನು ನೋಡಲಿಚ್ಛಿಸುತ್ತೇನೆ. ಸಹಸ್ರಬಾಹುವೆ, ವಿಶ್ವಮೂರ್ತಿಯೆ, ಚತುರ್ಭುಜದ ಅದೇ ರೂಪದಿಂದಲೇ (ತೋರುವವ)ನಾಗು.

(ಭಾಷ್ಯ)

೧೬೭. ಕಿರೀಟಿನಂ ಕಿರೀಟವನ್ತಂ ತಥಾ ಗದಿನಂ ಗದಾವನ್ತಂ ಚಕ್ರಹಸ್ತಮ್ ಇಚ್ಛಾಮಿ ತ್ವಾಂ ಪ್ರಾರ್ಥಯೇ ತ್ವಾಂ ದ್ರಷ್ಟುಮ್ ಅಹಂ ತಥೈವ ಪೂರ್ವವತ್ ಇತ್ಯರ್ಥಃ । ಯತಃ ಏವಂ ತಸ್ಮಾತ್ ತೇನೈವ ರೂಪೇಣ ವಸುದೇವಪುತ್ರರೂಪೇಣ

1. ಸಂತೋಷವುಳ್ಳವನಾಗಿದ್ದೇನೆ ಅಥವಾ ರೋಮಾಂಚವುಳ್ಳವನಾಗಿರುತ್ತೇನೆ ಎಂದರ್ಥ.

2. 'ಪೂರ್ವರೂಪೇಣ' ಮ॥

ಚತುರ್ಭುಜೇನ, ಸಹಸ್ರಬಾಹೋ ವಾರ್ತಮಾನಿಕೇನ ವಿಶ್ವರೂಪೇಣ । ಭವ ವಿಶ್ವಮೂರ್ತೇ । ಉಪಸಂಹೃತ್ಯ ವಿಶ್ವರೂಪಂ ತೇನೈವ ರೂಪೇಣ ಭವ ಇತ್ಯರ್ಥಃ ॥

(ಭಾಷ್ಯಾರ್ಥ)

ಹಾಗೆಯೇ ಎಂದರೆ ಮೊದಲಿನಂತೆಯೇ ಎಂದರ್ಥ. ಕಿರೀಟಿಯೂ ಕಿರೀಟವನ್ನು ಇಟ್ಟುಕೊಂಡವನೂ, ಮತ್ತು ಗದಿಯೂ ಎಂದರೆ ಗದೆಯುಳ್ಳವನೂ, (ಮತ್ತು) ಕೈಯಲ್ಲಿ ಚಕ್ರವ(ನ್ನು ಧರಿಸಿರುವವನೂ ಆಗಿರುವ) ನಿನ್ನನ್ನು ನೋಡಬೇಕೆಂದು ನಾನು ಇಚ್ಛಿಸುತ್ತೇನೆ, ಬಯಸುತ್ತೇನೆ. ಹೀಗಿದೆಯಷ್ಟೆ, ಆದ್ದರಿಂದ ಈಗ ಇರುವ ವಿಶ್ವರೂಪದಲ್ಲಿ ಸಹಸ್ರಬಾಹುವಾಗಿರುವವನೆ, ವಿಶ್ವಮೂರ್ತಿಯೆ, ಅದೇ ರೂಪದಿಂದ ಎಂದರೆ ವಸುದೇವನ ಮಗನ ರೂಪದಿಂದ (ತೋರಿಕೊಳ್ಳುವ)ನಾಗು ವಿಶ್ವರೂಪವನ್ನು ಒಳಸೆಳೆದುಕೊಂಡು ಆ ರೂಪದಿಂದಲೇ (ತೋರಿಕೊಳ್ಳುವ)ನಾಗು ಎಂದರ್ಥ.

## ಭಗವಂತನು ವಿಶ್ವರೂಪದ ಮಹಿಮೆಯನ್ನು ಹೇಳಿದ್ದು

(ಭಾಷ್ಯ)

೧೬೮. ಅರ್ಜುನಂ ಭೀತಮ್ ಉಪಲಭ್ಯ, ಉಪಸಂಹೃತ್ಯ ವಿಶ್ವರೂಪಂ ಪ್ರಿಯವಚನೇನ ಆಶ್ವಾಸಯನ್ ಶ್ರೀ ಭಗವಾನ್ ಉವಾಚ—

(ಭಾಷ್ಯಾರ್ಥ)

ಅರ್ಜುನನು ಅಂಜಿರುವದನ್ನು ಕಂಡು ವಿಶ್ವರೂಪವನ್ನು ಉಪಸಂಹಾರಮಾಡಿಕೊಂಡು ಒಳ್ಳೆಯ ಮಾತಿನಿಂದ (ಅವನನ್ನು) ಸಮಾಧಾನಗೊಳಿಸುತ್ತಾ ಶ್ರೀ ಭಗವಂತನು ಇಂತೆಂದನು :—

ಶ್ರೀ ಭಗವಾನ್ ಉವಾಚ—

ಮಯಾ ಪ್ರಸನ್ನೇನ ತವಾರ್ಜುನೇನ
ರೂಪಂ ಪರಂ ದರ್ಶಿತಮಾತ್ಮಯೋಗಾತ್ ।
ತೇಜೋಮಯಂ ವಿಶ್ವಮನನ್ತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭ ॥

೪೭. ಶ್ರೀ ಭಗವಂತನು ಇಂತೆಂದನು : ಅರ್ಜುನನೆ, ಪ್ರಸನ್ನನಾದ ನನ್ನಿಂದ ತೇಜೋಮಯವಾಗಿಯೂ ಅನಂತವಾಗಿಯೂ ಆದ್ಯವಾಗಿಯೂ ಇರುವ ಈ ಹೆಚ್ಚಿನ ರೂಪವೆಲ್ಲವೂ ನನ್ನ ಯೋಗದಿಂದ ನಿನಗೆ

ತೋರಿಸಲ್ಪಟ್ಟಿತು. ನನ್ನ ಈ (ರೂಪವು) ನಿನ್ನಹೊರತು ಮತ್ತೊಬ್ಬನು ಹಿಂದೆ (ಎಂದೂ) ಕಂಡದ್ದಿಲ್ಲ.

(ಭಾಷ್ಯ)

೧೬೯. ಮಯಾ ಪ್ರಸನ್ನೇನ ಪ್ರಸಾದೋ ನಾಮ ತ್ವಯಿ ಅನುಗ್ರಹಬುದ್ಧಿಃ ತದ್ವತಾ ಪ್ರಸನ್ನೇನ ಮಯಾ ತವ ಹೇ ಅರ್ಜುನ ಇದಂ ಪರಂ ರೂಪಂ ವಿಶ್ವರೂಪಂ ದರ್ಶಿತಮ್ ಆತ್ಮಯೋಗಾತ್ ಆತ್ಮನಃ ಐಶ್ವರ್ಯಸ್ಯ ಸಾಮರ್ಥ್ಯಾತ್ । ತೇಜೋಮಯಂ ತೇಜಃಪ್ರಾಯಂ ವಿಶ್ವಂ ಸಮಸ್ತಮ್ ಅನನ್ತಮ್ ಅನ್ತರಹಿತಮ್ ಆದೌ ಭವಮ್ ಆದ್ಯಮ್। ಯದ್ ರೂಪಂ ಮೇ ಮಮ ತ್ವದನ್ಯೇನ ತ್ವತ್ತಃ ಅನ್ಯೇನ ಕೇನಚಿತ್ ನ ದೃಷ್ಟಪೂರ್ವಮ್ ॥

(ಭಾಷ್ಯಾರ್ಥ)

ಪ್ರಸನ್ನನಾದ ನನ್ನಿಂದ–ಪ್ರಸಾದ ಎಂದರೆ ನಿನ್ನ ಮೇಲೆ ಅನುಗ್ರಹವನ್ನು ಮಾಡಬೇಕೆಂಬ ಬುದ್ಧಿ, ಅಂಥ(ಪ್ರಸಾದ)ದಿಂದೊಡಗೂಡಿದ ಪ್ರಸನ್ನನಾದ ನನ್ನಿಂದ–ನಿನಗೆ ಎಲೈ ಅರ್ಜುನನೆ, ಈ ಪರ ರೂಪವು ಎಂದರೆ ವಿಶ್ವರೂಪವು ನನ್ನ ಯೋಗದಿಂದ ನನ್ನ ಈಶ್ವರಸಂಬಂಧವಾದ ಸಾಮರ್ಥ್ಯದಿಂದ ತೋರಿಸಲ್ಪಟ್ಟಿತು. ತೇಜೋಮಯವಾಗಿಯೂ ಬೆಳಕೇ ಪ್ರಚುರವಾಗಿರುವದಾಗಿಯೂ, ವಿಶ್ವವಾಗಿಯೂ ಎಂದರೆ ಪೂರ್ಣವಾಗಿಯೂ, ಅನನ್ತವಾಗಿಯೂ ಕೊನೆಯಿಲ್ಲದ್ದಾಗಿಯೂ, ಆದ್ಯವಾಗಿಯೂ (ಸೃಷ್ಟಿಯ) ಆದಿಯಲ್ಲಿ ಇರುವದಾಗಿಯೂ (ಇರುವ ರೂಪವನ್ನು ತೋರಿಸಿರುತ್ತೇನೆ). ಈ (ಮೇ = ಮಮ) ನನ್ನ ರೂಪವನ್ನು ತ್ವದನ್ಯನು ಎಂದರೆ ನಿನ್ನ ಹೊರತು ಮತ್ತೊಬ್ಬನು ಯಾರೂ ಹಿಂದೆ ಕಂಡದ್ದಿಲ್ಲ.

(ಭಾಷ್ಯಾರ್ಥ)

೧೭೦. ಆತ್ಮನೋ ಮಮ ರೂಪದರ್ಶನೇನ ಕೃತಾರ್ಥ ಏವ ತ್ವಂ ಸಂವೃತ್ತಃ ಇತಿ ತತ್[1] ಸ್ತೌತಿ—

(ಭಾಷ್ಯಾರ್ಥ)

ಪರಮಾತ್ಮನಾದ ನನ್ನ ರೂಪವನ್ನು ಕಂಡದ್ದರಿಂದ ನೀನು ಕೃತಾರ್ಥನೇ ಆಗಿರುವೆ ಎಂದು ಅದನ್ನು ಹೊಗಳುತ್ತಿದಾನೆ:—

ನ ವೇದಯಜ್ಞಾಧ್ಯಯನೈರ್ನ ದಾನೈ
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।
ಏವಂರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥

---

1. 'ತತಃ' ಆ। ಗು। ವಾ।

೪೮. ಕುರುಪ್ರವೀರನೆ, ವೇದ, ಯಜ್ಞಾಧ್ಯಯನ-ಇವುಗಳಿಂದ ಲಾಗಲಿ ದಾನಗಳಿಂದಲಾಗಲಿ ಮತ್ತು ಕ್ರಿಯೆಗಳಿಂದಲಾಗಲಿ, ಉಗ್ರವಾದ ತಪಸ್ಸುಗಳಿಂದಲಾಗಲಿ ಈ ರೂಪವುಳ್ಳ ನನ್ನನ್ನು ನೃಲೋಕದಲ್ಲಿ ನಿನ್ನ ಹೊರತು ಮತ್ತೊಬ್ಬನಿಂದ ನೋಡುವದು ಶಕ್ಯವಿಲ್ಲ.

(ಭಾಷ್ಯ)

೧೭೧. ನ ವೇದಯಜ್ಞಾಧ್ಯಯನೈಃ ಚತುರ್ಣಾಮಪಿ ವೇದಾನಾಮ್ ಅಧ್ಯಯನೈಃ ಯಥಾವತ್ ಯಜ್ಞಾಧ್ಯಯನೈಶ್ಚ । ವೇದಾಧ್ಯಯನೈರೇವ ಯಜ್ಞಾಧ್ಯಯನಸ್ಯ ಸಿದ್ಧತ್ವಾತ್ ಪೃಥಕ್ ಯಜ್ಞಾಧ್ಯಯನಗ್ರಹಣಂ ಯಜ್ಞವಿಜ್ಞಾನೋಪಲಕ್ಷಣಾರ್ಥಮ್ । ತಥಾ ನ ದಾನೈಃ ತುಲಾಪುರುಷಾದಿಭಿಃ[1] । ನ ಚ ಕ್ರಿಯಾಭಿಃ ಅಗ್ನಿಹೋತ್ರಾದಿಭಿಃ ಶ್ರೌತಾದಿಭಿಃ[2] । ನಾಪಿ ತಪೋಭಿಃ ಉಗ್ರೈಃ ಚಾನ್ದ್ರಾಯಣಾದಿಭಿಃ ಉಗ್ರೈಃ ಘೋರೈಃ । ಏವಂರೂಪಃ ಯಥಾದರ್ಶಿತಂ ವಿಶ್ವರೂಪಂ ಯಸ್ಯ ಸೋಽಹಮ್ ಏವಂರೂಪಃ । ನ ಶಕ್ಯಃ ಅಹಂ ನೃಲೋಕೇ ಮನುಷ್ಯಲೋಕೇ ದ್ರಷ್ಟುಂ ತ್ವದನ್ಯೇನ ತ್ವತ್ತೋಽನ್ಯೇನ ಕುರುಪ್ರವೀರ ॥

(ಭಾಷ್ಯಾರ್ಥ)

ಕುರುಪ್ರವೀರನೆ, ವೇದದಯಜ್ಞಾಧ್ಯಯನಗಳಿಂದ (ಶಕ್ಯ)ವಿಲ್ಲ. ನಾಲ್ಕು ವೇದಗಳ ಅಧ್ಯಯನಗಳಿಂದ ಅವನ್ನು ಸರಿಯಾಗಿ[3] ಅಧ್ಯಯನಮಾಡುವದರಿಂದ, ಮತ್ತು ಯಜ್ಞಾಧ್ಯಯನಗಳಿಂದ (ಊ ಶಕ್ಯವಿಲ್ಲ) ವೇದಾಧ್ಯಯನಗಳನ್ನು ಮಾಡಿದ್ದರಿಂದಲೇ ಯಜ್ಞಾಧ್ಯಯನವೂ ಆಗಿಹೋಗಿರುವದರಿಂದ ಮತ್ತೆ ಯಜ್ಞಾಧ್ಯಯನವನ್ನು ಬೇರೆಯಾಗಿ ಹೇಳಿರುವದು ಯಜ್ಞಗಳ ತಿಳಿವಳಿಕೆಯನ್ನೂ (ಸೇರಿಸಿಕೊಳ್ಳುವದಕ್ಕೆ) ಉಪಲಕ್ಷಣವಾಗಿರಲೆಂದು. ಮತ್ತು ತುಲಾಪುರುಷವೇ[4] ಮುಂತಾದ ದಾನಗಳಿಂದಲೂ (ಶಕ್ಯ)ವಿಲ್ಲ. ಅಗ್ನಿಹೋತ್ರವೇ ಮುಂತಾದ ಶ್ರೌತಾದಿಕರ್ಮಗಳಿಂದಲೂ (ಶಕ್ಯ)ವಿಲ್ಲ. ಉಗ್ರವಾದ ತಪಸ್ಸುಗಳಿಂದಲೂ ಉಗ್ರವಾದ[5] ಎಂದರೆ ಘೋರವಾದ ಚಾಂದ್ರಾಯಣವೇ ಮುಂತಾದವುಗಳಿಂದಲೂ (ಶಕ್ಯ)ವಿಲ್ಲ. (ಈ ಯಾವದರಿಂದಲೂ) ಏವಂರೂಪನಾದ-(ನಿನಗೆ) ತೋರಿಸಿರುವಂಥ ವಿಶ್ವರೂಪವು ನನಗೆ ಇರುವದರಿಂದ ಅಂಥ

1. ಮ॥ ಮೈ॥ ಗಳಲ್ಲಿಲ್ಲ.
2. 'ಅಗ್ನಿಹೋತ್ರಾದಿಶ್ರೌತಾದಿಭಿಃ' ಮ। ಮೈ।
3. ಸಾಂಗವಾಗಿ ನಿಯಮದಿಂದ ಗುರುಮೂಲಕವಾಗಿ.
4. ತನ್ನ ಭಾರದ ಚಿನ್ನವನ್ನು ಕೊಡುವ ದಾನ
5. 'ಉಗ್ರೈಃ' ಎಂಬುದಿಲ್ಲದ ಮೈ। ಮುಂತಾದ ಪಾಠಗಳಲ್ಲಿ ಈ ಮಾತು ಬೇಕಿಲ್ಲ.

ನಾನು ಏವಂರೂಪನು. (ಈ ರೂಪನಾದ) ನನ್ನನ್ನು ನೃಲೋಕದಲ್ಲಿ ಮನುಷ್ಯ ಲೋಕದಲ್ಲಿ ನಿನ್ನ ಹೊರತು ಮತ್ತೊಬ್ಬನಿಂದ ನಿನ್ನನ್ನುಳಿದು ಬೇರೊಬ್ಬನಿಂದ ನೋಡುವದಕ್ಕೆ ಶಕ್ಯವಿಲ್ಲ.

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥**

೪೯. ಘೋರವಾಗಿರುವ ಇಂಥ ನನ್ನ ಈ ರೂಪವನ್ನು ಕಂಡು ನಿನಗೆ ವ್ಯಥೆಯಾಗದಿರಲಿ, ವಿಮೂಢಭಾವವೂ ಆಗದಿರಲಿ! ಅಂಜಿಕೆಯನ್ನುಳಿದು ಪ್ರೀತಮನಸ್ಸಿನವನಾಗಿ ಮತ್ತೂ ನೀನು ಅದೇ ನನ್ನ ಈ ರೂಪವನ್ನು ನೋಡು.

(ಭಾಷ್ಯ)

೧೭೨. ಮಾ ತೇ ವ್ಯಥಾ ಮಾ ಭೂತ್ ತೇ ಭಯಮ್ । ಮಾ ಚ ವಿಮೂಢಭಾವಃ ವಿಮೂಢಚಿತ್ತತಾ । ದೃಷ್ಟ್ವಾ ಉಪಲಭ್ಯ ರೂಪಂ ಘೋರಮ್ ಈದೃಕ್ ಯಥಾದರ್ಶಿತಂ ಮಮ ಇದಮ್ । ವ್ಯಪೇತಭೀಃ ವಿಗತಭಯಃ[1] ಪ್ರೀತಮನಾಶ್ಚ ಸನ್ ಪುನಃ ಭೂಯಃ ತ್ವಂ ತದೇವ ಚತುರ್ಭುಜಂ ರೂಪಂ ಶಙ್ಖಚಕ್ರಗದಾಧರಂ ತವ ಇಷ್ಟಂ ರೂಪಮ್ ಇದಂ ಪ್ರಪಶ್ಯ ॥

(ಭಾಷ್ಯಾರ್ಥ)

ಇಂಥ (ನಾನು) ತೋರಿಸಿದೆನಲ್ಲ, ಅಂಥ ನನ್ನ ಈ ಘೋರವಾದ ರೂಪವನ್ನು ಕಂಡು ನೋಡಿ ನಿನಗೆ ವ್ಯಥೆ ಬೇಡ, ನಿನಗೆ ಅಂಜಿಕೆಯಾಗದಿರಲಿ! ವಿಮೂಢಭಾವವೂ ಆಗದಿರಲಿ; ಚಿತ್ತದಲ್ಲಿ ವಿಮೋಹವೂ (ಆಗ)ದಿರಲಿ! ಅಂಜಿಕೆಯನ್ನುಳಿದು ಹೆದರಿಕೆಯನ್ನು ಬಿಟ್ಟು ಪ್ರೀತಿಯನ್ನು ಹೊಂದಿದ ಮನಸ್ಸುಳ್ಳವನೂ ಆಗಿ ಮತ್ತೂ ಇನ್ನೊಮ್ಮೆ ನೀನು ಅದೇ ನಾಲ್ಕು ತೋಳಿನ ಶಂಖಚಕ್ರಗದೆಗಳನ್ನು ಧರಿಸಿರುವ, ನಿನಗೆ ಇಷ್ಟವಾದ, ಈ ರೂಪವನ್ನು ನೋಡು.

---

1. 'ವಿಗತಭೀಃ ವಿಗತಭಯಃ' ಮ॥ವ್ಯೆ॥

**ಸಞ್ಜಯ ಉವಾಚ—**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥**

೫೦. ಸಂಜಯನಿಂತೆಂದನು :—ಹೀಗೆ ಅರ್ಜುನನನ್ನು ಕುರಿತು ವಾಸುದೇವನು ಹಾಗೆಂದು ಹೇಳಿ ಮತ್ತೂ ತನ್ನ ರೂಪವನ್ನೇ ತೋರಿಸಿದನು. ಮತ್ತು ಅಂಜಿಕೊಂಡಿರುವ ಈ (ಅರ್ಜುನನನ್ನು ಆ) ಮಹಾತ್ಮನು ಮತ್ತೆ ಸೌಮ್ಯವಪುವಾಗಿ ಸಂತೈಸಿದನು.

(ಭಾಷ್ಯ)

೧೬೩. ಇತಿ ಏವಮ್ ಅರ್ಜುನಂ ವಾಸುದೇವಃ ತಥಾಭೂತಂ[1] ವಚನಮ್ ಉಕ್ತ್ವಾ ಸ್ವಕಂ ವಸುದೇವಗೃಹೇ ಜಾತಂ ರೂಪಂ ದರ್ಶಯಾಮಾಸ ದರ್ಶಿತವಾನ್ ಭೂಯಃ ಪುನಃ ಆಶ್ವಾಸಯಾಮಾಸ ಚ ಆಶ್ವಾಸಿತವಾಂಶ್ಚ ಭೀತಮ್ ಏವಂ ಭೂತ್ವಾ ಪುನಃ ಸೌಮ್ಯವಪುಃ ಪ್ರಸನ್ನದೇಹಃ ಮಹಾತ್ಮಾ ॥

(ಭಾಷ್ಯಾರ್ಥ)

ಹೀಗೆ ಈ ರೀತಿಯಲ್ಲಿ ಅರ್ಜುನನನ್ನು ಕುರಿತು ವಾಸುದೇವನು ಆ ಬಗೆಯ ಮಾತನ್ನು ಹೇಳಿ ತನ್ನ ವಸುದೇವನ ಮನೆಯಲ್ಲಿ ಹುಟ್ಟಿದ[2] ರೂಪವನ್ನು ಮತ್ತೆ ಇನ್ನೊಮ್ಮೆ ತೋರಿಸಿದನು ತೋರಿಸಿದವನಾದನು. ಮತ್ತು ಅಂಜಿಕೊಂಡಿರುವ ಈ (ಅರ್ಜುನನನ್ನು) ಮತ್ತೆ ಸೌಮ್ಯವಪುವಾಗಿ ಪ್ರಸನ್ನವಾದ ದೇಹವುಳ್ಳವನಾಗಿ (ಆ) ಮಹಾತ್ಮನು ಸಂತೈಸಿದನು, ಸಮಾಧಾನಗೊಳಿಸಿದನು.

**ಅರ್ಜುನ ಉವಾಚ—**

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥**

---

1. ಇಲ್ಲಿ 'ತಥಾ ತಥಾಭೂತಂ' ಎಂದು ಭಾಷ್ಯಕಾರರು ಬರೆದಿದ್ದರೂ ಬರೆದಿರಬಹುದು.

2. ತನ್ನ ಎಂದರೆ ಪರಮಾತ್ಮನಿಗೆ ಗೊತ್ತಾಗಿರುವ ರೂಪವೆಂದರ್ಥವಲ್ಲ; ಮುಂದಿನ ಶ್ಲೋಕವನ್ನು ನೋಡಿ.

೫೧. ಅರ್ಜುನನಿಂತೆಂದನು :—ಜನಾರ್ದನನೆ, ಈ ನಿನ್ನ ಮಾನುಷವಾದ ಸೌಮ್ಯರೂಪವನ್ನು ಕಂಡು, ಈಗ ಸಚೇತನಾಗಿ ಪ್ರಕೃತಿಯನ್ನು ಹೊಂದಿದವನಾಗಿರುವೆನು.

(ಭಾಷ್ಯ)

೧೭೪. ದೃಷ್ಟ್ವಾ ಇದಂ ಮಾನುಷಂ ರೂಪಂ ಮತ್ಸಖಂ ಪ್ರಸನ್ನಂ ತವ ಸೌಮ್ಯಂ ಜನಾರ್ದನ ಇದಾನೀಮ್ ಅಧುನಾ ಅಸ್ಮಿ ಸಂವೃತ್ತಃ ಸಞ್ಜಾತಃ । ಕಿಮ್? ಸಚೇತಾಃ ಪ್ರಸನ್ನ ಚಿತ್ತಃ ಪ್ರಕೃತಿಂ ಸ್ವಭಾವಂ ಗತಶ್ಚ ಅಸ್ಮಿ ॥

(ಭಾಷ್ಯಾರ್ಥ)

ನನ್ನ ಗೆಳೆಯನಾದ ನಿನ್ನ ಸೌಮ್ಯವಾದ ಪ್ರಸನ್ನವಾದ ಈ ಮನುಷ್ಯರೂಪವನ್ನು ಕಂಡು, ಎಲೈ ಜನಾರ್ದನನೆ, ಈಗ ಆದವನಾಗಿರುವೆನು, ಹೀಗಾಗಿರುವೆನು. ಏನು (ಆಗಿರುವೆ ?) ಎಂದರೆ ಸಚೇತನಾಗಿ ಪ್ರಸನ್ನ ಚಿತ್ತನೂ ಪ್ರಕೃತಿಯನ್ನು ಸ್ವಭಾವವನ್ನು ಹೊಂದಿದವನೂ ಆಗಿರುವೆನು.

## ವಿಶ್ವರೂಪದರ್ಶನಕ್ಕೆ ಭಕ್ತಿಯೇ ಸಾಧನ

**ಶ್ರೀ ಭಗವಾನ್ ಉವಾಚ—**

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಙ್ಕ್ಷಿಣಃ ॥ ೫೨ ॥**

೫೨. ಶ್ರೀ ಭಗವಂತನಿಂತೆಂದನು :- ಸುದುರ್ದರ್ಶವಾದ ಈ ನನ್ನ ರೂಪವನ್ನು ಯಾವದನ್ನು ನೋಡಿರುವೆಯೋ ಈ ರೂಪವನ್ನು ದೇವತೆಗಳು ಕೂಡ ನಿತ್ಯವೂ ಕಾಣಬೇಕೆಂದು ತವಕಪಡುತ್ತಿರುವರು.

(ಭಾಷ್ಯ)

೧೭೫. ಸುದುರ್ದರ್ಶಂ ಸುಷ್ಠು ದುಃಖೇನ ದರ್ಶನಮ್ ಅಸ್ಯ ಇತಿ ಸುದುರ್ದರ್ಶಮ್ ಇದಂ ರೂಪಂ ದೃಷ್ಟವಾನ್ ಅಸಿ ಯತ್ ಮಮ ದೇವಾಃ ಅಪಿ ಅಸ್ಯ ಮಮ ರೂಪಸ್ಯ ನಿತ್ಯಂ ಸರ್ವದಾ ದರ್ಶನಕಾಙ್ಕ್ಷಿಣಃ । ದರ್ಶನೇಪ್ಸವೋಽಪಿ ನ ತ್ವಮಿವ ದೃಷ್ಟವನ್ತಃ ನ ದ್ರಕ್ಷ್ಯನ್ತಿ ಚ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಸುದುರ್ದರ್ಶವಾದ ಬಲು ಕಷ್ಟದಿಂದ (ಮಾತ್ರ) ಕಾಣಬಹುದಾಗಿರುವ ಈ ಯಾವ ನನ್ನ ರೂಪವನ್ನು ಕಂಡಿರುವೆಯೋ ಈ ನನ್ನ ರೂಪವನ್ನು ದೇವತೆಗಳು

ಕೂಡ ನಿತ್ಯವೂ ಯಾವಾಗಲೂ ಕಾಣಬೇಕೆಂದು ತವಕಪಡುತ್ತಿರುವರು. ಹೀಗೆ ನೋಡಬೇಕೆಂದು ಬಯಸುತ್ತಿದ್ದರೂ ನಿನ್ನಂತೆ (ಅವರು ಅದನ್ನು) ಕಂಡಿರುವದಿಲ್ಲ, ಕಾಣುವದೂ ಇಲ್ಲ ಎಂದಭಿಪ್ರಾಯ.

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩ ॥**

೫೩. ನನ್ನನ್ನು (ನೀನು) ಹೇಗೆ ನೋಡಿರುವೆಯೋ, ಈ ರೀತಿಯಲ್ಲಿ ನಾನು ವೇದಗಳಿಂದ ನೋಡಲು ಶಕ್ಯನಲ್ಲ, ತಪಸ್ಸಿನಿಂದ (ಶಕ್ಯ)ನಲ್ಲ, ದಾನದಿಂದ (ಶಕ್ಯ)ನಲ್ಲ, ಇಜ್ಯೆಯಿಂದಲೂ (ಶಕ್ಯ)ನಲ್ಲ.

(ಭಾಷ್ಯ)

೧೭೬. ಕಸ್ಮಾತ್? ನಾಹಂ ವೇದೈಃ ಋಗ್ಯಜುಃಸಾಮಾಥರ್ವವೇದೈಃ ಚತುರ್ಭಿರಪಿ, ನ ತಪಸಾ ಉಗ್ರೇಣ ಚಾನ್ದ್ರಾಯಣಾದಿನಾ, ನ ದಾನೇನ ಗೋಭೂಹಿರಣ್ಯಾದಿನಾ, ನ ಚ ಇಜ್ಯಯಾ ಯಜ್ಞೇನ ಪೂಜಯಾ ವಾ ಶಕ್ಯಃ[1] ಏವಂವಿಧಃ ಯಥಾದರ್ಶಿತಪ್ರಕಾರಃ ದ್ರಷ್ಟುಂ ದೃಷ್ಟವಾನ್ ಅಸಿ ಮಾಂ ಯಥಾ ತ್ವಮ್ ॥

(ಭಾಷ್ಯಾರ್ಥ)

ಏಕೆಂದರೆ, ನಾನು ಋಕ್ಕು, ಯಜುಸ್ಸು, ಸಾಮ, ಅಥರ್ವ-(ಎಂಬ) ನಾಲ್ಕು ವೇದಗಳಿಂದಲೂ (ಹೀಗೆ ನೋಡಲು ಶಕ್ಯ)ನಲ್ಲ. ಉಗ್ರವಾದ ಚಾಂದ್ರಾಯಣವೇ ಮುಂತಾದ ತಪಸ್ಸಿನಿಂದ (ಶಕ್ಯ)ನಲ್ಲ. ಗೋಭೂಹಿರಣ್ಯವೇ ಮುಂತಾದ ದಾನದಿಂದಲೂ (ಶಕ್ಯ)ನಲ್ಲ. ಇಜ್ಯೆಯಿಂದಲೂ ಎಂದರೆ ಯಜ್ಞದಿಂದಲೂ ಅಥವಾ ಪೂಜೆಯಿಂದಲೂ ಈರೀತಿಯಲ್ಲಿ (ನಾನು ನಿನಗೆ) ತೋರಿಸಿರುವ ಪ್ರಕಾರದಿಂದ, ನೀನು ನನ್ನನ್ನು ಹೇಗೆ ನೋಡಿರುವೆಯೋ (ಹಾಗೆ) ನೋಡುವದಕ್ಕೆ ಶಕ್ಯನಲ್ಲ.

(ಭಾಷ್ಯ)

೧೭೭. ಕಥಂ ಪುನಃ ಶಕ್ಯಃ ಇತಿ? ಉಚ್ಯತೇ

(ಭಾಷ್ಯಾರ್ಥ)

ಮತ್ತೆ ಹೇಗೆ (ನೋಡುವದಕ್ಕೆ) ಶಕ್ಯನು? ಎಂದರೆ ಹೇಳುತ್ತಾನೆ :—

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೫೪ ॥**

---

1. ಇಲ್ಲಿಯವರೆಗೆ ಮು॥ ಮೈ॥ ಗಳಲ್ಲಿ ಮೂಲಮಾತ್ರವಿದೆ, ಭಾಷ್ಯ ಬೇರೆಯಿಲ್ಲ.

೫೪. ಆದರೆ ಪರಂತಪನಾದ ಅರ್ಜುನನೆ, ಅನನ್ಯವಾದ ಭಕ್ತಿಯಿಂದ ಈ ವಿಧನಾದ ನಾನು ತತ್ತ್ವದಿಂದ ಅರಿತುಕೊಳ್ಳುವದಕ್ಕೂ ಕಾಣುವದಕ್ಕೂ ಸೇರಿಕೊಳ್ಳುವದಕ್ಕೂ ಶಕ್ಯನು.

(ಭಾಷ್ಯ)

೧೭೮. ಭಕ್ತ್ಯಾ ತು ಕಿಂವಿಶಿಷ್ಟಯಾ ಇತಿ? ಆಹ–ಅನನ್ಯಯಾ ಅಪೃಥಗ್ಭೂತಯಾ ಭಗವತಃ ಅನ್ಯತ್ರ ಪೃಥಕ್ ನ ಕದಾಚಿದಪಿ ಯಾ ಭವತಿ ಸಾ ತು ಅನನ್ಯಾ ಭಕ್ತಿಃ, ಸರ್ವೈರಪಿ ಕರಣೈಃ ವಾಸುದೇವಾತ್ ಅನ್ಯತ್ ನೋಪಲಭ್ಯತೇ ಯಯಾ ಸಾ ಅನನ್ಯಾ ಭಕ್ತಿಃ ! ತಯಾ ಭಕ್ತ್ಯಾ ಶಕ್ಯಃ ಅಹಮ್ ಏವಂವಿಧಃ ವಿಶ್ವರೂಪಪ್ರಕಾರಃ, ಹೇ ಅರ್ಜುನ, ಜ್ಞಾತುಂ ಶಾಸ್ತ್ರತಃ, ನ ಕೇವಲಂ ಜ್ಞಾತುಂ ಶಾಸ್ತ್ರತಃ ದ್ರಷ್ಟುಂ ಚ ಸಾಕ್ಷಾತ್ಕರ್ತುಂ ತತ್ತ್ವೇನ ತತ್ತ್ವತಃ ಪ್ರವೇಷ್ಟುಂ ಚ ಮೋಕ್ಷಂ ಚ ಗನ್ತುಂ ಪರಂತಪ ||

(ಭಾಷ್ಯಾರ್ಥ)

ಆದರೆ, ಎಲೈ ಅರ್ಜುನನೆ, ಭಕ್ತಿಯಿಂದ–ಎಂಥ ಭಕ್ತಿಯಿಂದ ? ಎಂದರೆ ಹೇಳುತ್ತಾನೆ. **ಅನನ್ಯವಾದ ಅಪೃಥಗ್ಭೂತವಾದ ಭಗವಂತನಿಗಿಂತ ಬೇರೆಯಾಗಿ ಏತರಲ್ಲಿಯೂ ಯಾವದು ಎಂದಿಗೂ ಇರುವದಿಲ್ಲವೋ ಅದು ಅನನ್ಯಭಕ್ತಿಯು. ಎಲ್ಲಾ ಕರಣಗಳಿಂದಲೂ ವಾಸುದೇವನಿಗಿಂತ (ಬೇರೆ) ಇನ್ನೊಂದು (ಯಾವದೂ) ಯಾವದಕ್ಕೆ ಕಾಣಿಸುವದಿಲ್ಲವೋ ಅದು ಅನನ್ಯಭಕ್ತಿಯು.**[1] ಆ ಭಕ್ತಿಯಿಂದ–ಈ ವಿಧನಾದ ವಿಶ್ವರೂಪವೆಂಬ ಪ್ರಕಾರವುಳ್ಳ ನಾನು **ಶಾಸ್ತ್ರದಿಂದ, ತತ್ತ್ವದಿಂದ ಇದ್ದಂತೆ, ಅರಿತುಕೊಳ್ಳುವದಕ್ಕೂ; ಶಾಸ್ತ್ರದಿಂದ ಸುಮ್ಮನೆ ಅರಿತುಕೊಳ್ಳುವದಕ್ಕೇ ಅಲ್ಲ, ಕಂಡುಕೊಳ್ಳುವದಕ್ಕೂ ಎಂದರೆ ಸಾಕ್ಷಾತ್ಕಾರಮಾಡಿಕೊಳ್ಳುವದಕ್ಕೂ ಮತ್ತು ಸೇರಿಕೊಳ್ಳುವದಕ್ಕೂ ಎಂದರೆ ಮೋಕ್ಷವನ್ನು ಹೊಂದುವದಕ್ಕೂ, ಎಲೈ ಪರಂತಪನೆ, ಶಕ್ಯ(ನಾಗುವೆ)ನು.**[2]

(ಭಾಷ್ಯ)

೧೭೯ ಅಧುನಾ ಸರ್ವಸ್ಯ ಗೀತಾಶಾಸ್ತ್ರಸ್ಯ ಸಾರಭೂತಃ ಅರ್ಥಃ ನಿಃಶ್ರೇಯಸಾರ್ಥಃ ಅನುಷ್ಠೇಯತ್ವೇನ ಸಮುಚ್ಚಿತ್ಯ ಉಚ್ಯತೇ –

---

1. ಭಗವಂತನನ್ನೇ ಕಾಣುತ್ತಾ ಅವನನ್ನೇ ಸೇರಬೇಕೆಂಬ ಹಂಬಲು ಅನನ್ಯಭಕ್ತಿಯು.

2. ಅನನ್ಯಭಕ್ತಿಗೆ ಭಗವಂತನು ಎಲ್ಲೆಲ್ಲಿಯೂ ಇರುವನೆಂಬ ಶಾಸ್ತ್ರದ ಪೂರ್ಣಾರ್ಥವು ತಿಳಿಯುವದು, ಆ ಭಕ್ತಿಯಿಂದಲೇ ಆತನನ್ನು ಉಪಾಸನೆಮಾಡಿ ಸಾಕ್ಷಾತ್ಕಾರಮಾಡಿಕೊಳ್ಳಬಹುದು, ಸಾಕ್ಷಾತ್ಕಾರವಾದಮೇಲೆ ಭಗವಂತನ ಸಾಯುಜ್ಯವು ದೊರಕುವದಂತೂ ಖಂಡಿತ.

(ಭಾಷ್ಯಾರ್ಥ)

**ಈಗ ಗೀತಾಶಾಸ್ತ್ರದಲ್ಲೆಲ್ಲ ಸಾರವಾಗಿರುವ ಅರ್ಥವನ್ನು ನಿಃಶ್ರೇಯಸ ವೆಂಬ ಪ್ರಯೋಜನಕ್ಕಾಗಿ ಅನುಷ್ಠಾನಮಾಡಬೇಕೆಂದು (ಇಲ್ಲಿ) ಒಕ್ಕಡೆಗೆ ಸೇರಿಸಿ [1] (ಅದನ್ನು ಭಗವಂತನು) ಹೇಳುತ್ತಾನೆ :—**

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ॥ ೫೫ ॥**

೫೫. ಎಲೈ ಪಾಂಡವನೆ, ಮತ್ಕರ್ಮಕೃತ್ತಾಗಿ, ಮತ್ಪರಮನಾಗಿ, ಮದ್ಭಕ್ತನಾಗಿ ಸಂಗವರ್ಜಿತನಾಗಿ ಎಲ್ಲಾ ಭೂತಗಳಲ್ಲಿಯೂ ನಿರ್ವೈರನಾಗಿರುವವನು ಯಾವನೋ ಅವನು ನನ್ನನ್ನು (ಬಂದು) ಸೇರುತ್ತಾನೆ.

(ಭಾಷ್ಯ)

೧೮೦. ಮತ್ಕರ್ಮಕೃತ್ ಮದರ್ಥಂ ಕರ್ಮ ಮತ್ಕರ್ಮ ತತ್ ಕರೋತಿ ಇತಿ ಮತ್ಕರ್ಮಕೃತ್ । ಮತ್ಪರಮಃ । ಕರೋತಿ ಭೃತ್ಯಃ ಸ್ವಾಮಿಕರ್ಮ [2] ನ ತು ಆತ್ಮನಃ ಪರಮಾ ಪ್ರೇತ್ಯ ಗನ್ತವ್ಯಾ ಗತಿಃ ಇತಿ ಸ್ವಾಮಿನಂ ಪ್ರತಿಪದ್ಯತೇ । ಅಯಂ ತು ಮತ್ಕರ್ಮಕೃತ್ । ಮಾಮೇವ ಪರಮಾಂ ಗತಿಂ ಪ್ರತಿಪದ್ಯತೇ ಇತಿ ಮತ್ಪರಮಃ । ಅಹಂ ಪರಮಃ ಪರಾಗತಿಃ ಯಸ್ಯ ಸೋಽಯಂ ಮತ್ಪರಮಃ । ತಥಾ ಮದ್ಭಕ್ತಃ । ಮಾಮೇವ ಸರ್ವಪ್ರಕಾರೈಃ ಸರ್ವಾತ್ಮನಾ ಸರ್ವೋತ್ಸಾಹೇನ ಭಜತೇ ಇತಿ ಮದ್ಭಕ್ತಃ । ಸಙ್ಗವರ್ಜಿತಃ ಧನಪುತ್ರಮಿತ್ರಕಲತ್ರಬನ್ಧುವರ್ಗೇಷು [3] ಸಙ್ಗವರ್ಜಿತಃ । ಸಙ್ಗಃ ಪ್ರೀತಿಃ ಸ್ನೇಹಃ ತದ್ವರ್ಜಿತಃ [4] ನಿರ್ವೈರಃ ನಿರ್ಗತವೈರಃ ಸರ್ವಭೂತೇಷು ಶತ್ರುಭಾವರಹಿತಃ ಆತ್ಮನಃ ಅತ್ಯನ್ತಾಪಕಾರಪ್ರವೃತ್ತೇಷ್ವಪಿ [5] । ಯ ಈದೃಶಃ ಮದ್ಭಕ್ತಃ ಸ ಮಾಮ್ ಏತಿ। ಅಹಮೇವ ತಸ್ಯ ಪರಾ ಗತಿಃ ನಾನ್ಯಾ ಗತಿಃ ಕಿಂಚಿತ್ [6] ಭವತಿ । ಅಯಂ ತವ ಉಪದೇಶಃ ಇಷ್ಟಃ [7] ಮಯಾ ಉಪದಿಷ್ಟಃ ಹೇ ಪಾಣ್ಡವ ಇತಿ ॥

---

1. ಗೀತಾಶಾಸ್ತ್ರದಲ್ಲಿ ಹೇಳಿರುವ ಸಾಧನವೆಲ್ಲ ಭಗವಂತನನ್ನು ಶರಣುಹೊಗುವದೆಂಬದರಲ್ಲಿಯೇ ಅಡಕವಾಗಿದೆ ; ಎಲ್ಲಾ ಸಾಧನಕ್ಕೂ ಭಗವಂತನೇ ಗುರಿ.
2. 'ಸ್ವಾಮಿನಃ ಕರ್ಮ' ಮ॥
3. 'ಬನ್ಧುಭೋಗೇಷು' ಮ॥ವ್ಯಾ॥; 'ಮಿತ್ರಪುತ್ರ' ನಿ॥
4. 'ಸಙ್ಗವರ್ಜಿತಃ ಪ್ರೀತಿಸ್ನೇಹವರ್ಜಿತಃ' ಮ॥ವ್ಯಾ॥
5. 'ಪ್ರವೃತ್ತೇಷ್ವಪಿ ಶತ್ರುಭಾವರಹಿತ ಇತ್ಯೇತತ್' ಮ॥
6. 'ಕದಾಚಿತ್' ನಿ॥
7. ಮ॥ವ್ಯಾ॥ಗಳಲ್ಲಿಲ್ಲ.

(ಭಾಷ್ಯಾರ್ಥ)

ಎಲೈ ಪಾಂಡವನೆ, ಮತ್ಕರ್ಮಕೃತ್ತಾಗಿ ನನಗಾಗಿ (ಮಾಡುವ) ಕರ್ಮವು ಮತ್ಕರ್ಮವು; ಅದನ್ನು ಮಾಡುವದರಿಂದ **ಮತ್ಕರ್ಮಕೃತ್ತು** (ಎನಿಸುವನು). **ಮತ್ಪರಮ**ನಾಗಿ; ಆಳು ಧಣಿಯ ಕರ್ಮವನ್ನು ಮಾಡುತ್ತಾನಾದರೂ ಧಣಿಯೇ ತಾನು ಸತ್ತಬಳಿಕ ಸೇರಬೇಕಾದ ಪರಮಗತಿ ಎಂದು (ಎಂದಿಗೂ) ಎಣಿಸಿರುವದಿಲ್ಲ. ಆದರೆ ಇವನೋ ಎಂದರೆ ನನಗಾಗಿ ಕರ್ಮವನ್ನು ಮಾಡುವದಲ್ಲದೆ ನನ್ನನ್ನೇ ಪರಮ ಗತಿ ಎಂದು ತಿಳಿದಿರುತ್ತಾನೆ. ಆದ್ದರಿಂದ ಮತ್ಪರಮನು. ನಾನು ಪರಮನು ಎಂದರೆ ಹೆಚ್ಚಿನ ಗತಿಯು ಯಾವನಿಗೋ ಅಂಥವನಾದ್ದರಿಂದ ಇವನು **ಮತ್ಪರಮನು.** ಮತ್ತು **ನನ್ನ ಭಕ್ತನು**. ನನ್ನನ್ನೇ ಎಲ್ಲಾ ಪ್ರಕಾರಗಳಿಂದಲೂ ಸಂಪೂರ್ಣ ಮನಸ್ಸಿನಿಂದ ಸರ್ವೋತ್ಸಾಹದಿಂದಲೂ ಭಜಿಸುತ್ತಿರುವನಾದ್ದರಿಂದ ಮದ್ಭಕ್ತನು. **ಸಂಗವರ್ಜಿತನು:** ಧನ, ಮಕ್ಕಳು, ಸ್ನೇಹಿತರು, ಹೆಂಡತಿ, ನೆಂಟರ ಬಳಗ-ಇವರಲ್ಲಿ ಸಂಗವಿಲ್ಲದವನು; ಸಂಗವೆಂದರೆ ಪ್ರೀತಿ, ಸ್ನೇಹ, ಅದಿಲ್ಲದವನು (ಎಂದರ್ಥ). **ನಿರ್ವೈರನು** ಎಂದರೆ ವೈರವಿಲ್ಲದವನು. ಯಾವ ಪ್ರಾಣಿಗಳಲ್ಲಿಯೂ ತನಗೆ ಅತ್ಯಂತವಾಗಿ ಅಪಕಾರವನ್ನು (ಮಾಡುವದಕ್ಕೆ) ಹೊರಟವರಲ್ಲಿಯೂ ಶತ್ರುಭಾವವಿಲ್ಲದೆ ಇರುವವನು. ಯಾವನು ಇಂಥ ನನ್ನ ಭಕ್ತನೋ ಅವನು ನನ್ನನ್ನು ಹೊಂದುತ್ತಾನೆ. ನಾನೇ ಅವನಿಗೆ ಪರಮ ಗತಿಯು, (ಅವನಿಗೆ) ಬೇರೊಂದು ಗತಿಯು ಯಾವದೂ (ಎಂದಿಗೂ) ಆಗುವದಿಲ್ಲ. ಇಗೋ ಇದೇ ನಿನಗೆ ನಾನು ಮಾಡಿರುವ (ನಿನಗೆ) ಬೇಕಾಗಿರುವ ಉಪದೇಶವು.

ಇತಿ ಶ್ರೀಮದ್ಭಗವದ್ಗೀತಾಭಾಷ್ಯೇ ವಿಶ್ವರೂಪದರ್ಶನಂ ನಾಮ
ಏಕಾದಶೋಽಧ್ಯಾಯಃ



# ಹನ್ನೊಂದನೆಯ ಅಧ್ಯಾಯದ ಸಾರ

೧-೪. ಭಗವಂತನು ತನ್ನ ವಿಭೂತಿಗಳನ್ನು ವಿವರಿಸಿ ಜಗತ್ತೆಲ್ಲವೂ ತನ್ನ ಒಂದಂಶವೇ ಎಂದು ಹೇಳಿದ ಮಾತನ್ನು ಕೇಳಿ ಆ ವಿಶ್ವರೂಪವನ್ನು ನೋಡಬೇಕೆಂದು ಅರ್ಜುನನು "ಭಗವಂತ, ನೀನು ಹೇಳಿದಂತೆಯೇ ಇರುವ ನಿನ್ನ ಈಶ್ವರರೂಪವನ್ನು ನೋಡುವದಕ್ಕೆ ನನ್ನಿಂದ ಶಕ್ಯವೆ? ಹಾಗಿದ್ದರೆ ದಯವಿಟ್ಟು ಆ ರೂಪವನ್ನು ನನಗೆ ತೋರಿಸು" ಎಂದು ಬೇಡಿಕೊಂಡನು.

೫-೧೪. ಆಗ ಶ್ರೀಕೃಷ್ಣನು "ಪಾರ್ಥನೆ, ಈ ನನ್ನ ಬಗೆಬಗೆಯ ರೂಪಗಳನ್ನು ನೋಡು. ಆದಿತ್ಯಾದಿದೇವತೆಗಳು ನನ್ನಲ್ಲಿರುವದನ್ನೂ ಇಡಿಯ ಜಗತ್ತೇ ನನ್ನಲ್ಲಿ ಒಂದು ಕಡೆಯಲ್ಲಿರುವದನ್ನೂ ನೋಡು. ಇಗೋ ನಿನಗೆ ದಿವ್ಯದೃಷ್ಟಿಯನ್ನು ಕೊಟ್ಟಿರುವೆನು" ಎಂದು ತನ್ನ ವಿಶ್ವರೂಪವನ್ನು ತೋರಿಸಿದನು. ಲೆಕ್ಕವಿಲ್ಲದಷ್ಟು ಬಾಯಿಗಳೂ, ಕಣ್ಣುಗಳೂ, ಅಚ್ಚರಿಗೊಳಿಸುವಂಥ ನೋಟಗಳೂ ಅರ್ಜುನನಿಗೆ ಕಂಡುಬಂದವು. ವಿಶ್ವರೂಪಧಾರಿಯಾದ ಭಗವಂತನು ಬಗೆಬಗೆಯ ದಿವ್ಯಾಭರಣಗಳನ್ನು ತೊಟ್ಟಿದ್ದನು, ಬಗೆಬಗೆಯ ಆಯುಧಗಳನ್ನು ಹಿಡಿದಿದ್ದನು ದಿವ್ಯವಾದ ವಸ್ತ್ರವನ್ನುಟ್ಟುಕೊಂಡು ಅತ್ಯಂತ ಪರಿಮಳವಾದ ಹೂ ಗಂಧ ಮುಂತಾದವುಗಳಿಂದ ಶೋಭಿತನಾಗಿದ್ದನು. ಅತ್ಯಂತಪ್ರಕಾಶಮಯನಾಗಿದ್ದನು. ಇಡಿಯ ಜಗತ್ತೇ ಆ ದೇವದೇವನ ಶರೀರದಲ್ಲಿ ಕಾಣುತ್ತಿತ್ತು.

೧೪-೩೧. ಆಗ ಅರ್ಜುನನು ಬ್ರಹ್ಮಾದಿದೇವತೆಗಳೂ ಋಷಿಗಳೂ ಬೇರೆಬೇರೆಯ ಪ್ರಾಣಿಸಂಘಗಳೂ ಭಗವಂತನ ದೇಹದಲ್ಲಿಯೇ ಇರುವದನ್ನೂ ಭಗವಂತನು ತುದಿಮೊದಲು ಕಾಣದಂತೆ ಎಲ್ಲೆಲ್ಲಿಯೂ ವ್ಯಾಪಿಸಿರುವದನ್ನೂ ಯುದ್ಧಮಾಡುತ್ತಿರುವ ವೀರರು ಆತನ ಮುಖದೊಳಗೆ ಹೊಗುತ್ತಿರುವದನ್ನೂ ಆತನು ಅವರನ್ನು ಅಗಿದು ಬಾಯಿಚಪ್ಪರಿಸುತ್ತಿರುವದನ್ನೂ ದೇವತೆಗಳೂ ಸಿದ್ಧರೂ ಅಂಜಿಕೆಯಿಂದ ನಡುಗುತ್ತಾ ಆತನನ್ನು ಸ್ತುತಿಸುತ್ತಿರುವದನ್ನೂ ಆತನ ಭೀಕರವಾದ ರೂಪವನ್ನು ಕಂಡು ಲೋಕಕ್ಕೆ ಲೋಕವೇ ತಳಮಳಗೊಳ್ಳುತ್ತಿರುವದನ್ನೂ, ಕಂಡು ಅರ್ಜುನನು ಮನಸ್ಸಿನಲ್ಲಿ ಸಮಾಧಾನವಿಲ್ಲದೆ ದಿಕ್ಕುತೋಚದೆ, ಲೋಕವನ್ನೆಲ್ಲ ಸುಡುತ್ತಿರುವ ಉಗ್ರತೇಜೋಮೂರ್ತಿಯಾದ ಆ ಪರಮೇಶ್ವರನನ್ನು "ಸ್ವಾಮಿ, ನನ್ನಲ್ಲಿ ಪ್ರಸನ್ನನಾಗು. ನೀನು ಯಾರು? ಏತಕ್ಕೆ ಇಲ್ಲಿ ಅವತರಿಸಿರುವೆ? ದಯವಿಟ್ಟು ಹೇಳಬೇಕು" ಎಂದು ಬೇಡಿಕೊಂಡನು.

೩೨-೩೬. ಭಗವಂತನು "ಅರ್ಜುನ, ನಾನು ಈ ಲೋಕವನ್ನು ಲಯಗೊಳಿಸುವದಕ್ಕಾಗಿ ಬಂದಿರುವ ಕಾಲನೆಂದು ತಿಳಿ. ನೀನು ಯುದ್ಧಮಾಡಿದರೂ ಬಿಟ್ಟರೂ ಈ ಶತ್ರುವೀರರು ಯಾರೂ ಉಳಿಯುವ ಹಾಗಿಲ್ಲ. ನೀನು ಯಾವ ದ್ರೋಣ, ಭೀಷ್ಮ, ಜಯದ್ರಥ, ಕರ್ಣ—ಮೊದಲಾದವರಿಗೆ ಅಂಜಿಕೊಂಡಿರುವೆಯೋ ಇವರೆಲ್ಲರೂ ಅಳಿಯಬೇಕೆಂಬುದೇ ನನ್ನ ಸಂಕಲ್ಪವು. ಆದ್ದರಿಂದ ಕಾಲವಶದಿಂದ ಸಾಯಲೇಬೇಕಾಗಿರುವ ಈ ವೀರರನ್ನು ಕೊಲ್ಲುವದಕ್ಕೆ ನಿಮಿತ್ತಮಾತ್ರನಾಗಿ ಕೀರ್ತಿಯನ್ನು ಪಡೆದುಕೊ, ನಿಶ್ಚಿತವಾಗಿಯೂ ನಿನಗೆ ಜಯವಾಗುವದು ಇವ

ರನ್ನು ಗೆದ್ದು ಸುಖವಾಗಿ ರಾಜ್ಯವನ್ನಾಳಿಕೊಂಡಿರು'' ಎಂದು ನುಡಿಯಲು ಅರ್ಜುನನು ಥರಥರನೆ ನಡುಗುತ್ತಾ ಮತ್ತೆಮತ್ತೆ ತಲೆಬಾಗಿ ಭಗವಂತನಿಗೆ ನಮಸ್ಕರಿಸಿ '' ಸರ್ವಾತ್ಮನಾದ ಭಗವಂತನೆ, ನಿನ್ನ ಗುಣಗಳ ಕೀರ್ತನೆಯನ್ನು ಕೇಳಿದ ಮಾತ್ರದಿಂದ ಜಗತ್ತಿಗೆ ಜಗತ್ತೇ ಹರ್ಷದಿಂದ ಉಬ್ಬಿ ನಿನ್ನಲ್ಲಿ ಅನುರಾಗವುಳ್ಳದ್ದಾಗುವದೆಂಬುದು ಯುಕ್ತವೇ; ರಕ್ಕಸರು ನಿನಗೆ ಹೆದರಿ ಓಡುವದೂ ಸಿದ್ಧರು ನಿನಗೆ ಅಡ್ಡಬೀಳುತ್ತಿರುವದೂ ಯುಕ್ತವೇ. ಏಕೆಂದರೆ ಅಂಥ ಮಹಾಮಹಿಮನು ನೀನು! ನೀನು ಈ ಜಗತ್ತನ್ನು ಸೃಷ್ಟಿಸಿರುವ ಬ್ರಹ್ಮನನ್ನುಕೂಡ ಸೃಷ್ಟಿಸಿದವನು, ದೇವತೆಗಳಿಗೆಲ್ಲ ಒಡೆಯನು, ಜಗತ್ತಿಗೆಲ್ಲ ಆಶ್ರಯನು ನಿಜವಾಗಿ ನೋಡಿದರೆ ನೀನೇ ಇದೆಲ್ಲವನ್ನೂ ಅರಿಯುತ್ತಿರುವವನು. ಅರಿಯಲ್ಪಡತಕ್ಕದ್ದೂ ನೀನೇಹೊರತು ಬೇರೆಯಲ್ಲ; ಮುಕ್ತರು ಪಡೆಯುವ ಉತ್ತಮಸ್ಥಾನವೂ ನೀನೇ. ಸರ್ವದೇವಾತ್ಮಕನೆ, ನಿನಗೆ ನಮಸ್ಕಾರ! ನೀನು ಇಂಥಾ ಮಹಿಮೆಯುಳ್ಳಾತನೆಂದು ಅರಿಯದೆ ನಾನು ಎಚ್ಚರದಪ್ಪಿ ಸ್ನೇಹದ ಸಲಿಗೆಯಿಂದ 'ಎಲೆ ಕೃಷ್ಣ ಎಲೆ ಯಾದವ, ಎಲೆ ಗೆಳೆಯ!' ಎಂದು ಮುಂತಾಗಿ ಕರೆಯುತ್ತಾ ದಿಟ್ಟತನದಿಂದ ನುಡಿದಿರುವದನ್ನೆಲ್ಲ ಮನ್ನಿಸು. ಈ ಲೋಕಕ್ಕೆ ನೀನು ತಂದೆಯು, ಪೂಜ್ಯನು, ಗುರುವು, ನಿನಗೆ ಸಮಾನರೇ ಇಲ್ಲ, ಇನ್ನು ನಿನಗಿಂತ ಹೆಚ್ಚಿನವನು ಯಾವನು, ಎಲ್ಲಿರುವನು? ಇಂಥ ನಿನ್ನಲ್ಲಿ ನಾನು ಮಾಡಿರುವ ಅಪರಾಧವನ್ನೆಲ್ಲ ಕ್ಷಮಿಸಬೇಕು ನಿನ್ನ ಈ ರೂಪವನ್ನು ಉಪಸಂಹಾರಮಾಡಿಕೊಂಡು ಮುನ್ನಿನ ಮಾನುಷರೂಪವನ್ನೇ ತಳೆದು ನನ್ನನ್ನು ಅನುಗ್ರಹಿಸು'' ಎಂದು ಅಂಗಲಾಚಿ ಬೇಡಿಕೊಂಡನು

೪೭—೫೫. ಆಗ ಭಗವಂತನು '' ಅರ್ಜುನನೆ, ನಿನ್ನಮೇಲೆ ಪ್ರಸನ್ನನಾಗಿ ಈ ತೇಜೋಮಯವಾದ ವಿಶ್ವರೂಪವನ್ನು ನನ್ನ ಯೋಗಮಹಿಮೆಯಿಂದ ನಿನಗಾಗಿ ತೋರಿಸಿರುತ್ತೇನೆ. ಹೆದರದಿರು. ಇಗೋ, ನನ್ನ ಮುನ್ನಿನ ರೂಪವನ್ನೇ ನೋಡು!'' ಎಂದು ಸಂತೈಸಿ ಮತ್ತೆ ಇಂತೆಂದನು ' ಪಾಂಡವನೆ, ನಿನಗೆ ತೋರಿಸಿದ ಈ ವಿಶ್ವರೂಪವನ್ನು ನೋಡಬೇಕೆಂದು ದೇವತೆಗಳುಕೂಡ ತವಕಿಸುತ್ತಿರುವರು. ವೇದ, ತಪಸ್ಸು, ದಾನ, ಯಜ್ಞ—ಮುಂತಾದ ಯಾವ ಸಾಧನದಿಂದಲೂ ನನ್ನನ್ನು ಈ ರೂಪದಿಂದ ಕಾಣುವದು ಶಕ್ಯವಲ್ಲ; ಅನನ್ಯಭಕ್ತಿಯೊಂದರಿಂದಲೇ ನನ್ನನ್ನು ಅರಿತುಕೊಂಡು, ಸಾಕ್ಷಾತ್ಕಾರಮಾಡಿಕೊಂಡು ಸೇರುವದು ಸಾಧ್ಯವಾಗುವದು. ಯಾವನು ನನಗಾಗಿಯೇ ಸಕಲ ಕರ್ಮಗಳನ್ನೂ ಮಾಡುತ್ತಾ ನಾನೇ ಗತಿಯೆಂದು ನಂಬಿ ನನ್ನಲ್ಲಿ ಪರಮಪ್ರೇಮವುಳ್ಳವನಾಗಿ ಈ ಲೋಕದ ವಿಷಯಗಳಲ್ಲಿ ಸಂಗವುಳ್ಳವನಾಗದೆ, ಸಮಸ್ತ ಪ್ರಾಣಿಗಳಲ್ಲಿಯೂ ಪ್ರೇಮದಿಂದ ಕೂಡಿರುವನೋ ಅವನೇ ನನ್ನ ಸಾಯುಜ್ಯವನ್ನು ಹೊಂದುವನು'' ಎಂದು ನುಡಿದನು.



# ಹನ್ನೆರಡನೆಯ ಅಧ್ಯಾಯ

## (ಭಕ್ತಿಯೋಗ)

## ಅರ್ಜುನನ ಪ್ರಶ್ನೆ . ಯಾರು ಹೆಚ್ಚಿನ ಯೋಗಿಗಳು ?

(ಭಾಷ್ಯ)

೧೮೧. ದ್ವಿತೀಯಪ್ರಭೃತಿಷು ವಿಭೂತ್ಯನ್ತೇಷು ಅಧ್ಯಾಯೇಷು [1] ಪರಮಾತ್ಮನಃ ಬ್ರಹ್ಮಣಃ ಅಕ್ಷರಸ್ಯ ವಿಧ್ವಸ್ತಸರ್ವೋಪಾಧಿವಿಶೇಷಸ್ಯ [2] ಉಪಾಸನಮ್ ಉಕ್ತಮ್ । ಸರ್ವಯೋಗೈಶ್ವರ್ಯಸರ್ವಜ್ಞಾನಶಕ್ತಿಮತ್ಸತ್ತ್ವೋಪಾಧೇಃ [3] ಈಶ್ವರಸ್ಯ ತವ ಚ ಉಪಾಸನಂ ತತ್ರ ತತ್ರ ಉಕ್ತಮ್ । ವಿಶ್ವರೂಪಾಧ್ಯಾಯೇ ತು ಐಶ್ವರಮ್ ಆದ್ಯಂ ಸಮಸ್ತಜಗದಾತ್ಮರೂಪಂ [4] ವಿಶ್ವರೂಪಂ ತ್ವದೀಯಂ ದರ್ಶಿತಮ್ ಉಪಾಸನಾರ್ಥಮೇವ ತ್ವಯಾ । ತಚ್ಚ ದರ್ಶಯಿತ್ವಾ ಉಕ್ತವಾನ್ ಅಸಿ ' ಮತ್ಕರ್ಮಕೃತ್ ' (೧೧-೫೫) ಇತ್ಯಾದಿ । ಅತಃ ಅಹಮನಯೋಃ [5] ಉಭಯೋಃ ಪಕ್ಷಯೋಃ ವಿಶಿಷ್ಟತರಬುಭುತ್ಸಯಾ ತ್ವಾಂ ಪೃಚ್ಛಾಮಿ ಇತಿ ಅರ್ಜುನ ಉವಾಚ —

(ಭಾಷ್ಯಾರ್ಥ)

ಎರಡನೆಯ (ಅಧ್ಯಾಯದಿಂದ) ಹಿಡಿದು ವಿಭೂತಿ(ಯನ್ನು ತಿಳಿಸುವ ಹತ್ತನೆಯ ಅಧ್ಯಾಯದ)ವರೆಗಿನ ಅಧ್ಯಾಯಗಳಲ್ಲಿ ಯಾವದೊಂದು ಉಪಾಧಿಯೂ ಇಲ್ಲದ ಪರಮಾತ್ಮನಾದ ಅಕ್ಷರವೆಂಬ ಬ್ರಹ್ಮದ ಉಪಾಸನೆಯನ್ನು [6] ಹೇಳಿರುತ್ತದೆ. ಮತ್ತು ಸರ್ವಯೋಗದ ಐಶ್ವರ್ಯದಿಂದಲೂ ಸರ್ವಜ್ಞಾನಶಕ್ತಿಯಿಂದಲೂ ಕೂಡಿದ

---

1. ' ಅಧ್ಯಾಯೇಷು ವಿಭೂತ್ಯನ್ತೇಷು ' ನಿ|| ; ದ್ವಿತೀಯಾಧ್ಯಾಯಪ್ರಭೃತಿಷು.... ಅಧ್ಯಾಯೇಷು ' ಮ||ಪ್ರ||

2. ' ನಿರ್ಧ್ವಸ್ತಸರ್ವವಿಶೇಷಣಸ್ಯ ' ನಿ|| ; ' ವಿಧ್ವಸ್ತಸರ್ವೋಪಾಧಿವಿಶೇಷಣಸ್ಯ ' ಗ||

3. ' ಶಕ್ತ್ಯುಪೇತಸ್ಯ ವಿಶ್ವೇಶ್ವರಸ್ಯ ' ಮ||ಮ್ಯ||

4. ' ಜಗದಾತ್ಮಸ್ವರೂಪಮ್ ' ನು||ಮ್ಯ||

5. ' ಉಭಯೋರನಯೋಃ ' ಮ||

6. ಯಾವ ಗುಣವೂ ಇಲ್ಲದ ಜ್ಞೇಯವಾದ ಪರಬ್ರಹ್ಮಕ್ಕೆ ಅಕ್ಷರವೆಂದು ಹೆಸರು. ಇದರ ಉಪಾಸನೆಯೆಂದರೆ ಆದರ ಸ್ವರೂಪವನ್ನು ಶ್ರವಣಮನನನಿದಿಧ್ಯಾಸನಗಳಿಂದ ಅರಿತು ಆದರಲ್ಲಿಯೇ ನೆಲೆನಿಂತಿರುವದು. ಬೃ. ೩-೮-೮, ಮುಂ. ೧-೧-೫, ೬ ; ಸೂ.ಭಾ. ೩-೩-೩೩.

(ಶುದ್ಧ) ಸತ್ತ್ವ(ವೆಂಬ) ಉಪಾಧಿಯಿಂದೊಡಗೂಡಿದ[1] ಈಶ್ವರನಾದ ನಿನ್ನ ಉಪಾಸನೆಯನ್ನೂ ಅಲ್ಲಲ್ಲಿ ಹೇಳಿರುತ್ತದೆ ವಿಶ್ವರೂಪಾಧ್ಯಾಯದಲ್ಲಿಯೋ ಎಂದರೆ ಈಶ್ವರ ಸಂಬಂಧಿಯೂ ಆದ್ಯವೂ ಸಕಲಜಗದಾತ್ಮರೂಪವೂ ಆದ ನಿನ್ನ ವಿಶ್ವರೂಪವನ್ನು ಉಪಾಸನೆಗಾಗಿಯೇ ನೀನು ತೋರಿಸಿರುತ್ತೀಯೆ. ಮತ್ತು ಅದನ್ನು ತೋರಿಸಿ "ಮತ್ಕರ್ಮಕೃತ್ ಮುಂತಾದ (ಗುಣಗಳುಳ್ಳ ಭಕ್ತನು ನನ್ನನ್ನು ಸೇರುವನು)" ಎಂದು ಹೇಳಿರುತ್ತೀಯೆ. ಆದ್ದರಿಂದ ನಾನು ಈ ಎರಡು ಪಕ್ಷಗಳಲ್ಲಿ ಹೆಚ್ಚಿನದು (ಯಾವದು) ಎಂಬುದನ್ನು ತಿಳಿಯುವ ಇಚ್ಛೆಯಿಂದ ಕೇಳುತ್ತಿದೇನೆ ಎಂದು ಅರ್ಜುನನು ಇಂತೆಂದನು :—

**ಅರ್ಜುನ ಉವಾಚ—**

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧ ॥**

೧. ಅರ್ಜುನನಿಂತೆಂದನು :—ಹೀಗೆ ಸತತಯುಕ್ತರಾಗಿ ಯಾವ ಭಕ್ತರು ನಿನ್ನನ್ನು ಪರ್ಯುಪಾಸನೆಮಾಡುತ್ತಾರೋ, ಮತ್ತು ಯಾರು ಅವ್ಯಕ್ತವಾದ ಅಕ್ಷರವನ್ನು (ಉಪಾಸನೆಮಾಡುತ್ತಾರೋ) ಅವರಲ್ಲಿ ಯಾರು ಯೋಗವಿತ್ತಮರು?

(ಭಾಷ್ಯ)

೧೮೨. ಏವಮ್ ಇತಿ ಅತೀತಾನನ್ತರಶ್ಲೋಕೇನ ಉಕ್ತಮ್ ಅರ್ಥಂ ಪರಾಮೃಶತಿ 'ಮತ್ಕರ್ಮಕೃತ್' ಇತ್ಯಾದಿನಾ। ಏವಂ ಸತತಯುಕ್ತಾ ನೈರನ್ತರ್ಯೇಣ ಭಗವತ್ಕರ್ಮಾದೌ ಯಥೋಕ್ತೇ ಅರ್ಥೇ ಸಮಾಹಿತಾಃ ಸನ್ತಃ ಪ್ರವೃತ್ತಾಃ ಇತ್ಯರ್ಥಃ। ಯೇ ಭಕ್ತಾಃ ಅನನ್ಯಶರಣಾಃ ಸನ್ತಃ ತ್ವಾಂ ಯಥಾದರ್ಶಿತಂ[2] ವಿಶ್ವರೂಪಂ ಪರ್ಯುಪಾಸತೇ ಧ್ಯಾಯನ್ತಿ। ಯೇ ಚ ಅನ್ಯೇಽಪಿ[3] ತ್ಯಕ್ತಸರ್ವೈಷಣಾಃ ಸಂನ್ಯಸ್ತಸರ್ವಕರ್ಮಾಣಃ ಯಥಾವಿಶೇಷಿತಂ ಬ್ರಹ್ಮ ಅಕ್ಷರಂ ನಿರಸ್ತಸರ್ವೋಪಾಧಿತ್ವಾತ್ ಅವ್ಯಕ್ತಮ್ ಅಕರಣಗೋಚರಮ್[4]। ಯದ್ಧಿ ಲೋಕೇ ಕರಣ

---

1. ನಿರ್ಗುಣಬ್ರಹ್ಮವೇ ಸತ್ತ್ವಗುಣೋಪಾಧಿಯಿಂದ ಸಗುಣವೆನಿಸುವದು. ಇದು **ಉಪಾಸನೆಗಾಗಿ** ಸಗುಣವಾಗಿರುತ್ತದೆ. ಸೂ. ಭಾ. ೧-೧-೬; ಬೃ. ಭಾ. ೩-೮-೧೨, ಐ. ಭಾ. ಭಾ. ೮೮.

2. 'ಯಥಾದರ್ಶಿತವಿಶ್ವರೂಪಂ' ಮು||
3. 'ಯೇಚಾಪಿ' ಮು|| ಮೈ||
4. 'ಕರಣಾಗೋಚರಮ್' ಮು||

ಗೋಚರಂ ತತ್ ವ್ಯಕ್ತಮ್ ಉಚ್ಯತೇ । ಅಞ್ಜೇಃ[1] ಧಾತೋಃ ತತ್ಕರ್ಮಕತ್ವಾತ್। ಇದಂ ತು ಅಕ್ಷರಂ ತದ್ವಿಪರೀತಮ್ । ಶಿಷ್ಟೈಶ್ಚ[2] ಉಚ್ಯಮಾನೈಃ ವಿಶೇಷಣೈಃ ವಿಶಿಷ್ಟಮ್ । ತತ್ ಯೇ ಚ ಅಪಿ ಪರ್ಯುಪಾಸತೇ ತೇಷಾಮ್ ಉಭಯೇಷಾಂ ಮಧ್ಯೇ ಕೇ ಯೋಗವಿತ್ತಮಾಃ ಕೇ ಅತಿಶಯೇನ ಯೋಗವಿದಃ ಇತ್ಯರ್ಥಃ ॥

(ಭಾಷ್ಯಾರ್ಥ)

'ಹೀಗೆ' ಎಂಬ (ಮಾತಿನಿಂದ) ಹಿಂದಿನ ಶ್ಲೋಕದಲ್ಲಿ 'ಮತ್ಕರ್ಮಕೃತ್' ಎಂದು ಮುಂತಾಗಿ ಹೇಳಿರುವ ವಿಷಯವನ್ನು ಪರಾಮರ್ಶಿಸಿರುತ್ತದೆ. ಹೀಗೆ ಸತತಯುಕ್ತರಾಗಿ, ಎಡೆಬಿಡದೆ ಭಗವಂತನ ಕರ್ಮ(ವನ್ನು ಮಾಡುವದೇ) ಮುಂತಾದ ಹಿಂದೆ ಹೇಳಿದ ವಿಷಯದಲ್ಲಿ ಮನಸ್ಸಿಟ್ಟವರಾಗಿ ತೊಡಗಿರುವ ಎಂದರ್ಥ. ಯಾವ ಭಕ್ತರು ಅನನ್ಯಶರಣರಾಗಿ ನಿನ್ನನ್ನು ಎಂದರೆ (ನೀನು) ತೋರಿಸಿದಂಥ ವಿಶ್ವರೂಪವನ್ನು ಪರ್ಯುಪಾಸನೆಮಾಡುತ್ತಿರುವರೋ ಧ್ಯಾನಿಸುತ್ತಿರುವರೋ ಮತ್ತು ಯಾವ ಬೇರೆಯ (ಜನರು) ಏಷಣೆಗಳನ್ನೆಲ್ಲ ತೊರೆದು ಕರ್ಮಗಳನ್ನೆಲ್ಲ ಸಂನ್ಯಾಸಮಾಡಿ (ಇಲ್ಲಿ) ಹೇಳಿರುವ ವಿಶೇಷಣಗಳುಳ್ಳ ಬ್ರಹ್ಮವಾದ ಅಕ್ಷರವನ್ನು, ಯಾವ ಉಪಾಧಿಯೂ ಇಲ್ಲದ್ದರಿಂದ ಅವ್ಯಕ್ತವಾಗಿರುವ, ಕರಣಗಳಿಗೆ ಗೋಚರವಿಲ್ಲದ, (ಅಕ್ಷರವನ್ನು ಎಂದರ್ಥ). ಯಾವದು ಲೋಕದಲ್ಲಿ ಕರಣಗಳಿಗೆ ಗೋಚರವಾಗಿರುತ್ತದೆಯೋ ಅದು ವ್ಯಕ್ತವೆನಿಸುತ್ತದೆ; ಏಕೆಂದರೆ ಅಞ್ಜ್ ಎಂಬ ಧಾತುವಿಗೆ (ಅದೇ) ಅರ್ಥವು. ಆದರೆ ಈ ಅಕ್ಷರವು ಅದಕ್ಕೆ ವಿರುದ್ಧವಾಗಿ (ಕರಣಗಳಿಗೆ ಗೋಚರವಲ್ಲದೆ ಇರುತ್ತದೆ) ಮತ್ತು ಮುಂದೆ ಹೇಳುವ (ಇನ್ನೂ) ಉಳಿದ ವಿಶೇಷಣಗಳಿಂದ ಕೂಡಿದ[3] ಆ (ಅಕ್ಷರ)ವನ್ನು ಯಾರು ಉಪಾಸನೆ ಮಾಡುತ್ತಿರುವರೋ[4]

---

1. 'ವ್ಯಞ್ಜೇಃ' ಮ॥ ಮೈ॥

2. 'ವಿಶಿಷ್ಟೈಶ್ಚ' ಮ॥ ಮೈ॥

3. ಮುಂದೆ ಮೂರನೆಯ ಶ್ಲೋಕದಲ್ಲಿ ಹೇಳಿರುವ ವಿಶೇಷಣಗಳನ್ನೂ ಇಲ್ಲಿ ಅವ್ಯಕ್ತವೆಂಬ ವಿಶೇಷಣದಿಂದಲೇ ಉಪಲಕ್ಷಣವಾಗಿ ಹೇಳಿದೆ ಎಂದು ಭಾವ.

4. ಇಲ್ಲಿ ಅವ್ಯಕ್ತ, ಅನಿರ್ದೇಶ್ಯ—ಮುಂತಾದವುಗಳು ಒಂದೊಂದು ಆರೋಪವನ್ನು ಅಲ್ಲಗಳೆಯುವ ವಿಶೇಷಣಗಳಾದ್ದರಿಂದ ಅವು ಒಂದೊಂದು ಧರ್ಮವನ್ನು ಹೇಳುವವೆಂದು ಭಾವಿಸುವದಕ್ಕಿಲ್ಲ. ಆದ್ದರಿಂದ ಇಲ್ಲಿ ಅಕ್ಷರದ ಉಪಾಸನೆ ಎಂದರೆ ಜ್ಞಾನನಿಷ್ಠೆಯೇ. ಉಪಾಸನೆ ಎಂಬ ಶಬ್ದವನ್ನು ಜ್ಞಾನವೆಂಬ ಅರ್ಥದಲ್ಲಿಯೂ ಜ್ಞಾನವೆಂಬ ಶಬ್ದವನ್ನು ಉಪಾಸನೆ ಎಂಬರ್ಥದಲ್ಲಿಯೂ ಉಪಯೋಗಿಸುವದುಂಟು. ಬೃ. ಭಾ. ೧-೪-೭ 'ಆತ್ಮೇತ್ಯೇವೋಪಾಸೀತ' ಎಂಬುದರ ವ್ಯಾಖ್ಯಾನವನ್ನೂ ಸೂ. ಭಾ. ೪-೧-೧ 'ವಿದ್ಯುಪಾಸ್ತ್ಯೋಶ್ಚ" ಎಂಬ ವಾಕವನ್ನೂ ನೋಡಿರಿ.

ಆ ಇಬ್ಬರೊಳಗೆ ಯಾರು ಯೋಗವಿತ್ತಮರು ? ಯಾರು ಯೋಗವನ್ನು ಹೆಚ್ಚಾಗಿ ಬಲ್ಲವರು ಎಂದರ್ಥ.

## ಭಗವಂತನ ಉತ್ತರ : ವಿಶ್ವರೂಪೋಪಾಸಕರು ಯೋಗವಿತ್ತಮರು

(ಭಾಷ್ಯ)

೧೮೩. ಶ್ರೀ ಭಗವಾನ್ ಉವಾಚ—ಯೇ [1] ಅಕ್ಷರೋಪಾಸಕಾಃ ಸಮ್ಯಗ್ದರ್ಶಿನಃ ನಿವೃತ್ತೈಷಣಾಃ, ತೇ ತಾವತ್ ತಿಷ್ಠನ್ತು । ತಾನ್ ಪ್ರತಿ ಯದ್ ವಕ್ತವ್ಯಂ ತತ್ ಉಪರಿಷ್ಟಾತ್ ವಕ್ಷ್ಯಾಮಃ । ಯೇ ತು ಇತರೇ—

(ಭಾಷ್ಯಾರ್ಥ)

ಶ್ರೀ ಭಗವಂತನಿಂತೆಂದನು :—ಯಾರು ಸಮ್ಯಗ್ದರ್ಶಿಗಳಾಗಿ ಏಷಣೆಗಳನ್ನೆಲ್ಲ ತೊರೆದು ಅಕ್ಷರವನ್ನು ಉಪಾಸನೆಮಾಡುತ್ತಿರುವರೋ ಅವರು ಮೊದಲು ಹಾಗಿರಲಿ ; ಅವರ ವಿಷಯದಲ್ಲಿ ಏನು ಹೇಳಬೇಕೋ ಅದನ್ನು ಮುಂದೆ ಹೇಳುವೆವು. ಆದರೆ ಮಿಕ್ಕವರು (ಇದಾರಲ್ಲ)—

**ಶ್ರೀ ಭಗವಾನ್ ಉವಾಚ—**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಃ ತೇ ಮೇ ಯುಕ್ತತಮಾ ಮತಾಃ ॥ ೨ ॥**

೨. ಶ್ರೀ ಭಗವಂತನಿಂತೆಂದನು :—ನನ್ನಲ್ಲಿಯೇ ಮನಸ್ಸನ್ನು ಇಟ್ಟು ಯಾರು ನಿತ್ಯಯುಕ್ತರಾಗಿ ಪರಶ್ರದ್ಧೆಯಿಂದೊಡಗೂಡಿ ನನ್ನನ್ನು ಉಪಾಸನೆ ಮಾಡುತ್ತಿರುವರೋ ಅವರು ಯುಕ್ತತಮರೆಂದು ನನ್ನ ಮತವು.

(ಭಾಷ್ಯ)

೧೮೪. ಮಯಿ ವಿಶ್ವರೂಪೇ ಪರಮೇಶ್ವರೇ ಆವೇಶ್ಯ ಸಮಾಧಾಯ ಮನಃ ಯೇ ಭಕ್ತಾಃ ಸನ್ತಃ ಮಾಂ ಸರ್ವಯೋಗೇಶ್ವರಾಣಾಮ್ ಅಧೀಶ್ವರಂ ಸರ್ವಜ್ಞಂ ವಿಮುಕ್ತರಾಗಾದಿಕ್ಲೇಶತಿಮಿರದೃಷ್ಟಿಂ ನಿತ್ಯಯುಕ್ತಾಃ ಅತೀತಾನನ್ತರಾಧ್ಯಾಯನ್ತೇ [2] ಉಕ್ತಶ್ಲೋಕಾರ್ಥನ್ಯಾಯೇನ ಸತತಯುಕ್ತಾಃ ಸನ್ತಃ ಉಪಾಸತೇ ಶ್ರದ್ಧಯಾ

1. ' ಯೇ ತು ' ಅ॥ ನಿ॥ ಗು॥ ವಾ॥ ವೈ॥
2. ' ಅಧ್ಯಾಯಾನ್ತೋಕ್ತ . . . ' ನಿ॥ ಅ॥

**ಪರಯಾ ಪ್ರಕೃಷ್ಟಯಾ ಉಪೇತಾಃ[1] ತೇ ಮೇ ಮಮ ಯುಕ್ತತಮಾಃ[2] ಮತಾಃ ಅಭಿಮತಾಃ[3] ಯುಕ್ತತಮಾ ಇತಿ। ನೈರನ್ತರ್ಯೇಣ ಹಿ ತೇ ಮಚ್ಚಿತ್ತತಯಾ ಅಹೋರಾತ್ರಾಣಿ[4] ಅತಿವಾಹಯನ್ತಿ[5] ಅತಃ ಯುಕ್ತಂ ತಾನ್ ಪ್ರತಿ ಯುಕ್ತತಮಾ ಇತಿ ವಕ್ತುಮ್ ॥**

(ಭಾಷ್ಯಾರ್ಥ)

ನನ್ನಲ್ಲಿ ವಿಶ್ವರೂಪನಾದ ಪರಮೇಶ್ವರನಲ್ಲಿ, ಮನಸ್ಸನ್ನು ಇಟ್ಟು ನಿಲ್ಲಿಸಿ ಕೊಂಡು ಯಾರು ಭಕ್ತರಾಗಿ **ಸರ್ವಯೋಗೇಶ್ವರರಿಗೂ ಅಧೀಶ್ವರನೂ**[6] **ಸರ್ವಜ್ಞನೂ**[7] **ರಾಗವೇ ಮುಂತಾದ ಕ್ಲೇಶಗಳಿಂದ ಕಣ್ಣುಪರೆಯನ್ನು ಹೊಂದಿದ ದೃಷ್ಟಿಯಿಲ್ಲದವನೂ**[8] ಆಗಿರುವ ನನ್ನನ್ನು ನಿತ್ಯಯುಕ್ತರಾಗಿ ಕಳೆದ ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಿದ ಶ್ಲೋಕಾರ್ಥಕ್ಕೆ ತಕ್ಕಂತೆ ಯಾವಾಗಲೂ ಚಿತ್ತಸಮಾಧಾನವುಳ್ಳವರಾಗಿ ಪರವಾದ ಎಂದರೆ ಹೆಚ್ಚಿನ ಶ್ರದ್ಧೆಯಿಂದ ಕೂಡಿ ಉಪಾಸನೆಮಾಡುತ್ತಿರುವರೋ ಅವರು (ಮೇ= ಮಮ) ನನಗೆ ಯುಕ್ತತಮರೆಂದು ಮತರಾಗಿರುವರು, ಯುಕ್ತತಮರೆಂದು ನನ್ನ ಅಭಿಪ್ರಾಯವಿರುವದು. ಏಕೆಂದರೆ ಅವರು ಎಡೆಬಿಡದೆ ನನ್ನಲ್ಲಿಯೇ ಚಿತ್ತವುಳ್ಳವರಾಗಿ ಹಗಲುರಾತ್ರಿಗಳನ್ನು ಕಳೆಯುತ್ತಿರುವರು ; ಆದ್ದರಿಂದ ಅವರನ್ನು ಕುರಿತು (ಅವರು)ಯುಕ್ತತಮರು ಎಂದು ಹೇಳುವದು ಯುಕ್ತವಾಗಿರುತ್ತದೆ.[9]

---

1 ‘ ಯೇ ’ ಎಂದು ಹೆಚ್ಚಾಗಿ ಮ|| ವ್ಯ||

2 ಪ|| ಆ|| ಪಾ|| ಗಳಲ್ಲಿಲ್ಲ; ಇಲ್ಲಿ [illegible] ಸಾಗುತ್ತದೆ; ಮ|| ವ್ಯ|| ಪಾಠದಲ್ಲಿ ಎರಡನೆಯ ಯುಕ್ತತಮಾಃ ಎಂಬುದು ಅನ್ವಯಕ್ಕಾಗಿ.

3. ‘ ಅಭಿಪ್ರೇತಾಃ ’ ನಿ|| ಗು||

4. ‘ ಅಹೋರಾತ್ರಮ್ ನಿ|| ಗು|| ವಾ||

5. ‘ ಅಹೋರಾತ್ರಮ್ ಅತಿಮಾತ್ರಂ ಮಾಂ ಧ್ಯಾಯನ್ತಿ ’ ಎಂಬ ವಾಕ್ಯವೊಂದು ಹೆಚ್ಚಾಗಿ ಮ|| ಮ||

6. ಶ್ವೇ. ೬-೭.

7. ಯೋ. ಸೂ. ೧-೨೫.

8. ಯೋ. ಸೂ. ೧-೨೪, ೨-೩.

9. ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದೆಂದು ಹೇಳುವ ೫-೨ ರ ಭಾಷ್ಯವನ್ನು ಇದಕ್ಕೆ ಹೋಲಿಸಿರಿ.

# ಅಕ್ಷರೋಪಾಸಕರು ಸ್ವತಂತ್ರರು

(ಭಾಷ್ಯ)

೧೮೫. ಕಿಮ್ ಇತರೇ ಯುಕ್ತತಮಾ ನ ಭವನ್ತಿ? ನ। ಕಿಂ ತು ತಾನ್ ಪ್ರತಿ ಯದ್ ವಕ್ತವ್ಯಂ ತತ್ ಶೃಣು—

(ಭಾಷ್ಯಾರ್ಥ)

ಅರ್ಜುನ: ಹಾಗಾದರೆ ಉಳಿದವರು ಯುಕ್ತತಮರಲ್ಲವೇನು?

(ಶ್ರೀಕೃಷ್ಣ):—ಹಾಗಲ್ಲ. ಮತ್ತೇನೆಂದರೆ ಅವರ ವಿಷಯಕ್ಕೆ ಏನು ಹೇಳ ತಕ್ಕದ್ದೋ ಅದನ್ನು ಕೇಳು:—

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ।**
**ಸರ್ವತ್ರಗಮಚಿನ್ತ್ಯಂ ಚ ಕೂಟಸ್ಥಮಚಲಂ ಧ್ರುವಮ್॥ ೩॥**
**ಸಂನಿಯಮ್ಯೇನ್ದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ।**
**ತೇ ಪ್ರಾಪ್ನುವನ್ತಿ ಮಾಮೇವ ಸರ್ವಭೂತಹಿತೇ ರತಾಃ॥ ೪॥**

೩-೪. ಆದರೆ ಯಾರು ಅನಿರ್ದೇಶ್ಯವಾದ, ಅವ್ಯಕ್ತವಾದ, ಸರ್ವತ್ರಗವಾದ, ಅಚಿಂತ್ಯವಾದ, ಕೂಟಸ್ಥವಾದ, ಅಚಲವಾದ, ಧ್ರುವವಾದ, ಅಕ್ಷರವನ್ನು ಇಂದ್ರಿಯಗ್ರಾಮವನ್ನು ಸಂನಿಯಮವನ್ನು ಮಾಡಿಕೊಂಡು ಸರ್ವತ್ರಸಮಬುದ್ಧಿಗಳಾಗಿ ಪರ್ಯುಪಾಸನೆಮಾಡುತ್ತಿರುವರೋ ಸರ್ವಭೂತಹಿತದಲ್ಲಿ ರತರಾದ ಅವರು ನನ್ನನ್ನೇ ಪಡೆಯುವರು.

(ಭಾಷ್ಯ)

೧೮೬. ಯೇ ತು ಅಕ್ಷರಮ್ ಅನಿರ್ದೇಶ್ಯಮ್[1] । ಅವ್ಯಕ್ತತ್ವಾತ್[2] ಅಶಬ್ದಗೋಚರಮ್ ಇತಿ ನ ನಿರ್ದೇಷ್ಟುಂ ಶಕ್ಯತೇ, ಅತಃ ಅನಿರ್ದೇಶ್ಯಮ್ ಅವ್ಯಕ್ತಂ ನ ಕೇನಾಪಿ ಪ್ರಮಾಣೇನ ವ್ಯಜ್ಯತೇ ಇತಿ ಅವ್ಯಕ್ತಮ್[3]। ಪರ್ಯುಪಾಸತೇ ಪರಿ ಸಮನ್ತಾತ್ ಉಪಾಸತೇ। ಉಪಾಸನಂ ನಾಮ ಯಥಾ ಶಾಸ್ತ್ರಮ್ ಉಪಾಸ್ಯಸ್ಯ ಅರ್ಥಸ್ಯ ವಿಷಯೀಕರಣೇನ ಸಾಮೀಪ್ಯಮ್ ಉಪಗಮ್ಯ ತೈಲಧಾರಾ

1. ‘ಅನಿರ್ದೇಶ್ಯಮವ್ಯಕ್ತಮ್’ ನಿ॥
2. ‘ಅವ್ಯಕ್ತತ್ವಾತ್’ ಎಂಬುದು ಗು॥ವಾ॥ಗಳಲ್ಲಿಲ್ಲ.
3. ‘ನ ಕೇನಾಪಿ .... ಅವ್ಯಕ್ತಮ್’ ಎಂಬ ವಾಕ್ಯವು ಮ॥ದಲ್ಲಿಲ್ಲ.

ವತ್ ಸಮಾನಪ್ರತ್ಯಯಪ್ರವಾಹೇಣ ದೀರ್ಘಕಾಲಂ ಯದಾಸನಂ ತತ್ ಉಪಾಸನಮ್ ಆಚಕ್ಷತೇ । ಅಕ್ಷರಸ್ಯ ವಿಶೇಷಣಮ್ ಆಹ ಉಪಾಸ್ಯಸ್ಯ[1] । ಸರ್ವತ್ರಗಂ ವ್ಯೋಮವತ್ ವ್ಯಾಪಿ । ಅಚಿನ್ತ್ಯಮ್ ಚ ಅವ್ಯಕ್ತತ್ವಾತ್ ಅಚಿನ್ತ್ಯಮ್[2] । ಯದ್ಧಿ ಕರಣಗೋಚರಂ ತತ್ ಮನಸಾಪಿ ಚಿನ್ತ್ಯಮ್ । ತದ್ವಿಪರೀತತ್ವಾತ್ ಅಚಿನ್ತ್ಯಮ್ ಅಕ್ಷರಮ್ । ಕೂಟಸ್ಥಮ್ । ದೃಶ್ಯಮಾನಗುಣಮ್ ಅನ್ತರ್ದೋಷಂ ವಸ್ತು ಕೂಟಮ್ । 'ಕೂಟರೂಪಂ' 'ಕೂಟಸಾಕ್ಷ್ಯಮ್'[3] ಇತ್ಯಾದೌ ಕೂಟಶಬ್ದಃ ಪ್ರಸಿದ್ಧೋ ಲೋಕೇ । ತಥಾ ಚ ಅವಿದ್ಯಾದ್ಯನೇಕಸಂಸಾರಬೀಜಮ್ ಅನ್ತರ್ದೋಷವತ್ ಮಾಯಾವ್ಯಾಕೃತಾದಿ[4] ಶಬ್ದವಾಚ್ಯತಯಾ "ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್" (ಶ್ವೇ. ೪-೧೦), "ಮಮ ಮಾಯಾ ದುರತ್ಯಯಾ" (೭-೧೪) ಇತ್ಯಾದೌ ಪ್ರಸಿದ್ಧಂ ಯತ್ ತತ್ ಕೂಟಮ್ । ತಸ್ಮಿನ್ ಕೂಟೇ ಸ್ಥಿತಂ ಕೂಟಸ್ಥಂ ತದಧ್ಯಕ್ಷತಯಾ । ಅಥವಾ ರಾಶಿರಿವ ಸ್ಥಿತಂ ಕೂಟಸ್ಥಮ್ । ಅತ ಏವ ಅಚಲಮ್ । ಯಸ್ಮಾತ್ ಅಚಲಂ ತಸ್ಮಾತ್ ಧ್ರುವಂ ನಿತ್ಯಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಆದರೆ ಯಾರು ಅಕ್ಷರವನ್ನು (ಎಂಥ ಅಕ್ಷರವನ್ನೆಂದರೆ) ಅನಿರ್ದೇಶ್ಯವಾದ; ಅವ್ಯಕ್ತವಾಗಿರುವದರಿಂದ ಮಾತಿಗೆ ಗೋಚರವಲ್ಲವಾದ ಕಾರಣ (ಮಾತಿನಿಂದ ಇಂಥದ್ದೆಂದು)ತಿಳಿಸುವದಕ್ಕೆ ಆಗುವದಲ್ಲವಾಗಿ ಅನಿರ್ದೇಶ್ಯವು, (ಅಂಥ). ಅವ್ಯಕ್ತವಾದ ಯಾವ ಪ್ರಮಾಣದಿಂದಲೂ ಅದು ವ್ಯಕ್ತವಾಗುವದಲ್ಲವಾಗಿ **ಅವ್ಯಕ್ತವು**; (ಅಂಥ ಅಕ್ಷರವನ್ನು ಯಾರು) ಪರ್ಯುಪಾಸನೆಮಾಡುವರೋ ಪರಿ ಎಂದರೆ ಎಲ್ಲೆಲ್ಲಿಯೂ ಉಪಾಸನೆಮಾಡುತ್ತಿರುವರೋ (ಎಂದರ್ಥ): **ಉಪಾಸನೆ ಎಂದರೆ ಉಪಾಸನೆ ಮಾಡಬೇಕಾದ ವಸ್ತುವನ್ನು ಶಾಸ್ತ್ರದಲ್ಲಿ ಹೇಳಿರುವಂತೆ ವಿಷಯವಾಗಿಸಿಕೊಂಡು ಸಮೀಪಕ್ಕೆ ಬಂದು ಸೇರಿ ಎಣ್ಣೆಯ ಧಾರೆಯಂತೆ ಒಂದು**

---

1. ಇದು ನಿ॥ವಾ॥ಗಳಲ್ಲಿಲ್ಲ.
2. 'ಅವ್ಯಕ್ತತ್ವಾತ್ ಅಚಿನ್ತ್ಯಮ್' ಎಂಬುದು ಮು॥ವ್ಯೈ॥ಗಳಲ್ಲಿಲ್ಲ.
3. 'ಕೂಟರೂಪಕಂ' ಮು॥ ವ್ಯೈ॥, 'ಕೌಟಸಾಕ್ಷ್ಯಮ್' ಮು॥, 'ಕೂಟಸಾಕ್ಷ್ಯಮ್' ಎಂಬುದು ಗು॥ದಲ್ಲಿಲ್ಲ.
4. 'ಮಾಯಾವ್ಯಾಕೃತಕೂಟಾದ್ಯನೇಕ' ಮು॥, 'ಮಾಯಾವ್ಯಾಕೃತಾದ್ಯನೇಕ' ವ್ಯೈ॥ ಗು॥

**ಪ್ರತ್ಯಯವನ್ನು ಹರಿಯಿಸುತ್ತಾ ಬಹಳ ಹೊತ್ತು ಇರುವದು.**[1] ಇದನ್ನು ಉಪಾಸನೆಯೆನ್ನುತ್ತಾರೆ.[2] ಉಪಾಸ್ಯವಾದ ಅಕ್ಷರದ ವಿಶೇಷಣವನ್ನು ಹೇಳುತ್ತಾನೆ: (ಅದು) **ಸರ್ವತ್ರಗವು** ಎಂದರೆ ಆಕಾಶದಂತೆ (ಎಲ್ಲೆಲ್ಲಿಯೂ) ವ್ಯಾಪಿಸಿಕೊಂಡಿರುವದು; ಮತ್ತು ಅಚಿಂತ್ಯವು, ಅವ್ಯಕ್ತವಾಗಿರುವದರಿಂದ ಅಚಿಂತ್ಯವು. ಯಾವದು ಕರಣಗಳಿಗೆ ಗೋಚರವಾಗುವದೋ ಅದನ್ನು ಮನಸ್ಸಿನಿಂದಲೂ ಚಿಂತಿಸುವದಕ್ಕೆ ಆಗುತ್ತದೆ; ಆದರೆ ಅಕ್ಷರವು ಇದಕ್ಕೆ ವಿರುದ್ಧವಾಗಿರುವದರಿಂದ **ಅಚಿಂತ್ಯವು. ಕೂಟಸ್ಥವು**: ಗುಣ(ಗಳಿರುವಂತೆ) ತೋರುತ್ತಾ ಒಳಗೆ ದೋಷವುಳ್ಳ ವಸ್ತುವು ಕೂಟ (ವೆನಿಸುತ್ತದೆ); ಕೂಟರೂಪ (ಸಲ್ಲದ ರೂಪಾಯಿ ಅಥವಾ ಬೆಳ್ಳಿ), ಕೂಟಸಾಕ್ಷ್ಯ (ಸುಳ್ಳು ಸಾಕ್ಷ್ಯ)–ಮುಂತಾದ (ಕಡೆಯ)ಲ್ಲಿ ಕೂಟಶಬ್ದವು (ಈ ಅರ್ಥದಲ್ಲಿ) ಲೌಕಿಕ ಪ್ರಯೋಗದಲ್ಲಿ ಪ್ರಸಿದ್ಧವಾಗಿರುತ್ತದೆ. ಮತ್ತು ಹೀಗೆಯೇ ಅವಿದ್ಯೆಯೇ ಮುಂತಾದ ಅನೇಕಸಂಸಾರಬೀಜಗಳುಳ್ಳದ್ದಾಗಿ,[3] ಒಳಗೆ ದೋಷವುಳ್ಳ **ಮಾಯೆ, ಅವ್ಯಾಕೃತ** –ಮುಂತಾದ[4] ಶಬ್ದಗಳಿಂದ ಹೇಳಲ್ಪಡುವದಾಗಿ "ಪ್ರಕೃತಿಯನ್ನು ಮಾಯೆಯೆಂದೂ ಮಹೇಶ್ವರನನ್ನು ಮಾಯಿಯೆಂದೂ ತಿಳಿಯಬೇಕು" (ಶ್ವೇ. ೪-೧೦), "ನನ್ನ ಮಾಯೆಯು ದಾಟಲಶಕ್ಯವಾಗಿರುವದು" (೭-೧೪) ಮುಂತಾದ (ಶ್ರುತಿಸ್ಮೃತಿಗಳ)ಲ್ಲಿ ಪ್ರಸಿದ್ಧವಾಗಿದೆಯಲ್ಲ, ಅದು ಕೂಟವು; ಆ ಕೂಟದಲ್ಲಿ, ಅದಕ್ಕೆ ಸಾಕ್ಷಿಯಾಗಿರುವದು **ಕೂಟಸ್ಥವು**. ಅಥವಾ (ಕೂಟ) ರಾಶಿಯಂತೆ (ಸ್ಥ) ಇರುವದು **ಕೂಟಸ್ಥವು**. ಆದ್ದರಿಂದಲೇ **ಅಚಲವು**. ಅಚಲವಾಗಿದೆಯಲ್ಲ, ಆ ಕಾರಣದಿಂದಲೇ **ಧ್ರುವವು**, ನಿತ್ಯವಾಗಿರುವದು ಎಂದರ್ಥ.

---

1. ತೈ. ಭಾ. ೧-೩, ಸೂ. ಭಾ. ೪-೧-೧, ೪-೧-೧. ಜ್ಞಾನನಿಷ್ಠೆಯನ್ನೇ ಇಲ್ಲಿ ಉಪಾಸನೆ ಎಂದು ಕರೆದಿದೆ; ಜ್ಞಾನವಾದಬಳಿಕ ಅನಾತ್ಮವಸ್ತುವೆಲ್ಲ ಅಸತ್ತೆಂದು ನಿಶ್ಚಯವಾಗಿ ಬಿಡುವದರಿಂದ ಆತ್ಮನಲ್ಲಿಯೇ ಮನಸ್ಸು ನಿಲ್ಲುತ್ತದೆ ಎಂಬುದು ಸ್ವಾಭಾವಿಕವಾಗಿದೆ.

2. 'ಉಪಾಸನಮ್ ಆಚಕ್ಷತೇ' ಎಂಬ ಭಾಷ್ಯಭಾಗವು ಹೆಚ್ಚೆಂದು ತೋರುವದು; ಆದರೆ ಅದು ಎಲ್ಲಾ ಮುದ್ರಿತಪುಸ್ತಕಗಳಲ್ಲಿಯೂ ಇದೆ.

3. ಪ್ರಲಯದಲ್ಲಿ ಅವಿದ್ಯಾದಿದೋಷಗಳು ಕಾಣುವದಿಲ್ಲ, ಸೃಷ್ಟಿಸ್ಥಿತಿಕಾಲಗಳಲ್ಲಿ ತೋರಿಕೊಳ್ಳುತ್ತವೆ. ಅವ್ಯಾಕೃತವು ಅವಿದ್ಯಾಕಲ್ಪಿತವೆಂಬ ಅಭಿಪ್ರಾಯಕ್ಕೆ ಇದರಿಂದ ಯಾವ ಹಾನಿಯೂ ಇಲ್ಲ.

4. ಅವ್ಯಕ್ತ, ಆಕಾಶ, ಬೀಜ, ಶಕ್ತಿ, ಪ್ರಕೃತಿ–ಮುಂತಾದ ಸೂ. ಭಾ. ೧-೪-೩, ೧-೪-೯, ೨-೧-೧೪.

(ಭಾಷ್ಯ)

೧೮೭. ಸಂನಿಯಮ್ಯ[1] ಸಮ್ಯಕ್ ನಿಯಮ್ಯ ಉಪಸಂಹೃತ್ಯ[2] ಇನ್ದ್ರಿಯ ಗ್ರಾಮಮ್ ಇನ್ದ್ರಿಯಸಮುದಾಯಂ ಸರ್ವತ್ರ ಸರ್ವಸ್ಮಿನ್ ಕಾಲೇ ಸಮ ಬುದ್ಧಯಃ। ಸಮಾ ತುಲ್ಯಾ ಬುದ್ಧಿಃ ಯೇಷಾಮ್ ಇಷ್ಟಾನಿಷ್ಟಪ್ರಾಪ್ತೌ ತೇ ಸಮ ಬುದ್ಧಯಃ। ತೇ ಯೇ ಏವಂವಿಧಾಃ ತೇ ಪ್ರಾಪ್ನುವನ್ತಿ ಮಾಮೇವ ಸರ್ವಭೂತ ಹಿತೇ ರತಾಃ। ನ ತು ತೇಷಾಂ ವಕ್ತವ್ಯಂ ಕಿಂಚಿತ್ ಮಾಂ ತೇ ಪ್ರಾಪ್ನುವನ್ತಿ ಇತಿ। "ಜ್ಞಾನೀ ತ್ವಾತ್ಮೈವ ಮೇ ಮತಮ್" (೭-೧೮) ಇತಿ ಹಿ ಉಕ್ತಮ್। ನ ಹಿ ಭಗವತ್ಸ್ವರೂಪಾಣಾಂ ಸತಾಂ ಯುಕ್ತತಮತ್ವಮ್ ಅಯುಕ್ತತಮತ್ವಂ ವಾ ವಾಚ್ಯಮ್ ॥

(ಭಾಷ್ಯಾರ್ಥ)

(ಇಂಥ ಅಕ್ಷರವನ್ನು) ಇಂದ್ರಿಯಗ್ರಾಮವನ್ನು ಇಂದ್ರಿಯಸಮುದಾಯವನ್ನು ಸಂನಿಯಮನಮಾಡಿಕೊಂಡು ಚೆನ್ನಾಗಿ ಬಿಗಿಹಿಡಿದು ಎಳೆದುಕೊಂಡು ಸರ್ವತ್ರ ಎಲ್ಲಾ ಕಾಲದಲ್ಲಿಯೂ ಸಮಬುದ್ಧಿಗಳಾಗಿ-ಸಮವಾದ ಇಷ್ಟವಾದದ್ದು ಬರಲಿ ಅನಿಷ್ಟ ವಾದದ್ದು ಬರಲಿ ಒಂದೇ ಸಮವಾಗಿರುವ ಬುದ್ಧಿಯು ಯಾರದೋ ಅವರು ಸಮ ಬುದ್ಧಿಗಳು. (ಅಂಥವರಾಗಿ ಯಾರು ಉಪಾಸನೆಮಾಡುತ್ತಿರುವರೋ), ಅವರು, ಯಾರು ಇಂಥವರೋ ಅವರು, ಸರ್ವಪ್ರಾಣಿಗಳ ಹಿತದಲ್ಲಿ ನಿರತರಾಗಿರುವ (ಅವರು) ನನ್ನನ್ನೇ ಸೇರುವರು. ಆ (ಅಕ್ಷರೋಪಾಸಕರ) ವಿಷಯದಲ್ಲಿ ಅವರು ನನ್ನನ್ನೇ ಸೇರುವರಾದ್ದರಿಂದ ಏನನ್ನೂ ಹೇಳತಕ್ಕದ್ದೇ ಇಲ್ಲ. ಏಕೆಂದರೆ "ಜ್ಞಾನಿಯು ನನ್ನ ಆತ್ಮನೇ ಎಂದು (ನನ್ನ) ಮತವು" (೭-೧೮) ಎಂದು ಹೇಳಿಯೇ ಇರುತ್ತದೆ. **ಭಗವಂತನ ಸ್ವರೂಪವೇ ಆಗಿರುವ (ಅವರನ್ನು ಯುಕ್ತತಮರೆಂದಾಗಲಿ ಯುಕ್ತತಮರಲ್ಲವೆಂದಾಗಲಿ ಹೇಳತಕ್ಕದ್ದೇ ಅಲ್ಲವಷ್ಟೆ**[3].

## ಅಕ್ಷರೋಪಾಸನೆಯಲ್ಲಿ ಕ್ಲೇಶ ಹೆಚ್ಚು

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥**

---

1. 'ತೇಷಾಂ ಫಲಮಾಹ ಸಂನಿಯಮ್ಯೇತಿ' ಮು॥
2. 'ಸಂಹೃತ್ಯ' ನಿ॥, 'ಸಮ್ಯಗುಪಸಂಹೃತ್ಯ' ಮೈ॥
3. ಆದ್ದರಿಂದ ಭಗವತ್ಸ್ವರೂಪರಾದ ಅವರನ್ನು ಕೈಬಿಟ್ಟು ಉಳಿದ ಯೋಗಿಗಳಲ್ಲಿ ವಿಶ್ವರೂಪೋಪಾಸಕರು ಯುಕ್ತತಮರೆಂದು ಹೇಳಿರುತ್ತೇನೆ.

೫. ಅವ್ಯಕ್ತಾಸಕ್ತಚಿತ್ತರಾದ ಅವರಿಗೆ ಕ್ಲೇಶವು ಅಧಿಕತರ(ವಾಗಿರುತ್ತದೆ): ಏಕೆಂದರೆ ಅವ್ಯಕ್ತವೆಂಬ ಗತಿಯು ದೇಹವಂತರಿಗೆ ದುಃಖದಿಂದ ದೊರೆಯುತ್ತದೆ.

(ಭಾಷ್ಯ)

೧೮೮. ಕಿಂ ತು ಕ್ಲೇಶಃ ಅಧಿಕತರಃ। ಯದ್ಯಪಿ ಮತ್ಕರ್ಮಾದಿಪರಾಣಾಂ ಕ್ಲೇಶಃ ಅಧಿಕ ಏವ,[1] ಅಧಿಕತರಸ್ತು ಅಕ್ಷರಾತ್ಮನಾಂ ಪರಮಾರ್ಥದರ್ಶಿನಾಂ[2] ದೇಹಾಭಿಮಾನಪರಿತ್ಯಾಗನಿಮಿತ್ತಃ ಅವ್ಯಕ್ತಾಸಕ್ತಚೇತಸಾಮ್ ಅವ್ಯಕ್ತೇ ಆಸಕ್ತಂ ಚೇತಃ ಯೇಷಾಂ ತೇ ಅವ್ಯಕ್ತಾಸಕ್ತಚೇತಸಃ। ತೇಷಾಮ್ ಅವ್ಯಕ್ತಾಸಕ್ತಚೇತಸಾಮ್। ಅವ್ಯಕ್ತಾ ಹಿ ಯಸ್ಮಾತ್ ಯಾ[3] ಗತಿಃ ಅಕ್ಷರಾತ್ಮಿಕಾ ದುಃಖಂ ಸಾ[4] ದೇಹವದ್ಭಿಃ ದೇಹಾಭಿಮಾನವದ್ಭಿಃ ಅವಾಪ್ಯತೇ। ಅತಃ ಕ್ಲೇಶಃ ಅಧಿಕತರಃ ॥

(ಭಾಷ್ಯಾರ್ಥ)

ಆದರೆ ಕ್ಲೇಶವು ಅಧಿಕತರ(ವಾಗಿರುತ್ತದೆ). ನನಗಾಗಿ ಕರ್ಮವನ್ನು ಮಾಡುತ್ತಿರುವದು ಮುಂತಾದವುಗಳಲ್ಲಿ ನಿರತರಾಗಿರುವ (ವಿಶ್ವರೂಪೋಪಾಸಕರಿಗೂ) ಕ್ಲೇಶವೇನೋ ಅಧಿಕವೇ; ಆದರೆ ಅಕ್ಷರದಲ್ಲಿಯೇ ಮನಸ್ಸಿಟ್ಟವರಾಗಿ, ಪರಮಾರ್ಥವನ್ನು ಕಂಡುಕೊಂಡ, ಅವ್ಯಕ್ತಾಸಕ್ತಚಿತ್ತರಿಗೆ–ಅವ್ಯಕ್ತದಲ್ಲಿಯೇ ಅಂಟಿಕೊಂಡಿರುವ ಚಿತ್ತವು ಯಾರದೋ ಅವರು ಅವ್ಯಕ್ತಾಸಕ್ತಚಿತ್ತರು; ಅಂಥ ಅವ್ಯಕ್ತಾಸಕ್ತಚಿತ್ತರಿಗೆ–ದೇಹಾಭಿಮಾನವನ್ನು ಬಿಡುವದೆಂಬ ಕಾರಣದಿಂದ (ಆಗುವ)ದು ಇನ್ನೂ ಅಧಿಕವಾಗಿರುತ್ತದೆ. (ಹಿ) ಏಕೆಂದರೆ ಅಕ್ಷರಸ್ವರೂಪವಾದ ಅವ್ಯಕ್ತ(ವೆಂಬ) ಗತಿಯುಂಟಲ್ಲ, ಅದು ದೇಹವಂತರಿಗೆ ದೇಹಾಭಿಮಾನವುಳ್ಳವರಿಗೆ[5] ದುಃಖದಿಂದ ದೊರೆಯುತ್ತದೆ. ಆದ್ದರಿಂದ (ಅವರಿಗೆ) ಕ್ಲೇಶವು ಇನ್ನೂ ಹೆಚ್ಚು.

---

1. 'ಅಧಿಕ ಏವ ಕ್ಲೇಶಃ' ಮ|| ಮೈ||
2. 'ಪರಮಾತ್ಮದರ್ಶಿನಾಂ' ಆ|| ಮ|| ಮೈ||
3–4. ಮ|| ಮೈ||ಗಳಲ್ಲಿಲ್ಲ.
5. ವ್ಯವಹಾರದೃಷ್ಟಿಯಿಂದ ಎಲ್ಲರೂ ದೇಹವಂತರಾದರೂ ಅಕ್ಷರೋಪಾಸಕರಿಗೆ ಅವರ ದೃಷ್ಟಿಯಿಂದ ದೇಹವೇ ಇಲ್ಲ. ಅಜ್ಞಾನಿಗಳಂತೆಯೇ ವಿಶ್ವರೂಪೋಪಾಸಕರೂ ದೇಹಾಭಿಮಾನಿಗಳಾಗಿರುವದರಿಂದ ದೇಹವಂತರೇ.

# ವಿಶ್ವರೂಪೋಪಾಸಕರಿಗೆ ಭಗವಂತನು ಉದ್ಧಾರಕನು

(ಭಾಷ್ಯ)

೧೮೯. ಅಕ್ಷರೋಪಾಸಕಾನಾಂ ಯತ್ ವರ್ತನಂ ತತ್ ಉಪರಿಷ್ಟಾತ್ ವಕ್ಷ್ಯಾಮಃ । (ಯೇ ತು)[1] –

(ಭಾಷ್ಯಾರ್ಥ)

ಅಕ್ಷರವನ್ನು ಉಪಾಸನೆ ಮಾಡುತ್ತಿರುವವರ ನಡತೆಯುಂಟಲ್ಲ, ಅದನ್ನು ಮುಂದೆ ಹೇಳುವೆವು (ಆದರೆ ಯಾರು)—

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥ ೬ ॥**
**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭ ॥**

೬–೭. ಆದರೆ ಯಾರು ಸರ್ವಕರ್ಮಗಳನ್ನೂ ನನ್ನಲ್ಲಿ ಸಂನ್ಯಾಸ ಮಾಡಿ ಮತ್ಪರರಾಗಿ ಅನನ್ಯವಾಗಿಯೇ (ಇರುವ) ಯೋಗದಿಂದ ನನ್ನನ್ನು ಧ್ಯಾನಿಸುತ್ತಾ ಉಪಾಸನೆಮಾಡುತ್ತಿರುವರೋ; ಎಲೈ ಪಾರ್ಥನೆ, ನನ್ನಲ್ಲಿ ನೆಟ್ಟ ಚಿತ್ತವುಳ್ಳ ಅವರನ್ನು ನಾನು ಮೃತ್ಯುಸಂಸಾರಸಾಗರದಿಂದ ತಡವಿಲ್ಲದೆ ಸಮುದ್ಧಾರಮಾಡುವ(ನಾಗುವೆನು).

(ಭಾಷ್ಯ)

೧೯೦. ಯೇ ತು ಸರ್ವಾಣಿ ಕರ್ಮಾಣಿ ಮಯಿ ಈಶ್ವರೇ ಸಂನ್ಯಸ್ಯ ಮತ್ಪರಾಃ ಅಹಂ ಪರಃ ಯೇಷಾಂ ತೇ ಮತ್ಪರಾಃ ಸನ್ತಃ । ಅನನ್ಯೇನೈವ । ಅವಿದ್ಯಮಾನಮ್ ಅನ್ಯತ್ ಆಲಮ್ಬನಂ ವಿಶ್ವರೂಪಂ ದೇವಮ್ ಆತ್ಮಾನಂ ಮುಕ್ತ್ವಾ ಯಸ್ಯ ಸಃ ಅನನ್ಯಃ । ತೇನ ಅನನ್ಯೇನೈವ । ಕೇನ ?[2] ಯೋಗೇನ ಸಮಾಧಿನಾ ಮಾಂ ಧ್ಯಾಯನ್ತಃ ಚಿನ್ತಯನ್ತಃ[3] ಉಪಾಸತೇ ॥

---

1. ಮುಂದೆ ಭಾಷ್ಯದಲ್ಲಿರುವ ಈ ಮಾತುಗಳಿಗೆ ಹಿಂದಿನ ವಾಕ್ಯವನ್ನು ಅನ್ವಯಿಸಬೇಕೆಂದು ತಿಳಿಸುವದಕ್ಕೆ ಇಲ್ಲಿ ಅವನ್ನು ಕಂಸದಲ್ಲಿ ಕೊಟ್ಟಿದೆ.

2. ‘ ಕೇವಲೇನ ’ ನಿ॥; ಮ॥ದಲ್ಲಿ ಈ ಮಾತೇ ಇಲ್ಲ.

3. ಮ॥ ಮೈ॥ ಗಳಲ್ಲಿಲ್ಲ.

(ಭಾಷ್ಯಾರ್ಥ)

ಆದರೆ ಯಾರು ಎಲ್ಲಾ ಕರ್ಮಗಳನ್ನೂ ನನ್ನಲ್ಲಿ, ಈಶ್ವರನಲ್ಲಿ ಸಂನ್ಯಾಸ ಮಾಡಿ[1] ಮತ್ಪರರಾಗಿ-ನಾನು ಯಾರಿಗೆ ಹೆಚ್ಚಿನವನಾಗಿರುವೆನೋ ಅಂಥ ಮತ್ಪರರಾಗಿ, ಅನನ್ಯವೇ ಆಗಿರುವ-ವಿಶ್ವರೂಪನಾದ ದೇವನಾದ (ಪರ)ಮಾತ್ಮನನ್ನು ಬಿಟ್ಟು ಯಾವದಕ್ಕೆ ಮತ್ತೊಂದು ಆಲಂಬನೆಯಿರುವದಿಲ್ಲವೋ ಅದು ಅನನ್ಯವು. ಅಂಥ ಅನನ್ಯವೇ ಆಗಿರುವ-(ಅಂಥ) ಯಾವದರಿಂದ ?-(ಎಂದರೆ) ಯೋಗದಿಂದ ಸಮಾಧಿಯಿಂದ[2] ನನ್ನನ್ನು ಧ್ಯಾನಿಸುತ್ತಾ ಚಿಂತಿಸುತ್ತಾ ಉಪಾಸನೆಮಾಡುತ್ತಿರುವರೋ—

(ಭಾಷ್ಯ)

೧೯೧. ತೇಷಾಂ ಕಿಮ್ ? ತೇಷಾಂ ಮದುಪಾಸನೈಕಪರಾಣಾಮ್ ಅಹಮ್ ಈಶ್ವರಃ ಸಮುದ್ಧರ್ತಾ । ಕುತಃ ಇತಿ ? ಆಹ-ಮೃತ್ಯುಸಂಸಾರಸಾಗರಾತ್ ಮೃತ್ಯುಯುಕ್ತಃ ಸಂಸಾರಃ ಮೃತ್ಯುಸಂಸಾರಃ । ಸ ಏವ ಸಾಗರ ಇವ ಸಾಗರಃ । ದುಸ್ತರತ್ವಾತ್ । ತಸ್ಮಾತ್ ಮೃತ್ಯುಸಂಸಾರಸಾಗರಾತ್ । ಅಹಂ ತೇಷಾಂ ಸಮುದ್ಧರ್ತಾ ಭವಾಮಿ ನ ಚಿರಾತ್, ಕಿಂ ತರ್ಹಿ, ಕ್ಷಿಪ್ರಮೇವ ಹೇ ಪಾರ್ಥ । ಮಯ್ಯಾವೇಶಿತಚೇತಸಾಂ ಮಯಿ ವಿಶ್ವರೂಪೇ ಆವೇಶಿತಂ ಸಮಾಹಿತಂ ಪ್ರವೇಶಿತಂ[3] ಚೇತಃ ಯೇಷಾಂ ತೇ ಮಯ್ಯಾವೇಶಿತಚೇತಸಃ । ತೇಷಾಮ್ ॥

(ಭಾಷ್ಯಾರ್ಥ)

ಅವರಿಗೆ ಏನು ? (ಎಂದರೆ) : ನನ್ನನ್ನು ಉಪಾಸನೆಮಾಡುವದೊಂದರಲ್ಲಿಯೇ ತಾತ್ಪರ್ಯವುಳ್ಳ ಅವರಿಗೆ ನಾನು, ಈಶ್ವರನು, ಸಮುದ್ಧಾರಮಾಡುವವನು. ಏತರಿಂದ? ಎಂದರೆ ಹೇಳುತ್ತಾನೆ : ಮೃತ್ಯುಸಂಸಾರಸಾಗರದಿಂದ-ಸಾವಿನಿಂದೊಡಗೂಡಿರುವ ಸಂಸಾರವು ಮೃತ್ಯುಸಂಸಾರವು ; ಅದೇ ಸಾಗರದಂತೆ ದಾಟುವದಕ್ಕೆ ಅಶಕ್ಯವಾಗಿರುವದರಿಂದ ಸಾಗರವು. ಆ ಮೃತ್ಯುಸಂಸಾರಸಾಗರದಿಂದ-ನಾನು ಅವರಿಗೆ ಸಮುದ್ಧಾರಮಾಡುವವನಾಗುವೆನು. ತಡದಿಂದಲ್ಲ, ಮತ್ತೇನೆಂದರೆ, ಬೇಗನೆಯೇ, ಎಲೈ ಪಾರ್ಥನೆ, ನನ್ನಲ್ಲಿಯೇ ಆವೇಶಿತವಾದ ಚಿತ್ತವುಳ್ಳ

---

1. ಈಶ್ವರನಿಗೆ ನಮರ್ಪಿಸಿ. ಮಾಡುವ ಕರ್ಮಗಳನ್ನು ಈಶ್ವರನಿಗಾಗಿಯೇ ಮಾಡುವದೇ ಇಲ್ಲಿ ಕರ್ಮಸಂನ್ಯಾಸವು ; ಏಕೆಂದರೆ ಆ ಸಂನ್ಯಾಸದಿಂದ ಕರ್ಮಗಳ ಶುಭಾಶುಭಫಲಗಳು ತಪ್ಪುವವು.

2. ಪರಮಾತ್ಮನನ್ನೇ ಚಿಂತಿಸುವವರಿಂದ ಇದು ಯೋಗವೂ ಆಯಿತು.

3. ಈ ಮಾತು ಮು॥ಮೈ॥ಗಳಲ್ಲಿಲ್ಲ.

-ವಿಶ್ವರೂಪನಾದ ನನ್ನಲ್ಲಿ ಆವೇಶಿತವಾದ, ನಿಲ್ಲಿಸಲ್ಪಟ್ಟಿರುವ, ಹೊಗಿಸಲ್ಪಟ್ಟ ಚಿತ್ತವು ಯಾರದೋ ಅವರು ಮಯ್ಯಾವೇಶಿತಚೇತಸರು, ಅಂಥ-(ಉಪಾಸಕರನ್ನು ನಾನು ಉದ್ಧಾರಮಾಡುವವನಾಗುವೆನು).

## ವಿಶ್ವರೂಪೋಪಾಸನೆಯ ಮೆಟ್ಟಿಲುಗಳು

(ಭಾಷ್ಯ)

೧೯೨. ಯತ ಏವಂ ತಸ್ಮಾತ್—

(ಭಾಷ್ಯಾರ್ಥ)

ಹೀಗಿರುವದಷ್ಟೆ, ಆದ್ದರಿಂದ ;—

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

೮. ನನ್ನಲ್ಲಿಯೇ ಮನಸ್ಸನ್ನು ಇಡು, ನನ್ನಲ್ಲಿ ಬುದ್ಧಿಯನ್ನು ಹೊಗಿಸು. ಆ ಬಳಿಕ ನನ್ನಲ್ಲಿಯೇ ನಿವಾಸಮಾಡುವೆ, ಸಂಶಯವಿಲ್ಲ.

(ಭಾಷ್ಯ)

೧೯೩. ಮಯಿ ಏವ ವಿಶ್ವರೂಪೇ ಈಶ್ವರೇ, ಮನಃ ಸಙ್ಕಲ್ಪವಿಕಲ್ಪಾತ್ಮಕಮ್ ಆಧತ್ಸ್ವ ಸ್ಥಾಪಯ । ಮಯಿ ಅಧ್ಯವಸಾಯಂ[1] ಕುರ್ವತೀಂ[2] ಬುದ್ಧಿಮ್ ಆಧತ್ಸ್ವ[3] ನಿವೇಶಯ । ತತಃ ತೇ ಕಿಂ ಸ್ಯಾತ್ ಇತಿ? ಶೃಣು । ನಿವಸಿಷ್ಯಸಿ ನಿವತ್ಸ್ಯಸಿ ನಿಶ್ಚಯೇನ ಮದಾತ್ಮನಾ ಮಯಿ ವಾಸಂ[4] ಕರಿಷ್ಯಸ್ಯೇವ । ಅತಃ ಶರೀರಪಾತಾತ್ ಊರ್ಧ್ವಮ್ । ನ ಸಂಶಯಃ ಸಂಶಯೋಽತ್ರ ನ ಕರ್ತವ್ಯಃ ॥

(ಭಾಷ್ಯಾರ್ಥ)

ನನ್ನಲ್ಲಿಯೇ, ವಿಶ್ವರೂಪನಾದ ಈಶ್ವರನಲ್ಲಿಯೇ, ಸಂಕಲ್ಪವಿಕಲ್ಪಾತ್ಮಕವಾದ ಮನಸ್ಸನ್ನು ಇಡು, ಸ್ಥಿರಗೊಳಿಸು ; ನನ್ನಲ್ಲಿ ನಿಶ್ಚಯವನ್ನು ಮಾಡುವ ಬುದ್ಧಿ

---

1. ' ಮಯ್ಯೇವ ವ್ಯವಸಾಯಂ ' ನಿ॥, ' ಮಯ್ಯೇವ ಅಧ್ಯವಸಾಯಂ ' ವಾ॥ ಗು॥
2. ' ಕುರ್ವನ್ತೀಂ ' ಮ॥ ವೈ॥
3. ಈ ಮಾತು ಮೂಲದಲ್ಲಿಲ್ಲವಾಗಿ ಭಾಷ್ಯಕಾರರು ಬರೆದಿದ್ದರೋ ಇಲ್ಲವೋ ; ಆದರೆ ಅಚ್ಚಿನ ಪುಸ್ತಕಗಳಲ್ಲಿದೆ.
4. ' ನಿವಾಸಂ ' ನಿ॥ ಅ॥ ಗು॥ ವಾ॥

ಯನ್ನು ಇಡು ಹೊಗಿಸಿಕೊ. ಆದರಿಂದ ನಿನಗೆ ಏನಾಗುವದು ಎಂದರೆ ಕೇಳು : ಆ ಬಳಿಕ ಶರೀರವು ಬಿದ್ದ (ಮೇಲೆ) ನನ್ನಲ್ಲಿ ನನ್ನ ರೂಪದಿಂದ (ನಿವಸಿಷ್ಯಸಿ= ನಿವತ್ಸ್ಯಸಿ) ನಿವಾಸಮಾಡುವೆ ನಿಶ್ಚಯವಾಗಿ ವಾಸಮಾಡಿಕೊಂಡೇ ಇರುವೆ.[1] ಸಂಶಯವಿಲ್ಲ, ಇದರಲ್ಲಿ ಸಂಶಯವನ್ನು ಮಾಡತಕ್ಕದ್ದಲ್ಲ.

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಞ್ಜಯ ॥ ೯ ॥**

೯. ಆದರೆ ನನ್ನಲ್ಲಿ ಚಿತ್ತವನ್ನು ಸ್ಥಿರವಾಗಿ ಸಮಾಧಾನಗೊಳಿಸಿಕೊಳ್ಳುವದಕ್ಕೆ ಶಕ್ತನಾಗದೆ ಇದ್ದರೆ, ಆಗ ಧನಂಜಯನೆ, ಅಭ್ಯಾಸಯೋಗದಿಂದ ನನ್ನನ್ನು ಪಡೆಯುವದಕ್ಕೆ ಇಚ್ಛಿಸು.

(ಭಾಷ್ಯ)

೧೯೪. ಅಥ ಏವಂ ಯಥಾ ಅವೋಚಂ[2] ತಥಾ ಮಯಿ ಚಿತ್ತಂ ಸಮಾಧಾತುಂ ಸ್ಥಾಪಯಿತುಂ ಸ್ಥಿರಮ್ ಅಚಲಂ[3] ನ ಶಕ್ನೋಷಿ ಚೇತ್ ತತಃ ಪಶ್ಚಾತ್ ಅಭ್ಯಾಸಯೋಗೇನ । ಚಿತ್ತಸ್ಯ ಏಕಸ್ಮಿನ್ ಆಲಮ್ಬನೇ ಸರ್ವತಃ ಸಮಾಹೃತ್ಯ ಪುನಃ ಪುನಃ ಸ್ಥಾಪನಮ್ ಅಭ್ಯಾಸಃ । ತತ್ಪೂರ್ವಕಃ ಯೋಗಃ ಸಮಾಧಾನಲಕ್ಷಣಃ । ತೇನ ಅಭ್ಯಾಸಯೋಗೇನ ಮಾಂ ವಿಶ್ವರೂಪಮ್ ಇಚ್ಛ ಪ್ರಾರ್ಥಯಸ್ವ ಆಪ್ತುಂ ಪ್ರಾಪ್ತುಂ[4] ಹೇ ಧನಞ್ಜಯ ॥

(ಭಾಷ್ಯಾರ್ಥ)

ಆದರೆ ಹೀಗೆ, (ನಾನು) ಹೇಳಿದೆನಲ್ಲ, ಹಾಗೆ ನನ್ನಲ್ಲಿ ಚಿತ್ತವನ್ನು ಸ್ಥಿರವಾಗಿ ಅಲುಗಾಡದಂತೆ ಸಮಾಧಾನಗೊಳಿಸುವದಕ್ಕೆ ನಿಲ್ಲಿಸಿಕೊಳ್ಳುವದಕ್ಕೆ (ನೀನು) ಶಕ್ತನಾಗದೆ ಹೋದರೆ, ಆಗ (ಆ) ಬಳಿಕ **ಅಭ್ಯಾಸಯೋಗ**ದಿಂದ ಚಿತ್ತವನ್ನು ಒಂದೇ

---

1. 'ಮಯ್ಯೇವ' ಎಂಬ ಏವಕಾರವನ್ನು 'ನಿವಸಿಷ್ಯಸಿ' ಎಂಬುದಕ್ಕೆ ಭಾಷ್ಯದಲ್ಲಿ ಜೋಡಿಸಿದೆ. ವಿಶ್ವರೂಪವನ್ನೇ ಮನಸ್ಸಿಗೆ ತಂದುಕೊಂಡು ಮತ್ತೊಂದನ್ನು ಯೋಚಿಸದೆ ಅದರಲ್ಲಿಯೇ ನಿಶ್ಚಯವುಳ್ಳವನಾದರೆ ಆ ಸಾಕ್ಷಾತ್ಕಾರದ ಫಲವಾಗಿ ಈಶ್ವರಸಾಯುಜ್ಯವನ್ನೇ ಪಡೆಯುವೆಯೆಂದರ್ಥ. ಬೃ. ೪-೧; ಛಾಂ. ೩-೧೪-೧.

2. 'ಅವೋಚಾಮ' ಸಿ॥; 'ಅಥ ತ್ವಂ ಯಥಾವೋಚಂ' ಮ॥

3. ಇದರ ಮುಂದೆ 'ಕರ್ತುಂ' ಎಂದು ಹೆಚ್ಚಾಗಿ ಸಿ॥

4. ಮ॥ ಮೈ॥ಗಳಲ್ಲಿಲ್ಲ.

ಆಲಂಬನದಲ್ಲಿ ಎಲ್ಲಾ ಕಡೆಯಿಂದಲೂ ಎಳೆದುಕೊಂಡು ಮತ್ತೆ ಮತ್ತೆ ನಿಲ್ಲಿಸುವದು **ಅಭ್ಯಾಸ**ವು ; ಅದರಿಂದೊಡಗೂಡಿದ ಸಮಾಧಾನಗೊಳಿಸುವ ರೂಪವಾದದ್ದು **ಯೋಗ**ವು. ಆ ಅಭ್ಯಾಸಯೋಗದಿಂದ[1] ಎಲೈ ಧನಂಜಯನೆ, ವಿಶ್ವರೂಪನಾದ ನನ್ನನ್ನು ಪಡೆಯುವದಕ್ಕೆ ಸೇರುವದಕ್ಕೆ ಇಚ್ಛಿಸು, ಬಯಸು.[2]

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ ೧೦ ॥**

೧೦. ಅಭ್ಯಾಸದಲ್ಲಿಯೂ ಅಸಮರ್ಥನಾಗಿರುವೆಯಾದರೆ ಮತ್ಕರ್ಮಪರಮನಾಗಿರು. ನನಗಾಗಿ ಕರ್ಮಗಳನ್ನು ಮಾಡುತ್ತಿದ್ದರೂ ಸಿದ್ಧಿಯನ್ನು ಪಡೆಯುವೆ.

(ಭಾಷ್ಯ)

೧೯೫. ಅಭ್ಯಾಸೇಽಪಿ ಅಸಮರ್ಥಃ ಅಸಿ ಅಶಕ್ತೋಽಸಿ, ತರ್ಹಿ[3] ಮತ್ಕರ್ಮಪರಮೋ ಭವ ಮದರ್ಥಂ ಕರ್ಮ ಮತ್ಕರ್ಮ ತತ್ಪರಮಃ ಮತ್ಕರ್ಮಪರಮಃ ಮತ್ಕರ್ಮಪ್ರಧಾನಃ ಇತ್ಯರ್ಥಃ । ಅಭ್ಯಾಸೇನ ವಿನಾ ಮದರ್ಥಮಪಿ ಕರ್ಮಾಣಿ ಕೇವಲಂ ಕುರ್ವನ್ ಸಿದ್ಧಿಂ ಸತ್ತ್ವಶುದ್ಧಿಯೋಗಜ್ಞಾನಪ್ರಾಪ್ತಿದ್ವಾರೇಣ ಅವಾಪ್ಸ್ಯಸಿ ॥

(ಭಾಷ್ಯಾರ್ಥ)

ಅಭ್ಯಾಸ(ಯೋಗವನ್ನು) ಮಾಡುವದರಲ್ಲಿಯೂ ಅಸಮರ್ಥನಾಗಿರುವೆಯಾದರೆ ಅಶಕ್ತನಾಗಿರುವೆಯಾದರೆ, ಆಗ ಮತ್ಕರ್ಮಪರಮನಾಗಿರು. ನನಗಾಗಿ (ಮಾಡುವ) ಕರ್ಮವು ಮತ್ಕರ್ಮವು ; ಅದೇ ಹೆಚ್ಚೆಂಬುವನು ಮತ್ಕರ್ಮಪರಮನು, ನನ್ನ ಕರ್ಮವೇ ಮುಖ್ಯವಾಗಿರುವವನು, (ಅಂಥವನಾಗು) ಎಂದರ್ಥ. ಅಭ್ಯಾಸವಿಲ್ಲದೆ ಸುಮ್ಮನೆ ನನಗೋಸ್ಕರವಾಗಿ ಕರ್ಮಗಳನ್ನು ಮಾಡುತ್ತಿದ್ದರೂ ಸಿದ್ಧಿಯನ್ನು ಸತ್ತ್ವಶುದ್ಧಿ, ಯೋಗ, ಜ್ಞಾನಪ್ರಾಪ್ತಿ–ಇವುಗಳ ಮೂಲಕ (ಸಿದ್ಧಿಯನ್ನು) ಪಡೆಯುವೆ.[4]

---

1. ೮-೮ನ್ನು ನೋಡಿ ; ಅಭ್ಯಾಸದಿಂದ ಮನೋಬುದ್ಧಿಗಳು ವಿಶ್ವರೂಪದಲ್ಲಿಯೇ ನಿಲ್ಲುವವು, ಬಳಿಕ ಅದರಿಂದ ಸಾಯುಜ್ಯವಾಗುವದು_ಎಂದು ಭಾವ.

2. ಪ್ರಯತ್ನಿಸು.

3. 'ಯದಿ' ಎಂದು ಮ॥ ವ್ಯಾ॥

4. ೧೮-೫೦ ರ ಭಾಷ್ಯವನ್ನು ನೋಡಿ.

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

೧೧. ಆದರೆ ಇದನ್ನುಕೂಡ ಮಾಡುವದಕ್ಕೆ ಅಶಕ್ತನಾಗಿರುವೆಯಾದರೆ ಆಗ ಮದ್ಯೋಗವನ್ನು ಆಶ್ರಯಿಸಿಕೊಂಡು ಸರ್ವಕರ್ಮಗಳ ಫಲತ್ಯಾಗವನ್ನೂ ಯತಾತ್ಮನಾಗಿ ಮಾಡು [1].

(ಭಾಷ್ಯ)

೧೯೬. ಅಥ ಪುನಃ ಏತದಪಿ ಯದುಕ್ತಂ ಮತ್ಕರ್ಮಪರತ್ವಮ್ ತತ್ ಕರ್ತುಮ್ ಅಶಕ್ತಃ ಅಸಿ [2] ಮದ್ಯೋಗಮ್ ಆಶ್ರಿತಃ ಮಯಿ ಕ್ರಿಯಮಾಣಾನಿ ಕರ್ಮಾಣಿ ಸಂನ್ಯಸ್ಯ ಯತ್ ಕರಣಂ ತೇಷಾಮ್ ಅನುಷ್ಠಾನಂ ಸ ಮದ್ಯೋಗಃ । ತಮ್ ಆಶ್ರಿತಃ ಸನ್ ಸರ್ವಕರ್ಮಫಲತ್ಯಾಗಂ ಸರ್ವೇಷಾಂ ಕರ್ಮಣಾಂ ಫಲಸಂನ್ಯಾಸಂ ಸರ್ವಕರ್ಮಫಲತ್ಯಾಗಂ ತತಃ ಅನನ್ತರಂ ಕುರು ಯತಾತ್ಮವಾನ್ ಸಂಯತಚಿತ್ತಃ ಸನ್ ಇತ್ಯರ್ಥಃ ॥

(ಭಾಷ್ಯಾರ್ಥ)

ಆದರೆ ಹೀಗಿಲ್ಲದೆ ಇದನ್ನುಕೂಡ ಮತ್ಕರ್ಮಪರಮ(ನಾಗೆಂದು) ಹೇಳಿತಲ್ಲ, ಅದನ್ನು (ಕೂಡ) ಮಾಡುವದಕ್ಕೆ ಅಶಕ್ತನಾಗಿರುವೆಯಾದರೆ ಆಗ (ಅ) ಬಳಿಕ ಮದ್ಯೋಗವನ್ನು ಆಶ್ರಯಿಸಿಕೊಂಡು **ನನ್ನಲ್ಲಿ ಮಾಡುವ ಕರ್ಮಗಳನ್ನು ಸಂನ್ಯಾಸಮಾಡಿ ಮಾಡುವದಿದೆಯಲ್ಲ, ಅವುಗಳನ್ನು ಅನುಷ್ಠಾನಮಾಡುವದಿದೆಯಲ್ಲ, ಅದು ಮದ್ಯೋಗವು.** ಅದನ್ನು ಆಶ್ರಯಿಸಿಕೊಂಡು, ಯತಾತ್ಮನಾಗಿ ಚಿತ್ತವನ್ನು ಬಿಗಿಹಿಡಿದುಕೊಂಡು, ಸರ್ವಕರ್ಮಫಲತ್ಯಾಗವನ್ನು ಎಲ್ಲಾ ಕರ್ಮಗಳ ಫಲಗಳ ಸಂನ್ಯಾಸವೆಂಬ ಸರ್ವಕರ್ಮಫಲತ್ಯಾಗವನ್ನು ಮಾಡು ಎಂದರ್ಥ.[3]

## ಸರ್ವಕರ್ಮಫಲತ್ಯಾಗದ ಸ್ತುತಿ

(ಭಾಷ್ಯ)

೧೯೭. ಇದಾನೀಂ ಸರ್ವಕರ್ಮಫಲತ್ಯಾಗಂ ಸ್ತೌತಿ—

---

1. 'ಮತ್ಕರ್ಮ' ಎಂಬ ಮಾತಿನಲ್ಲಿಯೇ ಮದ್ಯೋಗವು ಸೇರಿರುವದರಿಂದ 'ಮದ್ಯೋಗಮಾಶ್ರಿತಃ' ಎಂಬುದನ್ನು ಸರ್ವಕರ್ಮತ್ಯಾಗಕ್ಕೇ ಇದು ಹೆಚ್ಚು ಒಪ್ಪುತ್ತದೆ ಎಂದೆಣಿಸಿ ಈ ಸಂಸ್ಕರಣದಲ್ಲಿ ಹೀಗೆ ಅರ್ಥವನ್ನು ಮಾಡಲಾಗಿದೆ.
2. 'ಅಸಿ ಯದಿ' ಮಾ॥
3. ಪರಮಾತ್ಮನಿಗೆ ಸಮರ್ಪಣೆಮಾಡುವದೇ ಕರ್ಮಫಲತ್ಯಾಗಕ್ಕೆ ಉಪಾಯ.

(ಭಾಷ್ಯಾರ್ಥ)

ಈ ಸರ್ವಕರ್ಮಗಳ ಫಲವನ್ನೂ ತ್ಯಾಗಮಾಡುವದನ್ನು (ಭಗವಂತನು) ಹೊಗಳುತ್ತಾನೆ :—

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ ಕರ್ಮಫಲತ್ಯಾಗಸ್ತ್ಯಾಗಾಚ್ಛಾನ್ತಿರನನ್ತರಮ್ ॥ ೧೨ ॥**

೧೨. ಏತಕ್ಕೆಂದರೆ ಜ್ಞಾನವು ಅಭ್ಯಾಸಕ್ಕಿಂತ ಹೆಚ್ಚಿನದು; ಜ್ಞಾನಕ್ಕಿಂತ ಧ್ಯಾನವು ಮೇಲಾಗಿರುವದು ; ಧ್ಯಾನಕ್ಕಿಂತ ಕರ್ಮಫಲತ್ಯಾಗವು ; ತ್ಯಾಗದಿಂದ ಶಾಂತಿಯು ಅನಂತರವೇ.

(ಭಾಷ್ಯ)

೧೯೮. ಶ್ರೇಯಃ ಹಿ ಪ್ರಶಸ್ಯತರಂ ಜ್ಞಾನಮ್ । ಕಸ್ಮಾತ್ ? ಅವಿವೇಕಪೂರ್ವಕಾತ್ [1] ಅಭ್ಯಾಸಾತ್ । ತಸ್ಮಾದಪಿ ಜ್ಞಾನಾತ್ ಜ್ಞಾನಪೂರ್ವಕಂ ಧ್ಯಾನಂ ವಿಶಿಷ್ಯತೇ । ಜ್ಞಾನವತೋ ಧ್ಯಾನಾದಪಿ ಕರ್ಮಫಲತ್ಯಾಗಃ ವಿಶಿಷ್ಯತೇ ಇತಿ ಅನುಷಜ್ಯತೇ । ಏವಂ ಕರ್ಮಫಲತ್ಯಾಗಾತ್ ಪೂರ್ವ[2]ವಿಶೇಷಣವತಃ ಶಾಂತಿಃ ಉಪಶಮಃ ಸಹೇತುಕಸ್ಯ ಸಂಸಾರಸ್ಯ ಅನನ್ತರಮೇವ ಸ್ಯಾತ್, ನ ತು ಕಾಲಾನ್ತರಮ್ ಅಪೇಕ್ಷತೇ ॥

(ಭಾಷ್ಯಾರ್ಥ)

ಏಕೆಂದರೆ ಜ್ಞಾನವು ಶ್ರೇಯಸ್ಸು, ಇನ್ನೂ ಹೆಚ್ಚಿನದು. ಯಾವದಕ್ಕಿಂತ ? ಎಂದರೆ, ಅವಿವೇಕಪೂರ್ವಕವಾದ [3] **ಅಭ್ಯಾಸಕ್ಕಿಂತ (ಜ್ಞಾನವು ಹೆಚ್ಚಿನದು), ಆ ಜ್ಞಾನಕ್ಕಿಂತಲೂ ಜ್ಞಾನಪೂರ್ವಕವಾದ ಧ್ಯಾನವು** [4] **ಹೆಚ್ಚಿನದು ; ಜ್ಞಾನದಿಂದೊಡಗೂಡಿದ ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವು**[5] **'ವಿಶಿಷ್ಯತೇ'**

---

1. ಈ ಃ॥ ಗು॥ ಮು॥ ಮೈ॥ ಪಾಠವೇ ಸರಿಯಾದದ್ದು.

2. ' ಪೂರ್ವೋಕ್ತ ' ಮು॥ ಮೈ॥

3. ವಿವೇಕವೆಂದರೆ ಜ್ಞಾನವು ; ಮನಸ್ಸನ್ನು ಆತ್ಮನಲ್ಲಿ ಸ್ಥಿರಗೊಳಿಸುವ ಪ್ರಯತ್ನರೂಪವಾದ ಅಭ್ಯಾಸಕ್ಕಿಂತ ಆತ್ಮಸ್ವರೂಪವನ್ನು ನಿಶ್ಚಯಿಸುವ ಜ್ಞಾನವು ಹೆಚ್ಚು.

4. ಇಲ್ಲಿ ಧ್ಯಾನವೆಂದರೆ ಶಾಸ್ತ್ರೋಕ್ತಜ್ಞಾನವನ್ನು ಅನುಭವಕ್ಕೆ ಹೊಂದಿಸುವ ಪ್ರಯತ್ನವು, ಇದೇ ನಿದಿಧ್ಯಾಸವು.

5. ಕರ್ಮ, ಫಲ_ಮುಂತಾದದ್ದೆಲ್ಲವೂ ಬರಿಯ ತೋರಿಕೆಯೆಂಬ ವಿಜ್ಞಾನದಿಂದಾಗುವ ಫಲತ್ಯಾಗವು ಎಂದರ್ಥ. ಇದು ಮುಂದೆ ಭಾಷ್ಯದಲ್ಲಿ ಸ್ಫುಟವಾಗುವದು.

**ಹೆಚ್ಚಿನದಾಗಿರುತ್ತದೆ ಎಂದು ಸೇರಿಸಿಕೊಳ್ಳಬೇಕು. ಹೀಗೆ ಮೊದಲು ಹೇಳಿರುವ ವಿಶೇಷಣಗಳಿಂದ ಕೂಡಿರುವ ಕರ್ಮಫಲತ್ಯಾಗದಿಂದ ಶಾಂತಿಯು, ಕಾರಣಸಹಿತವಾದ ಸಂಸಾರದ ನಾಶವು ಅನಂತರದಲ್ಲಿಯೇ ಆಗಿಬಿಡುವದು, ಮತ್ತೊಂದು ಕಾಲವನ್ನು ಬಯಸುವದಿಲ್ಲ.**[1]

(ಭಾಷ್ಯ)

೧೯೯. ಅಜ್ಞಸ್ಯ ಕರ್ಮಣಿ ಪ್ರವೃತಸ್ಯ ಪೂರ್ವೋಪದಿಷ್ಟೋಪಾಯಾನುಷ್ಠಾನಾಶಕ್ತೌ ಸರ್ವಕರ್ಮಫಲತ್ಯಾಗಃ[2] ಶ್ರೇಯಃಸಾಧನಮ್[3] ಉಪದಿಷ್ಟಂ ನ ಪ್ರಥಮಮೇವ । ಅತಶ್ಚ ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಇತಿ ಉತ್ತರೋತ್ತರವಿಶಿಷ್ಟತ್ವೋಪದೇಶೇನ[4] ಸರ್ವಕರ್ಮಫಲತ್ಯಾಗಃ ಸ್ತೂಯತೇ ಸಂಪನ್ನಸಾಧನಾನುಷ್ಠಾನಾಶಕ್ತೌ ಅನುಷ್ಠೇಯತ್ವೇನ ಶ್ರುತತ್ವಾತ್ । ಕೇನ ಸಾಧರ್ಮ್ಯೇಣ[5] ಸ್ತುತಿತ್ವಮ್ ? "ಯದಾ ಸರ್ವೇ ಪ್ರಮುಚ್ಯನ್ತೇ" (ಕ. ೨-೩-೧೪) ಇತಿ ಸರ್ವಕಾಮಪ್ರಹಾಣಾತ್ ಅಮೃತತ್ವಮ್ ಉಕ್ತಮ್ । ತತ್ ಪ್ರಸಿದ್ಧಂ[6] ಕಾಮಾಶ್ಚ ಸರ್ವೇ ಶ್ರೌತಸ್ಮಾರ್ತಕರ್ಮಣಾಂ[7] ಫಲಾನಿ । ತತ್ತ್ಯಾಗೇನ[8] ಚ ವಿದುಷಃ ಧ್ಯಾನನಿಷ್ಠಸ್ಯ ಅನನ್ತರೈವ[9] ಶಾನ್ತಿರಿತಿ । ಸರ್ವಕಾಮತ್ಯಾಗಸಾಮಾನ್ಯಮ್ ಅಜ್ಞಕರ್ಮಫಲತ್ಯಾಗಸ್ಯ ಅಸ್ತೀತಿ ತತ್ಸಾಮಾನ್ಯಾತ್ ಸರ್ವಕರ್ಮಫಲತ್ಯಾಗಸ್ತುತಿರಿಯಂ ಪ್ರರೋಚನಾರ್ಥಾ । ಯಥಾ ಅಗಸ್ತ್ಯೇನ ಬ್ರಾಹ್ಮಣೇನ ಸಮುದ್ರಃ ಪೀತಃ ಇತಿ ಇದಾನೀಂತನಾ ಅಪಿ ಬ್ರಾಹ್ಮಣಾಃ ಬ್ರಾಹ್ಮಣತ್ವಸಾಮಾನ್ಯಾತ್ ಸ್ತೂಯನ್ತೇ ಏವಂ ಕರ್ಮಫಲತ್ಯಾಗಾತ್ ಕರ್ಮಯೋಗಸ್ಯ ಶ್ರೇಯಃಸಾಧನತ್ವಮ್ ಅಭಿಹಿತಮ್ ॥

---

1. ಅಕರ್ತೃವಾದ ಆತ್ಮನು ತಾನೆಂಬ ಜ್ಞಾನದಿಂದ ಕರ್ಮದ ಮತ್ತು ಫಲದ ತ್ಯಾಗವಾಗುತ್ತದೆ; ಸಂಸಾರವೆಂಬುದು ಮೂರು ಕಾಲಕ್ಕೂ ಇರುವದಿಲ್ಲವೆಂದೂ ಅನುಭವಕ್ಕೆ ಬಂದುಬಿಡುತ್ತದೆ. ಈ ಫಲವು ಕರ್ಮದ ಫಲದಂತೆ ಕಾಲಾಂತರದಲ್ಲಿ ಆಗುವದಲ್ಲ.
2. 'ಸರ್ವಕರ್ಮಣಾಂ' ನಿ॥, 'ಸರ್ವಕರ್ಮಣಃ' ಗು॥
3. ಸಾಧನಮಿತಿ ಮು॥ ಮೈ॥
4. 'ಜ್ಞಾನಮಿತ್ಯಾದ್ಯುತ್ತರೋ....' ಮು॥ ಮೈ॥
5. 'ಕೇನ ಧರ್ಮೇಣ' ಮು॥ ಮೈ॥
6. 'ಪ್ರಸಿದ್ಧಂ ಚ' ಮು॥ ಮೈ॥
7. 'ಶ್ರೌತಸ್ಮಾರ್ತಸರ್ವಕರ್ಮಣಾಂ' ನಿ॥ ಗು॥ ವಾ॥
8. 'ತ್ಯಾಗೇ ಚ' ನಿ॥ ಅ॥ ಗು॥ ವಾ॥
9. 'ಅನನ್ತರಮೇವ' ಮು॥

(ಭಾಷ್ಯಾರ್ಥ)

ಕರ್ಮದಲ್ಲಿ ತೊಡಗಿರುವ ಅಜ್ಞನಿಗೆ ಹಿಂದೆ ಹೇಳಿದ ಸಾಧನವನ್ನು ಮಾಡುವದಕ್ಕೆ ಆಗದಿದ್ದರೆ ಸರ್ವಕರ್ಮಫಲತ್ಯಾಗವೇ ಶ್ರೇಯಸ್ಸಿಗೆ ಸಾಧನವೆಂದು (ಇಲ್ಲಿ) ಉಪದಿಷ್ಟವಾಗಿದೆಯೇ ಹೊರತು ಮೊದಲೇ (ಹೇಳಿಲ್ಲ). ಆದ್ದರಿಂದ "**ಜ್ಞಾನವು ಅಭ್ಯಾಸಕ್ಕಿಂತ ಹೆಚ್ಚಿನದು**" ಎಂದು **ಮುಂದುಮುಂದಿನ ಸಾಧನವು ಹೆಚ್ಚಿನದೆಂದು ಹೇಳುವದರ(ಮೂಲಕ) ಸರ್ವಕರ್ಮಫಲತ್ಯಾಗವನ್ನು(ಇಲ್ಲಿ) ಹೊಗಳಿರುತ್ತದೆ ಎಂದಾಯಿತು; ಏಕೆಂದರೆ ಉತ್ತಮವಾದ ಸಾಧನವನ್ನು ಮಾಡುವದಕ್ಕೆ ಶಕ್ತಿಯಿಲ್ಲದಿದ್ದರೆ (ಇದನ್ನು) ಮಾಡಬೇಕೆಂದು ಶ್ರುತಿಯಲ್ಲಿ ಹೇಳಿರುತ್ತದೆ.**[1] ಯಾವ ಹೋಲಿಕೆಯಿ(ರುವದರಿ)ಂದ[2] (ಇದು) ಸ್ತುತಿ(ಯಾಗುತ್ತದೆ)? (ಎಂದರೆ), "ಯಾವಾಗ (ಹೃದಯದಲ್ಲಿರುವ). ಎಲ್ಲಾ (ಕಾಮಗಳೂ) ಬಿಡುಗಡೆಯಾಗುವವೋ (ಆಗ ಮರ್ತ್ಯನು ಅಮೃತನಾಗುವನು)" (ಕ. ೨-೩-೧೪) ಎಂದು ಕಾಮಗಳೆಲ್ಲ ಹೋದರೆ ಅಮೃತತ್ವವು (ದೊರೆಯುವದೆಂದು ಶ್ರುತಿಯಲ್ಲಿ) ಹೇಳಿರುತ್ತದೆ. ಮತ್ತು **ಶ್ರೌತಸ್ಮಾರ್ತಕರ್ಮಗಳ ಫಲಗಳೆಲ್ಲವೂ ಕಾಮಗಳೇ (ಎಂದೂ) ಅವುಗಳನ್ನು** ಬಿಡುವದರಿಂದ ಜ್ಞಾನಿಯು ಧ್ಯಾನನಿಷ್ಠನಾಗಲು[3] **ಅನಂತರವೇ ಶಾಂತಿ(ಯಾಗುವ)ದೆಂದೂ** ಪ್ರಸಿದ್ಧವಾಗಿರುತ್ತದೆ.[4] (ಆ) **ಸರ್ವಕಾಮಗಳನ್ನೂ ಬಿಡುವದೆಂಬ ಹೋಲಿಕೆಯು ಅಜ್ಞನು (ಮಾಡುವ) ಕರ್ಮಫಲತ್ಯಾಗಕ್ಕೂ ಇದೆಯಾದ್ದರಿಂದ ಈ ಹೋಲಿಕೆಯನ್ನಿಟ್ಟುಕೊಂಡು (ಅವನ) ಸರ್ವಕರ್ಮಫಲತ್ಯಾಗದ ಈ ಸ್ತುತಿ(ಯನ್ನು ಹೇಳಿರುವದು ಅದರಲ್ಲಿ) ರುಚಿಯನ್ನುಂಟುಮಾಡುವದಕ್ಕೆ.**[5] '**ಅಗಸ್ತ್ಯ**ನೆಂಬ ಬ್ರಾಹ್ಮಣನು ಸಮುದ್ರ

---

1. ಯಾವದನ್ನು ವಿಧಿಸಿದೆಯೋ ಅದನ್ನು ಹೊಗಳಬೇಕು; ಪ್ರಕೃತದಲ್ಲಿ ಅಜ್ಞನಿಗೆ ಸರ್ವಕರ್ಮಫಲತ್ಯಾಗವನ್ನು ವಿಧಿಸಿದೆ. ಆದ್ದರಿಂದ ಅದನ್ನು ಹೊಗಳಿದೆ ಎಂದಾಯಿತು.

2. ಜ್ಞಾನಿಯ ಸರ್ವಕರ್ಮಫಲತ್ಯಾಗಕ್ಕೂ ಇದಕ್ಕೂ ಯಾವ ಹೋಲಿಕೆಯಿದೆ ?

3. ಧ್ಯಾನವೆಂದರೆ ಇಲ್ಲಿ ಸುಮ್ಮನೆ ನಂಬಿಕೆಯಿಂದ ಮಾಡುವ ಉಪಾಸನೆಯಲ್ಲ, ಜ್ಞಾನನಿಷ್ಠೆಯೇ.

4. ಕರ್ಮಫಲದಂತೆ ಮೋಕ್ಷವು ಅವನಿಗೆ ಕಾಲಾಂತರದಲ್ಲಿ ಆಗುವದಿಲ್ಲವೆಂಬುದು ಶ್ರುತಿಸಿದ್ಧವಾಗಿರುವಂತೆ ಯುಕ್ತಿಸಿದ್ಧವೂ ಆಗಿರುತ್ತದೆ.

5. ಕಾಮಗಳನ್ನು ಅಸತ್ಯವೆಂದು ಅರಿತು ಜ್ಞಾನಿಯು ಬಿಡುತ್ತಾನೆ. ಫಲತ್ಯಾಗದಿಂದ ಶ್ರೇಯಸ್ಸಾಗುವದೆಂದು ನಂಬಿ ಅಜ್ಞನು ಈಶ್ವರಾರ್ಪಣಮಾಡುತ್ತಾನೆ. ಕಾಮತ್ಯಾಗವು ಇಬ್ಬರಿಗೂ ಸಮಾನ.

ವನ್ನು ಕುಡಿದನು' ಎಂದು ಈಗಿನ ಬ್ರಾಹ್ಮಣರನ್ನೂ ಬ್ರಾಹ್ಮಣ್ಯವೆಂಬ ಹೋಲಿಕೆಯಿ(ರುವದರಿಂ)ದ ಹೇಗೆ ಹೊಗಳುತ್ತಾರೋ, (ಹಾಗೆಯೇ ಇದನ್ನು ಅರಿಯಬೇಕು). ಹೀಗೆ ಕರ್ಮಫಲತ್ಯಾಗವನ್ನು ಮಾಡುವದರಿಂದ ಕರ್ಮಯೋಗಕ್ಕೆ ಶ್ರೇಯಃಸಾಧನತ್ವವನ್ನು ಹೇಳಿದ್ದಾಗಿರುತ್ತದೆ.[1]

## ಮುಂದಿನ ಪ್ರಕರಣವು ಅಕ್ಷರೋಪಾಸಕರದ್ದೇ

(ಭಾಷ್ಯ)

೨೦೦. ಅತ್ರ ಚ ಆತ್ಮೇಶ್ವರಭೇದಮ್ ಆಶ್ರಿತ್ಯ ವಿಶ್ವರೂಪೇ ಈಶ್ವರೇ ಚೇತಃಸಮಾಧಾನಲಕ್ಷಣಃ ಯೋಗಃ ಉಕ್ತಃ । ಈಶ್ವರಾರ್ಥಂ ಕರ್ಮಾನುಷ್ಠಾನಾದಿ ಚ । "ಅಥೈತದಪ್ಯಶಕ್ತೋಽಸಿ" (೧೨-೧೧) ಇತಿ ಅಜ್ಞಾನಕಾರ್ಯಸೂಚನಾತ್ ನ ಅಭೇದದರ್ಶಿನಃ ಅಕ್ಷರೋಪಾಸಕಸ್ಯ ಕರ್ಮಯೋಗಃ ಉಪಪದ್ಯತೇ ಇತಿ ದರ್ಶಯತಿ । ತಥಾ ಕರ್ಮಯೋಗಿನಃ ಅಕ್ಷರೋಪಾಸನಾನುಪಪತ್ತಿಂ ದರ್ಶಯತಿ ಭಗವಾನ್। "ತೇ ಪ್ರಾಪ್ನುವನ್ತಿ ಮಾಮೇವ" (೧೨-೪) ಇತಿ ಅಕ್ಷರೋಪಾಸಕಾನಾಂ ಕೈವಲ್ಯಪ್ರಾಪ್ತೌ ಸ್ವಾತನ್ತ್ರ್ಯಮ್ ಉಕ್ತ್ವಾ, ಇತರೇಷಾಂ ಪಾರತನ್ತ್ರ್ಯಮ್[2] ಈಶ್ವರಾಧೀನತಾಂ ದರ್ಶಿತವಾನ್ "ತೇಷಾಮಹಂ ಸಮುದ್ಧರ್ತಾ" (೧೨-೭) ಇತಿ । ಯದಿ ಹಿ ಈಶ್ವರಸ್ಯ ಆತ್ಮಭೂತಾಃ ತೇ ಮತಾಃ, ಅಭೇದದರ್ಶಿತ್ವಾತ್ ಅಕ್ಷರರೂಪಾ ಏವ ತೇ ಇತಿ ಸಮುದ್ಧರಣಕರ್ಮವಚನಂ[3] ತಾನ್ ಪ್ರತಿ ಅಪೇಶಲಂ ಸ್ಯಾತ್ । ಯಸ್ಮಾಚ್ಚ ಅರ್ಜುನಸ್ಯ ಅತ್ಯನ್ತಮೇವ ಹಿತೈಷೀ ಭಗವಾನ್ ತಸ ಸಮ್ಯಗ್ದರ್ಶನಾನನ್ವಿತಂ[4] ಕರ್ಮಯೋಗಂ ಭೇದದೃಷ್ಟಿಮನ್ತಮೇವ ಉಪದಿಶತಿ । ನ ಚ ಆತ್ಮಾನಮ್ ಈಶ್ವರಂ ಪ್ರಮಾಣತೋ ಬುದ್ಧ್ವಾ ಕಸ್ಯಚಿತ್ ಗುಣಭಾವಂ

---

1. ಪರಂಪರೆಯಿಂದ ಕರ್ಮಯೋಗಕ್ಕೂ ಮೋಕ್ಷವುಂಟಾದ್ದರಿಂದ ತ್ಯಾಗದಿಂದ ಶಾಂತಿಯಾಗುವದೆಂದು ಅದನ್ನು ಹೊಗಳಿರುತ್ತದೆ. ಇದಕ್ಕೆ ಕೊಟ್ಟಿರುವ ಅಗಸ್ತ್ಯದೃಷ್ಟಾಂತದ ವಿವರವು ಭಾರತ ವನ. ಪ. ೧೦೪ ರಲ್ಲಿದೆ. ಕಾಲೇಯರೆಂಬ ದಾನವರು ಸಮುದ್ರದಲ್ಲಿ ಅಡಗಿಕೊಂಡು ದೇವತೆಗಳಿಗೆ ಆಗಾಗ್ಗೆ ತೊಂದರೆಯನ್ನು ಕೊಡುತ್ತಿದ್ದರು. ದೇವತೆಗಳ ಪ್ರಾರ್ಥನೆಯಂತೆ ಅಗಸ್ತ್ಯರು ಸಮುದ್ರವನ್ನೇ ಪಾನಮಾಡಿ ಅರಗಿಸಿಕೊಂಡರು ಎಂದು ಅಲ್ಲಿ ವರ್ಣಿಸಿದೆ.

2. 'ಪಾರತನ್ತ್ರ್ಯಾತ್' ಎಂಬ ಪಾಠಕ್ಕಿಂತ ಈ ಸಿ||ಗು|| ಪಾಠವೇ ಮೇಲು.

3. 'ಸಮುದ್ಧರಣಕರ್ಮವಿಷಯವಚನಂ' ಎಂಬ ಗು|| ಪಾಠದಲ್ಲಿ 'ವಿಷಯ' ಹೆಚ್ಚು.

4. 'ಸಮ್ಯಗ್ದರ್ಶನಾಗನ್ವಿತಂ' ಮು|| ಮೈ||

ಜಿಗಮಿಷತಿ ಕಶ್ಚಿತ್ । ವಿರೋಧಾತ್ । ತಸ್ಮಾತ್ ಅಕ್ಷರೋಪಾಸಕಾನಾಂ ಸಮ್ಯಗ್ದರ್ಶನನಿಷ್ಠಾನಾಂ ಸಂನ್ಯಾಸಿನಾಂ ತ್ಯಕ್ತಸರ್ವೈಷಣಾನಾಮ್ "ಅದ್ವೇಷ್ಟಾ ಸರ್ವಭೂತಾನಾಮ್" ಇತ್ಯಾದಿಧರ್ಮಪೂಗಂ ಸಾಕ್ಷಾತ್ ಅಮೃತತ್ವಕಾರಣಂ ವಕ್ಷ್ಯಾಮಿ ಇತಿ ಪ್ರವರ್ತತೇ—

(ಭಾಷ್ಯಾರ್ಥ)

ಮತ್ತು ಇಲ್ಲಿ ಆತ್ಮ, ಈಶ್ವರ-ಇಬ್ಬರಿಗೂ ಭೇದವನ್ನು ಆಶ್ರಯಿಸಿ ವಿಶ್ವರೂಪನಾದ ಈಶ್ವರನಲ್ಲಿ ಚಿತ್ತವನ್ನು ನಿಲ್ಲಿಸಿಕೊಳ್ಳುವದೆಂಬ[1] ಯೋಗವನ್ನೂ ಈಶ್ವರನಿಗಾಗಿ ಕರ್ಮವನ್ನು ಮಾಡುವದೇ ಮುಂತಾದದ್ದನ್ನೂ[2] ಹೇಳಿರುತ್ತದೆ. "ಆದರೆ ಇದನ್ನೂ (ಮಾಡುವದಕ್ಕೆ) ಅಶಕ್ತನಾಗಿರುವೆಯಾದರೆ" (೧೨-೧೧) ಎಂದು ಅಜ್ಞಾನದ ಕಾರ್ಯ(ವಾದ ಅಶಕ್ತಿಯನ್ನು ಇಲ್ಲಿ) ಸೂಚಿಸಿರುವದರಿಂದ ಅಭೇದವನ್ನು[3] ಕಂಡುಕೊಂಡಿರುವ ಅಕ್ಷರೋಪಾಸಕನಿಗೆ ಕರ್ಮಯೋಗವು ಹೊಂದುವದಿಲ್ಲ ಎಂದು ತಿಳಿಸಿರುತ್ತಾನೆ. ಇದರಂತೆ ಕರ್ಮಯೋಗಿಗೆ ಅಕ್ಷರೋಪಾಸನೆಯು ಹೊಂದುವದಿಲ್ಲವೆಂದೂ ಭಗವಂತನು ತಿಳಿಸಿರುತ್ತಾನೆ. "ಅವರು ನನ್ನನ್ನೇ ಹೊಂದುತ್ತಾರೆ" (೧೨-೪) ಎಂದು ಅಕ್ಷರೋಪಾಸಕರಿಗೆ ಕೈವಲ್ಯವನ್ನು ಪಡೆಯುವ (ವಿಷಯ)ದಲ್ಲಿ ಸ್ವಾತಂತ್ರ್ಯವನ್ನು ಹೇಳಿ, ಉಳಿದವರು ಪರತಂತ್ರರು, ಈಶ್ವರಾಧೀನರು-ಎಂಬುದನ್ನು "ಅವರಿಗೆ ನಾನು (ಮೃತ್ಯುಸಂಸಾರಸಾಗರದಿಂದ) ಸಮುದ್ಧಾರಮಾಡುವನಾಗಿರುವೆನು" (೧೨-೭) ಎಂದು ತಿಳಿಸಿರುತ್ತಾನೆ. ಅವರು ಈಶ್ವರನ ಸ್ವರೂಪರೇ ಎಂದು (ಭಗವಂತನ) ಅಭಿಪ್ರಾಯವಾಗಿದ್ದರೆ[3] ಅಭೇದವನ್ನು ಕಾಣುವವರಾದ್ದರಿಂದ ಅವರು ಅಕ್ಷರರೂಪರೇ ಆಗಿರುವದರಿಂದ ಅವರ ವಿಷಯದಲ್ಲಿ (ಅವರು ತನ್ನ) ಸಮುದ್ಧರಣಕ್ಕೆ ವಿಷಯ(ರೆಂದು) ಹೇಳಿರುವದು ಅಯುಕ್ತವಾದೀತು.[4] ಮತ್ತು ಅರ್ಜುನನಿಗೆ ಅತ್ಯಂತವಾಗಿ ಹಿತವನ್ನು ಕೋರುವವನಾದ

1. "ಚಿತ್ತವನ್ನು ನಿಲ್ಲಿಸಿಕೊಳ್ಳುವ ತಾನು, ನಿಲ್ಲಿಸಿಕೊಳ್ಳುವದಕ್ಕೆ ವಿಷಯನಾದ ಈಶ್ವರ—ಎಂಬ ಅವಿದ್ಯಾಕಲ್ಪಿತಭೇದವನ್ನು ಆಶ್ರಯಿಸಿ ಉಪಾಸನೆಮಾಡುವದೆಂಬ" ಎಂದರ್ಥ; ವಿಶ್ವರೂಪನು ತನಗಿಂತ ಬೇರೆಯೇ ಎಂದು ಧ್ಯಾನಿಸಬೇಕಾದದ್ದೇನೂ ಇಲ್ಲ. ಛಾಂ. ಭಾ. ೩-೧೪-೪ನ್ನು ನೋಡಿ.

2. ಸರ್ವಕರ್ಮಫಲತ್ಯಾಗವನ್ನು 'ಮುಂತಾದ' ಎಂಬ ಶಬ್ದದಿಂದ ತಿಳಿಸಿದೆ.

3. ಎಲ್ಲರೂ ಪರಮಾತ್ಮಸ್ವರೂಪರೇ ಆದರೂ ಜ್ಞಾನಿಗಳಿಗೆ ಮಾತ್ರ ಅದು ನಿಜವಾಗಿರುತ್ತದೆ. ಇಲ್ಲಿ 'ಅಭೇದದರ್ಶಿತ್ವಾತ್' ಎಂಬ ಮಾತನ್ನು ಮಧ್ಯಮಮಣಿನ್ಯಾಯದಿಂದ ಹಿಂದಕ್ಕೂ ಅನ್ವಯಿಸಿದರೆ ಈ ಅಭಿಪ್ರಾಯವು ಮತ್ತಷ್ಟು ಸ್ಫುಟವಾಗುತ್ತದೆ.

4. ಅಕ್ಷರವು ಅದ್ವಿತೀಯವಾಗಿರುವದರಿಂದ ತನ್ನನ್ನು ತಾನೇ ಅದು ಉದ್ಧಾರಮಾಡಿಕೊಳ್ಳುವದೆಂಬುದಾಗಲಿ ಅದು ನಿಜವಾಗಿಯೂ ಉದ್ಧಾರವನ್ನು ಬಯಸುವದೆಂಬುದಾಗಲಿ ಯುಕ್ತವಾಗಲಾರದು.

**ಭಗವಂತನು ಅವನಿಗೆ ಸಮ್ಯಗ್ದರ್ಶನದ ಸಂಬಂಧವಿಲ್ಲದ, ಭೇದದೃಷ್ಟಿಯಿಂದಲೇ ಕೂಡಿರುವ ಕರ್ಮಯೋಗವನ್ನು ಉಪದೇಶಿಸಿರುತ್ತಾನೆ**[1] (ಆದ್ದರಿಂದಲೂ ಹೀಗೆಂದು ತಿಳಿಯಬೇಕು).[2] ತಾನು ಈಶ್ವರ (ಸ್ವರೂಪ) ನೆಂದು ಪ್ರಮಾಣದಿಂದ ಅರಿತುಕೊಂಡ ಯಾವನೂ ಮತ್ತೊಬ್ಬನ ಅಧೀನತೆಯನ್ನು ಹೊಂದುವದಕ್ಕೆ (ಎಂದಿಗೂ) ಬಯಸಲಾರನಷ್ಟೆ. (ಏಕೆಂದರೆ) ಈಶ್ವರಭಾವವೂ ಅಧೀನನಾಗಿರುವ ಇಚ್ಛೆಯೂ (ಒಂದಕ್ಕೊಂದು) ವಿರುದ್ಧವಾಗಿರುತ್ತವೆ.

ಆದ್ದರಿಂದ ಸಮ್ಯಗ್ದರ್ಶನದಲ್ಲಿಯೇ ನೆಲೆನಿಂತಿರುವ, ಏಷಣೆಗಳನ್ನೆಲ್ಲ ತೊರೆದಿರುವ ಸಂನ್ಯಾಸಿಗಳಾದ ಅಕ್ಷರೋಪಾಸಕರಿಗೆ[3] ನೇರಾಗಿ[4] ಮೋಕ್ಷಕ್ಕೆ ಸಾಧನವಾಗಿರುವ "ಯಾವ ಭೂತಗಳನ್ನೂ ದ್ವೇಷಮಾಡದೆ (ಇರುವದು)" (೧೨-೧೩) ಮುಂತಾದ ಧರ್ಮಸಮೂಹವನ್ನು ಹೇಳುವೆನೆಂದು (ಭಗವಂತನು) ಹೊರಟಿರುತ್ತಾನೆ.

## ಅಕ್ಷರೋಪಾಸಕರ ಲಕ್ಷಣ

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಙ್ಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**
**ಸನ್ತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥**

---

1. 'ಸಮ್ಯಗ್ದರ್ಶನಾನಾಗನ್ವಿತಂ' ಎಂಬ ಪಾಠಕ್ಕೆ ಸಮ್ಯಗ್ದರ್ಶನದ ವಾಸನೆಯೂ ಇಲ್ಲದ ಎಂದರ್ಥ; ವಿಶ್ವರೂಪೋಪಾಸನೆಯಲ್ಲಿ ಅಭೇದವನ್ನು ಚಿಂತಿಸಬಹುದಾದ್ದರಿಂದ ಅದರ ವಾಸನೆಯಿದೆ, ಕರ್ಮಯೋಗದಲ್ಲಿ ಅದೂ ಇಲ್ಲ ಎಂಬರ್ಥವನ್ನು ಆಗ ತೆಗೆಯಬಹುದು. ಈಗ ಕೊಟ್ಟಿರುವ ಪಾಠದಲ್ಲಿ ಕರ್ಮಯೋಗದಲ್ಲಿ ಉಪಾಸನೆಯನ್ನೂ ಸೇರಿಸಬಹುದು.

2. ಅರ್ಜುನನಿಗೆ ಅಕ್ಷರೋಪಾಸನೆಯು ಹೊಂದುವಹಾಗಿದ್ದರೆ ಅವನಿಗೆ ಬರಿಯ ವಿಶ್ವರೂಪೋಪಾಸನೆಯನ್ನಾಗಲಿ ಕರ್ಮಯೋಗವನ್ನಾಗಲಿ ಹೇಳುತ್ತಿರಲಿಲ್ಲ. ಆದ್ದರಿಂದಲೂ ಕರ್ಮಯೋಗವೂ ಅಕ್ಷರೋಪಾಸನೆಯೂ ಒಬ್ಬರಿಗೆ ಹೇಳಿದ್ದಲ್ಲವೆಂದು ನಿಶ್ಚಯಿಸಬೇಕಾಗಿದೆ.

3. ಮುಂದಿನ ಶ್ಲೋಕಗಳಲ್ಲಿ ಹೇಳಿರುವದು ಗೌಣಭಕ್ತರ ಲಕ್ಷಣವೆಂದು ಕೆಲವರು ಭಾವಿಸುತ್ತಾರೆ. ಇದು ಸರಿಯಲ್ಲ, ಪ್ರಕರಣವು ಜ್ಞಾನಿಭಕ್ತರ ವಿಷಯವೇ ಎಂಬುದಕ್ಕೆ ಆಚಾರ್ಯರು ಈ ಸಂಬಂಧಭಾಷ್ಯವನ್ನು ಬರೆದಿದ್ದಾರೆ.

4. ವಿಶ್ವರೂಪೋಪಾಸಕರಂತೆ ಕಾಲಾಂತರದಲ್ಲಲ್ಲ_ಎಂದು ಭಾವ. ಇಲ್ಲಿರುವ ಅದ್ವೇಷ್ಟೃತ್ವಾದಿಗಳಿಂದಲೇ ಮೋಕ್ಷವು ನೇರಾಗಿ ದೊರಕುತ್ತದೆ ಎಂದಂತಾಯಿತು.

೧೩-೧೪. ಯಾವ ಭೂತಗಳನ್ನೂ ದ್ವೇಷಿಸದೆ ಮೈತ್ರನೂ ಕರುಣನೂ ಆಗಿ ನಿರ್ಮಮನಾಗಿ ನಿರಹಂಕಾರನಾಗಿ ಸಮದುಃಖಸುಖನಾಗಿ ಕ್ಷಮಿಯಾಗಿ, ಸತತವೂ ಸಂತುಷ್ಟನಾಗಿ, ಯೋಗಿಯೂ ಯತಾತ್ಮನೂ ದೃಢನಿಶ್ಚಯನೂ ಆಗಿ ನನ್ನಲ್ಲಿ ಅರ್ಪಿತವಾದ ಮನೋಬುದ್ಧಿಗಳುಳ್ಳ ಯಾವನು ನನ್ನ ಭಕ್ತನಾಗಿರುವನೋ ಅವನು ನನಗೆ ಪ್ರಿಯನು.

(ಭಾಷ್ಯ)

೨೦೧. ಅದ್ವೇಷ್ಟಾ ಸರ್ವಭೂತಾನಾಂ[1] ನ ದ್ವೇಷ್ಟಾ, ಆತ್ಮನಃ ದುಃಖಹೇತುಮಪಿ ನ ಕಂಚಿತ್[2] ದ್ವೇಷ್ಟಿ । ಸರ್ವಾಣಿ ಭೂತಾನಿ ಆತ್ಮತ್ವೇನ ಹಿ ಪಶ್ಯತಿ । ಮೈತ್ರಃ । ಮಿತ್ರಭಾವಃ ಮೈತ್ರೀ । ತಯಾ[3] ವರ್ತತೇ ಇತಿ ಮೈತ್ರಃ । ಕರುಣ ಏವ ಚ । ಕರುಣಾ ಕೃಪಾ ದುಃಖಿತೇಷು ದಯಾ । ತದ್ವಾನ್ ಕರುಣಃ । ಸರ್ವಭೂತಾಭಯಪ್ರದಃ ಸಂನ್ಯಾಸೀ ಇತ್ಯರ್ಥಃ । ನಿರ್ಮಮಃ ಮಮಪ್ರತ್ಯಯವರ್ಜಿತಃ । ನಿರಹಙ್ಕಾರಃ ನಿರ್ಗತಾಹಂಪ್ರತ್ಯಯಃ । ಸಮದುಃಖಸುಖಃ । ಸಮೇ ದುಃಖಸುಖೇ ದ್ವೇಷರಾಗಯೋಃ ಅಪ್ರವರ್ತಕೇ ಯಸ್ಯ ಸಃ ಸಮದುಃಖಸುಖಃ । ಕ್ಷಮೀ ಕ್ಷಮಾವಾನ್, ಆಕ್ರುಷ್ಟೋಽಭಿಹತೋ ವಾ ಅವಿಕ್ರಿಯ ಏವ ಆಸ್ತೇ ॥

(ಭಾಷ್ಯಾರ್ಥ)

ಯಾವ ಪ್ರಾಣಿಗಳನ್ನೂ ('ಅದ್ವೇಷ್ಟಾ') ದ್ವೇಷಿಸದೆ ಇರುವಾತನು ಎಂದರೆ ತನಗೆ ದುಃಖಕ್ಕೆ ಕಾರಣನಾಗಿದ್ದರೂ ಯಾರೊಬ್ಬರನ್ನೂ ಹಗೆಮಾಡದಿರುವವನು. ಸರ್ವಭೂತಗಳನ್ನೂ ಆತ್ಮನೆಂದೇ ಅಲ್ಲವೆ, ಅವನು ಕಾಣುತ್ತಿರುವನು?[4] ಮೈತ್ರನು : ಮಿತ್ರಭಾವಕ್ಕೆ '**ಮೈತ್ರಿ**'[5](ಎಂದು ಹೆಸರು) ಆ (ಮೈತ್ರಿಯಿಂದ)ನಡೆದುಕೊಳ್ಳುವದ

---

1. 'ಸರ್ವೇಷಾಂ ಭೂತಾನಾಂ' ಎಂದು ಹೆಚ್ಚಾಗಿ ಪು||ಗು||

2. ಮು|| ಪಾಠವಿದು ; 'ಕಿಂಚಿತ್' ಎಂಬ ಪಾಠಕ್ಕಿಂತ ಮೇಲು.

3. 'ಮಿತ್ರತಯಾ' ಎಂಬ ಮುದ್ರಿತಪಾಠದಲ್ಲಿ 'ಮಿತ್ರ' ಹೆಚ್ಚೆಂದು ಆಪನ್ನು ಬಿಟ್ಟಿದೆ.

4. ಈ. ೭ರ ಸೂಚನೆ.

5. ಯೋಗಸೂತ್ರದಲ್ಲಿ (೧-೩೩) ಹೇಳಿರುವ ಮೈತ್ರೀ, ಕರುಣಾ—ಮುಂತಾದವು ಸಾಧಕನು ಮಾಡಬೇಕಾದ ಭಾವನೆಗಳು ; ಇಲ್ಲಿ ಹೇಳಿರುವವು ಅಕ್ಷರೋಪಾಸಕನ ಸಿದ್ಧಲಕ್ಷಣವು. ಇಲ್ಲಿರುವ ಅದ್ವೇಷ್ಟೃತ್ವಾದಿಗಳೂ ಹೀಗೆಯೇ. ತತ್ತ್ವಜ್ಞಾನವನ್ನು ಸಂಪಾದಿಸಿಕೊಳ್ಳಬೇಕೆಂಬ ಮುಮುಕ್ಷುವು ಇವನ್ನು ಅಭ್ಯಾಸಮಾಡಿ ಪಡೆದುಕೊಳ್ಳಬೇಕು. ೩-೪ರ ಭಾಷ್ಯವನ್ನು ನೋಡಿ.

ರಿಂದ (ಇವನು) ಮೈತ್ರನು. ಮತ್ತು ಕರುಣನೂ (ಆಗಿರುವನು). ಕರುಣೆ ಎಂದರೆ ಕೃಪೆ, ದುಃಖಪಡುತ್ತಿರುವವರಲ್ಲಿರುವ ದಯೆ ; ಅದನ್ನುಳ್ಳವನು ಕರುಣನು. ಎಲ್ಲಾ ಭೂತಗಳಿಗೂ ಅಭಯವನ್ನು ಕೊಡುವ ಸಂನ್ಯಾಸಿಯು ಎಂದರ್ಥ.[1] ನಿರ್ಮಮನು, ಎಂದರೆ ನನ್ನದೆಂಬ ಅಭಿಮಾನವಿಲ್ಲದವನು. ನಿರಹಂಕಾರನು, ನಾನೆಂಬ ಅಭಿಮಾನವು ತೊಲಗಿರುವವನು. ಸಮದುಃಖಸುಖನು, ದುಃಖಸುಖಗಳು ಸಮವಾಗಿ, ಎಂದರೆ ದ್ವೇಷರಾಗಗಳನ್ನು ಉಂಟುಮಾಡದೆ ಯಾವನಿಗೆ (ಇರುವವೋ) ಅವನು ಸಮದುಃಖ ಸುಖನು. ಕ್ಷಮಿಯು ಎಂದರೆ ಕ್ಷಮೆಯುಳ್ಳಾತನು ; ಬಯ್ಯಲಿ ಹೊಡೆಯಲಿ, ಯಾವ ವಿಕಾರವೂ ಇಲ್ಲದವನಾಗಿಯೇ ಇರುವನ(ಲ್ಲ, ಅವನು).

(ಭಾಷ್ಯ)

೨೦೨. ಸನ್ತುಷ್ಟಃ ಸತತಂ ನಿತ್ಯಂ ದೇಹಸ್ಥಿತಿಕಾರಣಸ್ಯ ಲಾಭೇ ಅಲಾಭೇ ಚ ಉತ್ಪನ್ನಾಲಂಪ್ರತ್ಯಯಃ । ತಥಾ ಗುಣವಲ್ಲಾಭೇ ವಿಪರ್ಯಯೇ ಚ ಸನ್ತುಷ್ಟಃ ಸತತಮ್ । ಯೋಗೀ ಸಮಾಹಿತಚಿತ್ತಃ । ಯತಾತ್ಮಾ ಸಂಯತಸ್ವಭಾವಃ । ದೃಢ ನಿಶ್ಚಯಃ ದೃಢಃ ಸ್ಥಿರಃ ನಿಶ್ಚಯಃ ಅಧ್ಯವಸಾಯಃ ಯಸ್ಯ ಆತ್ಮತತ್ತ್ವವಿಷಯೇ ಸಃ ದೃಢನಿಶ್ಚಯಃ । ಮಯ್ಯರ್ಪಿತಮನೋಬುದ್ಧಿಃ ಸಙ್ಕಲ್ಪವಿಕಲ್ಪಾತ್ಮಕಂ ಮನಃ, ಅಧ್ಯ ವಸಾಯಲಕ್ಷಣಾ ಬುದ್ಧಿಃ। ತೇ ಮಯ್ಯೇವ ಅರ್ಪಿತೇ ಸ್ಥಾಪಿತೇ ಯಸ್ಯ ಸಂನ್ಯಾಸಿನಃ ಸ ಮಯ್ಯರ್ಪಿತಮನೋಬುದ್ಧಿಃ । ಯಃ ಈದೃಶಃ ಮದ್ಭಕ್ತಃ ಸಃ ಮೇ ಪ್ರಿಯಃ । "ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ" ಇತಿ ಸಪ್ತಮೇ ಅಧ್ಯಾಯೇ ಸೂಚಿತಂ ತದಿಹ ಪ್ರಪಞ್ಚ್ಯತೇ ॥

(ಭಾಷ್ಯಾರ್ಥ)

ಸತತವೂ ನಿತ್ಯವೂ ಸಂತುಷ್ಟನಾಗಿರುವವನು, ಎಂದರೆ ದೇಹವು ಇರುವದಕ್ಕೆ ಬೇಕಾದ (ಅನ್ನಾದಿಗಳು) ದೊರಕಲಿ ದೊರಕದಿರಲಿ, (ಇಷ್ಟೇ) ಸಾಕೆಂಬ ಬುದ್ಧಿಯು ಉಂಟಾಗಿರುವವನು. ಇದರಂತೆ ಒಳ್ಳೆಯದೇ ದೊರಕಲಿ, (ಅದಕ್ಕೆ) ವಿರುದ್ಧ(ವಾಗಿ ಕೆಟ್ಟದ್ದೇ ದೊರಕಲಿ), ಯಾವಾಗಲೂ (ದೊರಕಿದಷ್ಟಕ್ಕೆ) ಸತತವೂ ತೃಪ್ತನಾಗಿರುವ ವನು. ಯತಾತ್ಮನು ಎಂದರೆ (ಮನಃ) ಸ್ವಭಾವವನ್ನು ಬಿಗಿಹಿಡಿದುಕೊಂಡಿರುವವನು. ದೃಢನಿಶ್ಚಯನು ; ಯಾವನಿಗೆ ಆತ್ಮತತ್ತ್ವದ ವಿಷಯದಲ್ಲಿ ದೃಢವಾದ ಸ್ಥಿರವಾದ ನಿಶ್ಚಯವು ಗಟ್ಟಿಮನಸ್ಸು ಇರುವದೋ ಅಂಥವನು ದೃಢನಿಶ್ಚಯನು. ಮಯ್ಯರ್ಪಿತ ಮನೋಬುದ್ಧಿಯು. ಸಂಕಲ್ಪವಿಕಲ್ಪರೂಪವಾಗಿರುವದು **ಮನಸ್ಸು,** ನಿಶ್ಚಯರೂಪ

---

1. ೩-೪ರ ಭಾಷ್ಯವನ್ನು ನೋಡಿರಿ.

ವಾಗಿರುವದು ಬುದ್ಧಿಯು ಇವೆರಡೂ ನನ್ನಲ್ಲಿಯೇ ಅರ್ಪಿಸಿ, ಇಡಲ್ಪಟ್ಟವಾಗಿ ಯಾವ ಸಂನ್ಯಾಸಿಗೆ ಇರುವವೋ ಅವನು ಮಯ್ಯರ್ಪಿತಮನೋಬುದ್ಧಿಯು. ಯಾವನು ಇಂಥ ವನಾಗಿ ನನ್ನ ಭಕ್ತನಾಗಿರುವನೋ ಅವನು ನನಗೆ ಪ್ರಿಯನು. "ನಾನು ಜ್ಞಾನಿಗೆ ಅತ್ಯಂತವಾಗಿ ಪ್ರಿಯನಾಗಿರುವೆನು, ಅವನೂ ನನಗೆ ಪ್ರಿಯನಾಗಿರುವನು" (೭-೧೭) ಎಂದು ಏಳನೆಯ ಅಧ್ಯಾಯದಲ್ಲಿ ಸೂಚಿತವಾಗಿತ್ತಷ್ಟೆ. ಅದನ್ನು ಇಲ್ಲಿ ವಿಸ್ತರಿಸ ಲಾಗಿದೆ.

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥**

೧೫. ಮತ್ತು ಯಾವನಿಂದ ಲೋಕವು ಉದ್ವಿಗ್ನವಾಗುವದಿಲ್ಲವೋ ಯಾವನು ಲೋಕದಿಂದ ಉದ್ವಿಗ್ನನಾಗುವದಿಲ್ಲವೋ ಯಾವನು ಹರ್ಷಾ ಮರ್ಷಭಯೋದ್ವೇಗಗಳಿಂದ ಮುಕ್ತನಾಗಿರುವನೋ ಅವನೂ ನನಗೆ ಪ್ರಿಯನು.

(ಭಾಷ್ಯ)

೨೦೩. ಯಸ್ಮಾತ್ ಸಂನ್ಯಾಸಿನಃ ನ ಉದ್ವಿಜತೇ ನೋದ್ವೇಗಂ ಗಚ್ಛತಿ ನ ಸಂತಪ್ಯತೇ ನ ಸಂಕ್ಷುಭ್ಯತಿ ಲೋಕಃ । ತಥಾ ಲೋಕಾತ್ ನ ಉದ್ವಿಜತೇ ಚ ಯಃ । ಹರ್ಷಾಮರ್ಷಭಯೋದ್ವೇಗೈಃ ಹರ್ಷಶ್ಚ ಅಮರ್ಷಶ್ಚ ಭಯಂ ಚ ಉದ್ವೇಗಶ್ಚ ತೈಃ ಹರ್ಷಾಮರ್ಷಭಯೋದ್ವೇಗೈಃ ಮುಕ್ತಃ ಹರ್ಷಃ ಪ್ರಿಯಲಾಭೇ ಅಂತಃಕರಣಸ್ಯ ಉತ್ಕರ್ಷಃ ರೋಮಾಂಚನಾಶ್ರುಪಾತಾದಿಲಿಙ್ಗಃ[1] । ಅಮರ್ಷಃ ಅಸಹಿಷ್ಣುತಾ । ಭಯಂ ತ್ರಾಸಃ। ಉದ್ವೇಗಃ ಉದ್ವಿಗ್ನತಾ। ತೈಃ ಮುಕ್ತಃ ಯಃ ಸ ಚ ಮೇ ಪ್ರಿಯಃ ॥

(ಭಾಷ್ಯಾರ್ಥ)

ಯಾವ ಸಂನ್ಯಾಸಿಯಿಂದ ಜನವು ಉದ್ವಿಗ್ನವಾಗುವದಿಲ್ಲವೋ ಉದ್ವೇಗವನ್ನು ಹೊಂದುವದಿಲ್ಲವೋ, ಸಂತಾಪವನ್ನು ಹೊಂದದಿರುವದೋ ತಳಮಳಗೊಳ್ಳದಿರು ವದೋ; ಮತ್ತು ಯಾವನು (ಮಿಕ್ಕ) ಜನರಿಂದ ಉದ್ವಿಗ್ನನಾಗುವದಿಲ್ಲವೋ; ಯಾವನು ಹರ್ಷಾಮರ್ಷಭಯೋದ್ವೇಗಗಳಿಂದ ಹರ್ಷ, ಅಮರ್ಷ, ಭಯ, ಮತ್ತು ಉದ್ವೇಗ-ಈ ಹರ್ಷಾಮರ್ಷಭಯೋದ್ವೇಗಗಳಿಂದ ಮುಕ್ತನಾಗಿರುವನೋ ಹರ್ಷ ವೆಂದರೆ ಇಷ್ಟವಾದದ್ದು ದೊರಕಿದರೆ ಅಂತಃಕರಣವು ಉಬ್ಬುವದು; (ಅದು) ಮೈ ಗೂದಲು ನೆಟ್ಟಗಾಗುವುದು, ಕಣ್ಣೀರು ಬರುವದು-ಮುಂತಾದ ಗುರುತುಗಳಿಂದ

1. 'ಲಿಙ್ಗಶ್ಚ' ಮು॥ವಾ॥

ತಿಳಿಯತಕ್ಕದ್ದು). ಅಮರ್ಷವೆಂದರೆ ತಡೆದುಕೊಳ್ಳಲಾರದೆ ಇರುವದು. ಭಯವೆಂದರೆ ಹೆದರಿಕೆ. ಉದ್ವೇಗ ಎಂದರೆ ತಳಮಳಗೊಳ್ಳುವದು. ಇವುಗಳಿಂದ ಯಾವನು ಬಿಡುಗಡೆ ಹೊಂದಿರುವನೋ ಅವನೂ ನನಗೆ ಪ್ರಿಯನು.

**ಅನಪೇಕ್ಷಃ ಶುಚಿರ್ದಕ್ಷಃ ಉದಾಸೀನೋ ಗತವ್ಯಥಃ ।**
**ಸರ್ವಾರಮ್ಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ ೧೬ ॥**

೧೬. ಅನಪೇಕ್ಷನೂ ಶುಚಿಯೂ ದಕ್ಷನೂ ಉದಾಸೀನನೂ ಗತವ್ಯಥನೂ ಸರ್ವಾರಂಭಪರಿತ್ಯಾಗಿಯೂ (ಆಗಿರುವ) ಯಾವ ನನ್ನ ಭಕ್ತನಿರುವನೋ ಅವನು ನನಗೆ ಪ್ರಿಯನು.

(ಭಾಷ್ಯ)

೨೦೪. ಅನಪೇಕ್ಷಃ[1] ದೇಹೇನ್ದ್ರಿಯವಿಷಯಸಂಬನ್ಧಾದಿಷು ಅಪೇಕ್ಷಾವಿಷಯೇಷು[2] ಅನಪೇಕ್ಷಃ ನಿಃಸ್ಪೃಹಃ । ಶುಚಿಃ ಬಾಹ್ಯೇನ ಆಭ್ಯನ್ತರೇಣ ಚ ಶೌಚೇನ ಸಂಪನ್ನಃ । ದಕ್ಷಃ ಪ್ರತ್ಯುತ್ಪನ್ನೇಷು ಕಾರ್ಯೇಷು ಸದ್ಯಃ ಯಥಾವತ್ ಪ್ರತಿಪತ್ತುಂ ಸಮರ್ಥಃ । ಉದಾಸೀನಃ ನ ಕಸ್ಯಚಿತ್ ಮಿತ್ರಾದೇಃ ಪಕ್ಷಂ ಭಜತೇ ಯಃ ಸ ಉದಾಸೀನಃ ಯತಿಃ । ಗತವ್ಯಥಃ ಗತಭಯಃ । ಸರ್ವಾರಮ್ಭಪರಿತ್ಯಾಗೀ । ಆರಭ್ಯನ್ತೇ ಇತಿ ಆರಮ್ಭಾಃ । ಇಹಾಮುತ್ರಫಲಭೋಗಾರ್ಥಾನಿ[3] ಕಾಮಹೇತೂನಿ ಕರ್ಮಾಣಿ ಸರ್ವಾರಮ್ಭಾಃ । ತಾನ್ ಪರಿತ್ಯಕ್ತುಂ ಶೀಲಮ್ ಅಸ್ಯ ಇತಿ ಸರ್ವಾರಮ್ಭಪರಿತ್ಯಾಗೀ । ಯೋ ಮದ್ಭಕ್ತಃ ಸ ಮೇ ಪ್ರಿಯಃ ॥

(ಭಾಷ್ಯಾರ್ಥ)

ಅನಪೇಕ್ಷನು : ದೇಹ, ಇಂದ್ರಿಯ, ವಿಷಯಗಳು–ಇವುಗಳ ಸಂಬಂಧವೇ ಮುಂತಾದ ಬೇಕೆಂಬ, (ಬುದ್ಧಿಗೆ) ವಿಷಯವಾದವುಗಳಲ್ಲಿ ಅಪೇಕ್ಷೆಯಿಲ್ಲದವನು[4], ಎಂದರೆ (ಯಾವ) ಆಶೆಯೂ ಇಲ್ಲದವನು. ಶುಚಿಯು ಎಂದರೆ ಹೊರಗಿನ ಮತ್ತು ಒಳಗಿನ[5] ಶೌಚದಿಂದ ಕೂಡಿಕೊಂಡಿರುವವನು. ದಕ್ಷನು ಎಂದರೆ ಒದಗಿದ ಕಾರ್ಯ

---

1. ಮ॥ ಮೈ॥ಗಳಲ್ಲಿ ದೆ ; ಇರುವದು ಒಳ್ಳೆಯದು.
2. 'ಅಪೇಕ್ಷಾ ಯಸ್ಯ ನಾಸ್ತಿ' ಮ॥
3. 'ಇಹಾಮುತ್ರಾರ್ಥಾನಿ' ಮ॥ ಮೈ॥
4. ದೇಹವು ಹೀಗೆಯೇ ಇರಬೇಕು, ಇಷ್ಟು ಕಾಲವೇ ಬದುಕಿರಬೇಕು_ಎಂದು ಮುಂತಾಗಿ ಹವಣಿಸದೆ ಇರುವವನು
5. ಶರೀರವನ್ನು ಚೊಕ್ಕಟವಾಗಿಟ್ಟುಕೊಳ್ಳುವದು ಹೊರಗಿನ ಶೌಚವು ; ಮನಸ್ಸನ್ನು ನಿರ್ಮಲವಾಗಿಟ್ಟುಕೊಳ್ಳುವದು ಒಳಗಿನ ಶೌಚವು.

ಗಳಲ್ಲಿ ಕೂಡಲೆ (ಹೀಗೆಯೇ ಸರಿ ಎಂದು) ಇದ್ದಂತೆ (ನಿಶ್ಚಯಿಸಿ) ಅರಿತುಕೊಳ್ಳಲು ಸಮರ್ಥನಾದವನು ಉದಾಸೀನನು. ಯಾವನು ಮಿತ್ರನೇ ಮೊದಲಾದ[1] ಯಾರೊಬ್ಬರ ಪಕ್ಷವನ್ನೂ ಸೇರದೆ ಇರುವನೋ ಅವನು ಉದಾಸೀನನು, ಯತಿಯು. ಗತವ್ಯಥನು, ಹೆದರಿಕೆಯು ಅಳಿದವನು. ಸರ್ವಾರಂಭಪರಿತ್ಯಾಗಿ: ಆರಂಭಿಸಲ್ಪಡುವವು (ಮಾಡಲ್ಪಡುವವು), ಆದ್ದರಿಂದ (ಕರ್ಮಗಳಿಗೆ) ಆರಂಭಗಳು (ಎಂದು ಹೆಸರು); ಇಲ್ಲಿ ಮತ್ತು ಆ (ಪರಲೋಕ)ದಲ್ಲಿ ಫಲವನ್ನು ಉಣ್ಣುವದಕ್ಕೆಂದು, ಕಾಮವೆಂಬ ನಿಮಿತ್ತದಿಂದ (ಮಾಡುವ) ಕರ್ಮಗಳು ಸರ್ವಾರಂಭಗಳು. ಅವುಗಳನ್ನು ಬಿಟ್ಟುಬಿಡುವದು ಇವನ ಸ್ವಭಾವವಾದ್ದರಿಂದ[2] (ಇವನು) ಸರ್ವಾರಂಭಪರಿತ್ಯಾಗಿ. (ಇಂಥ) ನನ್ನ ಭಕ್ತನು ಯಾವನೋ ಅವನು ನನಗೆ ಪ್ರಿಯನು

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಙ್ಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥ ೧೭ ॥**

೧೭. ಯಾವನು ಹರ್ಷಿಸುವದಿಲ್ಲವೋ ದ್ವೇಷಿಸುವದಿಲ್ಲವೋ ಶೋಕಿಸುವದಿಲ್ಲವೋ ಬಯಸುವದಿಲ್ಲವೋ ಶುಭಾಶುಭಪರಿತ್ಯಾಗಿಯಾಗಿರುವನೋ ಯಾವನು ಭಕ್ತಿಯುಳ್ಳವನೋ ಅವನು ನನಗೆ ಪ್ರಿಯನು.

(ಭಾಷ್ಯ)

೨೦೫. ಕಿಂಚ ಯಃ ನ ಹೃಷ್ಯತಿ ಇಷ್ಟಪ್ರಾಪ್ತೌ । ನ ದ್ವೇಷ್ಟಿ ಅನಿಷ್ಟಪ್ರಾಪ್ತೌ । ನ ಶೋಚತಿ ಪ್ರಿಯವಿಯೋಗೇ[3] । ನ ಚ ಅಪ್ರಾಪ್ತಂ ಕಾಙ್ಕ್ಷತಿ । ಶುಭಾಶುಭೇ[4] ಕರ್ಮಣೀ ಪರಿತ್ಯಕ್ತುಂ ಶೀಲಮ್ ಅಸ್ಯ ಇತಿ ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥

(ಭಾಷ್ಯಾರ್ಥ)

ಮತ್ತು ಯಾವನು (ತನಗೆ) ಇಷ್ಟವಾದದ್ದು ಒದಗಿದರೆ ಉಬ್ಬುವದಿಲ್ಲವೋ, ಬೇಡವಾದದ್ದು ಬಂದರೆ (ಅದನ್ನು) ಹಗೆಮಾಡುವದಿಲ್ಲವೋ, ಪ್ರಿಯ (ವಸ್ತು)ವನ್ನು

---

1. ಸುಹೃತ್ತು, ಮಿತ್ರ, ಶತ್ರು, ಉದಾಸೀನ, ಮಧ್ಯಸ್ಥ, ದ್ವೇಷ್ಯ, ಬಂಧು_ಇವರಲ್ಲಿ. ೬-೯.
2. ಗೌ. ಧ. ಸೂ. ೧-೩-೨೪.
3. ‘ ಪ್ರಿಯವಿಪ್ರಯೋಗೇ ’ ಮ॥
4. ‘ ಶುಭಾಶುಭೇ ಪುಣ್ಯಪಾಪೇ ’ ಮ॥

ಅಗಲಿದರೆ ಶೋಕಿಸುವದಿಲ್ಲವೋ, ದೊರಕದೆ ಇದ್ದದ್ದನ್ನು ಬಯಸಿ (ಹಂಬಲಿಸುವ) ದಿಲ್ಲವೋ, ಒಳ್ಳೆಯದು ಕೆಟ್ಟದ್ದು–ಎಂಬ (ಎರಡು ಬಗೆಯ) ಕರ್ಮಗಳನ್ನೂ ಬಿಡುವ ಸ್ವಭಾವದವನಾಗಿರುವದರಿಂದ ಶುಭಾಶುಭಪರಿತ್ಯಾಗಿ(ಯಾಗಿರುವನೋ), ಯಾವನು (ನನ್ನಲ್ಲಿ) ಭಕ್ತಿಯುಳ್ಳವ(ನಾಗಿರುವ)ನೋ, ಅವನು ನನಗೆ ಪ್ರಿಯನು.

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಙ್ಗವಿವರ್ಜಿತಃ ॥ ೧೮ ॥**
**ತುಲ್ಯನಿನ್ದಾಸ್ತುತಿರ್ಮೌನೀ ಸನ್ತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥ ೧೯ ॥**

೧೮-೧೯. ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ ಸಮನಾಗಿ ಹಾಗೂ, ಮಾನಾಪಮಾನಗಳಲ್ಲಿಯೂ, ಶೀತೋಷ್ಣಸುಖದುಃಖಗಳಲ್ಲಿಯೂ ಸಮನಾಗಿ ಸಂಗವಿಲ್ಲದವನಾಗಿ ; ತುಲ್ಯನಿಂದಾಸ್ತುತಿಯಾಗಿ ಮೌನಿಯಾಗಿ ಏತರಿಂದಲಾದರೂ ಸಂತುಷ್ಟನಾಗಿ ಅನಿಕೇತನಾಗಿ ಸ್ಥಿರಮತಿಯಾಗಿ ಭಕ್ತಿವಂತನಾಗಿರುವ ಮನುಷ್ಯನು ನನಗೆ ಪ್ರಿಯನು.

(ಭಾಷ್ಯ)

೨೦೬. ಸಮಃ ಶತ್ರೌ ಚ ಮಿತ್ರೇ ಚ । ತಥಾ ಮಾನಾಪಮಾನಯೋಃ ಪೂಜಾಪರಿಭವಯೋಃ, ಶೀತೋಷ್ಣಸುಖದುಃಖೇಷು ಸಮಃ । ಸರ್ವತ್ರ ಚ[1] ಸಙ್ಗವಿವರ್ಜಿತಃ ॥

(ಭಾಷ್ಯಾರ್ಥ)

ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ ಸಮನಾಗಿ[2], ಮತ್ತು ಮಾನಾಪಮಾನಗಳಲ್ಲಿಯೂ ಎಂದರೆ (ತನಗೆ) ಮನ್ನಣೆ(ಯಾಗಲಿ), ತಿರಸ್ಕಾರ(ವಾಗಲಿ, ಈ ಎರಡ)ರಲ್ಲಿಯೂ (ಸಮನಾಗಿ), ಶೀತೋಷ್ಣಗಳಲ್ಲಿಯೂ ಸುಖದುಃಖಗಳಲ್ಲಿಯೂ ಸಮನಾಗಿ, ಏತರಲ್ಲಿಯೂ ಸಂಗವಿಲ್ಲದವನಾಗಿ—

(ಭಾಷ್ಯ)

೨೦೭. ಕಿಂಚ ತುಲ್ಯನಿನ್ದಾಸ್ತುತಿಃ ನಿನ್ದಾ ಚ ಸ್ತುತಿಶ್ಚ ನಿನ್ದಾಸ್ತುತೀ । ತೇ ತುಲ್ಯೇ ಯಸ್ಯ ಸ ತುಲ್ಯನಿನ್ದಾಸ್ತುತಿಃ । ಮೌನೀ ಮೌನವಾನ್ ಸಂಯತ

---

1. 'ಸರ್ವತ್ರ ಸಙ್ಗವರ್ಜಿತಶ್ಚ' ಮು॥ ಮೈ॥
2. ಗೌ. ಧ. ೧-೩-೨೩.

ವಾಕ್ । ಸನ್ತುಷ್ಟಃ ಯೇನ ಕೇನಚಿತ್ ಶರೀರಸ್ಥಿತಿಹೇತುಮಾತ್ರೇಣ[1]। ತಥಾ ಚ ಉಕ್ತಮ್–"ಯೇನ ಕೇನಚಿದಾಚ್ಛನ್ನೋ ಯೇನ ಕೇನಚಿದಾಶಿತಃ । ಯತ್ರ ಕ್ವಚನ ಶಾಯೀ ಸ್ಯಾತ್ ತಂ ದೇವಾ ಬ್ರಾಹ್ಮಣಂ ವಿದುಃ" (ಮೋ. ಧ. ೨೪೫-೧೨) ಇತಿ । ಕಿಂಚ ಅನಿಕೇತಃ । ನಿಕೇತಃ ಆಶ್ರಯಃ ನಿವಾಸಃ ನಿಯತಃ ನ ವಿದ್ಯತೇ ಯಸ್ಯ ಸಃ ಅನಿಕೇತಃ । "ನಾಗಾರೇ" (?) ಇತ್ಯಾದಿಸ್ಮೃತ್ಯನ್ತರಾತ್ । ಸ್ಥಿರಮತಿಃ ಸ್ಥಿರಾ ಪರಮಾರ್ಥವಿಷಯಾ ಮತಿಃ ಯಸ್ಯ ಸ ಸ್ಥಿರಮತಿಃ । ಭಕ್ತಿಮಾನ್ ಮೇ ಪ್ರಿಯಃ ನರಃ ॥

(ಭಾಷ್ಯಾರ್ಥ)

ಮತ್ತು ತುಲ್ಯಾನಿನ್ದಾಸ್ತುತಿಯಾಗಿ ತೆಗಳುವದು, ಹೊಗಳುವದು–(ಇವು) ನಿಂದಾಸ್ತುತಿಗಳು. ಇವೆ(ರಡೂ) ಯಾವನಿಗೆ ಸಮವಾಗಿರುವವೋ ಅವನು ತುಲ್ಯಾನಿಂದಾಸ್ತುತಿಯು; (ಅಂಥವನಾಗಿ) ಮೌನಿಯಾಗಿ ಮೌನವುಳ್ಳವನಾಗಿ ವಾಗಿಂದ್ರಿಯವನ್ನು ಬಿಗಿಹಿಡಿದುಕೊಂಡು[2] (ಸುಮ್ಮನೆ ಇರುವ). ಏತರಿಂದಲಾದರೂ ಶರೀರವು ಇರುವದಕ್ಕೆ (ಎಷ್ಟು) ಕಾರಣವಾಗಿರುವದೋ (ಅಷ್ಟು) ಮಾತ್ರದಿಂದ ಸಂತುಷ್ಟನಾಗಿ. (ಆದ್ದರಿಂದಲೇ) ಹೀಗೆಂದು (ಭಾರತದಲ್ಲಿ) ಹೇಳಿರುತ್ತದೆ. "ಯೇನ ಕೇನಚಿದಾಚ್ಛನ್ನೋ ಯೇನ ಕೇನಚಿದಾಶಿತಃ । ಯತ್ರ ಕ್ವಚನ ಶಾಯೀ ಸ್ಯಾತ್ ತಂ ದೇವಾ ಬ್ರಾಹ್ಮಣಂ ವಿದುಃ" ॥ (ಮೋ. ಧ. ೨೪೫-೧೨. ಏನು ಸಿಕ್ಕರೆ ಅದನ್ನು ಹೊದೆದುಕೊಂಡು ಏನು ಸಿಕ್ಕರೆ ಅದನ್ನು ತಿನ್ನುತ್ತಾ, ಎಲ್ಲಿ ಅಂದರೆ ಅಲ್ಲಿ ಮಲುಗುವವನಾಗಿ ಯಾವನಿರುವನೋ ಅವನನ್ನು ದೇವತೆಗಳು ಬ್ರಾಹ್ಮಣನೆಂದೆಣಿಸುವರು.) ಮತ್ತು ಅನಿಕೇತನಾಗಿ: ನಿಕೇತವೆಂದರೆ ಆಶ್ರಯ (ಸ್ಥಾನವು), ವಾಸಸ್ಥಲವು. (ಇಂಥದ್ದೆಂದು) ಗೊತ್ತಾದ (ನಿಕೇತನವು) ಯಾವನಿಗೆ ಇಲ್ಲವೋ (ಅವನು) ಅನಿಕೇತನನು[3]; (ಅಂಥವನಾಗಿ ಎಂದರ್ಥ). "ನಾಗಾರೇ" (? ಮನೆಯಲ್ಲಿ ಆಸಕ್ತಿಯಿಲ್ಲದವನು) ಎಂದು ಮುಂತಾಗಿರುವ ಬೇರೆ ಒಂದು ಸ್ಮೃತಿಯು[4] ಇದಕ್ಕೆ ಆಧಾರವು ಸ್ಥಿರಮತಿಯು ಯಾವನಿಗೆ ಪರಮಾರ್ಥವಿಷಯಕವಾದ ಬುದ್ಧಿಯು ಸ್ಥಿರವಾಗಿರುವದೋ ಅವನು ಸ್ಥಿರಮತಿಯು; (ಇಂಥ) ಭಕ್ತಿವಂತನಾದ ಮನುಷ್ಯನು ನನಗೆ ಪ್ರಿಯನು.

---

1. 'ಸ್ಥಿತಿಮಾತ್ರೇಣ' ಎಂಬ ಆ॥ ಪಾಠಕ್ಕಿಂತ ಇದೇ ಉತ್ತಮ.
2. ಗೌ. ಧ. ೧-೩-೧೬.
3. ಗೌ. ಧ. ೧-೩-೧೨ ನ್ನು ಇದಕ್ಕೆ ಹೋಲಿಸಿ.
4. ಇದು ಯಾವ ಸ್ಮೃತಿ ಎಂಬುದು ತಿಳಿಯಲಿಲ್ಲ.

"ನ ಕುಡ್ಯಾಂ (ಕುಟ್ಯಾಂ ?) ನೋದಕೇ ಸಜ್ಜೋ ನ ಚೈಲೇ ನ ತ್ರಿಪುಷ್ಕರೇ ।
ನಾಗಾರೇ ನಾಸನೇ ನಾನ್ನೇ ಯಸ್ಯ ವೈ ಮೋಕ್ಷವಿತ್ತು ಸಃ ॥" ಎಂದು ಆ॥ ವ್ಯಾಖ್ಯಾನದಲ್ಲಿ ಪೂರ್ಣಶ್ಲೋಕವನ್ನು ಕೊಟ್ಟಿದೆ.

## ಭಕ್ತಿಯೋಗವನ್ನು ಸಾಧನಮಾಡುವವರು ಭಗವತ್ಪ್ರಿಯರು

(ಭಾಷ್ಯ)

೨೦೮. "ಅದ್ವೇಷ್ಟಾ ಸರ್ವಭೂತಾನಾಮ್" (೧೨-೧೩) ಇತ್ಯಾದಿನಾ ಅಕ್ಷರೋಪಾಸಕಾನಾಂ ನಿವೃತ್ತಸರ್ವೈಷಣಾನಾಂ ಸಂನ್ಯಾಸಿನಾಂ ಪರಮಾರ್ಥಜ್ಞಾನ ನಿಷ್ಠಾನಾಂ ಧರ್ಮಜಾತಂ ಪ್ರಕ್ರಾನ್ತಮ್ ಉಪಸಂಹ್ರಿಯತೇ[1] —

(ಭಾಷ್ಯಾರ್ಥ)

ಎಲ್ಲಾ ಏಷಣೆಗಳನ್ನೂ ತೊರೆದು ಪರಮಾರ್ಥಜ್ಞಾನದಲ್ಲಿಯೇ ನೆಲೆನಿಂತಿರುವ ಸಂನ್ಯಾಸಿಗಳಾದ ಅಕ್ಷರೋಪಾಸಕರ ಧರ್ಮಸಮೂಹವನ್ನು 'ಅದ್ವೇಷ್ಟಾ ಸರ್ವ ಭೂತಾನಾಮ್' (೧೨-೧೩) ಮುಂತಾದ (ಶ್ಲೋಕದಿಂದ) ಪ್ರಾರಂಭಿಸಿತ್ತಷ್ಟೆ, (ಈಗ ಅದನ್ನು) ಉಪಸಂಹಾರಮಾಡಲಾಗುತ್ತದೆ :—

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥**

೨೦. ಆದರೆ ಯಾವ ಭಕ್ತರು ಈ ಮೇಲೆ ಹೇಳಿದ ಧರ್ಮ್ಯಾಮೃತ ವನ್ನು ಶ್ರದ್ಧೆಯುಳ್ಳವರಾಗಿ ಮತ್ಪರಮರಾಗಿ ಪರ್ಯುಪಾಸನೆಮಾಡುತ್ತಿರು ವರೋ ಅವರು ನನಗೆ ಬಹಳವಾಗಿ ಪ್ರಿಯ(ರಾಗಿರುವರು).

(ಭಾಷ್ಯ)

೨೦೯. ಯೇ ತು ಸಂನ್ಯಾಸಿನಃ ಧರ್ಮ್ಯಾಮೃತಂ ಧರ್ಮಾದನಪೇತಂ[2] ಧರ್ಮ್ಯಂ ಚ ತತ್ ಅಮೃತಂ ಚ ತತ್ ಅಮೃತತ್ವಹೇತುತ್ವಾತ್ । ಇದಂ ಯಥೋಕ್ತಮ್ "ಅದ್ವೇಷ್ಟಾ ಸರ್ವಭೂತಾನಾಮ್" (೧೨-೧೩) ಇತ್ಯಾದಿನಾ । ಪರ್ಯುಪಾಸತೇ ಅನುತಿಷ್ಠನ್ತಿ ಶ್ರದ್ದಧಾನಾಃ ಸನ್ತಃ । ಮತ್ಪರಮಾಃ । ಯಥೋಕ್ತಃ ಅಹಮ್ ಅಕ್ಷರಾತ್ಮಾ ಪರಮಃ ನಿರತಿಶಯಾ ಗತಿಃ ಯೇಷಾಂ ತೇ ಮತ್ಪರಮಾಃ । ಮದ್ಭಕ್ತಾಶ್ಚ ಉತ್ತಮಾಂ ಪರಮಾರ್ಥಜ್ಞಾನಲಕ್ಷಣಾಂ ಭಕ್ತಿಮ್ ಆಶ್ರಿತಾಃ[3] । ತೇ

---

1. 'ಉಪಸಂಹರತಿ' ಮು॥ ಮೈ॥
2. ಮು॥ ಮೈ॥ಗಳಲ್ಲಿಲ್ಲ.
3. ಆಸ್ಥಿತಾಃ' ಮು॥ ಮೈ॥

ಅತೀವ ಮೇ ಪ್ರಿಯಾಃ[1] । 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮ್ (೭-೧೭) ಇತಿ ಯತ್ ಸೂಚಿತಂ ತದ್ ವ್ಯಾಖ್ಯಾಯ ಇಹ ಉಪಸಂಹೃತಮ್ "ಭಕ್ತಾಸ್ತೇಽತೀವ ಮೇ ಪ್ರಿಯಾಃ" ಇತಿ । ಯಸ್ಮಾತ್ ಧರ್ಮ್ಯಾಮೃತಮ್ ಇದಂ ಯಥೋಕ್ತಮ್ ಅನುತಿಷ್ಠನ್ ಭಗವತೋ ವಿಷ್ಣೋಃ ಪರಮೇಶ್ವರಸ್ಯ ಅತೀವ ಪ್ರಿಯೋ ಭವತಿ । ತಸ್ಮಾತ್ ಇದಂ ಧರ್ಮ್ಯಾಮೃತಂ ಮುಮುಕ್ಷುಣಾ ಯತ್ನತಃ ಅನುಷ್ಠೇಯಂ ವಿಷ್ಣೋಃ ಪ್ರಿಯಂ ಪರಂಧಾಮ ಜಿಗಮಿಷುಣಾ ಇತಿ ವಾಕ್ಯಾರ್ಥಃ ॥

(ಭಾಷ್ಯಾರ್ಥ)

ಯಾವ ಸಂನ್ಯಾಸಿಗಳಾದರೆ ಈ 'ಅದ್ವೇಷ್ಟಾ ಸರ್ವಭೂತಾನಾಮ್' ಎಂಬಲ್ಲಿಂದ (ಹಿಡಿದು)ಮೇಲೆ ಹೇಳಿದ ಧರ್ಮ್ಯಾಮೃತವನ್ನು–ಧರ್ಮವನ್ನು ಬಿಟ್ಟುಹೋಗದೆ (ಧರ್ಮದಿಂದಲೇ ತುಂಬಿರುವ)ದರಿಂದ ಇದು ಧರ್ಮ್ಯವು ; ಅಮೃತತ್ವಕ್ಕೆ ಕಾರಣವಾಗಿರುವದರಿಂದ ಇದು ಅಮೃತವೂ (ಆಗಿದೆ. ಇಂಥ ಧರ್ಮ್ಯಾಮೃತವನ್ನು) ಪರ್ಯುಪಾಸನೆಮಾಡುತ್ತಿರುವರೋ ಅನುಷ್ಠಾನಮಾಡುತ್ತಿರುವರೋ ; ಶ್ರದ್ಧೆಯುಳ್ಳವರಾಗಿ, ಮತ್ಪರಮರಾಗಿ-ಹಿಂದೆ ಹೇಳಿರುವ ಅಕ್ಷರಾತ್ಮನಾದ ನಾನು ಯಾರಿಗೆ ಪರಮನೋ ಮಿಗಿಲಿಲ್ಲದ ಗತಿಯೋ ಅವರು ಮತ್ಪರಮರು. (ಅಂಥವರಾಗಿ)–ಮತ್ತು **ನನ್ನ ಭಕ್ತರಾಗಿ, ಉತ್ತಮವಾದ ಪರಮಾರ್ಥಜ್ಞಾನವೆಂಬ ಭಕ್ತಿಯನ್ನು ಆಶ್ರಯಿಸಿದವರಾಗಿ (ಯಾರು ಇರುವರೋ) ಅವರು ನನಗೆ ಬಹಳವಾಗಿ ಪ್ರಿಯರಾಗಿರುವರು.**

"ನಾನು ಜ್ಞಾನಿಗೆ ಬಹಳವಾಗಿ ಪ್ರಿಯನಾಗಿರುವೆನಲ್ಲವೆ?" (೭-೧೭) ಎಂದು (ಹಿಂದೆ) ಸೂಚಿಸಿತ್ತಷ್ಟೆ, ಅದನ್ನು ವಿಸ್ತಾರವಾಗಿ ವಿವರಿಸಿ ಇಲ್ಲಿ "ಆ ಭಕ್ತರು ನನಗೆ ಬಹಳ ಪ್ರಿಯರಾಗಿರುವರು" ಎಂದು ಉಪಸಂಹಾರಮಾಡಿರುತ್ತದೆ. **ಈ ಮೇಲೆ ಹೇಳಿರುವ ಧರ್ಮ್ಯಾಮೃತವನ್ನು ಅನುಷ್ಠಾನಮಾಡಿದವನು ಭಗವಂತನಾದ ವಿಷ್ಣುವಿಗೆ, ಪರಮೇಶ್ವರನಿಗೆ, ಬಹಳ ಪ್ರಿಯನಾಗುವನಷ್ಟೆ, ಆದ್ದರಿಂದ ಈ ಧರ್ಮ್ಯಾಮೃತವನ್ನು ವಿಷ್ಣುವಿಗೆ ಪ್ರಿಯವಾದ ಹೆಚ್ಚಿನ ಸ್ಥಾನವನ್ನು ಸೇರಬೇಕೆಂದು ಬಯಸುವ ಮುಮುಕ್ಷುವು ಪ್ರಯತ್ನದಿಂದ ಅನುಷ್ಠಾನಮಾಡಬೇಕು-ಎಂಬುದು ವಾಕ್ಯದ (ಒಟ್ಟು) ಅರ್ಥವು.**

ಇತಿ ಶ್ರೀಮದ್ಭಗವದ್ಗೀತಾಭಾಷ್ಯೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ

---

1. 'ಪ್ರಿಯಾ ಭವನ್ತಿ' ಮ॥

# ಹನ್ನೆರಡನೆಯ ಅಧ್ಯಾಯದ ಸಾರ

೧. ವಿಶ್ವರೂಪವನ್ನು ನೋಡಿದಬಳಿಕ ಅರ್ಜುನನು ಹೀಗೆಂದು ಕೇಳಿದನು: "ಭಗವಂತನೆ, ನೀನು ಈಗ ತೋರಿಸಿರುವ ವಿಶ್ವರೂಪದಲ್ಲಿಯೇ ಯಾವಾಗಲೂ ಮನಸ್ಸಿಟ್ಟು ಉಪಾಸನೆಮಾಡುವವರು, ನೀನು ಇದುವರೆಗೆ ಅಲ್ಲಲ್ಲಿ ಉಪದೇಶಮಾಡಿರುವ ನಿರುಪಾಧಿಕವಾದ ಅಕ್ಷರಬ್ರಹ್ಮವನ್ನು ಉಪಾಸನೆಮಾಡುವವರು—ಇವರಿಬ್ಬರಲ್ಲಿ ಯಾರು ಹೆಚ್ಚಿನ ಯೋಗಿಗಳು?"

೨—೭ ಆಗ ಭಗವಂತನಿಂತೆಂದನು: ಅರ್ಜುನನೆ, ವಿಶ್ವರೂಪವನ್ನು ಉಪಾಸನೆಮಾಡುವವರೇ ಹೆಚ್ಚಿನ ಯೋಗಿಗಳು. ಅಕ್ಷರಬ್ರಹ್ಮವನ್ನು ಉಪಾಸನೆಮಾಡುವವರೂ ನನ್ನನ್ನೇ ಸೇರುತ್ತಾರೆ; ಆದರೆ ಆ ಬ್ರಹ್ಮವು ಇಂದ್ರಿಯಕ್ಕೆ ನಿಲುಕುವದಲ್ಲವಾದ್ದರಿಂದ ದೇಹಾಭಿಮಾನವುಳ್ಳವರಿಗೆ ಸುಲಭವಾಗಿ ದಕ್ಕುವದಲ್ಲ. ವಿಶ್ವರೂಪನಾದ ನನ್ನನ್ನು ಉಪಾಸನೆಮಾಡುವವರಿಗೆ ನಾನೇ ಸಹಾಯಕನಾಗಿ ಅವರನ್ನು ಸಂಸಾರಸಾಗರದಿಂದ ಮೇಲಕ್ಕೆತ್ತುವೆನು."

೮—೧೨. "ಆದ್ದರಿಂದ ನೀನು ವಿಶ್ವರೂಪನಾದ ನನ್ನಲ್ಲಿಯೇ ಮನಸ್ಸನ್ನೂ ಬುದ್ಧಿಯನ್ನೂ ನಿಲ್ಲಿಸಿಕೊ. ಒಂದೇ ಸಲಕ್ಕೆ ಹಾಗೆ ನಿಲ್ಲಿಸಿಕೊಳ್ಳುವದಕ್ಕೆ ಆಗದಿದ್ದರೆ ವಿವೇಕ ವೈರಾಗ್ಯಗಳಿಂದ ಅದನ್ನು ಅಭ್ಯಾಸಮಾಡು; ಅದೂ ನಿನಗೆ ಕಷ್ಟವಾಗಿ ತೋರಿದರೆ ಈಶ್ವರ ಪ್ರೀತ್ಯರ್ಥವಾದ ಕರ್ಮಗಳನ್ನೇ ಮಾಡು; ಅದೂ ನಿನಗೆ ಕಷ್ಟವಾದರೆ ನನ್ನ ಯೋಗವನ್ನು ಆಶ್ರಯಿಸಿ ಸರ್ವಕರ್ಮಫಲತ್ಯಾಗವನ್ನು ಮಾಡುವ ಯತ್ನವನ್ನು ಮಾಡು.

೧೩—೧೯. "ಆದರೆ ನನಗೆ ಅಕ್ಷರೋಪಾಸಕರು ಅತ್ಯಂತಪ್ರಿಯರು. ಅವರ ಲಕ್ಷಣವನ್ನು ಹೇಳುತ್ತೇನೆ ಕೇಳು: ಅವರು ಯಾವ ಪ್ರಾಣಿಗಳನ್ನೂ ಹಗೆಮಾಡರು; ಎಲ್ಲರಲ್ಲಿಯೂ ಮಿತ್ರರಾಗಿ ಕರುಣೆಯನ್ನು ತೋರಿಸುತ್ತಿರುವರು. ನಾನುನನ್ನದೆಂಬುದಿಲ್ಲದೆ, ಸುಖದುಃಖಗಳಲ್ಲಿ ಏರುಪೇರಿಲ್ಲದೆ ತಮಗೆ ಅಪಚಾರವಾದರೂ ಕ್ಷಮಿಸುತ್ತಾ, ಅತ್ಯಲ್ಪದಿಂದಲೇ ತುಷ್ಟರಾಗಿ, ಇಂದ್ರಿಯಮನಸ್ಸುಗಳನ್ನು ಬಿಗಿಹಿಡಿದು ದೃಢನಿಶ್ಚಯದಿಂದ ಪರಮಾತ್ಮನಿಗೇ ತಮ್ಮ ಮನೋಬುದ್ಧಿಗಳನ್ನು ಅರ್ಪಿಸಿರುವರು. ತಮ್ಮಿಂದ ಮತ್ತೊಬ್ಬರಿಗೆ ತಳಮಳವಾಗದಂತೆ ಇರುವರು, ತಾವೂ ಮತ್ತೊಬ್ಬರಿಂದ ತಳಮಳಗೊಳ್ಳದಿರುವರು; ಸಿಟ್ಟು, ಅಸಹನೆ, ಅಂಜಿಕೆ, ತಳಮಳ—ಯಾವದೊಂದೂ ಇಲ್ಲದೆ ಇರುವರು. ಯಾವದೊಂದನ್ನೂ ಅಪೇಕ್ಷಿಸದೆ, ಶುಚಿಯಾಗಿ, ಬಂದ ಕಾರ್ಯವನ್ನು ದಕ್ಷತೆಯಿಂದ ಮಾಡುತ್ತಾ, ಯಾರೊಬ್ಬರ ಪಕ್ಷವನ್ನೂ ಹಿಡಿಯದೆ, ವ್ಯಥೆಯಿಲ್ಲದೆ, ತಮಗಾಗಿ ಯಾವದೊಂದು ಕರ್ಮವನ್ನೂ ಮಾಡದೆ ಇರುವರು. ಒಳ್ಳೆಯದು ಬಂದರೆ ಹಿಗ್ಗದೆ, ಕೆಟ್ಟದ್ದು ಆದರೆ ಅದನ್ನು ಹಗೆಮಾಡದೆ, ಏನಾದರೂ ಹೋಯಿತೆಂದು ಅಳದೆ, ಏನಾದರೂ ತಮಗೆ ದೊರಕಬೇಕೆಂದು ಹಂಬಲಿಸದೆ, ಪಾಪಪುಣ್ಯಕರ್ಮಗಳನ್ನು ಮೀರಿರುವರು. ತಮ್ಮವರು, ಅನ್ಯರು; ಮಾನ, ಅಪಮಾನ; ಸುಖ, ದುಃಖ—ಮುಂತಾದ ದ್ವಂದ್ವಗಳನ್ನು ಸಹಿಸಿಕೊಂಡು ಒಂದೇ ಸಮನಾಗಿರುತ್ತಾ ಏತರಲ್ಲಿಯೂ ಸಕ್ತರಾಗದೆ ಇರುವರು. ತಮ್ಮನ್ನು ಜನರು ಬಯ್ಯಲಿ, ಹೊಗಳಲಿ—ಮನಸ್ಸನ್ನು ಏರುಪೇರುಮಾಡಿಕೊಳ್ಳದೆ ಅನ್ನ, ಬಟ್ಟೆ, ವಾಸಸ್ಥಳ—ಇವುಗಳು ಹೀಗೆಯೇ ಆಗಬೇಕೆಂಬ ನಿಯಮವೇ ಇಲ್ಲದೆ ಪರಮಾರ್ಥದಲ್ಲಿಯೇ ಮನಸ್ಸನ್ನು ಸ್ಥಿರವಾಗಿಟ್ಟುಕೊಂಡಿರುವರು.

೨೦. "ಅವರ ಈ ವರ್ತನೆಯು ಧರ್ಮಕ್ಕೆ ಹೊಂದಿಕೊಂಡೂ ಇರುತ್ತದೆ, ಮೋಕ್ಷಕ್ಕೆ ಕಾರಣವಾಗಿಯೂ ಇರುತ್ತದೆ. ಅವರು ಹೆಚ್ಚಿನ ಶ್ರದ್ಧೆಯಿಂದ ನನ್ನನ್ನೇ ಪರಮಗತಿಯೆಂದು ಭಾವಿಸಿ ಹೀಗೆ ನಡೆದುಕೊಳ್ಳುತ್ತಿರುವ ಭಕ್ತರಾದ್ದರಿಂದ ಅವರು ನನಗೆ ಅತ್ಯಂತ ಪ್ರಿಯರಾಗಿರುತ್ತಾರೆ."



# ಹದಿಮೂರನೆಯ ಅಧ್ಯಾಯ

## ( ಕ್ಷೇ ತ್ರ ಕ್ಷೇ ತ್ರ ಜ್ಞ ಯೋ ಗ )

## ಈ ಅಧ್ಯಾಯದ ಸಂಬಂಧ

(ಭಾಷ್ಯ)

೨೧೦. ಸಪ್ತಮೇ ಅಧ್ಯಾಯೇ ದ್ವೇ ಪ್ರಕೃತೀ ಸೂಚಿತೇ ಪರಮೇಶ್ವರಸ್ಯ [1] । ತ್ರಿಗುಣಾತ್ಮಿಕಾ ಅಷ್ಟಧಾ ಭಿನ್ನಾ ಅಪರಾ । ಸಂಸಾರಹೇತುತ್ವಾತ್ । ಪರಾ ಚ ಅನ್ಯಾ ಜೀವಭೂತಾ ಕ್ಷೇತ್ರಜ್ಞಲಕ್ಷಣಾ ಈಶ್ವರಾತ್ಮಿಕಾ । ಯಾಭ್ಯಾಂ ಪ್ರಕೃತಿಭ್ಯಾಮ್ ಈಶ್ವರಃ ಜಗದುತ್ಪತ್ತಿಸ್ಥಿತಿಲಯಹೇತುತ್ವಂ ಪ್ರತಿಪದ್ಯತೇ । ತತ್ರ ಕ್ಷೇತ್ರಕ್ಷೇತ್ರಜ್ಞ ಲಕ್ಷಣ ಪ್ರಕೃತಿದ್ವಯನಿರೂಪಣದ್ವಾರೇಣ ತದ್ವತಃ ಈಶ್ವರಸ್ಯ ತತ್ತ್ವನಿರ್ಧಾರಣಾರ್ಥಃ [2] ಕ್ಷೇತ್ರಾಧ್ಯಾಯಃ [3] ಆರಭ್ಯತೇ । ಅತೀತಾನನ್ತರಾಧ್ಯಾಯೇ ಚ “ ಅದ್ವೇಷ್ಟಾ ಸರ್ವ ಭೂತಾನಾಂ ” (೧೨-೧೩) ಇತ್ಯಾದಿನಾ ಯಾವತ್ ಅಧ್ಯಾಯಪರಿಸಮಾಪ್ತಿಃ ತಾವತ್ ತತ್ತ್ವಜ್ಞಾನಿನಾಂ ಸಂನ್ಯಾಸಿನಾಂ ನಿಷ್ಠಾ [4] ಯಥಾ ತೇ ವರ್ತನ್ತೇ ಇತ್ಯೇ ತತ್ ಉಕ್ತಮ್ । ಕೇನ ಪುನಸ್ತೇ ತತ್ತ್ವಜ್ಞಾನೇನ ಯುಕ್ತಾ ಯಥೋಕ್ತಧರ್ಮಾ ಚರಣಾತ್ ಭಗವತಃ ಪ್ರಿಯಾಃ ಭವನ್ತಿ ಇತಿ ? ಏವಮರ್ಥಶ್ಚ ಅಯಮ್ ಅಧ್ಯಾಯಃ ಆರಭ್ಯತೇ—

(ಭಾಷ್ಯಾರ್ಥ)

ಏಳನೆಯ ಅಧ್ಯಾಯದಲ್ಲಿ (೭-೪, ೫) ತ್ರಿಗುಣಾತ್ಮಕವಾದ ಎಂಟು ಬಗೆ ಯಾಗಿರುವದರಿಂದ ಕೀಳ್ತರದ್ದೆನಿಸಿರುವ (ಪ್ರಕೃತಿಯೊಂದು), ಈಶ್ವರಸ್ವರೂಪವಾದ [5]

---

1. ' ಸೂತ್ರಿತೇ ದ್ವೇ ಪ್ರಕೃತೀ ಈಶ್ವರಸ್ಯ ' ನಿ॥ ಗು॥ ವಾ॥ ; ' ಸೂಚಿತೇ··· ಈಶ್ವ ರಸ್ಯ ' ಅ॥
2. ' ತತ್ತ್ವನಿರ್ಧಾರಣಾಯ ' ಮು॥ ಮೈ॥
3. ' ಕ್ಷೇತ್ರಜ್ಞಾಧ್ಯಾಯಃ ' ಮು॥
4. ' ನಿಷ್ಠಾ ಉಕ್ತಾ ' ಮು॥
5. ಈಶ್ವರನೇ ಜಗತ್ತನ್ನು ಸೃಷ್ಟಿಸಿ ಜೀವರೂಪದಿಂದ ಒಳಹೊಕ್ಕಿರುತ್ತಾನೆಂಬ ವೇದಾಂತಪ್ರಕ್ರಿಯೆಯನ್ನು ಇಲ್ಲಿ ಸೂಚಿಸಿದೆ. ಅಪರಪ್ರಕೃತಿಯೂ ಪರಮಾರ್ಥವಾಗಿ ಈಶ್ವರನೇ ಆದರೂ ನಾಮರೂಪಗಳ ತೋರಿಕೆಯ ರೂಪದಿಂದ ಅದು ಅನಿರ್ವಚನೀಯ ವಾಗಿದೆ. ಸೂ. ಭಾ. ೨-೧-೧೪.

ಜೀವನಾಗಿರುವ ಕ್ಷೇತ್ರಜ್ಞನೆಂಬ ಹೆಚ್ಚಿನ (ಪ್ರಕೃತಿಯೊಂದು)–ಹೀಗೆ ಈಶ್ವರನಿಗೆ ಎರಡು ಪ್ರಕೃತಿಗಳು ಸೂಚಿತವಾಗಿರುತ್ತವೆ. ಈ (ಎರಡು) ಪ್ರಕೃತಿಗಳಿಂದ[1] ಈಶ್ವರನು **ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ-ಇವುಗಳಿಗೆ ಕಾರಣನಾಗಿರುತ್ತಾನೆ.** ಇಲ್ಲಿ ಕ್ಷೇತ್ರ, ಕ್ಷೇತ್ರಜ್ಞ–ಎಂಬ ಎರಡು ಪ್ರಕೃತಿಗಳನ್ನೂ ಪರೀಕ್ಷೆಮಾಡುವದರ ಮೂಲಕ[2] ಅವುಗಳನ್ನುಳ್ಳ ಈಶ್ವರನ ತತ್ತ್ವವನ್ನು[3] ಗೊತ್ತುಪಡಿಸುವದಕ್ಕಾಗಿ (ಈ) ಕ್ಷೇತ್ರಾಧ್ಯಾಯವನ್ನು[4] ಆರಂಭಿಸಿರುತ್ತದೆ.

ಮತ್ತು ಇದರ ಹಿಂದಿನ (ಹನ್ನೆರಡನೆಯ) ಅಧ್ಯಾಯದಲ್ಲಿ 'ಅದ್ವೇಷ್ಟಾ ಸರ್ವಭೂತಾನಾಮ್' (೧೨-೧೩) ಎಂಬಲ್ಲಿಂದ (ಆ) ಅಧ್ಯಾಯವು ಕೊನೆಗಾಣುವವರೆಗೂ ತತ್ತ್ವಜ್ಞಾನಿಗಳಾದ ಸಂನ್ಯಾಸಿಗಳ ನಿಷ್ಠೆಯನ್ನು, ಎಂದರೆ ಅವರು ಹೇಗೆ ನಡೆದುಕೊಳ್ಳುವರು–ಎಂಬುದನ್ನು ಹೇಳಿರುತ್ತದೆ. ಹಾಗಾದರೆ ಅವರು ಯಾವ ತತ್ತ್ವಜ್ಞಾನದಿಂದ ಕೂಡಿರುವದರಿಂದ (ಈ) ಹಿಂದೆ ಹೇಳಿರುವ ಧರ್ಮವನ್ನು ಆಚರಿಸಿ ಭಗವಂತನಿಗೆ ಪ್ರಿಯರಾಗಿರುತ್ತಾರೆ?[5] (ಎಂಬಿದನ್ನು ತಿಳಿಸಬೇಕು). ಈ ಕಾರಣದಿಂದಲೂ ಈ ಅಧ್ಯಾಯವನ್ನು ಆರಂಭಿಸಿರುತ್ತದೆ.

## ಕ್ಷೇತ್ರಕ್ಷೇತ್ರಜ್ಞರ ಸ್ವರೂಪ

(ಭಾಷ್ಯ)

೨೧೧. ಪ್ರಕೃತಿಶ್ಚ ತ್ರಿಗುಣಾತ್ಮಿಕಾ ಸರ್ವಕಾರ್ಯಕರಣವಿಷಯಾಕಾರೇಣ ಪರಿಣತಾ ಪುರುಷಸ್ಯ ಭೋಗಾಪವರ್ಗಾರ್ಥಕರ್ತವ್ಯತಯಾ ದೇಹೇನ್ದ್ರಿಯಾದ್ಯಾಕಾರೇಣ ಸಂಹನ್ಯತೇ । ಸೋಽಯಂ ಸಙ್ಘಾತಃ ಇದಂ ಶರೀರಮ್ । ತದೇತತ್ ಭಗವಾನ್ ಉವಾಚ—

---

1. ೭-೬ರ ಭಾಷ್ಯವನ್ನು ನೋಡಿ; ಸ್ವತಃ ಈಶ್ವರನಿಗೆ ಕರ್ತೃತ್ವವಿಲ್ಲವೆಂಬುದನ್ನು ೯-೧೦ರಲ್ಲಿ ಸೂಚಿಸಿದೆ.

2. ಕ್ಷೇತ್ರಜ್ಞನು ಪರಮಾತ್ಮನೇ, ಕ್ಷೇತ್ರತ್ವವು ಮಿಥ್ಯೆಯೇ–ಎಂದು ಗೊತ್ತುಪಡಿಸುವದರ ಮೂಲಕ.

3. ಅದ್ವಿತೀಯತ್ವವನ್ನು.

4. ಕ್ಷೇತ್ರಜ್ಞಾಧ್ಯಾಯವೆಂದು ಮ॥; ಅದೂ ಆಗಬಹುದು. ಈ ಅಧ್ಯಾಯದ ಭಾಷ್ಯದಲ್ಲೆಲ್ಲ ಮ॥ ಪಾಠವು ಅಲ್ಲಲ್ಲಿ ಭಿನ್ನವಾಗಿದೆ. ಆದರೆ ಈ ಪಾಠಭೇದಗಳಿಂದ ಅರ್ಥದಲ್ಲಿ ಅಷ್ಟೇನೂ ಹೆಚ್ಚುಕಡಿಮೆಯಾಗುವದಿಲ್ಲ. ಮುಖ್ಯವಾದವುಗಳನ್ನು ಮಾತ್ರ ತಿಳಿಸುವೆವು.

5. ಅಕ್ಷರೋಪಾಸನೆಯೆಂದರೆ ಜ್ಞಾನನಿಷ್ಠೆಯೇ ಎಂಬುದಕ್ಕೆ ಈ ವಾಕ್ಯವೂ ಗಮಕ.

(ಭಾಷ್ಯಾರ್ಥ)

ಮತ್ತು[1] ತ್ರಿಗುಣಾತ್ಮಕವಾದ ಪ್ರಕೃತಿಯು ಎಲ್ಲಾ ಕಾರ್ಯಕರಣಗಳ ಮತ್ತು ವಿಷಯಗಳ ಆಕಾರದಿಂದ ಪರಿಣಾಮವಾಗಿ ಪುರುಷನಿಗೆ ಭೋಗ, ಅಪವರ್ಗ-ಎಂಬ ಪ್ರಯೋಜನವನ್ನು ಉಂಟುಮಾಡುವದಕ್ಕಾಗಿ ದೇಹ, ಇಂದ್ರಿಯಗಳು-ಮುಂತಾದ ಆಕಾರದಿಂದ ಒಟ್ಟುಗೂಡುತ್ತದೆ. ಈ ಬಗೆಯ **ಸಂಘಾತವೇ**[2] ಈ ಶರೀರವು. ಇದನ್ನು ತಿಳಿಸಬೇಕೆಂದು ಶ್ರೀ ಭಗವಂತನು ಇಂತೆಂದನು :—

**ಶ್ರೀ ಭಗವಾನ್ ಉವಾಚ—**

**ಇದಂ ಶರೀರಂ ಕೌನ್ತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ**[3] ॥ ೧ ॥

೧. ಶ್ರೀ ಭಗವಂತನಿಂತೆಂದನು :—ಎಲೈ ಕೌಂತೇಯನೆ, ಈ ಶರೀರವು ಕ್ಷೇತ್ರವೆಂದು ಕರೆಯಲ್ಪಡುತ್ತದೆ. ಇದನ್ನು ಯಾವನು ಅರಿಯುತ್ತಾನೋ ಅವನನ್ನು ಕ್ಷೇತ್ರಜ್ಞನೆಂದು ತದ್ವಿದರು ಕರೆಯುತ್ತಾರೆ.

(ಭಾಷ್ಯ)

೨೧೨. ಇದಮ್ ಇತಿ ಸರ್ವನಾಮ್ನಾ ಉಕ್ತಂ ವಿಶಿನಷ್ಟಿ ಶರೀರಮ್ ಇತಿ । ಹೇ ಕೌನ್ತೇಯ । ಕ್ಷತತ್ರಾಣಾತ್, ಕ್ಷಯಾತ್, ಕ್ಷರಣಾತ್, ಕ್ಷೇತ್ರವದ್ ವಾ

---

1. ಎರಡನೆಯ ಷಟ್ಕದಲ್ಲಿ ವರ್ಣಿಸಿರುವ ಜಗತ್ಕಾರಣತ್ವವು ಅವಿದ್ಯಕವೆಂದು ತೋರಿಸುವದಕ್ಕೂ ನಿಜವಾದ ವಿದ್ಯೆಯನ್ನು ತಿಳಿಸುವದಕ್ಕೂ ಅಧ್ಯಾಯವು ಪ್ರಾರಂಭವಾಗಿದೆಯೆಂದು ಹಿಂದೆ ಹೇಳಿದ್ದಾಯಿತು. ಇನ್ನು ಅಧ್ಯಾಯದ ಪ್ರಾರಂಭದಲ್ಲಿರುವ ಕ್ಷೇತ್ರದ ವರ್ಣನೆಯ ಅಭಿಪ್ರಾಯವನ್ನು ಸಂಕ್ಷೇಪದಿಂದ ವರ್ಣಿಸುವದಕ್ಕೆ ಈ ಅವತರಣಿಕೆಯನ್ನು ಕೊಟ್ಟಿದೆ.

2. ಪ್ರಕೃತಿಯು ಪುರುಷನ ಭೋಗಮೋಕ್ಷಗಳಿಗಾಗಿ ಕೆಲಸಮಾಡುವದೆಂಬುದೂ ಸಂಘಾತವಾಗಿರುವದು ಪರಾರ್ಥವಾಗಿರುವದೆಂಬುದೂ ಸಾಂಖ್ಯರ ಪ್ರಕ್ರಿಯೆ. ಸಾಂ. ಕಾ. ೭, ೧೭ ನೋಡಿ. ಸಾಂಖ್ಯರ ಪ್ರಕ್ರಿಯೆಯನ್ನು ಇಷ್ಟರಮಟ್ಟಿಗೆ ಉಪಯೋಗಿಸಿಕೊಂಡಿದ್ದರೂ ಪ್ರಕೃತಿಯ ಸ್ವರೂಪವೂ ಜೀವನ ಕರ್ತೃತ್ವಭೋಕ್ತೃತ್ವಗಳೂ ಅವಿದ್ಯಕವೆಂಬುದು ವೇದಾಂತಕ್ಕೆ ಮೀಸಲಾಗಿರುವ ಅಭಿಪ್ರಾಯವು. ಇದು ಇನ್ನುಮುಂದೆ ಸ್ಪಷ್ಟವಾಗುವದು.

3. ಈ ಶ್ಲೋಕದ ಹಿಂದೆ "ಪ್ರಕೃತಿಂ ಪುರುಷಂ ಚೈವ" ಎಂಬ ಪ್ರಕ್ಷಿಪ್ತಶ್ಲೋಕವೊಂದು ಕೆಲವು ಪುಸ್ತಕಗಳಲ್ಲಿ ಕಂಡುಬರುತ್ತದೆ. ಅದಕ್ಕೆ ಆಚಾರ್ಯರು ಭಾಷ್ಯವನ್ನು ಬರೆದಿಲ್ಲ. "ಅರ್ಜುನ ಉವಾಚ ಪ್ರಕೃತಿಮ್ ಇತಿ" ಎಂಬ ಮು॥ ಪಾಠದ ಭಾಷ್ಯವನ್ನು ಯಾರೋ ಈಚೆಗೆ ಸೇರಿಸಿದ್ದಾರೆಂಬುದು ಮೇಲಿನ ಭಾಷ್ಯಾವತರಣಿಕೆಯಿಂದಲೇ ಸ್ಪಷ್ಟವಾಗುತ್ತದೆ.

ಅಸ್ಮಿನ್ ಕರ್ಮಫಲನಿಷ್ಪತ್ತೇಃ[1] ಕ್ಷೇತ್ರಮ್ ಇತಿ । ಇತಿಶಬ್ದಃ ಏವಂ[2] ಶಬ್ದ ಪದಾರ್ಥಕಃ । ಕ್ಷೇತ್ರಮ್ ಇತಿ ಏವಮ್ ಅಭಿಧೀಯತೇ ಕಥ್ಯತೇ । ಏತತ್ ಶರೀರಂ ಕ್ಷೇತ್ರಂ ಯಃ ವೇತ್ತಿ ವಿಜಾನಾತಿ ಆಪಾದತಲಮಸ್ತಕಂ ಜ್ಞಾನೇನ ವಿಷಯೀಕರೋತಿ । ಸ್ವಾಭಾವಿಕೇನ ಔಪದೇಶಿಕೇನ ವಾ ವೇದನೇನ ವಿಷಯೀಕರೋತಿ[3] ವಿಭಾಗಶಃ ತಂ ವೇದಿತಾರಂ ಪ್ರಾಹುಃ ಕಥಯನ್ತಿ ಕ್ಷೇತ್ರಜ್ಞಃ ಇತಿ । ಇತಿಶಬ್ದಃ ಏವಂಶಬ್ದಾರ್ಥಕ ಏವ ಪೂರ್ವವತ್ । ಕ್ಷೇತ್ರಜ್ಞಃ ಇತ್ಯೇವಮ್ ಆಹುಃ[4] । ಕೇ? ತದ್ವಿದಃ । ತೌ ಕ್ಷೇತ್ರಕ್ಷೇತ್ರಜ್ಞೌ ಯೇ ವಿದನ್ತಿ[5] ತೇ ತದ್ವಿದಃ ॥

(ಭಾಷ್ಯಾರ್ಥ)

'ಇದು' ಎಂಬ ಸರ್ವನಾಮದಿಂದ ಹೇಳಿದ್ದನ್ನು ಶರೀರವು ಎಂದು ವಿಶೇಷವಾಗಿ[6] ಹೇಳಿರುತ್ತಾನೆ. ಎಲೈ ಕೌಂತೇಯನೆ, ಪೆಟ್ಟಿನಿಂದ (ಕ್ಷತ) ಕಾಪಾಡುವದರಿಂದ[7] (ತ್ರಾಣ) ಹಾಳಾಗುವದರಿಂದ (ಕ್ಷಯ ಮೆಲ್ಲಮೆಲ್ಲನೆ) ಸವೆಯುತ್ತಿರುವದರಿಂದ (ಕ್ಷರಣ) ಅಥವಾ ಹೊಲದಲ್ಲಿ (ಪೈರಿನ ಫಲವು ಉಂಟಾಗುವಂತೆ) ಇದರಲ್ಲಿ ಕರ್ಮದ ಫಲವು ಉಂಟಾಗುತ್ತಿರುವದರಿಂದ (ಈ ಶರೀರವು) ಕ್ಷೇತ್ರವು ಎಂದು–ಇಲ್ಲಿ ಇತಿ ಎಂಬ ಶಬ್ದಕ್ಕೆ 'ಎಂದೀ ಪರಿಯಲ್ಲಿ' ಎಂದರ್ಥ–ಕ್ಷೇತ್ರವು ಎಂದೀ ಪರಿಯಾಗಿ ಕರೆಯಲ್ಪಡುತ್ತದೆ, ಹೇಳಲ್ಪಡುತ್ತದೆ.

ಈ ಶರೀರವೆಂಬ ಕ್ಷೇತ್ರವನ್ನು ಯಾವನು ಅರಿತುಕೊಳ್ಳುತ್ತಾನೋ, ವಿಶೇಷವಾಗಿ ತಿಳಿಯುತ್ತಾನೋ ಅಂಗಾಲಿನಿಂದ ನೆತ್ತಿಯವರೆಗೂ ಯಾವನು ಜ್ಞಾನದಿಂದ ವಿಷಯಮಾಡಿಕೊಳ್ಳುತ್ತಾನೋ, ಸ್ವಾಭಾವಿಕವಾದ ಅಥವಾ ಉಪದೇಶದಿಂದುಂಟಾಗುವ ಅನುಭವದಿಂದ ವಿಂಗಡಿಸಿ ವಿಷಯಮಾಡಿಕೊಳ್ಳುತ್ತಾನೋ ಆ ಅರಿಯುವಾತನನ್ನು ಕ್ಷೇತ್ರಜ್ಞನು ಎಂದು ಕರೆಯುವರು, ಹೇಳುವರು–ಇಲ್ಲಿಯೂ ಇತಿಶಬ್ದಕ್ಕೆ ಮುನ್ನಿನಂತೆ 'ಎಂದೀ ಪರಿಯಾಗಿ' ಎಂದೇ ಅರ್ಥ. ಕ್ಷೇತ್ರಜ್ಞನು ಎಂದೀ ಪರಿಯಾಗಿ

1. 'ನಿರ್ವೃತ್ತೇಃ' ಶಿ॥ ಗು॥ ವಾ॥
2. ಮೈ॥ ಪಾಠದಲ್ಲಿ 'ಏವಂ' ಬಿಟ್ಟುಹೋಗಿದೆ.
3. 'ಔಪದೇಶಿಕೇನ ವಾ ವೇತ್ತಿ ಜ್ಞಾನೇನ ವಿಷಯೀಕರೋತಿ' ಮು॥ ಮೈ॥
4. ಮು॥ ಮೈ॥ಗಳಲ್ಲಿಲ್ಲ.
5. 'ವಿಜಾನನ್ತಿ' ಎಂದು ಹೆಚ್ಚಾಗಿ ಮು॥ ಮೈ॥ ಗು॥
6. ಇದು ಎಂದು ಹೇಳಿದ್ದು ಸಾಮಾನ್ಯ, ಶರೀರ ಎಂದದ್ದು ವಿಶೇಷ.
7. ಕ್ಷೇತ್ರವೆಂಬ ಶಬ್ದದ ವ್ಯುತ್ಪತ್ತಿಯನ್ನು ತಿಳಿಸಿ ಶರೀರವನ್ನು ಕ್ಷೇತ್ರವೆಂದು ಕರೆಯುವದಕ್ಕೆ ನಿಮಿತ್ತವೇನೆಂಬುದನ್ನು ಸ್ಪಷ್ಟಪಡಿಸಿದೆ.

ಕರೆಯುವರು. ಯಾರು? ತದ್ವಿದರು, ಅವನ್ನು ಎಂದರೆ ಆ ಕ್ಷೇತ್ರಕ್ಷೇತ್ರಜ್ಞರನ್ನು ಯಾರು ಬಲ್ಲರೋ ಆ ತದ್ವಿದರು (ಹೀಗೆಂದು ಕರೆಯುವರು).

(ಭಾಷ್ಯ)

೨೧೩. ಏವಂ ಕ್ಷೇತ್ರಕ್ಷೇತ್ರಜ್ಞೌ ಉಕ್ತೌ । ಕಿಮ್ ಏತಾವನ್ಮಾತ್ರೇಣ ಜ್ಞಾನೇನ ಜ್ಞಾತವ್ಯೌ ಇತಿ? ನ ಇತ್ಯುಚ್ಯತೇ—

(ಭಾಷ್ಯಾರ್ಥ)

ಹೀಗೆ ಕ್ಷೇತ್ರಕ್ಷೇತ್ರಜ್ಞರನ್ನು ಹೇಳಿದೆಯಲ್ಲ, ಇಷ್ಟೇ ಮಾತ್ರದ ಜ್ಞಾನದಿಂದ (ಇವರನ್ನು) ತಿಳಿದುಕೊಳ್ಳತಕ್ಕದ್ದೇನು? ಎಂದರೆ ಹಾಗಲ್ಲ-ಎಂದು (ಭಗವಂತನು) ಹೇಳುತ್ತಾನೆ:—

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥**

೨. ಮತ್ತು ಎಲೈ ಭರತವಂಶೋತ್ಪನ್ನನೆ, ಸರ್ವಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನನ್ನು ನನ್ನನ್ನಾಗಿ ತಿಳಿ. ಕ್ಷೇತ್ರ, ಕ್ಷೇತ್ರಜ್ಞ-ಇವರ ಜ್ಞಾನ ವುಂಟಷ್ಟೆ, ಅದೇ ಜ್ಞಾನವೆಂದು ನನ್ನ ಮತವು.

(ಭಾಷ್ಯ)

೨೧೪. ಕ್ಷೇತ್ರಜ್ಞಂ ಯಥೋಕ್ತಲಕ್ಷಣಂ ಚ ಅಪಿ ಮಾಂ ಪರಮೇಶ್ವರಮ್ ಅಸಂಸಾರಿಣಂ ವಿದ್ಧಿ ಜಾನೀಹಿ[1] । ಸರ್ವಕ್ಷೇತ್ರೇಷು ಯಃ ಕ್ಷೇತ್ರಜ್ಞಃ ಬ್ರಹ್ಮಾದಿಸ್ತಂಬಪರ್ಯಂತಾನೇಕಕ್ಷೇತ್ರೋಪಾಧಿಪ್ರವಿಭಕ್ತಃ ತಂ ನಿರಸ್ತಸರ್ವೋಪಾಧಿಭೇದಂ ಸದಸದಾದಿಶಬ್ದಪ್ರತ್ಯಯಾಗೋಚರಂ ವಿದ್ಧಿ ಇತ್ಯಭಿಪ್ರಾಯಃ । ಹೇ ಭಾರತ । ಯಸ್ಮಾತ್ ಕ್ಷೇತ್ರಕ್ಷೇತ್ರಜ್ಞೇಶ್ವರಯಾಥಾತ್ಮ್ಯವ್ಯತಿರೇಕೇಣ ನ ಜ್ಞಾನಗೋಚರಮನ್ಯತ್ ಅವಶಿಷ್ಟಮ್ ಅಸ್ತಿ ತಸ್ಮಾತ್ ಕ್ಷೇತ್ರಕ್ಷೇತ್ರಜ್ಞಯೋಃ ಜ್ಞೇಯಭೂತಯೋಃ ಯತ್ ಜ್ಞಾನಂ ಕ್ಷೇತ್ರಕ್ಷೇತ್ರಜ್ಞೌ ಯೇನ ಜ್ಞಾನೇನ ವಿಷಯೀಕ್ರಿಯೇತೇ ತತ್ ಜ್ಞಾನಂ ಸಮ್ಯಗ್ಜ್ಞಾನಮ್ ಇತಿ ಮತಮ್ ಅಭಿಪ್ರಾಯಃ ಮಮ ಈಶ್ವರಸ್ಯ ವಿಷ್ಣೋಃ ॥

(ಭಾಷ್ಯಾರ್ಥ)

ಮತ್ತು ಎಲೈ ಭರತವಂಶೋತ್ಪನ್ನನೆ, ಮೇಲೆ ಹೇಳಿದಂಥ ಕ್ಷೇತ್ರಜ್ಞನನ್ನು ಕೂಡ ನನ್ನನ್ನಾಗಿ ಅಸಂಸಾರಿಯಾದ ಪರಮೇಶ್ವರನನ್ನಾಗಿ ತಿಳಿ, ಅರಿತುಕೊ. ಎಲ್ಲಾ

1. 'ವಿಜಾನೀಹಿ' ಮ॥

ಕ್ಷೇತ್ರಗಳಲ್ಲಿಯೂ ಯಾವ ಕ್ಷೇತ್ರಜ್ಞನು ಬ್ರಹ್ಮವನ್ನು ಮೊದಲುಗೊಂಡು ಸ್ತಂಬದವರೆಗಿನ ಅನೇಕ ಕ್ಷೇತ್ರಗಳೆಂಬ ಉಪಾಧಿಗಳಿಂದ (ಬೇರೆಬೇರೆಯಾಗಿ) ವಿಂಗಡವಾಗಿರುವನೋ[1] ಅವನನ್ನು, ಯಾವ ಉಪಾಧಿವಿಶೇಷವೂ ಇಲ್ಲದ ಸತ್ತು, ಅಸತ್ತು-ಮುಂತಾದ ಶಬ್ದಪ್ರತ್ಯಯಗಳಿಗೆ ಗೋಚರನಲ್ಲದವನೆಂದು ತಿಳಿ[2] ಎಂದಭಿಪ್ರಾಯ. ಕ್ಷೇತ್ರ, ಕ್ಷೇತ್ರಜ್ಞನಾಗಿ (ತೋರುವ) ಈಶ್ವರ-ಇವರ ತತ್ತ್ವವನ್ನು ಬಿಟ್ಟರೆ ಜ್ಞಾನಕ್ಕೆ ವಿಷಯವಾದದ್ದು ಮತ್ತೊಂದು ಉಳಿದಿರುವದಿಲ್ಲವಲ್ಲವೆ,[3] ಆದ್ದರಿಂದ ಜ್ಞೇಯರೂಪವಾಗಿರುವ ಕ್ಷೇತ್ರಕ್ಷೇತ್ರಜ್ಞರ ಯಾವ ಜ್ಞಾನ(ವುಂಟೋ), ಕ್ಷೇತ್ರಕ್ಷೇತ್ರಜ್ಞರು ಯಾವ ಜ್ಞಾನದಿಂದ ವಿಷಯೀಕರಿಸಲ್ಪಡುತ್ತಾರೋ ಅದು ಜ್ಞಾನವು, ಸರಿಯಾದ ಜ್ಞಾನವು ಎಂದು ನನ್ನ ಈಶ್ವರನಾದ ವಿಷ್ಣುವಿನ ಮತವು, ಅಭಿಪ್ರಾಯವು.

## ಆತ್ಮೈಕ್ಯವಿಷಯದಲ್ಲಿ ಆಕ್ಷೇಪಸಮಾಧಾನಗಳು

### ಸಂಸಾರಿತ್ವವು ಅವಿದ್ಯೆಯಿಂದ ಆರೋಪಿತವಾಗಿದೆ

(ಭಾಷ್ಯ)

೨೧೫. ನನು ಸರ್ವಕ್ಷೇತ್ರೇಷು ಏಕ ಏವ ಈಶ್ವರಃ ನಾನ್ಯಸ್ತದ್ವ್ಯತಿರಿಕ್ತೋ ಭೋಕ್ತಾ ವಿದ್ಯತೇ ಚೇತ್[4] ತತಃ ಈಶ್ವರಸ್ಯ ಸಂಸಾರಿತ್ವಂ ಪ್ರಾಪ್ತಮ್ । ಈಶ್ವರವ್ಯತಿರೇಕೇಣ ವಾ ಸಂಸಾರಿಣೋಽನ್ಯಸ್ಯಾಭಾವಾತ್ ಸಂಸಾರಾಭಾವಪ್ರಸಙ್ಗಃ[5]। ತಚ ಉಭಯಮ್ ಅನಿಷ್ಟಮ್, ಬನ್ಧಮೋಕ್ಷತದ್ಧೇತುಶಾಸ್ತ್ರಾನರ್ಥಕ್ಯಪ್ರಸಙ್ಗಾತ್ ಚ ಪ್ರತ್ಯಕ್ಷಾದಿಪ್ರಮಾಣವಿರೋಧಾಚ್ಚ । ಪ್ರತ್ಯಕ್ಷೇಣ ತಾವತ್ ಸುಖದುಃಖತದ್ಧೇತುಲಕ್ಷಣಃ ಸಂಸಾರಃ ಉಪಲಭ್ಯತೇ । ಜಗದ್ವೈಚಿತ್ರ್ಯೋಪಲಬ್ಧೇಶ್ಚ ಧರ್ಮಾಧರ್ಮನಿಮಿತ್ತಃ ಸಂಸಾರೋಽನುಮೀಯತೇ[6] । ಸರ್ವಮ್ ಏತತ್ ಅನುಪಪನ್ನಮ್ ಆತ್ಮೇಶ್ವರೈಕತ್ವೇ ॥

---

1. ವಿಂಗಡವಾಗಿರುವಂತೆ ತೋರುವನೋ.
2. ಹಾವನ್ನು ಹಗ್ಗವೆಂದು ತಿಳಿ ಎಂಬಂತೆ ಸಂಸಾರಿಗಳಾದ ಅನೇಕ ಜೀವರಾಗಿ ಕಾಣುವ ಕ್ಷೇತ್ರಜ್ಞನನ್ನು ಪರಮೇಶ್ವರನನ್ನಾಗಿ ತಿಳಿ ಎಂದಿದೆ_ಎಂದು ಭಾವ.
3. ಆತ್ಮ, ಅನಾತ್ಮ-ಎಂಬ ವಿಭಾಗದಲ್ಲಿ ಅಡಕವಾಗದ್ದು ಯಾವದೂ ಉಳಿಯುವದಿಲ್ಲ.
4. ಈ ಎರಡು ಮಾತುಗಳು ಮ॥ ಮೈ॥ಗಳಲ್ಲಿಲ್ಲ.
5. 'ಪ್ರಸಙ್ಗಶ್ಚ' ಮ॥
6. ಇದರ ಮುಂದೆ 'ಇತಿ' ಎಂದು ಹೆಚ್ಚಾಗಿ ಮ॥

(ಭಾಷ್ಯಾರ್ಥ)

(ಆಕ್ಷೇಪ) :—ಎಲ್ಲಾ ಕ್ಷೇತ್ರಗಳಲ್ಲಿಯೂ ಈಶ್ವರನೊಬ್ಬನೇ (ಆತ್ಮನು) ಅವನಿಗಿಂತ ಬೇರೆಯಾಗಿರುವ ಮತ್ತೊಬ್ಬ ಭೋಕ್ತನು ಇಲ್ಲ ಎಂದಾದರೆ ಆಗ ಈಶ್ವರನಿಗೇ ಸಂಸಾರಿತ್ವವೆಂದಾಗುತ್ತದೆ; ಅಥವಾ ಈಶ್ವರನಿಗಿಂತ ಬೇರೆಯಾಗಿ ಸಂಸಾರಿ(ಯಾವನೂ) ಇಲ್ಲದ್ದರಿಂದ ಸಂಸಾರವೇ ಇಲ್ಲವೆಂದಾಗುತ್ತದೆ. ಇವೆರಡೂ (ಯಾರಿಗೂ) ಇಷ್ಟವಲ್ಲ; ಏಕೆಂದರೆ (ಆಗ)[1] ಬಂಧ, ಮೋಕ್ಷ, ಇವುಗಳಿಗೆ ಕಾರಣ–(ಇವನ್ನು ತಿಳಿಸುವ) ಶಾಸ್ತ್ರವು ವ್ಯರ್ಥವಾಗುವದು. (ಈ ಮತವು) ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಿಗೂ ವಿರುದ್ಧವಾಗಿರುತ್ತದೆ. ಮೊದಲನೆಯದಾಗಿ ಸುಖದುಃಖಗಳು, ಅವುಗಳಿಗೆ ಕಾರಣ(ವಾಗಿರುವ ವಿಷಯೇಂದ್ರಿಯಸಂಯೋಗವೇದನಾದಿಗಳು)–ಈ ರೂಪದ ಸಂಸಾರವು ಪ್ರತ್ಯಕ್ಷವಾಗಿರುತ್ತದೆ; ಮತ್ತು (ಎರಡನೆಯದಾಗಿ) ಜಗತ್ತು ಬಗೆಬಗೆಯಾಗಿರುವದು ಕಂಡುಬರುವದರಿಂದ ಧರ್ಮಾಧರ್ಮದಿಂದಾಗುವ ಸಂಸಾರವನ್ನು ಅನುಮಾನದಿಂದಲೂ (ನಿಶ್ಚಯಿಸಬಹುದಾಗಿದೆ)[2]. ಆತ್ಮನೂ ಈಶ್ವರನೂ ಒಬ್ಬನೇ ಎಂದರೆ ಇದು ಯಾವದೂ ಹೊಂದುವದಿಲ್ಲ.

(ಭಾಷ್ಯ)

೨೧೬. ನ । ಜ್ಞಾನಾಜ್ಞಾನಯೋರನ್ಯತ್ವೇನ ಉಪಪತ್ತೇಃ । "ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ" (ಕ. ೧-೨-೪) । ತಥಾ ಚ[3] ತಯೋಃ ವಿದ್ಯಾವಿದ್ಯಯೋಃ[4] ಫಲಭೇದೋಽಪಿ ವಿರುದ್ಧೋ ನಿರ್ದಿಷ್ಟಃ, "ಶ್ರೇಯಶ್ಚ ಪ್ರೇಯಶ್ಚ" (ಕ. ೧-೨-೨) ಇತಿ । ವಿದ್ಯಾವಿಷಯಃ ಶ್ರೇಯಃ,

---

1. ಈಶ್ವರನು ಸಂಸಾರಿ ಎಂದರೆ ಅವನನ್ನು ಸಂಸಾರದಿಂದ ಬಿಡುಗಡೆಮಾಡುವವರು ಯಾರೂ ಇರುವದಿಲ್ಲ; ಸಂಸಾರವಿಲ್ಲವಾದರೆ ಸಂಸಾರಕ್ಕೆ ಕಾರಣವನ್ನೂ ಅದನ್ನು ಕಳೆದುಕೊಳ್ಳುವದಕ್ಕೆ ಉಪಾಯವನ್ನೂ ಹೇಳುವ ಶಾಸ್ತ್ರವು ವ್ಯರ್ಥವಾಗುವದು.

2. ಮನುಷ್ಯಾದಿಯಾಗಿ ಸ್ಥಾವರಾಂತಪ್ರಾಣಿಗಳಲ್ಲಿ ಸುಖದುಃಖಗಳು ತಾರತಮ್ಯದಿಂದ ಇರುವದು ಕಂಡುಬರುತ್ತದೆ; ಮನುಷ್ಯಾದಿಬ್ರಹ್ಮಾಂತವಾಗಿರುವವರಲ್ಲಿಯೂ ಈ ತಾರತಮ್ಯವುಂಟೆಂದು ಶಾಸ್ತ್ರಪ್ರಸಿದ್ಧವಾಗಿದೆ. ಆದ್ದರಿಂದ ಸುಖವು ಹೆಚ್ಚುತ್ತಾ ಹೋಗುವದಕ್ಕೆ ಧರ್ಮವೂ ದುಃಖವು ಹೆಚ್ಚುತ್ತಾ ಹೋಗಿರುವದಕ್ಕೆ ಅಧರ್ಮವೂ ಕಾರಣವೆಂದು ಅನುಮಾನಮಾಡಬಹುದು ಎಂದು ಭಾವ. ಧರ್ಮಾಧರ್ಮಗಳು ಪ್ರತ್ಯಕ್ಷವಲ್ಲ. ಸೂ. ಭಾ. ೧-೧-೪, ೧-೩-೩೦ ಇವನ್ನು ನೋಡಿ.

3. ಮ|| ಮೈ|| ಗಳಲ್ಲಿಲ್ಲ.

4. 'ವಿದ್ಯಾವಿದ್ಯಾವಿಷಯಯೋಃ' ಆ|| ಶಿ|| ಗು|| ವಾ||

ಪ್ರೇಯಸ್ತು ಅವಿದ್ಯಾಕಾರ್ಯಮ್ ಇತಿ । ತಥಾ ಚ ವ್ಯಾಸಃ–"ದ್ವಾವಿಮಾವಥ ಪನ್ಥಾನೌ" (ಮೋ. ಧ. ೨೪೦-೬) ಇತ್ಯಾದಿ । "ಇಮೌ ದ್ವಾವೇವ ಪನ್ಥಾನೌ" ಇತ್ಯಾದಿ ಚ (?)[1] । ಇಹ ಚ ದ್ವೇ ನಿಷ್ಠೇ ಉಕ್ತೇ । ಅವಿದ್ಯಾ ಚ ಸಹ[2] ಕಾರ್ಯೇಣ ವಿದ್ಯಯಾ[3] ಹಾತವ್ಯಾ ಇತಿ ಶ್ರುತಿಸ್ಮೃತಿನ್ಯಾಯೇಭ್ಯೋಽವಗಮ್ಯತೇ । ಶ್ರುತಯಸ್ತಾವತ್–"ಇಹ ಚೇದವೇದೀದಥ ಸತ್ಯಮಸ್ತಿ ನ ಚೇದಿಹಾವೇದೀನ್ಮಹತೀ ವಿನಷ್ಟಿಃ" (ಕೇ. ೨-೫), "ತಮೇವಂ ವಿದ್ವಾನಮೃತ ಇಹ ಭವತಿ, ನಾನ್ಯಃ ಪನ್ಥಾ ವಿದ್ಯತೇಽಯನಾಯ" (ತೈ. ಆ. ಪು. ಸೂ. ೩-೧೩), "ವಿದ್ವಾನ್ನ ಬಿಭೇತಿ ಕುತಶ್ಚನ" (ತೈ. ೨-೪) । ಅವಿದುಷಸ್ತು "ಅಥ ತಸ್ಯ ಭಯಂ ಭವತಿ" (ತೈ. ೨-೭), "ಅವಿದ್ಯಾಯಾಮನ್ತರೇ ವರ್ತಮಾನಾಃ (ಕ. ೧-೨-೫)[4], "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಂ ಸ ದೇವಾನಾಮ್" (ಬೃ. ೧-೪-೧೦), ಆತ್ಮವಿದ್ ಯಃ[5] "ಸ ಇದಂ ಸರ್ವಂ ಭವತಿ" (ಬೃ. ೧-೪-೧೦), "ಯದಾ ಚರ್ಮವತ್[6]" (ಶ್ವೇ. ೬-೨೦) ಇತ್ಯಾದ್ಯಾಃ ಸಹಸ್ರಶಃ । ಸ್ಮೃತಯಶ್ಚ–"ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ" (೫-೧೫), "ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ" (೫-೧೯), "ಸಮಂ ಪಶ್ಯನ್ ಹಿ ಸರ್ವತ್ರ" (೧೩-೨೮), ಇತ್ಯಾದ್ಯಾಃ । ನ್ಯಾಯತಶ್ಚ "ಸರ್ಪಾನ್ ಕುಶಾಗ್ರಾಣಿ ತಥೋದಪಾನಂ ಜ್ಞಾತ್ವಾ ಮನುಷ್ಯಾಃ ಪರಿವರ್ಜಯನ್ತಿ । ಅಜ್ಞಾನತಸ್ತತ್ರ ಪತನ್ತಿ ಕೇಚಿಜ್ಜ್ಞಾನೇ ಫಲಂ ಪಶ್ಯ ಯಥಾ ವಿಶಿಷ್ಟಮ್" (ಮೋ. ಧ. ೨೦೧-೧೬) । ತಥಾ ಚ ದೇಹಾದಿಷು ಆತ್ಮಬುದ್ಧಿಃ ಅವಿದ್ವಾನ್ ರಾಗದ್ವೇಷಾದಿಪ್ರಯುಕ್ತಃ, ಧರ್ಮಾಧರ್ಮಾನುಷ್ಠಾನಕೃತ್ ಜಾಯತೇ ಮ್ರಿಯತೇ ಚ ಇತ್ಯವಗಮ್ಯತೇ । ದೇಹಾದಿವ್ಯತಿರಿಕ್ತಾತ್ಮದರ್ಶಿನಃ

---

1. ಇದು ಎಲ್ಲಿಯ ವಾಕ್ಯವೆಂಬುದು ತಿಳಿಯಲಿಲ್ಲ.

2. 'ಕಾರ್ಯೇಣ ಸಹ' ಮು|| ಮೈ||

3. ಮು|| ಮೈ|| ಗಳಲ್ಲಿಲ್ಲ.

4. ಮು|| ಪಾಠದಲ್ಲಿ 'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂಬುದು ಇಲ್ಲ ; ಅದು ಇಲ್ಲಿಗೆ ಬೇಕೂ ಇಲ್ಲ.

5. 'ಆತ್ಮವಿದ್ಯಸ್ಯ' ನಿ||, 'ಅನಾತ್ಮವಿದ್ಯಸ್ಯ' ಮು|| ಎಂಬ ಎರಡು ಪಾಠಗಳಿಗಿಂತಲೂ ಇದು ಮೇಲು.

6. 'ಆಕಾಶಮ್' ಎಂದು ಹೆಚ್ಚಾಗಿ ಮು||

ರಾಗದ್ವೇಷಾದಿಪ್ರಹಾಣಾತ್[1] ತದಪೇಕ್ಷಧರ್ಮಾಧರ್ಮಪ್ರವೃತ್ತ್ಯುಪಶಮಾತ್ ಮುಚ್ಯನ್ತೇ ಇತಿ ನ ಕೇನಚಿತ್ ಪ್ರತ್ಯಾಖ್ಯಾತುಂ ಶಕ್ಯಂ ನ್ಯಾಯತಃ । ತತ್ರ ಏವಂ ಸತಿ ಕ್ಷೇತ್ರಜ್ಞಸ್ಯ ಈಶ್ವರಸ್ಯೈವ ಸತಃ ಅವಿದ್ಯಾಕೃತೋಪಾಧಿಭೇದತಃ ಸಂಸಾರಿತ್ವಮಿವ[2] ಭವತಿ ಯಥಾ ದೇಹಾದ್ಯಾತ್ಮತ್ವಮಾತ್ಮನಃ । ಸರ್ವಜನ್ತೂನಾಂ ಹಿ ಪ್ರಸಿದ್ಧಃ ದೇಹಾದಿಷು ಅನಾತ್ಮಸು ಆತ್ಮಭಾವಃ ನಿಶ್ಚಿತಃ ಅವಿದ್ಯಾಕೃತಃ । ಯಥಾ ಸ್ಥಾಣೌ ಪುರುಷನಿಶ್ಚಯಃ । ನ ಚ ಏತಾವತಾ ಪುರುಷಧರ್ಮಃ ಸ್ಥಾಣೋರ್ಭವತಿ ಸ್ಥಾಣುಧರ್ಮೋ ವಾ ಪುರುಷಸ್ಯ । ತಥಾ ನ ಚೈತನ್ಯಧರ್ಮೋ ದೇಹಸ್ಯ ದೇಹಧರ್ಮೋ ವಾ ಚೈತನ್ಯಸ್ಯ[3] । ಸುಖದುಃಖಮೋಹಾತ್ಮಕತ್ವಾದಿಃ ಆತ್ಮನೋ ನ ಯುಕ್ತಃ ಅವಿದ್ಯಾಕೃತತ್ವಾವಿಶೇಷಾತ್ ಜರಾಮೃತ್ಯುವತ್ ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ ಜ್ಞಾನಾಜ್ಞಾನಗಳು ಬೇರೆಬೇರೆಯಾಗಿರುವದರಿಂದ (ಇದೆಲ್ಲವೂ) ಹೊಂದುತ್ತದೆ. "ಅವಿದ್ಯೆಯೆಂದು (ಯಾವದು ಪ್ರಸಿದ್ಧವಾಗಿರುವದೋ) ವಿದ್ಯೆ ಎಂದು ಯಾವದು ಪ್ರಸಿದ್ಧವಾಗಿರುವದೋ ಇವೆರಡೂ (ಒಂದಕ್ಕೊಂದು) ದೂರವಾಗಿ, ವಿರುದ್ಧವಾಗಿರುವವು, ಬೇರೆಬೇರೆಯು ಕಡೆಗೆ ಹೋಗುವವಾಗಿರುವವು." (ಕ. ೧-೨-೪), ಆದ್ದರಿಂದಲೇ ಆವಿದ್ಯೆ, ಅವಿದ್ಯೆ-ಇವುಗಳಿಗೆ "ಶ್ರೇಯಶ್ಚ, ಪ್ರೇಯಶ್ಚ" (ಕ. ೧-೨-೨) ಎಂದು, ಶ್ರೇಯಸ್ಸು ವಿದ್ಯೆಗೆ ವಿಷಯವಾದದ್ದು, ಪ್ರೇಯಸ್ಸುಮಾತ್ರ ಅವಿದ್ಯೆಯು ಕಾರ್ಯವು ಎಂದು ಬೇರೆಬೇರೆಯು (ಒಂದಕ್ಕೊಂದು) ವಿರುದ್ಧವಾದ ಫಲವನ್ನೇ (ಶಾಸ್ತ್ರದಲ್ಲಿ) ತಿಳಿಸಿಕೊಟ್ಟಿರುತ್ತದೆ. ಆದ್ದರಿಂದಲೇ **ವ್ಯಾಸರು** "ಇನ್ನು ಈ ಎರಡು ಹಾದಿಗಳುಂಟು" "ಇವೆರಡೇ ಹಾದಿಗಳು" (?) ಎಂದು ಮುಂತಾಗಿ (ಹೇಳಿರುತ್ತಾರೆ). ಇಲ್ಲಿಯೂ ಎರಡು ನಿಷ್ಠೆಗಳನ್ನು[4] ಹೇಳಿರುತ್ತದೆ, ಮತ್ತು ಅವಿದ್ಯೆಯನ್ನು ಅದರ ಕಾರ್ಯದೊಡನೆ ವಿದ್ಯೆಯಿಂದ ನಾಶಪಡಿಸಿಕೊಳ್ಳಬೇಕೆಂಬುದು ಶ್ರುತಿಸ್ಮೃತಿನ್ಯಾಯಗಳಿಂದ ಗೊತ್ತಾಗುತ್ತದೆ. (ಹೇಗೆಂದರೆ) ಮೊದಲನೆಯದಾಗಿ **ಶ್ರುತಿ**ಗಳು

---

1. "ರಾಗದ್ವೇಷಾದಿಪ್ರಹಾಣಾಪೇಕ್ಷಧರ್ಮಾಧರ್ಮ " ಎಂದು ಸಮಸ್ತಪದವಾಗಿ ಆ॥ ನಿ॥ ಗು॥ ವಾ॥ ; "ಪೇಕ್ಷಾದ್ಧರ್ಮಾ...." ಮ॥ .

2. "ಅವಿದ್ಯಾಕೃತಂ ಸಂಸಾರಿತ್ವಂ" ಮ॥

3. "ಚೈತನ್ಯಂ ದೇಹಸ್ಯ...." ನಿ॥ ಮೈ॥ ; "ಚೈತನ್ಯಂ ಧರ್ಮೋ ದೇಹಸ್ಯ...." ಮ॥, "ಚೈತನ್ಯಧರ್ಮೋ ದೇಹಸ್ಯ" ಗು॥

4. ಜ್ಞಾನಯೋಗ, ಕರ್ಮಯೋಗ_ಎಂದು ಜ್ಞಾನಾಜ್ಞಾನಗಳ ಅಪೇಕ್ಷೆಯಿಂದ ಎರಡು ನಿಷ್ಠೆಗಳನ್ನು.

(ಹೀಗಿವೆ): "ಇಲ್ಲಿಯೇ ಅರಿತುಕೊಂಡನಾದರೆ, ಆಗ ಸತ್ಯವಾಗಿ ಉಂಟು; ಇಲ್ಲಿ ಅರಿಯಲಿಲ್ಲವಾದರೆ ದೊಡ್ಡ ನಷ್ಟವು" (ಕೇ. ೨-೫), "ಆತನನ್ನು ಹೀಗೆಂದು ಅರಿತುಕೊಂಡವನು ಇಲ್ಲಿಯೇ ಅಮೃತನಾಗುವನು; (ಆತನನ್ನು) ಪಡೆಯುವದಕ್ಕೆ ಮತ್ತೊಂದು ಹಾದಿಯಿಲ್ಲ" (ಪು. ಸೂ.), "(ಬ್ರಹ್ಮದ ಆನಂದವನ್ನು) ಅರಿತುಕೊಂಡವನು ಏತಕ್ಕೂ ಹೆದರನು" (ತೈ. ೨-೪). ಅಜ್ಞಾನಿಯು (ವಿಷಯದಲ್ಲಿ)ಯೋ ಎಂದರೆ "ಆಗ ಅವನಿಗೆ ಹೆದರಿಕೆಯುಂಟಾಗುವದು" (ತೈ. ೨-೭), "ಅವಿದ್ಯೆಯ ನಡುವೆ ಇರುವವರಾಗಿ...." (ಕ. ೧-೨-೫, ಮುಂ. ೧-೨-೯), "ಈ (ದೇವತೆ) ಬೇರೆ, ನಾನು ಬೇರೆಯಾಗಿರುವೆನು ಎಂದು (ಯಾವನು ತಿಳಿಯುವನೋ) ಅವನು ಅರಿಯನು, ಅವನು ದೇವತೆಗಳಿಗೆ ಪಶುವಿನಂತೆ ಇರುವನು" (ಬೃ. ೧-೪-೧೦), ಯಾವನು ಆತ್ಮನನ್ನು ಅರಿತುಕೊಂಡಿರುವನೋ "ಅವನು ಇದೆಲ್ಲವೂ ಆಗುವನು" (ಬೃ. ೧-೪-೧೦), "ಯಾವಾಗ ತೊಗಲಿನಂತೆ (ಆಕಾಶವನ್ನು ಸುರುಳಿಯಾಗಿ ಸುತ್ತಬಲ್ಲವರಾಗುವರೋ ಆಗ ದೇವನನ್ನು ಅರಿಯದೆ ದುಃಖದ ಕೊನೆಯಾಗುವದು. (ಶ್ವೇ. ೬-೨೦)–ಇವೇ ಮುಂತಾದ ಸಾವಿರಾರು (ಶ್ರುತಿಗಳಿವೆ)[1], ಜ್ಞಾನವು ಅಜ್ಞಾನದಿಂದ ಮುಚ್ಚಲ್ಪಟ್ಟಿರುತ್ತದೆ; ಆದ್ದರಿಂದ ಜೀವರು ಮೋಹಗೊಳ್ಳುವರು" (೫-೧೫), "ಯಾರ ಮನಸ್ಸು ಸಾಮ್ಯದಲ್ಲಿ ನಿಂತಿರುವದೋ ಅವರಿಂದ ಜನ್ಮವು ಇಲ್ಲಿಯೇ ಜಿತವಾಗಿರುತ್ತದೆ" (ಗೀ. ೫-೧೯), "ಎಲ್ಲೆಲ್ಲಿಯೂ ಸಮವಾಗಿರುವ (ಈಶ್ವರನನ್ನು) ಕಾಣುವಾತನು (........ಪರಗತಿಯನ್ನು ಹೊಂದುವನು ೧೩-೨೮)[2]"–ಮುಂತಾದ ಸ್ಮೃತಿಗಳೂ (ಉಂಟು). ನ್ಯಾಯದಿಂದಲೂ (ಇದು ಸಿದ್ಧವಾಗುತ್ತದೆ). "ಹಾವುಗಳನ್ನೂ ದರ್ಭೆಯ ತುದಿಗಳನ್ನೂ ನೀರಿನ ಕುಂಟೆಯನ್ನೂ ಅರಿತುಕೊಂಡಜನರು (ಅವನ್ನು) ಬಿಟ್ಟು (ಅತ್ತ ಹೋಗು)ವರು; ಕೆಲವರು ಅಜ್ಞಾನದಿಂದ ಅವುಗಳಲ್ಲಿ ಬೀಳುವರು. ಜ್ಞಾನದಲ್ಲಿರುವ ಅಸಾಧಾರಣ ಫಲವಿರುವದೆಂಬುದು ಹೇಗೆಂಬುದನ್ನು (ಇದರಿಂದ) ಕಂಡುಕೊ"[3]. (ಮೋ. ಧ. ೨೦೧-೧೬). ಆದ್ದರಿಂದಲೇ ದೇಹವೇ ಮುಂತಾದವು

---

1. ಜ್ಞಾನದಿಂದ ಅಜ್ಞಾನವನ್ನು ಕಳೆದುಕೊಳ್ಳುವದರಿಂದಲೇ ಪರಮಪುರುಷಾರ್ಥವು ದೊರಕುವದೆಂದು ಈ ಶ್ರುತಿಗಳಲ್ಲಿದೆ. ಆದ್ದರಿಂದ ಪೂರ್ವಪಕ್ಷಿಯು ಹೇಳಿದ ಸಂಸಾರಿತ್ವವೇ ಮುಂತಾದವು ಅವಿದ್ಯಾದೃಷ್ಟಿಗೆ ತೋರುವವೆಂದು ಕಲ್ಪಿಸಬೇಕು ಎಂದು ಭಾವ.

2. ಈಶ್ವರನೊಬ್ಬನೇ ಎಲ್ಲರಿಗೂ ನಿಜವಾದ ಆತ್ಮನೆಂದು ಈ ವಚನಗಳಲ್ಲಿದೆ.

3. ಜ್ಞಾನದಿಂದ ಅಜ್ಞಾನವೂ ಅದರ ಕಾರ್ಯವೂ ನಾಶವಾಗುವದೆಂಬುದಕ್ಕೆ ಯುಕ್ತಿಯಿದು.

ಗಳಲ್ಲಿ (ಅವು) ತಾನೆಂಬ ಬುದ್ಧಿಯುಳ್ಳ ಅವಿವೇಕಿಯು ರಾಗದ್ವೇಷಾದಿಗಳಿಂದ[1] ಪ್ರೇರಿತನಾಗಿ ಧರ್ಮಾಧರ್ಮಗಳನ್ನು ಮಾಡಿ ಹುಟ್ಟುತ್ತಲೂ ಸಾಯುತ್ತಲೂ ಇರುವನೆಂದು ಗೊತ್ತಾಗಿರುತ್ತದೆ. ದೇಹಾದಿಗಳಿಂದ ಆತ್ಮನು ಬೇರೆಯೆಂದು ಕಂಡುಕೊಂಡವರು ರಾಗದ್ವೇಷಾದಿಗಳನ್ನು ಬಿಟ್ಟುಬಿಡುವದರಿಂದ ಅವುಗಳನ್ನವಲಂಬಿಸಿರುವ ಧರ್ಮಾಧರ್ಮಗಳಲ್ಲಿ ತೊಡಗುವದು ನಿಂತುಹೋಗಲಾಗಿ ಮುಕ್ತರಾಗುತ್ತಾರೆ ಎಂಬುದನ್ನು ಯುಕ್ತಿಯಿಂದ ಅಲ್ಲಗಳೆಯುವದು ಯಾರೊಬ್ಬನಿಂದಲೂ ಆಗುವಹಾಗಿಲ್ಲ.

ಇದು ಹೀಗಿರುವಲ್ಲಿ ಈಶ್ವರನೇ ಆಗಿರುವ ಕ್ಷೇತ್ರಜ್ಞನಿಗೆ ಅವಿದ್ಯಾಕೃತವಾದ ಉಪಾಧಿವಿಶೇಷದಿಂದ ಸಂಸಾರಿತ್ವ(ವಿರು)ವಂತೆ ಆಗಿರುತ್ತದೆ. ದೇಹವೇ ಮುಂತಾದವೇ ತಾನೆಂದು ಆತ್ಮನನ್ನು ತಿಳಿಯುವಂತೆಯೇ ಇದು[2]. ಹೇಗೆಂದರೆ ಎಲ್ಲಾ ಜೀವರುಗಳಿಗೂ ದೇಹವೇ ಮುಂತಾದ ಅನಾತ್ಮಗಳಲ್ಲಿ ತಾನೆಂಬ ಭಾವವು, ಮೋಟುಮರದಲ್ಲಿ (ಇದು) ಪುರುಷನೆಂಬ ನಿಶ್ಚಯವು ಹೇಗೆ (ಆಗುವದೋ ಹಾಗೆಯೇ) ಅವಿದ್ಯೆಯಿಂದ ನಿಶ್ಚಿತ(ರೂಪದಿಂದ ಆಗುತ್ತದೆ) ಎಂಬುದು ಪ್ರಸಿದ್ಧವಾಗಿರುತ್ತದೆ. (ದೃಷ್ಟಾಂತದಲ್ಲಿ) ಇಷ್ಟುಮಾತ್ರದಿಂದ ಮನುಷ್ಯನ ಧರ್ಮವು ಮೋಟುಮರದ್ದಾಗುವುದಿಲ್ಲ, ಮೋಟುಮರದ ಧರ್ಮವು ಮನುಷ್ಯನದೆಂದೂ ಆಗುವದಿಲ್ಲ. ಇದರಂತೆಯೇ ಚೈತನ್ಯದ ಧರ್ಮವು ದೇಹದ್ದಲ್ಲ, ದೇಹಧರ್ಮವಾದರೂ ಚೈತನ್ಯದ್ದು (ಆಗುವಂತಿಲ್ಲ). ಆದ್ದರಿಂದ ಸುಖ, ದುಃಖ, ಮೌಢ್ಯ–ಮುಂತಾದುವುಗಳು ಮುಪ್ಪುಸಾವುಗಳಂತೆಯೇ ಅವಿದ್ಯೆಯಿಂದ ಕಲ್ಪಿತವಾಗಿರುವದರಿಂದ ಆತ್ಮನ (ಧರ್ಮಗಳು ಎಂಬುದು) ಯುಕ್ತವಾಗುವದಿಲ್ಲ.[3]

---

1, ಅಜ್ಞಾನ, ರಾಗ, ದ್ವೇಷ, ಪ್ರವೃತ್ತಿ, ಜನನ ಮರಣ ಇವು ಒಂದರಿಂದೊಂದಾದಗುವವೆಂದು ವೇದಾಂತಿಗಳಲ್ಲದವರೂ ಒಪ್ಪಿರುತ್ತಾರೆ; ಉದಾಹರಣೆಗೆ ನ್ಯಾ. ಸೂ. ೧-೧-೨ನ್ನು ನೋಡಿ.

2. ಆತ್ಮನು ದೇಹಾದಿಗಳಿಗಿಂತ ಭಿನ್ನನಾದರೂ ದುಷ್ಕೃತಿವಾಸನೆಯಿಂದ ದೇಹಾದಿಗಳ ಸ್ವರೂಪವೇ ತಾನೆಂದು ಭಾವಿಸಿಕೊಳ್ಳುತ್ತಾನ ಎಂದು ತಾರ್ಕಿಕರೂ ಒಪ್ಪುತ್ತಾರೆ. ಕರ್ತೃತ್ವ ಭೋಕ್ತೃತ್ವವೂ ಇದರಂತೆಯೇ ಆವಿದ್ಯಕವೆಂದು ತಿಳಿಯುವದರಲ್ಲಿ ದೋಷವೇನೂ ಇಲ್ಲ ಎಂದು ಭಾವ. ಛಾಂ. ಭಾ. ೬-೧೬-೩ ನೋಡಿ

3. ಮುಪ್ಪುಸಾವುಗಳು ದೇಹದಕರ್ಮಗಳಾದ್ದರಿಂದ ಅವು ನಿಜವಾಗಿ ಆತ್ಮನಿಗೆ ಆಗುವದಿಲ್ಲ; ಇದರಂತೆಯೇ ಸುಖದುಃಖಾದಿಗಳು ಜ್ಞೇಯವಾದ ಅಂತಃಕರಣದ ಧರ್ಮಗಳಾದ್ದರಿಂದ ಆತ್ಮನಿಗೆ ಸೇರಿದವಲ್ಲ ಎಂದರ್ಥ. ಇದನ್ನು ಮುಂದೆ ಸ್ಪಷ್ಟಪಡಿಸಲಾಗುವದು.

# ಜ್ಞೇಯಜ್ಞಾತೃಗಳಿಗೂ ಪರಸ್ಪರಾಧ್ಯಾಸವಾಗಬಹುದು

(ಭಾಷ್ಯ)

೨೧೭. ನ ಅತುಲ್ಯತ್ವಾತ್ ಇತಿ ಚೇತ್ । ಸ್ಥಾಣುಪುರುಷೌ ಜ್ಞೇಯಾವೇವ ಸನ್ತೌ ಜ್ಞಾತ್ರಾ[1] ಅನ್ಯೋನ್ಯಸ್ಮಿನ್ ಅಧ್ಯಸ್ತೌ ಅವಿದ್ಯಯಾ ದೇಹಾತ್ಮನೋಸ್ತು ಜ್ಞೇಯಜ್ಞಾತ್ರೋರೇವ ಇತರೇತರಾಧ್ಯಾಸಃ ಇತಿ ನ ಸಮೋ ದೃಷ್ಟಾನ್ತಃ। ಅತಃ[2] ದೇಹಧರ್ಮಃ ಜ್ಞೇಯೋಽಪಿ ಜ್ಞಾತುಃ ಆತ್ಮನಃ ಭವತಿ ಇತಿ ಚೇತ್ । ನ। ಅಚೈತನ್ಯಾದಿಪ್ರಸಙ್ಗಾತ್ । ಯದಿ ಹಿ ಜ್ಞೇಯಸ್ಯ ದೇಹಾದೇಃ ಕ್ಷೇತ್ರಸ್ಯ ಧರ್ಮಾಃ ಸುಖದುಃಖಮೋಹೇಚ್ಛಾದಯಃ[3] ಜ್ಞಾತುಃ ಭವನ್ತಿ, ತರ್ಹಿ[4] ಜ್ಞೇಯಸ್ಯ ಕ್ಷೇತ್ರಸ್ಯ ಧರ್ಮಾಃ ಕೇಚನ[5] ಆತ್ಮನಃ ಭವನ್ತಿ ಅವಿದ್ಯಾಧ್ಯಾರೋಪಿತಾಃ ಜರಾಮರಣಾದಯಸ್ತು ನ ಭವನ್ತಿ ಇತಿ ವಿಶೇಷಹೇತುಃ ವಕ್ತವ್ಯಃ[6] । ನ ಭವನ್ತಿ ಇತಿ ಅಸ್ತಿ ಅನುಮಾನಮ್ । ಅವಿದ್ಯಾಧ್ಯಾರೋಪಿತತ್ವಾತ್, ಜರಾಮರಣಾದಿವತ್[7] ಇತಿ । ಹೇಯತ್ವಾತ್ ಉಪಾದೇಯತ್ವಾಚ್ಚ ಇತ್ಯಾದಿ । ತತ್ರ ಏವಂ ಸತಿ ಕರ್ತೃತ್ವಭೋಕ್ತೃತ್ವಲಕ್ಷಣಃ ಸಂಸಾರಃ ಜ್ಞೇಯಸ್ಥಃ ಜ್ಞಾತರಿ ಅವಿದ್ಯಯಾ ಅಧ್ಯಾರೋಪಿತಃ[8] ಇತಿ ನ ತೇನ ಜ್ಞಾತುಃ ಕಿಂಚಿತ್ ದುಷ್ಯತಿ[9] । ಯಥಾ ಬಾಲೈಃ ಅಧ್ಯಾರೋಪಿತೇನ ಆಕಾಶಸ್ಯ ತಲಮಲವತ್ತ್ವಾದಿನಾ[10] । ಏವಂ ಚ ಸತಿ ಸರ್ವಕ್ಷೇತ್ರೇಷ್ವಪಿ ಸತೋ ಭಗವತಃ ಕ್ಷೇತ್ರಜ್ಞಸ್ಯ ಈಶ್ವರಸ್ಯ ಸಂಸಾರಿತ್ವಗನ್ಧಮಾತ್ರಮಪಿ ನ ಆಶಙ್ಕ್ಯಮ್[11] । ನ ಹಿ ಕ್ವಚಿದಪಿ ಲೋಕೇ ಅವಿದ್ಯಾಧ್ಯಸ್ತೇನ ಧರ್ಮೇಣ ಕಸ್ಯಚಿತ್ ಉಪಕಾರಃ ಅಪಕಾರೋ ವಾ ದೃಷ್ಟಃ । ಯತ್ತು ಉಕ್ತಂ ನ ಸಮೋ ದೃಷ್ಟಾನ್ತಃ ಇತಿ । ತತ್ ಅಸತ್ ।

---

1. 'ಹಿ' ಎಂದು ಹೆಚ್ಚಾಗಿ ಮು॥ ಮೈ॥
2. ಶಿ॥ ಪಾಠದಲ್ಲಿಲ್ಲ.
3. 'ಮೋಹೇಚ್ಛಾದ್ವೇಷಾದಯಃ' ಮು॥ ಮೈ॥
4. 'ತದಾ' ಮೈ॥
5. 'ಕೇಚಿತ್' ಮು॥ ಮೈ॥
6. 'ವಾಚ್ಯಃ' ಶಿ॥
7. 'ಜರಾದಿವತ್' ಶಿ॥ ಆ॥
8. 'ಅವಿದ್ಯಾಧ್ಯಾರೋಪಿತಃ' ಮು॥
9. "ನಾನೇನ ಕಿಂಚಿತ್ ಉದೇಷ್ಯತಿ" ಮು॥ ; "ನಾನೇನ.... ದುಷ್ಯತಿ" ಮೈ॥
10. 'ತಲಮಲಿನತ್ವಾದಿನಾ' ಮು॥ ಮೈ॥
11. 'ನ ಶಕ್ಯಂ ವಕ್ತುಮ್' ಮು॥

ಕಥಮ್ ? ಅವಿದ್ಯಾಧ್ಯಾಸಮಾತ್ರಂ ಹಿ ದೃಷ್ಟಾನ್ತದಾರ್ಷ್ಟಾನ್ತಿಕಯೋಃ ಸಾಧರ್ಮ್ಯಂ ವಿವಕ್ಷಿತಮ್ । ತತ್ ನ ವ್ಯಭಿಚರತಿ । ಯತ್ತು ಜ್ಞಾತರಿ ವ್ಯಭಿಚರತಿ ಇತಿ ಮನ್ಯಸೇ, ತಸ್ಯಾಪಿ ಅನೈಕಾನ್ತಿಕತ್ವಂ ದರ್ಶಿತಂ ಜರಾದಿಭಿಃ ॥

(ಆಕ್ಷೇಪ): — ಇದು ಸರಿಯಲ್ಲ. ಏಕೆಂದರೆ (ಇವೆರಡೂ ಒಂದಕ್ಕೊಂದು) ಸಮಾನವಾಗಿರುವದಿಲ್ಲ. (ಹೇಗೆಂದರೆ) ಮೋಟುಮರ, ಮನುಷ್ಯ-(ಇವೆರಡೂ) ಜ್ಞೇಯಗಳೇ ಆಗಿದ್ದು[1] ಜ್ಞಾತೃವಿನಿಂದ ಒಂದರಲ್ಲಿ ಒಂದು ಅವಿದ್ಯೆಯಿಂದ ಆರೋಪ ಮಾಡಲ್ಪಟ್ಟಿರುತ್ತೇವೆ[2]. ಆದರೆ ದೇಹಾತ್ಮರೋ ಎಂದರೆ (ಒಂದು) ಜ್ಞೇಯ, (ಇನ್ನೊಂದು) ಜ್ಞಾತೃ-(ಹೀಗಿದ್ದು) ಒಂದರಲ್ಲಿ ಒಂದು ಅಧ್ಯಾಸ (ವಾಗಿರುತ್ತವೆ), ಆದ್ದರಿಂದ (ನೀವುಕೊಟ್ಟ) ದೃಷ್ಟಾಂತವು ಸಮವಾಗಿರಲಿಲ್ಲ. ಆದ್ದರಿಂದ ದೇಹಧರ್ಮವು ಜ್ಞೇಯವಾದರೂ ಜ್ಞಾತೃವಾದ ಆತ್ಮನಿಗೆ (ನಿಜವಾಗಿ) ಆಗಬಹುದಾಗಿದೆ[3].

(ಪರಿಹಾರ): — ಹಾಗಲ್ಲ ಏಕೆಂದರೆ (ಆಗ ಆತ್ಮನಿಗೆ) ಅಚೇತನತ್ವವೇ ಮುಂತಾದವುಗಳು ಉಂಟಾಗಬೇಕಾದೀತು. ಜ್ಞೇಯವಾದ ದೇಹವೇ ಮುಂತಾದ ಕ್ಷೇತ್ರದ ಧರ್ಮಗಳಾದ ಸುಖ, ದುಃಖ, ಮೋಹ, ಇಚ್ಛೆ-ಮುಂತಾದವುಗಳು[4] ಜ್ಞಾತೃ(ವಾದ ಆತ್ಮನಿ)ಗೆ ಆಗುವದಾದರೆ ಆಗ ಜ್ಞೇಯವಾದ ಕ್ಷೇತ್ರದ ಧರ್ಮಗಳು ಕೆಲವು ಅವಿದ್ಯೆಯಿಂದ ಆರೋಪಿತವಾದ ಆತ್ಮನಿಗೆ (ನಿಜವಾಗಿ) ಆಗುವವು, ಮುಪ್ಪು, ಸಾವು-ಮುಂತಾದವುಗಳು ಮಾತ್ರ ಆಗುವದಿಲ್ಲ-ಎಂಬುದಕ್ಕೆ ವಿಶೇಷವಾದ ಹೇತುವನ್ನು

---

1. ಜ್ಞೇಯಗಳಲ್ಲಿ ಒಂದನ್ನು ಒಂದರಲ್ಲಿ ಅಧ್ಯಾರೋಪ ಮಾಡಿದರೆ ಒಂದರ ಧರ್ಮವು ಇನ್ನೊಂದಕ್ಕೆ ನಿಜವಾಗಿ ಆಗದೆ ಇರಬಹುದು ; ಆದರೆ ದೇಹಾದಿಗಳ ಮೂಲಕ ಜ್ಞಾತೃವಾದ ಆತ್ಮನಿಗೆ ಸುಖದುಃಖಾದಿಗಳು ನಿಜವಾಗಿ ಏಕೆ ಆಗಬಾರದು-? ನನ್ನ ದೇಹಕ್ಕೆ ಆಗುವ ನೋವಿನಿಂದ ನನಗೆ ದುಃಖವುಂಟಾಗುವದು ಯುಕ್ತವಲ್ಲವೆ? ಎಂದು ಆಕ್ಷೇಪಕನ ಭಾವ.

2. ಅವಿದ್ಯೆ, ಅಜ್ಞಾನ, ತಪ್ಪುತಿಳಿವಳಿಕೆ–ಎಲ್ಲವೂ ಒಂದೇ ಅರ್ಥದ ಮಾತುಗಳು ; ಅಧ್ಯಾರೋಪ, ಅಧ್ಯಾಸ–ಎರಡೂ ಒಂದೇ ಅರ್ಥದ ಮಾತುಗಳು.

3. ಇಲ್ಲಿ ದೇಹಧರ್ಮವು ಎಂದರೆ ಸುಖದುಃಖಾದಿಗಳನ್ನು ತೆಗೆದುಕೊಳ್ಳಬೇಕು. ಆತ್ಮನಿಗೆ ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರವು ನಿಜವಾಗಿದೆಯೆ,, ಇಲ್ಲವೆ?-ಎಂಬುದೇ ಪ್ರಕೃತಚರ್ಚೆಯ ವಿಷಯವು.

4. ಇಲ್ಲಿ ಹೇಳಿರುವವೆಲ್ಲ ಅಂತಃಕರಣದ ಧರ್ಮಗಳು, ದೇಹದ ಧರ್ಮಗಳಲ್ಲ ; ಆದರೂ ದೇಹಾದಿಗಳಲ್ಲಿ ಆಗಬೇಕಾಗಿರುವ ಭೋಗದಿಂದ ಆಗುವ ಸುಖಾದಿಗಳನ್ನು ದೇಹ ಧರ್ಮವೆಂದು ಪೂರ್ವಪಕ್ಷಿ ಹೇಳಿರುತ್ತಾನೆ.

ಹೇಳಬೇಕಾಗುವದು. ಆದರೆ (ಅವೂ) ಮುಪ್ಪು, ಸಾವು-ಮುಂತಾದವುಗಳಂತೆ[1] ಅವಿದ್ಯೆಯಿಂದ ಆರೋಪಿತವಾಗಿರುವದರಿಂದಲೂ,[2] ಬಿಡತಕ್ಕವುಗಳಾಗಿರುವದರಿಂದಲೂ ತೆಗೆದುಕೊಳ್ಳತಕ್ಕವಾಗಿರುವದರಿಂದಲೂ (ಆತ್ಮನ ಧರ್ಮಗಳು) ಆಗುವದಿಲ್ಲ-ಎಂದು ಮುಂತಾದ[3] ಅನುಮಾನಪ್ರಮಾಣವಿದೆ.

ಇದು ಹೀಗಿರುವದರಿಂದ[4] ಕರ್ತೃತ್ವಭೋಕ್ತೃತ್ವಸ್ವರೂಪವಾದ ಸಂಸಾರವು ಜ್ಞೇಯದಲ್ಲಿದ್ದು ಜ್ಞಾತೃವಿನಲ್ಲಿ ಅವಿದ್ಯೆಯಿಂದ ಹುಟ್ಟುಗಟ್ಟಿದ್ದಾದ್ದರಿಂದ ಹುಡುಗರು (ಆಕಾಶದಲ್ಲಿ) ಕಲ್ಪಿಸುವ ತಳವು ಕಪ್ಪಾಗಿರುವದೇ ಮುಂತಾದದ್ದರಿಂದ ಆಕಾಶಕ್ಕೆ ಹೇಗೆ (ಯಾವ ದೋಷವೂ ಉಂಟಾಗುವದಿಲ್ಲವೋ ಹಾಗೆ)-ಅದರಿಂದ ಜ್ಞಾತೃವಿಗೆ ಯಾವ ದೋಷವೂ ತಟ್ಟುವದಿಲ್ಲ. ಮತ್ತು ಹೀಗಿರುವಲ್ಲಿ[5] ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನಾಗಿರುವ ಭಗವಂತನಾದ ಈಶ್ವರನಿಗೆ ಸಂಸಾರಿತ್ವದ ವಾಸನೆಯುಕೂಡ (ಇರುವದೆಂದು) ಶಂಕಿಸುವ ಹಾಗಿಲ್ಲ ಏಕೆಂದರೆ ಅವಿದ್ಯೆಯಿಂದ ಅಧ್ಯಸ್ತವಾಗಿರುವ ಧರ್ಮದಿಂದ ಯಾವದಕ್ಕೂ (ಯಾವ) ಉಪಕಾರವಾಗಲಿ ಅಪಕಾರವಾಗಲಿ ಆಗುವದು ಲೋಕದಲ್ಲಿ ಎಲ್ಲಿಯೂ ಕಂಡಿರುವದಿಲ್ಲ.[6]

(ನಾವು ಕೊಟ್ಟ) ದೃಷ್ಟಾಂತವು ಸಮನಾಗಿಲ್ಲ ಎಂದು ಹೇಳಿದ್ದೆಯಲ್ಲ, ಅದು ಸರಿಯಲ್ಲ. ಏಕೆಂದರೆ ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ ಅವಿದ್ಯೆಯಿಂದ ಅಧ್ಯಾಸ ಮಾಡಿರುವದೆಂಬುದೊಂದೇ ಹೋಲಿಕೆ ಎಂದು (ನಮ್ಮ) ಅಭಿಪ್ರಾಯವು. ಅದು ಬೇರ್ಪಡುವದಿಲ್ಲ. ಅದು ಜ್ಞಾತೃವಿನ ವಿಷಯದಲ್ಲಿ ಬೇರ್ಪಡುತ್ತದೆ ಎಂದು (ನೀನು)

---

1. ಮುಪ್ಪುಸಾವುಗಳು ಆತ್ಮನಿಗೆ ಇಲ್ಲವೆಂದು ಪೂರ್ವಪಕ್ಷಿ ಒಪ್ಪಿರುತ್ತಾನೆ.

2. ಈ ಹೇತುವನ್ನು ಸ್ಥಾಣುಪುರುಷದೃಷ್ಟಾಂತದಿಂದ ಒಪ್ಪಿಸಿದ್ದಾಗಿದೆ.

3. ದೃಶ್ಯತ್ವ, ಜಡತ್ವ-ಮುಂತಾದ ಹೇತುಗಳಿಂದಲೂ ಎಂದು ಭಾವ.

4. ಕ್ಷೇತ್ರದ ಧರ್ಮಗಳು ಕ್ಷೇತ್ರಜ್ಞನಿಗೆ ಆಗುವವೇ ಇಲ್ಲವೆಂಬುದಕ್ಕೆ ಪ್ರಮಾಣವಿರುವದರಿಂದ.

5. ಜ್ಞೇಯಧರ್ಮವು ಜ್ಞಾತೃವಿನಲ್ಲಿ ಅಧ್ಯಸ್ತವಾದ ಮಾತ್ರದಿಂದ ಜ್ಞಾತೃವಿಗೆ ಯಾವ ದೋಷವೂ ಅಂಟುವದಿಲ್ಲವೆಂದು ಸಿದ್ಧವಾಗಿರುವದರಿಂದ ಎಂದರ್ಥ.

6. ಅಧ್ಯಸ್ತವಾದ ತೋರಿಕೆಯ ಗುಣವಾಗಲಿ ದೋಷವಾಗಲಿ ಅಧಿಷ್ಠಾನವಾಗಿರುವ ವಸ್ತುವಿಗೆ ಸ್ವಲ್ಪವೂ ಅಂಟುವದಿಲ್ಲವೆಂಬುದನ್ನು ಸೂ. ಭಾ. ಅಧ್ಯಾಸನಿಚಾರದ ಉಪೋದ್ಘಾತದಲ್ಲಿಯೂ ಹೇಳಿದೆ.

ಕಿಳಿದಿರುವೆಯಷ್ಟೆ, ಅದೂ (ಸರಿಯಾದ) ನಿಯಮವಲ್ಲ ಎಂಬುದನ್ನು ಮುಪ್ಪು ಮುಂತಾದ (ದೃಷ್ಟಾಂತ)ಗಳಿಂದ ತೋರಿಸಿಕೊಟ್ಟಿದ್ದಾಗಿವೆ.[1]

## ಅವಿದ್ಯೆಯು ಕರಣಧರ್ಮ, ಆತ್ಮಧರ್ಮವಲ್ಲ

(ಭಾಷ್ಯ)

೨೧೮. ಅವಿದ್ಯಾವತ್ತ್ವಾತ್ ಕ್ಷೇತ್ರಜ್ಞಸ್ಯ ಸಂಸಾರಿತ್ವಮ್ ಇತಿ ಚೇತ್ । ನ । ಅವಿದ್ಯಾಯಾಃ ತಾಮಸತ್ವಾತ್ । ತಾಮಸೋ ಹಿ ಪ್ರತ್ಯಯಃ ಆವರಣಾತ್ಮಕತ್ವಾತ್ ಅವಿದ್ಯಾ ವಿಪರೀತಗ್ರಾಹಕಃ, ಸಂಶಯೋ[2]ಪಸ್ಥಾಪಕಃ, ಅಗ್ರಹಣಾತ್ಮಕೋ ವಾ । ವಿವೇಕಪ್ರಕಾಶಭಾವೇ ತದಭಾವಾತ್ । ತಾಮಸೇ ಚ ಆವರಣಾತ್ಮಕೇ ತಿಮಿರಾದಿದೋಷೇ ಸತಿ ಅಗ್ರಹಣಾದೇಃ ಅವಿದ್ಯಾತ್ರಯಸ್ಯ ಉಪಲಬ್ಧೇಃ।ಅತ್ರ ಆಹ–ಏವಂ ತರ್ಹಿ ಜ್ಞಾತೃಧರ್ಮಃ ಅವಿದ್ಯಾ । ನ । ಕರಣೇ ಚಕ್ಷುಸಿ ತೈಮಿರಿಕತ್ವಾದಿದೋಷೋಪಲಬ್ಧೇಃ । ಯತ್ ತು ಮನ್ಯಸೇ ಜ್ಞಾತೃಧರ್ಮಃ ಅವಿದ್ಯಾ, ತದೇವ ಚ ಅವಿದ್ಯಾಧರ್ಮವತ್ತ್ವಂ ಕ್ಷೇತ್ರಜ್ಞಸ್ಯ ಸಂಸಾರಿತ್ವಮ್ । ತತ್ರ ಯದುಕ್ತಮ್ ಈಶ್ವರ ಏವ ಕ್ಷೇತ್ರಜ್ಞಃ ನ ಸಂಸಾರೀ–ಇತಿ ಏತತ್ ಅಯುಕ್ತಮ್ ಇತಿ । ತನ್ನ । ಕರಣೇ[3] ಚಕ್ಷುಷಿ ವಿಪರೀತಗ್ರಹಣಾದಿದೋಷಸ್ಯ[4]ದರ್ಶನಾತ್ । ವಿಪರೀತಾದಿಗ್ರಹಣಂ[5] ತನ್ನಿಮಿತ್ತಂ[6] ವಾ ತೈಮಿರಿಕತ್ವಾದಿದೋಷಃ ಗ್ರಹೀತುಶ್ಚಕ್ಷುಷಃ ಸಂಸ್ಕಾರೇಣ ತಿಮಿರೇ ಅಪನೀತೇ ಗ್ರಹೀತುರದರ್ಶನಾತ್ ನ ಗ್ರಹೀತುರ್ಧರ್ಮೋ[7] ಯಥಾ ತಥಾ ಸರ್ವತ್ರೈವ ಅಗ್ರಹಣವಿಪರೀತಸಂಶಯಪ್ರತ್ಯಯಾಃ ತನ್ನಿಮಿತ್ತಾಃ[8] ಕರಣಸ್ಯೈವ ಕಸ್ಯಚಿತ್ ಭವಿತುಮ್ ಅರ್ಹನ್ತಿ, ನ ಜ್ಞಾತುಃ ಕ್ಷೇತ್ರಜ್ಞಸ್ಯ । ಸಂವೇದ್ಯತ್ವಾಚ್ಚ

---

1. ಶರೀರಕ್ಕೆ ಮುಪ್ಪು, ಯೌವ್ವನ–ಮುಂತಾದವು ಬಂದರೂ ಜ್ಞಾತೃವಾದ ಆತ್ಮನಿಗೆ ಅವು ಆಗುವದಿಲ್ಲ ಆವಿದ್ಯೆಯಿಂದ ಅವನಲ್ಲಿ ಅಧ್ಯಸ್ತವಾಗಿವೆ–ಎಂದು ಪೂರ್ವಪಕ್ಷಿಯು ಒಪ್ಪಿರುವ ದೃಷ್ಟಾಂತದಿಂದಲೇ ಸುಖದುಃಖಾದಿಗಳೂ ಹಾಗೆಯೇ ಜ್ಞಾತೃವಿನಲ್ಲಿ ಅಧ್ಯಸ್ತವಾಗಬಹುದೆಂದು ತೋರಿಸಿಕೊಟ್ಟಿದೆ.

2. 'ಸಂಶಯಃ ತದುಪಸ್ಥಾಪಕಃ' ಮು॥

3. 'ಯಥಾ ಕರಣೇ' ಆ॥ ನಿ॥ ಗು॥ ವಾ॥ ಎಂಬ ಪಾಠದಲ್ಲಿ 'ಯಥಾ' ಹೆಚ್ಚು

4. 'ವಿಪರೀತಗ್ರಾಹಕಾದಿ ದೋಷಸ್ಯ' ಅ॥ ನಿ॥ ವಾ॥

5. 'ನ ವಿಪರೀತಾದಿಗ್ರಹಣಂ' ಎಂಬ ಮುದ್ರಿತಪಾಠದಲ್ಲಿ ನ ಹೆಚ್ಚೆಂದು ಬಿಟ್ಟಿದೆ.

6. 'ತನ್ನಿಮಿತ್ತೋ ವಾ' ಅ॥ ನಿ॥ ಗು॥

7. 'ಗ್ರಹೀತೃಧರ್ಮಃ' ಮು॥ ಮೈ॥

8. 'ತನ್ನಿಮಿತ್ತಾಃ' ಎಂಬ ಅ॥ ನಿ॥ ಗು॥ ವಾ॥ ಪಾಠಕ್ಕಿಂತ ಇದೇ ಮೇಲು.

ತೇಷಾಂ ಪ್ರದೀಪಪ್ರಕಾಶವತ್ ನ ಜ್ಞಾತೃಧರ್ಮತ್ವಮ್। ಸಂವೇದ್ಯತ್ವಾದೇವ ಸ್ವಾತ್ಮ ವ್ಯತಿರಿಕ್ತ[1] ಸಂವೇದ್ಯತ್ವಮ್ । ಸರ್ವಕರಣವಿಯೋಗೇ ಚ ಕೈವಲ್ಯೇ ಸರ್ವವಾದಿಭಿಃ ಅವಿದ್ಯಾದಿದೋಷವತ್ತ್ವಾನಭ್ಯುಪಗಮಾತ್ ಆತ್ಮನಃ। ಯದಿ ಕ್ಷೇತ್ರಜ್ಞಸ್ಯ[2]ಅಗ್ನ್ಯುಷ್ಣವತ್ ಸ್ವೋ ಧರ್ಮಃ[3] ತತಃ ನ ಕದಾಚಿದಪಿ ತೇನ[4] ವಿಯೋಗಃ ಸ್ಯಾತ್ । ಅವಿಕ್ರಿಯಸ್ಯ ಚ ವ್ಯೋಮವತ್ ಸರ್ವಗತಸ್ಯ ಅಮೂರ್ತಸ್ಯ ಆತ್ಮನಃ ಕೇನಚಿತ್ ಸಂಯೋಗ ವಿಯೋಗಾನುಪಪತ್ತೇಃ ಸಿದ್ಧಂ ಕ್ಷೇತ್ರಜ್ಞಸ್ಯ ನಿತ್ಯಮೇವ ಈಶ್ವರತ್ವಮ್। ಅನಾದಿತ್ವಾನ್ನಿರ್ಗುಣತ್ವಾತ್'' (೧೩-೩೧) ಇತಿ ಈಶ್ವರವಚನಾಚ್ಚ ॥

(ಭಾಷ್ಯಾರ್ಥ)

(ಆಕ್ಷೇಪ):—ಅವಿದ್ಯೆಯುಳ್ಳವನಾದ್ದರಿಂದ ಕ್ಷೇತ್ರಜ್ಞನು ಸಂಸಾರಿಯೇ[5].

(ಪರಿಹಾರ): —ಹಾಗಲ್ಲ. ಏಕೆಂದರೆ ಅವಿದ್ಯೆಯು ತಾಮಸವಾಗಿರುತ್ತದೆ. **ಅವಿದ್ಯೆಯೆಂಬ ಪ್ರತ್ಯಯವು ವಿರುದ್ಧವಾಗಿ ತಿಳಿಸುವದಾಗಲಿ, ಸಂಶಯವನ್ನುಂಟುಮಾಡಲಿ, ಅಥವಾ (ವಿಷಯವನ್ನು) ತಿಳಿಸದೆ ಇರುವದಾಗಲಿ ಮುಸುಕಿಸ ರೂಪವಾಗಿರುವದರಿಂದ[6] ತಾಮಸವೇ ಆಗಿರುತ್ತದೆ.[7] ಏಕೆಂದರೆ ವಿವೇಕದ ಬೆಳಕು ಇರುವಲ್ಲಿ ಅದು ಇರುವುದಿಲ್ಲ; ಮತ್ತು ಮುಸುಕಿನ ರೂಪವಾದ ತಾಮಸವಾಗಿರುವ ತಿಮಿರವೇ ಮುಂತಾದ ದೋಷಗಳಿರುವಾಗ ಅಗ್ರಹಣವೇ ಮುಂತಾದ ಮೂರು ಬಗೆಯ[8] ಅವಿದ್ಯೆಯೂ ಇರುವದು ಕಂಡುಬಂದಿದೆ.**

---

1. 'ಅಸ್ಯ ಆತ್ಮವ್ಯತಿರಿಕ್ತಸಂವೇದ್ಯತ್ವಮ್' ಮು॥

2. 'ಕ್ಷೇತ್ರಜ್ಞಸ್ಯ ಸಂಸಾರಿತ್ವಮ್' ಮು॥

3. 'ಸ್ವಧರ್ಮಃ' ಮು॥

4. 'ತೇಷಾಂ' ಮೈ॥

5. ಸುಖದುಃಖಾದಿಗಳು ಅವಿದ್ಯಾಕೃತವೇ ಆಗಲಿ ; ಯಾವ ಅವಿದ್ಯೆಯಿಂದ ಅವುಗಳು ತೋರುವವೋ ಆ ಅವಿದ್ಯೆಯಾದರೂ ಆತ್ಮನಿಗೇ ಸೇರಿದ್ದಷ್ಟೆ. ಅದ್ದರಿಂದಲೇ ಆತ್ಮನು ಸಂಸಾರಿಯೆಂದೂ ಈಶ್ವರನಿಗಿಂತ ಬೇರೆಯೆಂದೂ ಸಿದ್ಧವಾಗುತ್ತದೆ—ಎಂದರ್ಥ.

6. ಜ್ಞಾನಕ್ಕೆ ಅಡ್ಡಿಯಾಗಿರುವದರಿಂದ ಎಂದರ್ಥ.

7. ಕತ್ತಲೆಯಂತೆ ಮರೆಯಾಗಿರುತ್ತದೆ ಎಂದರ್ಥ. ಅನಿರ್ವಾಚ್ಯವಾದ ಅವಿದ್ಯಾರೂಪವಾದ ತಮಸ್ಸಿನ ಕಾರ್ಯವಾದ್ದರಿಂದ ಎಂಬ ಆ॥ ವ್ಯಾಖ್ಯಾನಕ್ಕೆ ಪ್ರಕೃತಭಾಷ್ಯದಲ್ಲಿ ಅಥವಾ ಭಾಷ್ಯಾಂತರದಲ್ಲಿ ಆಧಾರವಿಲ್ಲ.

8. ಜ್ಞಾನನಿವರ್ತ್ಯವಾದ ಅಜ್ಞಾನವು ಅಥವಾ ಅವಿದ್ಯೆಯು ಮೂರೇ ಬಗೆ ಎಂದು ಆಚಾರ್ಯರು ಇಲ್ಲಿ ಹೇಳಿರುತ್ತಾರೆ. ಬೃ. ಭಾ. ೩-೩- ರಲ್ಲಿ "ಯದ್ಗಿಜ್ಞಾನಾಭಾವೋ ಯದಿ ಸಂಶಯಜ್ಞಾನಂ ಯದಿ ವಿಪರೀತಜ್ಞಾನಂ ವಾ ಉಚ್ಯತೇ" ಎಂಬ ವಾಕ್ಯವನ್ನು ನೋಡಿ.

(ಆಕ್ಷೇಪ):— ಇಲ್ಲಿ (ಪೂರ್ವಪಕ್ಷಿ) ಹೇಳುವದೇನೆಂದರೆ, ಅವಿದ್ಯೆಯು ಜ್ಞಾತೃವಿನ ಧರ್ಮ(ವೆಂದಾಯಿತು)[1].

(ಪರಿಹಾರ). ಹಾಗಲ್ಲ. ಏಕೆಂದರೆ ತೈಮಿರಿಕತ್ವವೇ[2] ಮುಂತಾದ ದೋಷವು ಕರಣವಾದ ಚಕ್ಷು(ರಿಂದ್ರಿಯ)ದಲ್ಲಿರುವದು ಕಂಡುಬರುತ್ತದೆ. "ಅವಿದ್ಯೆಯು ಜ್ಞಾತೃವಿನ ಧರ್ಮವು, ಅವಿದ್ಯಾ (ರೂಪವಾದ) ಧರ್ಮವಿರುವದೆಂಬ ಇದೇ ಕ್ಷೇತ್ರಜ್ಞನಲ್ಲಿರುವ ಸಂಸಾರಿತ್ವವು[3]. ಹೀಗಿರುವಲ್ಲಿ ಕ್ಷೇತ್ರಜ್ಞನು ಈಶ್ವರನೇ, ಸಂಸಾರಿಯಲ್ಲ-ಎಂದು ಹೇಳಿದಿರಲ್ಲ, ಅದು ಸರಿಯಲ್ಲ" ಎಂದಲ್ಲವೆ, (ನಿನ್ನ) ಅಭಿಪ್ರಾಯ ? ಅದು (ಸರಿ)ಯಲ್ಲ. ಏಕೆಂದರೆ ಕರಣವಾದ ಚಕ್ಷು(ರಿಂದ್ರಿಯ)ದಲ್ಲಿ ತಪ್ಪಾಗಿ ತಿಳಿಯುವದೇ ಮುಂತಾದ ದೋಷವು ಕಂಡುಬರುತ್ತದೆ. **ತಪ್ಪಾಗಿ ತಿಳಿಯುವದೇ ಮುಂತಾದದ್ದಾಗಲಿ[4] ಅದಕ್ಕೆ ನಿಮಿತ್ತವಾದ ತಿಮಿರವಿರುವದೇ ಮುಂತಾದ ದೋಷವಾಗಲಿ, ಅರಿಯುವವನ ಚಕ್ಷುಸ್ಸಿಗೆ ಸಂಸ್ಕಾರವನ್ನು ಮಾಡುವದರಿಂದ ತಿಮಿರವನ್ನು ಕಳೆಯಲು, ಅರಿಯುವಾತನಲ್ಲಿ (ಮತ್ತೆ) ಕಾಣದೆ ಇರುವದರಿಂದ ಹೇಗೆ ಅರಿಯುವಾತನ ಧರ್ಮವಲ್ಲವೋ, ಹಾಗೆ ಎಲ್ಲಾ (ಕಡೆ)ಯಲ್ಲಿಯೂ ತಿಳಿಯದಿರುವದು, ತಪ್ಪಾಗಿ ತಿಳಿಯುವುದು, ಸಂಶಯಪಡುವುದು, ಎಂಬ ಸನಿಮಿತ್ತವಾದ ಪ್ರತ್ಯಯಗಳು ಯಾವದಾದರೊಂದು ಕರಣಕ್ಕೇ[5] (ಸಂಬಂಧಪಟ್ಟ)ರಬೇಕೇ ಹೊರತು ಅರಿಯುವ ಕ್ಷೇತ್ರಜ್ಞನಿಗೆ (ಸೇರಿರ)ಲಾರವು**

ದೀಪದ ಬೆಳಕಿನಂತೆ ಅವು (ಆತ್ಮನ) ಅರಿವಿಗೆ ವಿಷಯವಾಗಿರುವದರಿಂದಲೂ ಜ್ಞಾತೃವಿನ ಧರ್ಮವಲ್ಲ[6]. (ಅವು) ಅರಿವಿಗೆ ವಿಷಯವಾಗಿರುವದರಿಂದಲೇ ತಮ

---

1. ದೋಷವಿರುವಲ್ಲಿಯೇ ಅಗ್ರಹಣಾದಿಯಾದ ಅವಿದ್ಯಾತ್ರಯವಿರುವದೆಂಬುವದನ್ನು ಸ್ಪಷ್ಟಪಡಿಸುವದಕ್ಕೆಂದು ಪೂರ್ವಪಕ್ಷವನ್ನು ಮತ್ತೊಮ್ಮೆ ಅನುವಾದಮಾಡಿಕೊಂಡಿರುತ್ತಾರೆ.

2. ಕಣ್ಣಿನ ಪರೆಯೇ ಮುಂತಾದ ಅಡ್ಡಿಯು.

3. ಆದ್ದರಿಂದ ಕ್ಷೇತ್ರಜ್ಞನು ನಿತ್ಯವಾದ ಸರ್ವಜ್ಞತ್ವವುಳ್ಳ ಈಶ್ವರನಲ್ಲ-ಎಂದು ಭಾವ.

4. ರೂಪವನ್ನು ತಪ್ಪಾಗಿ ಕಾಣುವದು, ಕಾಣದೆ ಇರುವದು, ಅಥವಾ ಮುಸುಕಾಗಿರುವಂತೆ ಸಂಶಯರೂಪವಾಗಿ ಕಾಣುವದು.

5. ಅವಿದ್ಯೆಯು ಅಂತಃಕರಣದಲ್ಲಿರುವ ದೋಷದಿಂದ ಅದರಲ್ಲಿ ತೋರುವ ಧರ್ಮವು; ಏಕೆಂದರೆ ಕರ್ಮಧ್ಯಾನಾದಿಗಳಿಂದ ಈ ದೋಷವು ತೊಲಗಲು ಅವಿದ್ಯೆಯೂ ಇರುವದಿಲ್ಲ-ಎಂದರ್ಥ. ತೈ. ಭಾ. ೨-೮ (ಭಾ. ಭಾ. ೨೨೬) ನೋಡಿ

6. ಅವಿದ್ಯೆಯು ವಿಷಯವು ; ವಿಷಯದ ಧರ್ಮವು ವಿಷಯಿಗೆ ಎಂದಿಗೂ ಆಗಲಾರದು ತೈ. ಭಾ. ೨-೮ (ಭಾ. ಭಾ. ೨೧೬).

ಗಿಂತ ಬೇರೆಯಾದ (ಒಂದರಿಂದ) ಅರಿಯಲ್ಪಡತಕ್ಕವುಗಳು (ಎಂದು ಸಿದ್ಧವಾಗುತ್ತದೆ)[1] **ಯಾವ ಕರಣಗಳೂ ಇಲ್ಲದ ಕೈವಲ್ಯದಲ್ಲಿ ಅವಿದ್ಯೆಯೇ ಮುಂತಾದ (ಯಾವ ದೋಷಗಳನ್ನೂ ಆತ್ಮನಲ್ಲಿ ಯಾವ ವಾದಿಗಳು ಒಪ್ಪುವದಿಲ್ಲ.**[2] ಬೆಂಕಿಯ ಬಿಸಿಯಂತೆ ಅವಿದ್ಯೆಯು ಕ್ಷೇತ್ರಜ್ಞನಿಗೆ ಸ್ವಧರ್ಮವೇ ಆಗಿದ್ದರೆ, ಆಗ ಎಂದಿಗೂ ಅದನ್ನು (ಬಿಟ್ಟು) ಅಗಲುವದು ಆಗಲಾರದು[3]. ಇದಲ್ಲದೆ (ಯಾವ) ವಿಕಾರವೂ ಇಲ್ಲದವನೂ ಆಕಾಶದಂತೆ ಸರ್ವಗತನೂ ಅಮೂರ್ತನೂ ಆಗಿರುವ ಆತ್ಮನಿಗೆ ಯಾವ ದೊಂದರ ಸಂಯೋಗವಾಗಲಿ ವಿಯೋಗವಾಗಲಿ ಆಗಲಾರದಾದ್ದರಿಂದ ಕ್ಷೇತ್ರಜ್ಞನು ಯಾವಾಗಲೂ ಈಶ್ವರನೇ ಆಗಿರುವನೆಂದು ಏರ್ಪಡುತ್ತದೆ. ಅನಾದಿಯಾಗಿರುವದ ರಿಂದಲೂ (ಈ ಪರಮಾತ್ಮನು) ಶರೀರದಲ್ಲಿದ್ದರೂ ಕೆಲಸಮಾಡುವದಿಲ್ಲ, ಕರ್ಮ ಲಿಪ್ತನೂ ಆಗುವದಿಲ್ಲ. ೧೩-೩೧)-ಎಂಬ ಈಶ್ವರವಚನದಿಂದಲೂ[4] (ಇದು ಸಿದ್ಧ ವಾಗುತ್ತದೆ.

## ಶಾಸ್ತ್ರಾನರ್ಥಕ್ಯಾದಿದೋಷಪರಿಹಾರ

(ಭಾಷ್ಯ)

೨೧೯. ನನು ಏವಂ[5] ಸಂಸಾರಸಂಸಾರಿತ್ವಾಭಾವೇ ಶಾಸ್ತ್ರಾನರ್ಥಕ್ಯಾದಿದೋಷಃ ಸ್ಯಾತ್ ಇತಿ ಚೇತ್ । ನ । ಸರ್ವೈರಭ್ಯುಪಗಮಾತ್[6] । ಸರ್ವೈರ್ಹಿ[7] ಆತ್ಮವಾದಿಭಿಃ ಅಭ್ಯುಪಗತೋ ದೋಷಃ ನೈಕೇನ ಪರಿಹರ್ತವ್ಯೋ ಭವತಿ[8] । ಕಥಮ್ ಅಭ್ಯುಪ ಗತ[9] ಇತಿ ? ಮುಕ್ತಾತ್ಮನಾಂ ಹಿ ಸಂಸಾರಸಂಸಾರಿತ್ವವ್ಯವಹಾರಾಭಾವಃ ಸರ್ವೈರೇವ

---

1. ತಮಗೆ ತಾವೇ ವಿಷಯವಲ್ಲ ; ಆದ್ದರಿಂದ ವಿಷಯಿಯಾದ ಆತ್ಮನಿಗೆ ಅವು ಸೇರು ವಂತಿಲ್ಲ.

2. ಸುಷುಪ್ತಿಯಲ್ಲಿಯೂ ಅವಿದ್ಯೆಯಿಲ್ಲವಾದರೂ ಮುಕ್ತಿಯ ವಿಷಯದಲ್ಲಿರುವಂತೆ ಅದರ ವಿಷಯದಲ್ಲಿ ಎಲ್ಲಾ ವಾದಿಗಳೂ ಒಂದೇ ಮತವುಳ್ಳವರಾಗಿಲ್ಲ. ಸುಷುಪ್ತಿಯು ಆತ್ಮನ ಸ್ವಾಭಾವಿಕರೂಪವನ್ನೇ ತೋರಿಸುತ್ತದೆ ಎಂಬ ಬಗ್ಗೆ ತೈ. ಭಾ. ೨-೮ (ಭಾ. ಭಾ. ೨೧೪) ನೋಡಿರಿ. ಬೃ. ೪-೩-೨೦ರ ಭಾಷ್ಯಾವತರಣಿಕೆಯನ್ನೂ ಅದರ ಉಪಸಂಹಾರವನ್ನೂ ನೋಡಿ.

3. ಆಗ ಮುಕ್ತಿಯೇ ಆಗಬಾರದಾಗುವದು.

4. ಕ್ಷೇತ್ರಜ್ಞನು ಪರಮೇಶ್ವರನೇ ಎಂದು ಹೇಳಿದಂತೆ ಆಯಿತು.

5. ' ಏವಂ ಸತಿ ' ಅ॥ ನಿ॥ ವಾ॥

6. ' ಸರ್ವೈರಭ್ಯುಪಗತತ್ವಾತ್ ' ನಿ॥ ವಾ॥

7. ಮು॥ದಲ್ಲಿ ' ಹಿ ' ಇಲ್ಲ.

8. ' ಪರಿಹರಿಷ್ಯತೇ ' ಮು॥

9. ' ಅಭ್ಯುಪಗಮಃ ' ಮು॥

ಆತ್ಮವಾದಿಭಿಃ ಇಷ್ಯತೇ । ನ ಚ ತೇಷಾಂ ಶಾಸ್ತ್ರಾನರ್ಥಕ್ಯಾದಿದೋಷಪ್ರಾಪ್ತಿಃ ಅಭ್ಯುಪಗತಾ । ತಥಾ ನಃ ಕ್ಷೇತ್ರಜ್ಞಾನಾಮ್ ಈಶ್ವರೈಕತ್ವೇ ಸತಿ ಶಾಸ್ತ್ರಾನರ್ಥಕ್ಯಂ ಭವತು । ಅವಿದ್ಯಾವಿಷಯೇ ಚ ಅರ್ಥವತ್ತ್ವಮ್ । ಯಥಾ ದ್ವೈತಿನಾಂ ಸರ್ವೇಷಾಂ ಬನ್ಧಾವಸ್ಥಾಯಾಮೇವ ಶಾಸ್ತ್ರಾದ್ಯರ್ಥವತ್ತ್ವಂ ನ ಮುಕ್ತಾವಸ್ಥಾಯಾಮ್ ಏವಮ್ ॥

(ಭಾಷ್ಯಾರ್ಥ)

(ಆಕ್ಷೇಪ) :—ಹೀಗೆ ಸಂಸಾರ, ಸಂಸಾರಿತ್ವ-(ಎಂಬಿವು) ಇಲ್ಲವಾದರೆ ಶಾಸ್ತ್ರವು ವ್ಯರ್ಥವಾಗುವದೇ ಮುಂತಾದ[1] ದೋಷವಾಗುವದಲ್ಲ !

(ಪರಿಹಾರ) :—ಹಾಗಲ್ಲ. ಏಕೆಂದರೆ (ಇದನ್ನು) ಎಲ್ಲರೂ ಒಪ್ಪಿಕೊಂಡಿರುತ್ತಾರೆ. ಎಲ್ಲಾ ಆತ್ಮವಾದಿಗಳು ಒಪ್ಪಿಕೊಂಡಿರುವ ದೋಷವು (ಅವರಲ್ಲಿ) ಒಬ್ಬನೇ ಪರಿಹರಿಸಿಕೊಳ್ಳತಕ್ಕದ್ದಾಗುವದಿಲ್ಲ. (ಇದು ಎಲ್ಲರೂ) ಒಪ್ಪಿದ್ದೆಂಬುದು ಹೇಗೆ ?-ಎಂದರೆ ಮುಕ್ತಾತ್ಮರಿಗೆ ಸಂಸಾರ, ಸಂಸಾರಿತ್ವ-ಎಂಬ ವ್ಯವಹಾರವು ಇರುವದಿಲ್ಲವೆಂದು ಆತ್ಮವಾದಿಗಳೆಲ್ಲರೂ ಒಪ್ಪಿರುತ್ತಾರೆ. ಆದರೂ ಅವರಿಗೆ ಶಾಸ್ತ್ರವು ವ್ಯರ್ಥವಾಗುವದೆಂಬುದೇ ಮುಂತಾದ ದೋಷವುಂಟಾಗುವದೆಂದು (ಅವರು) ಒಪ್ಪುವದಿಲ್ಲ. ಅದರಂತೆಯೇ ನಮ್ಮ (ಪಕ್ಷದಲ್ಲಿಯೂ) ಕ್ಷೇತ್ರಜ್ಞರಿಗೆ ಈಶ್ವರನೊಡನೆ ಐಕ್ಯವಾದಾಗ ಶಾಸ್ತ್ರವು ವ್ಯರ್ಥವೆಂದಾಗಲಿ, ಅವಿದ್ಯಾವಿಷಯದಲ್ಲಿ[2] ಸಾರ್ಥಕ (ವೆಂದಾಗಲಿ) ! ಹೇಗೆ ದ್ವೈತಿಗಳಿಗೆಲ್ಲ ಬಂಧಾವಸ್ಥೆಯಲ್ಲಿಯೇ ಶಾಸ್ತ್ರವೇ ಮುಂತಾದದ್ದು ಸಾರ್ಥಕವಾಗಿರುವದೇ ಹೊರತು ಮುಕ್ತಾವಸ್ಥೆಯಲ್ಲಿ (ಇರುವ)ದಿಲ್ಲವೋ ಹಾಗೆ (ನಮಗೂ ಆಗಲಿ) !

(ಭಾಷ್ಯ)

೨೬೦. ನನು ಆತ್ಮನೋ ಬನ್ಧಮುಕ್ತಾವಸ್ಥೇ ಪರಮಾರ್ಥತ ಏವ ವಸ್ತುಭೂತೇ ಮತೇ ದ್ವೈತಿನಾಂ[3] ಸರ್ವೇಷಾಮ್ । ಅತಃ ಹೇಯೋಪಾದೇಯತತ್ಸಾಧನಸದ್ಭಾವೇ ಶಾಸ್ತ್ರಾದ್ಯರ್ಥವತ್ತ್ವಂ ಸ್ಯಾತ್ । ಅದ್ವೈತಿನಾಂ ಪುನಃ ದ್ವೈತಸ್ಯ ಅಪರಮಾರ್ಥತ್ವಾತ್, ಅವಿದ್ಯಾಕೃತತ್ವಾತ್, ಬನ್ಧಾವಸ್ಥಾಯಾಶ್ಚ ಆತ್ಮನೋಽಪರಮಾ

---

1. ಶಾಸ್ತ್ರವು ವ್ಯರ್ಥ, ಗುರುಶಿಷ್ಯಸಂಪ್ರದಾಯವು ವ್ಯರ್ಥ, ಸಾಧನೆಯು ವ್ಯರ್ಥ- ಮುಂತಾದ ದೋಷಗಳು.

2. 'ಐಕ್ಯವಾದಾಗ' ಎಂದರೆ ಆ ಕಾಲದಲ್ಲಿ ಎಂದರ್ಥವಲ್ಲ; ಜ್ಞಾನದೃಷ್ಟಿಯಿಂದ ನೋಡಿದರೆ ಐಕ್ಯವೇ ಇರುವದರಿಂದ ಎಂದರ್ಥ. ಆದ್ದರಿಂದ ಅವಿದ್ಯಾದೃಷ್ಟಿಯಿಂದಲೇ ಶಾಸ್ತ್ರಾದಿಗಳನ್ನು ಒಪ್ಪಿರುತ್ತೇವೆ ಎಂದಭಿಪ್ರಾಯ.

3. 'ವಸ್ತುಭೂತೇ ದ್ವೈತಿನಾಂ' ಅ॥; 'ವಸ್ತುಭೂತೇ ದ್ವೈತಿನಾಂ ನಃ' ನ॥

ರ್ಥತ್ವೇ ನಿರ್ವಿಷಯತ್ವಾತ್ ಶಾಸ್ತ್ರಾದ್ಯಾನರ್ಥಕ್ಯಮ್ ಇತಿ ಚೇತ್ । ನ । ಆತ್ಮನಃ ಅವಸ್ಥಾಭೇದವತ್ತ್ವಾನುಪಪತ್ತೇಃ[1] । ಯದಿ ತಾವತ್ ಆತ್ಮನಃ ಬನ್ಧಮುಕ್ತ್ಯವಸ್ಥೇ (ತೇ ?) ಯುಗಪತ್ ಸ್ಯಾತಾಂ ಕ್ರಮೇಣ ವಾ । ಯುಗಪತ್ ತಾವತ್ ವಿರೋಧಾತ್ ನ ಸಂಭವತಃ । ಸ್ಥಿತಿಗತೀ ಇವ ಏಕಸ್ಮಿನ್ । ಕ್ರಮಭಾವಿತ್ವೇ ಚ ನಿರ್ನಿಮಿತ್ತತ್ವಂ ಸನಿಮಿತ್ತತ್ವಂ ವಾ[2] ! ನಿರ್ನಿಮಿತ್ತತ್ವೇ ಅನಿರ್ಮೋಕ್ಷಪ್ರಸಙ್ಗಃ । ಸನಿಮಿತ್ತತ್ವೇ ಚ[3] ಸ್ವತಃ ಅಭಾವಾತ್ ಅಪರಮಾರ್ಥತ್ವಪ್ರಸಙ್ಗಃ ತಥಾ ಚ ಸತಿ ಅಭ್ಯುಪಗಮಹಾನಿಃ । ಕಿಂಚ ಬನ್ಧಮುಕ್ತ್ಯವಸ್ಥಯೋಃ ಪೌರ್ವಾಪರ್ಯನಿರೂಪಣಾಯಾಂ ಬನ್ಧಾವಸ್ಥಾ ಪೂರ್ವಂ ಪ್ರಕಲ್ಪ್ಯ ಅನಾದಿಮತೀ ಅನ್ತವತೀ ಚ । ತಚ್ಚ ಪ್ರಮಾಣವಿರುದ್ಧಮ್ । ತಥಾ ಮೋಕ್ಷಾವಸ್ಥಾ ಆದಿಮತೀ ಅನನ್ತಾ ಚ ಪ್ರಮಾಣವಿರುದ್ಧೈವ ಅಭ್ಯುಪಗಮ್ಯತೇ । ನ ಚ ಅವಸ್ಥಾವತಃ ಅವಸ್ಥಾನ್ತರಂ ಗಚ್ಛತಃ ನಿತ್ಯತ್ವಮ್ ಉಪಪಾದಯಿತುಂ ಶಕ್ಯಮ್ । ಅಥ ಅನಿತ್ಯತ್ವದೋಷಪರಿಹಾರಾಯ ಬನ್ಧಮುಕ್ತ್ಯವಸ್ಥಾಭೇದೋ ನ ಕಲ್ಪ್ಯತೇ[4], ಅತಃ ದ್ವೈತನಾಮಪಿ ಶಾಸ್ತ್ರಾನರ್ಥಕ್ಯಾದಿದೋಷಃ ಅಪರಿಹಾರ್ಯ ಏವ ಇತಿ ಸಮಾನತ್ವಾತ್ ನ ಅದ್ವೈತವಾದಿನಾ ಪರಿಹರ್ತವ್ಯೋ ದೋಷಃ ॥

(ಭಾಷ್ಯಾರ್ಥ)

(ಆಕ್ಷೇಪ) :—ಆತ್ಮನ ಬಂಧ, ಮುಕ್ತ್ಯವಸ್ಥೆ—ಇವು ನಿಜವಾಗಿಯೇ ಇದ್ದುಕೊಂಡಿರುವವು ಎಂದು ದ್ವೈತಿಗಳೆಲ್ಲರಿಗೂ ಒಪ್ಪಾಗಿರುತ್ತದೆ. ಆದ್ದರಿಂದ ಬಿಡತಕ್ಕದ್ದು, ಸಂಪಾದಿಸಿಕೊಳ್ಳತಕ್ಕದ್ದು—(ಇವೂ) ಇವುಗಳ ಸಾಧನಗಳೂ (ನಿಜವಾಗಿ) ಇರುವದರಿಂದ[5] ಶಾಸ್ತ್ರಾದಿಗಳು ಸಪ್ರಯೋಜನವಾಗುವವು. ಆದರೆ ಅದ್ವೈತಿಗಳ (ಪಕ್ಷದಲ್ಲಿ) ದ್ವೈತವು ನಿಜವಾಗಿಲ್ಲದಿರುವದರಿಂದ ಆತ್ಮನ ಬಂಧಾವಸ್ಥೆಯು ಅವಿದ್ಯಾಕೃತವಾಗಿರುವದರಿಂದ (ಅದೂ) ಪರಮಾರ್ಥವೆಂದಾಗಿ ಶಾಸ್ತ್ರಾದಿಗಳಿಗೆ ವಿಷಯವೇ ಇಲ್ಲದ್ದರಿಂದ (ಅವು) ನಿರರ್ಥಕವಾಗುವವು.

1. 'ಭೇದಾನುಪಪತ್ತೇಃ' ಆ॥ ಸ॥ ವಾ॥

2. "ನಿರ್ನಿಮಿತ್ತತ್ವಂ ಸನಿಮಿತ್ತತ್ವಂ ವಾ" ಎಂಬ ಮಾತುಗಳು ಮ॥ಮೈ॥ ಗಳಲ್ಲಿ ಮಾತ್ರ ಇವೆ.

3. "ಅನ್ಯನಿಮಿತ್ತತ್ವೇ" ಆ॥ ಸ॥ ವಾ॥

4. 'ಅವಸ್ಥೇ ನ ಕಲ್ಪ್ಯೇತೇ' ಮ॥ ; 'ನ ಪರಿಕಲ್ಪ್ಯತೇ' ಮೈ॥

5. ಸಂಪಾದಿಸತಕ್ಕ ಮೋಕ್ಷವೂ ನಿಜವಾಗಿಲ್ಲ, ಬಿಡಿಸಿಕೊಳ್ಳಬೇಕಾದ ಬಂಧವೂ ಇಲ್ಲ, ಇವಕ್ಕೆ ಬೇಕಾದ ಸಾಧನಗಳೂ ಇಲ್ಲ-ಎಂಬ ಮತದಲ್ಲಿ ಶಾಸ್ತ್ರಾದಿಗಳು ನಿಷ್ಪ್ರಯೋಜನವಾಗುವವು-ಎಂದು ಭಾವ.

(ಪರಿಹಾರ) ; ಹಾಗಲ್ಲ. ಏಕೆಂದರೆ ಆತ್ಮನಿಗೆ ಬೇರೆಬೇರೆಯ ಅವಸ್ಥೆಗಳಿರುವವೆಂಬುದು ಹೊಂದುವಂತಿಲ್ಲ. ಮೊದಲನೆಯದಾಗಿ ಆತ್ಮನಿಗೆ ಬಂಧಮುಕ್ತ್ಯವಸ್ಥೆಗಳು (ನಿಜವಾಗಿದ್ದರೆ ಅವು) ಒಟ್ಟಿಗಾದರೂ ಇರಬೇಕು; ಒಂದಾಗುತ್ತಲೊಂದಾದರೂ (ಬರಬೇಕು) ; ಒಟ್ಟಿಗೆಯಂತೂ ಅವು ಇರಲಾರವು, ಏಕೆಂದರೆ (ಅವು ಒಂದಕ್ಕೊಂದು ವಿರುದ್ಧವಾಗಿರುತ್ತವೆ ; (ವಿರುದ್ಧವಾಗಿರುವ) (ಸುಮ್ಮನೆ) ನಿಂತಿರುವದು, ಚಲಿಸುತ್ತಿರುವದು–(ಎರಡೂ) ಒಂದರಲ್ಲಿಯೇ (ಏಕಕಾಲಕ್ಕೆ ಹೇಗೆ ಇರಲಾರವೋ) ಹಾಗೆ ಕ್ರಮವಾಗಿ (ಬರುವದಾದರೆ ಅವು) ಯಾವ ನಿಮಿತ್ತವೂ ಇಲ್ಲದೆ (ಆಗಬೇಕು) ಅಥವಾ (ಯಾವದಾದರೊಂದು) ನಿಮಿತ್ತದಿಂದ (ಆಗಬೇಕು). ನಿಮಿತ್ತವೇ ಇಲ್ಲವಾದರೆ ಮೋಕ್ಷವೇ ಇಲ್ಲವೆಂದಾಗುವದು[1]. ನಿಮಿತ್ತದಿಂದ (ಆಗಿ)ದ್ದರೆ ತಾವಾಗಿ ಇಲ್ಲವೆಂದಾಗುವದರಿಂದ (ಅವು) ಪರಮಾರ್ಥವಲ್ಲವೆಂದಾಗುವದು. ಹಾಗಾದರೆ (ದ್ವೈತಿಗಳು) ಒಪ್ಪಿರುವದನ್ನು ಬಿಟ್ಟಂತಾಗುವದು. [2] ಇದಲ್ಲದೆ ಬಂಧಾಮುಕ್ತ್ಯವಸ್ಥೆಗಳಲ್ಲಿ (ಯಾವದು) ಮೊದಲು, (ಯಾವದು) ಆಮೇಲೆ–ಎಂಬುದನ್ನು ನೋಡಿದರೆ ಬಂಧಾವಸ್ಥೆ ಮೊದಲು (ಇರುವ)ದೆಂದೂ (ಅದು) ಅನಾದಿಯೆಂದೂ ಅಂತವುಳ್ಳದ್ದೆಂದೂ ಕಲ್ಪಿಸಬೇಕಾಗುವದು[3]. ಅದೂ ಪ್ರಮಾಣವಿರುದ್ಧವು.[4] ಹೀಗೆಯೇ ಮೋಕ್ಷಾವಸ್ಥೆಯು ಆದಿಯುಳ್ಳದ್ದೆಂದೂ ಅಂತವಿಲ್ಲದ್ದೆಂದೂ ಪ್ರಮಾಣವಿರುದ್ಧವಾಗಿಯೇ ಒಪ್ಪಬೇಕಾಗುವದು. (ಒಂದು) ಅವಸ್ಥೆಯಲ್ಲಿದ್ದು ಮತ್ತೊಂದು ಅವಸ್ಥೆಯನ್ನು ಹೊಂದುವ (ಆತ್ಮ)ನಿಗೆ ನಿತ್ಯತ್ವವನ್ನು ಯುಕ್ತಿಯಿಂದ (ಸಾಧಿಸು)ವದೂ ಆಗಲಾರದು. ಇನ್ನು (ಈ) ಅನಿತ್ಯತ್ವದೋಷವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಬಂಧಮುಕ್ತ್ಯವಸ್ಥೆಗಳೆಂಬ ಭೇದವನ್ನು ಕಲ್ಪಿಸುವದೇ ಇಲ್ಲ(ವೆಂದರೆ) ಆಗ ದ್ವೈತಿಗಳಿಗೂ ಶಾಸ್ತ್ರಾನರ್ಥಕ್ಯಾದಿದೋಷವನ್ನು ತಪ್ಪಿಸಿಕೊಳ್ಳುವದಕ್ಕೆ ಆಗುವದೇ ಇಲ್ಲ. ಆದದರಿಂದ (ಹೀಗೆ) ದೋಷವು ಇಬ್ಬರಿಗೂ ಸಮಾನವೇ ಆಗಿರುವದರಿಂದ[5] (ಇದು) ಅದ್ವೈತವಾದಿಯೊಬ್ಬನೇ ಪರಿಹರಿಸಿಕೊಳ್ಳತಕ್ಕದ್ದಲ್ಲ.

---

1 ನಿಮಿತ್ತವಿಲ್ಲದೆ ಆಗಿರುವ ಬಂಧವು ಸ್ವಾಭಾವಿಕವೆಂದು ಒಪ್ಪಬೇಕು. ಆಗ ಅದರಿಂದ ಬಿಡುಗಡೆಯಾಗಲೇ ಆರದು.

2. ಬಂಧಾದಿಗಳು ಪರಮಾರ್ಥವೆಂದು ಪ್ರತಿಜ್ಞೆಮಾಡಿ ಈಗ ಅವು ಯಾವದಾದರೊಂದು ಉಪಾಧಿಯಿಂದಾದವುಗಳೆಂದರೆ ಪ್ರತಿಜ್ಞೆಗೆ ವಿರುದ್ಧವಾಗಿ ಅಪರಮಾರ್ಥವೆಂದು ಹೇಳಿದಂತಾಗುತ್ತದೆ.

3. ಬಂಧವು ಆದಿಯುಳ್ಳದ್ದೆಂದರೆ ಮೊದಲು ಮುಕ್ತನಾಗಿದ್ದವನೂ ಬದ್ಧನಾಗಬಹುದೆಂದಾಗುವದರಿಂದ ಅದು ಅನಾದಿಯೆಂದು ಕಲ್ಪಿಸಬೇಕಾಗಿದೆ.

4. ಅನಾದಿಗೆ ನಾಶವುಂಟೆಂದೂ ಅನಂತವಾದದ್ದಕ್ಕೆ ಆದಿಯಿರುವದೆಂದೂ ಕಲ್ಪಿಸುವದು ಪ್ರಮಾಣವಿರುದ್ಧವು. ಮಾಂ. ಕಾ. ಭಾ. ೪–೩೦ ; ತೈ. ಭಾ ಭಾ. ೮,೯,೭೧, ೭೩.

5. ಎಲ್ಲರಿಗೂ ಸಮಾನವಾಗಿರಲೇಬೇಕಾದದ್ದು ದೋಷವೆನಿಸಲಾರದು ಎಂದು ಭಾವ

(ಭಾಷ್ಯ)

೨೨೧. ನ ಚ ಶಾಸ್ತ್ರಾನರ್ಥಕ್ಯಮ್ । ಯಥಾಪ್ರಸಿದ್ಧಾವಿದ್ವತ್ಪುರುಷ ವಿಷಯತ್ವಾತ್ ಶಾಸ್ತ್ರಸ್ಯ । ಅವಿದುಷಾಂ ಹಿ ಫಲಹೇತ್ವೋಃ ಅನಾತ್ಮನೋಃ ಆತ್ಮ ದರ್ಶನಂ ನ ವಿದುಷಾಮ್ । ವಿದುಷಾಂ ಹಿ ಫಲಹೇತುಭ್ಯಾಮ್ ಆತ್ಮನಃ ಅನ್ಯತ್ವ ದರ್ಶನೇ ಸತಿ ತಯೋಃ ಅಹಮ್ ಇತಿ ಆತ್ಮದರ್ಶನಾನುಪಪತ್ತಿಃ[1] । ನ ಹಿ ಅತ್ಯನ್ತ ಮೂಢಃ ಉನ್ಮತ್ತಾದಿರಪಿ ಜಲಾಗ್ನ್ಯೋಃ ಛಾಯಾಪ್ರಕಾಶಯೋರ್ವಾ ಐಕಾತ್ಮ್ಯಂ[2] ಪಶ್ಯತಿ, ಕಿಮುತ ವಿವೇಕೀ ? ತಸ್ಮಾತ್ ನ ವಿಧಿಪ್ರತಿಷೇಧಶಾಸ್ತ್ರಂ ತಾವತ್ ಫಲ ಹೇತುಭ್ಯಾಮ್ ಆತ್ಮನೋಽನ್ಯತ್ವದರ್ಶಿನೋ ಭವತಿ । ನ ಹಿ " ದೇವದತ್ತ, ತ್ವಮ್ ಇದಂ ಕುರು " ಇತಿ ಕಸ್ಮಿಂಶ್ಚಿತ್ ಕರ್ಮಣಿ ನಿಯುಕ್ತೇ ವಿಷ್ಣುಮಿತ್ರಃ ಅಹಂ ನಿಯುಕ್ತಃ ಇತಿ ತತ್ರಸ್ಥಃ ನಿಯೋಗಂ ಶೃಣ್ವನ್ನಪಿ ಪ್ರತಿಪದ್ಯತೇ । ನಿಯೋಗವಿಷಯ ವಿವೇಕಾಗ್ರಹಣಾತ್ ತು ಉಪಪದ್ಯತೇ ಪ್ರತಿಪತ್ತಿಃ । ತಥಾ ಫಲಹೇತ್ವೋರಪಿ ॥

(ಭಾಷ್ಯಾರ್ಥ)

ಶಾಸ್ತ್ರಾನರ್ಥಕ್ಯವು (ನಮ್ಮ ಪಕ್ಷದಲ್ಲಿ) ಇಲ್ಲವೂ ಇಲ್ಲ.[3] ಏಕೆಂದರೆ (ಲೋಕ ದಲ್ಲಿ) ಪ್ರಸಿದ್ಧವಾಗಿರುವ ಅಜ್ಞಜನರಿಗಾಗಿಯೇ ಶಾಸ್ತ್ರವು (ಬಂದಿರುತ್ತದೆ). ಅಜ್ಞರಿಗೇ ಅನಾತ್ಮಗಳಾದ ಫಲಹೇತುಗಳಲ್ಲಿ ತಾನೆಂಬ ಬುದ್ಧಿ(ಯಿರುವ)ದೇ ಹೊರತು ಜ್ಞಾನಿ ಗಳಿಗೆ (ಇರುವ)ದಿಲ್ಲ. ಜ್ಞಾನಿಗಳು ಫಲಹೇತುಗಳಿಗಿಂತ ತಾವು ಬೇರೆ ಎಂದು ತಿಳಿದು ಕೊಂಡಿರುವದರಿಂದ ಅವರಿಗೆ ಅವುಗಳಲ್ಲಿ ನಾನು ಎಂದು ಆತ್ಮಬುದ್ಧಿಯುಂಟಾಗಲೇ ಆರದು. ಅತ್ಯಂತ ಮೂಢನಾದ ಹುಚ್ಚನೇ ಮುಂತಾದವನುಕೂಡ ನೀರು ಬೆಂಕಿಗಳಿಗೂ ನೆರಳು ಬೆಳಕುಗಳಿಗೂ ಐಕ್ಯವಿದೆ (ಎಂದು) ತಿಳಿಯುವದಿಲ್ಲ. ಇನ್ನು ವಿವೇಕಿಯು (ತಿಳಿಯುವದಿಲ್ಲವೆಂದು ಹೇಳತಕ್ಕದ್ದು.) ಏನು ? ಆದ್ದರಿಂದ ಮೊದಲನೆಯದಾಗಿ ವಿಧಿಪ್ರತಿಷೇಧಶಾಸ್ತ್ರವು ಫಲಹೇತುಗಳಿಗಿಂತ ತಾನು ಬೇರೆ ಎಂದು ತಿಳಿದುಕೊಂಡವ ರಿಗೆ (ಬಂದದ್ದು)ಲ್ಲ. " ದೇವದತ್ತ, ನೀನು ಇದನ್ನು ಮಾಡು " ಎಂದು ಯಾವದಾದ

---

1. ' ಆತ್ಮದರ್ಶನಾನುಪತ್ತೇಃ ' ಎಂಬ ಹೇತುಪಂಚಮಿಯು ಹಿ ಎಂಬ ಅವ್ಯಯ ವಾದ ಮೇಲೆ ಬಂದರೆ ಪುನರುಕ್ತಿಯಾಗುತ್ತದೆ; 'ವಿದುಷಾಂ ಹಿ' ಎಂಬ ಮಾತುಗಳಿಲ್ಲದ ಮು॥ಮೈ॥ ಪಾಠದಲ್ಲಿ ಅಧ್ಯಾಹಾರವನ್ನು ಮಾಡಿಕೊಳ್ಳಬೇಕಾಗುತ್ತದೆ. ಆದ್ದರಿಂದ ಹೀಗೆ ತಿದ್ದಿಕೊಂಡಿದೆ.

2. ' ಏಕತ್ಮತಾಂ ' ಮು॥ಮೈ॥

3. ಹಿಂದೆ ಈ ದೋಷವು ಎಲ್ಲರಿಗೂ ಇದೆ ಎಂದು ಒಪ್ಪಿತ್ತು ; ಈಗ ಸ್ವಪಕ್ಷದಲ್ಲಿ ಆ ದೋಷವಿಲ್ಲವೆಂದು ತಿಳಿಸಿ ದ್ವೈತಿಗಳ ಪಕ್ಷದಲ್ಲಿ ದೋಷವಿದೆ ಎಂಬುದನ್ನು ದೃಢಪಡಿಸು ತ್ತಾರೆ.

ರೊಂದು ಕೆಲಸದಲ್ಲಿ (ಒಬ್ಬರನ್ನು) ಕಟ್ಟುಮಾಡಿದರೆ ಅಲ್ಲಿರುವ ವಿಷ್ಣುಮಿತ್ರನು (ಆ) ಅಪ್ಪಣೆಯನ್ನು ಕೇಳುತ್ತಿದ್ದರೂ "ನನಗೆ (ಈ) ಅಪ್ಪಣೆಯಾಗಿದೆ" ಎಂದು ತಿಳಿದು ಕೊಳ್ಳುವದಿಲ್ಲವಲ್ಲವೆ? (ಈ) ಅಪ್ಪಣೆಗೆ (ಯಾರು) ವಿಷಯ ಎಂಬುದನ್ನು ವಿಂಗಡಿಸಿ ಅರಿತುಕೊಳ್ಳದೆ ಇದ್ದರೆ ಮಾತ್ರ (ಹಾಗೆಂದು) ತಿಳಿದುಕೊಳ್ಳುವದು ಯುಕ್ತವಾಗುತ್ತದೆ. ಫಲಹೇತುಗಳ ವಿಷಯದಲ್ಲಿಯೂ ಹಾಗೆಯೇ[1] (ಎಂದರಿಯಬೇಕು).

(ಭಾಷ್ಯ)

೨೨೬. ನನು ಪ್ರಾಕೃತಸಂಬನ್ಧಾಪೇಕ್ಷಯಾ ಯುಕ್ತೈವ ಪ್ರತಿಪತ್ತಿಃ ಶಾಸ್ತ್ರಾರ್ಥವಿಷಯಾ ಫಲಹೇತುಭ್ಯಾಮ್ ಅನ್ಯಾತ್ಮತ್ವದರ್ಶನೇऽಪಿ ಸತಿ 'ಇಷ್ಟಫಲ ಹೇತೌ ಪ್ರವರ್ತಿತೋऽಸ್ಮಿ ಅನಿಷ್ಟಫಲಹೇತೋಶ್ಚ ನಿವರ್ತಿತೋऽಸ್ಮಿ' ಇತಿ । ಯಾಥಾ ಪಿತೃಪುತ್ರಾದಿನಾಮ್ ಇತರೇತರಾತ್ಮಾನ್ಯತ್ವದರ್ಶನೇ ಸತ್ಯಪಿ ಅನ್ಯೋನ್ಯನಿಯೋಗ ಪ್ರತಿಷೇಧಾರ್ಥಪ್ರತಿಪತ್ತಿಃ । ನ । ವ್ಯತಿರಿಕ್ತಾತ್ಮದರ್ಶನಪ್ರತಿಪತ್ತೇಃ ಪ್ರಾಗೇವ ಫಲ ಹೇತ್ವೋಃ ಆತ್ಮಾಭಿಮಾನಸ್ಯ ಸಿದ್ಧತ್ವಾತ್ । ಪ್ರತಿಪನ್ನನಿಯೋಗಪ್ರತಿಷೇಧಾರ್ಥೋ ಹಿ ಫಲಹೇತುಭ್ಯಾಮ್ ಆತ್ಮನಃ ಅನ್ಯತ್ವಂ ಪ್ರತಿಪದ್ಯತೇ ನ ಪೂರ್ವಮ್ । ತಸ್ಮಾತ್ ವಿಧಿಪ್ರತಿಷೇಧಶಾಸ್ತ್ರಮ್ ಅವಿದ್ವದ್ವಿಷಯಮ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

(ಆಕ್ಷೇಪ): ಫಲಹೇತುಗಳಿಂದಲೂ ಬೇರೆಯಾದವನು ತಾನೆಂಬ ತಿಳಿವಳಿಕೆ ಯಿದ್ದರೂ ಪ್ರಕೃತಿಯ ಸಂಬಂಧದ ಕಾರಣದಿಂದ[2] "ಇಷ್ಟಫಲಕ್ಕೆ ಹೇತುವಾದ (ಧರ್ಮ)ದಲ್ಲಿ (ಶಾಸ್ತ್ರದಿಂದ) ಪ್ರವರ್ತಿತನಾಗಿರುತ್ತೇನೆ, ಅನಿಷ್ಟಫಲಕ್ಕೆ ಹೇತುವಾದ (ಅಧರ್ಮ)ದಿಂದ ನಿವರ್ತಿತನಾಗಿರುತ್ತೇನೆ" ಎಂದು ಶಾಸ್ತ್ರದ ಅರ್ಥದ ವಿಷಯವಾಗಿ ತಿಳಿವಳಿಕೆಯುಂಟಾಗುವದು ಯುಕ್ತವೇ ಆಗಿದೆಯಲ್ಲ! ತಂದೆ, ಮಗ ಮುಂತಾದ ವರು ತಾವು ಒಬ್ಬರಿಗಿಂತ ಒಬ್ಬರು ಬೇರೆ ಎಂದು ತಿಳಿದುಕೊಂಡಿದ್ದರೂ (ಒಬ್ಬರಿಗೊಬ್ಬರಿಗೆ ಇರುವ ಸಂಬಂಧದ ನಿಮಿತ್ತದಿಂದ) ಒಬ್ಬರಿಗೆ ವಿಧಿಸಿದ್ದನ್ನೂ ನಿಷೇಧಿಸಿದ್ದನ್ನೂ

---

1. ನಾನು ಅಕರ್ತೃವಾದ ಆತ್ಮನು—ಎಂದು ತಿಳಿದುಕೊಳ್ಳದಿರುವಾತನೇ ವಿಧಿಪ್ರತಿಷೇಧಶಾಸ್ತ್ರವು ತನಗಾಗಿ ಹೊರಟಿದೆ ಎಂದು ತಿಳಿದುಕೊಳ್ಳುತ್ತಾನೆ.

2. ದೇಹದ ಸಂಬಂಧದ ನಿಮಿತ್ತದಿಂದ ಎಂದರ್ಥ. ಫಲಹೇತುಗಳಿಗಿಂತ ಬೇರೆ ಎಂಬ ತಿಳಿವಳಿಕೆಯೆಂದರೆ ದೇಹಾದಿಗಳು ಸತ್ಯವೆಂಬ ತಿಳಿವಳಿಕೆಯೂ ಇರುತ್ತದೆ ಎಂದು ಪೂರ್ವಪಕ್ಷಿ ಭಾವಿಸಿರುತ್ತಾನೆ.

ಇನ್ನೊಬ್ಬರು (ತಮಗೆ ವಿಧಿಸಿದೆ, ನಿಷೇಧಿಸಿದೆ) ಎಂದು ತಿಳಿದುಕೊಳ್ಳುವದು ಹೇಗೋ[1] (ಹಾಗೆ ಆತ್ಮಜ್ಞಾನಿಯೂ ತಿಳಿದುಕೊಳ್ಳಬಹುದಲ್ಲ) !

(ಪರಿಹಾರ) :—ಹಾಗಲ್ಲ. ಏಕೆಂದರೆ ಬೇರೆಯಾಗಿರುವ ಆತ್ಮನೇ ನಾನೆಂಬ ತಿಳಿವಳಿಕೆ(ಯುಂಟಾಗುವ) ಮೊದಲೇ ಫಲಹೇತುಗಳಲ್ಲಿ ತಾನೆಂಬ ಅಭಿಮಾನವು ಸಿದ್ಧವಾಗಿರುತ್ತದೆ. ವಿಧಿನಿಷೇಧಗಳ ಅರ್ಥವನ್ನು ತಿಳಿದುಕೊಂಡು (ಅನುಷ್ಠಾನ ಮಾಡಿದವನೇ) ತಾನು ಫಲಹೇತುಗಳಿಗಿಂತ ಬೇರೆ ಎಂದು ತಿಳಿದುಕೊಳ್ಳುತ್ತಾನೆಯೇ ಹೊರತು ಮೊದಲು ತಿಳಿದುಕೊಳ್ಳುವದಿಲ್ಲ[2]. ಆದ್ದರಿಂದ ವಿಧಿಪ್ರತಿಷೇಧಗಳನ್ನು ತಿಳಿಸುವ ಶಾಸ್ತ್ರವು ಅಜ್ಞರ ವಿಷಯವೆಂದು ಸಿದ್ಧವಾಯಿತು.

(ಭಾಷ್ಯ)

೭೨೩. ನನು "ಸ್ವರ್ಗಕಾಮೋ ಯಜೇತ" (?) "ನ ಕಲಞ್ಜಂ ಭಕ್ಷಯೇತ್" (?) ಇತ್ಯಾದೌ ಆತ್ಮವ್ಯತಿರೇಕದರ್ಶಿನಾಮ್ ಅಪ್ರವೃತ್ತೌ ಕೇವಲದೇಹಾದ್ಯಾತ್ಮದೃಷ್ಟೀನಾಂ ಚ, ಅತಃ ಕರ್ತುರಭಾವಾತ್ ಶಾಸ್ತ್ರಾನರ್ಥಕ್ಯಮ್ ಇತಿ ಚೇತ್ । ನ । ಯಥಾಪ್ರಸಿದ್ಧಿತ[3] ಏವ ಪ್ರವೃತ್ತಿನಿವೃತ್ತ್ಯುಪಪತ್ತೇಃ । ಈಶ್ವರಕ್ಷೇತ್ರಜ್ಞೈಕತ್ವದರ್ಶೀ ಬ್ರಹ್ಮವಿತ್ ತಾವತ್ ನ ಪ್ರವರ್ತತೇ । ತಥಾ ನೈರಾತ್ಮ್ಯವಾದ್ಯಪಿ ನಾಸ್ತಿ ಪರಲೋಕಃ ಇತಿ ನ ಪ್ರವರ್ತತೇ । ಯಥಾಪ್ರಸಿದ್ಧಸ್ತು[4] ವಿಧಿಪ್ರತಿಷೇಧಶಾಸ್ತ್ರಶ್ರವಣಾನ್ಯಥಾನುಪಪತ್ತ್ಯಾ[5] ಅನುಮಿತಾತ್ಮಾಸ್ತಿತ್ವಃ ಆತ್ಮವಿಶೇಷಾನಭಿಜ್ಞಃ ಕರ್ಮಫಲಸಞ್ಜಾತತೃಷ್ಣಃ ಶ್ರದ್ದಧಾನತಯಾ[6] ಚ ಪ್ರವರ್ತತೇ ಇತಿ ಸರ್ವೇಷಾಂ ನಃ ಪ್ರತ್ಯಕ್ಷಮ್ । ಅತಃ ನ ಶಾಸ್ತ್ರಾನರ್ಥಕ್ಯಮ್ । ವಿವೇಕಿನಾಮ್ ಅಪ್ರವೃತ್ತಿದರ್ಶನಾತ್[7] ತದನುಗಾಮಿನಾಮ್ ಅಪ್ರವೃತ್ತೌ ಶಾಸ್ತ್ರಾನರ್ಥಕ್ಯಮ್

---

1. ತಂದೆಗೆ ವಿಧಿಸಿದ್ದ ಕರ್ಮವನ್ನು ಮಗನಿಗೆ ಒಪ್ಪಿಸುವ **ಸಂಪ್ರತ್ತಿಕರ್ಮವನ್ನು** ಬೃ. ೧-೫-೧೭ರಲ್ಲಿ ವರ್ಣಿಸಿದೆ.

2. ತಂದೆಮಕ್ಕಳ ದೃಷ್ಟಾಂತದಲ್ಲಿ ಇಬ್ಬರಿಗೂ ತಾವು ಕರ್ಮಕ್ಕೆ ಅಧಿಕಾರಿಗಳೆಂಬ ಅರಿವು ಇರುತ್ತದೆ; ಆದರೆ ಆತ್ಮಜ್ಞಾನಿಗೆ ಕರ್ಮಶ್ರುತಿಗಳನ್ನು ಕೇಳಿದರೂ ತಾನು ಅಕರ್ತೃ, ಅಶರೀರಿ—ಎಂಬ ಅರಿವಿರುವದರಿಂದ ಕರ್ಮಾಧಿಕಾರವಿರುವದಿಲ್ಲ.

3. 'ಯಥಾಪ್ರಸಿದ್ಧ ಏವ' ಮು|| ಎಂಬುದಕ್ಕಿಂತ ಇದೇ ಉತ್ತಮವೆಂದು ತೋರುತ್ತದೆ.

4. '**ಯಥಾಪ್ರಸಿದ್ಧಿತಸ್ತು**' ಅ|| ಶಿ|| ಗು|| ವಾ||

5. 'ಪ್ರತಿಷೇಧಶ್ರವಣಾ....' ಷು||

6. 'ಶ್ರದ್ದಧಾನಃ' ಮು||

7. 'ಪ್ರವೃತ್ತ್ಯದರ್ಶನಾತ್' ಮು||

ಇತಿ ಚೇತ್ । ನ । ಕಸ್ಯಚಿದೇವ ವಿವೇಕೋಪಪತ್ತೇಃ । ಅನೇಕೇಷು ಹಿ ಪ್ರಾಣಿಷು ಕಶ್ಚಿದೇವ ವಿವೇಕೀ ಸ್ಯಾತ್ ಯಥಾ[1] ಇದಾನೀಮ್ । ನ ಚ ವಿವೇಕಿನಮ್ ಅನು ವರ್ತನ್ತೇ ಮೂಢಾಃ । ರಾಗಾದಿದೋಷತನ್ತ್ರತ್ವಾತ್ ಪ್ರವೃತ್ತೇಃ । ಅಭಿಚರಣಾದೌ ಚ ಪ್ರವೃತ್ತಿದರ್ಶನಾತ್ । ಸ್ವಾಭಾವ್ಯಾಚ್ಚ ಪ್ರವೃತ್ತೇಃ । "ಸ್ವಭಾವಸ್ತು ಪ್ರವರ್ತತೇ (೫-೧೪) ಇತಿ ಹಿ ಉಕ್ತಮ್ ॥

(ಭಾಷ್ಯಾರ್ಥ)

'ಸ್ವರ್ಗಕಾಮನು ಯಾಗ ಮಾಡಬೇಕು' (?) "ಕಲಂಜವನ್ನು[2] ತಿನ್ನ ಬಾರದು" (?)–(ಎಂಬಿವೇ) ಮುಂತಾದ (ವಿಧಿನಿಷೇಧ)ಗಳಲ್ಲಿ ಆತ್ಮನು (ಫಲ ಹೇತುಗಳಿಗಿಂತ) ಬೇರೆಯೆಂದು ತಿಳಿದವರೂ ಕೇವಲ ದೇಹಾದಿಗಳೇ ತಾವೆಂದು ತಿಳಿ ದವರೂ[3] ತೊಡಗದಿದ್ದಮೇಲೆ ಆಗ (ಶಾಸ್ತ್ರಕರ್ಮಾನುಷ್ಠಾನಕ್ಕೆ) ಕರ್ತೃವೇ ಇಲ್ಲವೆಂ ದಾಗುವದರಿಂದ ಶಾಸ್ತ್ರವು ವ್ಯರ್ಥವೇ (ಆಗುವದಲ್ಲ)!

(ಪರಿಹಾರ): ಹಾಗಲ್ಲ. (ಲೋಕ) ಪ್ರಸಿದ್ಧಿಯಿಂದಲೇ[4] ಪ್ರವೃತ್ತಿನಿವೃತ್ತಿ ಗಳು ಆಗಬಹುದಾಗಿರುತ್ತದೆ. (ಹೇಗೆಂದರೆ) ಮೊದಲನೆಯದಾಗಿ ಈಶ್ವರನೂ ಕ್ಷೇತ್ರಜ್ಞನೂ ಒಬ್ಬನೇ–ಎಂದು ಅರಿತ ಬ್ರಹ್ಮಜ್ಞಾನಿಯು (ಕರ್ಮದಲ್ಲಿ) ತೊಡಗುವ ದಿಲ್ಲ; ಇದರಂತೆ ಆತ್ಮನೇ ಇಲ್ಲವೆನ್ನುವವನೂ ಪರಲೋಕವಿಲ್ಲ–ಎಂದು (ಭಾವಿಸಿರು ವದರಿಂದ) ತೊಡಗುವದಿಲ್ಲ. ಆದರೆ ವಿಧಿಪ್ರತಿಷೇಧಶಾಸ್ತ್ರವನ್ನು ಕೇಳಿ (ಈ ಶಾಸ್ತ್ರವು ಆತ್ಮನಿದ್ದರೆ ಹೊಂದುವದೇ ಹೊರತು) ಮತ್ತೊಂದು ರೀತಿಯಿಂದ ಹೊಂದುವದಿಲ್ಲ ವೆಂಬ (ಕಾರಣ)ದಿಂದ ಆತ್ಮನಿರಬೇಕೆಂದು ಅನುಮಾನಪ್ರಮಾಣದಿಂದ ನಿಶ್ಚಯಿಸಿ ದರೂ ಆತ್ಮನು ಇಂಥವನೆಂದು ಗೊತ್ತಾಗಿ ಅರಿಯದೆ ಇರುವ ಲೋಕಪ್ರಸಿದ್ಧನಾದ (ಪುರುಷನು) ಮಾತ್ರ ಕರ್ಮಫಲದಲ್ಲಿ ಆಶೆಯುಂಟಾದವನಾಗಿ ಶ್ರದ್ಧೆಯಿಂದ (ಕರ್ಮ

---

1. 'ಯಥೈಷ' ಮು॥

2. ಕಲಂಜವೆಂದರೆ ಒಂದು ಬಗೆಯ ಗಿಡವೆಂದು ಕೆಲವರು ವಿಷವನ್ನು ಬಳಿದ ಬಾಣ ಸಂಪರ್ಕವುಳ್ಳ ಮಾಂಸವೆಂದು ಮತ್ತೆ ಕೆಲವರು ಹೇಳುತ್ತಾರೆ.

3. ಶೂನ್ಯವಾದಿಗಳೂ ಇವರಲ್ಲಿಯೇ ಸೇರುತ್ತಾರೆ.

4. ಶಾಸ್ತ್ರಕ್ಕೊಪ್ಪಾದ ಪ್ರಸಿದ್ಧಿಯಿಂದ' ಎಂಬ ಆ॥ ವ್ಯಾಖ್ಯಾನವು ಭಾಷ್ಯದ ವಾಕ್ಯ ಶೇಷಕ್ಕೆ ಅನುಗುಣವಲ್ಲ.

ದಲ್ಲಿ) ತೊಡಗುತ್ತಾನೆ.[1]- ಹೀಗೆಂಬುದು ನಮ್ಮೆಲ್ಲರಿಗೂ ಪ್ರತ್ಯಕ್ಷವಾಗಿರುತ್ತದೆ. ಆದ್ದರಿಂದ ಶಾಸ್ತ್ರವು ವ್ಯರ್ಥವಲ್ಲ.

(ಆಕ್ಷೇಪ) .— ವಿವೇಕಿಗಳು (ಕರ್ಮಗಳಲ್ಲಿ) ತೊಡಗದೆ ಇರುವದನ್ನು ಕಂಡು ಅವರನ್ನು ಹಿಂಬಾಲಿಸುವವರು (ಕರ್ಮಗಳಲ್ಲಿ) ತೊಡಗದೆ ಹೋಗಲಾಗಿ ಶಾಸ್ತ್ರವು ವ್ಯರ್ಥವೇ ಆಗುವದಲ್ಲ) !

(ಪರಿಹಾರ) : — ಹಾಗಲ್ಲ. ಏಕೆಂದರೆ ಯಾವನಿಗೋ ಒಬ್ಬನಿಗೆ ಮಾತ್ರ ವಿವೇಕವುಂಟಾದೀತು. ಅನೇಕ ಜೀವರಲ್ಲಿ ಯಾವನೋ ಒಬ್ಬನು ಮಾತ್ರ–ಈಗಿನ (ಕಾಲ)ದಂತೆಯೇ[2] ವಿವೇಕಿಯಾಗುವನು. ವಿವೇಕಿಗಳನ್ನು ಮೂಢರು ಅನುಸರಿಸುವದೂ ಇಲ್ಲ ; ಏಕೆಂದರೆ (ಕರ್ಮದಲ್ಲಿ) ತೊಡಗುವದೆಂಬುದು ರಾಗವೇ ಮುಂತಾದ ದೋಷಗಳಿಗಧೀನವಾಗಿರುತ್ತದೆ[3] ; ಮಾಟವೇ ಮುಂತಾದ ಕರ್ಮಗಳಲ್ಲಿ (ಜನರು) ತೊಡಗುತ್ತಿರುವದೂ ಕಂಡುಬರುತ್ತದೆ[4]. ಪ್ರವೃತ್ತಿಯೆಂಬುದು (ಜೀವರಿಗೆ) ಸ್ವಭಾವದಿಂದ (ಆಗುವ) ದೂ (ಆಗಿರುತ್ತದೆ) ಯಾದ್ದರಿಂದಲೂ (ಹೀಗೆಂದು ತಿಳಿಯಬೇಕು). “ ಆದರೆ ಸ್ವಭಾವವೇ ತೊಡುಗುತ್ತದೆ ” (೫-೧೪) ಎಂದಲ್ಲವೆ, ಹಿಂದೆ ಹೇಳಿರುತ್ತದೆ ?

---

1. ಜ್ಞಾನಿಗಳೂ ನಾಸ್ತಿಕರೂ ಕರ್ಮದಲ್ಲಿ ತೊಡಗದಿದ್ದರೂ ಆಸ್ತಿಕರು ಲೋಕದಲ್ಲಿ ಪ್ರಸಿದ್ಧರಾಗಿರುವವರಿಂದ ಕರ್ಮಶಾಸ್ತ್ರಕ್ಕೆ ಅಧಿಕಾರಿಗಳಿಲ್ಲವೆನ್ನುವದು ಸರಿಯಲ್ಲ ಎಂಬುದು ಉತ್ತರದ ಸಾರವು. ಅತ್ಯಂತ ಅಜ್ಞನೂ ಆತ್ಮಜ್ಞನೂ ಕರ್ಮಕ್ಕೆ ಅಧಿಕಾರಿಗಳಲ್ಲ ; ದೇಹಾದಿಗಳಿಗಿಂತ ಬೇರೆಯಾಗಿ ಕರ್ತೃಭೋಕ್ತೃರೂಪನಾದ ಆತ್ಮನು ನಾನು ಎಂದು ಶಾಸ್ತ್ರವಚನಗಳಿಂದ ಊಹಿಸಿ ಲೋಕಾಂತರಜನ್ಮಾಂತರಫಲಗಳಿಗಾಗಿ ಕರ್ಮದಲ್ಲಿ ತೊಡುಗುವವರೇ ಅಧಿಕಾರಿಗಳು.

2. ಈಗಿನ ಕಾಲದಲ್ಲಿ ಜ್ಞಾನಿಗಳಾದವರು ಬಹಳ ಜನವೇನೂ ಇಲ್ಲ ; ಮುಂದೆಯೂ ಹಾಗೆಯೇ ಕೆಲವರೇ ಇರುತ್ತಾರೆ.

3. ರಾಗದ್ವೇಷಭಯಾದಿಗಳಿಗೆ ವಶರಾಗಿರುವವರು ತಮ್ಮತಮ್ಮ ಕೆಲಸವನ್ನು ಮಾಡುವರೇ ಹೊರತು ವಿವೇಕಿಗಳನ್ನು ನೋಡಿ ಕರ್ಮಸಂನ್ಯಾಸವನ್ನು ಮಾಡರು.

4. ಕರ್ಮಿಗಳು ಉತ್ತಮ ಕರ್ಮಗಳಲ್ಲಿ ತೊಡಗುತ್ತಿದ್ದರೂ ದುಷ್ಟರು ಮಾಟವೇ ಮುಂತಾದವುಗಳಲ್ಲಿ ತೊಡಗುತ್ತಾರೆ. ವಿವೇಕಿಗಳನ್ನು ಎಲ್ಲರೂ ಅನುಸರಿಸುವದಿಲ್ಲವೆಂಬುವಕ್ಕೆ ಇದೊಂದು ಸಾಕ್ಷಿಯೆಂದು ಭಾವ. ಶಾಸ್ತ್ರಾನರ್ಥಕ್ಯಪರಿಹಾರವನ್ನು ತೈ. ಭಾ. ಭಾ. ೭೮, ೭೯; ಪ್ರ. ಭಾ. ಭಾ. ೧೦೯ ; ಬೃ. ಭಾ. ೨-೧-೨೦ ಮುಂತಾದ ಭಾಷ್ಯಗಳಲ್ಲಿ ಮಾಡಿರುವದನ್ನು ಇದಕ್ಕೆ ಹೋಲಿಸಿ.

## ಸಂಸಾರವು ಅವಿದ್ಯಾಕಲ್ಪಿತವ್ಯವಹಾರವೇ

(ಭಾಷ್ಯ)

೨೨೪. ತಸ್ಮಾತ್ ಅವಿದ್ಯಾಮಾತ್ರಂ ಸಂಸಾರಃ ಯಥಾದೃಷ್ಟವಿಷಯ ಏವ । ನ ಕ್ಷೇತ್ರಜ್ಞಸ್ಯ ಕೇವಲಸ್ಯ ಅವಿದ್ಯಾ ತತ್ಕಾರ್ಯಂ ಚ । ನ ಚ ಮಿಥ್ಯಾಜ್ಞಾನಂ ಪರಮಾರ್ಥವಸ್ತು ದೂಷಯಿತುಂ ಸಮರ್ಥಮ್ । ನ ಹಿ ಊಷರದೇಶಂ ಸ್ನೇಹೇನ ಪಙ್ಕೀಕರ್ತುಂ ಶಕ್ನೋತಿ ಮರೀಚ್ಯುದಕಮ್ । ತಥಾ ಅವಿದ್ಯಾ ಕ್ಷೇತ್ರಜ್ಞಸ್ಯ ನ ಕಿಂಚಿತ್ ಕರ್ತುಂ ಶಕ್ನೋತಿ । ಅತಶ್ಚ [1]ಇದಮುಕ್ತಂ "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ" (೧೩-೨), "ಅಜ್ಞಾನೇನಾವೃತಂ ಜ್ಞಾನಮ್" (೫-೧೫) ಇತಿ ಚ ॥

(ಭಾಷ್ಯಾರ್ಥ)

ಆದ್ದರಿಂದ ಸಂಸಾರವು ಬರಿಯ ಅವಿದ್ಯೆಯೇ[2], ಇದು (ಲೋಕದಲ್ಲಿ) ಕಂಡು ಬರುವ (ಅಜ್ಞರ) ವಿಷಯವೇ[3]; ಬರಿಯ[4] ಕ್ಷೇತ್ರಜ್ಞನಿಗೆ ಅವಿದ್ಯೆಯಾಗಲಿ ಅದರ ಕಾರ್ಯವಾಗಲಿ ಇಲ್ಲ. ತಪ್ಪುತಿಳಿವಳಿಕೆಯು ಪರಮಾರ್ಥವಸ್ತುವಿನಲ್ಲಿ ಯಾವ ದೋಷವನ್ನೂ ಉಂಟುಮಾಡಲಾರದು. ಬಿಸಿಲುಕುದುರೆಯ ನೀರು ಚೌಳು ನೆಲವನ್ನು ತೇವದಿಂದ ಕೆಸರುಮಾಡಲಾರದಷ್ಟೆ. ಹೀಗೆಯೇ ಅವಿದ್ಯೆಯು ಕ್ಷೇತ್ರಜ್ಞನಲ್ಲಿ ಯಾವ (ದೋಷವನ್ನೂ) ಉಂಟುಮಾಡಲಾರದು. ಆದ್ದರಿಂದ "ಕ್ಷೇತ್ರಜ್ಞನನ್ನು ನನ್ನನ್ನಾಗಿ ತಿಳಿ" (೧೩-೨) ಎಂದೂ "ಅಜ್ಞಾನದಿಂದ ಜ್ಞಾನವು ಮುಸುಕಲ್ಪಟ್ಟಿರುತ್ತದೆ" (೫-೧೫) ಎಂದೂ (ಈ ಗೀತೆಯಲ್ಲಿ) ಹೇಳಿರುತ್ತದೆ.

## ಪಂಡಿತಮೂರ್ಖರು

(ಭಾಷ್ಯ)

೨೨೫. ಅಥ ಕಿಮಿದಂ ಸಂಸಾರಿಣಾಮಿವ 'ಅಹಮ್ ಏವಮ್' 'ಮಮ ಇದಮ್[5]' ಇತಿ ಪಣ್ಡಿತಾನಾಮಪಿ? ಶೃಣು । ಇದಂ ತತ್ಪಾಣ್ಡಿತ್ಯಂ ಯತ್ ಕ್ಷೇತ್ರೇ

---

1. 'ಅತ ಇದಮ್' ಮ॥; 'ಅತ ಉಕ್ತಮಿದಮ್' ಮೈ॥

2. ಅವಿದ್ಯಾಕಲ್ಪಿತವೇ.

3. 'ಯಥಾದೃಷ್ಟ' ಎಂದರೆ ಪ್ರತ್ಯಕ್ಷಾನುಸಾರಿಯಾದ ಅಜ್ಞನು ಎಂದರ್ಥ_ಎಂಬ ಆ॥ ವ್ಯಾಖ್ಯಾನಕ್ಕಿಂತ ಸಮ್ಮ ಅನುವಾದವೇ ಹೆಚ್ಚು ಪ್ರಕೃತಾನುಸಾರಿಯೆಂದು ತೋರುವದು.

4. ಉಪಾಧಿಗಳಾದ ದೇಹೇಂದ್ರಿಯಾದಿಗಳ ಸಂಪರ್ಕವಿಲ್ಲದ.

5. "ಅಹಮೇವಮ್, ಮಮೈವೇದಮ್" ಆ॥ನಿ॥ಗು॥ವಾ॥ ; 'ಅಹಂ ಮಮೇದಮಿತಿ' ಮ॥; ಇಲ್ಲಿ ಕೊಟ್ಟಿರುವದು ಮೈ॥ ಪಾಠ.

ಏವ ಆತ್ಮದರ್ಶನಮ್। ಯದಿ ಪುನಃ ಕ್ಷೇತ್ರಜ್ಞಮ್ ಅವಿಕ್ರಿಯಂ ಪಶ್ಯೇಯುಃ ತತಃ ನ ಭೋಗಂ ಕರ್ಮ ವಾ ಆಕಾಙ್ಕ್ಷೇಯುಃ 'ಮಮ ಸ್ಯಾತ್' ಇತಿ। ವಿಕ್ರಿಯೈವ ಭೋಗಕರ್ಮಣೀ[1]। ಅಥ ಏವಂ ಸತಿ ಫಲಾರ್ಥಿತ್ವಾತ್ ಅವಿದ್ವಾನ್ ಪ್ರವರ್ತತೇ। ವಿದುಷಃ ಪುನಃ ಅವಿಕ್ರಿಯಾತ್ಮದರ್ಶಿನಃ ಫಲಾರ್ಥಿತ್ವಾಭಾವಾತ್ ಪ್ರವೃತ್ತ್ಯನುಪಪತ್ತೌ ಕಾರ್ಯಕರಣಸಙ್ಘಾತವ್ಯಾಪಾರೋಪರಮೇ ನಿವೃತ್ತಿಃ ಉಪಚರ್ಯತೇ॥

(ಭಾಷ್ಯಾರ್ಥ)

(ಆಕ್ಷೇಪ): ಹಾಗಾದರೆ ಸಂಸಾರಿಗಳಂತೆ ಪಂಡಿತರಿಗೂ "ನಾನು ಹೀಗೆ (ಇರುವೆನು)" 'ಇದು ನನ್ನದು' ಎಂದು (ಭಾವನೆಯಿರುವದಲ್ಲ), ಇದೇನು?

(ಪರಿಹಾರ):— ಕೇಳು. ಕ್ಷೇತ್ರದಲ್ಲಿಯೇ ಆತ್ಮನೆಂಬ ಬುದ್ಧಿಯಿರುವದೇ ಅವರ ಈ ಪಾಂಡಿತ್ಯವು[2]. ಹಾಗಿಲ್ಲದೆ ಅವರು ವಿಕಾರವಿಲ್ಲದ ಕ್ಷೇತ್ರಜ್ಞನನ್ನೇ ಕಂಡುಕೊಂಡಿದ್ದರೆ, ಆಗ ಭೋಗವನ್ನಾಗಲಿ ಕರ್ಮವನ್ನಾಗಲಿ ನನಗೆ ಆಗಲಿ ಎಂದು ಬಯಸುತ್ತಿರಲಿಲ್ಲ. ಭೋಗಕರ್ಮಗಳೆರಡೂ ವಿಕಾರವೇ. ಹೀಗಿರುವದರಿಂದ ಅಜ್ಞನು ಫಲವನ್ನು ಬಯಸುವವನಾದ್ದರಿಂದ ಬಯಸುತ್ತಾನೆ. ವಿಕಾರರಹಿತನಾದ ಆತ್ಮನನ್ನು ಕಂಡುಕೊಂಡಿರುವ **ಆತ್ಮಜ್ಞಾನಿಗೆ ಮಾತ್ರ ಫಲವನ್ನು ಬಯಸುವದೆಂಬುದು ಇಲ್ಲದ್ದರಿಂದ (ಅವನು ಕರ್ಮದಲ್ಲಿ) ತೊಡಗುವದೆಂಬುದು ಹೊಂದುವದಿಲ್ಲವಾದಕಾರಣ ಕಾರ್ಯಕರಣಸಂಘಾತದ ವ್ಯಾಪಾರವು (ತಾನೇ) ನಿಲ್ಲಲು ನಿವೃತ್ತಿ(ಯನ್ನು ಅನುಸರಿಸುತ್ತಾನೆಂದು) ಉಪಚಾರಕ್ಕೆ ಹೇಳುತ್ತಾರೆ.**

(ಭಾಷ್ಯ)

೨೨೬. ಇದಂ ಚ ಅನ್ಯತ್ ಪಾಣ್ಡಿತ್ಯಂ ಕೇಷಾಂಚಿತ್[3] ಅಸ್ತು। ಕ್ಷೇತ್ರಜ್ಞಃ ಈಶ್ವರ ಏವ। ಕ್ಷೇತ್ರಂ ಚ ಅನ್ಯತ್ ಕ್ಷೇತ್ರಜ್ಞಸ್ಯೈವ ವಿಷಯಃ। ಅಹಂ ತು ಸಂಸಾರೀ ಸುಖೀ ದುಃಖೀ[4]। ಸಂಸಾರೋಪರಮಶ್ಚ[5] ಮಮ ಕರ್ತವ್ಯಃ ಕ್ಷೇತ್ರಕ್ಷೇತ್ರಜ್ಞ ವಿಜ್ಞಾನೇನ ಧ್ಯಾನೇನ ಚ ಈಶ್ವರಂ ಕ್ಷೇತ್ರಜ್ಞಂ ಸಾಕ್ಷಾತ್ಕೃತ್ವಾ ತತ್ಸ್ವ

1. "ವಿಕ್ರಿಯೈವ ಹಿ ಭೋಗಾಃ ಕರ್ಮಾಣಿ ಚ" ಮ॥

2. ಆತ್ಮನು ಅಹಂಪ್ರತ್ಯಯಕ್ಕೆ ವಿಷಯನೆಂದು ಬಗೆಯುವ ದ್ವೈತಿಗಳ ಮತವಿದು. ಅಹಂಕಾರವು ಕ್ಷೇತ್ರವೇ ಎಂದೂ ಆತ್ಮನು ಅಹಂಪ್ರತ್ಯಯಕ್ಕೂ ಸಾಕ್ಷಿಯೆಂದೂ ಹೇಳುವ ಗೀತೋಪದೇಶಕ್ಕೆ ಇವರ ಮತವು ವಿರುದ್ಧ.

3. 'ಕಸ್ಯಚಿತ್' ನಿ॥

4. 'ಚ' ಹೆಚ್ಚಾಗಿ ಅ॥ ನಿ॥ ಗು॥

5. 'ಸಂಸಾರೋಪರಮಸ್ತು'

ರೂಪಾವಸ್ಥಾನೇನ ಇತಿ। ಯಶ್ಚ ಏವಂ ಬುಧ್ಯತೇ ಯಶ್ಚ ಬೋಧಯತಿ ನಾಸೌ ಕ್ಷೇತ್ರಜ್ಞ ಇತ್ಯೇವಂ ಮನ್ವಾನಃ[1] ಸ ಪಣ್ಡಿತಾಪಸದಃ ಸಂಸಾರಮೋಕ್ಷಯೋಃ ಶಾಸ್ತ್ರಸ್ಯ ಚ ಅರ್ಥವತ್ತ್ವಂ ಕರೋಮಿ ಇತಿ ಆತ್ಮಹಾ ಸ್ವಯಂ ಮೂಢಃ ಅನ್ಯಾಂಶ್ಚ ವ್ಯಾಮೋಹಯತಿ ಶಾಸ್ತ್ರಾರ್ಥಸಂಪ್ರದಾಯರಹಿತತ್ವಾತ್ ಶ್ರುತಹಾನಿಮ್ ಅಶ್ರುತ ಕಲ್ಪನಾಂ ಚ ಕುರ್ವನ್। ತಸ್ಮಾತ್ ಅಸಂಪ್ರದಾಯವಿತ್ ಸರ್ವಶಾಸ್ತ್ರವಿದಪಿ ಮೂರ್ಖವದೇವ[2] ಉಪೇಕ್ಷಣೀಯಃ ॥

(ಭಾಷ್ಯಾರ್ಥ)

ಮತ್ತೆ **ಕೆಲವರ ಬೇರೊಂದು (ಬಗೆಯ) ಈ ಪಾಂಡಿತ್ಯವೂ ಆಗಲಿ!** "ಕ್ಷೇತ್ರಜ್ಞನು ಈಶ್ವರನೇ; ಕ್ಷೇತ್ರವೂ ಬೇರೆಯಾಗಿ ಕ್ಷೇತ್ರಜ್ಞನಿಗೇ ವಿಷಯ (ವಾಗಿರುತ್ತದೆ). ನಾನು ಮಾತ್ರ ಸಂಸಾರಿಯು; ಸುಖಿಯು, ದುಃಖಿಯು; ಕ್ಷೇತ್ರ ಕ್ಷೇತ್ರಜ್ಞರನ್ನು ಅರಿತುಕೊಳ್ಳುವದರಿಂದಲೂ ಧ್ಯಾನದಿಂದ ಕ್ಷೇತ್ರಜ್ಞನಾದ ಈಶ್ವರನನ್ನು ಸಾಕ್ಷಾತ್ಕಾರಮಾಡಿಕೊಂಡು ಆತನ ಸ್ವರೂಪದಲ್ಲಿ ನೆಲೆನಿಲ್ಲುವದರಿಂದಲೂ ನಾನು ಸಂಸಾರದ ನಾಶವನ್ನು ಮಾಡಿಕೊಳ್ಳಬೇಕಾಗಿದೆ[3]." ಯಾವನು ಹೀಗೆಂದು ತಿಳಿಯುವನೋ ಮತ್ತು ಇವನು ಕ್ಷೇತ್ರಜ್ಞನಲ್ಲ ಎಂದು ಭಾವಿಸಿ ಯಾವನು (ಮತ್ತೊಬ್ಬನಿಗೆ) ಬೋಧಿಸುವನೋ ಆ ಪಂಡಿತಮೂರ್ಖನು[4] ಸಂಸಾರಮೋಕ್ಷಗಳಿಗೂ ಶಾಸ್ತ್ರಕ್ಕೂ ಸಾರ್ಥಕ್ಯವನ್ನು ಕಲ್ಪಿಸುತ್ತೇನೆಂದು[5] ಆತ್ಮಹತ್ಯೆಯನ್ನು ಮಾಡಿಕೊಂಡು[6]

---

1. ಅಚ್ಚಿನ ಪುಸ್ತಕಗಳಲ್ಲಿರುವ 'ಯಃ' ಬೇಕಿಲ್ಲ; ಅಥವಾ ಅನ್ವಯಕ್ಕಾಗಿ ಮತ್ತೆ ಹಾಕಿಕೊಂಡದ್ದೆಂದು ಭಾವಿಸಬೇಕು.

2. 'ಮೂರ್ಖ ಇವ' ಮ॥

3. ಈ ಮತದಲ್ಲಿ ಮಹಾಭೂತಾದಿಧೃತ್ಯಂತವಾದ ತತ್ತ್ವಗಳ ಗುಂಪು ಕ್ಷೇತ್ರವು; ಇದನ್ನರಿಯುವ ಈಶ್ವರನು ಕ್ಷೇತ್ರಜ್ಞನು. ಕ್ಷೇತ್ರಜ್ಞನನ್ನು ಅರಿತು ಧ್ಯಾನಿಸಿ ಸಾಕ್ಷಾತ್ಕಾರ ಮಾಡಿಕೊಂಡರೆ ಸತ್ತ ಬಳಿಕ ಈಶ್ವರಸಾಯುಜ್ಯವಾಗುವದು.

4. ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನು ಈಶ್ವರನೇ ಎಂದು ಹೇಳಿದ್ದರೂ ತಾನು ಕ್ಷೇತ್ರಜ್ಞನಲ್ಲವೆಂಬ ಅರ್ಥವನ್ನು ತೆಗೆಯುವ ಪಾಂಡಿತ್ಯವು ಮೂರ್ಖತನವೇ.

5. ಸಂಸಾರಮೋಕ್ಷಗಳೂ ಸತ್ಯ, ಶಾಸ್ತ್ರೋಕ್ತರೀತಿಯಿಂದ ಧ್ಯಾನಮಾಡಿ ಪರಮೇಶ್ವರ ಸಾಯುಜ್ಯವನ್ನು ಪಡೆಯಬೇಕಾದ್ದರಿಂದ ಶಾಸ್ತ್ರವೂ ವ್ಯರ್ಥವಲ್ಲ—ಎಂದು ಪೂರ್ವಪಕ್ಷಿಯ ಭಾವ. ಧ್ಯಾನವನ್ನು ಅವಿದ್ಯಾದೃಷ್ಟಿಯಿಂದ ಬೋಧಿಸಿದೆ ಎಂಬುದನ್ನು ತಿಳಿಯದೆ ಭೇದವೆಲ್ಲವೂ ಸತ್ಯವೇ ಎಂದು ಬಗೆಯುವ ಉಪಾಸನಾವಾದಿಗಳ ಈ ಮತವನ್ನು ಮಾಂ. ಕಾ. ಭಾ. ೩-೧ರಲ್ಲಿ ಖಂಡಿಸಿದೆ.

6. ನಿತ್ಯಮುಕ್ತನಾದ ಆತ್ಮನಿಗೆ ಮುಕ್ತಿಯನ್ನು ಕಲ್ಪಿಸುವದರಿಂದ ಇವನು ಆತ್ಮಘಾತಿಯು.

ಶಾಸ್ತ್ರಕ್ಕೆ ಅರ್ಥವನ್ನು (ತಿಳಿದುಕೊಳ್ಳುವ) ಸಂಪ್ರದಾಯವಿಲ್ಲದ್ದರಿಂದ ಹೇಳಿರುವದನ್ನು ಬಿಡುವದು, ಮತ್ತು ಹೇಳದೆ ಇರುವದನ್ನು ಕಲ್ಪಿಸುವದು[1]-(ಈ ಎರಡನ್ನೂ) ಮಾಡುತ್ತಾ ತಾನೂ ಮೂಢನಾಗಿ ಮಿಕ್ಕವರನ್ನೂ ಮರುಳುಗೊಳಿಸುತ್ತಿರುವನು. ಆದ್ದರಿಂದ **ಸಂಪ್ರದಾಯವನ್ನರಿಯದ (ಅವನು) ಸರ್ವಶಾಸ್ತ್ರಗಳನ್ನೂ ಬಲ್ಲವನಾಗಿದ್ದರೂ ಅವನನ್ನು ಮೂರ್ಖನಂತೆಯೇ ಉಪೇಕ್ಷಿಸಬೇಕು.**

## ಕ್ಷೇತ್ರಜ್ಞನಲ್ಲಿ ಅವಿದ್ಯೆಯಿದೆ ಎಂಬುದಕ್ಕೆ ಪ್ರಮಾಣವಿಲ್ಲ

(ಭಾಷ್ಯ)

೨೨೭. ಯತ್ತು ಉಕ್ತಮ್-ಈಶ್ವರಸ್ಯ ಕ್ಷೇತ್ರಜ್ಞೈಕತ್ವೇ ಸಂಸಾರಿತ್ವಂ ಪ್ರಾಪ್ನೋತಿ, ಕ್ಷೇತ್ರಜ್ಞಾನಾಂ ಚ ಈಶ್ವರೈಕತ್ವೇ ಸಂಸಾರಿಣೋಽಭಾವಾತ್ ಸಂಸಾರಾಭಾವಪ್ರಸಙ್ಗಃ ಇತಿ। ಏತೌ ದೋಷೌ ಪ್ರತ್ಯುಕ್ತೌ ವಿದ್ಯಾವಿದ್ಯಯೋಃ ವೈಲಕ್ಷಣ್ಯಾಭ್ಯುಪಗಮಾತ್ ಇತಿ। ಕಥಮ್? ಅವಿದ್ಯಾಪರಿಕಲ್ಪಿತದೋಷೇಣ ತದ್ವಿಷಯಂ ವಸ್ತು ಪಾರಮಾರ್ಥಿಕಂ ನ ದುಷ್ಯತಿ ಇತಿ। ತಥಾ ಚ ದೃಷ್ಟಾನ್ತೋ ದರ್ಶಿತಃ-ಮರೀಚ್ಯಮ್ಭಸಾ ಊಷರದೇಶೋ ನ ಪಙ್ಕೀಕ್ರಿಯತೇ[2] ಇತಿ। ಸಂಸಾರಿಣಃ ಅಭಾವಾತ್ ಸಂಸಾರಾಭಾವಪ್ರಸಙ್ಗದೋಷೋಽಪಿ ಸಂಸಾರಸಂಸಾರಿಣೋಃ ಅವಿದ್ಯಾಕಲ್ಪಿತತ್ವೋಪಪತ್ತ್ಯಾ ಪ್ರತ್ಯುಕ್ತಃ॥

(ಭಾಷ್ಯಾರ್ಥ)

ಈಶ್ವರನು ಕ್ಷೇತ್ರಜ್ಞನೊಡನೆ ಒಂದಾದರೆ (ಅವನಿಗೆ) ಸಂಸಾರಿತ್ವವು ಬಂದೊದಗುತ್ತದೆ; ಕ್ಷೇತ್ರಜ್ಞರು ಈಶ್ವರನೊಡನೆ ಒಂದಾದರೆ ಸಂಸಾರಿಯೇ ಇಲ್ಲದ್ದರಿಂದ ಸಂಸಾರವೂ ಇಲ್ಲವೆಂದಾಗುತ್ತದೆ-ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ವಿದ್ಯೆ, ಅವಿದ್ಯೆ-ಇವುಗಳಿಗೆ ವೈಲಕ್ಷಣ್ಯವನ್ನು ಅಂಗೀಕರಿಸುವದರಿಂದ (ಯಾವ ದೋಷವೂ ಇಲ್ಲ) ಎಂದು ಇವೆರಡು ದೋಷಗಳನ್ನೂ ಪರಿಹರಿಸಿಕೊಂಡದ್ದಾಯಿತು. ಹೇಗೆ? ಎಂದರೆ: ಅವಿದ್ಯೆಯಿಂದ ಕಲ್ಪಿತವಾದ ದೋಷದಿಂದ ಆ (ಕಲ್ಪನೆಗೆ) ವಿಷಯವಾದ ಪರಮಾರ್ಥವಸ್ತುವಿನಲ್ಲಿ ಯಾವ (ನಿಜವಾದ) ದೋಷವೂ ಉಂಟಾಗುವದಿಲ್ಲವಾದ್ದರಿಂದ ಬಿಸಿಲುಕುದುರೆಯ ನೀರಿನಿಂದ ಚೌಳುನೆಲವೇನೂ ಕೆಸರಾಗುವದಿಲ್ಲ ಎಂದು

---

1. ಅನುಭವಿಗಳಿಂದ ಶಾಸ್ತ್ರಾರ್ಥವನ್ನು ಪಡೆದರೆ ಸಂಪ್ರದಾಯವನ್ನು ಬಲ್ಲವನಾಗುವನು. ಅದಿಲ್ಲದ್ದರಿಂದ ಪೂರ್ವಪಕ್ಷಿಯು ಇಲ್ಲಿ ಹೇಳಿರುವ ಜೀವೇಶ್ವರೈಕ್ಯವನ್ನು ಬಿಟ್ಟು ಹೇಳದೆ ಇರುವ ಜೀವೇಶ್ವರಭೇದವನ್ನು ಕಲ್ಪಿಸಿಕೊಂಡಿರುತ್ತಾನೆ.

2. 'ನಾರ್ದ್ರೀಕ್ರಿಯತೇ' ಮ॥ ಮ್ಯ॥

ಅದಕ್ಕೆ ತಕ್ಕ ದೃಷ್ಟಾಂತವನ್ನೂ ತೋರಿಸಿದ್ದಾಯಿತು. ಸಂಸಾರಿಯೇ ಇಲ್ಲದ್ದರಿಂದ ಸಂಸಾರವೂ ಇಲ್ಲವಾಗಬೇಕಾಗುವದೆಂಬ ದೋಷವನ್ನು ಕೂಡ ಸಂಸಾರಸಂಸಾರಿಗಳು ಅವಿದ್ಯಾಕಲ್ಪಿತವಾಗಿರಬಹುದೆಂದು (ಹೇಳಿ) ಪರಿಹರಿಸಿದ್ದಾಗಿದೆ[1].

## ಅವಿದ್ಯೆ ಯಾರಿಗೆ ಸೇರಿದ್ದು ?

(ಭಾಷ್ಯ)

೨೨೮. ನನು ಅವಿದ್ಯಾವತ್ತ್ವಮೇವ ಕ್ಷೇತ್ರಜ್ಞಸ್ಯ ಸಂಸಾರಿತ್ವದೋಷಃ ತತ್ಕೃತಂ ಚ ದುಃಖಿತ್ವಾದಿ ಪ್ರತ್ಯಕ್ಷಮ್ ಉಪಲಭ್ಯತೇ ಇತಿ ಚೇತ್ । ನ ; ಜ್ಞೇಯಸ್ಯ ಕ್ಷೇತ್ರಧರ್ಮತ್ವಾತ್, ಜ್ಞಾತುಃ ಕ್ಷೇತ್ರಜ್ಞಸ್ಯ ತತ್ಕೃತದೋಷಾನುಪಪತ್ತೇಃ । ಯಾವತ್ ಕಿಂಚಿತ್ ಕ್ಷೇತ್ರಜ್ಞಸ್ಯ ದೋಷಜಾತಮ್ ಅವಿದ್ಯಮಾನಮ್[2] ಆಸಞ್ಜಯಸಿ ತಸ್ಯ ಜ್ಞೇಯತ್ವೋಪಪತ್ತೇಃ ಕ್ಷೇತ್ರಧರ್ಮತ್ವಮೇವ ನ ಕ್ಷೇತ್ರಜ್ಞಧರ್ಮತ್ವಮ್ । ನ ಚ ತೇನ ಕ್ಷೇತ್ರಜ್ಞೋ ದುಷ್ಯತಿ । ಜ್ಞೇಯೇನ ಜ್ಞಾತುಃ ಸಂಸರ್ಗಾನುಪಪತ್ತೇಃ । ಯದಿ ಹಿ ಸಂಸರ್ಗಃ ಸ್ಯಾತ್ ಜ್ಞೇಯತ್ವಮೇವ[3] ನೋಪಪದ್ಯೇತ । ಯದಿ ಆತ್ಮನೋ ಧರ್ಮಃ ಅವಿದ್ಯಾವತ್ತ್ವಂ ದುಃಖಿತ್ವಾದಿ ಚ[4] ಕಥಂ ಭೋಃ ಪ್ರತ್ಯಕ್ಷಮ್ ಉಪಲಭ್ಯತೇ[5], ಕಥಂ ವಾ ಕ್ಷೇತ್ರಜ್ಞಧರ್ಮಃ ? 'ಜ್ಞೇಯಂ ಚ[6] ಸರ್ವಂ ಕ್ಷೇತ್ರಮ್, ಜ್ಞಾತೈವ ಕ್ಷೇತ್ರಜ್ಞಃ' ಇತಿ ಅವಧಾರಿತೇ ಅವಿದ್ಯಾದುಃಖಿತ್ವಾದೇಃ[7] ಕ್ಷೇತ್ರಜ್ಞವಿಶೇಷಣತ್ವಂ ಕ್ಷೇತ್ರಜ್ಞಧರ್ಮತ್ವಮ್, ತಸ್ಯ ಚ ಪ್ರತ್ಯಕ್ಷೋಪಲಭ್ಯತ್ವಮ್ ಇತಿ ವಿರುದ್ಧಮ್ ಉಚ್ಯತೇ ಅವಿದ್ಯಾಮಾತ್ರಾವಷ್ಟಮ್ಭಾತ್ ಕೇವಲಮ್ ॥

---

1. ಹಿಂದೆ ಹೇಳಿದ ಭಾಷ್ಯದ ಸಾರವನ್ನು ಇಲ್ಲಿ ಅನುವಾದಮಾಡಿಕೊಂಡಿರುವದು ಅವಿದ್ಯೆ ಯಾರಿಗೆ ಎಂಬುದನ್ನು ಸ್ಪಷ್ಟವಾಗಿ ನಿರ್ಧರಿಸುವದಕ್ಕೆ. ಹಿಂದೆ ಭಾ. ಭಾ.೨೧೮ ರಲ್ಲಿ ಅದು ಅಂತಃಕರಣಧರ್ಮವೆಂದು ಹೇಳಿರುವದು ಸಾಂಖ್ಯಪ್ರಕ್ರಿಯೆಯನ್ನವಲಂಬಿಸಿ. ಈಗ ವ್ಯವಹಾರದೃಷ್ಟಿಯಿಂದ ಆತ್ಮನಲ್ಲಿ ಅವಿದ್ಯೆ ತೋರಿದರೂ ಪರಮಾರ್ಥವಾಗಿ ಯಾರ ಧರ್ಮವೂ ಅಲ್ಲ ಎಂದು ನಿರ್ಣಯಿಸಲಾಗುವದು.

2. ಮ॥ ದಲ್ಲಿಲ್ಲ.
3. 'ಜ್ಞಾತೃತ್ವಮೇವ' ಮ॥
4. 'ದುಃಖಿತತ್ವಾದಿ ಚ' ಅ॥ ನಿ॥ ; 'ಸುಖಿತ್ವದುಃಖಿತ್ವಾದಿ ಚ' ಮೈ॥
5. 'ಉಪಲಭ್ಯೇತ', ಮೈ॥
6. 'ತತ್' ಎಂದು ಹೆಚ್ಚಾಗಿ ಮ॥ ಮೈ॥
7. 'ದುಃಖಿತತ್ವಾದೇಃ' ಅ॥ ನಿ॥

(ಭಾಷ್ಯಾರ್ಥ)

(ಆಕ್ಷೇಪ) :—(ಇವನಿಗೆ) ಅವಿದ್ಯೆಯಿರುವದೆಂಬುದೇ ಕ್ಷೇತ್ರಜ್ಞನಿಗೆ ಸಂಸಾರಿತ್ವವೆಂಬ ದೋಷವು; ಮತ್ತು ಅದರಿಂದಾದ ದುಃಖಿತ್ವಾದಿ (ದೋಷವೂ) ಪ್ರತ್ಯಕ್ಷವಾಗಿ ಕಾಣುತ್ತಿದೆಯಲ್ಲ[1] !

(ಪರಿಹಾರ) :—ಹಾಗಲ್ಲ. ಏಕೆಂದರೆ ಜ್ಞೇಯವಾದದ್ದು ಕ್ಷೇತ್ರದ ಧರ್ಮವಾಗಿರುವದರಿಂದ ಜ್ಞಾತೃವಾದ ಕ್ಷೇತ್ರಜ್ಞನಿಗೆ ಅದರಿಂದಾದ (ಯಾವ) ದೋಷವೂ ಆಗುವಹಾಗಿಲ್ಲ. ಕ್ಷೇತ್ರಜ್ಞನಲ್ಲಿಲ್ಲದ ಯಾವದೊಂದಿಷ್ಟು ದೋಷಸಮೂಹವನ್ನು (ಅವನಿಗೆ) ಅಂಟಿಸುವೆಯೋ, ಅದು (ಎಲ್ಲವೂ) ಜ್ಞೇಯವೆಂದೇ ಆಗುವದರಿಂದ ಕ್ಷೇತ್ರಧರ್ಮವೇ ಹೊರತು ಕ್ಷೇತ್ರಜ್ಞನ ಧರ್ಮವಲ್ಲ. ಅದರಿಂದ ಕ್ಷೇತ್ರಜ್ಞನಲ್ಲಿ (ಯಾವ) ಕಲಂಕವೂ ಆಗುವದಿಲ್ಲ. ಏಕೆಂದರೆ ಜ್ಞೇಯದೊಡನೆ ಜ್ಞಾತೃವಿಗೆ ಸಂಬಂಧವುಂಟಾಗಲಾರದು; ಏಕೆಂದರೆ (ಹಾಗೆ) ಸಂಬಂಧವುಂಟಾದರೆ, ಜ್ಞೇಯತ್ವವೇ (ಅದಕ್ಕೆ) ಹೊಂದಲಾರದು.[2] ಅವಿದ್ಯೆಯಿರುವದೂ ದುಃಖಿಯಾಗಿರುವದೇ ಮುಂತಾದದ್ದೂ ಆತ್ಮನ ಧರ್ಮವಾದರೆ, ಅದು ಪ್ರತ್ಯಕ್ಷವಾಗಿ ಕಾಣಬರುತ್ತದೆ(ಯಲ್ಲ, ಅದು) ಹೇಗಯ್ಯ? ಅದು ಕ್ಷೇತ್ರಜ್ಞನ ಧರ್ಮ(ವೆನ್ನುವದಾದರೂ) ಹೇಗೆ[3] ? ಜ್ಞೇಯವಾಗಿರುವದೆಲ್ಲವೂ ಕ್ಷೇತ್ರವು, ಕ್ಷೇತ್ರಜ್ಞನು ಜ್ಞಾತೃವೇ–ಎಂದು ನಿಶ್ಚಯಮಾಡಿದ ಮೇಲೂ ಅವಿದ್ಯೆ. ದುಃಖಿತ್ವ–ಮುಂತಾದದ್ದು ಕ್ಷೇತ್ರಜ್ಞನ ವಿಶೇಷಣವೆಂದೂ ಎಂದರೆ ಕ್ಷೇತ್ರಜ್ಞನ ಧರ್ಮವೆಂದೂ[4] ಅದು ಪ್ರತ್ಯಕ್ಷವಾಗಿ ಕಂಡುಬರುತ್ತಿದೆಯೆಂದೂ ಬರಿಯ ಅವಿದ್ಯೆಯನ್ನೇ ಅವಲಂಬಿಸಿ ವಿರುದ್ಧವಾಗಿ ಹೇಳುತ್ತಿರುವೆಯಲ್ಲ[5] !

---

1. ಅನುಭವಕ್ಕೆ ಬರುವದನ್ನು ಇಲ್ಲವೆನ್ನಬಹುದೆ?–ಎಂದು ಭಾವ.

2. ಆತ್ಮನಾಗಲಿ ಅವನ ಧರ್ಮವಾಗಲಿ ಆತ್ಮನಿಗೇ ಜ್ಞೇಯವಾಗಲಾರದು ಎಂದು ಭಾವ. ‘ ಜ್ಞಾತೃತ್ವಮೇವ ’ ಎಂಬ ಮ|| ಪಾಠಕ್ಕೆ ಕಂಡುಬರುವ ಆತ್ಮನು ಜ್ಞಾತೃವೆಂಬುದು ಹೇಗೆ ?–ಎಂಬ ಭಾವವನ್ನು ಕಲ್ಪಿಸಬೇಕಾಗುವದು. ಪ್ರಕೃತಕ್ಕೆ ಈ ಪಾಠವೇ ಸಾಕೆಂದು ತೋರುತ್ತದೆ.

3. ಕಂಡರೆ ಜ್ಞಾತೃವಿನ ಧರ್ಮವು ಹೇಗೆ ?

4. ‘ ಕ್ಷೇತ್ರಜ್ಞವಿಶೇಷಣತ್ವಂ ಕ್ಷೇತ್ರಜ್ಞಧರ್ಮತ್ವಮ್ ’ ಎಂಬಿವುಗಳಲ್ಲಿ ಒಂದೇ ಮಾತು ಇದ್ದರೂ ಸಾಗುತ್ತದೆ; ಅಚ್ಚಿನ ಪುಸ್ತಕಗಳಲ್ಲಿ ಎರಡೂ ಇವೆ.

5. ಕಂಡುಬರುವದು ಆತ್ಮನ ಧರ್ಮವಲ್ಲ ಎಂಬ ಯುಕ್ತಿಯನ್ನು ತೈ. ಭಾ. ಭಾ. ೨೫೨. ರಲ್ಲಿ ಕಾಣಬಹುದು.

(ಭಾಷ್ಯ)

೨೨೯. ಅತ್ರ ಆಹ–ಸಾ ಅವಿದ್ಯಾ ಕಸ್ಯ ಇತಿ ? ಯಸ್ಯ ದೃಶ್ಯತೇ ತಸ್ಯೈವ । ಕಸ್ಯ ದೃಶ್ಯತೇ ಇತಿ ? ಅತ್ರ ಉಚ್ಯತೇ - 'ಅವಿದ್ಯಾ ಕಸ್ಯ ದೃಶ್ಯತೇ ?' ಇತಿ ಪ್ರಶ್ನಃ ನಿರರ್ಥಕಃ । ಕಥಮ್ ? ದೃಶ್ಯತೇ ಚೇತ್ ಅವಿದ್ಯಾ, ತದ್ವನ್ತಮಪಿ ಪಶ್ಯಸಿ । ನ ಚ ತದ್ವತಿ ಉಪಲಭ್ಯಮಾನೇ 'ಸಾ ಕಸ್ಯ ? ಇತಿ ಪ್ರಶ್ನೋ ಯುಕ್ತಃ । ನ ಹಿ ಗೋಮತಿ ಉಪಲಭ್ಯಮಾನೇ 'ಗಾವಃ ಕಸ್ಯ ?' ಇತಿ ಪ್ರಶ್ನಃ ಅರ್ಥವಾನ್ ಭವೇತ್ [1] । ನನು ವಿಷಮೋ ದೃಷ್ಟಾನ್ತಃ । ಗವಾಂ ತದ್ವತಶ್ಚ ಪ್ರತ್ಯಕ್ಷತ್ವಾತ್ ಸಂಬನ್ಧೋಽಪಿ ಪ್ರತ್ಯಕ್ಷಃ ಇತಿ ಪ್ರಶ್ನೋ ನಿರರ್ಥಕಃ । ನ ತಥಾ ಅವಿದ್ಯಾ ತದ್ವಾಂಶ್ಚ ಪ್ರತ್ಯಕ್ಷೌ । ಯತಃ ಪ್ರಶ್ನೋ ನಿರರ್ಥಕಃ ಸ್ಯಾತ್ । ಅಪ್ರತ್ಯಕ್ಷೇಣ ಅವಿದ್ಯಾವತಾ ಅವಿದ್ಯಾಸಂಬನ್ಧೇ ಜ್ಞಾತೇ ಕಿಂ ತವ ಸ್ಯಾತ್ ? ಅವಿದ್ಯಾಯಾ ಅನರ್ಥಹೇತುತ್ವಾತ್ ಪರಿಹರ್ತವ್ಯಾ ಸ್ಯಾತ್ । ಯಸ್ಯ ಅವಿದ್ಯಾ ಸ ತಾಂ ಪರಿಹರಿಷ್ಯತಿ । ನನು ಮಮೈವ ಅವಿದ್ಯಾ । ಜಾನಾಸಿ ತರ್ಹಿ ಅವಿದ್ಯಾಂ ತದ್ವನ್ತಂ ಚ ಆತ್ಮಾನಮ್ । ಜಾನಾಮಿ ನ ತು [2] ಪ್ರತ್ಯಕ್ಷೇಣ । ಅನುಮಾನೇನ ಚೇತ್ ಜಾನಾಸಿ ಕಥಂ ಸಂಬನ್ಧಗ್ರಹಣಮ್ ? ನ ಹಿ ತವ ಜ್ಞಾತುಃ ಜ್ಞೇಯಭೂತಯಾ ಅವಿದ್ಯಯಾ ತತ್ಕಾಲೇ ಸಂಬನ್ಧಃ ಗ್ರಹೀತುಂ ಶಕ್ಯತೇ । ಅವಿದ್ಯಾವಿಷಯಿತ್ವೇನೈವ [3] ಜ್ಞಾತುಃ ಉಪಯುಕ್ತತ್ವಾತ್ । ನ ಚ ಜ್ಞಾತುಃ ಅವಿದ್ಯಾಯಾಶ್ಚ ಸಂಬನ್ಧಸ್ಯ [4] ಯೋ ಗ್ರಹೀತಾ ಜ್ಞಾನಂ ಚ [5] ಅನ್ಯತ್ ತದ್ವಿಷಯಂ ಸಂಭವತಿ । ಅನವಸ್ಥಾಪ್ರಾಪ್ತೇಃ । ಯದಿ ಜ್ಞಾತ್ರಾಪಿ ಜ್ಞೇಯಸಂಬನ್ಧೋ ಜ್ಞಾಯತೇ, ಅನ್ಯೋ ಜ್ಞಾತಾ ಕಲ್ಪ್ಯಃ ಸ್ಯಾತ್ [6] । ತಸ್ಯಾಪಿ ಅನ್ಯಃ, ತಸ್ಯಾಪಿ ಅನ್ಯಃ ಇತಿ ಅನವಸ್ಥಾ ಅಪರಿಹಾರ್ಯಾ । ಯದಿ ಪುನಃ ಅವಿದ್ಯಾ ಜ್ಞೇಯಾ ಅನ್ಯದ್ವಾ ಜ್ಞೇಯಂ ಜ್ಞೇಯಮೇವ । ತಥಾ ಜ್ಞಾತಾ ಅಪಿ ಜ್ಞಾತೈವ, ನ ಜ್ಞೇಯಂ [7] ಭವತಿ ।

---

1. 'ಭವತಿ' ಮೈ|| ವಾ||

2. ಮ|| ಮೈ||ಗಳಲ್ಲಿಲ್ಲ.

3. 'ಅವಿದ್ಯಾಯಾ ವಿಷಯತ್ವೇನೈವ' ಆ|| ನಿ|| ಗು|| ವಾ||, 'ಅವಿದ್ಯಾವಿಷಯತ್ವೇನೈವ' ಮ|| ಎಂಬ ಪಾಠಗಳಿಗಿಂತ ಇದು ಮೇಲು.

4. 'ಸಂಬನ್ಧಂ' ಮ|| ಮೈ||

5. 'ಜ್ಞಾನಂ ವಾ' ಮ|| ಮೈ||

6. 'ಕಲ್ಪ್ಯೇತ' ಮ|| ಮೈ||

7. 'ಜ್ಞೇಯಃ' ಮೈ||

ಯದಾ ಚ ಏವಮ್ ಅವಿದ್ಯಾದುಃಖಿತ್ವಾದ್ಯೈಃ[1] ನ ಜ್ಞಾತುಃ ಕ್ಷೇತ್ರಜ್ಞಸ್ಯ ಕಿಂಚಿದ್ ದುಷ್ಯತಿ ॥

(ಭಾಷ್ಯಾರ್ಥ)

(ಪ್ರಶ್ನೆ) :—ಇಲ್ಲಿ (ಪೂರ್ವಪಕ್ಷಿ) ಕೇಳುತ್ತಾನೆ: ಆ ಅವಿದ್ಯೆ ಯಾರಿಗೆ[2]?

(ಉತ್ತರ) :—ಯಾವನಿಗೆ (ಇದೆ)ಯೆಂದು ಕಾಣಿಸುತ್ತದೆಯೋ ಅವನದೇ[3].

(ಪ್ರಶ್ನೆ) :—ಯಾರಿಗೆ (ಇರುವಂತೆ) ಕಾಣಿಸುತ್ತದೆ[4]?

(ಉತ್ತರ) :—ಇದಕ್ಕೆ (ಉತ್ತರವನ್ನು) ಹೇಳುತ್ತೇವೆ. 'ಅವಿದ್ಯೆಯು ಯಾರಿಗೆ (ಇರುವಂತೆ) ಕಾಣಿಸುತ್ತದೆ?' ಎಂಬ ಪ್ರಶ್ನೆ ನಿಷ್ಪ್ರಯೋಜನವಾದದ್ದು. (ಅದು) ಹೇಗೆ?—ಎಂದರೆ ಅವಿದ್ಯೆಯು ಕಾಣಿಸುತ್ತಿದ್ದರೆ, ಅದನ್ನುಳ್ಳವನನ್ನೂ ನೋಡುತ್ತಲೇ ಇರುವೆ. ಅದನ್ನುಳ್ಳವನು ತೋರುತ್ತಿದ್ದರೂ 'ಅದು ಯಾರಿಗೆ?' ಎಂಬ ಪ್ರಶ್ನೆ ಯುಕ್ತವಾಗುವದಿಲ್ಲ. ಗೋವುಗಳೊಡೆಯನು ಕಾಣುತ್ತಿರುವಲ್ಲಿ 'ಗೋವುಗಳು ಯಾರವು?' ಎಂಬ ಪ್ರಶ್ನೆಯು ಸಪ್ರಯೋಜನವಾಗಲಾರದಷ್ಟೆ?

(ಆಕ್ಷೇಪ) :-(ಈ) ದೃಷ್ಟಾಂತವು ಸಮನಾಗಲಿಲ್ಲ. ಗೋವುಗಳೂ ಅವುಗಳೊಡೆಯನೂ ಪ್ರತ್ಯಕ್ಷವಾಗಿರುವದರಿಂದ (ಅವುಗಳ) ಸಂಬಂಧವೂ ಪ್ರತ್ಯಕ್ಷವಾಗಿದೆಯಾಗಿ (ದೃಷ್ಟಾಂತದಲ್ಲಿ) ಪ್ರಶ್ನೆಯು ನಿರರ್ಥಕ(ವಾಗಿದೆ). ಆದರೆ ಅವಿದ್ಯೆಯೂ ಅದನ್ನುಳ್ಳವನೂ ಹಾಗೇನೂ ಪ್ರತ್ಯಕ್ಷವಾಗಿರುವದಿಲ್ಲ[5]; ಹಾಗಿದ್ದರೆ ಪ್ರಶ್ನೆಯು ನಿರರ್ಥಕವಾಗುತ್ತಿತ್ತು.

---

1. 'ದುಃಖಿತತ್ವಾದ್ಯೈಃ' ಅ॥ ನಿ॥

2. ಕ್ಷೇತ್ರಜ್ಞನದಲ್ಲದಿದ್ದರೆ ಮತ್ತೆ ಯಾರದು?

3. ಹಿಂದೆ ಹೇಳಿದಂತೆ ಕರಣದಲ್ಲಿಯೇ ಅವಿದ್ಯೆಯು ತೋರುತ್ತವೆಯಾದ್ದರಿಂದ ಅದು ಕರಣದ್ದೇ—ಎಂದು ಭಾವ. ಅವಿದ್ಯೆಯು ಅತ್ಮನಿಗೆ ನಿಜವಾಗಿಲ್ಲವೆಂಬ ಅಭಿಪ್ರಾಯದಿಂದ ಆಡಿದ ಮಾತಿದು.

4. ಅವಿದ್ಯೆಯು ವಿಷಯವಾಗಿ ಕಾಣಿಸುವದಿಲ್ಲವೆಂದೂ ಜ್ಞಾತೃವಿಗೆ ಸೇರಿದ್ದಾಗಿಯೇ ಊಹಿಸಬೇಕಾಗಿರುವದೆಂದೂ ಪ್ರಶ್ನೆಯನ್ನು ಮಾಡಿದವನ ಭಾವವಿರುತ್ತದೆ. ಇದನ್ನು ಮುಂದಿನ ಪ್ರಶ್ನೋತ್ತರಗಳಿಂದ ಭಾಷ್ಯದಲ್ಲಿ ಸ್ಪಷ್ಟಪಡಿಸಿದೆ.

5. ಆದ್ದರಿಂದ ಅವಿದ್ಯೆಯು ಕರಣಧರ್ಮವೆಂದು ಹಿಂದೆ ಹೇಳಿದ್ದು ಸರಿಯಾಗಲಿಲ್ಲ ಎಂದು ಭಾವ.

(ಸಿದ್ಧಾಂತಿ) :—ಪ್ರತ್ಯಕ್ಷನಲ್ಲದ ಅವಿದ್ಯಾವಂತನಿಗೂ ಅವಿದ್ಯೆಗೂ ಸಂಬಂಧ ವಿದೆಯೆಂದು ತಿಳಿದರೆ (ತಾನೆ ಅದರಿಂದ) ನಿನಗೇನಾದೀತು ? [1]

(ಪೂರ್ವಪಕ್ಷಿ) :—ಅವಿದ್ಯೆಯು ಅನರ್ಥಕ್ಕೆ ಕಾರಣವಾಗಿರುವದರಿಂದ ಅದನ್ನು ಪರಿಹರಿಸಿಕೊಳ್ಳಬಹುದಾಗುವದು.

(ಸಿದ್ಧಾಂತಿ) : —ಯಾವನಿಗೆ ಅವಿದ್ಯೆ(ಯಿರುವದೋ) ಅವನು ಅದನ್ನು ಪರಿ ಹರಿಸಿಕೊಳ್ಳುವನು. (ನಿನಗೇನು ?)

(ಪೂರ್ವಪಕ್ಷಿ) :—ನನಗೇ ಅಲ್ಲವೆ, ಅವಿದ್ಯೆ(ಯಿರುವದು) ?

(ಸಿದ್ಧಾಂತಿ) :—ಹಾಗಾದರೆ ಅವಿದ್ಯೆಯನ್ನೂ ಅದನ್ನುಳ್ಳ ನಿನ್ನನ್ನೂ ಬಲ್ಲೆ ಯೆಂದಾಯಿತು[2].

(ಪೂರ್ವಪಕ್ಷಿ) :—ಬಲ್ಲೆ, ಆದರೆ ಪ್ರತ್ಯಕ್ಷವಾಗಿ ಅರಿಯೆ.

(ಸಿದ್ಧಾಂತಿ) :—ಅನುಮಾನದಿಂದ ಅರಿತಿರುವೆಯಾದರೆ ಸಂಬಂಧವನ್ನು ಗ್ರಹಿ ಸಿದ್ದು ಹೇಗೆ ? ಜ್ಞಾತೃವಾದ ನಿನಗೂ ಜ್ಞೇಯವಾದ ಅವಿದ್ಯೆಗೂ ಇರುವ ಸಂಬಂಧ ವನ್ನು ತತ್ಕಾಲದಲ್ಲಿಯೇ ಅರಿಯುವದಕ್ಕೆ ಶಕ್ಯವೇ ಅಲ್ಲ[3]. ಏಕೆಂದರೆ ಜ್ಞಾತೃವು ಅವಿದ್ಯೆಗೆ ವಿಷಯಿಯಾಗಿಯೇ[4] ಉಪಯೋಗವಾಗಿಬಿಟ್ಟಿರುತ್ತಾನೆ. ಜ್ಞಾತೃವಿಗೂ

---

1. ಅವಿದ್ಯಾದೃಷ್ಟಿಯಿಂದ ಅವಿದ್ಯೆಯು ಆತ್ಮನಲ್ಲಿರುವಂತೆ ತೋರುತ್ತದೆ, ಸರಿ ಯಾಗಿ ನೋಡಿದರೆ ಯಾರಿಗೂ ಅವಿದ್ಯೆಯಿಲ್ಲವೇ ಇಲ್ಲ—ಎಂಬುದನ್ನು ಸ್ಥಿರಗೊಳಿಸುವದಕ್ಕಾಗಿ ಸಿದ್ಧಾಂತಿ ಈ ಪ್ರಶ್ನೆಯನ್ನು ಹಾಕಿರುತ್ತಾನೆ.

2. ನಿತ್ಯಶುದ್ಧನೂ ನಿರ್ವಿಕಾರನೂ ಆಗಿರುವ ಆತ್ಮನಿಗೆ ಅವಿದ್ಯೆಯು ಇರಲಾರದು ; ಜಡವಾದ ಅಂತಃಕರಣಕ್ಕೂ ಇರಲಾರದು. ವ್ಯಾವಹಾರಿಕದೃಷ್ಟಿಯಿಂದ ನೋಡಿದಾಗ ಮಾತ್ರ ಅಂತಃಕರಣಾಭಿಮಾನಿಯಾದ ಜೀವನಿಗೆ ಇದೆ ಎಂದು ಹೇಳಿದಂತಾಯಿತು. ಸೂ. ಭಾ. ೧-೨-೧೨ರ ಉಪಸಂಹಾರದಲ್ಲಿ ಕರ್ತೃತ್ವಭೋಕ್ತೃತ್ವವಿಚಾರದಲ್ಲಿ ಹೇಳಿರುವದನ್ನು ಇಲ್ಲಿಗೂ ಅನ್ವಯಿಸಬೇಕು.

3. ಪ್ರತ್ಯಕ್ಷವಾಗಿ ಅವಿದ್ಯಾವಂತನಾದ ಆತ್ಮನನ್ನು ಕಾಣದಿದ್ದರೂ ಅವಿದ್ಯಾದುಃಖಿ ತ್ವಾದಿಗಳನ್ನುಳ್ಳವನು ಯಾರೋ ಅವನೇ ಜೀವನು—ಎಂದು ಅನುಮಾನಪ್ರಮಾಣದಿಂದ ಕಲ್ಪಿಸಬಹುದೆಂದು ಪೂರ್ವಪಕ್ಷಿಯ ಆಶಯವು. ಆದರೆ ಆತ್ಮನು ಜ್ಞಾತೃವಾದ್ದರಿಂದ ಅನು ಮಾನಕ್ಕೆ ವಿಷಯನಾಗಲಾರನು ಎಂಬುದು ಸಿದ್ಧಾಂತಿಯ ಅಭಿಪ್ರಾಯ. ಆತ್ಮನು ಅನುಮಾನ ವಿಷಯನಲ್ಲವೆಂಬುದಕ್ಕೆ ಐ. ಭಾ. ಭಾ. ೬೩, ೬೪ನ್ನು ನೋಡಿರಿ.

4. ಜ್ಞಾತೃವಾಗಿರುವವನನ್ನು ಜ್ಞೇಯವಾಗಿ ಮಾಡುವದು ಆಗಲಾರದು—ಎಂದು ಭಾವ. ಜ್ಞಾತೃವು ಜ್ಞೇಯವಾದದ್ದನ್ನು ಅರಿಯಬಹುದು, ತನ್ನನ್ನು ತಾನೇ ಅರಿಯಲೇ ಅರನು.

**ಅವಿದ್ಯೆಗೂ ಇರುವ ಸಂಬಂಧವನ್ನು ಅರಿಯುವ ಜ್ಞಾತೃವಿರುವನಲ್ಲ,(ಅವನು), ಮತ್ತು ಅದನ್ನು** ವಿಷಯವಾಗಿಸಿಕೊಳ್ಳುವ ಜ್ಞಾನ-(ಇವು) ಮತ್ತೊಂದಾಗಿರುವಹಾಗಿಲ್ಲ[1]. **ಏಕೆಂದರೆ** (ಆಗ) ಅನವಸ್ಥೆಯು ಬಂದೊದಗುವದು ಜ್ಞಾತೃವಿನೊಡನೆಯೂ ಜ್ಞೇಯ(ವಾದ ಅವಿದ್ಯೆಯ) ಸಂಬಂಧವನ್ನು ಅರಿಯಬಹುದಾದರೆ (ಆಗ ಅವನನ್ನರಿಯುವ) **ಬೇರೊಬ್ಬ** ಜ್ಞಾತೃವನ್ನು ಕಲ್ಪಿಸಬೇಕಾಗುವದು, ಅವನನ್ನು (ಅರಿಯುವ) ಮತ್ತೊಬ್ಬ (ಜ್ಞಾತೃ), ಅವನನ್ನು (ಅರಿಯುವದಕ್ಕೆ) ಇನ್ನೊಬ್ಬ-ಹೀಗೆ (ಒದಗುವ) ಅನವಸ್ಥೆಯನ್ನು ಪರಿಹರಿಸಿಕೊಳ್ಳುವದಕ್ಕೆ ಆಗಲಾರದು[2]. ಆದರೆ **ಅವಿದ್ಯೆಯೇ ಜ್ಞೇಯವಾಗಿರಲಿ, ಮತ್ತೊಂದೇ ಜ್ಞೇಯವಾಗಿರಲಿ, (ಅದು ಯಾವಾಗಲೂ) ಜ್ಞೇಯವೇ; ಇದರಂತೆ ಜ್ಞಾತೃವೂ ಜ್ಞಾತೃವೇ ಆಗಿರುವನು,(ಎಂದಿಗೂ) ಜ್ಞೇಯವಾಗುವದಿಲ್ಲ**[3]. ಹೀಗೆಂದು **ಯಾವಾಗ** ಒಪ್ಪುವೆವೋ **(ಆಗ)** ಅವಿದ್ಯೆ, **ದುಃಖಿತ್ವ-ಮುಂತಾದವುಗಳಿಂದ ಜ್ಞಾತೃವಾದ ಕ್ಷೇತ್ರಜ್ಞನಿಗೆ ಯಾವದೊಂದು ದೋಷವೂ ತಟ್ಟುವಹಾಗಿಲ್ಲ**[4].

## ಆತ್ಮನ ಜ್ಞಾನಕರ್ತೃತ್ವವು ಔಪಚಾರಿಕ

(ಭಾಷ್ಯ)

೨೩೦. ನನು ಅಯಮೇವ ದೋಷಃ ಯತ್ ದೋಷವತ್ಕ್ಷೇತ್ರವಿಜ್ಞಾತೃತ್ವಮ್ । ನ । ವಿಜ್ಞಾನಸ್ವರೂಪಸ್ಯೈವ ಅವಿಕ್ರಿಯಸ್ಯ[5] ವಿಜ್ಞಾತೃತ್ವೋಪಚಾರಾತ್

---

1. ಅವಿದ್ಯಾಸಂಬದ್ಧನಾದ ಜ್ಞಾತೃವೊಬ್ಬ, ಅವನನ್ನು ಅರಿಯುವ ಜ್ಞಾತೃ ಇನ್ನೊಬ್ಬ; ಅವಿದ್ಯಾಸಂಬದ್ಧನಾದ ಜ್ಞಾತೃವಿನ ಜ್ಞಾನವೊಂದು, ಅವನನ್ನು ಅರಿಯುವಾತನ ಜ್ಞಾನವು ಇನ್ನೊಂದು—ಹೀಗೆ ಇರುವಂತಿಲ್ಲ.

2. ಇದರಂತೆಯೇ ಜ್ಞಾನಪರಂಪರೆಯನ್ನು ಕಲ್ಪಿಸಿದರೂ ಅನವಸ್ಥೆ ಬರುತ್ತದೆ. ಅದೂ ಜ್ಞಾತೃಪರಂಪರೆಯಂತೆ ಅನುಭವವಿರುದ್ಧ.

3. ಜ್ಞಾತೃವಿಗೆ ಮಿಕ್ಕದ್ದೆಲ್ಲ ಜ್ಞೇಯವೇ—ಎಂದು ಒಪ್ಪುವದರಲ್ಲಿ ಲಾಘವವಿದೆ; ಅನುಭವದ ಬೆಂಬಲವೂ ಇದೆ.

4. ಆತ್ಮನು ಯಾವಾಗಲೂ ಜ್ಞೇಯವಾಗುವದಿಲ್ಲವಾದ್ದರಿಂದ ಅವನಿಗೆ ಜ್ಞೇಯವಾದ ಅವಿದ್ಯಾದುಃಖಿತ್ವಾದಿಗಳು ಧರ್ಮವೆಂದು ಅನುಮಾನದಿಂದಲೂ ಕಲ್ಪಿಸುವದಕ್ಕೆ ಆಗಲಾರದು. ಆದ್ದರಿಂದ ಕ್ಷೇತ್ರಜ್ಞನಾದ ಆತ್ಮನು ಈಶ್ವರನೆಂಬ ಮತಕ್ಕೆ ಯಾವ ಬಾಧಕವೂ ಇಲ್ಲ—ಎಂದರ್ಥ.

5. " ಸ್ವರೂಪಸ್ಯ ಅವಿಷಯಸ್ಯೈವ " ಮು || ಮೈ||

ಯಥಾ ಉಷ್ಣತಾಮಾತ್ರೇಣ ಅಗ್ನೇಃ ತಪ್ತಿಕ್ರಿಯೋಪಚಾರಃ ತದ್ವತ್ । ಯಥಾ[1] ಅತ್ರ ಭಗವತಾ ಕ್ರಿಯಾಕಾರಕಫಲಾತ್ಮತ್ವಾಭಾವಃ ಆತ್ಮನಿ ಸ್ವತ ಏವ ದರ್ಶಿತಃ, ಅವಿದ್ಯಾಧ್ಯಾರೋಪಿತ ಏವ ಕ್ರಿಯಾಕಾರಕಾದಿಃ ಆತ್ಮನಿ ಉಪಚರ್ಯತೇ (ಇತಿ ?), ತಥಾ ತತ್ರ ತತ್ರ "ಯ ಏನಂ ವೇತ್ತಿ ಹನ್ತಾರಮ್" (೨-೧೯), "ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ" (೩-೨೭), "ನಾದತ್ತೇ ಕಸ್ಯಚಿತ್ ಪಾಪಮ್" (೫-೧೫) ಇತ್ಯಾದಿಪ್ರಕರಣೇಷು ದರ್ಶಿತಃ[2] । ತಥೈವ ಚ ವ್ಯಾಖ್ಯಾತಮ್ ಅಸ್ಮಾಭಿಃ ಉತ್ತರೇಷು ಚ ಪ್ರಕರಣೇಷು ದರ್ಶಯಿಷ್ಯಾಮಃ ॥

(ಭಾಷ್ಯಾರ್ಥ)

(ಆಕ್ಷೇಪ):—ದೋಷವುಳ್ಳ ಕ್ಷೇತ್ರವನ್ನು ಅರಿಯುವವನಾಗಿರುವನಲ್ಲ, ಇದೇ (ಕ್ಷೇತ್ರಜ್ಞನ) ದೋಷವಲ್ಲವೆ?

(ಪರಿಹಾರ): ಹಾಗಲ್ಲ. ಏಕೆಂದರೆ ವಿಜ್ಞಾನಸ್ವರೂಪನೇ ಆಗಿರುವ, ವಿಕಾರವೇನೂ ಇಲ್ಲದ, (ಆತ್ಮನನ್ನು) ವಿಜ್ಞಾತೃ ಎಂದು ಉಪಚಾರಕ್ಕಾಗಿ ಕರೆದಿರುತ್ತದೆ. ಹೇಗೆ ಬಿಸಿಯು (ಸ್ವರೂಪ)ವೇ ಆಗಿರುವದರಿಂದ ಬೆಂಕಿಗೆ ಸುಡುವದೆಂಬ ಕ್ರಿಯೆಯನ್ನು ಉಪಚಾರಕ್ಕಾಗಿ (ಸಂಬಂಧಿಸಿ ಹೇಳುತ್ತಾರೋ) ಅದರಂತೆಯೇ (ಇದು)[3]. ಕ್ರಿಯಾಕಾರಕಫಲಸ್ವರೂಪವು ಆತ್ಮನಲ್ಲಿಲ್ಲ, ಅವಿದ್ಯೆಯಿಂದ ಹುಟ್ಟುಗಟ್ಟಿದ ಕ್ರಿಯಾಕಾರಕಾದಿಯನ್ನೇ ಆತ್ಮನಲ್ಲಿ ಉಪಚಾರಕ್ಕೆ ಹೇಳುತ್ತಾರೆಂಬುದನ್ನು ಹೇಗೆ ಇಲ್ಲಿ ಭಗವಂತನು ತಾನೇ ತೋರಿಸಿರುತ್ತಾನೋ ಅದರಂತೆ ಅಲ್ಲಲ್ಲಿ "ಯಾವನು ಈತನನ್ನು ಕೊಲ್ಲುವವನೆಂದು ತಿಳಿಯುತ್ತಾನೋ" (೨-೧೯) "ಪ್ರಕೃತಿಯ ಗುಣಗಳಿಂದ ನಾನಾಪ್ರಕಾರಗಳಿಂದ ಮಾಡಲ್ಪಡುತ್ತಿರುವ ಕರ್ಮಗಳನ್ನು (ತಾನು ಮಾಡುವವನೆಂದು ಮೂಢನು ತಿಳಿದುಕೊಂಡಿರುತ್ತಾನೆ ೩-೨೭) "(ವಿಭುವು) ಯಾರ ಪಾಪವನ್ನೂ ಸ್ವೀಕರಿಸುವದಿಲ್ಲ" (೫-೧೫)–ಇವೇ ಮುಂತಾದ ಪ್ರಕರಣಗಳಲ್ಲಿ ತೋರಿಸಿರುತ್ತಾನೆ. ನಾವೂ ಹಾಗೆಯೇ ವ್ಯಾಖ್ಯಾನಮಾಡಿರುತ್ತೇವೆ. ಮುಂದಿನ ಪ್ರಕರಣಗಳಲ್ಲಿಯೂ ಇದನ್ನು ತೋರಿಸಿಕೊಡುವೆವು.

---

1. "ಯಥಾ ಚ" ಮು॥ ಮೈ॥

2. "ಭಗವತಾ ದರ್ಶಿತಮ್" ಮು॥ ಮೈ॥

3. ಆದ್ದರಿಂದ ಜ್ಞಾತೃಮೂಲಕವಾದ ಅನವಸ್ಥೆಯಾಗಲಿ ಜ್ಞಾನಮೂಲಕವಾದ ಅನವಸ್ಥೆಯಾಗಲಿ ಈ ಮತದಲ್ಲಿರುವದಿಲ್ಲ.

(ಭಾಷ್ಯ)

೨೩೧. ಹನ್ತ ತರ್ಹಿ ಆತ್ಮನಿ ಕ್ರಿಯಾಕಾರಕಫಲಾತ್ಮತಾಯಾಃ ಸ್ವತಃ ಅಭಾವೇ ಅವಿದ್ಯಯಾ ಚ ಅಧ್ಯಾರೋಪಿತತ್ವೇ ಕರ್ಮಾಣಿ ಅವಿದ್ವತ್ಕರ್ತವ್ಯಾನ್ಯೇವ ನ ವಿದುಷಾಮ್ ಇತಿ ಪ್ರಾಪ್ತಮ್ । ಸತ್ಯಮ್ ಏವಂ ಪ್ರಾಪ್ತಮ್ । ಏತದೇವ ಚ[1] "ನ ಹಿ ದೇಹಭೃತಾ ಶಕ್ಯಮ್" (೧೮-೧೧) ಇತ್ಯತ್ರ ದರ್ಶಯಿಷ್ಯಾಮಃ । ಸರ್ವಶಾಸ್ತ್ರಾರ್ಥೋಪಸಂಹಾರಪ್ರಕರಣೇ ಚ "ಸಮಾಸೇನೈವ ಕೌನ್ತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ" (೧೮-೫೦) ಇತ್ಯತ್ರ ವಿಶೇಷತಃ ದರ್ಶಯಿಷ್ಯಾಮಃ । ಅಲಮ್ ಇಹ ಬಹುಪ್ರಪಞ್ಚೇನ ಇತಿ ಉಪಸಂಹ್ರಿಯತೇ ॥

(ಭಾಷ್ಯಾರ್ಥ)

(ಆಕ್ಷೇಪ) :—ಸರಿ. ಹಾಗಾದರೆ ಆತ್ಮನಲ್ಲಿ ಕ್ರಿಯಾಕಾರಕಫಲಸ್ವರೂಪವು ತಾನೇ ಇಲ್ಲವೆಂದೂ ಅವಿದ್ಯೆಯಿಂದ ಅಧ್ಯಾರೋಪಿತವಾಗಿರುವದೆಂದೂ ಆದರೆ, ಕರ್ಮಗಳು ಅಜ್ಞರು ಮಾಡತಕ್ಕವೇ, ಜ್ಞಾನಿಗಳಿಗಲ್ಲ–ಎಂದು ಆಯಿತಲ್ಲ !

(ಪರಿಹಾರ): -ನಿಜ. ಹೀಗೆಂದೇ ಆಯಿತು. ಮತ್ತು ಇದನ್ನೇ ದೇಹಧಾರಿಯಾದವನಿಗೆ (ಕರ್ಮಗಳನ್ನೆಲ್ಲ ಬಿಡುವದು) ಶಕ್ಯವಲ್ಲ (೧೮-೧೧)—ಎಂಬಲ್ಲಿ ತೋರಿಸಿಕೊಡುವೆವು. ಒಟ್ಟು (ಗೀತಾ) ಶಾಸ್ತ್ರದ ಅರ್ಥವನ್ನು ಉಪಸಂಹಾರ (ಮಾಡುವ) ಪ್ರಕರಣದಲ್ಲಿ "ಕೌಂತೇಯನೆ, (ಇದನ್ನು) ಸಂಕ್ಷೇಪದಿಂದ (ಹೇಳುವೆನು, ಕೇಳು); ಇದು ಜ್ಞಾನದ ಪರ ನಿಷ್ಠೆಯು" (೧೮-೫೦) ಎಂಬಲ್ಲಿ (ಇನ್ನೂ) ವಿಶೇಷವಾಗಿ ತೋರಿಸಿಕೊಡುವೆವು. (ಇನ್ನು) ಬಹುವಾಗಿ ಇಲ್ಲಿ ವಿಸ್ತರಿಸಿದ್ದರಿಂದ ಪ್ರಯೋಜನವಿಲ್ಲವೆಂದು (ಈ ಚರ್ಚೆಯನ್ನು) ಉಪಸಂಹಾರಮಾಡುತ್ತೇವೆ.

## ಈ ಅಧ್ಯಾಯಾರ್ಥದ ಮಾಹಾತ್ಮ್ಯ

(ಭಾಷ್ಯ)

೨೩೨. "ಇದಂ ಶರೀರಮ್[2]" ಇತ್ಯಾದಿಶ್ಲೋಕೋಪದಿಷ್ಟಸ್ಯ ಕ್ಷೇತ್ರಾಧ್ಯಾಯಾರ್ಥಸ್ಯ ಸಙ್ಗ್ರಹಶ್ಲೋಕೋಽಯಮ್ ಉಪನ್ಯಸ್ಯತೇ "ತತ್ ಕ್ಷೇತ್ರಂ ಯಚ್ಚ" ಇತ್ಯಾದಿ । ವ್ಯಾಚಿಖ್ಯಾಸಿತಸ್ಯ ಹಿ ಅರ್ಥಸ್ಯ ಸಙ್ಗ್ರಹೋಪನ್ಯಾಸಃ ನ್ಯಾಯ್ಯಃ ಇತಿ —

1. ಮ॥ ಮ್ಯ॥ ಗಳಲ್ಲಿ ಮಾತ್ರ 'ಚ' ಇದೆ.
1. ಶ್ಲೋಕಾರ್ಥವು ಪೂರ ಮ॥

(ಭಾಷ್ಯಾರ್ಥ)

"(ಎಲೈ ಕೌಂತೇಯನೆ,) ಈ ಶರೀರವು" ಎಂದು ಮುಂತಾದ ಶ್ಲೋಕಗಳಲ್ಲಿ ಸೂಚಿಸಿರುವ ಕ್ಷೇತ್ರಾಧ್ಯಾಯದ ಅರ್ಥವನ್ನು ಸಂಗ್ರಹವಾಗಿ ಹೇಳುವ "ತತ್ ಕ್ಷೇತ್ರಂ ಯಚ್ಚ" ಎಂದು ಮುಂತಾಗಿರುವ ಈ ಶ್ಲೋಕವನ್ನು ಕೊಟ್ಟಿರುತ್ತದೆ. ಏಕೆಂದರೆ ವಿವರಿಸಿ ಹೇಳಬೇಕೆಂದಿರುವ ವಿಷಯವನ್ನು ಸಂಗ್ರಹವಾಗಿ (ಮೊದಲು) ಹೇಳುವದು ಯುಕ್ತವಾಗಿದೆ:—

**ತತ್ ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩ ॥**

೩. ಆ ಕ್ಷೇತ್ರವು ಯಾವದು ಮತ್ತು ಎಂಥದ್ದು ? ಯಾವ ವಿಕಾರವುಳ್ಳದ್ದು? ಯಾವದರಿಂದ ಯಾವದು (ಆಗುತ್ತದೆ) ?–(ಎಂಬುದನ್ನೂ) ಮತ್ತು ಅವನು ಯಾವನು ಯಾವ ಪ್ರಭಾವದವನು ?–(ಎಂಬ) ಇದನ್ನೂ ಸಂಕ್ಷೇಪದಿಂದ ನನ್ನಿಂದ ಕೇಳು.

(ಭಾಷ್ಯ)

೨೩೩. ಯತ್ ನಿರ್ದಿಷ್ಟಂ ಇದಂ ಶರೀರಮ್ ಇತಿ ತತ್ ತಚ್ಛಬ್ದೇನ ಪರಾಮೃಶತಿ । ಯಚ್ಚ ಇದಂ ನಿರ್ದಿಷ್ಟಂ ಕ್ಷೇತ್ರಮ್, ತತ್ [1] ಯಾದೃಕ್ ಯಾದೃಶಂ ಸ್ವಕೀಯೈಃ ಧರ್ಮೈಃ । ಚಶಬ್ದಃ ಸಮುಚ್ಚಯಾರ್ಥಃ । ಯದ್ವಿಕಾರಿ ಯೋ ವಿಕಾರಃ ಯಸ್ಯ.[2] ತತ್ ಯದ್ವಿಕಾರಿ । ಯತಃ ಯಸ್ಮಾಚ್ಚ ಯತ್ । ಕಾರ್ಯಮ್ ಉತ್ಪದ್ಯತೇ ಇತಿ ವಾಕ್ಯಶೇಷಃ । ಸ ಚ ಯಃ [3] ಕ್ಷೇತ್ರಜ್ಞೋ ನಿರ್ದಿಷ್ಟಃ ಸಃ ಯತ್ಪ್ರಭಾವಃ ಯೇ ಪ್ರಭಾವಾಃ ಉಪಾಧಿಕೃತಾಃ ಶಕ್ತಯಃ ಯಸ್ಯ ಸಃ ಯತ್ಪ್ರಭಾವಶ್ಚ । ತತ್ ಕ್ಷೇತ್ರಕ್ಷೇತ್ರಜ್ಞಯೋಃ ಯಾಥಾತ್ಮ್ಯಂ ಯಥಾವಿಶೇಷಿತಂ ಸಮಾಸೇನ ಸಙ್ಕ್ಷೇಪೇಣ ಮೇ ಮಮ ವಾಕ್ಯತಃ ಶೃಣು [4] ಶ್ರುತ್ವಾ ಅವಧಾರಯ ಇತ್ಯರ್ಥಃ ॥

(ಭಾಷ್ಯಾರ್ಥ)

ಯಾವದನ್ನು 'ಈ ಶರೀರವು' (೧೩-೧) ಎಂದು ಹೇಳಿತ್ತೋ ಆ (ಕ್ಷೇತ್ರವನ್ನು) 'ಆ' ಎಂಬ ಶಬ್ದದಿಂದ ಪರಾಮರ್ಶಿಸಿರುತ್ತದೆ. ಈ ಹೇಳಿದ ಕ್ಷೇತ್ರವಿದೆ

---

1. 'ನಿರ್ದಿಷ್ಟಂ ತತ್ ಕ್ಷೇತ್ರಂ' ನಿ॥ ಮ್ಯ॥ ಗು॥ ವಾ॥
2. 'ಅಸ್ಯ' ನಿ॥ ಗು॥ ವಾ॥
3. ಇಲ್ಲಿ 'ಯಃ । ಯಃ ಕ್ಷೇತ್ರಜ್ಞೋ' ಎಂದಿರಬೇಕೆಂದು ತೋರುತ್ತದೆ.
4. 'ತತ್' ಎಂದು ಹೆಚ್ಚಾಗಿ ಮ॥ ಮ್ಯ॥

ಯಲ್ಲ, ಅದು ಎಂಥದ್ದು, ತನ್ನ ಧರ್ಮಗಳಿಂದ (ನೋಡಿದರೆ) ಹೇಗೆ ಕಾಣುವಂಥದ್ದು?(ಇಲ್ಲಿರುವ) ಚಶಬ್ದವು ಸಮುಚ್ಚಯ(ವನ್ನು ಹೇಳುವ)ದಕ್ಕೆ. 'ಯದ್ವಿಕಾರಿ' ಯಾವ ವಿಕಾರವುಳ್ಳ ಯಾವದಕ್ಕೆ (ಸೇರಿದ್ದೋ) ಅದು ಯದ್ವಿಕಾರಿ. ಎಲ್ಲಿಂದ ಎಂದರೆ ಯಾವದರಿಂದ ಯಾವದು, (ಯಾವ) ಕಾರ್ಯವು ಹುಟ್ಟುತ್ತದೆಯೋ ಎಂದು ವಾಕ್ಯಕ್ಕೆ ಸೇರಿಸಿಕೊಳ್ಳಬೇಕು. ಮತ್ತು ಅವನು ಯಾವನು, ಯಾವ ಕ್ಷೇತ್ರಜ್ಞನನ್ನು (ಹಿಂದೆ) ತಿಳಿಸಿದೆಯೋ ಅವನು ಯತ್ಪ್ರಭಾವನು, ಯಾವ ಪ್ರಭಾವಗಳು ಎಂದರೆ ಉಪಾಧಿಕೃತವಾದ (ಯಾವ ಯಾವ) ಶಕ್ತಿಗಳು ಇವನಿಗೆ ಇವೆಯೋ ಆ (ಇವನು) ಯತ್ಪ್ರಭಾವನು (ಎಂದರ್ಥ). ಆ ಕ್ಷೇತ್ರಕ್ಷೇತ್ರಜ್ಞರ ನಿಜವಾದ ಸ್ವರೂಪವನ್ನು ಮೇಲೆ ಹೇಳಿದ ವಿವರಗಳೊಡನೆ ಸಮಾಸವಾಗಿ ಎಂದರೆ ಸಂಕ್ಷೇಪವಾಗಿ ನನ್ನಿಂದ ನನ್ನ ವಚನದಿಂದ ಕೇಳು, ಕೇಳಿ ಗೊತ್ತುಪಡಿಸಿಕೊ ಎಂದರ್ಥ.

(ಭಾಷ್ಯ)

೨೩೪. ತತ್ ಕ್ಷೇತ್ರಕ್ಷೇತ್ರಜ್ಞಯಾಥಾತ್ಮ್ಯಂ ವಿವಕ್ಷಿತಂ ಸ್ತೌತಿ ಶ್ರೋತೃಬುದ್ಧಿಪ್ರರೋಚನಾರ್ಥಮ್—

(ಭಾಷ್ಯಾರ್ಥ)

(ತಾನು) ಹೇಳಬೇಕೆಂದಿರುವ ಆ ಕ್ಷೇತ್ರಕ್ಷೇತ್ರಜ್ಞರ ಯಾಥಾತ್ಮ್ಯವನ್ನು ಕೇಳುವ (ಅರ್ಜುನನ) ಬುದ್ಧಿಗೆ ಸವಿಹತ್ತಿಸುವದಕ್ಕಾಗಿ (ಭಗವಂತನು) ಹೊಗಳುತ್ತಿದಾನೆ :—

**ಋಷಿಭಿರ್ಬಹುಧಾ ಗೀತಂ ಛನ್ದೋಭಿರ್ವಿವಿಧೈಃ ಪೃಥಕ್**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪ ॥**

೪. ಋಷಿಗಳಿಂದ ಬಹುವಾಗಿ ವಿವಿಧಛಂದಸ್ಸುಗಳಿಂದ ಬೇರೆ ಬೇರೆಯಾಗಿ ಹಾಡಲ್ಪಟ್ಟಿರುವದು, ಹೇತುಗಳಿಂದೊಡಗೂಡಿ ನಿಶ್ಚಯರೂಪವಾಗಿರುವ ಬ್ರಹ್ಮಸೂತ್ರಪದಗಳಿಂದಲೂ (ಹಾಡಲ್ಪಟ್ಟಿರುವದು).

(ಭಾಷ್ಯ)

೨೩೫. ಋಷಿಭಿಃ ವಸಿಷ್ಠಾದಿಭಿಃ ಬಹುಧಾ ಬಹುಪ್ರಕಾರಂ ಗೀತಂ ಕಥಿತಮ್ । ಛನ್ದೋಭಿಃ ಛನ್ದಾಂಸಿ ಋಗಾದೀನಿ ತೈಃ ಛನ್ದೋಭಿಃ ವಿವಿಧೈಃ[1] ನಾನಾ

---

1. 'ನಾನಾಭಾವೈಃ' ಎಂದು ಹೆಚ್ಚಾಗಿ ಮು॥ ಮೈ॥ ಗು॥ ವಾ॥

ಪ್ರಕಾರೈಃ ಪೃಥಕ್ ವಿವೇಕತಃ ಗೀತಮ್ ! ಕಿಂಚ ಬ್ರಹ್ಮಸೂತ್ರಪದೈಶ್ಚ ಬ್ರಹ್ಮಣಃ ಸೂಚಕಾನಿ ವಾಕ್ಯಾನಿ ಬ್ರಹ್ಮಸೂತ್ರಾಣಿ ತೈಃ ಪದ್ಯತೇ ಗಮ್ಯತೇ[1] ಜ್ಞಾಯತೇ ಬ್ರಹ್ಮ ಇತಿ ತಾನಿ[2] ಪದಾನಿ ಉಚ್ಯನ್ತೇ। ತೈರೇವ ಚ[3] ಕ್ಷೇತ್ರಕ್ಷೇತ್ರಜ್ಞಯೋಃ ಯಾಥಾತ್ಮ್ಯಂ 'ಗೀತಮ್' ಇತಿ ಅನುವರ್ತತೇ। "ಆತ್ಮೇತ್ಯೇವೋಪಾಸೀತ" (ಬೃ. ೧-೪-೭) ಇತ್ಯಾದಿಭಿಃ[4] ಬ್ರಹ್ಮಸೂತ್ರಪದೈಃ ಆತ್ಮಾ ಜ್ಞಾಯತೇ। ಹೇತುಮದ್ಭಿಃ ಯುಕ್ತಿಯುಕ್ತೈಃ ವಿನಿಶ್ಚಿತೈಃ ನಿಃಸಂಶಯರೂಪೈಃ ನಿಶ್ಚಿತಪ್ರತ್ಯಯೋತ್ಪಾದಕೈಃ[5] ಇತ್ಯರ್ಥಃ ||

(ಭಾಷ್ಯಾರ್ಥ)

ಋಷಿಗಳಿಂದ ವಸಿಷ್ಠರೇ ಮುಂತಾದವರಿಂದ ಬಹುವಾಗಿ ಅನೇಕ ಪ್ರಕಾರವಾಗಿ ಹಾಡಲ್ಪಟ್ಟಿರುವದು, ಹೇಳಲ್ಪಟ್ಟಿರುವದು. ಛಂದಸ್ಸುಗಳಿಂದ–ಛಂದಸ್ಸುಗಳೆಂದರೆ ಋಗಾದಿಗಳು, ಆ ವಿವಿಧವಾದ ಬಗೆಬಗೆಯಾಗಿರುವ (ಛಂದಸ್ಸುಗಳಿಂದ), ಬೇರೆಬೇರೆಯಾಗಿ ವಿಂಗಡಿಸಿ ಹಾಡಲ್ಪಟ್ಟಿರುವದು. ಮತ್ತು ಬ್ರಹ್ಮಸೂತ್ರಪದಗಳಿಂದಲೂ–ಬ್ರಹ್ಮವನ್ನು ಸೂಚಿಸುವ ವಾಕ್ಯಗಳು ಬ್ರಹ್ಮಸೂತ್ರಗಳು; ಅವುಗಳಿಂದ ಪಡೆಯಲ್ಪಡುತ್ತದೆ, ಬ್ರಹ್ಮವು ಹೊಂದಲ್ಪಡುತ್ತದೆ, ಅರಿಯಲ್ಪಡುತ್ತದೆ; ಆದ್ದರಿಂದ (ಅವು) ಪದಗಳೆನಿಸುವವು. ಅವುಗಳಿಂದಲೂ–ಕ್ಷೇತ್ರಕ್ಷೇತ್ರಜ್ಞರ ತತ್ತ್ವವು ಹಾಡಲ್ಪಟ್ಟಿರುತ್ತದೆ ಎಂದು (ಹಿಂದಿನಿಂದ) ಸೇರಿಸಿಕೊಳ್ಳಬೇಕು. "ಆತ್ಮನೆಂದೇ ಉಪಾಸನೆಮಾಡಬೇಕು" (ಬೃ ೧-೪-೭) ಮುಂತಾದ **ಬ್ರಹ್ಮಸೂತ್ರಪದಗಳಿಂದ**[6] ಆತ್ಮನು ಅರಿಯಲ್ಪಡುತ್ತಾನೆ. ಹೇತುಗಳಿಂದೊಡಗೂಡಿದ ಎಂದರೆ ಯುಕ್ತಿಯುಕ್ತವಾಗಿರುವ[7]

---

1. "ತೈಃ ಪದೈಃ ಪದ್ಯತೇ ಜ್ಞಾಯತೇ" ಮ||, ತೈಃ ಪದೈಃ ಜ್ಞಾಯತೇ" ಮೈ||
2. ಮ|| ಮೈ||ಗಳಲ್ಲಿಲ್ಲ.
3. 'ತೈಶ್ಚೈವ' ಮ||
4. 'ಇತ್ಯೇವಮಾದಿಭಿಃ' ಮ|| ಮೈ||
5. 'ನಿಶ್ಚಯಪ್ರತ್ಯಯೋ.' ಮ||
6. ಆತ್ಮಸ್ವರೂಪವನ್ನು ತಿಳಿಸುವ ವಾಕ್ಯಗಳನ್ನೇ ಇಲ್ಲಿ ಬ್ರಹ್ಮಸೂತ್ರಪದಗಳೆಂದು ಕರೆದಿದೆ_ಎಂಬುದನ್ನು ಲಕ್ಷ್ಯದಲ್ಲಿಡಬೇಕು.
7. ಯುಕ್ತಿಯುಕ್ತವಾದ ಎಂಬ ವಿಶೇಷಣವಿರುವದರಿಂದ ಇಲ್ಲಿ ವೇದಾಂತಸೂತ್ರಗಳನ್ನೇ ಪರಾಮರ್ಶಿಸಿದೆಯೆಂದೂ ಹಾಗಿಲ್ಲದಿದ್ದರೆ ಇಲ್ಲಿ ಪುನರುಕ್ತಿಯಾಗುವದೆಂದೂ ಆ|| ಟೀಕೆ. "ಶ್ರೋತ್ರಾದಿಗಳು ಕರ್ಮನಾಮಗಳು, ತಾನು ಶ್ರೋತ್ರಾದಿರೂಪನೆಂದು ತಿಳಿದವನು ಅಸಂಪೂರ್ಣನಾಗುತ್ತಾನೆ" ಎಂಬ ವಚನವನ್ನೇ ಇಲ್ಲಿ ಯುಕ್ತಿಯೆಂದು ಭಾವಿಸಿದರೆ ಭಾಷ್ಯಕ್ಕೆ ಯಾವ ದೋಷವೂ ತಟ್ಟುವದಿಲ್ಲವೆಂದು ನಮ್ಮ ಅಭಿಪ್ರಾಯ.

ವಿನಿಶ್ಚಿತವಾದ ಎಂದರೆ ಯಾವ ಸಂಶಯವೂ ಇಲ್ಲದ ರೂಪವುಳ್ಳ ಎಂದರೆ ನಿಶ್ಚಿತವಾದ ಅರಿವನ್ನು ಉಂಟುಮಾಡುವ[1] (ಬ್ರಹ್ಮಸೂತ್ರಪದಗಳಿಂದ ಹಾಡಲ್ಪಟ್ಟಿರುತ್ತಾನೆ) ಎಂದರ್ಥ.

## ಕ್ಷೇತ್ರದ ವಿವರ

(ಭಾಷ್ಯ)

೨೩೬. ಸ್ತುತ್ಯಾ ಅಭಿಮುಖೀಭೂತಾಯ ಅರ್ಜುನಾಯ ಆಹ ಭಗವಾನ್—

(ಭಾಷ್ಯಾರ್ಥ)

(ವಿಷಯದ) ಸ್ತುತಿಯಿಂದ (ಸವಿ ಹತ್ತಿ ಅದನ್ನು ಕೇಳಬೇಕೆಂದು) ತನ್ನ ಕಡೆಗೆ ತಿರುಗಿರುವ ಅರ್ಜುನನನ್ನು ಕುರಿತು ಭಗವಂತನು (ಈಗ ಹೀಗೆಂದು) ಹೇಳುತ್ತಾನೆ:—

**ಮಹಾಭೂತಾನ್ಯಹಙ್ಕಾರೋ ಬುದ್ಧಿರವ್ಯಕ್ತಮೇವ ಚ ।**
**ಇನ್ದ್ರಿಯಾಣಿ ದಶೈಕಂ ಚ ಪಞ್ಚ ಚೇನ್ದ್ರಿಯಗೋಚರಾಃ ॥ ೫ ॥**

೫. ಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತ, ಇಂದ್ರಿಯಗಳು ಹತ್ತು ಮತ್ತು ಒಂದು, ಇಂದ್ರಿಯಗೋಚರಗಳು ಐದು;

(ಭಾಷ್ಯ)

೨೩೭. ಮಹಾಭೂತಾನಿ ಮಹಾನ್ತಿ ಚ ತಾನಿ[2] ಸರ್ವವಿಕಾರವ್ಯಾಪಕತ್ವಾತ್ ಭೂತಾನಿ ಚ ಸೂಕ್ಷ್ಮಾಣಿ। ಸ್ಥೂಲಾನಿ ತು ಇನ್ದ್ರಿಯಗೋಚರಶಬ್ದೇನ ಅಭಿಧಾಯಿಷ್ಯನ್ತೇ। ಅಹಙ್ಕಾರಃ ಮಹಾಭೂತಕಾರಣಮ್ ಅಹಂಪ್ರತ್ಯಯಲಕ್ಷಣಃ। ಅಹಙ್ಕಾರಕಾರಣಂ ಬುದ್ಧಿಃ ಅಧ್ಯವಸಾಯಲಕ್ಷಣಾ ತತ್ಕಾರಣಮ್ ಅವ್ಯಕ್ತಮೇವ ಚ । ನ ವ್ಯಕ್ತಮ್ ಅವ್ಯಕ್ತಮ್ ಅವ್ಯಾಕೃತಮ್ ಈಶ್ವರಶಕ್ತಿಃ 'ಮಮ ಮಾಯಾ ದುರತ್ಯಯಾ" (೭-೧೪) ಇತ್ಯುಕ್ತಮ್। ಏವಶಬ್ದಃ ಪ್ರಕೃತ್ಯವಧಾರಣಾರ್ಥಃ[3]। ಏತಾವತ್ಯೇವ ಅಷ್ಟಧಾ ಭಿನ್ನಾ ಪ್ರಕೃತಿಃ। ಚಶಬ್ದಃ ಭೇದಸಮುಚ್ಚಯಾರ್ಥಃ।

---

1. ಅಬೋಧಕತ್ವ, ಸಂಶಯಿತಬೋಧಕತ್ವ, ವಿಪರೀತಬೋಧಕತ್ವ—ಎಂಬ ಅಪ್ರಾಮಾಣ್ಯಕಾರಣವಿಲ್ಲದ.

2. "ಭೂತಾನಿ ಚ ಮಹಾಭೂತಾನಿ। ತೇಷಾಂ ಮಹತ್ತ್ವಂ ಸರ್ವವಿಕಾರವ್ಯಾಪಕತ್ವಾತ್ ದ್ರಷ್ಟವ್ಯಮ್। ತಾನಿ" ಮು॥

3. 'ಉಕ್ತಃ' ಎಂದು ಹೆಚ್ಚಾಗಿ ಮು॥

ಇನ್ದ್ರಿಯಾಣಿ ದಶ, ಶ್ರೋತ್ರಾದೀನಿ ಪಞ್ಚ, ಬುದ್ಧ್ಯುತ್ಪಾದಕತ್ವಾತ್ ಬುದ್ಧೀನ್ದ್ರಿಯಾಣಿ, ವಾಕ್ಪಾಣ್ಯಾದೀನಿ ಪಞ್ಚ ಕರ್ಮನಿರ್ವರ್ತಕತ್ವಾತ್ ಕರ್ಮೇನ್ದ್ರಿಯಾಣಿ। ತಾನಿ ದಶ। ಏಕಂ ಚ। ಕಿಂ ತತ್? ಮನಃ ಏಕಾದಶಂ ಸಙ್ಕಲ್ಪಾದ್ಯಾತ್ಮಕಮ್ ಪಞ್ಚ ಚ ಇನ್ದ್ರಿಯಗೋಚರಾಃ ಶಬ್ದಾದಯೋ ವಿಷಯಾಃ। ತಾನಿ ಏತಾನಿ ಸಾಙ್ಖ್ಯಾಃ ಚತುರ್ವಿಂಶತಿತತ್ತ್ವಾನಿ ಆಚಕ್ಷತೇ ॥

(ಭಾಷ್ಯಾರ್ಥ)

**ಮಹಾಭೂತಗಳು :** ಇವು ವಿಕಾರಗಳನ್ನೆಲ್ಲ[1] ವ್ಯಾಪಿಸಿಕೊಂಡಿರುವದರಿಂದ ಮಹತ್ತಾದವು ಮತ್ತು ಭೂತಗಳು ; (ಇವು) ಸೂಕ್ಷ್ಮಭೂತಗಳೇ. ಸ್ಥೂಲ (ಭೂತ) ಗಳನ್ನಾದರೆ 'ಇಂದ್ರಿಯಗೋಚರ' ಎಂಬ ಶಬ್ದದಿಂದ ಮುಂದೆ ಹೇಳಲಾಗುವದು. **ಅಹಂಕಾರ :** (ಈ) ಮಹಾಭೂತಗಳಿಗೆ ಕಾರಣವಾಗಿರುವ ನಾನು ಎಂಬ ಪ್ರತ್ಯಯದಿಂದ ತೋರತಕ್ಕದ್ದು[2]. **ಬುದ್ಧಿ :** ಅಹಂಕಾರಕ್ಕೆ ಕಾರಣವಾದ ನಿಶ್ಚಯರೂಪ (ಪ್ರತ್ಯಯದಿಂದ) ತೋರುವ (ತತ್ತ್ವವು)[3]. **ಅವ್ಯಕ್ತವು :** ಆ (ಬುದ್ಧಿಗೆ) ಕಾರಣವಾದ (ತತ್ತ್ವವು); (ಇದು) ವ್ಯಕ್ತವಲ್ಲದ್ದರಿಂದ[4] ಅವ್ಯಕ್ತ(ವೆನಿಸುವದು) ; ಅವ್ಯಾಕೃತವೆಂಬ "ಮಮ ಮಾಯಾ ದುರತ್ಯಯಾ" ನನ್ನ ಮಾಯೆ ದಾಟಲಶಕ್ಯವಾದದ್ದು (೭-೧೪)ಎಂದು ಹೇಳಿತ್ತಲ್ಲ, (ಆ) ಈಶ್ವರಶಕ್ತಿಯು. (ಇಲ್ಲಿರುವ) ಏವ ಎಂಬ ಮಾತು ಪ್ರಕೃತಿಯನ್ನು ನಿಶ್ಚಯಿಸಿ ಹೇಳುವದಕ್ಕೆ ಬಂದಿದೆ: ಇದಿಷ್ಟೇ **ಎಂಟು ಬಗೆಯಾಗಿ ಬೇರೆಬೇರೆಯಾಗಿ ತೋರುವ ಪ್ರಕೃತಿಯು**[5]. ಚಶಬ್ದವು ಬೇರೆಬೇರೆಯಾಗಿ (ಹೇಳಿದ ಮಹಾಭೂತಾದಿಗಳನ್ನು) ಕೂಡಿಸುವದಕ್ಕೆ. **ಇಂದ್ರಿಯಗಳು ಹತ್ತು :** ಜ್ಞಾನವನ್ನುಂಟುಮಾಡುವದರಿಂದ **ಜ್ಞಾನೇಂದ್ರಿಯಗಳೆನಿಸುವ** ಶ್ರೋತ್ರವೇ

---

1. ತಮ್ಮ ಕಾರ್ಯಗಳನ್ನೆಲ್ಲ ಎಂದರ್ಥ.

2. ನಮ್ಮಲ್ಲಿ ನಾನು ಎಂಬ ಅರಿವಿನಿಂದ ತೋರುವ ಅಹಂಕಾರವು ವ್ಯಷ್ಟಿಯು ; ಇವುಗಳ ಒಟ್ಟಾದ ಸಮಷ್ಟ್ಯಹಂಕಾರವು ಮೂಲಪ್ರಕೃತಿಯಿಂದ ಹುಟ್ಟುವದೆಂದು ಸಾಂಖ್ಯರ ವಾದ.

3. ಇದು ಸಮಷ್ಟಿಬುದ್ಧಿಯು ; ಮಹತ್ತು ಎಂದು ಸಾಂಖ್ಯರು ಕರೆಯುವ ತತ್ತ್ವವು.

4. ಇಂದ್ರಿಯಗೋಚರವಲ್ಲದ್ದರಿಂದ.

5. ೭-೫ರಲ್ಲಿ ಹೇಳಿದ ಅಪರಪ್ರಕೃತಿಯು. ಇವುಗಳಲ್ಲಿ ಅವ್ಯಕ್ತವು **ಮೂಲ ಪ್ರಕೃತಿ ;** ಮಹದಾದಿಗಳು ಏಳು **ಪ್ರಕೃತಿವಿಕೃತಿಗಳು ;** ಇಂದ್ರಿಯಾದಿಗಳು **ವಿಕಾರಗಳು.** ಮಹದಾದಿಗಳು ಎಂದರೆ ಮಹತ್ತು, ಅಹಂಕಾರ, ಪಂಚತನ್ಮಾತ್ರೆಗಳು. ಹನ್ನೊಂದು ಇಂದ್ರಿಯಗಳೂ, ಐದು ಮಹಾಭೂತಗಳೂ ವಿಕಾರಗಳೆನಿಸುವವು.

ಮುಂತಾದವು ಐದು, ಕೆಲಸವನ್ನು ನೆರವೇರಿಸುವದರಿಂದ **ಕರ್ಮೇಂದ್ರಿಯಗಳೆನಿಸುವ** ವಾಕ್ಕು, ಪಾಣಿ–ಮುಂತಾದವು ಐದು. ಇವು ಹತ್ತು, **ಮತ್ತು ಒಂದು**: **ಅದು ಯಾವದು?** ಮನಸ್ಸು, ಸಂಕಲ್ಪವೇ ಮುಂತಾದ ರೂಪದ ಹನ್ನೊಂದನೆಯ (ಇಂದ್ರಿಯವು).[1] ಆ ಇವುಗಳನ್ನು **ಸಾಂಖ್ಯರು** ಇಪ್ಪತ್ತು ನಾಲ್ಕು ತತ್ತ್ವಗಳು ಎನ್ನುತ್ತಾರೆ.

(ಭಾಷ್ಯ)

೨೩೮. ಅಥ ಇದಾನೀಮ್ ಆತ್ಮಗುಣಾಃ ಇತಿ ಯಾನ್ ಆಚಕ್ಷತೇ ವೈಶೇಷಿಕಾಃ, ತೇಽಪಿ ಕ್ಷೇತ್ರಧರ್ಮಾ ಏವ ನ ತು ಕ್ಷೇತ್ರಜ್ಞಸ್ಯ ಇತ್ಯಾಹ ಭಗವಾನ್—

(ಭಾಷ್ಯಾರ್ಥ)

ಈಗ **ವೈಶೇಷಿಕರು** ಆತ್ಮನ ಗುಣಗಳೆಂದು ಹೇಳುತ್ತಾರಲ್ಲ, ಅವೂ ಕ್ಷೇತ್ರಧರ್ಮಗಳೇ ಕ್ಷೇತ್ರಜ್ಞನ (ಧರ್ಮ)ಗಳಲ್ಲ–ಎಂದು ಭಗವಂತನು ಹೇಳುತ್ತಾನೆ: —

**ಇಚ್ಛಾ ದ್ವೇಷಃ ಸುಖಂ ದುಃಖಂ ಸಙ್ಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೬ ॥**

೬. ಇಚ್ಛೆ, ದ್ವೇಷ, ಸುಖ, ದುಃಖ, ಸಙ್ಘಾತ, ಚೇತನ, ಧೃತಿ–ಇದೇ ಕ್ಷೇತ್ರವು, (ಇದನ್ನು) ಸವಿಕಾರವಾಗಿ ಸಮಾಸದಿಂದ ಹೇಳಿದ್ದಾಯಿತು.

(ಭಾಷ್ಯ)

೨೩೯. ಇಚ್ಛಾ । ಯಜ್ಜಾತೀಯಂ ಸುಖಹೇತುಮ್[2] ಅರ್ಥಮ್ ಉಪಲಬ್ಧವಾನ್ ಪೂರ್ವಂ ಪುನಃ ತಜ್ಜಾತೀಯಮ್ ಉಪಲಭಮಾನಃ ತಮ್[3] ಆದಾತುಮ್ ಇಚ್ಛತಿ ಸುಖಹೇತುರಿತಿ । ಸೇಯಮ್ ಇಚ್ಛಾ ಅನ್ತಃಕರಣಧರ್ಮಃ[4] ಜ್ಞೇಯತ್ವಾತ್ ಕ್ಷೇತ್ರಮ್ । ತಥಾ ದ್ವೇಷಃ। ಯಜ್ಜಾತೀಯಮ್ ಅರ್ಥಮ್ ದುಃಖಹೇತುತ್ವೇನ ಅನುಭೂತವಾನ್ ಪುನಃ ತಜ್ಜಾತೀಯಮ್ ಅರ್ಥಮ್[5] ಉಪಲಭಮಾನಃ ತಂ ದ್ವೇಷ್ಟಿ[6] ಸೋಽಯಂ ದ್ವೇಷಃ ಜ್ಞೇಯತ್ವಾತ್ ಕ್ಷೇತ್ರಮೇವ । ತಥಾ ಸುಖಮ್

1. ಮನಸ್ಸೂ, ಇಂದ್ರಿಯವೆಂಬುದಕ್ಕೆ ಸೂ. ಭಾ. ೨-೪-೬, ೧೭ ನೋಡಿ.
2. ' ಸುಖಾತ್ಮಕಮ್ ' ಮ|| ಮೈ||
3. ' ಸಮುಪಲಭಮಾನಃ ತಮರ್ಥಮ್ ' ಮ|| ಮೈ||
4. ' ಅನ್ತಃಕರಣಸ್ಯ ಧರ್ಮಃ ' ಮ|| ಮೈ||
5. ನಿ|| ಪಾಠದಲ್ಲಿಲ್ಲ.
6. ' ದುಃಖಹೇತುರಿತಿ ' ಎಂದು ಹೆಚ್ಚಾಗಿ ಮ|| ಮೈ||

ಅನುಕೂಲಂ ಪ್ರಸನ್ನಸತ್ತ್ವಾತ್ಮಕಂ[1] ಜ್ಞೇಯತ್ವಾತ್ ಕ್ಷೇತ್ರಮೇವ। ದುಃಖಂ ಪ್ರತಿಕೂಲಾತ್ಮಕಮ್। ಜ್ಞೇಯತ್ವಾತ್ ತದಪಿ ಕ್ಷೇತ್ರಮ್[2]। ಸಙ್ಘಾತಃ ದೇಹೇನ್ದ್ರಿಯಾಣಾಂ ಸಂಹತಿಃ। ತಸ್ಯಾಮ್[3] ಅಭಿವ್ಯಕ್ತಾ ಅನ್ತಃಕರಣವೃತ್ತಿಃ ತಪ್ತೇ ಇವ ಲೋಹಪಿಣ್ಡೇ ಅಗ್ನಿಃ ಆತ್ಮಚೈತನ್ಯರಸವಿದ್ಧಾ[4] ಚೇತನಾ। ಸಾ ಚ ಕ್ಷೇತ್ರಮ್। ಜ್ಞೇಯತ್ವಾತ್। ಧೃತಿಃ ಯಯಾ ಅವಸಾದಂ[5] ಪ್ರಾಪ್ತಾನಿ ದೇಹೇನ್ದ್ರಿಯಾಣಿ ಧ್ರಿಯನ್ತೇ[6]। ಸಾ ಚ ಜ್ಞೇಯತ್ವಾತ್ ಕ್ಷೇತ್ರಮ್। ಸರ್ವಾನ್ತಃಕರಣಧರ್ಮೋಪಲಕ್ಷಣಾರ್ಥಮ್ ಇಚ್ಛಾದಿಗ್ರಹಣಮ್। ಯತ್ ಉಕ್ತಂ ತತ್[7] ಉಪಸಂಹರತಿ— ಏತತ್ ಕ್ಷೇತ್ರಂ ಸಮಾಸೇನ ಸವಿಕಾರಂ ಸಹ ವಿಕಾರೇಣ ಮಹದಾದಿನಾ **ಉದಾಹೃತಮ್ ಉಕ್ತಮ್** ||

(ಭಾಷ್ಯಾರ್ಥ)

**ಇಚ್ಛೆ :** ಮೊದಲು ಯಾವ ಜಾತಿಯ ವಸ್ತು ಸುಖಕ್ಕೆ ಕಾರಣವೆಂದು ಅನುಭವಿಸಿದ್ದನೋ ಮತ್ತೆ ಅದೇ ಜಾತಿಯ (ವಸ್ತು)ವನ್ನು ಕಂಡು ಸುಖಕ್ಕೆ ಕಾರಣವೆಂದು ಅದನ್ನು ತೆಗೆದುಕೊಳ್ಳಬೇಕೆಂದು ಬಯಸುತ್ತಾ(ನಷ್ಟೆ), ಅಂಥ ಈ ಇಚ್ಛೆಯು ಅಂತಃಕರಣಧರ್ಮವು; ಜ್ಞೇಯವಾದ್ದರಿಂದ[8] ಕ್ಷೇತ್ರವು. ಇದರಂತೆ **ದ್ವೇಷವು :** ಯಾವ ಜಾತಿಯ ವಸ್ತುವು ದುಃಖಕ್ಕೆ ಕಾರಣವೆಂದು ಅನುಭವಿಸಿದ್ದನೋ, ಮತ್ತೆ ಅದೇ ಜಾತಿಯ ವಸ್ತುವನ್ನು ಕಂಡು ಅದನ್ನು ಹಗೆಮಾಡುವ(ನಷ್ಟೆ), ಅಂಥ ಈ ದ್ವೇಷವು ಜ್ಞೇಯವಾಗಿರುವದರಿಂದ ಕ್ಷೇತ್ರವೇ. ಇದರಂತೆ **ಸುಖವು** ಎಂದರೆ ಅನುಕೂಲ

---

1. 'ಪ್ರಸನ್ನಸತ್ತ್ವಾತ್ಮಜಂ' ಮು|| ಮೈ||
2. ಕ್ಷೇತ್ರಮೇವ' ಮು|| ಮೈ||
3. 'ತಸ್ಮಿನ್' ಮು|| ಮೈ||
4. "ಚೈತನ್ಯಾಭಾಸರಸವಿದ್ಧಾ" ಎಂಬ ಆ|| ಟೀಕಾಸಮ್ಮತವಾದ ಪಾಠವೇ ಅಚ್ಚಿನ ಪುಸ್ತಕಗಳಲ್ಲಿದೆ ; ಅನುವಾದದಲ್ಲಿರುವ ಟಿಪ್ಪಣಿಯನ್ನು ನೋಡಿ.
5. 'ಅವಸಾದನಂ' ನಿ||, 'ಅವಸಾನಂ' ಮು||
6. 'ವಿಷ್ಟಭ್ಯ ಧ್ರಿಯನ್ತೇ' ಮು||
7. 'ಯತಃ ಉಕ್ತಮ್' ಎಂದಿಷ್ಟೇ ಆ|| ನಿ|| ವಾ||
8. ಯಾವದು ಜ್ಞೇಯವೋ ಅದು ಜ್ಞಾತೃವಿನ ಧರ್ಮವಲ್ಲವೆಂಬ ನ್ಯಾಯದಿಂದ ಇಲ್ಲಿ ಹೇಳಿರುವ ಅಂತಃಕರಣಧರ್ಮಗಳು ಯಾವವೂ ಕ್ಷೇತ್ರಜ್ಞನ ಧರ್ಮವಲ್ಲವೆಂದು ತಿಳಿಯಬೇಕು. ಈ ನ್ಯಾಯವನ್ನು ಅವಲಂಬಿಸಿಯೇ ಭಾಷ್ಯಕಾರರು ೨ನೆಯ ಶ್ಲೋಕದ ಚರ್ಚೆಯಲ್ಲಿ ಕ್ಷೇತ್ರಜ್ಞನು ನಿತ್ಯಶುದ್ಧಬುದ್ಧಮುಕ್ತನೆಂದು ಸಾಧಿಸಿರುವದು.

ವಾದದ್ದು, ಪ್ರಸನ್ನವಾದ ಅಂತಃಕರಣದ ರೂಪ(ವಾದ ಅನುಭವವು) ; ಜ್ಞೇಯವಾಗಿರುವದರಿಂದ (ಇದೂ) ಕ್ಷೇತ್ರವೇ. ದುಃಖವೆಂದರೆ ಪ್ರತಿಕೂಲವಾದದ್ದು ; ಜ್ಞೇಯವಾಗಿರುವದರಿಂದ ಅದೂ ಕ್ಷೇತ್ರವೇ. **ಸಂಘಾತವು** : ದೇಹೇಂದ್ರಿಯಗಳು ಒಂದಾಗಿ ಸೇರಿದ (ಗುಂಪು). ಅದರಲ್ಲಿ ಹೊರತೋರಿಕೊಳ್ಳುವ ಅಂತಃಕರಣವೃತ್ತಿಯು ; ಕಾದ ಕಬ್ಬಿಣದ ಗಟ್ಟಿಯಲ್ಲಿ ಬೆಂಕಿಯು (ತೋರು)ವಂತೆ, ಆತ್ಮನ ಚೈತನ್ಯದ ರಸದಿಂದ[1] ವ್ಯಾಪ್ತವಾಗಿ(ರುವ ಆ ವೃತ್ತಿಯು) **ಚೇತನವು**[2]. ಅದೂ ಜ್ಞೇಯವಾಗಿರುವದರಿಂದ ಕ್ಷೇತ್ರವು. **ಧೃತಿ** : ಯಾವದರಿಂದ ಕುಸಿದುಬಿದ್ದಿರುವ ದೇಹೇಂದ್ರಿಯಗಳು ಎತ್ತಿ ಹಿಡಿಯಲ್ಪಡುವವೋ (ಅದು)[3]. ಅದೂ ಜ್ಞೇಯವಾಗಿರುವದರಿಂದ ಕ್ಷೇತ್ರವು.

(ಇಲ್ಲಿ) ಇಚ್ಛೆಯೇ ಮುಂತಾದವುಗಳನ್ನು ತೆಗೆದುಕೊಂಡು (ಹೇಳಿರುವದು) ಅಂತಃಕರಣದ ಧರ್ಮಗಳನ್ನೆಲ್ಲ (ತಿಳಿಸುವದಕ್ಕೆ) ಉಪಲಕ್ಷಣವಾಗಿ. (ಈಗ) ಯಾವದನ್ನು ಹೇಳಿದ್ದಾಯಿತೋ (ಭಗವಂತನು) ಅದನ್ನು ಉಪಸಂಹಾರಮಾಡುತ್ತಾನೆ. ಇದೇ ಕ್ಷೇತ್ರವು ; ಸಂಕ್ಷೇಪವಾಗಿ (ಇದನ್ನು) ಸವಿಕಾರವಾಗಿ ಮಹತ್ತು ಮುಂತಾದ (ಇದರ) ವಿಕಾರಗಳೊಡನೆ ಹೇಳಿದ್ದಾಯಿತು.

## ಜ್ಞಾನಸಾಧನವಾದ ಅಮಾನಿತ್ವಾದಿಗಳು

### (ಭಾಷ್ಯ)

೨೪೦. ಯಸ್ಯ ಕ್ಷೇತ್ರಭೇದಜಾತಸ್ಯ ಸಂಹತಿಃ " ಇದಂ ಶರೀರಂ ಕ್ಷೇತ್ರಮ್" (೧೩-೧) ಇತಿ ಉಕ್ತಮ್ ತತ್ ಕ್ಷೇತ್ರಂ ವ್ಯಾಖ್ಯಾತಮ್ ಮಹಾಭೂತಾದಿಭೇದಭಿನ್ನಂ ಧೃತ್ಯಂತಮ್ । ಕ್ಷೇತ್ರಜ್ಞೋ ವಕ್ಷ್ಯಮಾಣವಿಶೇಷಣಃ । ಯಸ್ಯ ಸಪ್ರಭಾವಸ್ಯ ಕ್ಷೇತ್ರಜ್ಞಸ್ಯ ಪರಿಜ್ಞಾನಾತ್ ಅಮೃತತ್ವಂ ಭವತಿ ತಂ "ಜ್ಞೇಯಂ ಯತ್

---

1. ಚೈತನ್ಯವು ಅಂತಃಕರಣವನ್ನು ವ್ಯಾಪಿಸಿಕೊಂಡಿರುವದರಿಂದ ಅದು ಚೇತನದಂತೆ ತೋರುತ್ತದೆ; ಆದ್ದರಿಂದ ಅದಕ್ಕೂ 'ಚೇತನಾ' ಎಂದೇ ಹೆಸರು ಎಂದು ಭಾವ. 'ಚೈತನ್ಯಾಭಾಸ' ಎಂಬ ಪಾಠವು ದೃಷ್ಟಾಂತಕ್ಕೆ ಹೊಂದುಗೆಯಲ್ಲ. ಟೀಕೆಗನುಗುಣವಾಗಿ ಯಾರೋ ಭಾಷ್ಯವನ್ನು ತಿದ್ದಿರಬೇಕೆಂದು ಕಾಣುತ್ತದೆ.

2. ನಾನು ಎಂಬ ಚಿದಾಭಾಸವು ಅಂತಃಕರಣದಲ್ಲಿ ವ್ಯಾಪಿಸಿರುತ್ತದೆ. ಈ ಅರಿವು ಎಚ್ಚರದಲ್ಲಿ ದೇಹೇಂದ್ರಿಯಗಳನ್ನೆಲ್ಲ ವ್ಯಾಪಿಸಿರುತ್ತದೆ.

3. ಆಯಾಸದಲ್ಲಿ, ರೋಗದಲ್ಲಿ, ಅಥವಾ ನಿದ್ರೆಯಲ್ಲಿ ಈ ಧೃತಿಯಿಲ್ಲದಿರುವದರಿಂದ ಕೈಕಾಲುಗಳು ಕಳಲಿಕೊಂಡಿರುವವು.

ತತ್ ಪ್ರವಕ್ಷ್ಯಾಮಿ" (೧೩-೧೨) ಇತ್ಯಾದಿನಾ ಸವಿಶೇಷಣಂ ಸ್ವಯಮೇವ ವಕ್ಷ್ಯತಿ ಭಗವಾನ್ । ಅಧುನಾ ತು ತಜ್ಜ್ಞಾನಸಾಧನಗಣಮ್ [1] ಅಮಾನಿತ್ವಾದಿಲಕ್ಷಣಮ್-ಯಸ್ಮಿನ್ ಸತಿ ತಜ್ಜ್ಞೇಯವಿಜ್ಞಾನೇ [2] ಅಧಿಕೃತೋ ಭವತಿ, ಯತ್ಪರಃ ಸಂನ್ಯಾಸೀ 'ಜ್ಞಾನನಿಷ್ಠಃ' ಉಚ್ಯತೇ, ತಮ್ ಅಮಾನಿತ್ವಾದಿಗಣಮ್ [3] ಜ್ಞಾನಸಾಧನತ್ವಾತ್ ಜ್ಞಾನಶಬ್ದವಾಚ್ಯಂ-ವಿದಧಾತಿ ಭಗವಾನ್—

(ಭಾಷ್ಯಾರ್ಥ)

ಯಾವ ಕ್ಷೇತ್ರದ ಅನೇಕ ವಿಕಾರಗಳ ಗುಂಪನ್ನೇ "ಈ ಶರೀರವು ಕ್ಷೇತ್ರವು" (೧೩-೧) ಎಂದು ಹೇಳಲಾಗಿತ್ತೋ, ಮಹಾಭೂತವೇ ಮುಂತಾದ ವಿಶೇಷಗಳುಳ್ಳದ್ದಾಗಿ ಬೇರೆಬೇರೆಯಾಗಿರುವ ಧೃತಿಯವರೆಗಿನ ಆ ಕ್ಷೇತ್ರವನ್ನು ವಿವರಿಸಿದ್ದಾಯಿತು. ಕ್ಷೇತ್ರಜ್ಞನೆಂದರೆ ಮುಂದೆ ಹೇಳುವ ವಿಶೇಷಣಗಳುಳ್ಳವನು. ಪ್ರಭಾವಗಳೊಡಗೂಡಿದ ಯಾವ ಕ್ಷೇತ್ರಜ್ಞನನ್ನು ಅರಿತುಕೊಳ್ಳುವದರಿಂದ ಅಮೃತತ್ವವಾಗುವದೋ, ಆತನನ್ನು "ಜ್ಞೇಯವು ಯಾವದೋ ಅದನ್ನು ಹೇಳುವೆನು" (೧೩-೧೨) ಎಂದು ಮುಂತಾಗಿರುವ (ಗ್ರಂಥ)ದಿಂದ ಭಗವಂತನು ತಾನೇ ವಿಶೇಷಣಗಳೊಡನೆ ಹೇಳುವನು. ಆದರೆ ಈಗ ಅವನನ್ನು ಅರಿತುಕೊಳ್ಳುವದಕ್ಕೆ (ಬೇಕಾಗಿರುವ) ಸಾಧನಗಳ ಸಮೂಹವನ್ನು-**ಯಾವದಿದ್ದರೆ ಆ ಜ್ಞೇಯನಾದ (ಕ್ಷೇತ್ರಜ್ಞನನ್ನು) ಅರಿತುಕೊಳ್ಳುವದಕ್ಕೆ ತಕ್ಕ ಅಧಿಕಾರಿಯಾಗಿರುವನೋ, ಯಾವದರಲ್ಲಿಯೇ ತಾತ್ಪರ್ಯದಿಂದ ನೆಲೆನಿಂತಿರುವ ಸಂನ್ಯಾಸಿಯು 'ಜ್ಞಾನನಿಷ್ಠನು' ಎನಿಸುವನೋ, ಜ್ಞಾನಕ್ಕೆ ಸಾಧನವಾಗಿರುವದರಿಂದ ಜ್ಞಾನವೆಂಬ ಹೆಸರಿನಿಂದ ಕರೆಯಿಸಿಕೊಳ್ಳುವ** [4] **ಆ ಅಮಾನಿತ್ವಾದಿ(ಗಳ) ಸಮೂಹವನ್ನು**-ಭಗವಂತನು ತಿಳಿಸಿಕೊಡುತ್ತಿದಾನೆ:—

**ಅಮಾನಿತ್ವಮದಮ್ಭಿತ್ವಮಹಿಂಸಾ ಕ್ಷಾನ್ತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೭ ॥**

---

1. 'ಸಾಧನಂ ಗುಣಮ್' ಮೈ॥
2. 'ಜ್ಞೇಯವಿಜ್ಞಾನೇ' ಎಂದಿಷ್ಟೇ ಮ॥ ಮೈ॥
3. 'ಅಮಾನಿತ್ವಾದಿಗುಣಮ್' ಮ॥ ಮೈ॥
4. ಅಮಾನಿತ್ವವೇ ಮುಂತಾದವು ಜ್ಞಾನಿಯಲ್ಲಿ ಸ್ವಭಾವಸಿದ್ಧವಾಗಿರುವದರಿಂದಲೂ ಇವುಗಳನ್ನು ಯತ್ನಪೂರ್ವಕವಾಗಿ ಸಾಧನಮಾಡುವವನು ಜ್ಞಾನವನ್ನು ಪಡೆಯುವದರಿಂದಲೂ ಇವುಗಳನ್ನು ಲಕ್ಷಣೆಯಿಂದ ಜ್ಞಾನ ಎಂದು ಕರೆದಿದೆ ಎಂದರ್ಥ.

೭. ಅಮಾನಿತ್ವ, ಅದಂಭಿತ್ವ, ಅಹಿಂಸೆ, ಕ್ಷಾಂತಿ, ಆರ್ಜವ, ಆಚಾರ್ಯೋಪಾಸನೆ, ಶೌಚ, ಸ್ಥೈರ್ಯ, ಆತ್ಮವಿನಿಗ್ರಹ ;

(ಭಾಷ್ಯ)

೨೪೧. ಅಮಾನಿತ್ವಮ್। ಮಾನಿನೋ ಭಾವಃ ಮಾನಿತ್ವಮ್ ಆತ್ಮನಃ ಶ್ಲಾಘನಮ್[1] । ತದಭಾವಃ ಅಮಾನಿತ್ವಮ್ । ಅದಮ್ಭಿತ್ವಮ್ ಸ್ವಧರ್ಮಪ್ರಕಟೀಕರಣಂ ದಮ್ಭಿತ್ವಮ್ । ತದಭಾವಃ ಅದಮ್ಭಿತ್ವಮ್ । ಅಹಿಂಸಾ ಅಹಿಂಸನಂ ಪ್ರಾಣಿನಾಮ್ ಅಪೀಡನಮ್ । ಕ್ಷಾನ್ತಿಃ ಪರಾಪರಾಧಪ್ರಾಪ್ತೌ ಅವಿಕ್ರಿಯಾ । ಆರ್ಜವಮ್ ಋಜುಭಾವಃ ಅವಕ್ರತ್ವಮ್ । ಆಚಾರ್ಯೋಪಾಸನಂ ಮೋಕ್ಷಸಾಧನೋಪದೇಷ್ಟುಃ ಆಚಾರ್ಯಸ್ಯ ಶುಶ್ರೂಷಾದಿಪ್ರಯೋಗೇಣ ಸೇವನಮ್ । ಶೌಚಂ ಕಾಯಮಲಾನಾಂ ಮೃಜ್ಜಲಾಭ್ಯಾಂ ಪ್ರಕ್ಷಾಲನಮ್ । ಅನ್ತಶ್ಚ ಮನಸಃ ಪ್ರತಿಪಕ್ಷಭಾವನಯಾ ರಾಗಾದಿ ಮಲಾನಾಮ್ ಅಪನಯನಂ ಶೌಚಮ್ । ಸ್ಥೈರ್ಯಂ ಸ್ಥಿರಭಾವಃ ಮೋಕ್ಷಮಾರ್ಗೇ ಏವ ಕೃತಾಧ್ಯವಸಾಯತ್ವಮ್ । ಆತ್ಮವಿನಿಗ್ರಹಃ । ಆತ್ಮನಃ ಉಪಕಾರಕತಯಾ[2] ಆತ್ಮಶಬ್ದವಾಚ್ಯಸ್ಯ ಕಾರ್ಯಕರಣಸಙ್ಘಾತಸ್ಯ ವಿನಿಗ್ರಹಃ ಸ್ವಭಾವೇನ ಸರ್ವತಃ ಪ್ರವೃತ್ತಸ್ಯ ಸನ್ಮಾರ್ಗೇ ಏವ ನಿರೋಧಃ ಆತ್ಮವಿನಿಗ್ರಹಃ ॥

(ಭಾಷ್ಯಾರ್ಥ)

**ಅಮಾನಿತ್ವವು** : ಮಾನಿತ್ವ ಎಂದರೆ ಮಾನಿಯಾಗಿರುವದು, ತನ್ನನ್ನು ತಾನೇ ಮೆಚ್ಚುವದು ; ಅದಲ್ಲದ್ದು ಅಮಾನಿತ್ವವು[3]. **ಅದಂಭಿತ್ವವು** : ದಂಭಿತ್ವವೆಂದರೆ ತನ್ನ ಧರ್ಮವನ್ನು ಪ್ರಕಟಮಾಡಿಕೊಳ್ಳುವದು ; ಅದಲ್ಲದ್ದು ಅದಂಭಿತ್ವವು **ಅಹಿಂಸೆ** : ಹಿಂಸೆ ಮಾಡದಿರುವದು, ಪ್ರಾಣಿಗಳಿಗೆ ತೊಂದರೆಮಾಡದಿರುವದು. **ಕ್ಷಾಂತಿ** : ಮತ್ತೊಬ್ಬರು ತಪ್ಪುಮಾಡಿದರೂ (ಮನಸ್ಸಿನಲ್ಲಿ) ವಿಕಾರವನ್ನು ಹೊಂದದಿರುವದು. **ಆರ್ಜವ** : ಋಜುವಾಗಿರುವದು, ಕೊಂಕು (ನಡತೆ)ಯಿಲ್ಲದೆ ಇರುವದು. **ಆಚಾರ್ಯೋಪಾಸನ** : ಮೋಕ್ಷಕ್ಕೆ (ಬೇಕಾದ) ಸಾಧನವನ್ನು ಉಪದೇಶ

---

1. 'ಮಾನಿತ್ವಮ್ ಆತ್ಮನಃ ಶ್ಲಾಘನಮ್' ಎಂದಿಷ್ಟೇ ಮ||

2. 'ಆತ್ಮನೋಽಪಕಾರಕಸ್ಯ' ಎಂಬ ಅ|| ನಿ|| ಗು|| ಪಾಠಕ್ಕಿಂತ ಈ ಮ|| ಮೈ|| ಪಾಠವು ಮೇಲು.

3. ಮಾನಿತ್ವವಲ್ಲದ್ದು ಎಂದು ಮುಂತಾಗಿ ಇಲ್ಲಿ ವಿಗ್ರಹಗಳನ್ನು ತಿಳಿಸಿದ್ದರೂ ಅಮಾನಿತ್ವಾದಿಗಳು ಅಭಾವಮಾತ್ರವಲ್ಲ, ಅದಕ್ಕಾಗಿ ಮಾಡುವ ಭಾವರೂಪವಾದ ಪ್ರಯತ್ನವು ಎಂದು ಭಾಷ್ಯಕಾರರ ಅವತರಣಿಕೆಯಿಂದ ವ್ಯಕ್ತವಾಗುತ್ತದೆ.

ಮಾಡುವ ಆಚಾರ್ಯನನ್ನು ಶುಶ್ರೂಷೆಯೇ ಮುಂತಾದವುಗಳನ್ನು ಮಾಡುವದರಿಂದ ಸೇವಿಸುವದು. **ಶೌಚವು** : ಶರೀರದ ಮಲಗಳನ್ನು ಮಣ್ಣುನೀರುಗಳಿಂದ **ತೊಳೆದು** ಕೊಳ್ಳುವದು, ಮತ್ತು ಒಳಗೆ ಮನಸ್ಸಿನಲ್ಲಿರುವ ರಾಗವೇ ಮುಂತಾದ ಮಲಗಳನ್ನು ಪ್ರತಿಪಕ್ಷವನ್ನು ಭಾವನೆಮಾಡುವದರಿಂದ[1] ಹೋಗಲಾಡಿಸಿಕೊಳ್ಳುವದು **ಸ್ಥೈರ್ಯವು** : ಸ್ಥಿರವಾಗಿರುವದು, ಮೋಕ್ಷಮಾರ್ಗದಲ್ಲಿಯೇ (ನಡೆಯುವೆನೆಂದು) ನಿಶ್ಚಯವನ್ನು ಮಾಡಿಕೊಂಡಿರುವದು. **ಆತ್ಮವಿನಿಗ್ರಹ** : ಆತ್ಮನಿಗೆ ಬೇಕಾದದ್ದನ್ನು ಮಾಡಿಕೊಡುವ (ಸಾಧನ)ವಾಗಿರುವದರಿಂದ ಆತ್ಮ ಎಂಬ ಹೆಸರಿನಿಂದ ಕರೆಯಿಸಿಕೊಳ್ಳುವ ಕಾರ್ಯಕರಣಸಂಘಾತದ ವಿನಿಗ್ರಹವು, ಸ್ವಭಾವದಿಂದ ಎಲ್ಲಾ ಕಡೆಗೂ ಹರಿಯುತ್ತಿರುವ ಅದನ್ನು ಸರಿಯಾದ ದಾರಿಯಲ್ಲಿಯೇ (ನಡೆಯುವಂತೆ) ತಡೆಗಟ್ಟುವದು ಆತ್ಮವಿನಿಗ್ರಹವು.

**ಇನ್ದ್ರಿಯಾರ್ಥೇಷು ವೈರಾಗ್ಯಮನಹಙ್ಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ ೮ ॥**

೮. ಇಂದ್ರಿಯಾರ್ಥಗಳಲ್ಲಿ ವೈರಾಗ್ಯವು ಮತ್ತು ಅನಹಂಕಾರವೇ (ಇರುವದು), ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನವು.

(ಭಾಷ್ಯ)

೨೪೨. ಕಿಂಚ ಇನ್ದ್ರಿಯಾರ್ಥೇಷು ಶಬ್ದಾದಿಷು ದೃಷ್ಟಾದೃಷ್ಟೇಷು[2] ಭೋಗೇಷು[3] ವಿರಾಗಭಾವಃ ವೈರಾಗ್ಯಮ್ । ಅನಹಂಕಾರಃ ಅಹಂಕಾರಾಭಾವ ಏವ ಚ । ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ । ಜನ್ಮ ಚ ಮೃತ್ಯುಶ್ಚ ಜರಾ ಚ ವ್ಯಾಧಯಶ್ಚ ದುಃಖಾನಿ ಚ । ತೇಷು ಜನ್ಮಾದಿದುಃಖಾನ್ತೇಷು[4] ಪ್ರತ್ಯೇಕಂ ದೋಷಾನುದರ್ಶನಮ್ । ಜನ್ಮನಿ ಗರ್ಭವಾಸಃ ಯೋನಿದ್ವಾರಾ[5] ನಿಃಸರಣಂ

---

1. ರಾಗವನ್ನು ವೈರಾಗ್ಯದಿಂದ, ದ್ವೇಷವನ್ನು ಪ್ರೇಮದಿಂದ—ಹೀಗೆ ಪ್ರತಿಪಕ್ಷಗಳನ್ನು ಭಾವಿಸಿ ರಾಗಾದಿಗಳನ್ನು ಕಳೆದುಕೊಳ್ಳುವದೂ ಶೌಚವೇ. ಪ್ರತಿಪಕ್ಷಭಾವನೆಯ ವಿಷಯಕ್ಕೆ ಯೋ. ಸೂ. ಭಾ. ೨-೩೩ನ್ನು ನೋಡಿರಿ.

2. 'ದೃಷ್ಟಾದೃಷ್ಟೇಷ್ವ—' ಮ॥

3. 'ವಿಷಯಭೋಗೇಷು' ಮ॥ ಮೈ॥

4. 'ಜನ್ಮಾದಿಷು ದುಃಖಾನ್ತೇಷು' ಮ॥

5. 'ಗರ್ಭವಾಸಯೋನಿದ್ವಾರಾ' ಅ॥ ನಿ; 'ದ್ವಾರ' ಮ॥ ಮೈ॥—ಎಂಬ ಅಚ್ಚಿನ ಪುಸ್ತಕದ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ದೋಷಃ । ತಸ್ಯ ಅನುದರ್ಶನಮ್ ಆಲೋಚನಮ್ । ತಥಾ ಮೃತ್ಯೌ ದೋಷಾನುದರ್ಶನಮ್ । ತಥಾ ಜರಾಯಾಂ ಪ್ರಜ್ಞಾಶಕ್ತಿತೇಜೋನಿರೋಧದೋಷಾನುದರ್ಶನಂ ಪರಿಭೂತತಾ ಚ ಇತಿ । ತಥಾ ವ್ಯಾಧಿಷು ಶಿರೋರೋಗಾದಿಷು ದೋಷಾನುದರ್ಶನಮ್ । ತಥಾ ದುಃಖೇಷು ಅಧ್ಯಾತ್ಮಾಧಿಭೂತಾಧಿದೈವನಿಮಿತ್ತೇಷು [1] । ಅಥ ವಾ ದುಃಖಾನ್ಯೇವ ದೋಷಃ ದುಃಖದೋಷಃ । ತಸ್ಯ ಜನ್ಮಾದಿಷು ಪೂರ್ವವತ್ ಅನುದರ್ಶನಮ್ [2] । ದುಃಖಂ ಜನ್ಮ, ದುಃಖಂ ಮೃತ್ಯುಃ, ದುಃಖಂ ಜರಾ, ದುಃಖಂ ವ್ಯಾಧಯಃ [3] । ದುಃಖನಿಮಿತ್ತತ್ವಾತ್ ಜನ್ಮಾದಯೋ ದುಃಖಂ ನ ಪುನಃ ಸ್ವರೂಪೇಣೈವ ದುಃಖಮ್ [4] ಇತಿ । ಏವಂ ಜನ್ಮಾದಿಷು ದುಃಖದೋಷಾನುದರ್ಶನಾತ್ ದೇಹೇನ್ದ್ರಿಯವಿಷಯಭೋಗೇಷು ವೈರಾಗ್ಯಮ್ ಉಪಜಾಯತೇ । ತತಃ ಪ್ರತ್ಯಗಾತ್ಮನಿ ಪ್ರವೃತ್ತಿಃ ಕರಣಾನಾಮ್ ಆತ್ಮದರ್ಶನಾಯ । ಏವಂ ಜ್ಞಾನಹೇತುತ್ವಾತ್ ಜ್ಞಾನಮ್ ಉಚ್ಯತೇ ಜನ್ಮಾದಿದುಃಖದೋಷಾನುದರ್ಶನಮ್ ॥

(ಭಾಷ್ಯಾರ್ಥ)

ಮತ್ತು ಇಂದ್ರಿಯಾರ್ಥಗಳಲ್ಲಿ ಶಬ್ದವೇ ಮುಂತಾದ ಈ ಲೋಕದ ಮತ್ತು ಪರಲೋಕದ ಭೋಗಗಳಲ್ಲಿ ರಾಗವಿಲ್ಲದೆ ಇರುವದು **ವೈರಾಗ್ಯವು**. ಮತ್ತು **ಅನಹಂಕಾರವು,** ಅಹಂಕಾರವಿಲ್ಲದೆಯೇ ಇರುವದು. ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನವು. ಹುಟ್ಟು, ಸಾವು, ಮುಪ್ಪು, ರೋಗಗಳು, ಮತ್ತು ದುಃಖಗಳು (ಇವೇ ಜನ್ಮಾದಿಗಳು) ; ಈ ಹುಟ್ಟು ಮೊದಲಾಗಿ ದುಃಖದವರೆಗಿನವುಗಳಲ್ಲಿ ಒಂದೊಂದರಲ್ಲಿಯೂ ದೋಷವನ್ನು ಅನುದರ್ಶನ (ಮಾಡುತ್ತಿರುವದು). ಹುಟ್ಟಿನಲ್ಲಿ ಗರ್ಭದಲ್ಲಿರುವದು, ಯೋನಿಯ ಮೂಲಕವಾಗಿ ಹೊರಕ್ಕೆ ಬರುವದು–(ಎಂಬುದು) ದೋಷವು ; ಅದನ್ನು ಅನುದರ್ಶನ (ನೋಡುವದು) ಎಂದರೆ ಆಲೋಚಿಸುತ್ತಿರುವದು. ಇದರಂತೆ ಸಾವಿನಲ್ಲಿ ದೋಷವನ್ನು ಅನುದರ್ಶನ (ಮಾಡುವದು) [5]. ಹೀಗೆಯೇ ಮುಪ್ಪಿನಲ್ಲಿ ಪ್ರಜ್ಞೆ, ಶಕ್ತಿ, ತೇಜಸ್ಸು–ಇವುಗಳು ನಾಶವಾದ (ಜನರ) ತಿರಸ್ಕಾರವೂ

1. 'ಅಧ್ಯಾತ್ಮಿಕಾಧಿಬೌತಿಕಾಧಿದೈವಿಕನಿಮಿತ್ತೇಷು' ಮ॥ ಮೈ॥
2. 'ದರ್ಶನಮ್' ಮ॥ ಮೈ॥
3. 'ದುಃಖಾನಿ ನ ಸ್ವರೂಪೇಣೈವ' ಮ॥ ಮೈ॥
4. ಇಲ್ಲೊಂದು 'ಇತಿ' ಇದ್ದರೆ ಒಳ್ಳೆಯದು.
5. ಸಾವು, ರೋಗ_ಇವುಗಳಲ್ಲಿ ಆಗುವ ದೋಷಗಳು ಮುಖ್ಯವಾಗಿ ಅವಯವಗಳ ಸ್ವಾಧೀನವು ತಪ್ಪುವದು ಮುಂತಾದವು.

ಎಂಬ (ದೋಷವಿದೆ). ಹೀಗೆಯೇ ರೋಗಗಳಲ್ಲಿ, ತಲೆನೋವೇ ಮುಂತಾದವುಗಳಲ್ಲಿ ದೋಷಾನುದರ್ಶನವು. ಹಾಗೂ ದುಃಖಗಳಲ್ಲಿ ಅಧ್ಯಾತ್ಮ, ಅಧಿಭೂತ, ಅಧಿದೈವ-ಎಂಬ ನಿಮಿತ್ತಗಳಿಂದಾಗುವ (ದುಃಖಗಳಲ್ಲಿ ದೋಷಾನುದರ್ಶನವು). ಅಥವಾ ('ಜನ್ಮ ಮೃತ್ಯು ........' ಎಂಬುದಕ್ಕೆ ಹೀಗೂ ಅರ್ಥವನ್ನು ಹೇಳಬಹುದು). ದುಃಖ ದೋಷ ಎಂದರೆ ದುಃಖಗಳ (ರೂಪ)ವಾಗಿಯೇ (ಇರುವ) ದೋಷವು; ಅದನ್ನು ಜನ್ಮಾದಿಗಳಲ್ಲಿ ಹಿಂದೆ ಹೇಳಿರುವಂತೆ ಆಲೋಚಿಸುತ್ತಿರುವದು; "ಹುಟ್ಟುವದು ದುಃಖ, ಸಾಯುವದು ದುಃಖ, ಮುಪ್ಪು ದುಃಖ, ರೋಗಗಳು ದುಃಖ" (ಎಂದು ಚಿಂತಿಸುತ್ತಿರುವದು). ಜನ್ಮವೇ ಮುಂತಾದವು ದುಃಖಕ್ಕೆ ಕಾರಣವಾಗಿರುವದರಿಂದ ದುಃಖವೇ ಹೊರತು ತಮ್ಮ ರೂಪದಿಂದಲೇ ದುಃಖವಲ್ಲ. ಈ ರೀತಿಯಲ್ಲಿ ಜನ್ಮಾದಿ ಗಳಲ್ಲಿ ದುಃಖದೋಷವನ್ನು ಆಲೋಚಿಸುತ್ತಿರುವದರಿಂದ ದೇಹೇಂದ್ರಿಯವಿಷಯ ಭೋಗಗಳಲ್ಲಿ ವೈರಾಗ್ಯವುಂಟಾಗುತ್ತದೆ. ಅದರಿಂದ ಕರಣಗಳು ಆತ್ಮದರ್ಶನಕ್ಕಾಗಿ ಪ್ರತ್ಯಗಾತ್ಮನ ಕಡೆಗೆ ತಿರುಗುತ್ತವೆ[1]. ಹೀಗೆ ಜನ್ಮಾದಿಗಳ ದುಃಖದೋಷಾನು ದರ್ಶನವು ಜ್ಞಾನಕ್ಕೆ ಹೇತುವಾಗಿರುವದರಿಂದ 'ಜ್ಞಾನ' ಎನಿಸುತ್ತದೆ.

**ಅಸಕ್ತಿರನಭಿಷ್ವಙ್ಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೯ ॥**

೯. ಪುತ್ರ, ದಾರ, ಗೃಹ-ಮುಂತಾದವುಗಳಲ್ಲಿ ಅಸಕ್ತಿಯು, ಅನ ಭಿಷ್ವಂಗವು; ಇಷ್ಟಾನಿಷ್ಟೋಪಪತ್ತಿಗಳಲ್ಲಿ ನಿತ್ಯವೂ ಸಮಚಿತ್ತನಾಗಿರು ವದು;

(ಭಾಷ್ಯ)

೨೪೩. ಕಿಂಚ ಅಸಕ್ತಿಃ। ಸಕ್ತಿಃ ಸಙ್ಗನಿಮಿತ್ತೇಷು ವಿಷಯೇಷು ಪ್ರೀತಿ ಮಾತ್ರಮ್ । ತದಭಾವಃ ಅಸಕ್ತಿಃ । ಅನಭಿಷ್ವಙ್ಗಃ, ಅಭಿಷ್ವಙ್ಗಾಭಾವಃ । ಅಭಿ ಷ್ವಙ್ಗೋ ನಾಮ ಆಸಕ್ತಿವಿಶೇಷ ಏವ ಅನನ್ಯಾತ್ಮಭಾವನಾ ಲಕ್ಷಣಃ । ಯಥಾ ಅನ್ಯ ಸ್ಮಿನ್ ಸುಖಿನಿ ದುಃಖಿನಿ ವಾ 'ಅಹಮೇವ ಸುಖೀ ದುಃಖೀ ಚ ಜೀವತಿ ಮೃತೇ ವಾ 'ಅಹಮೇವ ಜೀವಾಮಿ ಮರಿಷ್ಯಾಮಿ ಚ' ಇತಿ । ಕ್ವ ಇತಿ? ಆಹ-ಪುತ್ರದಾರ ಗೃಹಾದಿಷು । ಪುತ್ರೇಷು, ದಾರೇಷು, ಗೃಹೇಷು, ಆದಿಗ್ರಹಣಾತ್ ಅನ್ಯೇಷ್ವಪಿ ಅತ್ಯನ್ತೇಷ್ಟೇಷು ದಾಸವರ್ಗಾದಿಷು । ತಚ್ಚ ಉಭಯಂ ಜ್ಞಾನಾರ್ಥತ್ವಾತ್

1. ಕ. ೨-೧-೧; ಮಾಂ. ಕಾ. ಭಾ. ೩-೪೩.

ಜ್ಞಾನಮ್ ಉಚ್ಯತೇ । ನಿತ್ಯಂ ಚ ಸಮಚಿತ್ತತ್ವಂ ತುಲ್ಯಚಿತ್ತತಾ । ಕ್ವ ? [1] ಇಷ್ಟಾನಿಷ್ಟೋಪಪತ್ತಿಷು । ಇಷ್ಟಾನಾಮ್ ಅನಿಷ್ಟಾನಾಂ ಚ ಉಪಪತ್ತಯಃ ಸಂಪ್ರಾಪ್ತಯಃ । ತಾಸು ಇಷ್ಟಾನಿಷ್ಟೋಪಪತ್ತಿಷು ನಿತ್ಯಮೇವ ತುಲ್ಯಚಿತ್ತತಾ [2] । ಇಷ್ಟೋಪಪತ್ತಿಷು ನ ಹೃಷ್ಯತಿ, ನ ಕುಪ್ಯತಿ ಚ ಅನಿಷ್ಟೋಪಪತ್ತಿಷು । ತಚ್ಚೈತತ್ ನಿತ್ಯಂ ಸಮಚಿತ್ತತ್ವಂ ಜ್ಞಾನಮ್ ॥

(ಭಾಷ್ಯಾರ್ಥ)

ಮತ್ತು **ಅಸಕ್ತಿ**: ಸಕ್ತಿ ಎಂದರೆ ಸಂಗಕ್ಕೆ ಕಾರಣವಾಗಿರುವ ವಿಷಯಗಳಲ್ಲಿ ಸಾಮಾನ್ಯಪ್ರೀತಿಯು, ಅದಿಲ್ಲದಿರುವದು ಅಸಕ್ತಿ. **ಅನಭಿಷ್ವಂಗ**: ಅಭಿಷ್ವಂಗವಿಲ್ಲದಿರುವದು. ಅಭಿಷ್ವಂಗವೆಂದರೆ ತಾನು ಬೇರೆಯಲ್ಲವೆಂದು (ತಾನೇ ಎಂಬ) ಭಾವನೆಯ ರೂಪವಾಗಿರುವ [3] ಆಸಕ್ತಿವಿಶೇಷವೇ. ಉದಾಹರಣೆಗೆ ಮತ್ತೊಬ್ಬನು ಸುಖಿಯಾಗಿದ್ದರೆ ಅಥವಾ ದುಃಖಿಯಾಗಿದ್ದರೆ "ನಾನೇ ಸುಖಿ ಮತ್ತು ದುಃಖಿ", ಬದುಕಿದ್ದರೆ ಅಥವಾ ಸತ್ತರೆ "ನಾನೇ ಬದುಕಿದೆನು ಅಥವಾ ಸಾಯುವೆನು" ಎನ್ನುವದು (ಅಭಿಷ್ವಂಗವು). ಏತರಲ್ಲಿ (ಅಭಿಷ್ವಂಗವಿಲ್ಲದಿರುವದು) ? ಎಂದರೆ ಹೇಳುತ್ತಾನೆ. ಮಕ್ಕಳಲ್ಲಿ, ಹೆಂಡತಿಯಲ್ಲಿ, ಮನೆಯಲ್ಲಿ–(ಇಲ್ಲಿ) ಆದಿ ಎಂದಿರುವದರಿಂದ–(ತನಗೆ) ಬಹಳವಾಗಿ ಬೇಕಾಗಿರುವ ಆಳುಗಳ ಸಮೂಹ ಮುಂತಾದ ಬೇರೆಯವರಲ್ಲಿಯೂ (ಎಂದು ಅರ್ಥಮಾಡಿಕೊಳ್ಳಬೇಕು). (ಅಸಕ್ತಿ, ಅನಭಿಷ್ವಂಗ ಎಂಬ) ಈ ಎರಡೂ ಜ್ಞಾನಕ್ಕಾಗಿ (ಬೇಕಾದವುಗಳಾ)ದ್ದರಿಂದ (ಇವಕ್ಕೆ) ಜ್ಞಾನ ಎಂದು ಹೆಸರು· ಯಾವಾಗಲೂ ಸಮಚಿತ್ತನಾಗಿರುವದು, ಒಂದೇ ಬಗೆಯ ಚಿತ್ತವುಳ್ಳವನಾಗಿರುವದು. ಏತರಲ್ಲಿ? ಎಂದರೆ ಇಷ್ಟಾನಿಷ್ಟೋಪಪತ್ತಿಗಳಲ್ಲಿ ; ಬೇಕಾದವುಗಳ ಮತ್ತು ಬೇಡವಾದವುಗಳ ಉಪಪತ್ತಿಗಳು ಎಂದರೆ ಪ್ರಾಪ್ತಿಗಳು, ಆ ಇಷ್ಟಾನಿಷ್ಟೋಪಪತ್ತಿಗಳಲ್ಲಿ ಯಾವಾಗಲೂ ಸಮಚಿತ್ತನಾಗಿರುವದು. ಬೇಕಾದವುಗಳು ಬಂದೊದಗಿದರೆ ಉಬ್ಬುವದಿಲ್ಲ, ಬೇಡವಾದವುಗಳು ಬಂದೊದಗಿದರೆ ಸಿಟ್ಟುಮಾಡಿಕೊಳ್ಳುವದಿಲ್ಲ–(ಹೀಗಿರುವದು). ಅಂಥ ಈ ಯಾವಾಗಲೂ ಸಮಚಿತ್ತನಾಗಿರುವದುಕೂಡ ಜ್ಞಾನವು.

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೦ ॥**

---

1. 'ಕೇಷು ಇತಿ ? ಆಹ—' ಮ॥ ವಾ॥
2. 'ತುಲ್ಯವರ್ತನಮ್ ' ಮ॥
3. ಈ ಅಭಿಮಾನವೇ "ಅಧ್ಯಾಸ"ವೆಂಬುದು.

೧೦. ಮತ್ತು ನನ್ನಲ್ಲಿ ಅನನ್ಯಯೋಗದಿಂದ ಅವ್ಯಭಿಚಾರಿಯಾಗಿರುವ ಭಕ್ತಿಯು, ವಿವಿಕ್ತದೇಶಸೇವಿತ್ವವು, ಜನಸಂಸತ್ತಿನಲ್ಲಿ ಅರತಿಯು.

(ಭಾಷ್ಯ)

೨೪೪. ಕಿಂಚ ಮಯಿ ಚ ಈಶ್ವರೇ ಅನನ್ಯಯೋಗೇನ ಅಪೃಥಕ್ಸಮಾಧಿನಾ ನಾನ್ಯಃ ಭಗವತಃ ವಾಸುದೇವಾತ್ ಪರಃ ಅಸ್ತಿ, ಅತಃ ಸ ಏವ ನೋ ಗತಿಃ ಇತ್ಯೇವಂ ನಿಶ್ಚಿತಾ ಅವ್ಯಭಿಚಾರಿಣೀ ಬುದ್ಧಿಃ ಅನನ್ಯಯೋಗಃ ತೇನ ಭಜನಂ ಭಕ್ತಿಃ ನ ವ್ಯಭಿಚರಣಶೀಲಾ ಅವ್ಯಭಿಚಾರಿಣೀ। ಸಾ ಚ ಜ್ಞಾನಮ್। ವಿವಿಕ್ತದೇಶಸೇವಿತ್ವಮ್। ವಿವಿಕ್ತಃ ಸ್ವಭಾವತಃ ಸಂಸ್ಕಾರೇಣ ವಾ ಅಶುಚ್ಯಾದಿಭಿಃ ಸರ್ಪವ್ಯಾಘ್ರಾದಿಭಿಶ್ಚ [1] ರಹಿತಃ ಅರಣ್ಯನದೀಪುಲಿನದೇವಗೃಹಾದಿಃ ವಿವಿಕ್ತಃ ದೇಶಃ। ತಂ ಸೇವಿತುಂ ಶೀಲಮ್ ಅಸ್ಯ ಇತಿ ವಿವಿಕ್ತದೇಶಸೇವೀ। ತದ್ಭಾವಃ ವಿವಿಕ್ತದೇಶಸೇವಿತ್ವಮ್। ವಿವಿಕ್ತೇಷು ಹಿ ದೇಶೇಷು [2] ಚಿತ್ತಂ ಪ್ರಸೀದತಿ ಯತಃ ತತಃ ಆತ್ಮಾದಿಭಾವನಾ ವಿವಿಕ್ತೇ ಉಪಜಾಯತೇ [3]। ಅತಃ ವಿವಿಕ್ತದೇಶಸೇವಿತ್ವಂ ಜ್ಞಾನಮ್ ಉಚ್ಯತೇ। ಅರತಿಃ ಅರಮಣಂ [4] ಜನಸಂಸದಿ। ಜನಾನಾಂ ಪ್ರಾಕೃತಾನಾಂ ಸಂಸ್ಕಾರಶೂನ್ಯಾನಾಮ್ ಅವಿನೀತಾನಾಂ ಸಂಸತ್ ಸಮವಾಯಃ ಜನಸಂಸತ್। ನ ಸಂಸ್ಕಾರವತಾಂ ವಿನೀತಾನಾಂ ಸಂಸತ್। ತಸ್ಯಾಂ ಜ್ಞಾನೋಪಕಾರಕತ್ವಾತ್ [5]। ಅತಃ ಪ್ರಾಕೃತಜನಸಂಸದಿ ಅರತಿಃ ಜ್ಞಾನಾರ್ಥತ್ವಾತ್ ಜ್ಞಾನಮ್ ॥

(ಭಾಷ್ಯಾರ್ಥ)

ಮತ್ತು **ಈಶ್ವರನಾದ** ನನ್ನಲ್ಲಿ ಅನನ್ಯಯೋಗದಿಂದ, ಬೇರೊಂದು ಕಡೆಯುಲ್ಲಿಲ್ಲದ ಮನಸ್ಸಮಾಧಾನದಿಂದ ಭಗವಂತನಾದ ವಾಸುದೇವನಿಗಿಂತ ಹೆಚ್ಚಿನವನು ಮತ್ತೊಬ್ಬನು ಇಲ್ಲ, ಆದ್ದರಿಂದ ಆತನೇ ನಮಗೆ ಗತಿಯು "ಎಂದೀ ಪರಿಯಲ್ಲಿ ನಿಶ್ಚಯಿಸಿರುವ, ಅವ್ಯಭಿಚಾರಿಯಾದ ಬುದ್ಧಿಯು **ಅನನ್ಯಯೋಗವು**, ಅದರಿಂದ ಭಜಿಸುವದು ಭಕ್ತಿಯು. ಅವ್ಯಭಿಚಾರಿಯಾದದ್ದು ಎಂದರೆ (ಆತನಲ್ಲಿ) ತಪ್ಪದೆ ಇರುವ ಸ್ವಭಾವದ್ದು. ಆ **ಅವ್ಯಭಿಚಾರಿಭಕ್ತಿಯೂ ಜ್ಞಾನವೇ** [6]. **ವಿವಿಕ್ತದೇಶ**

---

1. 'ಸರ್ಪಚೋರವ್ಯಾಘ್ರಾದಿಭಿಶ್ಚ' ಮ॥, 'ಸರ್ಪಚೋರವ್ಯಾಘ್ರಭಯಾದಿಭಿಶ್ಚ' ಮೈ॥
2. 'ವಿವಿಕ್ತದೇಶೇ' ಮ॥ ಮೈ॥
3. 'ಸಂಜಾಯತೇ' ಮ॥ ಮೈ॥
4. 'ಕ್ವ' ಎಂದು ಹೆಚ್ಚಾಗಿ ಮ॥
5. 'ಉಪಕಾರಿತ್ವಾತ್' ಮ॥ ಮೈ॥
6. ಏಕೆಂದರೆ ಅದರಿಂದ ಜ್ಞಾನವುಂಟಾಗುತ್ತದೆ.

**ಸೇವಿತ್ವವು.** ವಿವಿಕ್ತವಾದ, ತಾನೇ ಆಗಲಿ ಸಂಸ್ಕಾರದಿಂದಲೇ ಆಗಲಿ ಅಶುಚಿಯೇ ಮುಂತಾದವುಗಳಿಂದಲೂ ಹಾವು ಹುಲಿ ಮುಂತಾದವುಗಳಿಂದಲೂ ಶೂನ್ಯವಾಗಿರುವ ಅರಣ್ಯ, ನದಿಯ ಮಳಲೊಟ್ಟಿಲು, ದೇವಾಲಯ–ಮುಂತಾದದ್ದು ವಿವಿಕ್ತದೇಶವು ; ಅದನ್ನು ಸೇವಿಸುವ ಸ್ವಭಾವವು ಈತನದು, ಆದ್ದರಿಂದ ವಿವಿಕ್ತಸೇವಿಯು. ಅವನ ಭಾವವು ವಿವಿಕ್ತದೇಶಸೇವಿತ್ವವು. ವಿವಿಕ್ತವಾಗಿರುವ ಸ್ಥಲಗಳಲ್ಲಿ ಚಿತ್ತವು ಪ್ರಸನ್ನವಾಗುತ್ತದೆಯಲ್ಲವೆ ? ಆದ್ದರಿಂದ ಆತ್ಮನೇ ಮುಂತಾದದ್ದರ ಭಾವನೆಯು ವಿವಿಕ್ತ (ದೇಶ)ದಲ್ಲಿ ಉಂಟಾಗುತ್ತದೆ. ಆದ್ದರಿಂದ ವಿವಿಕ್ತದೇಶಸೇವಿತ್ವವನ್ನು ಜ್ಞಾನವು ಎಂದು ಕರೆದಿದೆ. **ಅರತಿ** ಎಂದರೆ ರಮಿಸದೆ ಇರುವದು. **ಜನಸಂಸತ್ತಿನಲ್ಲಿ, ಜನರ ಎಂದರೆ ಸಂಸ್ಕಾರಶೂನ್ಯರಾದ ವಿನೀತರಲ್ಲದ ಪ್ರಾಕೃತಜನರ ಸಂಸತ್ತು ಎಂದರೆ ಗುಂಪು ; ಸಂಸ್ಕಾರವಂತರಾದ ವಿನೀತರ ಗುಂಪಲ್ಲ. ಏಕೆಂದರೆ ಅದು ಜ್ಞಾನಕ್ಕೆ ಉಪಕಾರಕವಾಗಿ(ಯೇ) ಇರುತ್ತದೆ**[1]. ಆದ್ದರಿಂದ ಪ್ರಾಕೃತಜನರ ಸಂಸತ್ತಿನಲ್ಲಿ ರತಿಯಿಲ್ಲದಿರುವದು, ಜ್ಞಾನವನ್ನುಂಟುಮಾಡುವದಕ್ಕೆ (ಕಾರಣ)ವಾದ್ದರಿಂದ ಜ್ಞಾನವು.

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೧ ॥**

೧೧. ಅಧ್ಯಾತ್ಮಜ್ಞಾನದಲ್ಲಿ ನಿತ್ಯವಾಗಿರುವದು, ತತ್ತ್ವಜ್ಞಾನಾರ್ಥದರ್ಶನವು. ಇದು ಜ್ಞಾನವೆಂದು ಹೇಳಲ್ಪಟ್ಟಿರುವದು. ಇದಕ್ಕೆ ಬೇರೆಯಾಗಿರುವದು ಯಾವದೋ (ಅದು) ಅಜ್ಞಾನವು.

(ಭಾಷ್ಯ)

೨೪೫. ಕಿಂಚ ಅಧ್ಯಾತ್ಮಜ್ಞಾನನಿತ್ಯತ್ವಮ್ ಆತ್ಮಾದಿವಿಷಯಂ ಜ್ಞಾನಮ್ ಅಧ್ಯಾತ್ಮಜ್ಞಾನಮ್ । ತಸ್ಮಿನ್ ನಿತ್ಯಭಾವಃ ನಿತ್ಯತ್ವಮ್ । ಅಮಾನಿತ್ವಾದೀನಾಂ ಜ್ಞಾನಸಾಧನಾನಾಂ ಭಾವನಾಪರಿಪಾಕನಿಮಿತ್ತಂ ತತ್ತ್ವಜ್ಞಾನಮ್ । ತಸ್ಯಾರ್ಥಃ ಮೋಕ್ಷಃ ಸಂಸಾರೋಪರಮಃ । ತಸ್ಯ ಆಲೋಚನಂ ತತ್ತ್ವಜ್ಞಾನಾರ್ಥದರ್ಶನಮ್। ತತ್ತ್ವಜ್ಞಾನಫಲಾಲೋಚನೇ ಹಿ ತತ್ಸಾಧನಾನುಷ್ಠಾನೇ ಪ್ರವೃತ್ತಿಃ ಸ್ಯಾತ್ ಇತಿ । ಏತತ್ ಅಮಾನಿತ್ವಾದಿ ತತ್ತ್ವಜ್ಞಾನಾರ್ಥದರ್ಶನಾನ್ತಮ್ ಉಕ್ತಂ ಜ್ಞಾನಮ್ ಇತಿ

1. ಸಜ್ಜನರ ಸಂಗವು ಜ್ಞಾನಕ್ಕೆ ಸಾಧನವೇ ಆಗಿದೆ. ಆದ್ದರಿಂದ ಆದನ್ನು ಅವಶ್ಯವಾಗಿ ಮಾಡಬೇಕು.

ಪ್ರೋಕ್ತಮ್, ಜ್ಞಾನಾರ್ಥತ್ವಾತ್ । ಅಜ್ಞಾನಂ ಯತ್ ಅತಃ ಅಸ್ಮಾತ್[1] ಯಥೋಕ್ತಾತ್ ಅನ್ಯಥಾ ವಿಪರ್ಯಯೇಣ । ಮಾನಿತ್ವಮ್, ದಮ್ಭಿತ್ವಮ್, ಹಿಂಸಾ,ಅಕ್ಷಾನ್ತಿಃ, ಅನಾರ್ಜವಮ್–ಇತ್ಯಾದಿ ಅಜ್ಞಾನಂ ವಿಜ್ಞೇಯಂ ಪರಿಹರಣಾಯ। ಸಂಸಾರಪ್ರವೃತ್ತಿಕಾರಣತ್ವಾತ್[2] ಇತಿ ||

(ಭಾಷ್ಯಾರ್ಥ)

ಮತ್ತು **ಅಧ್ಯಾತ್ಮಜ್ಞಾನನಿತ್ಯತ್ವವು**: ಆತ್ಮನೇ ಮುಂತಾದ[3] ವಿಷಯದ ಜ್ಞಾನವು ಅಧ್ಯಾತ್ಮಜ್ಞಾನವು; ಅದರಲ್ಲಿ ನಿತ್ಯನಾಗಿರುವದು (ಅಧ್ಯಾತ್ಮಜ್ಞಾನ ನಿತ್ಯತ್ವವು. **ಅಮಾನಿತ್ವವೇ ಮುಂತಾದ ಜ್ಞಾನಸಾಧನಗಳ ಭಾವನೆಯು ಚೆನ್ನಾಗಿ ಪಕ್ವವಾದ ಕಾರಣದಿಂದ ಉಂಟಾಗುವದು ತತ್ತ್ವಜ್ಞಾನವು; ಅದರ ಅರ್ಥವು** ಎಂದರೆ[4] **ಸಂಸಾರವು (ತೀರ) ಇಲ್ಲದಂತಾಗುವದು ಮೋಕ್ಷವು. ಅದನ್ನು ಆಲೋಚಿಸುತ್ತಿರುವದು ತತ್ತ್ವಜ್ಞಾನಾರ್ಥದರ್ಶನವು.** ತತ್ತ್ವಜ್ಞಾನದ ಫಲವನ್ನು ಕುರಿತು ಆಲೋಚಿಸುತ್ತಿದ್ದರೇ ಅಲ್ಲವೆ, ಅದರ ಸಾಧನಗಳನ್ನು ಮಾಡುವದರಲ್ಲಿ ಪ್ರವೃತ್ತಿಯುಂಟಾಗುತ್ತದೆ ?

ಈ ಅಮಾನಿತ್ವವು ಮೊದಲಾಗಿ ತತ್ತ್ವಜ್ಞಾನಾರ್ಥದರ್ಶನದವರೆಗೆ ಹೇಳಿದ್ದು ಜ್ಞಾನಕ್ಕೆ (ಕಾರಣ)ವಾಗಿರುವದರಿಂದ ಜ್ಞಾನವೆನಿಸಿರುತ್ತದೆ. ಇದಕ್ಕಿಂತ ಮೇಲೆ ಹೇಳಿದ (ಇದಕ್ಕಿಂತ) ಬೇರೆಯಾಗಿ (ಇದಕ್ಕೆ) ವಿರುದ್ಧವಾಗಿರುವದಲ್ಲ, (ಅದು) ಅಜ್ಞಾನವು. ಮಾನಿತ್ವ, ದಂಭಿತ್ವ, ಹಿಂಸೆ, ಅಕ್ಷಾಂತಿ, ಅನಾರ್ಜವ–ಮುಂತಾದ ದ್ದೆಲ್ಲವೂ ಸಂಸಾರವು ಮುಂದೆ ಸಾಗುವದಕ್ಕೆ ಕಾರಣವಾಗಿರುವದರಿಂದ **ಅಜ್ಞಾನವು** ಎಂದು (ಅದನ್ನು) ಬಿಡುವದಕ್ಕಾಗಿ ತಿಳಿದುಕೊಳ್ಳಬೇಕು.[5]

---

1. ‘ ಏತಸ್ಮಾತ್ ’ ಮ|| ವ್ಯ||

2. “ ಸಂಸಾರಸ್ಯ ಪ್ರವೃತ್ತಿಕಾರಣತ್ವಾತ್ ” ಮ|| ವ್ಯ||

3. ಆತ್ಮ, ಅನಾತ್ಮ–ಇವುಗಳ ನಿಜವನ್ನು ಗೊತ್ತುಪಡಿಸಿಕೊಳ್ಳುವದರಲ್ಲಿಯೇ ನಿರತನಾಗಿರುವದು ಅಧ್ಯಾತ್ಮಜ್ಞಾನನಿತ್ಯತ್ವವು.

4. ಪ್ರಯೋಜನ.

5. ಜ್ಞಾನಸಾಧನಗಳನ್ನು ಮಾಡುವದಕ್ಕೆ ತಿಳಿದುಕೊಳ್ಳಬೇಕು, ಜ್ಞಾನಕ್ಕೆ ಅಡ್ಡಿಯಾದವುಗಳನ್ನು ಬಿಡುವದಕ್ಕಾಗಿ ತಿಳಿದುಕೊಳ್ಳಬೇಕು. ಮಾನಿತ್ವಾದಿಗಳು ಅಜ್ಞಾನದ ಕಾರ್ಯವಾಗಿರುವದರಿಂದ ಅಜ್ಞಾನವೆನಿಸಿರುತ್ತವೆ.

# ಜ್ಞೇಯವಾದ ಬ್ರಹ್ಮ

(ಭಾಷ್ಯ)

೨೪೬. ಯಥೋಕ್ತೇನ ಜ್ಞಾನೇನ ಜ್ಞಾತವ್ಯಂ ಕಿಮ್? ಇತ್ಯಾಕಾಙ್ಕ್ಷಾಯಾಮ್ ಆಹ–"ಜ್ಞೇಯಂ ಯತ್ ತತ್" ಇತ್ಯಾದಿ। ನನು ಯಮಾ ನಿಯಮಾಶ್ಚ ಅಮಾನಿತ್ವಾದಯಃ। ನ ತೈಃ ಜ್ಞೇಯಂ ಜ್ಞಾಯತೇ। ನ ಹಿ ಅಮಾನಿತ್ವಾದಿ ಕಸ್ಯಚಿತ್ ವಸ್ತುನಃ ಪರಿಚ್ಛೇದಕಂ ದೃಷ್ಟಮ್। ಸರ್ವತ್ರೈವ ಚ ಯದ್ವಿಷಯಂ (ಯತ್?) ಜ್ಞಾನಂ ತದೇವ ತಸ್ಯ ಜ್ಞೇಯಸ್ಯ ಪರಿಚ್ಛೇದಕಂ ದೃಶ್ಯತೇ। ನ ಹಿ ಅನ್ಯವಿಷಯೇಣ ಜ್ಞಾನೇನ ಅನ್ಯತ್ ಉಪಲಭ್ಯತೇ। ಯಥಾ ಘಟವಿಷಯೇಣ ಜ್ಞಾನೇನ ಅಗ್ನಿಃ। ನೈಷ ದೋಷಃ। ಜ್ಞಾನನಿಮಿತ್ತತ್ವಾತ್ ಜ್ಞಾನಮ್ ಉಚ್ಯತೇ ಇತಿ ಹಿ ಅವೋಚಾಮ। ಜ್ಞಾನಸಹಕಾರಿಕಾರಣತ್ವಾಚ್ಚ ||

(ಭಾಷ್ಯಾರ್ಥ)

ಈ ಮೇಲೆ ಹೇಳಿದ ಜ್ಞಾನದಿಂದ ಅರಿತುಕೊಳ್ಳಬೇಕಾದದ್ದು ಯಾವದು? ಎಂಬ ಶಂಕೆ ಬಂದರೆ (ಅದಕ್ಕೆ ಭಗವಂತನು) "ಜ್ಞೇಯಂ ಯತ್ ತತ್" ಎಂದು ಮುಂತಾಗಿ ಹೇಳಿರುತ್ತಾನೆ.

(ಆಕ್ಷೇಪ):–ಅಮಾನಿತ್ವವೇ ಮುಂತಾದವು **ಯಮ**ಗಳು ಮತ್ತು **ನಿಯಮ**ಗಳು[1]; ಅವುಗಳಿಂದ ಜ್ಞೇಯವನ್ನು ಅರಿತುಕೊಳ್ಳುವದಕ್ಕೆ ಆಗುವದಿಲ್ಲ. ಅಮಾನಿತ್ವವೇ ಮುಂತಾದದ್ದು ಯಾವದೊಂದು ವಸ್ತುವನ್ನೂ ಗೊತ್ತುಪಡಿಸಿ (ತಿಳಿಸುವದು) ಕಂಡುಬಂದಿರುವದಿಲ್ಲ. ಎಲ್ಲಿ (ನೋಡಿದರೂ ಯಾವ) ಜ್ಞಾನವು ಯಾವ ವಿಷಯದ್ದೋ ಆ (ಜ್ಞಾನ)ವೇ ಆ ಜ್ಞೇಯವನ್ನು ಗೊತ್ತುಪಡಿಸಿಕೊಡುವದು ಕಂಡುಬರುತ್ತದೆ. ಒಂದು ವಿಷಯದ ಜ್ಞಾನದಿಂದ ಮತ್ತೊಂದನ್ನು ಅರಿಯುವ (ದಕ್ಕೆ ಆಗುವ)ದೇ ಇಲ್ಲ. ಉದಾಹರಣೆಗೆ ಗಡಿಗೆಯ ವಿಷಯದ ಜ್ಞಾನದಿಂದ ಬೆಂಕಿಯನ್ನು (ಅರಿಯುವದಾಗುವದಿಲ್ಲ)[2].

(ಪರಿಹಾರ):—ಇದೇನೂ ತಪ್ಪಲ್ಲ. ಏಕೆಂದರೆ **ಜ್ಞಾನಕ್ಕೆ ಕಾರಣವಾಗಿರುವದರಿಂದ (ಅಮಾನಿತ್ವವೇ ಮುಂತಾದ ಸಾಧನಗಣವು) ಜ್ಞಾನವೆನಿಸಿ**

---

1. ಶರೀರಪ್ರಧಾನವಾದ ಸಾಧನಗಳು **ನಿಯಮಗಳು**, ಮನಃಪ್ರಧಾನವಾದವು **ಯಮಗಳು.**

2. ಜ್ಞಾನವುಕೂಡ ತನ್ನ ವಿಷಯವನ್ನು ಮಾತ್ರ ಗೊತ್ತುಪಡಿಸಬಲ್ಲದು; ಜ್ಞಾನವೇ ಅಲ್ಲದ ಅಮಾನಿತ್ವಾದಿಗಳು ತಮಗೆ ವಿಷಯವಲ್ಲದ ಆತ್ಮನನ್ನು ಅರಿಯುವದು ಹೇಗೆ?

**ಕೊಂಡಿರುತ್ತದೆ ಎಂದು ನಾವು ಹೇಳಿಯೇ ಇರುತ್ತೇವೆ. ಜ್ಞಾನಕ್ಕೆ ಸಹಕಾರಿಕಾರಣವಾಗಿರುವದರಿಂದಲೂ** [1] (ಇದು ಜ್ಞಾನವೆನಿಸುತ್ತದೆ).

(ಭಾಷ್ಯ)

೨೪೭. ಜ್ಞೇಯಂ ಜ್ಞಾತವ್ಯಂ ಯತ್ ತತ್ ಪ್ರವಕ್ಷ್ಯಾಮಿ ಪ್ರಕರ್ಷೇಣ ಯಥಾವತ್ ವಕ್ಷ್ಯಾಮಿ । ಕಿಂಫಲಂ ತತ್ ? ಇತಿ ಪ್ರರೋಚನೇನ ಶ್ರೋತುಃ ಅಭಿಮುಖೀಕರಣಾಯ ಆಹ—ಯತ್ ಜ್ಞೇಯಂ ಜ್ಞಾತ್ವಾ ಅಮೃತಮ್ ಅಮೃತತ್ವಮ್ [2] ಅಶ್ನುತೇ । ನ ಪುನಃ ಮ್ರಿಯತೇ ಇತ್ಯರ್ಥಃ । ಅನಾದಿಮತ್ ಆದಿಃ ಅಸ್ಯ ಅಸ್ತಿ ಇತಿ ಆದಿಮತ್ । ನ ಆದಿಮತ್ ಅನಾದಿಮತ್ । ಕಿಂ ತತ್ ? ಪರಂ ನಿರತಿಶಯಂ ಬ್ರಹ್ಮ ಜ್ಞೇಯಮ್ ಇತಿ ಪ್ರಕೃತಮ್ ॥

(ಭಾಷ್ಯಾರ್ಥ)

ಯಾವದು ಜ್ಞೇಯವೋ ಅರಿತುಕೊಳ್ಳತಕ್ಕದ್ದೋ ಅದನ್ನು ಪ್ರವಚನ ಮಾಡುವೆನು, (ಪ್ರ ಎಂದರೆ) ಚೆನ್ನಾಗಿ ಇದ್ದದ್ದು ಇದ್ದಂತೆ ಹೇಳುವೆನು. ಅದಕ್ಕೆ ಫಲ ವೇನು ? ಎಂದು (ತಿಳಿಸಿ) ಸವಿಹುಟ್ಟಿಸುವದರಿಂದ ಕೇಳುತ್ತಿರುವ (ಅರ್ಜುನನನ್ನು) ತನ್ನ ಕಡೆಗೆ ತಿರುಗಿಸಿಕೊಳ್ಳುವದಕ್ಕಾಗಿ (ಭಗವಂತನು ಹೀಗೆಂದು) ಹೇಳುತ್ತಾನೆ: ಆ ಜ್ಞೇಯವನ್ನು ಅರಿತುಕೊಂಡರೆ ಅಮೃತವನ್ನು (ಹೊಂದುತ್ತಾನೆ), ಅಮೃತತ್ವ ವನ್ನು ಹೊಂದುತ್ತಾನೆ; ಮತ್ತೆ ಸಾಯುವದಿಲ್ಲ ಎಂದರ್ಥ. ಅನಾದಿಮತ್ (ಎಂಬಲ್ಲಿ) ಆದಿಮತ್ತೆಂದರೆ ಆದಿಯುಳ್ಳದ್ದು ; ಆದಿಮತ್ತಲ್ಲದ್ದು ಅನಾದಿಮತ್ತು. ಅದು ಯಾವದು? ಎಂದರೆ ಪರವಾದ ಮಿಗಿಲಿಲ್ಲದ ಬ್ರಹ್ಮವು, ಜ್ಞೇಯವೆಂದು (ಹೇಳುವದಕ್ಕೆ) ಪ್ರಾರಂಭಿಸಿ(ದೆಯಲ್ಲ, ಅದು).

(ಭಾಷ್ಯ)

೨೪೮. ಅತ್ರ ಕೇಚಿತ್ 'ಅನಾದಿ, ಮತ್ಪರಮ್' ಇತಿ ಪದಂ ಛಿನ್ದನ್ತಿ । ಬಹುವ್ರೀಹಿಣಾ ಉಕ್ತೇ ಅರ್ಥೇ ಮತುಪಃ ಆನರ್ಥಕ್ಯಮ್ ಅನಿಷ್ಟಂ ಸ್ಯಾತ್ ಇತಿ । ಅರ್ಥವಿಶೇಷಂ ಚ ದರ್ಶಯನ್ತಿ-ಅಹಂ ವಾಸುದೇವಾಖ್ಯಾ ಪರಾ ಶಕ್ತಿಃ ಯಸ್ಯ ತತ್ ಮತ್ಪರಮ್ ಇತಿ। ಸತ್ಯಮ್, ಏವಮ್ ಅಪುನರುಕ್ತಂ ಸ್ಯಾತ್ ಅರ್ಥಶ್ಚೇತ್ ಸಂಭವತಿ। ನ ತು ಅರ್ಥಃ ಸಂಭವತಿ । ಬ್ರಹ್ಮಣಃ ಸರ್ವವಿಶೇಷಪ್ರತಿಷೇಧೇನೈವ ವಿಜಿಜ್ಞಾಪಯಿಷಿತತ್ವಾತ್ "ನ ಸತ್ ತನ್ನಾಸದುಚ್ಯತೇ" ಇತಿ । ವಿಶಿಷ್ಟಶಕ್ತಿಮತ್ತ್ವಪ್ರದರ್ಶನಂ

---

1. ಜ್ಞಾನವು ಪರಿಪಕ್ವವಾಗಿ ತತ್ತ್ವಸಾಕ್ಷಾತ್ಕಾರವಾಗುವದಕ್ಕೆ ಇವು ಸಹಾಯಕ. ೧೮-೫೫ರ ಭಾಷ್ಯವನ್ನು ನೋಡಿ.

2. ಮ॥ ವ್ಯೈ॥ ಗಳಲ್ಲಿಲ್ಲ.

ವಿಶೇಷಪ್ರತಿಷೇಧಶ್ಚ ಇತಿ ವಿಪ್ರತಿಷಿದ್ಧಮ್ । ತಸ್ಮಾತ್ ಮತುಪಃ ಬಹುವ್ರೀಹಿಣಾ ಸಮಾನಾರ್ಥತ್ವೇಽಪಿ ಪ್ರಯೋಗಃ ಶ್ಲೋಕಪೂರಣಾರ್ಥಃ ॥

(ಭಾಷ್ಯಾರ್ಥ)

ಇಲ್ಲಿ ಕೆಲವರು 'ಅನಾದಿ, ಮತ್ಪರಮ್' ಎಂದು ಪದಚ್ಛೇದವನ್ನು ಮಾಡುತ್ತಾರೆ; ಬಹುವ್ರೀಹಿಯಿಂದ ಉಕ್ತವಾಗಿರುವ ಅರ್ಥವನ್ನೇ ಮತುಪ್ (ಹೇಳಿದರೆ ಅದು) ವ್ಯರ್ಥವಾಗುವದು, (ಅದು) ಸರಿಯಾಗುವದಿಲ್ಲ–ಎಂಬುದು (ಅವರ ಅಭಿಪ್ರಾಯವು. ಈ ಪದಚ್ಛೇದವನ್ನು ಮಾಡುವದರಲ್ಲಿ ಒಂದು) ಹೆಚ್ಚಿನ ಅರ್ಥವೂ (ಇರುವದೆಂದು ಅವರು ತಿಳಿಸುತ್ತಾರೆ. ನಾನು, ವಾಸುದೇವನೆಂಬ ಹೆಸರಿನ ಪರ(ಶಕ್ತಿಯು), ಯಾವದಕ್ಕಿರುವದೋ ಅದು ಮತ್ಪರವು; (ಹೀಗೆ ಬ್ರಹ್ಮವು ಅನಾದಿಯೂ ಮತ್ಪರವೂ ಆಗಿರುತ್ತದೆ ಎಂದು ಅವರ ಆಶಯ). ನಿಜ, ಹೀಗೆ (ಮಾಡಿದರೆ) ಅರ್ಥವು ಹೊಂದುವದಾಗಿದ್ದರೆ, ಪುನರುಕ್ತಿ (ದೋಷ)ವಿಲ್ಲವಾಗುತ್ತಿತ್ತು; ಆದರೆ ಅರ್ಥವು ಹೊಂದುವದಿಲ್ಲ. ಏಕೆಂದರೆ (ಬ್ರಹ್ಮಕ್ಕೆ **ಯಾವ ವಿಶೇಷವೂ ಇಲ್ಲವೆಂದು ಹೇಳುವದರಿಂದಲೇ (ಅದನ್ನು) ತಿಳಿಸಬೇಕೆಂದು "ಅದು ಸತ್ತೂ ಅಲ್ಲ, ಅಸತ್ತೂ ಅಲ್ಲವೆನಿಸುತ್ತದೆ" ಎಂದು ಹೇಳಿರುತ್ತದೆ**[1]. ಅಸಾಧಾರಣಶಕ್ತಿ(ಯೊಂದು) ಇರತಕ್ಕದ್ದೆಂದು ತಿಳಿಸುವದು, ವಿಶೇಷವನ್ನು ಅಲ್ಲಗಳೆಯುವದು–(ಇವೆರಡೂ ಒಂದಕ್ಕೊಂದು) ವಿರುದ್ಧವಾದದ್ದು[2]. ಆದ್ದರಿಂದ (ಇಲ್ಲಿ) ಮತುಪ್ (ಪ್ರತ್ಯಯ)ಕ್ಕೂ ಬಹುವ್ರೀಹಿಗೂ ಒಂದೇ ಅರ್ಥವಾದರೂ (ಅದನ್ನು) ಪ್ರಯೋಗಿಸಿರುವದು ಶ್ಲೋಕ(ಪಾದ)ವನ್ನು ಪೂರ್ತಿ ಮಾಡುವದಕ್ಕೆ (ಎಂದು ತಿಳಿಯಬೇಕು)[3].

(ಭಾಷ್ಯ)

೨೪೯. ಅಮೃತತ್ವಫಲಂ ಜ್ಞೇಯಂ ಮಯಾ ಉಚ್ಯತೇ ಇತಿ ಪ್ರರೋಚನೇನ ಅಭಿಮುಖೀಕೃತ್ಯ ಆಹ–ನ ಸತ್ ತತ್ ಜ್ಞೇಯಮ್ ಉಚ್ಯತೇ ನಾಪಿ ಅಸತ್

1. ಬ್ರಹ್ಮವು ಯಾವ ವಿಶೇಷವೂ ಇಲ್ಲದ್ದಾದ್ದರಿಂದ ಅದನ್ನು ವಿಶೇಷಗಳನ್ನು ಅಲ್ಲಗಳೆಯುವ ಮೂಲಕವೇ ಇದ್ದಂತೆ ತಿಳಿಸುವದಕ್ಕೆ ಆಗುತ್ತದೆ. ಬೃ. ಭಾ. ೨-೩-೬; ಮಾಂ. ಭಾ. ೭.

2. ಇಲ್ಲಿ ಪರಾಮರ್ಶಿಸಿರುವ ವೃತ್ತಿಕಾರರು ನಿರ್ವಿಶೇಷವಾದವನ್ನು ಒಪ್ಪುವವರಾಗಿರಬೇಕು. ಇಲ್ಲದಿದ್ದರೆ ಭಾಷ್ಯಕಾರರು ಇಲ್ಲಿ ಹೇಳಿರುವ ಅನಿಷ್ಟಾಪತ್ತಿಯು ಅವರಿಗೆ ಹೊಂದುವದಿಲ್ಲ.

3. ಛಂದಸ್ಸಿಗಾಗಿ ಹೀಗೆ ಪ್ರಯೋಗಮಾಡಿದೆ ಎಂದು ಪುನರುಕ್ತಿದೋಷಕ್ಕೆ ಸಮಾಧಾನವನ್ನು ಕಲ್ಪಿಸಬೇಕು.

ತತ್ ಉಚ್ಯತೇ [1] (ಇತಿ ?) । ನನು ಮಹತಾ ಪರಿಕರಬನ್ಧೇನ [2] ಕಣ್ಠರವೇಣ ಉದ್ಘುಷ್ಯ "ಜ್ಞೇಯಂ ಪ್ರವಕ್ಷ್ಯಾಮಿ" ಇತಿ, ಅನನುರೂಪಮ್ ಉಕ್ತಮ್, 'ನ ಸತ್ ತನ್ನಾಸದುಚ್ಯತೇ' ಇತಿ । ನ । ಅನುರೂಪಮೇವ ಉಕ್ತಮ್ । ಕಥಮ್? ಸರ್ವಾಸು ಹಿ ಉಪನಿಷತ್ಸು ಜ್ಞೇಯಂ ಬ್ರಹ್ಮ "ನೇತಿ ನೇತಿ" (ಬೃ. ೨-೩-೬), "ಅಸ್ಥೂಲ ಮನಣು" (ಬೃ. ೩-೮-೮) ಇತ್ಯಾದಿವಿಶೇಷಪ್ರತಿಷೇಧೇನೈವ ನಿರ್ದಿಶ್ಯತೇ ನ 'ಇದಂ ತತ್' ಇತಿ । ವಾಚಃ ಅಗೋಚರತ್ವಾತ್ ॥

(ಭಾಷ್ಯಾರ್ಥ)

(ಹೀಗೆ) ಅಮೃತತ್ವವೆಂಬ ಫಲವುಳ್ಳ ಜ್ಞೇಯವನ್ನು ನಾನು ಹೇಳುತ್ತಿರುವೆನೆಂದು ಸವಿಹುಟ್ಟಿಸಿ (ಅರ್ಜುನನನ್ನು) ತನ್ನ ಕಡೆಗೆ ತಿರುಗಿಸಿಕೊಂಡು (ಈಗ ಭಗವಂತನು) ಹೇಳುತ್ತಾನೆ: ಆ ಜ್ಞೇಯವು ಸತ್ತೆನಿಸುವದಿಲ್ಲ, ಅದು ಅಸತ್ತೆನಿಸುವದೂ ಇಲ್ಲ.

(ಆಕ್ಷೇಪ):—ದೊಡ್ಡದಾಗಿ ಸೊಂಟವನ್ನು ಕಟ್ಟಿಕೊಂಡು "ಜ್ಞೇಯವನ್ನು ಹೇಳುವೆನು" ಎಂದು ಗಟ್ಟಿಯಾಗಿ ಕೂಗಿ ಸಾರಿ ಹೇಳಿದ ಬಳಿಕ "ಅದು ಸತ್ತೆ(ನಿಸುವ)ದಿಲ್ಲ ಅಸತ್ತೆನಿಸುವದಿಲ್ಲ," ಎಂದು ಹೇಳಿದ್ದು ಹೊಂದಿಕೆಯಾಗಲಿಲ್ಲವಲ್ಲ!

(ಪರಿಹಾರ):—ಹೊಂದಿಗೆಯಾಗಿಯೇ ಹೇಳಿರುತ್ತದೆ. ಹೇಗೆಂದರೆ ಉಪನಿಷತ್ತುಗಳಲ್ಲೆಲ್ಲ "ಅದಲ್ಲ, ಅದಲ್ಲ" (ಬೃ. ೨-೩-೬), "ಸ್ಥೂಲವಲ್ಲ, ಅಣುವಲ್ಲ" (ಬೃ ೩-೮-೮)–ಎಂದು ಮುಂತಾಗಿ ವಿಶೇಷಗಳನ್ನು ಅಲ್ಲಗಳೆದೇ ಜ್ಞೇಯವಾದ ಬ್ರಹ್ಮವನ್ನು ತಿಳಿಸಿದೆಯೇ ಹೊರತು 'ಅದು ಇಂಥದ್ದು' ಎಂದು (ತಿಳಿಸಿರುವದಿಲ್ಲ); ಏಕೆಂದರೆ (ಅದು) ಮಾತಿಗೆ ವಿಷಯವಾಗಿರುವದಿಲ್ಲ.

## ಬ್ರಹ್ಮವು ಇದೆ, ಇಲ್ಲ-ಎಂಬ ಶಬ್ದಗಳಿಗೆ ವಿಷಯವಲ್ಲ

(ಭಾಷ್ಯ)

೨೫೦. ನನು ತತ್ ಅಸ್ತಿ ಯದ್ ವಸ್ತು ಅಸ್ತಿಶಬ್ದೇನ ಉಚ್ಯತೇ । ಅಥ ಅಸ್ತಿಶಬ್ದೇನ ನೋಚ್ಯತೇ ನಾಸ್ತಿ ತತ್ । ವಿಪ್ರತಿಷಿದ್ಧಂ ಚ ಜ್ಞೇಯಂ ತತ್ ಅಸ್ತಿ,

1. 'ಜ್ಞೇಯಮ್ ಉಚ್ಯತೇ ಇತಿ' ಎಂಬ ಆ॥ ನಿ॥ ವಾ॥ ಪಾಠದಲ್ಲಿ ಇತಿ ಹೆಚ್ಚು; ಕೊನೆಯಲ್ಲಿ ಒಂದು 'ಇತಿ' ಇದ್ದರೆ ಒಳ್ಳೆಯದೆಂದು ತೋರುತ್ತದೆ.

2. ಮ॥ ಮೈ॥ ಗಳಲ್ಲಿಲ್ಲ.

ಅಸ್ತಿಶಬ್ದೇನ ನೋಚ್ಯತೇ ಇತಿ ಚ[1] । ನ ತಾವತ್ ನಾಸ್ತಿ । ನಾಸ್ತಿಬುದ್ಧ್ಯವಿಷಯತ್ವಾತ್ । ನನು ಸರ್ವಾ ಬುದ್ಧಯಃ ಅಸ್ತಿನಾಸ್ತಿಬುದ್ಧ್ಯನುಗತಾ ಏವ । ತತ್ರ ಏವಂ ಸತಿ ಜ್ಞೇಯಮಪಿ ಅಸ್ತಿಬುದ್ಧ್ಯನುಗತಪ್ರತ್ಯಯವಿಷಯಂ ವಾ ಸ್ಯಾತ್, ನಾಸ್ತಿಬುದ್ಧ್ಯನುಗತಪ್ರತ್ಯಯ ವಿಷಯಂ ವಾ ಸ್ಯಾತ್ । ನ । ಅತೀನ್ದ್ರಿಯತ್ವೇನ ಉಭಯಬುದ್ಧ್ಯನುಗತಪ್ರತ್ಯಯಾವಿಷಯತ್ವಾತ್ । ಯದ್ ಹಿ ಇನ್ದ್ರಿಯಗಮ್ಯಂ ವಸ್ತು ಘಟಾದಿಕಂ ತತ್ ಅಸ್ತಿಬುದ್ಧ್ಯನುಗತಪ್ರತ್ಯಯವಿಷಯಂ ವಾ ಸ್ಯಾತ್, ನಾಸ್ತಿಬುದ್ಧ್ಯನುಗತಪ್ರತ್ಯಯವಿಷಯಂ ವಾ ಸ್ಯಾತ್ । ಇದಂ ತು ಜ್ಞೇಯಮ್ ಅತೀನ್ದ್ರಿಯತ್ವೇನ ಶಬ್ದೈಕಪ್ರಮಾಣಗಮ್ಯತ್ವಾತ್ ನ ಘಟಾದಿವತ್[2] ಉಭಯಬುದ್ಧ್ಯನುಗತಪ್ರತ್ಯಯವಿಷಯಮ್ । ಇತ್ಯತಃ 'ನ ಸತ್ ತನ್ನಾಸತ್' ಇತ್ಯುಚ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ);—ಯಾವ ವಸ್ತುವನ್ನು ಇದೆ ಎಂಬ ಮಾತಿನಿಂದ ಹೇಳುವದಕ್ಕಾಗುವದೋ ಅದು ಇರುತ್ತದೆ. ಹಾಗಿಲ್ಲದೆ (ಅದನ್ನು) ಇದೆ ಎಂಬ ಮಾತಿನಿಂದ ಹೇಳುವದಕ್ಕಾಗುವದಿಲ್ಲವಾದರೆ, ಅದು ಇರುವದಿಲ್ಲ. ಜ್ಞೇಯ(ವಾದ ಬ್ರಹ್ಮವು) ಇದ್ದೂ ಇದೆ, ಇದೆ ಎಂಬ ಮಾತಿನಿಂದ (ಅದನ್ನು) ಹೇಳುವದಕ್ಕೆ ಬರುವದೂ ಇಲ್ಲ-ಎಂಬುದು ವಿರುದ್ಧವಲ್ಲವೆ?

(ಪರಿಹಾರ):—ಮೊದಲನೆಯದಾಗಿ (ಅದು) ಇಲ್ಲ(ವೆನ್ನುವ ಹಾ)ಗಿಲ್ಲ. ಏಕೆಂದರೆ (ಅದು) ಇಲ್ಲ ಎಂಬ ಬುದ್ಧಿಗೆ ವಿಷಯವಾಗಿರುವದಿಲ್ಲ.

---

1. ಈ ಪೂರ್ವಪಕ್ಷದ ಪಾಠವು ಬರೆದವರ ಕೈತಪ್ಪಿನಿಂದ ಏನೋ ಹೆಚ್ಚುಕಡಿಮೆಯಾಗಿರುವಂತೆ ತೋರುತ್ತದೆ. ಅ|| ನಿ|| ಗು|| ಗಳಲ್ಲಿ "ನನು ನ ತದಸ್ತಿಯದ್ವಸ್ತು ಅಸ್ತಿಶಬ್ದೇನ ನೋಚ್ಯತೇ । ಅಥ ಅಸ್ತಿಶಬ್ದೇನ ನೋಚ್ಯತೇ.... ಇತಿ ಚ" ಎಂದಿದೆ. ಇಲ್ಲಿ ಮೊದಲನೆಯ ಎರಡು ವಾಕ್ಯಗಳಿಗೂ ಒಂದೇ ಅರ್ಥವಾಗುವದರಿಂದ ಪುನರುಕ್ತಿಯಾಗಿದೆ. ವ್ಯಾ|| ನಲ್ಲಿ ನಾವು ಒಪ್ಪಿರುವ ಪಾಠವಿದೆಯಾದರೂ "ನಾಸ್ತಿ ತತ್ ಜ್ಞೇಯಮ್ । ವಿಪ್ರತಿಷಿದ್ಧಂ ಚ ಜ್ಞೇಯಂ ತತ್, ಅಸ್ತಿ ಶಬ್ದೇನ ನೋಚ್ಯತೇ ಇತಿ ಚ" ಎಂಬಲ್ಲಿ ಮೊದಲನೆಯ 'ಜ್ಞೇಯಮ್' ಹೆಚ್ಚು; ಈ ವಾಕ್ಯವು ಮೊದಲು ಹೇಳಿರುವ ಅನ್ವಯವ್ಯತಿರೇಕವ್ಯಾಪ್ತಿಗಳಿಗೆ ಹೊಂದುವ ಹಾಗಿಲ್ಲ. ಈ ಕಡೆಯ ವಾಕ್ಯವನ್ನು ನಾವು ಮು|| ದಲ್ಲಿರುವಂತೆ ಇಟ್ಟುಕೊಂಡಿರುತ್ತೇವೆ. ವಿದ್ವಾಂಸರು ಕೈಬರಹದ ಪುಸ್ತಕಗಳನ್ನು ನೋಡಿ ಇಲ್ಲಿ ಭಾಷ್ಯಪಾಠವನ್ನು ಗೊತ್ತುಪಡಿಸಬೇಕಾಗಿದೆ ಎಂಬುದು ಸ್ಪಷ್ಟ.

2. ಮು|| ದಲ್ಲಿ 'ಆದಿ' ಇಲ್ಲ.

(ಆಕ್ಷೇಪ):—ಅರಿವುಗಳೆಲ್ಲ ಇದೆ ಎಂಬ ಬುದ್ಧಿಯಿಂದಲಾಗಲಿ, ಇಲ್ಲವೆಂಬ ಬುದ್ಧಿಯಿಂದಲಾಗಲಿ ಕೂಡಿಕೊಂಡೇ ಇರುತ್ತವೆ[1]. ಇಲ್ಲಿ ಹೀಗಿರುವಲ್ಲಿ (ಈ)ಜ್ಞೇಯವು ಕೂಡ ಇದೆಯೆಂಬ ಬುದ್ಧಿಯಿಂದ ಕೂಡಿದ ಅರಿವಿಗಾದರೂ ವಿಷಯವಾಗಿರ ಬೇಕು, ಇಲ್ಲ ಎಂಬ ಬುದ್ಧಿಯಿಂದ ಕೂಡಿದ ಅರಿವಿಗಾದರೂ ವಿಷಯವಾಗಿರ ಬೇಕು. (ಅಲ್ಲವೆ)?

(ಪರಿಹಾರ): -ಅಲ್ಲ. ಏಕೆಂದರೆ ಅದು ಇಂದ್ರಿಯಗಳನ್ನು ಮೀರಿರುವದರಿಂದ (ಈ)ಎರಡು ಬುದ್ಧಿಗಳಿಂದ ಕೂಡಿರುವ ಅರಿವುಗಳಿಗೂ ವಿಷಯವೇ ಅಲ್ಲ[2]. **ಯಾವದು ಇಂದ್ರಿಯಗೋಚರವಾಗಿರುವ ವಸ್ತುವೋ, ಆ ಗಡಿಗೆಯೇ ಮುಂತಾದದ್ದು ಇದೆ ಎಂಬ ಬುದ್ಧಿಯಿಂದ ಕೂಡಿರುವ ಅರಿವಿಗೆ ವಿಷಯವಾಗಿಯಾದರೂ ಇರಬೇಕು, ಇಲ್ಲ ಎಂಬ ಬುದ್ಧಿಯಿಂದೊಡಗೂಡಿರುವ ಅರಿವಿಗೆ ವಿಷಯ ವಾಗಿಯಾದರೂ** ಇರಬೇಕು (ಎಂಬುದು ಯುಕ್ತವು). ಆದರೆ ಈ ಜ್ಞೇಯವು ಅತೀಂದ್ರಿಯವಾಗಿರುವದರಿಂದ **ಶಬ್ದವೆಂಬ ಒಂದೇ ಪ್ರಮಾಣದಿಂದ ತಿಳಿಯ ಬರತಕ್ಕದ್ದಾದ್ದರಿಂದ**[3] **(ಇದು) ಗಡಿಗೆಯೇ ಮುಂತಾದವುಗಳಂತೆ (ಈ) ಎರಡು ಬುದ್ಧಿಗಳಿಂದೊಡಗೂಡಿದ ಅರಿವುಗಳಿಗೂ ವಿಷಯವಲ್ಲ**(ವೆಂಬುದೇ ಸರಿ). ಆದ್ದರಿಂದ 'ಅದು ಸತ್ತೂ ಅಲ್ಲ, ಅಸತ್ತೂ ಅಲ್ಲ' ಎಂದು ಹೇಳಿರುತ್ತದೆ.

(ಭಾಷ್ಯ)

೨೫೧. ಯತ್ ತು ಉಕ್ತಮ್-ವಿರುದ್ಧಮ್ ಉಚ್ಯತೇ "ಜ್ಞೇಯಂ ತತ್ . . . . . ನ ಸತ್ತನ್ನಾಸದುಚ್ಯತೇ" ಇತಿ (ಇತಿ ?), ನ ವಿರುದ್ಧಮ್ । "ಅನ್ಯ ದೇವ ತದ್ವಿದಿತಾದಥೋ ಅವಿದಿತಾದಧಿ" (ಕೇ. ೧-೪) ಇತಿ ಶ್ರುತೇಃ । ಶ್ರುತಿರಪಿ

---

1. ಗಡಿಗೆ, ಬಂಜೆಯ ಮಗ ಎಂದು ಮುಂತಾಗಿ ಅರಿವುಗಳಾದರೆ ಇರುವ ಗಡಿಗೆ, ಇಲ್ಲದ ಬಂಜೆಯ ಮಗ—ಎಂದು ಇರುವದು ಅಥವಾ ಇಲ್ಲದ್ದು ಎಂಬ ಬುದ್ಧಿಗಳೂ ಆ ಅರಿವು ಗಳಿಗೆ ಸೇರಿಕೊಂಡೇ ಇರುವವು. ಅದ್ದರಿಂದ ವಿಷಯವನ್ನು ಇದೆ ಎಂದಾಗಲಿ ಇಲ್ಲವೆಂದಾಗಲಿ ತೋರಿಸದ ಅರಿವೇ ಇಲ್ಲ-ಎಂದು ಪೂರ್ವಪಕ್ಷಿಯ ಆಶಯ

2. ಎರಡನೆಯ ಅಧ್ಯಾಯದ ೧೬ನೆಯ ಶ್ಲೋಕದ ಭಾಷ್ಯದಲ್ಲಿ (ಭಾ.ಭಾ. ೨೨, ೨೩) ಇರುವದೆಂಬ ಬುದ್ಧಿಯನ್ನು ಅನುಸರಿಸಿಯೇ ಆತ್ಮನನ್ನು ಸಿದ್ಧಪಡಿಸಿದೆಯಾದರೂ ಆತ್ಮನ ಆಧಾರ ದಿಂದಲೇ ವ್ಯವಹಾರದಲ್ಲಿ ಸದ್ಬುದ್ಧಿಯು ತೋರುವದೆಂಬ ಅಭಿಪ್ರಾಯದಿಂದ ಹಾಗೆ ಹೇಳಿರು ತ್ತದೆ. ಇಲ್ಲಿ ಹೇಳಿರುವದು ತಾತ್ತ್ವಿಕದೃಷ್ಟಿ. ಕ. ಭಾ. ೨-೩-೧೩ (ಭಾ. ಭಾ. ೧೭೬) ನೋಡಿ.

3. ಶಬ್ದವು, ಎಂದರೆ ಶ್ರುತಿಯು ಬ್ರಹ್ಮದ ಧರ್ಮವಲ್ಲದ್ದನ್ನು ಅಲ್ಲಗಳೆದೇ ಆದನು ತಿಳಿಸುತ್ತದೆ. ೨-೧೮ (ಭಾ. ಭಾ. ೨೯) ನೋಡಿರಿ.

ವಿರುದ್ಧಾರ್ಥಾ ಇತಿ ಚೇತ್ । ಯಥಾ ಯಜ್ಞಾಯ ಶಾಲಾಮ್ ಆರಭ್ಯ “ ಯದ್ಯಮುಷ್ಮಿಂಲ್ಲೋಕೇಽಸ್ತಿ ವಾ ನ ವೇತಿ ” (ತೈ. ಸಂ. ೬-೧-೧) ಇತಿ, ಏವಮ್ ಇತಿ ಚೇತ್[1] । ನ । ವಿದಿತಾವಿದಿತಾಭ್ಯಾಮನ್ಯತ್ವ[2] ಶ್ರುತೇರವಶ್ಯವಿಜ್ಞೇಯಾರ್ಥಪ್ರತಿಪಾದನಪರತ್ವಾತ್ । “ ಯದ್ಯಮುಷ್ಮಿನ್ ” ಇತ್ಯಾದಿ ತು ವಿಧಿಶೇಷೋಽರ್ಥವಾದಃ ॥

(ಭಾಷ್ಯಾರ್ಥ)

ಇನ್ನು “ ಅದು ಜ್ಞೇಯವು . . . ಅದು ಸತ್ತೆನಿಸುವದಿಲ್ಲ, ಅಸತ್ತೆನಿಸುವದಿಲ್ಲ ” ಎಂದು ವಿರುದ್ಧವಾಗಿ ಹೇಳಿದ್ದಾಗಿದೆ ಎಂದಿರಲ್ಲ, (ನಿಜವಾಗಿ ಅದು) ವಿರುದ್ಧವಲ್ಲ. ಏಕೆಂದರೆ “ ಅದು ಅರಿಯಲ್ಪಡುವದಕ್ಕಿಂತಲೂ ಬೇರೆಯೇ, ಮತ್ತು ಅರಿಯಲ್ಪಡದ್ದಕ್ಕಿಂತಲೂ ಮೇಲೆಯೇ” (ಕೇ. ೧-೪) ಎಂಬ ಶ್ರುತಿಯು (ಅದಕ್ಕೆ ಪ್ರಮಾಣವಾಗಿದೆ).

(ಆಕ್ಷೇಪ):—(ಈ) ಶ್ರುತಿಯೂ ವಿರುದ್ಧವಾದ ವಿಷಯವನ್ನೇ (ಹೇಳುತ್ತದೆ). ಯಜ್ಞಕ್ಕಾಗಿ ಶಾಲೆಯನ್ನು ನಿರ್ಮಿಸಿದ ಮೇಲೆ “ ಪರಲೋಕದಲ್ಲಿ (ಸುಖವು) ಇದೆಯೋ ಇಲ್ಲವೋ (ಯಾರು ಬಲ್ಲರು)? ”ಎಂದು (ವೇದವು) ಹೇಗೆ (ವಿರುದ್ಧವಾದದ್ದನ್ನು ಹೇಳುವದೋ) ಹಾಗೆ.

(ಪರಿಹಾರ):—ಹಾಗಲ್ಲ. ಏಕೆಂದರೆ ಅರಿಯಲ್ಪಡುವದು, ಅರಿಯಲ್ಪಡದ್ದು-ಎಂಬಿವಕ್ಕಿಂತ (ಬ್ರಹ್ಮವು) ಬೇರೆ (ಎಂದು ಹೇಳುವ) ಶ್ರುತಿಯು ಅವಶ್ಯವಾಗಿ ಅರಿತುಕೊಳ್ಳಬೇಕಾದ ವಿಷಯವನ್ನು ತಿಳಿಸುವದರಲ್ಲಿ ತಾತ್ಪರ್ಯವುಳ್ಳದ್ದಾಗಿರುತ್ತದೆ[3]. “ ಪರಲೋಕದಲ್ಲಿ (ಇದೆ)ಯೋ . . .” ಮುಂತಾದ ವಾಕ್ಯವಾದರೋ ವಿಧಿಗೆ ಅಂಗವಾಗಿರುವ ಅರ್ಥವಾದವಾಗಿರುತ್ತದೆ.[4]

---

1. ಇದು ಮು॥ ದಲ್ಲಿಲ್ಲ.

2. ‘ ವಿದಿತಾವಿದಿತಾನ್ಯತ್ವಶ್ರುತೇಃ ’ ಮೈ॥, ‘ ವಿದಿತಾನ್ಯತ್ವಶ್ರುತೇಃ ’ ಮು॥

3. ಆದ್ದರಿಂದ ಅದು ಅಪ್ರಮಾಣವೆಂದಾಗಲಿ ಬ್ರಹ್ಮವು ಇಲ್ಲವೆಂದಾಗಲಿ ಕಲ್ಪಿಸುವದಕ್ಕೆ ಬರುವದಿಲ್ಲ.

4. “ ದಿಕ್ಷ್ವತೀಕಾಶಾನ್ ಕರೋತಿ ” ಎಂಬ ವಿಧಿಯಲ್ಲಿ ಪ್ರವರ್ಗ್ಯಕಾಲದಲ್ಲಿ ಹೊಗೆ ಹೋಗುವದಕ್ಕೆ ಕಿಟಕಿಗಳನ್ನು ಮಾಡಬೇಕೆಂದು ಸದ್ಯಃಫಲವುಳ್ಳ ಕ್ರಿಯೆಯನ್ನು ವಿಧಿಸಿ ಅದನ್ನು ಹೊಗಳುವದಕ್ಕಾಗಿ ‘ ಕರ್ಮಜನ್ಯವಾದ ಪರಲೋಕವು ಇದೆಯೋ ಇಲ್ಲವೋ ಯಾರು ಬಲ್ಲರು ? ಈ ಕ್ರಿಯೆಯ ಫಲವು ಮಾತ್ರ ಎಲ್ಲರಿಗೂ ಗೊತ್ತಿದೆ ’ ಎಂದು ಹೇಳಿದೆ. ಕರ್ಮಕ್ಕೆ ಫಲವೇ ಇಲ್ಲವೆಂಬುದರಲ್ಲಿ ಶಬ್ದಕ್ಕೆ ತಾತ್ಪರ್ಯವಿಲ್ಲ.

(ಭಾಷ್ಯ)

೨೫೨. ಉಪಪತ್ತೇಶ್ಚ ಸದಸದಾದಿಶಬ್ದೈಃ ಬ್ರಹ್ಮ ನೋಚ್ಯತೇ ಇತಿ। ಸರ್ವೋ ಹಿ ಶಬ್ದಃ ಅರ್ಥಪ್ರಕಾಶನಾಯ[1] ಪ್ರಯುಕ್ತಃ ಶ್ರೂಯಮಾಣಶ್ಚ ಶ್ರೋತೃಭಿಃ ಜಾತಿ ಕ್ರಿಯಾಗುಣಸಮ್ಬನ್ಧದ್ವಾರೇಣ ಸಙ್ಗತಿಗ್ರಹಣಸವ್ಯಪೇಕ್ಷಃ[2] ಅರ್ಥಂ ಪ್ರತ್ಯಾಯಯತಿ । ನಾನ್ಯಥಾ । ಅದೃಷ್ಟತ್ವಾತ್ । ತದ್ ಯಥಾ ಗೌಃ, ಅಶ್ವಃ ಇತಿ ವಾ ಜಾತಿತಃ । ಪಾಚಕಃ[3] ಪಾಠಕಃ ಇತಿ ವಾ ಕ್ರಿಯಾತಃ । ಶುಕ್ಲಃ ಕೃಷ್ಣಃ ಇತಿ ವಾ ಗುಣತಃ । ಧನೀ, ಗೋಮಾನ್ ಇತಿ ವಾ ಸಮ್ಬನ್ಧತಃ । ನ ತು ಬ್ರಹ್ಮ ಜಾತಿಮತ್[4] । ಅತಃ ನ ಸದಾದಿ ಶಬ್ದವಾಚ್ಯಮ್ । ನಾಪಿ ಗುಣವತ್ । ಯೇನ ಗುಣಶಬ್ದೇನ ಉಚ್ಯೇತ[5] । ನಾಪಿ ಕ್ರಿಯಾಶಬ್ದವಾಚ್ಯಮ್ । ನಿಷ್ಕ್ರಿಯತ್ವಾತ್ "ನಿಷ್ಕಲಂ ನಿಷ್ಕ್ರಿಯಂ ಶಾನ್ತಮ್" (ಶ್ವೇ. ೬-೧೯) ಇತಿ ಶ್ರುತೇಃ । ನ ಚ ಸಮ್ಬನ್ಧೀ । ಏಕತ್ವಾತ್ । ಅದ್ವಯತ್ವಾತ್ ಅವಿಷಯತ್ವಾತ್ ಆತ್ಮತ್ವಾಚ್ಚ ನ ಕೇನಚಿತ್ ಶಬ್ದೇನ ಉಚ್ಯತೇ ಇತಿ ಯುಕ್ತಮ್ । "ಯತೋ ವಾಚೋ ನಿವರ್ತನ್ತೇ" (ತೈ. ೨-೯) ಇತ್ಯಾದಿಶ್ರುತಿಭ್ಯಶ್ಚ ॥

(ಭಾಷ್ಯಾರ್ಥ)

ಮತ್ತು ಬ್ರಹ್ಮವು ಸತ್ತು, ಅಸತ್ತು-ಮುಂತಾದ (ಯಾವ) ಶಬ್ದಗಳಿಗೂ ವಾಚ್ಯವಲ್ಲವೆಂಬುವಕ್ಕೆ ಯುಕ್ತಿಯಿರುವದರಿಂದಲೂ (ಇದು ವಿರುದ್ಧವಲ್ಲ)[6]. ಹೇಗೆಂದರೆ, ವಸ್ತುವನ್ನು ತಿಳಿಸುವದಕ್ಕೆ ಪ್ರಯೋಗವಾಗುವ ಮತ್ತು ಕೇಳುವವರ ಕಿವಿಗೆ ಬೀಳುವ ಪ್ರತಿಯೊಂದು ಶಬ್ದವೂ ಜಾತಿ, ಕ್ರಿಯೆ, ಗುಣ, ಸಂಬಂಧ-ಇವುಗಳ ಮೂಲಕವೇ[7] (ವಾಚ್ಯವಾಚಕ) ಸಂಬಂಧವನ್ನು ತಿಳಿಸುವದರ ಮೂಲಕ (ಆ) ವಸ್ತುವನ್ನು ತಿಳಿಸಿಕೊಡುವದೇ ಹೊರತು ಬೇರೆಯ ರೀತಿಯಿಂದ (ತಿಳಿಸು)ವದಿಲ್ಲ. ಏಕೆಂದರೆ (ಹಾಗೆ ತಿಳಿ

---

1. 'ಅರ್ಥಪ್ರಕಾಶನಾರ್ಥಾಯ' ಮ॥
2. 'ಸಙ್ಕೇತಗ್ರಹಣಸವ್ಯಪೇಕ್ಷಃ' ಎಂಬ ಆ॥ ಬಿ॥ ಗು॥ ಪಾಠವು ಸರಿಯಲ್ಲ.
3. 'ಪಚತಿ ಪಠತೀತಿ ವಾ' ಎಂಬ ಬಿ॥ ಅ॥ ಗು॥ ವಾ॥ ಪಾಠಕ್ಕಿಂತ ಇದೇ ಮೇಲು.
4. 'ಜಾತ್ಯಾದಿಮತ್' ಮ॥
5. ಇದರ ಮುಂದೆ 'ನಿರ್ಗುಣತ್ವಾತ್' ಎಂದು ಅಚ್ಚಿನ ಪುಸ್ತಕಗಳಲ್ಲಿರುವದು ಬೇಕಿಲ್ಲ.
6. ಶ್ರುತಿಯಲ್ಲಿ ಹೇಳಿರುವದು ಯುಕ್ತಿಯುಕ್ತವೂ ಆಗಿರುವದರಿಂದ ಅದು ಅಪ್ರಮಾಣವಾಗಲಾರದು.
7. ತೈ. ಭಾ. ಭಾ. ೧೦೭ ; ಮಾಂ. ಭಾ. ೭ (ಭಾ. ಭಾ. ೩೫) ; ಬೃ. ಭಾ. ೨-೩-೬.

ಸುವದು ಎಲ್ಲಿಯೂ) ಕಂಡಿರುವದಿಲ್ಲ. ಅದು ಹೇಗೆಂದರೆ, 'ಎತ್ತು', 'ಕುದುರೆ'–ಎಂದು ಜಾತಿಯಿಂದಲೋ, 'ಅಡಿಗೆಯವನು', 'ಓದುವವನು'–ಎಂದು ಕ್ರಿಯೆಯಿಂದಲೋ, 'ಬಿಳಿದು', 'ಕರಿದು' ಎಂದು ಗುಣದಿಂದಲೋ, 'ಧನಿಕನು' 'ಗೋವಂತನು' ಎಂದು (ಷಷ್ಠ್ಯರ್ಥರೂಪವಾದ) ಸಂಬಂಧದಿಂದಲೋ, (ಶಬ್ದವು ವಸ್ತುವನ್ನು ತಿಳಿಸುತ್ತದೆ). ಆದರೆ ಬ್ರಹ್ಮದಲ್ಲಿ ಜಾತಿಯಿಲ್ಲ; ಆದ್ದರಿಂದ (ಅದು) ಇದೆ ಮುಂತಾದ ಶಬ್ದಗಳಿಗೆ ವಾಚ್ಯವಾಗಿರುವದಿಲ್ಲ. (ಅದರಲ್ಲಿ) ಗುಣವೂ ಇರುವದಿಲ್ಲ, ಹಾಗಿದ್ದರೆ ಗುಣವನ್ನು (ಹೇಳುವ) ಮಾತಿಗೆ ವಾಚ್ಯವಾಗಬಹುದಾಗಿತ್ತು. (ಅದು) ಕ್ರಿಯೆಯನ್ನು ಹೇಳುವ ಮಾತಿಗೂ ವಾಚ್ಯವಲ್ಲ; ಏಕೆಂದರೆ "ನಿರವಯವವಾದ, ನಿಷ್ಕ್ರಿಯವಾದ ಶಾಂತವಾದ" (ಶ್ವೇ. ೬-೧೯) ಎಂಬ ಶ್ರುತಿಯ (ಪ್ರಮಾಣ) ದಿಂದ ಅದರಲ್ಲಿ ಯಾವ ಕ್ರಿಯೆಯೂ ಇರುವದಿಲ್ಲ. (ಅದು ಯಾವದೊಂದರ) ಸಂಬಂಧವುಳ್ಳದ್ದೂ ಅಲ್ಲ. ಏಕೆಂದರೆ (ಅದು) ಒಂದೇ ಆಗಿರುತ್ತದೆ[1]. ತನಗೆರಡನೆಯದಿಲ್ಲವಾದ್ದರಿಂದಲೂ [2] (ಅದು) ವಿಷಯವಲ್ಲವಾದ್ದರಿಂದಲೂ [3] ಆತ್ಮನೇ [4] (ಆಗಿರುವ)ದರಿಂದಲೂ ಯಾವ ಶಬ್ದಕ್ಕೂ ವಾಚ್ಯವಲ್ಲ ಎಂಬುದು ಯುಕ್ತವಾಗಿದೆ. "ಯಾವದರಿಂದ ಮಾತುಗಳು ಹಿಂತಿರುಗುವವೋ" (ತೈ. ೨-೯) ಮುಂತಾದ ಶ್ರುತಿಗಳಿರುವದರಿಂದಲೂ (ಅದು ಶಬ್ದವಾಚ್ಯವಲ್ಲ).

## ಬ್ರಹ್ಮವು ಇದೆ

(ಭಾಷ್ಯ)

೨೫೩. ಸಚ್ಛಬ್ದಪ್ರತ್ಯಯಾವಿಷಯತ್ವಾತ್ ಅಸತ್ತ್ವಾಶಙ್ಕಾಯಾಂ ಜ್ಞೇಯಸ್ಯ ಪ್ರಾಣಿಕರಣೋಪಾಧಿದ್ವಾರೇಣ ತದಸ್ತಿತ್ವಂ ಪ್ರತಿಪಾದಯನ್ ತದಾಶಙ್ಕಾನಿವೃತ್ತ್ಯರ್ಥಮ್ ಆಹ—

---

1. ಸಂಬಂಧವು ಎರಡು ವಸ್ತುಗಳಿಲ್ಲದೆ ಇರುವದಿಲ್ಲ.

2. ಬ್ರಹ್ಮಕ್ಕಿಂತ ಬೇರೆಯಾಗಿರುವ ಎರಡನೆಯದಾದ ವಾಚಕವೆಂಬುದೇ ಇಲ್ಲ; ಇನ್ನು ಆ ಮಾತಿನಿಂದ ಬ್ರಹ್ಮವು ವಾಚ್ಯವು ಎಂಬ ಶಂಕೆ ಎಲ್ಲಿಂದ ಬಂದೀತು ?–ಎಂದು ಭಾವ.

3. ಕಲ್ಪಿತವಾದ ವಾಚಕವನ್ನು ಒಪ್ಪಿದರೂ ಬ್ರಹ್ಮವು ಅದನ್ನು ಬೆಳಗುವ ವಿಷಯಿಯಾಗಿದೆ. ಏತಕ್ಕೂ ವಿಷಯವಲ್ಲ. ಆದ್ದರಿಂದಲೂ ವಾಚ್ಯವಲ್ಲ. ಕೇ. ಭಾ. ಭಾ. ೨೪–೩೧.

4. ವಾಚಕಕ್ಕೂ ಬ್ರಹ್ಮವು ಆತ್ಮನೇ. ಅದು ತನಗೇ ತಾನು ವಾಚ್ಯವಾಗಲಾರದು. ಕೇ. ಭಾ. ಭಾ. ೧೯.

(ಭಾಷ್ಯಾರ್ಥ)

ಇದೆ ಎಂಬ ಮಾತಿಗೂ ಅರಿವಿಗೂ ವಿಷಯವಲ್ಲದೆ ಇರುವದರಿಂದ ಜ್ಞೇಯವು ಇಲ್ಲ ಎಂಬ ಶಂಕೆ ಬರಲಾಗಿ ಸಕಲ ಪ್ರಾಣಿಗಳ ಕರಣಗಳೆಂಬ ಉಪಾಧಿಯ ಮೂಲಕ ಅದು ಇದೆ ಎಂದು ತಿಳಿಸಿ ಆ ಶಂಕೆಯನ್ನು ಪರಿಹರಿಸುವದಕ್ಕಾಗಿ (ಭಗವಂತನು ಹೀಗೆಂದು) ಹೇಳುತ್ತಾನೆ :—

**ಸರ್ವತಃಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩ ॥**

೧೩. ಅದು ಸರ್ವತಃಪಾಣಿಪಾದವು, ಸರ್ವತೋಽಕ್ಷಿಶಿರೋಮುಖವು, ಸರ್ವತಃ ಶ್ರುತಿಯುಳ್ಳದ್ದು ; ಲೋಕದಲ್ಲಿ ಎಲ್ಲವನ್ನೂ ಆವರಿಸಿಕೊಂಡಿರುತ್ತದೆ.

(ಭಾಷ್ಯ)

೨೫೪. ಸರ್ವತಃಪಾಣಿಪಾದಮ್ । ಸರ್ವತಃ ಪಾಣಯಃ ಪಾದಾಶ್ಚ ಅಸ್ಯ ಇತಿ ಸರ್ವತಃಪಾಣಿಪಾದಂ ತತ್ ಜ್ಞೇಯಮ್ । ಸರ್ವಪ್ರಾಣಿಕರಣೋಪಾದಿಭಿಃ ಕ್ಷೇತ್ರಜ್ಞಾಸ್ತಿತ್ವಂ[1] ವಿಭಾವ್ಯತೇ । ಕ್ಷೇತ್ರಜ್ಞಶ್ಚ ಕ್ಷೇತ್ರೋಪಾಧಿತಃ ಉಚ್ಯತೇ । ಕ್ಷೇತ್ರಂ ಚ ಪಾಣಿಪಾದಾದಿಭಿಃ ಅನೇಕಧಾ ಭಿನ್ನಮ್[2] । ಕ್ಷೇತ್ರೋಪಾಧಿಭೇದಕೃತಂ ವಿಶೇಷಜಾತಂ ಮಿಥ್ಯೈವ ಕ್ಷೇತ್ರಜ್ಞಸ್ಯ ಇತಿ ತದಪನಯನೇನ ಜ್ಞೇಯತ್ವಮ್ ಉಕ್ತಮ್ "ನ ಸತ್ತನ್ನಾಸದುಚ್ಯತೇ" ಇತಿ । ಉಪಾಧಿಕೃತಂ ಮಿಥ್ಯಾರೂಪಮಪಿ ಅಸ್ತಿತ್ವಾಧಿಗಮಾಯ ಜ್ಞೇಯಧರ್ಮವತ್ ಪರಿಕಲ್ಪ್ಯ ಉಚ್ಯತೇ ಸರ್ವತಃಪಾಣಿಪಾದಮ್ ಇತ್ಯಾದಿ । ತಥಾ ಹಿ ಸಮ್ಪ್ರದಾಯವಿದಾಂ ವಚನಮ್–"ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಞ್ಚಂ ಪ್ರಪಞ್ಚ್ಯತೇ" (?) ಇತಿ।ಸರ್ವತ್ರ ಸರ್ವದೇಹಾವಯವತ್ವೇನ ಗಮ್ಯಮಾನಾಃ ಪಾಣಿಪಾದಾದಯಃ ಜ್ಞೇಯಶಕ್ತಿಸದ್ಭಾವನಿಮಿತ್ತಸ್ವಕಾರ್ಯಾ ಇತಿ ಜ್ಞೇಯಸದ್ಭಾವೇ ಲಿಙ್ಗಾನಿ[3] ಜ್ಞೇಯಸ್ಯ ಇತಿ ಉಪಚಾರತಃ ಉಚ್ಯನ್ತೇ । ತಥಾ ವ್ಯಾಖ್ಯೇಯಮ್ ಅನ್ಯತ್ । ಸರ್ವತಃಪಾಣಿಪಾದಂ ತತ್ ಜ್ಞೇಯಮ್ ।

---

1. 'ಕ್ಷೇತ್ರಜ್ಞಸ್ಯ ಅಸ್ತಿತ್ವಮ್' ಮ॥ ಮೈ॥ ವಾ॥

2. ಈ ಮಾತಿನ ಮುಂದೆ 'ತತ್ ಕ್ಷೇತ್ರೋಪಾಧಿಭೇದಕೃತಮ್' ಎಂದು ವಾಕ್ಯವು ಮ॥ದಲ್ಲಿ ಪ್ರಾರಂಭವಾಗಿದೆ.

3. 'ಜ್ಞೇಯಲಿಙ್ಗಾನಿ' ಮ॥, ಜ್ಞೇಯಸದ್ಭಾವಲಿಙ್ಗಾನಿ' ಮೈ॥

ಸರ್ವತೋಽಕ್ಷಿಶಿರೋಮುಖಮ್ । ಸರ್ವತಃ ಅಕ್ಷೀಣಿ ಶಿರಾಂಸಿ ಮುಖಾನಿ ಚ ಯಸ್ಯ ತತ್ ಸರ್ವತೋಽಕ್ಷಿಶಿರೋಮುಖಮ್ ಸರ್ವತಃಶ್ರುತಿಮತ್ । ಶ್ರುತಿಃ ಶ್ರವಣೇನ್ದ್ರಿಯಮ್ । ತತ್ ಯಸ್ಯ ತತ್ ಶ್ರುತಿಮತ್ । ಲೋಕೇ ಪ್ರಾಣಿನಿಕಾಯೇ ಸರ್ವಮ್ ಆವೃತ್ಯ ಸಂವ್ಯಾಪ್ಯ ತಿಷ್ಠತಿ ಸ್ಥಿತಿಂ ಲಭತೇ ॥

(ಭಾಷ್ಯಾರ್ಥ)

**ಸರ್ವತಃಪಾಣಿಪಾದವು**: ಅದಕ್ಕೆ ಎಲ್ಲೆಲ್ಲಿಯೂ ಕೈಗಳೂ ಕಾಲುಗಳೂ (ಇರುವ)ದರಿಂದ ಆ ಜ್ಞೇಯವು ಸರ್ವತಃಪಾಣಿಪಾದವು. **ಸಕಲ ಪ್ರಾಣಿಗಳ ಕರಣಗಳೆಂಬ ಉಪಾಧಿಗಳಿಂದ ಕ್ಷೇತ್ರಜ್ಞನ ಇರುವಿಕೆಯು ತಿಳಿದುಬರುತ್ತಿದೆ**[2]. **ಮತ್ತು ಕ್ಷೇತ್ರವೆಂಬ ಉಪಾಧಿಯಿಂದಲೇ (ಅವನು) ಕ್ಷೇತ್ರಜ್ಞನು ಎನಿಸಿಕೊಂಡಿರುತ್ತಾನೆ**[3]. ಕ್ಷೇತ್ರವೆಂಬುದೂ ಕೈಗಳು, ಕಾಲುಗಳು–ಮುಂತಾದವುಗಳಿಂದ ಅನೇಕ ಪ್ರಕಾರವಾಗಿ ಬೇರೆಬೇರೆಯಾಗಿರುತ್ತದೆ. ಕ್ಷೇತ್ರದ ಉಪಾಧಿಗಳು ಬೇರೆಬೇರೆಯಾಗಿರುವದರಿಂದ ಕ್ಷೇತ್ರಜ್ಞನಿಗೆ ಉಂಟಾಗಿರುವ ವಿಶೇಷಗಳ ಸಮೂಹವು[4] ಹುಸಿಯೇ ; ಆದ್ದರಿಂದ ಅದನ್ನು ತಳ್ಳಿಹಾಕಿ "ಅದು ಸತ್ತಲ್ಲ, ಅಸತ್ತೂ ಎನಿಸುವದಿಲ್ಲ" (೧೩-೧೨) ಎಂದು (ಆ ಕ್ಷೇತ್ರಜ್ಞನನ್ನು) ಅರಿಯತಕ್ಕದ್ದೆಂದು (ಹಿಂದೆ) ಹೇಳಿರುತ್ತದೆ. ಉಪಾಧಿಯಿಂದಾಗಿರುವ ಮಿಥ್ಯಾರೂಪವನ್ನು ಕೂಡ (ಜ್ಞೇಯವು) ಇದೆ ಎಂಬುದನ್ನು ನಿಶ್ಚಯಿಸುವದಕ್ಕಾಗಿ (ಅದು) ಜ್ಞೇಯದ ಧರ್ಮವಾಗಿರುವಂತೆ ಕಲ್ಪಿಸಿಕೊಂಡು ಸರ್ವತಃಪಾಣಿಪಾದವು ಎಂದು ಮುಂತಾಗಿ (ಇಲ್ಲಿ) ಹೇಳಿದೆ. **"ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಞ್ಚಂ ಪ್ರಪಞ್ಚ್ಯತೇ[5]" (?) ಯಾವ ಪ್ರಪಂಚವೂ ಇಲ್ಲದ (ಆತ್ಮತತ್ತ್ವವನ್ನು) ಅಧ್ಯಾ**

---

1. "ನ ಚಲತಿ ಇತ್ಯರ್ಥಃ" ಎಂದು ಹೆಚ್ಚಾಗಿ ಮು॥ ವ್ಯಾ॥ ಗು॥

2. ಇದು ವ್ಯವಹಾರದೃಷ್ಟಿಯಿಂದ ; ನಿಜವಾಗಿ ನೋಡಿದರೆ ಕ್ಷೇತ್ರಜ್ಞನೇ ಎಲ್ಲವನ್ನೂ ಅರಿಯುವವನಾದ್ದರಿಂದ ಕರಣಗಳ ಇರುವಿಕೆಗೂ ಅವನೇ ಆಧಾರ.

3. ಬೆಳಕಿನಲ್ಲಿ ತೋರುವ ವಸ್ತುಗಳ ದೃಷ್ಟಿಯಿಂದ ಸೂರ್ಯನು ಪ್ರಕಾಶಕನು ಎನಿಸಿಕೊಳ್ಳುವಂತೆ ಕ್ಷೇತ್ರದ ದೃಷ್ಟಿಯಿಂದ ಆತ್ಮನು ಕ್ಷೇತ್ರಜ್ಞನೆನಿಸಿಕೊಳ್ಳುತ್ತಾನೆ.

4. ಬೇರೆಬೇರೆಯ ಶರೀರಗಳಿಂದಲೂ ಬೇರೆಬೇರೆಯ ಕರಣಗಳಿಂದಲೂ ಕ್ಷೇತ್ರಜ್ಞನಲ್ಲಿ ಹಲವು ವಿಶೇಷಗಳು ಉಂಟಾಗಿರುವಂತೆ ತೋರಿಬರುವವು.

5. ಈ ವಚನವು ಎಲ್ಲಿಯದೆಂಬುದು ತಿಳಿಯದು. ಸಂಪ್ರದಾಯವನ್ನು ಬಲ್ಲವರ ವಚನವೆಂದಿರುವದರಿಂದ ಆಚಾರ್ಯರು ಅಲ್ಲಲ್ಲಿ ಹೆಸರು ಹೇಳದೆ ಉದಾಹರಿಸಿರುವ ದ್ರವಿಡಾಚಾರ್ಯರ ವಚನವಿದ್ದರೂ ಇರಬಹುದು. ಆ॥ ಟೀಕೆಯಲ್ಲಿ ಈ ವಿಷಯಕ್ಕೆ ಏನೂ ಹೇಳಿಲ್ಲ.

**ರೋಪ, ಅಪವಾದ-ಇವುಗಳ ಮೂಲಕವಾಗಿ ವಿಸ್ತರಿಸಲಾಗುತ್ತದೆ ಎಂದು ಸಂಪ್ರದಾಯವನ್ನು ಬಲ್ಲವರ ವಚನವು ಹೀಗೆಂದೇ ತಿಳಿಸುತ್ತದೆ.** ಎಲ್ಲೆಲ್ಲಿಯೂ ಪ್ರತಿಯೊಂದು ಶರೀರದಲ್ಲಿಯೂ (ಆದರದರ) ಅವಯವಗಳೆಂದು ತೋರಿಬರುವ ಕೈ, ಕಾಲು-ಮುಂತಾದವುಗಳು ಜ್ಞೇಯ(ವಾದ ಬ್ರಹ್ಮದ ಚೈತನ್ಯ) ಶಕ್ತಿಯಿರುವದರಿಂದಲೇ ತಮ್ಮತಮ್ಮ ಕಾರ್ಯವನ್ನು (ಮಾಡುತ್ತಿರುವದರಿಂದ)[1] ಜ್ಞೇಯುವಿರುವದಕ್ಕೆ **ಲಿಂಗಗಳಾಗಿದ್ದರೂ**[2] (ಅವು) ಜ್ಞೇಯಕ್ಕೆ (ಸೇರಿದವುಗಳು) ಎಂದು ಉಪಚಾರಕ್ಕೆ ಹೇಳಿರುತ್ತದೆ.

(ಶ್ಲೋಕದಲ್ಲಿರುವ) ಮಿಕ್ಕ (ವಿಶೇಷಣ)ವನ್ನೂ ಹೀಗೆಯೇ ವಿವರಿಸಬೇಕು. ಆ ಜ್ಞೇಯವು ಸರ್ವತಃಪಾಣಿಪಾದವಾಗಿ(ರುವದಷ್ಟೆ. ಇದರಂತೆ ಆದು) **ಸರ್ವತೋಽಕ್ಷಿಶಿರೋಮುಖವೂ** (ಆಗಿರುತ್ತದೆ). ಅದಕ್ಕೆ ಎಲ್ಲೆಲ್ಲಿಯೂ ಕಣ್ಣುಗಳೂ ತಲೆಗಳೂ ಮುಖಗಳೂ ಇರುವದರಿಂದ ಸರ್ವತೋಽಕ್ಷಿಶಿರೋಮುಖವು. **ಸರ್ವತಃ ಶ್ರುತಿಮತ್ತು** : ಶ್ರುತಿ ಎಂದರೆ ಕೇಳುವ ಇಂದ್ರಿಯವು; ಅದು ಯಾವದಕ್ಕೆ ಇರುವದೋ ಅದು ಶ್ರುತಿಮತ್ತು (ಎಲ್ಲೆಲ್ಲಿಯೂ ಶ್ರೋತ್ರೇಂದ್ರಿಯವುಳ್ಳದ್ದಾದ್ದರಿಂದ ಅದು ಸರ್ವತಃಶ್ರುತಿಮತ್ತು). ಲೋಕದಲ್ಲಿ ಪ್ರಾಣಿಸಮೂಹದಲ್ಲಿ ಎಲ್ಲವನ್ನೂ ಆವರಿಸಿಕೊಂಡು ಚೆನ್ನಾಗಿ ವ್ಯಾಪಿಸಿಕೊಂಡು ಇರುವದು, ಇರವನ್ನು ಹೊಂದಿರುವದು.

೨೫೫. ಉಪಾಧಿಭೂತಪಾಣಿಪಾದಾದೀನ್ದ್ರಿಯಾಧ್ಯಾರೋಪಣಾತ್ ಜ್ಞೇಯಸ್ಯ ತದ್ವತ್ತಾಶಙ್ಕಾ ಮಾ ಭೂತ್ ಇತ್ಯೇವಮರ್ಥಃ ಶ್ಲೋಕಾರಮ್ಭಃ—

(ಭಾಷ್ಯಾರ್ಥ)

ಉಪಾಧಿಗಳಾಗಿರುವ ಕೈ, ಕಾಲು-ಮುಂತಾದವುಗಳ ಇಂದ್ರಿಯಗಳನ್ನು ಆರೋಪಿಸಿದ್ದರಿಂದ ಜ್ಞೇಯಕ್ಕೆ (ಅವು ನಿಜವಾಗಿ) ಇವೆ ಎಂಬ ಶಂಕೆಯು ಆಗಬಾರದೆಂಬುದಕ್ಕಾಗಿ (ಈ) ಶ್ಲೋಕವನ್ನು ಪ್ರಾರಂಭಿಸಿರುತ್ತದೆ.

**ಸರ್ವೇನ್ದ್ರಿಯಗುಣಾಭಾಸಂ ಸರ್ವೇನ್ದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೪ ॥**

---

1. ಜ್ಞೇಯದ ಶಕ್ತಿಯೇ ಅವುಗಳ ವ್ಯಾಪಾರವನ್ನು ಮಾಡಿಸುತ್ತದೆ ಎಂದರ್ಥ. ಅಥವಾ ಜ್ಞೇಯವೆನಿಸಿರುವ ಚೈತನ್ಯಕ್ಕಾಗಿಯೇ ಸಂಪತವಾದ ಕರಣಗಳು ತಮ್ಮತಮ್ಮ ವ್ಯಾಪಾರವನ್ನು ಮಾಡುತ್ತಿವೆ ಎಂದಾದರೂ ಅರ್ಥವಾಡಬಹುದು

2. ಚೈತನ್ಯವೊಂದಿದೆ ಎಂದು ಅನುಮಾನದಿಂದ ಕಲ್ಪಿಸುವದಕ್ಕೆ ಹೆಗ್ಗುರುತುಗಳು.

೧೪. ಸರ್ವೇಂದ್ರಿಯಗುಣಾಭಾಸವು, ಸರ್ವೇಂದ್ರಿಯವಿವರ್ಜಿತವು, ಅಸಕ್ತವು, ಸರ್ವಭೃತ್ತು, ನಿರ್ಗುಣವು, ಗುಣಭೋಕ್ತೃವೂ (ಆಗಿದೆ).

(ಭಾಷ್ಯ)

೨೫೬. ಸರ್ವಾಣಿ ಚ ತಾನಿ ಇನ್ದ್ರಿಯಾಣಿ ಚ[1] ಶ್ರೋತ್ರಾದೀನಿ ಬುದ್ಧೀನ್ದ್ರಿಯಕರ್ಮೇನ್ದ್ರಿಯಾಖ್ಯಾನಿ। ಅನ್ತಃಕರಣೇ ಚ ಬುದ್ಧಿಮನಸೀ, ಜ್ಞೇಯೋಪಾಧಿತ್ವಸ್ಯ ತುಲ್ಯತ್ವಾತ್ ಸರ್ವೇನ್ದ್ರಿಯಗ್ರಹಣೇನ ಗೃಹ್ಯೇತೇ। ಅಪಿ ಚ ಅನ್ತಃಕರಣೋಪಾಧಿದ್ವಾರೇಣೈವ ಶ್ರೋತ್ರಾದೀನಾಮಪಿ ಉಪಾಧಿತ್ವಮ್ ಇತ್ಯತಃ ಅನ್ತಃಕರಣಬಹಿಷ್ಕರಣೋಪಾಧಿಭೂತೈಃ ಸರ್ವೇನ್ದ್ರಿಯಗುಣೈಃ ಅಧ್ಯವಸಾಯಸಙ್ಕಲ್ಪಶ್ರವಣವಚನಾದಿಭಿಃ[2] ಅವಭಾಸತೇ ಇತಿ ಸರ್ವೇನ್ದ್ರಿಯಗುಣಾಭಾಸಂ ಸರ್ವೇನ್ದ್ರಿಯವ್ಯಾಪಾರೈಃ ವ್ಯಾಪೃತಮಿವ ತತ್ ಜ್ಞೇಯಮ್ ಇತ್ಯರ್ಥಃ। "ಧ್ಯಾಯತೀವ ಲೇಲಾಯತೀವ" (ಬೃ. ೪-೩-೭) ಇತಿ ಶ್ರುತೇಃ। ಕಸ್ಮಾತ್ ಪುನಃ ಕಾರಣಾತ್ ನ ವ್ಯಾಪೃತಮೇವ ಇತಿ[3]? ಅತ ಆಹ–ಸರ್ವೇನ್ದ್ರಿಯವಿವರ್ಜಿತಮ್। ಸರ್ವಕರಣರಹಿತಮ್ ಇತ್ಯರ್ಥಃ। ಅತಃ ನ ಕರಣವ್ಯಾಪಾರೈಃ ವ್ಯಾಪೃತಂ ತತ್ ಜ್ಞೇಯಮ್। ಯಸ್ತು ಅಯಂ ಮನ್ತ್ರಃ–"ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ" (ಶ್ವೇ. ೩–೧೯) ಇತ್ಯಾದಿಃ। ಸ ಸರ್ವೇನ್ದ್ರಿಯೋಪಾಧಿಗುಣಾನುಗುಣ್ಯಭಜನಶಕ್ತಿಮತ್[4] ತತ್ ಜ್ಞೇಯಮ್ ಇತ್ಯೇವಂಪ್ರದರ್ಶನಾರ್ಥಃ। ನ ತು ಸಾಕ್ಷಾದೇವ ಜವನಾದಿಕ್ರಿಯಾವತ್ತ್ವಪ್ರದರ್ಶನಾರ್ಥಃ। "ಅನ್ಧೋ ಮಣಿಮವಿನ್ದತ್" (ತೈ. ಆ. ೧-೧೧)ಇತ್ಯಾದಿಮನ್ತ್ರಾರ್ಥವತ್ ತಸ್ಯ ಮನ್ತ್ರಸ್ಯಾರ್ಥಃ। ಯಸ್ಮಾತ್ ಸರ್ವಕರಣವರ್ಜಿತಂ ತತ್ ಜ್ಞೇಯಮ್ ತಸ್ಮಾತ್ ಅಸಕ್ತಂ ಸರ್ವಸಂಶ್ಲೇಷವರ್ಜಿತಮ್। ಯದ್ಯಪಿ ಏವಮ್, ತಥಾಪಿ ಸರ್ವಭೃಚ್ಚೈವ। ಸದಾಸ್ಪದಂ ಹಿ ಸರ್ವಂ ಸರ್ವತ್ರ ಸದ್ಬುದ್ಧ್ಯನುಗಮಾತ್। ನ ಹಿ ಮೃಗತೃಷ್ಣಿಕಾದಯೋಽಪಿ ನಿರಾಸ್ಪದಾ ಭವನ್ತಿ। ಅತಃ ಸರ್ವಭೃತ್ ಸರ್ವಂ ಬಿಭರ್ತಿ ಇತಿ। ಸ್ಯಾತ್ ಇದಂ ಚ ಅನ್ಯತ್ ಜ್ಞೇಯಸ್ಯ ಸತ್ತ್ವಾಧಿಗಮದ್ವಾರಮ್–ನಿರ್ಗುಣಮ್। ಸತ್ತ್ವರಜಸ್ತಮಾಂಸಿ ಗುಣಾಃ ತೈಃ ವರ್ಜಿತಂ

---

1. ಮ॥ದಲ್ಲಿ ಮಾತ್ರ ಇದೆ.
2. 'ವನ್ದನಾದಿಭಿಃ' ಎಂಬ ಮ॥ ಪಾಠವು ಸರಿಯಲ್ಲ.
3. ಇದರ ಮುಂದೆ 'ಗೃಹ್ಯತೇ' ಎಂದು ಹೆಚ್ಚಾಗಿ ಅ॥ ನಿ॥ ಮೈ॥ ಗು॥ ವಾ॥
4. 'ಜವನಾದಿಶಕ್ತಿಮತ್ ತತ್ ಜ್ಞೇಯಮ್' ಮ॥

ತತ್[1] ಜ್ಞೇಯಮ್ । ತಥಾಪಿ[2] ಗುಣಭೋಕ್ತೃ ಚ । ಗುಣಾನಾಂ ಸತ್ತ್ವರಜಸ್ತಮಸಾಂ ಶಬ್ದಾದಿದ್ವಾರೇಣ ಸುಖದುಃಖಮೋಹಾಕಾರ[3]ಪರಿಣತಾನಾಂ ಭೋಕ್ತೃ ಚ ಉಪಲಬ್ಧೃ ಚ ತತ್ ಜ್ಞೇಯಮ್ ಇತ್ಯರ್ಥಃ ||

(ಭಾಷ್ಯಾರ್ಥ)

**ಸರ್ವೇಂದ್ರಿಯಗುಣಾಭಾಸವು** : ಎಲ್ಲ ಇಂದ್ರಿಯಗಳೂ ಎಂದರೆ ಬುದ್ಧೀಂದ್ರಿಯ, ಕರ್ಮೇಂದ್ರಿಯ-ಎಂಬ ಹೆಸರಿನ ಶ್ರೋತ್ರವೇ ಮುಂತಾದ (ಹೊರಗಿನ ಕರಣಗಳು); ಒಳಗಿನ ಕರಣಗಳಾದ ಬುದ್ಧಿಮನಸ್ಸುಗಳೂ. (ಅವು) ಜ್ಞೇಯಕ್ಕೆ ಉಪಾಧಿಯೆಂಬುದು ಸಮಾನವಾಗಿರುವದರಿಂದ (ಅವನ್ನೂ) ಸರ್ವೇಂದ್ರಿಯ ಎಂಬ ಮಾತಿನಿಂದ ಗ್ರಹಿಸಬೇಕು. ಇದೂ ಅಲ್ಲದೆ ಅಂತಃಕರಣವೆಂಬ ಉಪಾಧಿಯ ಮೂಲಕವಾಗಿಯೇ ಶ್ರೋತ್ರಾದಿಗಳೂ ಉಪಾಧಿಗಳಾಗಿರುತ್ತವೆ. (ಆದ್ದರಿಂದಲೂ ಸರ್ವೇಂದ್ರಿಯಶಬ್ದದಿಂದ ಅವನ್ನೂ ಗ್ರಹಿಸಬೇಕು). ಹೀಗಿರುವದರಿಂದ ಅಂತಃಕರಣ, ಬಹಿಃಕರಣ-ಎಂಬ ಉಪಾಧಿಗಳಾಗಿರುವ ಸರ್ವೇಂದ್ರಿಯಗಳ ಗುಣಗಳಿಂದಲೂ[4], ಎಂದರೆ ನಿಶ್ಚಯ, ಸಂಕಲ್ಪ, ಕೇಳುವದು, ಮಾತನಾಡುವದು,[5]- ಮುಂತಾದವುಗಳಿಂದ ಬೆಳಗುತ್ತಿರುವದರಿಂದ ಸರ್ವೇಂದ್ರಿಯಗುಣಾಭಾಸವು, ಆ ಜ್ಞೇಯವು, ಸಕಲೇಂದ್ರಿಯಗಳ ವ್ಯಾಪಾರಗಳಿಂದಲೂ ಕೆಲಸಮಾಡುತ್ತಿರುವಂತಿರುವದು-ಎಂದರ್ಥ, "ಧ್ಯಾನಮಾಡುವಂತಿರುವದು, ಚಲಿಸುವಂತಿರುವದು" (ಬೃ. ೪-೩-೭) ಎಂಬ ಶ್ರುತಿ ಇದಕ್ಕೆ ಪ್ರಮಾಣವು.

(ಈ ವ್ಯಾಪಾರಗಳಿಂದ ಅದು ನಿಜವಾಗಿಯೂ) ಕೆಲಸಮಾಡುತ್ತಲೇ ಇರುವದೆಂದು (ಹೇಳ)ಬಾರದೆಂಬುದಕ್ಕೆ ಕಾರಣವಾದರೂ ಏನು?--ಎಂದರೆ ಅದಕ್ಕೆ (ಭಗವಂತನು) ಹೇಳುತ್ತಾನೆ: **ಸರ್ವೇಂದ್ರಿಯವಿವರ್ಜಿತ**ವಾಗಿರುವದು. ಯಾವ ಕರಣ

---

1. ಆ|| ನಿ|| ವಾ||ಗಳಲ್ಲಿಲ್ಲ.
2. 'ವರ್ಜಿತಮಪಿ ಸತ್' ಮ||
3. 'ಮೋಹಾಕಾರೇಣ' ಮ|| ವಾ||
4. ಇಲ್ಲಿರುವ ಸಂಸ್ಕೃತವಾಕ್ಯಕ್ಕೆ ಇಂದ್ರಿಯಗುಣಗಳೇ ಉಪಾಧಿಗಳು ಎಂದು ಅರ್ಥವಾಗುವಂತಿದೆ; ಆದರೆ ಉಪಾಧಿಗಳಾದ ಇಂದ್ರಿಯಗಳ ಗುಣಗಳು ಜ್ಞೇಯಕ್ಕೆ ಅಂಟುವದಿಲ್ಲ ಎಂದು ಹೇಳುವದರಲ್ಲಿಯೇ ವಾಕ್ಯಕ್ಕೆ ತಾತ್ಪರ್ಯ.
5. ನಿಶ್ಚಯವು ಬುದ್ಧಿಧರ್ಮ, ಸಂಕಲ್ಪವು ಮನಸ್ಸಿನ ಧರ್ಮ, ಕೇಳುವದು ಬುದ್ಧೀಂದ್ರಿಯಗಳ ಧರ್ಮಗಳಿಗೆ ಹೆಗ್ಗುರುತಾಗಿರುವ ಧರ್ಮ, ಮಾತನಾಡುವದು ಕರ್ಮೇಂದ್ರಿಯಗಳಿಗೆ ಉಪಲಕ್ಷಣ.

ಗಳೂ [1] ಇಲ್ಲದ್ದು ಎಂದರ್ಥ. ಆದ್ದರಿಂದ ಕರಣಗಳ ವ್ಯಾಪಾರಗಳಿಂದ ಆ ಜ್ಞೇಯವು ಕೆಲಸಮಾಡುವದಿಲ್ಲ. ಆದರೆ "ಅವನು ಕೈಕಾಲುಗಳಿಲ್ಲದವನು' ವೇಗವಾಗಿ (ನಡೆಯುವವನು), ಹಿಡಿದುಕೊಳ್ಳುವವನು; ಕಣ್ಣುಗಳಿಲ್ಲದೆ ನೋಡುವನು, ಕಿವಿಗಳಿಲ್ಲದೆ ಕೇಳುವನು" (ಶ್ವೇ. ೩-೧೯) ಎಂಬೀ ಮಂತ್ರವಿದೆಯಲ್ಲ, ಅದಕ್ಕೆ ಸಕಲೇಂದ್ರಿಯಗಳೆಂಬ ಉಪಾಧಿಗಳ ಗುಣಗಳಿಗೆ ಅನುಗುಣವಾಗಿರುವಿಕೆಯನ್ನು ಪಡೆಯಬಲ್ಲ ಶಕ್ತಿಯುಳ್ಳದ್ದು ಆ ಜ್ಞೇಯವು ಎಂಬೀ ರೀತಿಯನ್ನು ತಿಳಿಸುವದೇ ಪ್ರಯೋಜನವೇ ಹೊರತು ನೇರಾಗಿಯೇ ವೇಗವಾಗಿ (ನಡೆಯುವದೇ) ಮುಂತಾದ ಕ್ರಿಯೆಗಳು (ಅದರಲ್ಲಿ)ರುವವೆಂದು ತಿಳಿಸುವದಕ್ಕೆ (ಅದು) ಬಂದದ್ದಲ್ಲ. "ಕುರುಡನು ರತ್ನವನ್ನು (ಕಂಡು) ಅರಿತುಕೊಂಡನು" (ತೈ ಆ. ೧-೧೧) ಮುಂತಾದ ಮಂತ್ರಗಳಿಗೆ ಹೇಗೆ ಅರ್ಥವೋ ಹಾಗೆಯೇ [2] ಆ ಮಂತ್ರಕ್ಕೆ ಅರ್ಥವು.

ಆ ಜ್ಞೇಯವು (ಹೀಗೆ) ಯಾವ ಕರಣವೂ ಇಲ್ಲದ್ದಾಗಿರುವದಲ್ಲ, ಆ ಕಾರಣದಿಂದ **ಅಸಕ್ತವು.** ಯಾವದರ ಸೋಂಕೂ ಇಲ್ಲದ್ದಾಗಿರುವದು. ಹೀಗಿದ್ದರೂ (ಅದು) **ಸರ್ವಭೃತ್ತಾಗಿಯೂ (ಇರುತ್ತದೆ).** **ಪ್ರತಿಯೊಂದಕ್ಕೆ ಸದ್ವಸ್ತುವೇ ಆಸ್ಪದವಾಗಿರುತ್ತದೆ.** ಏಕೆಂದರೆ ಎಲ್ಲೆಲ್ಲಿಯೂ ಇದೆ ಎಂಬ ಬುದ್ಧಿಯು **ಅನುಸರಿಸಿಕೊಂಡೇ** ಬಂದಿರುತ್ತದೆ. **ಬಿಸಿಲುಕುದುರೆ ಮುಂತಾದ ವಿಕಲ್ಪಗಳುಕೂಡ ಯಾವ ಆಸ್ಪದವೂ ಇಲ್ಲದೆ ಇರುವದೇ ಇಲ್ಲ** [3].–ಆದ್ದರಿಂದ (ಈ ಜ್ಞೇಯವು ಎಲ್ಲವನ್ನೂ ಧರಿಸಿರುತ್ತದೆಯಾಗಿ ಇದು ಸರ್ವಭೃತ್ತು (ಎಂದಾ)ಗಬಹುದು [4]. ಜ್ಞೇಯವು ಇದೆ ಎಂಬುದನ್ನು ಅರಿತುಕೊಳ್ಳುವದಕ್ಕೆ ಇದೂ ಮತ್ತೊಂದು ದ್ವಾರವಾಗುವದು: (ಅದು) ನಿರ್ಗುಣವು. ಗುಣಗಳು ಎಂದರೆ ಸತ್ತ್ವರಜಸ್ತಮಗಳು; ಅವುಗ

---

1. ಅಂತಃಕರಣವಾಗಲಿ ಬಹಿಃಕರಣಗಳಾಗಲಿ.

2. ಕುರುಡನು ರತ್ನವನ್ನು ಕಾಣುವ ಸಂಭವವೇ ಇಲ್ಲವೆಂಬುದು ಪ್ರಸಿದ್ಧ; ಆದರೆ ಆತ್ಮನು ಚಕ್ಷುರಿಂದ್ರಿಯರಹಿತನಾದರೂ ಕಾಣುತ್ತಾನೆ–ಎಂಬುದು ಮಂತ್ರದ ಅರ್ಥ. ಅಲ್ಲಿ ಕಾಣುತ್ತಾನೆ ಎಂದರೆ ಚಕ್ಷುರಿಂದ್ರಿಯಕ್ಕೆ ಅನುಗುಣವಾದ ಶಕ್ತಿಯುಳ್ಳವನು ಎಂದು ಅರ್ಥವನ್ನು ಕಲ್ಪಿಸುವಂತೆಯೇ ಶ್ವೇತಾಶ್ವತರಮಂತ್ರಕ್ಕೂ ಅರ್ಥ ಎಂದು ಅಭಿಪ್ರಾಯ. ತೈ. ಆ. ೧-೧೧ ರ ಸಾಯಣಭಾಷ್ಯವನ್ನು ನೋಡಿರಿ.

3. ಆಸ್ಪದವು ಎಂದರೆ ಅಧಿಷ್ಠಾನವು; ಅದಿಲ್ಲದೆ ಕಲ್ಪಿತವಸ್ತು ತೋರಲೇ ಅರದು. ಮಾಂ. ಭಾ. ಭಾ. ೬೫; ಮಾಂ. ಕಾ. ಭಾ. ೧೧೪.

4. ಎಲ್ಲಕ್ಕೂ ಅಧಿಷ್ಠಾನವಿದು ಎಂಬರ್ಥದಲ್ಲಿಯೇ ಈ ವಿಶೇಷಣವನ್ನುಪಯೋಗಿಸಿದೆ ಎಂದು ಭಾವ.

ಳಿಲ್ಲದ್ದು ಆ ಜ್ಞೇಯವು ; ಆದರೂ ಗುಣಭೋಕ್ತೃವೂ (ಆಗಿರುವದು). ಗುಣಗಳನ್ನು ಶಬ್ದವೇ ಮುಂತಾದವುಗಳ ಮೂಲಕ ಸುಖದುಃಖಮೋಹಗಳ ಆಕಾರವಾಗಿರುವ ಸತ್ತ್ವ ರಜಸ್ತಮಗಳನ್ನು ಭೋಗಿಸುವದು, ಎಂದರೆ ಅರಿತುಕೊಳ್ಳುವದೂ ಆಗಿದೆ, ಆ ಜ್ಞೇಯವು ಎಂದರ್ಥ.

**ಬಹಿರನ್ತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ ತದವಿಜ್ಞೇಯಂ ದೂರಸ್ಥಂ ಚಾನ್ತಿಕೇ ಚ ತತ್ ॥ ೧೫ ॥**

೧೫. ಭೂತಗಳ ಹೊರಗೂ ಒಳಗೂ (ಇರುವದು), ಅಚರವೂ ಚರವೂ (ಆಗಿರುವದು). ಸೂಕ್ಷ್ಮವಾಗಿರುವದರಿಂದ ಅದು ಅರಿಯಲಶಕ್ಯವಾಗಿರುವದು. ಅದು ದೂರದಲ್ಲಿರುವದು, ಹತ್ತಿರವೂ ಇರುವದು.

(ಭಾಷ್ಯ)

೫೫೭. ಕಿಂಚ ಬಹಿಃ ತ್ವಕ್ಪರ್ಯನ್ತಂ ದೇಹಮ್ ಆತ್ಮತ್ವೇನ ಅವಿದ್ಯಾಕಲ್ಪಿತಮ್ ಅಪೇಕ್ಷ್ಯ ತಮೇವ ಅವಧಿಂ ಕೃತ್ವಾ ಬಹಿಃ ಉಚ್ಯತೇ । ತಥಾ ಪ್ರತ್ಯಗಾತ್ಮಾನಮ್ ಅಪೇಕ್ಷ್ಯ ದೇಹಮೇವ ಅವಧಿಂ ಕೃತ್ವಾ ಅನ್ತಃ ಉಚ್ಯತೇ । ಬಹಿಃ ಅನ್ತಶ್ಚ ಇತ್ಯುಕ್ತೇ ಮಧ್ಯೇ ಅಭಾವೇ ಪ್ರಾಪ್ತೇ ಇದಮ್ ಉಚ್ಯತೇ–ಅಚರಂ ಚರಮೇವ ಚ । ಯತ್ ಚರಾಚರಂ ದೇಹಾಭಾಸಮಪಿ ತದೇವ ಜ್ಞೇಯಂ ಯಥಾ ರಜ್ಜುಸರ್ಪಾಭಾಸಃ ಯದಿ ಅಚರಂ ಚರಮೇವ ಚ ಸ್ಯಾತ್ [1] ವ್ಯವಹಾರವಿಷಯಂ ಸರ್ವಂ ಜ್ಞೇಯಮ್, ಕಿಮರ್ಥಮ್ ಇದಮ್ ಇತಿ ಸರ್ವೈಃ ನ ವಿಜ್ಞೇಯಮ್ ಇತಿ ? ಉಚ್ಯತೇ । ಸತ್ಯಂ ಸರ್ವಾಭಾಸಂ ತತ್ [2] । ತಥಾಪಿ ವ್ಯೋಮವತ್ ಸೂಕ್ಷ್ಮಮ್ । ಅತಃ ಸೂಕ್ಷ್ಮತ್ವಾತ್ ಸ್ವೇನ ರೂಪೇಣ ತತ್ ಜ್ಞೇಯಮಪಿ ಅವಿಜ್ಞೇಯಮ್ ಅವಿದುಷಾಮ್ । ವಿದುಷಾಂ ತು "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ಬ್ರಹ್ಮೈವೇದಂ ಸರ್ವಮ್" (?) [3] ಇತ್ಯಾದಿಪ್ರಮಾಣತೋ ನಿತ್ಯಂ ವಿಜ್ಞಾತಮ್ । ಅವಿಜ್ಞಾತತಯಾ ದೂರಸ್ಥಂ ವರ್ಷಸಹಸ್ರಕೋಟ್ಯಾಪಿ ಅವಿದುಷಾಮ್ ಅಪ್ರಾಪ್ಯತ್ವಾತ್ । ಅನ್ತಿಕೇ ಚ ತತ್, ಆತ್ಮತ್ವಾತ್ । ವಿದುಷಾಮ್ ॥

---

1. ಶಿ॥ ಮೈ॥ಗಳಲ್ಲಿಲ್ಲ.
2. 'ತತ್' ಎಂಬುದು ಮ॥ ಮೈ॥ ಹೊರತು ಉಳಿದ ಪಾಠಗಳಲ್ಲಿಲ್ಲ ಇದೆ.
3. ಮ॥ದಲ್ಲಿ ಬಿಟ್ಟುಹೋಗಿದೆ. ಈ ವಾಕ್ಯವು ಎಲ್ಲಿಯದೆಂಬುದು ತಿಳಿಯಲಿಲ್ಲ. ತೈ. ಭಾ. ಭಾ. ೭೭; ಸೂ. ಭಾ. ೧-೪-೨೨–ಇವುಗಳಲ್ಲಿಯೂ ಈ ವಾಕ್ಯವನ್ನು ಉದಾಹರಿಸಿದೆ.

ಮತ್ತು ಹೊರಗೂ-ಚರ್ಮದವರೆಗಿನ ದೇಹವನ್ನು ತಪ್ಪುತಿಳಿವಳಿಕೆಯಿಂದ ಆತ್ಮನೆಂದು ಇಟ್ಟುಕೊಂಡಿರುವ(ರಷ್ಟೆ, ಅಲ್ಲಿಂದ) ಹೊರಟು ಅದನ್ನೇ ಅವಧಿಯನ್ನಾಗಿ ಮಾಡಿಕೊಂಡು (ಅದರ) ಹೊರಗೆ ಎಂದಿರುತ್ತದೆ. ಇದರಂತೆ ಪ್ರತ್ಯಗಾತ್ಮನಿಂದ ಹೊರಟು ದೇಹವನ್ನೇ ಅವಧಿಯಾಗಿ ಮಾಡಿಕೊಂಡು (ಅದರ) 'ಒಳಗೆ'[1] ಎಂದಿದೆ. ಹೊರಗೂ ಒಳಗೂ ಎಂದರೆ ನಡುವೆ ಇಲ್ಲವೆಂದಾದೀತು ಎಂದು ಇದನ್ನು ಹೇಳಿರುತ್ತಾನೆ: ಅಚರವೂ ಚರವೂ (ಆಗಿರುತ್ತದೆ). ಯಾವದು ಚರಾಚರರೂಪವಾಗಿ ದೇಹದಂತೆ ತೋರುತ್ತಿರುವದೋ ಅದೂ ಜ್ಞೇಯವೇ ; ಹೇಗೆ ಹಗ್ಗದ ಹಾವಿನಂತೆ ತೋರುವದೂ (ಹಗ್ಗವೇಯೋ, ಅದರಂತೆಯೇ ಈ ದೇಹವನ್ನೂ ಅರಿಯಬೇಕು).[2]

ವ್ಯವಹಾರವಿಷಯವಾದ ಸ್ಥಾವರಜಂಗಮವೆಲ್ಲವೂ ಜ್ಞೇಯವೇ ಆದರೆ 'ಇದು' ಎಂದು ಎಲ್ಲರಿಗೂ ಏತಕ್ಕೆ ತಿಳಿಯದೆ (ಇದೆ)? ಎಂದರೆ (ಭಗವಂತನು) ಹೇಳುತ್ತಾನೆ? ನಿಜ. ಅದು ಎಲ್ಲದರ ರೂಪದಿಂದಲೂ ತೋರಿಕೊಳ್ಳುತ್ತಿದೆ. ಆದರೂ (ಅದು) ಆಕಾಶದಂತೆ ಸೂಕ್ಷ್ಮವಾಗಿರುತ್ತದೆ. ಆದ್ದರಿಂದ ತನ್ನ ರೂಪದಿಂದ ಸೂಕ್ಷ್ಮವಾಗಿರುವದರಿಂದ, ಅದು ಜ್ಞೇಯವಾದರೂ ಅಜ್ಞರಿಗೆ ಅರಿಯುವದಕ್ಕೆ ಆಗದೆ ಇರುತ್ತದೆ. ಆದರೆ ಜ್ಞಾನಿಗಳಿಗೆ "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨), "ಇದೆಲ್ಲವೂ ಬ್ರಹ್ಮವೇ" (?) ಮುಂತಾದ ಪ್ರಮಾಣದಿಂದ ಎಂದೆಂದಿಗೂ ತಿಳಿದೇ ಇರುತ್ತದೆ. ತಿಳಿಯದೆ ಇರುವದರಿಂದ (ಅದು) ದೂರವಾಗಿರುತ್ತದೆ ; ಏಕೆಂದರೆ ಸಾವಿರ ಕೋಟಿ ವರ್ಷಗಳಾದರೂ (ಅದು) ಅಜ್ಞರಿಗೆ ಸಿಕ್ಕದೆ ಇರುತ್ತದೆ. ಆದರೂ ತಿಳಿದವರಿಗೆ ಅದು ಆತ್ಮನೇ ಆಗಿರುವದರಿಂದ ಹತ್ತಿರದಲ್ಲಿಯೇ (ಇರುವದು).

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೬ ॥**

೧೬. ಬಿಂಗಡವಾಗದೆಯೂ ಇರುವದು, ಭೂತಗಳಲ್ಲಿ ಬಿಂಗಡವಾಗಿರುವಂತೆ (ತೋರು)ತ್ತಿರುವದು. ಆ ಜ್ಞೇಯವು ಭೂತಭರ್ತೃವೂ ಗ್ರಸಿಷ್ಣುವೂ ಪ್ರಭವಿಷ್ಣುವೂ (ಆಗಿರುವದು).

1. ದೇಹದವರೆಗಿನ ಹೊರಗಿನ ಪದಾರ್ಥಗಳನ್ನು ಹೊರಗೆ ಎಂದೂ ದೇಹದವರೆಗೆ ಒಳಗಿರುವ ಪದಾರ್ಥಗಳನ್ನು ಒಳಗೆ ಎಂದೂ ಕರೆದಿದೆ. ಆತ್ಮನಿಗೆ ಒಳಗಾಗಲಿ ಹೊರಗಾಗಲಿ ಇಲ್ಲ ಎಂದರ್ಥ.

2. ಹಾವು ಹಗ್ಗದ ರೂಪದಿಂದಲೇ ಪರಮಾರ್ಥವಾಗಿರುವಂತೆ, ಆತ್ಮನ ಆಭಾಸವಾಗಿರುವ ದೇಹವು ಬ್ರಹ್ಮರೂಪದಿಂದಲೇ ಪರಮಾರ್ಥವು. ೧೪-೫೦ರ ಭಾಷ್ಯವನ್ನು ನೋಡಿ.

(ಭಾಷ್ಯ)

೨೫೮. ಕಿಂಚ ಅವಿಭಕ್ತಂ ಚ ಪ್ರತಿದೇಹಂ ವ್ಯೋಮವತ್ ತತ್ ಏಕಮ್। ಭೂತೇಷು ಸರ್ವಪ್ರಾಣಿಷು ವಿಭಕ್ತಮಿವ ಚ ಸ್ಥಿತಮ್। ದೇಹೇಷ್ವೇವ[1] ವಿಭಾವಮಾನತ್ವಾತ್। ಭೂತಭರ್ತೃ ಚ ಭೂತಾನಿ ಬಿಭರ್ತಿ ಇತಿ ತತ್ ಜ್ಞೇಯಂ ಭೂತಭರ್ತೃ ಚ[2] ಸ್ಥಿತಿಕಾಲೇ। ಪ್ರಲಯಕಾಲೇ ಗ್ರಸಿಷ್ಣು ಗ್ರಸನಶೀಲಮ್। ಉತ್ಪತಿಕಾಲೇ[3] ಪ್ರಭವಿಷ್ಣು ಚ ಪ್ರಭವನಶೀಲಮ್ ಯಥಾ ರಜ್ಜ್ವಾದಿಃ ಸರ್ಪಾದೇಃ ಮಿಥ್ಯಾಕಲ್ಪಿತಸ್ಯ ||

(ಭಾಷ್ಯಾರ್ಥ)

ಮತ್ತು ಒಂದೊಂದು ದೇಹಕ್ಕೂ ವಿಂಗಡವಾಗದೆ ಆಕಾಶದಂತೆ ಅದು ಒಂದೇ ಆಗಿಯೂ (ಇರುವದು); ಭೂತಗಳಲ್ಲಿ ಸರ್ವಪ್ರಾಣಿಗಳಲ್ಲಿಯೂ ವಿಂಗಡವಾಗಿರುವಂತೆ (ತೋರು)ತ್ತಿರುವದು ಏಕೆಂದರೆ ದೇಹಗಳಲ್ಲಿಯೇ (ಅದರ) ಅರಿವಾಗುತ್ತಿರುವದು. **ಭೂತಭರ್ತೃವೂ** ಭೂತಗಳನ್ನು ಕಾಪಾಡುತ್ತಿರುವದರಿಂದ ಆ ಜ್ಞೇಯವು ಸ್ಥಿತಿಕಾಲದಲ್ಲಿ ಭೂತಭರ್ತೃವೂ (ಆಗಿರುವದು), ಪ್ರಲಯಕಾಲದಲ್ಲಿ ಗ್ರಸಿಷ್ಣುವೂ ಎಂದರೆ (ಎಲ್ಲವನ್ನೂ) ನುಂಗುವ ಸ್ವಭಾವದ್ದೂ (ಆಗಿರುವದು). ಸೃಷ್ಟಿಕಾಲದಲ್ಲಿ ಪ್ರಭವಿಷ್ಣುವೂ (ಆಗಿರುವದು); ಸುಳ್ಳಾಗಿ ಕಲ್ಪಿತವಾದ ಹಾವೇ ಮುಂತಾದದ್ದಕ್ಕೆ ಹೇಗೆ ಹಗ್ಗವೇ ಮುಂತಾದದ್ದು (ಉಂಟುಮಾಡುವದೆ ಕಾರಣವೋ ಹಾಗೆ ಎಲ್ಲಕ್ಕೂ ಪ್ರಭವಿಷ್ಣುವೂ) ಉಂಟುಮಾಡುವ ಸ್ವಭಾವ(ವುಳ್ಳ ಕಾರಣವೂ) ಆಗಿರುವದು.

(ಭಾಷ್ಯ)

೨೫೯. ಕಿಂಚ ಸರ್ವತ್ರ ವಿದ್ಯಮಾನಮಪಿ ಸತ್ ನೋಪಲಭ್ಯತೇ ಚೇತ್ ಜ್ಞೇಯಂ ತಮಸ್ತರ್ಹಿ। ನ। ಕಿಂ ತರ್ಹಿ?

(ಭಾಷ್ಯಾರ್ಥ)

ಮತ್ತು (ಈ) ಜ್ಞೇಯವು ಎಲ್ಲೆಲ್ಲಿಯೂ ಇದ್ದುಕೊಂಡಿರುವದಾಗಿದ್ದರೂ ಕಾಣಬರುವದಿಲ್ಲವಾದರೆ ಆಗ (ಅದು ಬರಿಯ) ಕತ್ತಲೆಯಾಗಿರ(ಬೇಕಲ್ಲವೆ)? ಎಂದರೆ ಹಾಗಲ್ಲ; ಮತ್ತೇನೆಂದರೆ :—

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ||**

---

1. 'ಹಿ' ಎಂದು ಹೆಚ್ಚಾಗಿ ಮ॥
2. ನಿ॥ ದಲ್ಲಿಲ್ಲ.
3. 'ಕಾಲೇ ಚ' ಮ॥ ಮೈ॥ ಗು॥

೧೭. ಅದು ಜ್ಯೋತಿಗಳಿಗೂ ಜ್ಯೋತಿಯು, ತಮಸ್ಸಿಗೆ ಆಚೆ ಎನಿಸಿರುವದು. ಜ್ಞಾನ, ಜ್ಞೇಯ, ಜ್ಞಾನಗಮ್ಯವೂ (ಆಗಿರುತ್ತದೆ). ಪ್ರತಿಯೊಬ್ಬನ ಹೃದಯದಲ್ಲಿಯೂ ವಿಷ್ಠಿತವಾಗಿರುತ್ತದೆ.

(ಭಾಷ್ಯ)

೨೬೦. ಜ್ಯೋತಿಷಾಮ್ ಆದಿತ್ಯಾದೀನಾಮಪಿ ತತ್ ಜ್ಞೇಯಂ ಜ್ಯೋತಿಃ। ಆತ್ಮಚೈತನ್ಯಜ್ಯೋತಿಷಾ ಇದ್ಧಾನಿ ಹಿ ಆದಿತ್ಯಾದೀನಿ ಜ್ಯೋತೀಂಷಿ ದೀಪ್ಯನ್ತೇ। "ಯೇನ ಸೂರ್ಯಸ್ತಪತಿ ತೇಜಸೇದ್ಧಃ" (ತೈ. ಬ್ರಾ. ೩-೧೨-೯), "ತಸ್ಯ ಭಾಸಾ ಸರ್ವಮಿದಂ ವಿಭಾತಿ" (ಮುಂ. ೨-೨-೧೦) ಇತ್ಯಾದಿಶ್ರುತಿಭ್ಯಃ। ಸ್ಮೃತೇಶ್ಚ ಇಹೈವ "ಯದಾದಿತ್ಯಗತಂ ತೇಜಃ" (೧೫-೧೨) ಇತ್ಯಾದೇಃ। ತಮಸಃ ಅಜ್ಞಾನಾತ್ ಪರಮ್ ಅಸ್ಪೃಷ್ಟಮ್[1] ಉಚ್ಯತೇ। ಜ್ಞಾನಾದೇಃ ದುಃಸಮ್ಪಾದನಬುದ್ಧ್ಯಾ ಪ್ರಾಪ್ತಾವಸಾದಸ್ಯ ಉತ್ತಮ್ಭನಾರ್ಥಮ್[2] ಆಹ–ಜ್ಞಾನಮ್ ಅಮಾನಿತ್ವಾದಿ। ಜ್ಞೇಯಂ "ಜ್ಞೇಯಂ ಯತ್ ತತ್ ಪ್ರವಕ್ಷ್ಯಾಮಿ" (೧೩-೧೨) ಇತ್ಯಾದಿನಾ ಉಕ್ತಮ್। ಜ್ಞಾನಗಮ್ಯಂ ಜ್ಞೇಯಮೇವ ಜ್ಞಾತಂ ಸತ್ ಜ್ಞಾನಫಲಮ್ ಇತಿ ಜ್ಞಾನಗಮ್ಯಮ್ ಉಚ್ಯತೇ। ಜ್ಞಾಯಮಾನಂ ತು ಜ್ಞೇಯಮ್। ತದೇತತ್[3] ತ್ರಯಮಪಿ ಹೃದಿ ಬುದ್ಧೌ ಸರ್ವಸ್ಯ ಪ್ರಾಣಿಜಾತಸ್ಯ ವಿಷ್ಠಿತಂ ವಿಶೇಷೇಣ ಸ್ಥಿತಮ್। ತತ್ರೈವ ಹಿ ತ್ರಯಂ ವಿಭಾವ್ಯತೇ ||

(ಭಾಷ್ಯಾರ್ಥ)

ಆ ಜ್ಞೇಯವು ಆದಿತ್ಯನೇ ಮುಂತಾದ ಜ್ಯೋತಿಗಳಿಗೂ ಜ್ಯೋತಿಯಾಗಿರುವದು. ಆತ್ಮಚೈತನ್ಯದ ಬೆಳಕಿನಿಂದ ಹೊತ್ತಿಕೊಂಡೇ ಅಲ್ಲವೆ, ಆದಿತ್ಯನೇ ಮುಂತಾದ ಜ್ಯೋತಿಗಳು ಬೆಳಗುತ್ತಿರುವವು? "ಯಾವ ತೇಜಸ್ಸಿನಿಂದ ಹೊತ್ತಿಕೊಂಡು ಸೂರ್ಯನು ತಪಿಸುತ್ತಿರುವನೋ" (ತೈ. ಬ್ರಾ. ೩-೧೨-೯), "ಅದರ ಬೆಳಕಿನಿಂದ ಇದೆಲ್ಲವೂ ಬೆಳಗುತ್ತಿರುವದು" (ಮುಂ. ೨-೨-೧೦) ಮುಂತಾದ ಶ್ರುತಿಗಳೂ ಇಲ್ಲಿಯೇ (ಇರುವ) "ಆದಿತ್ಯನಲ್ಲಿರುವ ತೇಜಸ್ಸು ಯಾವದೋ" (೧೫-೧೨) ಮುಂತಾದ ಸ್ಮೃತಿಯೂ (ಇದಕ್ಕೆ ಆಧಾರವು). ತಪಸ್ಸಿಗಿಂತಲೂ ಎಂದರೆ ಅಜ್ಞಾನಕ್ಕಿಂತಲೂ (ಅದು) ಆಚೆ ಇರುವದು, (ಅದರ) ಸೋಂಕಿಲ್ಲದ್ದು ಎನಿಸಿರುವದು.

---

1. 'ಅಸಂಸ್ಪೃಷ್ಟಮ್' ಮ॥

2. 'ವಿದುಷಾ ಪ್ರತಿ ಷೇಧಾರ್ಥಮ್' ಎಂದು ಮ॥ ದಲ್ಲಿ. ಮಾತ್ರಹೆಚ್ಚಾಗಿ ಇರುವದು ಬೇಕಿಲ್ಲವೆಂದು ತೋರುತ್ತದೆ.

3. "ತತ ತ್ರಯಮಪಿ" ಮ॥

ಜ್ಞಾನವೇ ಮುಂತಾದದ್ದನ್ನು ಸಂಪಾದಿಸುವದು ಬಲು ಕಷ್ಟವೆಂದು ಬಗೆದು (ಮನಸ್ಸಿನಲ್ಲಿ) ಕುಗ್ಗು ಹೊಂದಿದ್ದ (ಅರ್ಜುನನನ್ನು) ಎತ್ತಿ ಹಿಡಿದು (ಧೈರ್ಯವನ್ನು ಕೊಡುವ)ದಕ್ಕಾಗಿ (ಭಗವಂತನು) ಹೀಗೆನ್ನುತ್ತಿದಾನೆ : ಜ್ಞಾನವು ಎಂದರೆ ಅಮಾನಿತ್ವವೇ ಮುಂತಾದದ್ದು ; ಜ್ಞೇಯವು ಎಂದರೆ "ಯಾವದು ಜ್ಞೇಯವೋ ಅದನ್ನು ಹೇಳುವೆನು" (೧೩-೧೨) ಎಂದು ಮುಂತಾಗಿ ಹೇಳಿದ (ಬ್ರಹ್ಮವು); ಜ್ಞಾನಗಮ್ಯವು : (ಈ) ಜ್ಞೇಯವೇ ಅರಿಯಲ್ಪಟ್ಟದ್ದಾದರೆ ಜ್ಞಾನದ ಫಲ(ವಾಗುವ)ದರಿಂದ ಜ್ಞಾನಗಮ್ಯವು ಎನಿಸುತ್ತದೆ, ಆದರೆ (ಇನ್ನೂ) ಅರಿಯ(ಬೇಕಾಗಿರುವಾಗ ಜ್ಞೇಯವು (ಎನಿಸುತ್ತದೆ). ಅಂಥ ಈ ಮೂರೂ ಪ್ರತಿಯೊಬ್ಬ (ಜೀವನ), ಎಲ್ಲಾ ಪ್ರಾಣಿರಾಶಿಗಳ ಹೃದಯದಲ್ಲಿಯೂ ಎಂದರೆ ಬುದ್ಧಿಯಲ್ಲಿಯೂ ವಿಸ್ಥಿತವಾಗಿರುತ್ತದೆ, ವಿಶೇಷ (ರೂಪ)ದಿಂದ ಇರುತ್ತದೆ. ಅಲ್ಲಿಯೇ ಅಲ್ಲವೆ, (ಆ) ಮೂರೂ (ಅನುಭವಕ್ಕೆ) ತೋಚುತ್ತದೆ ?

## ಕ್ಷೇತ್ರಾದಿಗಳ ಜ್ಞಾನವು ಈಶ್ವರಭಕ್ತನಿಗಾಗುವದು

(ಭಾಷ್ಯ)

೨೬೧. ಯಥೋಕ್ತಾರ್ಥೋಪಸಂಹಾರಾರ್ಥೋಽಯಂ ಶ್ಲೋಕಃ ಆರಭ್ಯತೇ—

(ಭಾಷ್ಯಾರ್ಥ)

(ಇದುವರೆಗೆ) ಹೇಳಿರುವ ವಿಷಯವನ್ನು ಉಪಸಂಹಾರಮಾಡುವದಕ್ಕಾಗಿ ಈ ಶ್ಲೋಕವನ್ನು ಆರಂಭಿಸಿರುತ್ತದೆ :—

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮ ॥**

೧೮. ಹೀಗೆ ಕ್ಷೇತ್ರವನ್ನೂ ಜ್ಞಾನವನ್ನೂ ಹಾಗೂ ಜ್ಞೇಯವನ್ನೂ ಸಮಾಸದಿಂದ ಹೇಳಿದ್ದಾಯಿತು. ಮದ್ಭಕ್ತನು ಇದನ್ನು ತಿಳಿದು ನನ್ನ ಭಾವವನ್ನು (ಹೊಂದು)ವದಕ್ಕೆ ತಕ್ಕವನಾಗುತ್ತಾನೆ.

(ಭಾಷ್ಯ)

೨೬೨. ಇತಿ ಏವಂ ಕ್ಷೇತ್ರಂ ಮಹಾಭೂತಾದಿ ಧೃತ್ಯಂತಮ್ । (೧೩-೫, ೬) ತಥಾ ಜ್ಞಾನಮ್ ಅಮಾನಿತ್ವಾದಿ ತತ್ತ್ವಜ್ಞಾನಾರ್ಥದರ್ಶನಪರ್ಯಂತಮ್ । ಜ್ಞೇಯಂ ಚ "ಜ್ಞೇಯಂ ಯತ್ ತತ್" (೧೩-೧೨) ಇತ್ಯಾದಿ "ತಮಸಃ ಪರಮುಚ್ಯತೇ" (೧೩-೧೭) ಇತ್ಯೇವಮಂತಮ್ ಉಕ್ತಂ ಸಮಾಸತಃ ಸಂಕ್ಷೇಪತಃ ।

ಏತಾವಾನ್ ಹಿ[1] ಸರ್ವೋ ವೇದಾರ್ಥಃ ಗೀತಾರ್ಥಶ್ಚ ಉಪಸಂಹೃತ್ಯ ಉಕ್ತಃ। ಅಸ್ಮಿನ್ ಸಮ್ಯಗ್ದರ್ಶನೇ ಕಃ ಅಧಿಕ್ರಿಯತೇ ಇತಿ ? ಉಚ್ಯತೇ। ಮದ್ಭಕ್ತಃ ಮಯಿ ಈಶ್ವರೇ[2] ಸರ್ವಜ್ಞೇ ಪರಮಗುರೌ ವಾಸುದೇವೇ ಸಮರ್ಪಿತಸರ್ವಾತ್ಮಭಾವಃ ಯತ್ ಪಶ್ಯತಿ ಶೃಣೋತಿ ಸ್ಪೃಶತಿ ವಾ ಸರ್ವಮೇವ ಭಗವಾನ್ ವಾಸುದೇವಃ ಇತಿ ಏವಂಗ್ರಹಾವಿಷ್ಟಬುದ್ಧಿಃ ಮದ್ಭಕ್ತಃ ಸ[3] ಏತತ್ ಯಥೋಕ್ತಂ ಸಮ್ಯಗ್ದರ್ಶನಂ ವಿಜ್ಞಾಯ ಮದ್ಭಾವಾಯ ಮಮಭಾವಃ ಮದ್ಭಾವಃ ಪರಮಾತ್ಮಭಾವಃ ತಸ್ಮೈ ಮದ್ಭಾವಾಯ ಉಪಪದ್ಯತೇ ಮೋಕ್ಷಂ ಗಚ್ಛತಿ ॥

(ಭಾಷ್ಯಾರ್ಥ)

ಹೀಗೆ **ಈ** ರೀತಿಯಲ್ಲಿ ಮಹಾಭೂತಗಳಿಂದ ಮೊದಲಾಗಿ ಧೃತಿಯವರೆಗಿನ ಕ್ಷೇತ್ರವನ್ನೂ, (೧೩-೫೬), ಹಾಗೂ ಅಮಾನಿತ್ವವು ಮೊದಲಾಗಿ ತತ್ತ್ವಜ್ಞಾನಾರ್ಥ ದರ್ಶನದವರೆಗಿನ ಜ್ಞಾನವನ್ನೂ (೧೩-೭ರಿಂದ ೧೩), "ಯಾವದು ಜ್ಞೇಯವೋ ಅದನ್ನು" (೧೩-೧೨) ಎಂದು ಮೊದಲಾಗಿ "ತಮಸ್ಸಿನ ಆಚೆ(ಯಿರುವ)ದೆನಿಸುವದು" (೧೩-೧೭) ಎಂಬವರೆಗೆ ಜ್ಞೇಯವನ್ನೂ ಸಮಾಸವಾಗಿ ಸಂಕ್ಷೇಪವಾಗಿ ಹೇಳಿದ್ದಾಯಿತು. **ಸಕಲ ವೇದಾರ್ಥವೂ ಗೀತಾರ್ಥವೂ ಇಷ್ಟೇ (ಎಂದು) ಒಟ್ಟುಗೂಡಿಸಿ ಹೇಳಿದ್ದಾಯಿತು[4].**

ಈ ಸಮ್ಯಗ್ದರ್ಶನಕ್ಕೆ ಯಾವನು ಅಧಿಕಾರಿಯಾಗಿರುವನು ? ಎಂದರೆ (ಭಗವಂತನು) ಹೇಳುತ್ತಾನೆ : ಮದ್ಭಕ್ತನು **ಈಶ್ವರನಾದ ಸರ್ವಜ್ಞನೂ ಪರಮಗುರುವೂ ಆದ ವಾಸುದೇವನೆಂಬ ನನ್ನಲ್ಲಿ ಸರ್ವಾತ್ಮಭಾವವನ್ನೂ[5] ಸಮರ್ಪಿಸಿದವನಾಗಿ, (ಯಾವ) ಯಾವದನ್ನು ಕಾಣುತ್ತಾನೋ, ಕೇಳುತ್ತಾನೋ ಅಥವಾ ಮುಟ್ಟುತ್ತಾನೋ (ಅದೆ)ಲ್ಲವೂ ಭಗವಂತನಾದ ವಾಸುದೇವನೇ ಎಂಬೀ (ಬಗೆಯ) ತಿಳಿವಳಿಕೆಯು ತುಂಬಿರುವ ಬುದ್ಧಿಯುಳ್ಳವನು** ಮದ್ಭಕ್ತನು[6]. ಅವನು ಇದನ್ನು ಎಂದರೆ (ಈ ಹಿಂದೆ) ಹೇಳಿರುವ ಸಮ್ಯಗ್ದರ್ಶನವನ್ನು

---

1. 'ಏತಾವಾನ್ ಸರ್ವೋ ಹಿ'' ಸಿ॥ ಅ॥ ವಾ ; ''ಸರ್ವವೇದಾರ್ಥಃ' ಮ॥ ಮೈ॥
2. ''ಪರಮೇಶ್ವರೇ'' ಮ॥ ಮೈ॥
3. 'ಸನ್' ಮ॥ ಮೈ॥
4. ಇಲ್ಲಿ ಹೇಳಿರುವದು ಅರಿತುಕೊಳ್ಳಬೇಕಾದ ಗೀತಾರ್ಥ; ಹಿಂದೆ ೧೧-೫೫ರಲ್ಲಿ ಹೇಳಿರುವದು ಸಾಧನರೂಪವಾದ ಗೀತಾರ್ಥ.
5. 'ತನ್ನ ಸರ್ವಭಾವಗಳನ್ನೂ' ಎಂದೂ ಕನ್ನಡಿಸಬಹುದು.
6. ಇಲ್ಲಿ ಹೇಳಿರುವದು ಪರಭಕ್ತನನ್ನು, ಗೌಣಭಕ್ತನನ್ನಲ್ಲ—ಎಂದು ಭಾವ.

ಅರಿತುಕೊಂಡು ಮದ್ಭಾವ(ವನ್ನು ಹೊಂದುವ)ದಕ್ಕೆ-(ಇಲ್ಲಿ) ಮದ್ಭಾವವು ಎಂದರೆ ನನ್ನ ಭಾವವು, ಪರಮಾತ್ಮಭಾವವು; ಅಂಥ ಮದ್ಭಾವಕ್ಕೆ-ತಕ್ಕವನಾಗುತ್ತಾನೆ, ಮೋಕ್ಷವನ್ನು ಹೊಂದುತ್ತಾನೆ[1].

## ಪ್ರಕೃತಿಪುರುಷರಿಂದ ಆಗುವ ಭೂತೋತ್ಪತ್ತಿ

(ಭಾಷ್ಯ)

೨೬೩. ತತ್ರ ಸಪ್ತಮೇ[2] ಈಶ್ವರಸ್ಯ ದ್ವೇ ಪ್ರಕೃತೀ ಉಪನ್ಯಸ್ತೇ ಪರಾಪರೇ ಕ್ಷೇತ್ರಕ್ಷೇತ್ರಜ್ಞಲಕ್ಷಣೇ। "ಏತದ್ಯೋನೀನಿ ಭೂತಾನಿ" (೭-೬) ಇತಿ ಚ ಉಕ್ತಮ್। ಕ್ಷೇತ್ರಕ್ಷೇತ್ರಜ್ಞಪ್ರಕೃತಿದ್ವಯಯೋನಿತ್ವಂ ಕಥಂ ಭೂತಾನಾಮ್? ಇತ್ಯಯಮ್ ಅರ್ಥಃ ಅಧುನಾ ಉಚ್ಯತೇ—

(ಭಾಷ್ಯಾರ್ಥ)

ಹಿಂದೆ ಏಳನೆಯ (ಅಧ್ಯಾಯದಲ್ಲಿ)[3] ಈಶ್ವರನಿಗೆ ಕ್ಷೇತ್ರ ಕ್ಷೇತ್ರಜ್ಞ-ಎಂಬ ಪರ ಮತ್ತು ಅಪರ (ರೂಪವಾದ) ಪ್ರಕೃತಿಗಳೆರಡನ್ನೂ ಹೇಳಲಾಗಿದೆ. "(ಎಲ್ಲಾ) ಭೂತಗಳೂ ಇವುಗಳಿಂದ ಉಂಟಾಗುವವು" (೭-೬) ಎಂದೂ ಹೇಳಿದ್ದಾಗಿದೆ, ಕ್ಷೇತ್ರ, ಕ್ಷೇತ್ರಜ್ಞ-ಎಂಬ ಎರಡು ಪ್ರಕೃತಿಗಳಿಂದ ಪ್ರಾಣಿಗಳು ಉಂಟಾಗುವವೆಂಬುದು ಹೇಗೆ? ಎಂಬೀ ವಿಷಯವನ್ನು ಈಗ ಹೇಳಲಾಗುತ್ತದೆ :—

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಮ್ಭವಾನ್ ॥ ೧೯ ॥**

೧೯. ಪ್ರಕೃತಿಯನ್ನೂ ಪುರುಷನನ್ನೂ (ಈ) ಎರಡನ್ನೂ ಅನಾದಿಗಳೆಂದು ತಿಳಿ. ವಿಕಾರಗಳೂ ಗುಣಗಳೂ ಪ್ರಕೃತಿಸಂಭವಗಳೆಂದು ತಿಳಿ.

(ಭಾಷ್ಯ)

೨೬೪. ಪ್ರಕೃತಿಂ ಪುರುಷಂ ಚೈವ ಈಶ್ವರಸ್ಯ ಪ್ರಕೃತೀ। ತೌ ಪ್ರಕೃತಿ

---

1. ಅರಿತುಕೊಂಡಮೇಲೆ ಎಂದಿರುವದರಿಂದ ಮದ್ಭಾವ ಎಂದರೆ ನನ್ನಲ್ಲಿ ಭಕ್ತಿ ಎಂದು ಅರ್ಥಮಾಡುವದಕ್ಕಾಗುವದಿಲ್ಲ; ಆದ್ದರಿಂದ ನನ್ನ ಸ್ವರೂಪವಾದ ಮೋಕ್ಷವನ್ನು ಎಂದು ಅರ್ಥಮಾಡಿದೆ.

2. 'ಅಧ್ಯಾಯೇ' ಎಂದು ಹೆಚ್ಚಾಗಿ ಮ॥ ಮೈ॥

3. ಈ ಅಧ್ಯಾಯದ ಅವತರಣಿಕೆಯಲ್ಲಿ ಹೇಳಿರುವ ಸಂಬಂಧಭಾಷ್ಯವನ್ನು ಇಲ್ಲಿ ಮತ್ತೆ ಅನುವಾದಮಾಡಿಕೊಂಡಿರುತ್ತದೆ. ಈ ಶ್ಲೋಕಕ್ಕೆ ಇದರ ಹಿಂದಿನ ಶ್ಲೋಕದ ಸಂಬಂಧವಿಲ್ಲವೆಂದು ತಿಳಿಸುವದಕ್ಕೆ ಈ ಅನುವಾದ.

ಪುರುಷೌ ಉಭಾವಪಿ ಅನಾದೀ ವಿದ್ಧಿ । ನ ವಿದ್ಯತೇ ಆದಿಃ ಯಯೋಃ ತೌ ಅನಾದೀ । ನಿತ್ಯೇಶ್ವರತ್ವಾತ್ ಈಶ್ವರಸ್ಯ ತತ್ಪ್ರಕೃತ್ಯೋರಪಿ ಯುಕ್ತಂ ನಿತ್ಯತ್ವೇನ ಭವಿತುಮ್ । ಪ್ರಕೃತಿದ್ವಯವತ್ತ್ವಮೇವ ಹಿ ಈಶ್ವರಸ್ಯ ಈಶ್ವರತ್ವಮ್ । ಯಾಭ್ಯಾಂ ಪ್ರಕೃತಿಭ್ಯಾಮ್ ಈಶ್ವರಃ ಜಗದುತ್ಪತ್ತಿಸ್ಥಿತಿಪ್ರಲಯಹೇತುಃ ತೇ ದ್ವೇ[1] ಅನಾದೀ ಸತ್ಯೌ ಸಂಸಾರಸ್ಯ ಕಾರಣಮ್[2] ॥

(ಭಾಷ್ಯಾರ್ಥ)

ಪ್ರಕೃತಿಯನ್ನೂ ಪುರುಷನನ್ನೂ ಈಶ್ವರನ ಪ್ರಕೃತಿಗಳಾ(ಗಿರುವರಲ್ಲ, ಅವರನ್ನು), ಆ ಪ್ರಕೃತಿಪುರುಷರಿಬ್ಬರನ್ನೂ ಅನಾದಿಗಳೆಂದು ತಿಳಿ. ಆದಿಯು ಯಾವವಕ್ಕೆ ಇಲ್ಲವೋ ಅವು ಅನಾದಿಗಳು. **ಈಶ್ವರನು ಯಾವಾಗಲೂ ಈಶ್ವರನಾಗಿರುವದರಿಂದ ಆತನ ಪ್ರಕೃತಿಗಳೂ ನಿತ್ಯವಾಗಿರಬೇಕೆಂಬುದು ಯುಕ್ತ. (ಈ) ಎರಡು ಪ್ರಕೃತಿಗಳಿಂದ ಕೂಡಿರುವದೇ ಅಲ್ಲವೆ, ಈಶ್ವರನ ಈಶ್ವರತ್ವವೆಂಬುದು?**[3] ಈ (ಎರಡು) ಪ್ರಕೃತಿಗಳಿಂದ ಈಶ್ವರನು ಜಗತ್ತಿನ ಸೃಷ್ಟಿ, ಸ್ಥಿತಿ, ಪ್ರಲಯ-(ಇವಕ್ಕೆ) ಕಾರಣನಾಗಿರುವನು. ಇವೆರಡೂ ಅನಾದಿಯಾಗಿದ್ದುಕೊಂಡು ಸಂಸಾರಕ್ಕೆ ಕಾರಣವಾಗಿರುತ್ತವೆ[4].

(ಭಾಷ್ಯ)

ಶಂಕಾ. ನ ಆದೀ ಅನಾದೀ-ಇತಿ ತತ್ಪುರುಷಸಮಾಸಂ ಕೇಚಿತ್ ವರ್ಣಯನ್ತಿ । ತೇನ ಹಿ[5] ಕಿಲ ಈಶ್ವರಸ್ಯ ಕಾರಣತ್ವಂ ಸಿಧ್ಯತಿ । ಯದಿ ಪುನಃ ಪ್ರಕೃತಿಪುರುಷಾವೇವ ನಿತ್ಯೌ ಸ್ಯಾತಾಮ್, ತತ್ಕೃತಮೇವ ಜಗತ್ ನ ಈಶ್ವರಸ್ಯ ಜಗತಃ ಕರ್ತೃತ್ವಮ್ ಇತಿ[6] । ತತ್ ಅಸತ್ । ಪ್ರಾಕ್ ಪ್ರಕೃತಿಪುರುಷಯೋಃ ಉತ್ಪತ್ತೇಃ ಈಶಿತವ್ಯಾಭಾವಾತ್ ಈಶ್ವರಸ್ಯ ಅನೀಶ್ವರತ್ವಪ್ರಸಙ್ಗಾತ್ । ಸಂಸಾರಸ್ಯ ನಿರ್ನಿಮಿ

---

1. ಮ॥ ಮೈ॥ಗಳಲ್ಲಿಲ್ಲ

2. 'ಕಾರಣೇ' ಮ॥ ಮೈ॥

3. ಪರಮಾತ್ಮನಲ್ಲಿ ಸ್ವತಃ ಈಶ್ವರತ್ವವಿಲ್ಲ, ಪ್ರಕೃತಿಗಳೆಂಬ ಉಪಾಧಿಮೂಲಕವಾಗಿಯೇ ಅವನು ಈಶ್ವರನೆನಿಸಿಕೊಂಡಿರುತ್ತಾನೆ ಎಂದಭಿಪ್ರಾಯ.

4. ಪ್ರಕೃತಿಗಳ ಮೂಲಕವೇ ಪರಮಾತ್ಮನಿಗೆ ಜಗತ್ಕಾರಣತ್ವವನ್ನು ಹೇಳಬೇಕು. ೭-೬ರ ಭಾಷ್ಯವನ್ನು ನೋಡಿ.

5. ಮ॥ ಮೈ॥ಗಳಲ್ಲಿಲ್ಲ.

6. ಮ॥ ಮೈ॥ಗಳಲ್ಲಿ ಮಾತ್ರ ಈ ಮಾತಿದೆ.

ತ್ತತ್ವೇ ಅನಿರ್ಮೋಕ್ಷಪ್ರಸಙ್ಗಾತ್[1] ಶಾಸ್ತ್ರಾನರ್ಥಕ್ಯಪ್ರಸಙ್ಗಾತ್ । ಬನ್ಧಮೋಕ್ಷಾಭಾವಪ್ರಸಙ್ಗಾಚ್ಚ । ನಿತ್ಯತ್ವೇ ಪುನಃ ಈಶ್ವರಸ್ಯ ಪ್ರಕೃತ್ಯೋಃ[2] ಸರ್ವಮೇತತ್ ಉಪಪನ್ನಂ ಭವೇತ್ । ಕಥಮ್? ವಿಕಾರಾಂಶ್ಚ ಗುಣಾಂಶ್ಚೈವ ವಕ್ಷ್ಯಮಾಣಾನ್ ವಿಕಾರಾನ್ ಬುದ್ಧ್ಯಾದಿದೇಹೇನ್ದ್ರಿಯಾನ್ತಾನ್, ಗುಣಾಂಶ್ಚ ಸುಖದುಃಖಮೋಹಪ್ರತ್ಯಯಾಕಾರಪರಿಣತಾನ್[3] ವಿದ್ಧಿ ಜಾನೀಹಿ ಪ್ರಕೃತಿಸಮ್ಭವಾನ್ । ಪ್ರಕೃತಿಃ ಈಶ್ವರಸ್ಯ ವಿಕಾರಕಾರಣಶಕ್ತಿಃ ತ್ರಿಗುಣಾತ್ಮಿಕಾ ಮಾಯಾ । ಸಾ ಸಮ್ಭವಃ ಯೇಷಾಂ ವಿಕಾರಾಣಾಂ ಗುಣಾನಾಂ ಚ ತಾನ್ ವಿಕಾರಾನ್ ಗುಣಾಂಶ್ಚ ವಿದ್ಧಿ ಪ್ರಕೃತಿಸಮ್ಭವಾನ್ ಪ್ರಕೃತಿಪರಿಣಾಮಾನ್[4] ॥

(ಭಾಷ್ಯಾರ್ಥ)

ಆದಿಯಿಲ್ಲದವು ಅನಾದಿಗಳು ಎಂದು ತತ್ಪುರುಷಸಮಾಸವನ್ನು ಕೆಲವರು (ಇಲ್ಲಿ) ಹೇಳಿರುತ್ತಾರೆ. ಅದರಿಂದ ಈಶ್ವರನಿಗೇ ಕಾರಣತ್ವವು ಸಿದ್ಧಿಸುತ್ತದೆಯಂತೆ. ಹಾಗಿಲ್ಲದೆ ಪ್ರಕೃತಿಪುರುಷರೇ ನಿತ್ಯರು ಎಂದಾದರೆ ಜಗತ್ತು ಅವರಿಂದಲೇ ಆದದ್ದು, ಈಶ್ವರನು ಜಗತ್ತಿಗೆ ಕರ್ತನಲ್ಲ (ಎಂದಾಗುತ್ತದೆ) ಎಂದು (ಅವರ ಅಭಿಪ್ರಾಯವು). ಇದು ಸರಿಯಲ್ಲ. ಏಕೆಂದರೆ (ಆ ಪಕ್ಷದಲ್ಲಿ) ಪ್ರಕೃತಿಪುರುಷರು ಹುಟ್ಟುವ ಮುಂಚೆ ಆಳುವದಕ್ಕೆ (ಏನೂ) ಇರುವದಿಲ್ಲವಾದ್ದರಿಂದ ಈಶ್ವರನು ಈಶ್ವರನಲ್ಲದೆ ಹೋಗಬೇಕಾಗುವದು. ಸಂಸಾರವು ಯಾವ ನಿಮಿತ್ತವೂ ಇಲ್ಲದೆ ಆಗಿದೆ ಎಂದರೆ (ಅದರಿಂದ) ಬಿಡುಗಡೆಯೇ ಇಲ್ಲವೆಂದಾಗುವದು; ಶಾಸ್ತ್ರವು ವ್ಯರ್ಥವೆಂದಾಗುವದು, ಬಂಧಮೋಕ್ಷಗಳು ಇಲ್ಲವೆಂದೂ ಆಗುವದು[5]. ಆದರೆ ಈಶ್ವರನ ಪ್ರಕೃತಿಗಳು ನಿತ್ಯವೆಂ

---

1. 'ಅನಿರ್ಮೋಕ್ಷತ್ವ ....' ಎಂಬ ಅ॥ ಗು॥ ಪಾಠಗಳಿಗಿಂತ ಇದು ಮೇಲು.

2. 'ಈಶ್ವರಪ್ರಕೃತ್ಯೋಃ' ಮು॥ ವ್ಯಾ॥

3. "ವಿಕಾರಾಂಶ್ಚ ಬುದ್ಧ್ಯಾದಿದೇಹಪರ್ಯನ್ತಾನ್ ಗುಣಾಂಶ್ಚ ಸುಖದುಃಖಮೋಹಪ್ರತ್ಯಯಾಕಾರಪರಿಣತಾನ್ । ಗುಣಾಂಶ್ಚ ವಕ್ಷ್ಯಮಾಣಾನ್" ಮು॥; "... ...ಪರಿಣತಾನ್ ವಕ್ಷ್ಯಮಾಣಾನ್" ವ್ಯಾ॥

4. "ಗುಣಾಂಶ್ಚೈವ ........ ಪ್ರಕೃತಿಪರಿಣತಾನ್" ಮು॥, 'ಪ್ರಕೃತಿಪರಿಣತಾನ್' ವ್ಯಾ॥

5. ಸಂಸಾರವು ಹಿಂದೂ ಇದ್ದು ಜೀವರ ಕರ್ಮನಿಮಿತ್ತವೆಂದಾಗದೆ ಈಗ ಹೊಸದಾಗಿ ಹುಟ್ಟುವದೆಂದಾದರೆ ನಿಮಿತ್ತವನ್ನು ನಾಶಮಾಡಿ ಮೋಕ್ಷವನ್ನು ಸಂಪಾದಿಸಬಹುದೆಂಬುದು ಇಲ್ಲವಾಗುತ್ತದೆ; ನಿಮಿತ್ತನಾಶಕ್ಕಾಗಿ ಉಪಾಯವನ್ನು ಹೇಳುವ ಶಾಸ್ತ್ರವು ಬೇಕಿಲ್ಲವೆಂದಾಗುತ್ತದೆ; ಜಗತ್ತು ಇದ್ದಂತೆಯೇ ಇರಬೇಕಾಗುವದರಿಂದ ಜೀವರುಗಳು ಈಗ ಬದ್ಧರಾಗಿದ್ದು ಮುಂದೆ ಮುಕ್ತರಾಗುವರೆಂಬುದೂ ಇಲ್ಲವಾಗುವದು—ಎಂದರ್ಥ.

ದಾದರೆ[1] ಇದೆಲ್ಲವೂ ಹೊಂದುಗಡೆಯಾಗುತ್ತದೆ. ಹೇಗೆಂದರೆ: ವಿಕಾರಗಳನ್ನೂ ಮುಂದೆ ಹೇಳುವ ಗುಣಗಳನ್ನೂ-**ವಿಕಾರಗಳೆಂದರೆ** ಬುದ್ಧಿಯಿಂದ ಹಿಡಿದು ದೇಹೇಂದ್ರಿಯಗಳವರೆಗೆ (ಆಗಿರುವ ಕಾರ್ಯಗಳು), **ಗುಣಗಳು** ಎಂದರೆ ಸುಖದುಃಖಮೋಹಗಳೆಂಬ ಪ್ರತ್ಯಯಗಳ ಆಕಾರದಿಂದ ಪರಿಣಾಮವಾಗಿರುವವು. ಅವನ್ನು-ಪ್ರಕೃತಿ ಸಂಭವಗಳೆಂದು ತಿಳಿ, ಅರಿತುಕೊ. **ಪ್ರಕೃತಿ** ಎಂದರೆ ಈಶ್ವರನಿಗೆ ಇರುವ ವಿಕಾರಗಳಿಗೆ ಕಾರಣವಾಗಿರುವಂಥ ಶಕ್ತಿಯು, ಗುಣತ್ರಯರೂಪವಾದ **ಮಾಯೆ**. ಅದು ಯಾವ ವಿಕಾರಗಳಿಗೂ ಗುಣಗಳಿಗೂ ಉತ್ಪತ್ತಿ (ಕಾರಣ)ವೋ ಆ ವಿಕಾರಗಳನ್ನೂ ಗುಣಗಳನ್ನೂ ಪ್ರಕೃತಿಸಂಭವಗಳು, ಪ್ರಕೃತಿಯ ಮಾರ್ಪಾಡುಗಳು-ಎಂದು ತಿಳಿದುಕೊ.

(ಭಾಷ್ಯ)

೨೬೬. ಕೇ ಪುನಃ ತೇ ವಿಕಾರಾಃ ಗುಣಾಶ್ಚ ಪ್ರಕೃತಿಸಮ್ಭವಾಃ ?

(ಭಾಷ್ಯಾರ್ಥ)

ಪ್ರಕೃತಿಯಿಂದುಂಟಾಗುವ ಆ ವಿಕಾರಗಳು ಮತ್ತು ಗುಣಗಳು ಎಂಬವಾದರೂ ಯಾವವು ? (ಎಂದರೆ) :—

**ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦॥**

೨೦. ಪ್ರಕೃತಿಯು ಕಾರ್ಯಕರಣಗಳ ಕರ್ತೃತ್ವಕ್ಕೆ ಹೇತುವೆನಿಸಿರುವದು. ಪುರುಷನು ಸುಖದುಃಖಗಳ ಭೋಕ್ತೃತ್ವಕ್ಕೆ ಹೇತುವೆನಿಸಿರುವನು.

(ಭಾಷ್ಯ)

೨೬೭. ಕಾರ್ಯಕರಣಕರ್ತೃತ್ವೇ ಕಾರ್ಯಂ ಶರೀರಮ್, ಕರಣಾನಿ ತತ್ಸ್ಥಾನಿ ತ್ರಯೋದಶ । ದೇಹಸ್ಯ ಆರಮ್ಭಕಾಣಿ ಭೂತಾನಿ ಪಞ್ಚ[2] ವಿಷಯಾಶ್ಚ । ಪ್ರಕೃತಿಸಮ್ಭವಾಃ ವಿಕಾರಾಃ ಪೂರ್ವೋಕ್ತಾಃ ಇಹ ಕಾರ್ಯಗ್ರಹಣೇನ ಗೃಹ್ಯನ್ತೇ । ಗುಣಾಶ್ಚ ಪ್ರಕೃತಿಸಮ್ಭವಾಃ ಸುಖದುಃಖಮೋಹಾತ್ಮಕಾಃ ಕರಣಾಶ್ರಯತ್ವಾತ್ ಕರಣಗ್ರಹಣೇನ ಗೃಹ್ಯನ್ತೇ । ತೇಷಾಂ ಕಾರ್ಯಕರಣಾನಾಂ ಕರ್ತೃತ್ವಮ್ ಉತ್ಪಾದ

1. ಪ್ರಕೃತಿಯೂ ಸಂಸಾರವೂ ನಿತ್ಯವಾಗಿರುತ್ತದೆಯಾದರೂ ಅವಿದ್ಯಾಕೃತವಾದ್ದರಿಂದ ಜ್ಞಾನದಿಂದ ಬಾಧಿತವಾಗಬಹುದು.

2. ನಿ॥ದಲ್ಲಿಲ್ಲ.

ಕತ್ವಂ ಯತ್ ತತ್ ಕಾರ್ಯಕರಣಕರ್ತೃತ್ವಮ್। ತಸ್ಮಿನ್ ಕಾರ್ಯಕರಣ ಕರ್ತೃತ್ವೇ ಹೇತುಃ ಕಾರಣಮ್ ಆರಮ್ಭಕತ್ವೇನ ಪ್ರಕೃತಿಃ ಉಚ್ಯತೇ। ಏವಂ ಕಾರ್ಯಕರಣಕರ್ತೃತ್ವೇನ ಸಂಸಾರಸ್ಯ ಕಾರಣಂ ಪ್ರಕೃತಿಃ। ಕಾರ್ಯಕಾರಣ ಕರ್ತೃತ್ವೇ ಇತ್ಯಸ್ಮಿನ್ನಪಿ ಪಾಠೇ ಕಾರ್ಯಂ ಯತ್ ಯಸ್ಯ ಪರಿಣಾಮಃ[1] ತತ್ ತಸ್ಯ ಕಾರ್ಯಂ ವಿಕಾರಃ। ವಿಕಾರಿ ಕಾರಣಮ್। ತಯೋಃ ವಿಕಾರವಿಕಾರಿಣೋಃ ಕಾರ್ಯಕಾರಣಯೋಃ ಕರ್ತೃತ್ವೇ ಇತಿ[2]। ಅಥವಾ ಷೋಡಶವಿಕಾರಾಃ ಕಾರ್ಯಮ್, ಸಪ್ತ ಪ್ರಕೃತಿವಿಕೃತಯಃ ಕಾರಣಮ್। ತಾನ್ಯೇವ ಕಾರ್ಯಕಾರಣಾನಿ ಉಚ್ಯನ್ತೇ[3] ತೇಷಾಂ ಕರ್ತೃತ್ವೇ ಹೇತುಃ ಪ್ರಕೃತಿಃ ಉಚ್ಯತೇ ಆರಮ್ಭಕತ್ವೇನೈವ। ಪುರುಷಶ್ಚ ಸಂಸಾರಸ್ಯ ಕಾರಣಂ ಯಥಾ ಸ್ಯಾತ್ ತತ್ ಉಚ್ಯತೇ। ಪುರುಷಃ, ಜೀವಃ, ಕ್ಷೇತ್ರಜ್ಞಃ, ಭೋಕ್ತಾ ಇತಿ ಪರ್ಯಾಯಃ। ಸುಖದುಃಖಾನಾಂ ಭೋಗ್ಯಾನಾಂ ಭೋಕ್ತೃತ್ವೇ ಉಪಲಬ್ಧೃತ್ವೇ ಹೇತುಃ ಉಚ್ಯತೇ ॥

(ಭಾಷ್ಯಾರ್ಥ)

ಕಾರ್ಯಕರಣಕರ್ತೃತ್ವಕ್ಕೆ (ಎಂಬಲ್ಲಿ) ಕಾರ್ಯವೆಂದರೆ ಶರೀರವು, ಕರಣಗಳು ಎಂದರೆ ಅದರಲ್ಲಿರುವ ಹದಿಮೂರು[4] ದೇಹಕ್ಕೆ ಕಾರಣವಾಗಿರುವ ಭೂತಗಳು, ಐದು ವಿಷಯುಗಳು–ಪ್ರಕೃತಿಸಂಭವಗಳಾದ ವಿಕಾರಗಳು ಎಂದು ಹಿಂದೆ ಹೇಳಿತ್ತಲ್ಲ, (ಅವುಗಳನ್ನು)–ಕಾರ್ಯವೆಂಬ ಮಾತಿನಲ್ಲಿ ಸೇರಿಸಿರುತ್ತದೆ. ಪ್ರಕೃತಿಸಂಭವವಾದ ಸುಖದುಃಖಮೋಹಗಳ ರೂಪವಾಗಿರುವ ಗುಣಗಳು ಕರಣವನ್ನು ಆಶ್ರಯಿಸಿರುವದರಿಂದ ಕರಣವೆಂಬ ಮಾತಿನಲ್ಲಿ (ಅವನ್ನು) ಸೇರಿಸಿರುತ್ತದೆ. ಆ ಕಾರ್ಯಕರಣಗಳ ಕರ್ತೃತ್ವವು ಎಂದರೆ ಉಂಟುಮಾಡಿಸುವದಿದೆಯಲ್ಲ, ಅದು ಕಾರ್ಯಕರಣಕರ್ತೃತ್ವವು. ಆ ಕಾರ್ಯಕರಣಕರ್ತೃತ್ವಕ್ಕೆ (ಅವುಗಳ)ನ್ನುಂಟುಮಾಡುವದರಿಂದ ಹೇತು[5]ವೆನಿಸಿರುವದು ಕಾರಣ(ವಾಗಿರುವದು) **ಪ್ರಕೃತಿಯು.** ಈ ರೀತಿಯಲ್ಲಿ ಕಾರ್ಯಕರಣ

1. 'ವಿಪರಿಣಾಮಃ' ನಿ॥
2. 'ತಾನ್ಯೇವ ಕಾರ್ಯಕರಣಾನಿ ಉಚ್ಯನ್ತೇ" ಮು॥ದಲ್ಲಿ ಹೆಚ್ಚು.
3. ಈ ವಾಕ್ಯವು ಮು॥ ವ್ಯೈ॥ಗಳಲ್ಲಿಲ್ಲ.
4. "ದೇಹೇಂದ್ರಿಯುಗಳು, ಮನಸ್ಸು, ಬುದ್ಧಿ, ಅಹಂಕಾರ_ಇವು" ಆ॥
5. ಹೊಗೆಯು ಇರುವದೆಂಬುದು ಬೆಂಕಿಯನ್ನರಿಯುವದಕ್ಕೆ ಹೇತುವಾಗಿರುವಂತೆ ಅಲ್ಲ, ತಾನೇ ಅದಾಗಿ ಪರಿಣಮಿಸುವ ಕಾರಣವಾಗಿರುವದರಿಂದ ಹೇತು ಎಂದರ್ಥ. ಇಲ್ಲಿ ಆರಂಭಕ ಎಂದರೆ ಉಂಟುಮಾಡುವ ಕಾರಣ ಎಂದಿಷ್ಟೇ ಅರ್ಥ. ವೈಶೇಷಿಕರು ಹೇಳುವಂತೆ ಕಾರಣವೆಂದೇನೂ ಅರ್ಥವಲ್ಲ.

ಗಳನ್ನುಂಟುಮಾಡುವದರಿಂದ ಪ್ರಕೃತಿಯು ಸಂಸಾರಕ್ಕೆ ಕಾರಣವು[1]. **"ಕಾರ್ಯಕಾರಣಕರ್ತೃತ್ವೇ" ಎಂಬೀ ಪಾಠದಲ್ಲಿಯೂ** ಕಾರ್ಯ: ಯಾವದು ಯಾವದರ ಪರಿಣಾಮವೋ ಅದು ಅದರ ಕಾರ್ಯವು, ವಿಕಾರವು ; (ಹಾಗೆ) ವಿಕಾರವಾಗತಕ್ಕದ್ದೇ ಕಾರಣವು. ಕಾರ್ಯಕಾರಣಗಳ ಕರ್ತೃತ್ವಕ್ಕೆ ಎಂದರೆ ಆ ವಿಕಾರವಿಕಾರಿಗಳನ್ನುಂಟುಮಾಡುವದಕ್ಕೆ (ಹೇತುವಾಗಿರುವದು ಪ್ರಕೃತಿಯು ಎಂದರ್ಥ).[2] ಅಥವಾ ಹದಿನಾರು ವಿಕಾರಗಳು ಕಾರ್ಯವು, ಏಳು ಪ್ರಕೃತಿವಿಕೃತಿಗಳು ಕಾರಣವು[3] ; ಅವುಗಳನ್ನೇ (ಇಲ್ಲಿ) ಕಾರ್ಯಕಾರಣಗಳು ಎಂದಿದೆ. ಇವನ್ನು ಉಂಟುಮಾಡುವದಕ್ಕೆ ಪ್ರಕೃತಿಯು ಹೇತುವೆನಿಸಿರುವದು, (ಅವುಗಳನ್ನು) ಉಂಟುಮಾಡುವ (ಉಪಾದಾನವಾ)ದ್ದರಿಂದಲೇ (ಹೇತುವೆನಿಸಿರುವದು). ಪುರುಷನೂ ಸಂಸಾರಕ್ಕೆ ಹೇಗೆ ಕಾರಣನಾಗುವನೋ ಅದನ್ನು (ಈಗ ಭಗವಂತನು) ಹೇಳುತ್ತಾನೆ. ಪುರುಷನು, ಜೀವನು, ಕ್ಷೇತ್ರಜ್ಞನು, ಭೋಕ್ತೃ–ಎಂಬಿವು ಪರ್ಯಾಯಗಳು. (ಈ ಪುರುಷನು) ಸುಖದುಃಖಗಳೆಂಬ ಭೋಗ್ಯಗಳನ್ನು ಭೋಗಿಸುವದಕ್ಕೆ ಎಂದರೆ ಅರಿಯುವದಕ್ಕೆ ಹೇತುವೆನಿಸಿರುತ್ತಾನೆ.

(ಭಾಷ್ಯ)

೨೬೮. ಕಥಂ ಪುನಃ ಅನೇನ ಕಾರ್ಯಕಾರಣಕರ್ತೃತ್ವೇನ[4] ಸುಖದುಃಖಭೋಕ್ತೃತ್ವೇನ ಚ ಪ್ರಕೃತಿಪುರುಷಯೋಃ ಸಂಸಾರಕಾರಣತ್ವಮ್ ಉಚ್ಯತೇ ಇತಿ ? ಅತ್ರ ಉಚ್ಯತೇ। ಕಾರ್ಯಕರಣಸುಖದುಃಖರೂಪೇಣ ಹೇತುಫಲಾತ್ಮನಾ ಪ್ರಕೃತೇಃ ಪರಿಣಾಮಾಭಾವೇ ಪುರುಷಸ್ಯ ಚ ಚೇತನಸ್ಯ ಅಸತಿ ತದುಪಲಬ್ಧೃತ್ವೇ ಕುತ್ಯ ಸಂಸಾರಃ ಸ್ಯಾತ್ ? ಯದಾ ಪುನಃ ಕಾರ್ಯಕಾರಣಸುಖದುಃಖರೂಪೇಣ ಹೇತು

---

1. ಪ್ರಕೃತಿಯು ದೇಹೇಂದ್ರಿಯಗಳ ರೂಪದಿಂದಲೂ ವಿಷಯಗಳ ರೂಪದಿಂದಲೂ ಇಲ್ಲದಿದ್ದರೆ ಪುರುಷನಿಗೆ ಭೋಗ್ಯವಾದ ವಿಷಯವಾಗಲಿ ಭೋಗಕ್ಕೆ ಸಾಧನವಾಗಲಿ ಇರುತ್ತಿರಲಿಲ್ಲ. ಈ ಸಂಸಾರಸಾಮಗ್ರಿಯನ್ನು ಒದಗಿಸಿರುವದು ಪ್ರಕೃತಿಯ ಕೆಲಸವು–ಎಂದರ್ಥ.

2. ಮಹತ್ತು ವಿಕಾರಿ, ಅಹಂಕಾರವು ವಿಕಾರ ; ಅಹಂಕಾರವು ವಿಕಾರಿ, ತನ್ಮಾತ್ರೆಗಳು ವಿಕಾರಗಳು–ಹೀಗೆ ವಿಕಾರವಿಕಾರಿಗಳಾದ ತತ್ತ್ವವನ್ನುಂಟುಮಾಡುವದಕ್ಕೆ ಕಾರಣವಾದದ್ದು ಪ್ರಕೃತಿ ಎಂದು ಭಾವ.

3. ಮಹತ್ತು, ಅಹಂಕಾರ, ತನ್ಮಾತ್ರೆಗಳು–ಎಂಬ ಏಳು ಪ್ರಕೃತಿವಿಕೃತಿಗಳು ಕಾರಣವು ; ಅಂತಃಕರಣ, ಇಂದ್ರಿಯಗಳು ಹತ್ತು, ಶಬ್ದಾದಿಗಳು ಐದು–ಎಂಬ ಹದಿನಾರು ಕಾರ್ಯ.

4. 'ಕಾರ್ಯಕಾರಣ' ಮೈ॥

ಫಲಾತ್ಮನಾ ಪರಿಣತಯಾ ಪ್ರಕೃತ್ಯಾ ಭೋಗ್ಯಯಾ ಪುರುಷಸ್ಯ ತದ್ವಿಪರೀತಸ್ಯ, ಭೋಕ್ತೃತ್ವೇನ ಅವಿದ್ಯಾರೂಪಃ ಸಂಯೋಗಃ ಸ್ಯಾತ್ ತದಾ ಸಂಸಾರಃ ಸ್ಯಾತ್ ಇತಿ । ಅತಃ ಯತ್ ಪ್ರಕೃತಿಪುರುಷಯೋಃ ಕಾರ್ಯಕರಣಕರ್ತೃತ್ವೇನ ಸುಖ ದುಃಖಭೋಕ್ತೃತ್ವೇನ ಚ ಸಂಸಾರಕಾರಣತ್ವಮ್ ಉಕ್ತಮ್, ತದ್ ಯುಕ್ತಮ್ । ಕಃ ಪುನಃ ಅಯಂ ಸಂಸಾರೋ ನಾಮ ? ಸುಖದುಃಖಸಂಭೋಗಃ ಸಂಸಾರಃ । ಪುರುಷಸ್ಯ ಚ ಸುಖದುಃಖಾನಾಂ ಸಂಭೋಕ್ತೃತ್ವಂ ಸಂಸಾರಿತ್ವಮ್ ಇತಿ [1] ॥

(ಭಾಷ್ಯಾರ್ಥ)

(ಪ್ರಶ್ನೆ): (ಹೀಗೆ) ಕಾರ್ಯಕರಣಗಳನ್ನುಂಟುಮಾಡುವದು, ಮತ್ತು ಸುಖದುಃಖಗಳನ್ನು ಅನುಭವಿಸುವದು-ಇದರಿಂದ ಪ್ರಕೃತಿಪುರುಷರು ಸಂಸಾರಕ್ಕೆ ಕಾರಣ(ವಾಗಿರುವ)ರೆಂದು ಹೇಳಿದ್ದು ಹೇಗೆ?

(ಉತ್ತರ):—ಇದಕ್ಕೆ ಹೇಳುತ್ತೇವೆ. ಕಾರ್ಯಕರಣಗಳ ಮತ್ತು ಸುಖದುಃಖಗಳ ರೂಪದಿಂದ ಹೇತುಫಲಗಳಾಗಿ [2] ಪ್ರಕೃತಿಯು ಪರಿಣಾಮವಾಗದೆ, ಚೇತನನಾದ ಪುರುಷನಿಗೆ ಅದರ ಅನುಭವಿಸುವಿಕೆಯೂ ಇಲ್ಲದಿದ್ದರೆ ಸಂಸಾರವು ಹೇಗೆ ಆದೀತು ? ಆದರೆ ಯಾವಾಗ ಕಾರ್ಯಕಾರಣಸುಖದುಃಖಗಳ ರೂಪದಿಂದ ಹೇತುಫಲಗಳಾಗಿ ಪರಿಣಾಮವಾದ ಭೋಗ್ಯವಾದ ಪ್ರಕೃತಿಯೊಡನೆ ಅದಕ್ಕೆ ವಿರುದ್ಧ (ಸ್ವರೂಪನಾದ) ಪುರುಷನಿಗೆ ಭೋಕ್ತೃರೂಪ(ವನ್ನು ಹೊಂದುವ ಅವಿದ್ಯಾರೂಪವಾದ ಸಂಯೋಗವಾಗುವದೋ ಆಗ ಸಂಸಾರವು ಆದೀತು[3]. ಆದ್ದರಿಂದ ಕಾರ್ಯಕರಣಗಳ ಕರ್ತೃರೂಪದಿಂದಲೂ ಸುಖದುಃಖಗಳ ಭೋಕ್ತೃರೂಪದಿಂದಲೂ ಪ್ರಕೃತಿಪುರುಷರು ಸಂಸಾರಕ್ಕೆ ಕಾರಣರಾಗಿರುವರೆಂದು ಹೇಳಿತಲ್ಲ, ಅದು ಸರಿಯೇ.

(ಪ್ರಶ್ನೆ):—ಈ ಸಂಸಾರವೆಂಬುದಾದರೂ ಯಾವದು ?

(ಉತ್ತರ):—ಸುಖದುಃಖಗಳನ್ನು ಅನುಭವಿಸುವದೆಂಬುದೇ ಸಂಸಾರವು; ಪುರುಷನು ಸುಖದುಃಖಗಳನ್ನು ಅನುಭವಿಸುತ್ತಿರುವದೇ (ಅವನ) ಸಂಸಾರಿತ್ವವು.

---

1. 'ಉಕ್ತಮ್' ಎಂದು ಹೆಚ್ಚಾಗಿ ಪಾ॥

2. ಧರ್ಮಾಧರ್ಮಗಳೆಂಬ ಹೇತು, ಶರೀರವೆಂಬ ಫಲ-ಇವುಗಳ ರೂಪದಿಂದ ಪ್ರಕೃತಿಯು ಪರಿಣಮಿಸುತ್ತದೆ: ಪುರುಷನಿಗೆ ಇದರ ಅಭಿಮಾನವುಂಟಾಗಿರುವದರಿಂದ ಸಂಸಾರವಾಗುತ್ತದೆ.

3 ಪ್ರಕೃತಿಪುರುಷರ ಅವಿವೇಕದಿಂದ ಸಂಸಾರವಾಗುವದೆಂಬುದು ಸಾಂಖ್ಯರಿಗೂ ಸಮ್ಮತ; ಆದರೆ ಪ್ರಕೃತಿಯೂ ಅವಿದ್ಯಕವೆಂಬುದು ವೇದಾಂತಿಗಳ ಮತ.

## ಸಂಸಾರಕ್ಕೆ ಕಾರಣ

(ಭಾಷ್ಯ)

೨೬೯. ಯತ್ ಪುರುಷಸ್ಯ ಸುಖದುಃಖಾನಾಂ ಭೋಕ್ತೃತ್ವಂ ಸಂಸಾರಿತ್ವಮ್ ಇತ್ಯುಕ್ತಮ್, ತಸ್ಯ ತತ್ ಕಿಂನಿಮಿತ್ತಮ್ ಇತಿ ? ಉಚ್ಯತೇ

(ಭಾಷ್ಯಾರ್ಥ)

ಸುಖದುಃಖಗಳನ್ನು ಅನುಭವಿಸುವದೆಂಬುದೇ ಪುರುಷನ ಸಂಸಾರವು ಎಂದು ಹೇಳಿದೆಯಷ್ಟೆ, ಅವನಿಗೆ ಆ (ಸಂಸಾರಿತ್ವವು) ಯಾವ ನಿಮಿತ್ತ(ದಿಂದ ಆದದ್ದು) ?– ಎಂದರೆ (ಭಗವಂತನು) ಹೇಳುತ್ತಾನೆ:—

**ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು ॥೨೧॥**

೨೧. ಪುರುಷನು ಪ್ರಕೃತಿಸ್ಥನಾಗಿಯೇ ಪ್ರಕೃತಿಯಿಂದಾಗಿರುವ ಗುಣಗಳನ್ನು ಭೋಗಿಸುತ್ತಿರುವನು. ಗುಣಸಂಗವೇ ಇವನಿಗೆ ಸದಸದ್ಯೋನಿಗಳಲ್ಲಿ ಹುಟ್ಟುವದಕ್ಕೆ ಕಾರಣವು.

(ಭಾಷ್ಯ)

೨೭೦. ಪುರುಷಃ ಭೋಕ್ತಾ ಪ್ರಕೃತಿಸ್ಥಃ ಪ್ರಕೃತೌ ಅವಿದ್ಯಾಲಕ್ಷಣಾಯಾಂ ಕಾರ್ಯಕರಣರೂಪೇಣ ಪರಿಣತಾಯಾಂ[1] ಸ್ಥಿತಃ ಪ್ರಕೃತಿಸ್ಥಃ ಪ್ರಕೃತಿಮ್ ಆತ್ಮತ್ವೇನ ಗತಃ ಇತ್ಯೇತತ್ । ಹಿ ಯಸ್ಮಾತ್ ತಸ್ಮಾತ್ ಭುಙ್ಕ್ತೇ ಉಪಲಭತೇ ಇತ್ಯರ್ಥಃ । ಪ್ರಕೃತಿಜಾನ್ ಪ್ರಕೃತಿತೋ ಜಾತಾನ್ ಸುಖದುಃಖಮೋಹಾಕಾರಾಭಿವ್ಯಕ್ತಾನ್ ಗುಣಾನ್ ಸುಖೀ ದುಃಖೀ ಮೂಢಃ[2] ಅಹಮ್ ಇತ್ಯೇವಮ್ । ಸತ್ಯಾಮಪಿ ಅವಿದ್ಯಾಯಾಂ ಸುಖದುಃಖಮೋಹೇಷು ಗುಣೇಷು ಭುಜ್ಯಮಾನೇಷು ಯಃ ಸಙ್ಗಃ ಆತ್ಮಭಾವಃ[3] ಸ ಪ್ರಧಾನಂ ಕಾರಣಂ ಜನ್ಮನಃ[4] । "ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ" (ಬೃ. ೪-೪-೫) ಇತ್ಯಾದಿಶ್ರುತೇಃ । ತದೇತತ್

---

1. ಈ ಎರಡು ಮಾತುಗಳು ಮು॥ ಮೈ॥ಗಳಲ್ಲಿಲ್ಲ.
2. 'ಪಣ್ಡಿತಃ' ಎಂದು ಅಚ್ಚಿನ ಪುಸ್ತಕಗಳಲ್ಲಿರುವದು ಹೆಚ್ಚು.
3. ಅಚ್ಚಿನ ಪುಸ್ತಕಗಳಲ್ಲಿರುವ 'ಸಂಸಾರಸ್ಯ' ಎಂಬ ಮಾತು ಇಲ್ಲಿ ಬೇಕಿಲ್ಲ.
4. 'ಅಸ್ಯ ಪುರುಷಸ್ಯ ಜನ್ಮನಃ' ಮು॥ ಮೈ॥

ಆಹ-ಕಾರಣಂ ಹೇತುಃ ಗುಣಸಙ್ಗಃ ಗುಣೇಷು ಸಙ್ಗಃ ಅಸ್ಯ ಪುರುಷಸ್ಯ ಭೋಕ್ತುಃ ಸದಸದ್ಯೋನಿಜನ್ಮಸು । ಸತ್ಯಶ್ಚ ಅಸತ್ಯಶ್ಚ ಯೋನಯಃ [1] । ತಾಸು ಸದಸದ್ಯೋನಿಷು ಜನ್ಮಾನಿ ಸದಸದ್ಯೋನಿಜನ್ಮಾನಿ । ತೇಷು ಸದಸದ್ಯೋನಿಜನ್ಮಸು ವಿಷಯಭೂತೇಷು ಕಾರಣಂ ಗುಣಸಙ್ಗಃ । ಅಥವಾ ಸದಸದ್ಯೋನಿಜನ್ಮಸು ಅಸ್ಯ ಸಂಸಾರಸ್ಯ ಕಾರಣಂ ಗುಣಸಙ್ಗಃ । ಇತಿ ಸಂಸಾರಪದಮ್ ಅಧ್ಯಾಹಾರ್ಯಮ್ [2] । ಸದ್ಯೋನಯಃ ದೇವಾದಿಯೋನಯಃ । ಅಸದ್ಯೋನಯಃ ಪಶ್ವಾದಿಯೋನಯಃ । ಸಾಮರ್ಥ್ಯಾತ್ ಸದಸದ್ಯೋನಯಃ ಮನುಷ್ಯಯೋನಯೋಽಪಿ ಅವಿರುದ್ಧಾಃ ದ್ರಷ್ಟವ್ಯಾಃ ॥

(ಭಾಷ್ಯಾರ್ಥ)

ಪುರುಷನು, ಭೋಕ್ತನು, ಪ್ರಕೃತಿಸ್ಥನಾಗಿಯೇ- **ಅವಿದ್ಯಾಕಲ್ಪಿತನಾದ ಕಾರ್ಯಕರಣಗಳ ರೂಪದಿಂದ ಪರಿಣಾಮವಾಗಿರುವ ಪ್ರಕೃತಿಯಲ್ಲಿದ್ದುಕೊಂಡೇ, ಪ್ರಕೃತಿಯೇ ತಾನೆಂದು ಭಾವಿಸಿಕೊಂಡೇ ಎಂದರ್ಥ**-(ಇರುವ)ನಲ್ಲ, ಆ ಕಾರಣದಿಂದ ಪ್ರಕೃತಿಜವಾಗಿರುವ, ಪ್ರಕೃತಿಯಿಂದುಂಟಾಗಿರುವ, ಸುಖದುಃಖಮೋಹಗಳ ಆಕಾರದಿಂದ ತೋರಿಕೊಳ್ಳುತ್ತಿರುವ ಗುಣಗಳನ್ನು "ನಾನು ಸುಖಿಯು, ದುಃಖಿಯು, ಮೂಢನು" ಎಂದೀ ಪರಿಯಲ್ಲಿ ಭೋಗಿಸುತ್ತಿರುವನು, ಅರಿತುಕೊಳ್ಳುತ್ತಿರುವನು ಎಂದರ್ಥ.

ಅವಿದ್ಯೆಯೂ ಇದ್ದರೂ [3] **ಸುಖದುಃಖಮೋಹಗಳೆಂಬ ಗುಣಗಳನ್ನು ಭೋಗಿಸುವಾಗ ಸಂಗವು, ತಾನೇ (ಅವು ಎಂಬ) ಭಾವವು, ಇರುವದಲ್ಲ, ಅದೇ ಜನ್ಮಕ್ಕೆ ಮುಖ್ಯ ಕಾರಣವು.** "ಅವನು ಎಂಥ ಕಾಮವುಳ್ಳವನಾಗಿರುವನೋ ಅಂಥ ಕ್ರತುವುಳ್ಳವನಾಗಿರುವನು" (ಬೃ. ೪-೪-೫) ಮುಂತಾಗಿರುವ ಶ್ರುತಿಯು ಇದಕ್ಕೆ ಪ್ರಮಾಣವು. ಆ ಇದನ್ನೇ (ಭಗವಂತನು) ಹೇಳುತ್ತಾನೆ. ಗುಣಸಂಗವು, ಗುಣಗಳಲ್ಲಿ ಸಂಗವು ಈ ಭೋಕ್ತೃವಾದ ಪುರುಷನಿಗೆ ಸದಸದ್ಯೋನಿಜನ್ಮಗಳೆಂಬ ವಿಷಯದಲ್ಲಿ ಕಾರಣವು, ಹೇತು. (ಸದಸದ್ಯೋನಿಜನ್ಮಗಳು ಎಂಬಲ್ಲಿ) ಒಳ್ಳೆಯ ಮತ್ತು ಕೆಟ್ಟ ಯೋನಿಗಳು ಸದಸದ್ಯೋನಿಗಳು ; ಆ ಸದಸದ್ಯೋನಿಗಳಲ್ಲಿ ಹುಟ್ಟು

1. ‘ ಸಚ್ಚ ಅಸಚ್ಚ ಸದಸತೀ ತಯೋರ್ಯೋನಯಃ ’ ಮ॥ ವ್ಯ ॥

2. ‘ ಸದಸದ್ಯೋನಿಜನ್ಮಸು ಗುಣಸಙ್ಗಃ ಅಸ್ಯ ಸಂಸಾರಸ್ಯ ಕಾರಣಮ್ ಇತ್ಯರ್ಥಃ ’ ಎಂದು ಹೆಚ್ಚಾಗಿ ಮ॥ ವ್ಯ॥

3. ಅವಿದ್ಯೆಗಿಂತ ಕಾಮವೇ ಮುಖ್ಯ ಪ್ರವರ್ತಕವು. ಸೂ. ಭಾ. ೨-೧-೩೬, ಬೃ. ಭಾ. ೧-೫-೧೭.

ಗಳು (ಆಗುವದೇ) ಸದಸದ್ಯೋನಿಜನ್ಮಗಳು, ಅಂಥ ಸದಸದ್ಯೋನಿಜನ್ಮಗಳೆಂಬ ವಿಷಯದಲ್ಲಿ ಗುಣಸಂಗವು ಕಾರಣವು. ಅಥವಾ ಸದಸದ್ಯೋನಿಜನ್ಮಗಳಲ್ಲಿ ಇವನು ಸಂಸಾರಮಾಡುವದಕ್ಕೆ ಕಾರಣವು ಗುಣಸಂಗವು-ಎಂದು ಸಂಸಾರವೆಂಬ ಮಾತನ್ನು ಅಧ್ಯಾಹಾರಮಾಡಿಕೊಂಡು (ಅರ್ಥಮಾಡಬೇಕು [1]). ಒಳ್ಳೆಯ ಯೋನಿಗಳೆಂದರೆ ದೇವತೆಗಳೇ ಮುಂತಾದ ಯೋನಿಗಳು ; ಕೆಟ್ಟ ಯೋನಿಗಳೆಂದರೆ ಪಶುಗಳೇ ಮುಂತಾದವುಗಳ ಯೋನಿಗಳು ; (ಶಬ್ದಾರ್ಥಕ್ಕೆ) ವಿರುದ್ಧವಲ್ಲದ ಸದಸದ್ಯೋನಿಗಳು (ಒಳ್ಳೆಯದೂ ಕೆಟ್ಟದೂ ಮಿಶ್ರವಾದ) ಮನುಷ್ಯಯೋನಿಗಳನ್ನೂ [2] (ಯುಕ್ತಿ) ಸಾಮರ್ಥ್ಯದಿಂದ ಗ್ರಹಿಸಬೇಕು.

(ಭಾಷ್ಯ)

೨೭೧. ಏತತ್ ಉಕ್ತಂ ಭವತಿ–ಪ್ರಕೃತಿಸ್ಥತ್ವಾಖ್ಯಾ ಅವಿದ್ಯಾ, ಗುಣೇಷು ಚ ಸಙ್ಗಃ ಕಾಮಃ ಸಂಸಾರಸ್ಯ ಕಾರಣಮ್ ಇತಿ । ತಚ್ಚ ಪರಿವರ್ಜನಾಯ ಉಚ್ಯತೇ । ಅಸ್ಯ ಚ ನಿವೃತ್ತಿಕಾರಣಂ ಜ್ಞಾನಂ ಸವೈರಾಗ್ಯಸಂನ್ಯಾಸಂ [3] ಗೀತಾ ಶಾಸ್ತ್ರೇ ಪ್ರಸಿದ್ಧಮ್ ತಚ್ಚ ಜ್ಞಾನಂ ಪುರಸ್ತಾತ್ ಉಪನ್ಯಸ್ತಂ ಕ್ಷೇತ್ರಕ್ಷೇತ್ರಜ್ಞ ವಿಷಯಮ್ "ಯಜ್ಜ್ಞಾತ್ವಾಮೃತಮಶ್ನುತೇ" (೧೩-೧೨) ಇತಿ । ಉಕ್ತಂ ಚ ಅನ್ಯಾಪೋಹೇನ ಅತದ್ಧರ್ಮಾಧ್ಯಾರೋಪೇಣ ಚ ॥

(ಭಾಷ್ಯಾರ್ಥ)

ಅಂತೂ (ಇಷ್ಟನ್ನು) ಹೇಳಿದಂತಾಯಿತು : ಪ್ರಕೃತಿಯಲ್ಲಿರುವದೆಂಬ ಅವಿದ್ಯೆಯೂ ಗುಣಗಳಲ್ಲಿರುವ ಸಂಗವೆಂಬ ಕಾಮವೂ ಸಂಸಾರಕ್ಕೆ ಕಾರಣವು. ಈ

---

1. ಮ|| ಮೈ||ಗಳಲ್ಲಿ ಹೆಚ್ಚಾಗಿರುವ ವಾಕ್ಯಕ್ಕೆ "ಸದಸದ್ಯೋನಿಜನ್ಮಗಳಲ್ಲಿರುವ ಗುಣಸಂಗವೇ ಇವನು ಸಂಸಾರದಲ್ಲಿ ತೊಳಲುವದಕ್ಕೆ ಕಾರಣವು" ಎಂದು ಅರ್ಥ ಈ ವಾಕ್ಯವನ್ನು ಭಾಷ್ಯಕಾರರು ಬರೆದಿರಲಾರರೆಂದೇ ತೋರುತ್ತದೆ; ಏಕೆಂದರೆ ಸಂಸಾರಪದಾಧ್ಯಾಹಾರದಿಂದಾದ ಅರ್ಥವಿಶೇಷವನ್ನು ಅವರೇ ಬೇರೊಂದು ರೀತಿಯಿಂದ ಮುಂದೆ ತಿಳಿಸಿರುತ್ತಾರೆ.

2. ಪಾಪದಿಂದ ನೀಚಯೋನಿಗಳೂ ಪುಣ್ಯದಿಂದ ಉತ್ತಮಯೋನಿಗಳೂ ಪಾಪ ಪುಣ್ಯಗಳ ಸಮವಾದ ಬೆರಕೆಯಿಂದ ಮನುಷ್ಯತ್ವವೂ ದೊರಕುವವೆಂದು ಸ್ಮೃತಿಯಿದೆ. ಪ್ರಕೃತಿಪುರುಷವಿವೇಕವಿಲ್ಲದವರಿಗೇ ಈ ಎಲ್ಲಾ ಸಂಸಾರವೂ ಅವಿದ್ಯೆಯ ಫಲವಾಗಿ ಆಗುವದು ಎಂದರ್ಥ.

3. 'ಜ್ಞಾನವೈರಾಗ್ಯೇ ಸಸಂನ್ಯಾಸೇ' ಅ|| ವಾ|| ಗು|| 'ಜ್ಞಾನಂ ವೈರಾಗ್ಯೇ ಸಸಂನ್ಯಾಸವತ್' ಸಿ||; ಜ್ಞಾನಂ ಸವೈರಾಗ್ಯಸಂನ್ಯಾಸೇ' ಮ|| ಎಂಬ ಪಾಠಗಳನ್ನು ಟೀಕೆಗೆ ಅನುಸಾರವಾಗಿ ತಿದ್ದಿಕೊಂಡಿದೆ.

(ಕಾರಣವನ್ನು) ಬಿಡುವದಕ್ಕಾಗಿ ಹೇಳಿರುತ್ತದೆ. ಇದನ್ನು ತೊಲಗಿಸುವದಕ್ಕೆ ವೈರಾಗ್ಯ ಸಂನ್ಯಾಸಗಳಿಂದೊಡಗೂಡಿದ[1] ಜ್ಞಾನವೆಂದೂ ಗೀತಾಶಾಸ್ತ್ರದಲ್ಲಿ ಪ್ರಸಿದ್ಧವಾಗಿರುತ್ತದೆ. ಮತ್ತು ಕ್ಷೇತ್ರಕ್ಷೇತ್ರಜ್ಞರ ವಿಷಯವಾದ ಆ ಜ್ಞಾನವನ್ನು "ಅದನ್ನು ಅರಿತುಕೊಂಡರೆ ಅಮೃತವನ್ನು ಹೊಂದುತ್ತಾನೆ" (೧೩-೧೨) ಎಂದು ಮೊದಲೇ ಹೇಳಿರುತ್ತದೆ. ಮಿಕ್ಕದ್ದನ್ನು ಅಲ್ಲಗಳೆಯುವ ಮೂಲಕವೂ ಅದರದಲ್ಲದ ಧರ್ಮಗಳನ್ನು ಆರೋಪಿಸುವದರ ಮೂಲಕವೂ ಹೇಳಿದ್ದಾಗಿದೆ.

## ಸಂಸಾರವನ್ನು ತೊಲಗಿಸುವ ಜ್ಞಾನ

(ಭಾಷ್ಯ)

೨೭೨. ತಸ್ಯೈವ ಪುನಃ ಸಾಕ್ಷಾತ್ ನಿರ್ದೇಶಃ ಕ್ರಿಯತೇ—

(ಭಾಷ್ಯಾರ್ಥ)

ಅದನ್ನೇ (ಈಗ) ಮತ್ತೆ ನೇರಾಗಿ ತಿಳಿಸಲಾಗುತ್ತದೆ:—

**ಉಪದ್ರಷ್ಟಾನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥೨೨॥**

೨೨. ಈ ದೇಹದಲ್ಲಿರುವ ಪರ ಪುರುಷನು ಉಪದ್ರಷ್ಟನು, ಅನುಮಂತನು, ಭರ್ತನು, ಭೋಕ್ತನು, ಮಹೇಶ್ವರನು, ಮತ್ತು ಪರಮಾತ್ಮನು–ಎಂದು ಉಕ್ತನಾಗಿರುತ್ತಾನೆ.

(ಭಾಷ್ಯ)

೨೭೩. ಉಪದ್ರಷ್ಟಾ ಸಮೀಪಸ್ಥಃ ಸನ್ ದ್ರಷ್ಟಾ ಸ್ವಯಮ್ ಅವ್ಯಾಪೃತಃ । ಯಥಾ ಋತ್ವಿಗ್ಯಜಮಾನೇಷು ಯಜ್ಞಕರ್ಮವ್ಯಾಪೃತೇಷು ತಟಸ್ಥಃ ಅನ್ಯಃ ಅವ್ಯಾಪೃತಃ ಯಜ್ಞವಿದ್ಯಾಕುಶಲಃ ಋತ್ವಿಗ್ಯಜಮಾನವ್ಯಾಪಾರಗುಣದೋಷಾಣಾಮ್ ಈಕ್ಷಿತಾ, ತದ್ವತ್ ಕಾರ್ಯಕರಣವ್ಯಾಪಾರೇಷು ಅವ್ಯಾಪೃತಃ ಅನ್ಯಃ ತದ್ವಿಲಕ್ಷಣಃ[2] ತೇಷಾಂ ಕಾರ್ಯಕರಣಾನಾಂ ಸವ್ಯಾಪಾರಾಣಾಂ ಸಾಮೀಪ್ಯೇನ ದ್ರಷ್ಟಾ ಉಪದ್ರಷ್ಟಾ । ಅಥವಾ ದೇಹಚಕ್ಷುರ್ಮನೋಬುದ್ಧ್ಯಾತ್ಮಾನಃ ದ್ರಷ್ಟಾರಃ । ತೇಷಾಂ ಬಾಹ್ಯೋ ದ್ರಷ್ಟಾ ದೇಹಃ । ತತ ಆರಭ್ಯ ಅನ್ತರತಮಶ್ಚ ಪ್ರತ್ಯಕ್ ಸಮೀಪೇ ಆತ್ಮಾ ದ್ರಷ್ಟಾ ।

---

1. ವೈರಾಗ್ಯದಿಂದ ಸರ್ವಕರ್ಮಸಂನ್ಯಾಸವನ್ನು ಮಾಡಿ ಪಡೆದುಕೊಂಡ.
2. 'ಅನ್ಯೋ ವಿಲಕ್ಷಣಃ' ಎ॥ ವಾ॥

ಯತಃ ಪರಃ ಅನ್ತರತಮಃ[1] ನಾಸ್ತಿ ದ್ರಷ್ಟಾ ಸಃ ಅತಿಶಯಸಾಮೀಪ್ಯೇನ ದ್ರಷ್ಟೃತ್ವಾತ್ ಉಪದ್ರಷ್ಟಾ ಸ್ಯಾತ್ । ಯಜ್ಞೋಪದ್ರಷ್ಟೃವದ್ ವಾ ಸರ್ವವಿಷಯೀಕರಣಾತ್ ಉಪದ್ರಷ್ಟಾ ! ಅನುಮನ್ತಾ ಚ । ಅನುಮೋದನಮ್ ಅನುಮನನಂ ಕುರ್ವತ್ಸು ತತ್ಕ್ರಿಯಾಸು ಪರಿತೋಷಃ ತತ್ಕರ್ತಾ ಅನುಮನ್ತಾ ಚ । ಅಥ ವಾ ಅನುಮನ್ತಾ ಕಾರ್ಯಕರಣಪ್ರವೃತ್ತಿಷು ಸ್ವಯಮ್ ಅಪ್ರವೃತ್ತೋಽಪಿ ಪ್ರವೃತ್ತ ಇವ ತದನುಕೂಲೋ ವಿಭಾವ್ಯತೇ ತೇನ ಅನುಮನ್ತಾ । ಅಥ ವಾ ಪ್ರವೃತ್ತಾನ್ ಸ್ವವ್ಯಾಪಾರೇಷು ತತ್ಸಾಕ್ಷಿಭೂತಃ ಕದಾಚಿದಪಿ ನ ನಿವಾರಯತಿ ಇತಿ ಅನುಮನ್ತಾ । ಭರ್ತಾ । ಭರಣಂ ನಾಮ ದೇಹೇನ್ದ್ರಿಯಮನೋಬುದ್ಧೀನಾಂ ಸಂಹತಾನಾಂ ಚೈತನ್ಯಾತ್ಮಪಾರಾರ್ಥ್ಯೇನ[2] ನಿಮಿತ್ತಭೂತೇನ ಚೈತನ್ಯಾಭಾಸಾನಾಂ ಯತ್ ಸ್ವರೂಪಧಾರಣಂ ತತ್ ಚೈತನ್ಯಾತ್ಮಕೃತಮೇವ ಇತಿ ಭರ್ತಾ ಆತ್ಮಾ ಉಚ್ಯತೇ[3] । ಭೋಕ್ತಾ ಅಗ್ನ್ಯುಷ್ಣವತ್ ನಿತ್ಯಚೈತನ್ಯಸ್ವರೂಪೇಣ ಬುದ್ಧೇಃ ಸುಖದುಃಖಮೋಹಾತ್ಮಕಾಃ ಪ್ರತ್ಯಯಾಃ ಸರ್ವವಿಷಯವಿಷಯಾಃ ಚೈತನ್ಯಾತ್ಮಗ್ರಸ್ತಾ ಇವ ಜಾಯಮಾನಾ ವಿಭಕ್ತಾ ವಿಭಾವ್ಯನ್ತೇ ಇತಿ ಭೋಕ್ತಾ ಆತ್ಮಾ ಉಚ್ಯತೇ । ಮಹೇಶ್ವರಃ । ಸರ್ವಾತ್ಮತ್ವಾತ್ ಸ್ವತನ್ತ್ರತ್ವಾಚ್ಚ ಮಹಾನ್ ಈಶ್ವರಶ್ಚ[4] ಇತಿ ಮಹೇಶ್ವರಃ । ಪರಮಾತ್ಮಾ । ದೇಹಾದೀನಾಂ ಬುದ್ಧ್ಯನ್ತಾನಾಂ[5] ಪ್ರತ್ಯಗಾತ್ಮತ್ವೇನ ಕಲ್ಪಿತಾನಾಮ್ ಅವಿದ್ಯಯಾ ಪರಮಃ ಉಪದ್ರಷ್ಟೃತ್ವಾದಿಲಕ್ಷಣಃ ಆತ್ಮಾ ಇತಿ ಪರಮಾತ್ಮಾ ಸಃ । ಅತಃ[6] ಪರಮಾತ್ಮಾ ಇತ್ಯನೇನ ಶಬ್ದೇನ ಚಾಪಿ ಉಕ್ತಃ ಕಥಿತಃ ಶ್ರುತೌ । ಕ್ವಾಸೌ ? ಅಸ್ಮಿನ್ ದೇಹೇ[7] ಪುರುಷಃ ಪರಃ ಅವ್ಯಕ್ತಾತ್ । "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ" (೧೫-೧೭) ಇತಿ ಯಃ ವಕ್ಷ್ಯಮಾಣಃ, "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ" (೧೩-೨) ಇತಿ ಉಪನ್ಯಸ್ತಃ, ವ್ಯಾಖ್ಯಾಯ ಉಪಸಂಹೃತಶ್ಚ ॥

---

1. 'ಅನ್ತರಃ' ಎಂದಿಷ್ಟೇ ನಿ॥
2. 'ಚೈತನ್ಯಾತ್ಮನಾ ಪಾರಮಾರ್ಥ್ಯೇನ' ಮ॥ ಗು॥
3. 'ಇತ್ಯುಚ್ಯತೇ' ಮ॥ ಗು॥ ವಾ॥
4. 'ಮಹಾಂಶ್ಚ ಅಸೌ ಈಶ್ವರಶ್ಚ ಇತಿ' ಮ॥ ಮೈ॥ ಗು॥
5. 'ದೇಹಾದೀನಾಮವ್ಯಕ್ತಾನ್ತಾನಾಂ' ಮ॥ ಮೈ॥ ಗು॥
6. 'ಅನ್ತಃ' ನಿ॥ ಗು॥
7. 'ದೇಹೇ ಅಸ್ಮಿನ್' ಎಂದು ಮ॥ ದಲ್ಲಿ ಮಾತ್ರ ಇದೆ; ಆದು ಮೂಲದ ಆನುಪೂರ್ವಿಯನ್ನು ಅನುಸರಿಸಿದೆಯಾದ್ದರಿಂದ ಭಾಷ್ಯಾನುಗುಣವೆಂದೂ ಎಣಿಸಬಹುದು.

(ಭಾಷ್ಯಾರ್ಥ)

**ಉಪದ್ರಷ್ಟನು:** ತಾನು ಯಾವ ಕೆಲಸವನ್ನೂ ಮಾಡದೆ ಹತ್ತಿರದಲ್ಲಿದ್ದು ಕೊಂಡು ನೋಡುತ್ತಿರುವವನು. ಹೇಗೆ ಋತ್ವಿಜರೂ [1] ಯಜಮಾನನೂ ಯಜ್ಞ ಕರ್ಮದಲ್ಲಿ ತೊಡಗಿರುವಲ್ಲಿ ಯಜ್ಞವಿದ್ಯೆಯಲ್ಲಿ ನಿಪುಣನಾದ ಮತ್ತೊಬ್ಬನು ಹೊರ ಚ್ಚಾಗಿದ್ದು (ತಾನು ಕರ್ಮದಲ್ಲಿ) ತೊಡಗದೆ ಋತ್ವಿಜರ ಮತ್ತು ಯಜಮಾನನ ಕರ್ಮಗಳ ಗುಣದೋಷಗಳನ್ನು ನೋಡುತ್ತಿರುವನೋ ಆದರಂತೆ **ಕಾರ್ಯಕರಣ ಗಳ ವ್ಯಾಪಾರಗಳಲ್ಲಿ ತೊಡಗದೆ** ಇರುವ **ಅವುಗಳಿಗಿಂತ ಬೇರೆಯ ಸ್ವಭಾವ ದವನಾದ ಮತ್ತೊಬ್ಬನಾಗಿ ಆ ಕೆಲಸಮಾಡುತ್ತಿರುವ ಕಾರ್ಯಕರಣಗಳನ್ನು ಹತ್ತಿರವಿದ್ದು ನೋಡುವವನಾದ್ದರಿಂದ** ಉಪದ್ರಷ್ಟನು.[2] ಅಥವಾ ದೇಹ, ಚಕ್ಷುರಿಂದ್ರಿಯ, ಮನಸ್ಸು, ಬುದ್ಧಿ–ಎಂಬ ಆತ್ಮರು [3] ದ್ರಷ್ಟರಾಗಿರುತ್ತಾರೆ; ಅವರಲ್ಲಿ ಹೊರಗಿನ ದ್ರಷ್ಟನು ದೇಹವು [4]; ಅಲ್ಲಿಂದ ಮೊದಲಾಗಿ (ಒಳಗೊಳಗೆ ಇರುವವರಲ್ಲಿ) ತೀರ ಒಳಗೆ ಇರುವವನಾದ್ದರಿಂದ ಪ್ರತ್ಯಗಾತ್ಮನು ಹತ್ತಿರ ನೋಡುವವನು; **ಯಾವನಿಗಿಂತ ಬೇರೆ ಇನ್ನೂ ಒಳಗೆ ಇರುವ ದ್ರಷ್ಟನು ಇಲ್ಲವೋ ಆ (ಪ್ರತ್ಯ ಗಾತ್ಮನು)** ಬಹಳ **ಹತ್ತಿರವಿದ್ದು ನೋಡುವವನಾದ್ದರಿಂದ ಉಪದ್ರಷ್ಟನೆನಿಸು ವನು.**[5] ಅಥವಾ ಯಜ್ಞದಲ್ಲಿರುವ ಉಪದ್ರಷ್ಟನಂತೆ ಎಲ್ಲವನ್ನೂ ವಿಷಯೀಕರಿಸಿರು ವದರಿಂದ ಉಪದ್ರಷ್ಟನು (ಎಂದಾದರೂ ಅರ್ಥವನ್ನು ಮಾಡಬಹುದು).[6]

---

1. ಯಾಗಮಾಡುವವನು ಯಜಮಾನನು: ಯಜ್ಞದಲ್ಲಿ ಸಹಾಯಮಾಡುವದ ಕ್ಕೆಂದು ಅವನು ಆರಿಸಿಕೊಂಡಿರುವ ಬ್ರಾಹ್ಮಣರು ಋತ್ವಿಜರು.

2. ಕಾರ್ಯಕರಣಗಳಲ್ಲಿ ಸೇರದೆ ಅವುಗಳನ್ನು ನೋಡುತ್ತಿರುವ ಸಾಕ್ಷಿ.

3. ಬುದ್ಧಿ, ಆತ್ಮರು—ಎಂದೂ ಕನ್ನಡಿಸಬಹುದು; ಆಗ ಆತ್ಮರು ಎಂದರೆ ಪ್ರಮಾತೃ ಗಳು ಎಂದರೆ ಇವರನ್ನು ಆತ್ಮರು ಎಂದು ಕಲ್ಪಿಸುವರಾದ್ದರಿಂದ ದೇಹಾದಿಗಳನ್ನು ಆತ್ಮ ರೆಂದಿದೆ ಎಂದು ಮೊದಲನೆಯ ವ್ಯಾಖ್ಯಾನವನ್ನು ಹೊಂದಿಸಬೇಕು.

4. ಚೈತನ್ಯವನ್ನುಪಯೋಗಿಸಿಕೊಂಡು ದೇಹಾದಿಗಳು ದ್ರಷ್ಟೃವೆನಿಸಿರುತ್ತವೆ.

5. ಉಪದ್ರಷ್ಟ—ಎಂಬಲ್ಲಿ ಉಪ ಎಂದರೆ ಎಲ್ಲದಕ್ಕೂ ಹತ್ತಿರವಿರುವ ಎಂಬರ್ಥವನ್ನು ಸ್ವೀಕರಿಸಬೇಕು.

6. ಮೊದಲು ಯಜ್ಞದ ಉಪದ್ರಷ್ಟೃವನ್ನು ದೃಷ್ಟಾಂತವಾಗಿ ಕೊಟ್ಟಿದ್ದರಲ್ಲಿ ಆತ್ಮನು ನಿರ್ವ್ಯಾಪಾರನೆಂಬುದನ್ನು ಮುಖ್ಯವಾಗಿ ಹಿಡಿದಿದೆ; ಇಲ್ಲಿ ಆತ್ಮನಿಗೆ ಎಲ್ಲವೂ ವಿಷಯವೆಂಬು ದನ್ನು ಹಿಡಿದಿದೆ.

(ಭಾಷ್ಯ)

ಮತ್ತು **ಅನುಮಂತನು :** ಅನುಮಂತನನವೆಂದರೆ ಒಪ್ಪಿಗೆ ; (ಯಾರಾದರೂ) ಕೆಲಸಮಾಡುತ್ತಿರುವಲ್ಲಿ ಅವರ ಕೆಲಸಗಳಿಂದ ತೃಪ್ತಿಹೊಂದುತ್ತಿರುವದು. ಅದನ್ನು ಮಾಡುತ್ತಿರುವದರಿಂದ ಅನುಮಂತನು. ಅಥವಾ ಕಾರ್ಯಕರಣಗಳ ಪ್ರವೃತ್ತಿಗಳಲ್ಲಿ ತಾನು ತೊಡಗದೆ ಇದ್ದರೂ ತೊಡಗಿರುವವನಂತೆ ಅವಕ್ಕೆ ಅನುಕೂಲನಾಗಿ ಕಂಡು ಬರುವನಾದ್ದರಿಂದ ಅನುಮಂತನು. ಅಥವಾ (ತಮ್ಮ) ತಮ್ಮ ವ್ಯಾಪಾರಗಳಲ್ಲಿ ತೊಡಗಿರುವ ಅವುಗಳಿಗೆ ಸಾಕ್ಷಿಯಾಗಿ (ನೋಡುತ್ತಿರುವನೇ ಹೊರತು) ಯಾವಾಗಲೂ ತಡೆಯುವದಿಲ್ಲವಾದ್ದರಿಂದ ಅನುಮಂತನು[1] (ಎಂದಾದರೂ ಅರ್ಥವನ್ನು ಮಾಡಬಹುದು.)

**ಭರ್ತನು :** ಭರಣವೆಂದರೆ[2] ಚೈತನ್ಯಾತ್ಮನೆಂಬ ಮತ್ತೊಬ್ಬನಿಗಾಗಿ ಒಟ್ಟುಗೂಡಿ ಚೈತನ್ಯದಂತೆ ತೋರುತ್ತಿರುವ ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ–ಇವುಗಳು ತಮ್ಮ ಸ್ವರೂಪವನ್ನು ಧರಿಸಿರುವದಿದೆಯಲ್ಲ, ಅದು ಚೈತನ್ಯಾತ್ಮನಿಂದಲೇ ಆಗಿರುತ್ತದೆಯಾದ್ದರಿಂದ ಆತ್ಮನು ಭರ್ತನೆನಿಸುವನು.

**ಭೋಕ್ತನು :** ಚೈತನ್ಯಾತ್ಮನಿಂದ ವ್ಯಾಪ್ತವಾಗಿರುವಂತೆ (ತೋರಿಕೊಂಡೇ) ಹುಟ್ಟಿ ಸರ್ವವಿಷಯಗಳನ್ನೂ ವಿಷಯಮಾಡಿಕೊಳ್ಳುವ, ಸುಖದುಃಖಮೋಹ ರೂಪವಾದ ಬುದ್ಧಿಪ್ರತ್ಯಯಗಳು, ಬೆಂಕಿಯ ಬಿಸಿಯಂತೆ (ಸ್ವಾಭಾವಿಕವಾದ) ನಿತ್ಯ ಚೈತನ್ಯಸ್ವರೂಪದಿಂದ ಬೇರೆಬೇರೆಯಾಗಿ (ಇವನಿಂದ) ಅರಿಯಲ್ಪಡುತ್ತವೆಯಾದ್ದರಿಂದ ಆತ್ಮನು ಭೋಕ್ತನೆನಿಸಿರುವನು[3].

**ಮಹೇಶ್ವರನು :** ಎಲ್ಲಕ್ಕೂ ಆತ್ಮನಾಗಿರುವದರಿಂದಲೂ ಸ್ವತಂತ್ರನಾಗಿರುವದರಿಂದಲೂ ಇವನು ದೊಡ್ಡವನಾದ ಈಶ್ವರನು ; ಆದ್ದರಿಂದ ಮಹೇಶ್ವರನು.

---

1. ಆತ್ಮನು ಕರಣವ್ಯಾಪಾರಗಳಿಗೆಲ್ಲ ಸಾಕ್ಷಿಯು, ಅವನ ಸನ್ನಿಧಿಯಿಂದಲೇ ಕರಣಗಳು ತಮ್ಮ ತಮ್ಮ ವ್ಯಾಪಾರವನ್ನು ಮಾಡುತ್ತಿರುವವು, ಆದರೆ ಅವನು ಯಾವ ಕಾರ್ಯದಲ್ಲಿಯೂ ತೊಡಗುವದಿಲ್ಲ–ಎಂಬ ಅರ್ಥವು ಮೊದಲನೆಯ ಎರಡು ವಿಶೇಷಣಗಳಿಂದ ಏರ್ಪಡುತ್ತದೆ.

2. " ಭರಣಂ ನಾಮ " ಎಬದರ ಅನುವಾದವಿದು. ಇದು ಇಲ್ಲದಿದ್ದರೆ ಒಳ್ಳೆಯದು ಅಥವಾ ಸ್ವರೂಪಧಾರಣಂ ತತ್ । ತತ್ ಎಂದಾದರೂ ಇರಬೇಕು.

3. ಆತ್ಮನು ತಾನು ಇದ್ದಂತೆ ಇದ್ದರೂ ಪ್ರತ್ಯಯಗಳು ಚೈತನ್ಯಗ್ರಸ್ತವಾಗಿರುವಂತೆ ತೋರಿಕೊಂಡೇ ಹುಟ್ಟುತ್ತಿರುವದರಿಂದ ಆತ್ಮನಲ್ಲಿ ಭೋಕ್ತೃತ್ವವು ಕಲ್ಪಿತವಾಗಿದೆ.

**ಪರಮಾತ್ಮನು** : ತಪ್ಪು ತಿಳಿವಳಿಕೆಯಿಂದ ಒಳಗಿನ ಆತ್ಮನೆಂದು ಕಲ್ಪಿತವಾಗಿರುವ ದೇಹದಿಂದ ಹಿಡಿದು ಬುದ್ಧಿಯುವರೆಗಿನ[1] (ಆತ್ಮಾಭಾಸಗಳಿಗಿಂತಲೂ) ಈ ಉಪದ್ರಷ್ಟನೇ ಮುಂತಾದ ರೂಪದಲ್ಲಿರುವ ಆತ್ಮನು ಹೆಚ್ಚಿನವನು; ಆದ್ದರಿಂದ ಇವನು **ಪರಮಾತ್ಮನು,** ಆದ್ದರಿಂದ ಪರಮಾತ್ಮ ಎಂಬೀ ಹೆಸರಿನಿಂದಲೂ ಶ್ರುತಿಯಲ್ಲಿ ಉಕ್ತನಾಗಿರುತ್ತಾನೆ, ಕರೆಯಲ್ಪಟ್ಟಿರುತ್ತಾನೆ.

ಇವನು ಎಲ್ಲಿರುತ್ತಾನೆ? ಈ ದೇಹದಲ್ಲಿ, ಪರಪುರುಷನು ಅವ್ಯಕ್ತಕ್ಕಿಂತಲೂ (ಆಚೆ ಇರುವ ಪುರುಷನು). "ಪರಮಾತ್ಮನೆಂದು ಹೇಳುವ ಉತ್ತಮ ಪುರುಷನು ಬೇರೆ"[2] (೧೫-೧೭) ಎಂದು ಮುಂದೆ ಹೇಳಲ್ಪಡುವವನು; ಮತ್ತು "ಕ್ಷೇತ್ರಜ್ಞನೂ ನಾನೆಂದು ತಿಳಿ"[3] (೧೩-೨) ಎಂದು ಉಪಕ್ರಮದಲ್ಲಿ ಹೇಳಿ, ವಿವರಿಸಿ, ಉಪಸಂಹಾರಮಾಡಿದೆಯಲ್ಲ, (ಅವನು).

## ಆತ್ಮಜ್ಞಾನದ ಫಲ

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥೨೩॥**

೨೩. ಯಾವನು ಹೀಗೆ ಪುರುಷನನ್ನೂ ಗುಣಗಳೊಡನೆ ಪ್ರಕೃತಿಯನ್ನೂ ಅರಿತುಕೊಳ್ಳುವನೋ ಅವನು ಹೇಗೇ ಇದ್ದರೂ ಮತ್ತೆ ಹುಟ್ಟುವದಿಲ್ಲ.

(ಭಾಷ್ಯ)

೨೭೪. ತಮ್ ಏತಂ ಯಥೋಕ್ತಲಕ್ಷಣಮ್ ಆತ್ಮಾನಮ್ ಯಃ ಏವಂ ಯಥೋಕ್ತಪ್ರಕಾರೇಣ ವೇತ್ತಿ ಪುರುಷಂ ಸಾಕ್ಷಾತ್ ಅಹಮ್ ಇತಿ[4] । ಪ್ರಕೃತಿಂ ಚ

1. 'ಅವ್ಯಕ್ತಾನ್ನಾತ್ಮಾವಮ್' ಎಂಬ ಪಾಠಕ್ಕೆ ಆಧಾರವನ್ನು ೧೮-೫೦ ರ ಭಾಷ್ಯದಲ್ಲಿ ಕಾಣಬಹುದು.

2. ಇದು ಅವ್ಯಕ್ತಕ್ಕಿಂತಲೂ ಆತ್ಮನು ವಿಲಕ್ಷಣನು ಎಂಬುದಕ್ಕೆ ಆಧಾರ; ಮುಂ. ಭಾ. ೨-೧-೨ (ಭಾ. ಭಾ. ೫೫) ನ್ನೂ ನೋಡಿ.

3. ಇದು ಶರೀರದಲ್ಲಿರುತ್ತಾನೆಂಬುದಕ್ಕೆ ಆಧಾರ; ಪ್ರ. ಭಾ. ೬-೨ (ಭಾ. ಭಾ. ೯೬, ೯೭)ನ್ನು ನೋಡಿ.

4. "ಅಯಮ್ ಅಹಮಸ್ಮಿ ಇತಿ" ಮ|| ಮೈ|| ಗು||; "ಅಯಮ್ ಅಹಮ್ ಇತಿ" ನಿ||

ಯಥೋಕ್ತಾಮ್ ಅವಿದ್ಯಾಲಕ್ಷಣಾಂ ಗುಣೈಃ ಸ್ವವಿಕಾರೈಃ ಸಹ ನಿವರ್ತಿತಾಮ್ ಅಭಾವಮಾಪಾದಿತಾಂ ವಿದ್ಯಯಾ ಸರ್ವಥಾ ಸರ್ವಪ್ರಕಾರೇಣ ವರ್ತಮಾನೋಽಪಿ ಸಃ ಭೂಯಃ ಪುನಃ ಪತಿತೇ ಅಸ್ಮಿನ್ ವಿದ್ವಚ್ಛರೀರೇ ದೇಹಾನ್ತರಾಯ ನ ಅಭಿ ಜಾಯತೇ ನ ಉತ್ಪದ್ಯತೇ ದೇಹಾನ್ತರಂ ನ ಗೃಹ್ಣಾತಿ ಇತ್ಯರ್ಥಃ । ಅಪಿಶಬ್ದಾತ್[1] ಕಿಮು ವಕ್ತವ್ಯಂ ಸ್ವವೃತ್ತಸ್ಥಃ ನ ಜಾಯತೇ (ಇತಿ) ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಈ ಮೇಲೆ ಹೇಳಿದ ಸ್ವರೂಪದ ಆತ್ಮನನ್ನು, ಯಾವನು ಹೀಗೆ ಮೇಲೆ ಹೇಳಿದ ಪ್ರಕಾರದಿಂದ (ಈ) ಪುರುಷನನ್ನು ನೇರಾಗಿ 'ನಾನು' ಎಂದು ಅರಿತು ಕೊಳ್ಳುವನೋ, ಮತ್ತು ಮೇಲೆ ಹೇಳಿರುವ ಅವಿದ್ಯಾಕಲ್ಪಿತವಾದ ಪ್ರಕೃತಿ ಯನ್ನೂ ತನ್ನ ವಿಕಾರವಾದ ಗುಣಗಳೊಡನೆ, ತೊಲಗಿಸಿಕೊಂಡು, ವಿದ್ಯೆ ಯಿಂದ ಇಲ್ಲವಾಗಿಸಿಕೊಂಡು (ಅರಿತುಕೊಳ್ಳುವನೋ), ಅವನು ಹೇಗೇ ಯಾವ ಪ್ರಕಾರದಿಂದ ಇದ್ದರೂ ಮತ್ತೆ ಇನ್ನೊಮ್ಮೆ ಈ ಜ್ಞಾನಿಶರೀರವು ಬಿದ್ದು ಹೋದ ಬಳಿಕ ಮತ್ತೊಂದು ದೇಹವನ್ನು (ಕೈಕೊಳ್ಳುವದಕ್ಕೆ) ಹುಟ್ಟುವದಿಲ್ಲ ಉಂಟಾಗುವದಿಲ್ಲ; ಮತ್ತೊಂದು ದೇಹವನ್ನು ತೆಗೆದುಕೊಳ್ಳುವದಿಲ್ಲ ಎಂದರ್ಥ. (ಇಲ್ಲಿ) ಅಪಿ ಎಂಬ ಶಬ್ದವಿರುವದರಿಂದ ತನ್ನ ಧರ್ಮದಲ್ಲಿಯೇ ಇದ್ದುಕೊಂಡಿರು ವನು ಹುಟ್ಟುವದಿಲ್ಲವೆಂದು ಹೇಳುವದೇನಿದೆ? ಎಂದು ಅಭಿಪ್ರಾಯ.

## ಜ್ಞಾನಿಗೆ ಜನ್ಮಾಂತರವಿಲ್ಲವೆಂಬುದಕ್ಕೆ ಯುಕ್ತಿ

(ಭಾಷ್ಯ)

೨೭೫. ನನು ಯದ್ಯಪಿ ಜ್ಞಾನೋತ್ಪತ್ತ್ಯನನ್ತರಂ ಪುನರ್ಜನ್ಮಾಭಾವಃ ಉಕ್ತಃ । ತಥಾಪಿ ಪ್ರಾಕ್ ಜ್ಞಾನೋತ್ಪತ್ತೇಃ ಕೃತಾನಾಂ ಕರ್ಮಣಾಮ್ ಉತ್ತರ ಕಾಲಭಾವಿನಾಂ ಚ, ಯಾನಿ ಚ ಅತಿಕ್ರಾನ್ತಾನೇಕಜನ್ಮಕೃತಾನಿ ತೇಷಾಂ ಚ ಫಲಮ್ ಅದತ್ವಾ ನಾಶೋ ನ ಯುಕ್ತಃ ಇತಿ ಸ್ಯುಃ ತ್ರೀಣಿ ಜನ್ಮಾನಿ । ಕೃತವಿಪ್ರಣಾಶೋ ಹಿ ನ ಯುಕ್ತ ಇತಿ । ಯಥಾ ಫಲೇ ಪ್ರವೃತ್ತಾನಾಮ್ ಆರಬ್ಧಜನ್ಮಾನಾಂ ಕರ್ಮ ಣಾಮ್ । ನ ಚ ಕರ್ಮಣಾಂ ವಿಶೇಷಃ ಅವಗಮ್ಯತೇ । ತಸ್ಮಾತ್ ತ್ರಿಪ್ರಕಾರಾಣ್ಯಪಿ ಕರ್ಮಾಣಿ ತ್ರೀಣಿ ಜನ್ಮಾನಿ ಆರಭೇರನ್ । ಸಂಹತಾನಿ ವಾ ಸರ್ವಾಣಿ ಏಕಂ

---

1. ಈ ವಾಕ್ಯವು ಮು||ದಲ್ಲಿ ಅಪಿಶಬ್ದಾತ್ "ಕಿಮು ವಕ್ತವ್ಯಂ ವಿಹಿತೇನ ಮಾರ್ಗೇಣ ವಿದ್ಯಮಾನಃ ಮುಕ್ತಿಂ ಯಾಸ್ಯತೀತಿ" ಎಂದು 'ವರ್ತಮಾನೋಽಪಿ' ಆದ ಬಳಿಕ ಇದೆ. ಆಮೇಲೆ "ನ ಸ ಭೂಯಃ" ಎಂದು ಮುಂತಾದ ವಾಕ್ಯವಿದೆ.

ಜನ್ಮ ಆರಭೇರನ್ । ಅನ್ಯಥಾ ಕೃತವಿಪ್ರಣಾಶೇ[1] ಸತಿ ಸರ್ವತ್ರ ಅನಾಶ್ವಾಸಪ್ರಸಙ್ಗಃ, ಶಾಸ್ತ್ರಾನರ್ಥಕ್ಯಂ ಚ ಸ್ಯಾತ್ । ಇತ್ಯತಃ ಇದಮ್ ಅಯುಕ್ತಮುಕ್ತಮ್ ನ ಸ ಭೂಯೋಽಭಿಜಾಯತೇ ಇತಿ[2]॥

(ಭಾಷ್ಯಾರ್ಥ)

(ಆಕ್ಷೇಪ) :—ಜ್ಞಾನವುಂಟಾದಮೇಲೆ ಮತ್ತೆ ಜನ್ಮವಿಲ್ಲವೆಂದು (ಇಲ್ಲಿ) ಹೇಳಿದೆಯಾದರೂ ಜ್ಞಾನವುಂಟಾಗುವದಕ್ಕೆ ಮೊದಲು ಮಾಡಿದ ಕರ್ಮಗಳು, ಆಮೇಲೆ ಮಾಡುವ (ಕರ್ಮಗಳು), ಮತ್ತು (ಹಿಂದೆ) ಕಳೆದುಹೋಗಿರುವ ಅನೇಕ ಜನ್ಮಗಳಲ್ಲಿ ಮಾಡಿದ್ದನಲ್ಲ, ಅವುಗಳು-(ಇವೆಲ್ಲ) ಫಲವನ್ನು ಕೊಡದೆ ನಾಶವಾಗುವದೆಂಬುದು ಯುಕ್ತವಲ್ಲ. ಆದ್ದರಿಂದ (ಇನ್ನೂ) ಮೂರು ಜನ್ಮಗಳು ಆಗಬೇಕು. ಏಕೆಂದರೆ ಫಲವನ್ನು (ಕೊಡುವದಕ್ಕೆ) ಪ್ರಾರಂಭಿಸಿರುವ, ಈ ಜನ್ಮವನ್ನು ಕೊಟ್ಟಿರುವ, ಕರ್ಮಗಳು (ನಾಶವಾಗುವದೆಂಬುದು) ಹೇಗೆ (ಸರಿಯಲ್ಲವೋ ಹಾಗೆಯೇ ಮೇಲೆ ಹೇಳಿದಂತೆ) ಮಾಡಿರುವ (ಕರ್ಮಗಳು) ನಾಶವಾಗುವದೆಂಬುದು ಸರಿಯಲ್ಲ. ಕರ್ಮಗಳಲ್ಲಿ (ಯಾವದೊಂದು) ವಿಶೇಷವೂ (ಇರುವದು) ತಿಳಿಯುಬರುವದಿಲ್ಲ[3]. ಆದ್ದರಿಂದ (ಈ) ಮೂರು ಬಗೆಯ ಕರ್ಮಗಳೂ ಮೂರು ಜನ್ಮಗಳನ್ನು ಉಂಟು ಮಾಡಬೇಕು; ಅಥವಾ ಇವೆಲ್ಲ ಸೇರಿಕೊಂಡು ಒಂದು ಜನ್ಮವನ್ನಾದರೂ ಉಂಟು ಮಾಡಬೇಕು[4]. ಹಾಗಿಲ್ಲದಿದ್ದರೆ ಮಾಡಿದ ಕರ್ಮವು ನಾಶವಾಗುವದೆಂದಾದರೆ ಎಲ್ಲಿಯೂ ವಿಶ್ವಾಸವಿಲ್ಲದೆ ಹೋದೀತು[5], ಶಾಸ್ತ್ರವು ವ್ಯರ್ಥವೆಂದೂ ಆದೀತು[6]. ಆದ್ದರಿಂದ "ಅವನು ಮತ್ತೆ ಹುಟ್ಟುವದಿಲ್ಲ" ಎಂದು ಹೇಳಿದ್ದು ಸರಿಯಾಗಿ ಹೇಳಿದಂತಾಗಲಿಲ್ಲ.

---

1. 'ಕೃತವಿನಾಶೇ' ಸಿ॥ ವಾ॥ ಆ॥

2. "ಇತಿ ಚೇತ್" ಮ॥ ಮೈ॥ ಗು॥

3. ಪ್ರಾರಬ್ಧಕರ್ಮದ ಹೆಚ್ಚುಗಾರಿಕೆಯೇನೂ ಇಲ್ಲ; ಅದು ನಾಶವಾಗದಿದ್ದರೆ ಮಿಕ್ಕವು ನಾಶವಾಗಬೇಕಾದದ್ದೇಕೆ ?—ಎಂದು ಭಾವ.

4. ಜ್ಞಾನವುಂಟಾದದ್ದರ ಬಲದಿಂದ ಜನ್ಮಗಳ ಸಂಖ್ಯೆ ಕಡಿಮೆಯಾಗಬಹುದು; ಆದರೆ ಕರ್ಮಕ್ಕೆ ಫಲವೇ ಆಗದೆ ಹೋಗುವದು ಸರಿಯಲ್ಲ.

5. ಜ್ಞಾನಫಲದ ವಿಷಯಕ್ಕೂ ನಂಬಿಕೆಯಿಲ್ಲದೆ ಹೋಗಬೇಕಾದೀತು!

6. ಶಾಸ್ತ್ರದಲ್ಲಿ ಹೇಳಿದ ಕರ್ಮಕ್ಕಾಗಲಿ ಜ್ಞಾನಕ್ಕಾಗಲಿ ಫಲವೇ ಇಲ್ಲವಾದರೆ ಶಾಸ್ತ್ರಕ್ಕೆ ಪ್ರಯೋಜನವೇ ಇಲ್ಲವೆಂದಾಗುವದು.

(ಭಾಷ್ಯ)

೨೭೬. ನ । “ಕ್ಷೀಯನ್ತೇ ಚಾಸ್ಯ ಕರ್ಮಾಣಿ” (ಮುಂ. ೨-೨-೮) “ಬ್ರಹ್ಮ ವೇದ ಬ್ರಹ್ಮೈವ ಭವತಿ'' (ಮುಂ. ೩-೨-೯), “ತಸ್ಯ ತಾವದೇವ ಚಿರಮ್'' (ಛಾಂ. ೬-೧೪-೨), “ಇಷೀಕಾತೂಲವತ್ ಸರ್ವಾಣಿ ಕರ್ಮಾಣಿ ಪ್ರದೂಯನ್ತೇ” (ಛಾಂ. ೫-೨೪-೩)[1] ಇತ್ಯಾದಿಶ್ರುತಿಶತೇಭ್ಯ ಉಕ್ತೋ ವಿದುಷಃ ಸರ್ವಕರ್ಮದಾಹಃ[2] । ಇಹಾಪಿ ಚ ಉಕ್ತಃ “ಯಥೈಧಾಂಸಿ” (೪-೩೭) ಇತ್ಯಾದಿನಾ ಸರ್ವಕರ್ಮದಾಹಃ । ವಕ್ಷ್ಯತೇ[3] ಚ । ಉಪಪತ್ತೇಶ್ಚ । ಅವಿದ್ಯಾಕಾಮಕ್ಲೇಶಬೀಜನಿಮಿತ್ತಾನಿ[4] ಹಿ ಕರ್ಮಾಣಿ ಜನ್ಮಾನ್ತರಾಙ್ಕುರಮ್ ಆರಭನ್ತೇ । ಇಹಾಪಿ ಚ ಸಾಹಙ್ಕಾರಾಭಿಸನ್ಧೀನಿ ಕರ್ಮಾಣಿ ಫಲಾರಮ್ಭಕಾಣಿ ನೇತರಾಣಿ ಇತಿ ತತ್ರ ತತ್ರ ಭಗವತಾ ಉಕ್ತಮ್ । “ಬೀಜಾನ್ಯಗ್ನ್ಯುಪದಗ್ಧಾನಿ ನ ರೋಹನ್ತಿ ಯಥಾ ಪುನಃ । ಜ್ಞಾನದಗ್ಧೈಸ್ತಥಾಕ್ಲೇಶೈರ್ನಾತ್ಮಾ ಸಂಪದ್ಯತೇ ಪುನಃ” (ಮೋ. ೨೧೧-೧೭) ಇತಿ ಚ ॥

(ಭಾಷ್ಯಾರ್ಥ)

ಹಾಗಲ್ಲ. “ಅವನ ಕರ್ಮಗಳೂ ನಾಶವಾಗುವವು” (ಮುಂ. ೨-೨-೮) “ಬ್ರಹ್ಮವನ್ನು ಅರಿತರೆ ಬ್ರಹ್ಮವೇ ಆಗುವನು” (ಮುಂ. ೩-೨-೯), “ಅವನಿಗೆ ಅಲ್ಲಿಯವರೆಗೇ ತಡ, (ಆಮೇಲೆ ಮೋಕ್ಷವಾಗುವದು)” (ಛಾಂ. ೬-೧೪-೨). “ಇಷೀಕದ ಹತ್ತಿಯಂತೆ ಕರ್ಮಗಳೆಲ್ಲ ಸುಟ್ಟುಹೋಗುವವು” (ಛಾಂ. ೫-೨೪-೩) ಮುಂತಾದ ನೂರಾರು ಶ್ರುತಿಗಳಲ್ಲಿ ಜ್ಞಾನಿಯ ಸಕಲ ಕರ್ಮಗಳೂ ಸುಟ್ಟುಹೋಗುವವೆಂದು ಹೇಳಿರುತ್ತದೆ. ಇಲ್ಲಿಯೂ “ಕಟ್ಟಿಗೆಗಳನ್ನು ಹೇಗೆ .... ” (೪-೩೭) ಎಂದು ಮುಂತಾಗಿ ಸರ್ವಕರ್ಮಗಳೂ ಸುಟ್ಟುಹೋಗುವವೆಂಬುದನ್ನು ಹೇಳಿರುತ್ತದೆ; ಮುಂದೆಯೂ ಹೇಳಲಾಗುತ್ತದೆ. (ಇದಕ್ಕೆ) ಯುಕ್ತಿಯು (ಇರುವದ)ರಿಂದಲೂ (ಇದೇ ಸರಿ). **ಅವಿದ್ಯೆ, ಕಾಮ, ಕ್ಲೇಶಗಳು–ಎಂಬ ಬೀಜದ ನಿಮಿತ್ತದಿಂದಲೇ ಅಲ್ಲವೆ, ಕರ್ಮಗಳು ಮತ್ತೊಂದು ಜನ್ಮವೆಂಬ ಮೊಳಕೆಯನ್ನುಂಟುಮಾಡುವವು?** ಇಲ್ಲಿಯೂ, ಅಹಂಕಾರ, ಫಲೇಚ್ಛೆ–ಇವುಗಳಿಂದ ಕೂಡಿದ ಕರ್ಮಗಳೇ ಫಲವನ್ನುಂಟುಮಾಡುವವೇ ಹೊರತು ಮಿಕ್ಕವು ಉಂಟು

1. ಇದು ಶ್ರುತ್ಯರ್ಥಮಾತ್ರ.
2. ಈ ಮೂರು ಮಾತುಗಳು ಮ॥ ಮೈ॥ ಗಳಲ್ಲಿಲ್ಲ; ಇಲ್ಲದಿದ್ದರೂ ಆಗುತ್ತದೆ.
3. ‘ವಕ್ಷ್ಯತಿ ಚ’ ಎಂಬ ಮುದ್ರಿತಪಾಠವನ್ನು ಹೀಗೆ ತಿದ್ದಿಕೊಂಡಿದೆ.
4. ‘ಅವಿದ್ಯಾಕರ್ಮಕ್ಲೇಶ...’ ನಿ॥ ವಾ॥

(ಮಾಡುವ)ದಿಲ್ಲ ಎಂದು ಭಗವಂತನು ಅಲ್ಲಲ್ಲಿ ಹೇಳಿರುತ್ತಾನೆ. "ಬೆಂಕಿಯಿಂದ ಸುಟ್ಟುಹೋಗಿರುವ ಬೀಜಗಳು ಹೇಗೆ ಮತ್ತೆ ಮೊಳಕೆಯಾಗದೆ ಇರುವವೋ, ಹಾಗೆ ಜ್ಞಾನದಿಂದ ಸುಟ್ಟುಹೋದ ಕ್ಲೇಶಗಳಿಂದ ಮತ್ತೆ ಆತ್ಮನಿಗೆ ಸಂಬಂಧವಾಗುವದಿಲ್ಲ" (ಮೋ. ೨೧೧-೧೭–ಎಂದೂ ಭಾರತದಲ್ಲಿದೆ [1].)

(ಭಾಷ್ಯ)

೨೭೭. ಅಸ್ತು ತಾವತ್ ಜ್ಞಾನೋತ್ಪತ್ತ್ಯುತ್ತರಕಾಲಕೃತಾನಾಂ [2] ಕರ್ಮಣಾಂ ಜ್ಞಾನೇನ [3] ದಾಹಃ । ಜ್ಞಾನಸಹಭಾವಿತ್ವಾತ್ । ನ ತು ಇಹಜನ್ಮನಿ ಜ್ಞಾನೋತ್ಪತ್ತೇಃ ಪ್ರಾಕ್ ಕೃತಾನಾಂ ಕರ್ಮಣಾಂ ಅತೀತಜನ್ಮಕೃತಾನಾಂ ಚ ದಾಹಃ ಯುಕ್ತಃ । ನ । ಸರ್ವಕರ್ಮಾಣಿ (೪-೩೭) ಇತಿ ವಿಶೇಷಣಾತ್ । ಜ್ಞಾನೋತ್ತರಕಾಲಭಾವಿನಾಮೇವ ಸರ್ವಕರ್ಮಣಾಮ್ ಇತಿ ಚೇತ್ । ನ, ಸಙ್ಕೋಚೇ [4] ಕಾರಣಾನುಪಪತ್ತೇಃ । ಯತ್ ತು ಉಕ್ತಮ್–ಯಥಾ ವರ್ತಮಾನ ಜನ್ಮಾರಮ್ಭಕಾಣಿ ಕರ್ಮಾಣಿ ನ ಕ್ಷೀಯನ್ತೇ ಫಲದಾನಾಯ ಪ್ರವೃತ್ತಾನ್ಯೇವ ಸತ್ಯಪಿ ಜ್ಞಾನೇ ತಥಾ ಅನಾರಬ್ಧಫಲಾನಾಮಪಿ ಕರ್ಮಣಾಂ ಕ್ಷಯಃ ನ ಯುಕ್ತಃ ಇತಿ । ತತ್ ಅಸತ್ । ಕಥಮ್ ? ತೇಷಾಂ ಮುಕ್ತೇಷುವತ್ ಪ್ರವೃತ್ತಫಲತ್ವಾತ್ । ಯಥಾ ಪೂರ್ವಂ ಲಕ್ಷ್ಯವೇಧಾಯ ಮುಕ್ತಃ ಇಷುರ್ಧನುಷಃ ಲಕ್ಷ್ಯವೇಧೋತ್ತರ ಕಾಲಮಪಿ ಆರಬ್ಧವೇಗಕ್ಷಯಾತ್ ಪತನೇನೈವ ನಿವರ್ತತೇ । ಏವಂ ಶರೀರಾ ರಮ್ಭಕಂ ಕರ್ಮ ಶರೀರಸ್ಥಿತಿಪ್ರಯೋಜನೇ ನಿವೃತ್ತೇಽಪಿ ಆಸಂಸ್ಕಾರವೇಗಕ್ಷಯಾತ್ ಪೂರ್ವವತ್ ವರ್ತತೇ ಏವ [5] । ಸ ಏವ ಇಷುಃ ಪ್ರವೃತ್ತಿನಿಮಿತ್ತಾನಾರಬ್ಧವೇಗಸ್ತು ಅಮುಕ್ತಃ ಧನುಷಿ ಪ್ರಯುಕ್ತೋಽಪಿ ಉಪಸಂಹ್ರಿಯತೇ । ತಥಾ ಅನಾರಬ್ಧಫಲಾನಿ ಕರ್ಮಾಣಿ ಸ್ವಾಶ್ರಯಸ್ಥಾನ್ಯೇವ ಜ್ಞಾನೇನ ನಿರ್ಬೀಜೀಕ್ರಿಯನ್ತೇ ಇತಿ ಪತಿತೇ ಅಸ್ಮಿನ್ ವಿದ್ವಚ್ಛರೀರೇ "ನ ಸ ಭೂಯೋಽಭಿಜಾಯತೇ" ಇತಿ ಯುಕ್ತಮೇವ ಉಕ್ತಮ್ ಇತಿ ಸಿದ್ಧಮ್ ॥

---

1. ಇದು ಯುಕ್ತಿಯನ್ನು ತಿಳಿಸುವದಕ್ಕಾಗಿ ಉದಾಹರಿಸಿದ ವಚನವು.
2. 'ಜ್ಞಾನೋತ್ಪತ್ತೇರುತ್ತರ' ಮು|| ಮೈ|| ಗು||
3. 'ಜ್ಞಾನೇನೈವ' ಮು|| 'ತತ್ತ್ವಜ್ಞಾನೇನ' ಮೈ||
4. 'ಸಙ್ಕೋಚತ್ವೇ' ನಿ|| ; 'ಸಙ್ಕೋಚ' ಮು||
5. 'ಪೂರ್ವಜ್ಞಾನಸಂಸ್ಕೃತೇನಾನ್ತಃಕರಣೇನ ಪೂರ್ವವತ್ ಪ್ರವರ್ತತೇ ಏವ' ಮು|| 'ಪೂರ್ವವತ್ ಪ್ರವರ್ತತೇ ಏವ' ಎಂದಿಷ್ಟೇ ಮೈ|| ಗು||

(ಭಾಷ್ಯಾರ್ಥ)

(ಆಕ್ಷೇಪ) :—ಜ್ಞಾನವುಂಟಾದ ಮೇಲಿನ ಕಾಲದಲ್ಲಿ ಮಾಡುವ ಕರ್ಮಗಳು ಜ್ಞಾನದೊಡನೆಯೇ ಇರುವದರಿಂದ (ಅವು) ಜ್ಞಾನದಿಂದ ಸುಟ್ಟುಹೋಗುವವೆಂದಾಗಲಿ. ಆದರೆ ಈ ಜನ್ಮದಲ್ಲಿ ಜ್ಞಾನವು ಉಂಟಾಗುವದಕ್ಕಿಂತ ಮೊದಲೇ ಮಾಡಿರುವ ಕರ್ಮಗಳೂ ಹಿಂದಿನ ಜನ್ಮಗಳಲ್ಲಿ ಮಾಡಿದ್ದ ಕರ್ಮಗಳೂ ಸುಟ್ಟುಹೋಗುವವೆಂಬುದು ಯುಕ್ತವಲ್ಲವಲ್ಲ [1] !

(ಪರಿಹಾರ) :—ಹಾಗಲ್ಲ. ಏಕೆಂದರೆ 'ಸರ್ವಕರ್ಮಗಳನ್ನೂ' (೪-೩೭) ಎಂಬ ವಿಶೇಷಣವಿದೆ.

(ಆಕ್ಷೇಪ) : — ಜ್ಞಾನವುಂಟಾದ ಮೇಲಿನ ಕಾಲದಲ್ಲಿ ಆಗುವ ಎಲ್ಲಾ ಕರ್ಮಗಳ (ದಾಹವೇ ಅಲ್ಲಿ ಹೇಳಿದೆ ಎನ್ನಬಹುದಲ್ಲ) !

(ಪರಿಹಾರ) :—ಹಾಗಲ್ಲ. (ಹಾಗೆ ಅರ್ಥವನ್ನು) ಕುಗ್ಗಿಸುವದಕ್ಕೆ ಕಾರಣವು (ಯಾವದೂ) ಹೊಂದುಗಡೆಯಾಗಿಲ್ಲ.

ಇನ್ನು "ಹೇಗೆ ಈಗಿನ ಜನ್ಮವನ್ನುಂಟುಮಾಡಿರುವ ಕರ್ಮಗಳು ಫಲವನ್ನು ಕೊಡುವದಕ್ಕೆ ಪ್ರಾರಂಭಿಸಿಯೇ ಬಿಟ್ಟಿವೆಯೋ, ಜ್ಞಾನವಿದ್ದರೂ (ಹೇಗೆ) ನಾಶವಾಗುವದಿಲ್ಲವೋ, ಹಾಗೆ ಫಲವನ್ನು ಕೊಡದೆ ಇರುವ ಕರ್ಮಗಳು ನಾಶವಾಗುವದೆಂಬುದೂ ಯುಕ್ತವಲ್ಲ" ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದು ಸರಿಯಲ್ಲ. ಏಕೆಂದರೆ ಆ (ಕರ್ಮಗಳು) ಬಿಟ್ಟ ಬಾಣದಂತೆ ಫಲವನ್ನು (ಕೊಡುವದಕ್ಕೆ) ಪ್ರಾರಂಭಿಸಿಬಿಟ್ಟಿರುತ್ತವೆ. ಹೇಗೆ ಮೊದಲು ಗುರಿಯನ್ನು ಹೊಡೆಯುವದಕ್ಕೆಂದು ಬಿಲ್ಲಿನಿಂದ ಬಿಟ್ಟಿದ್ದ ಬಾಣವು, ಗುರಿಯನ್ನು ಹೊಡೆದ ಮೇಲಿನ ಕಾಲದಲ್ಲಿಯೂ ತಾನು (ಮೊದಲು) ಹೊರಟಿದ್ದ ವೇಗವು ಮುಗಿದ ಬಳಿಕ ಬಿದ್ದೇ ಸುಮ್ಮನಾಗುವದೋ, ಹಾಗೆ ಶರೀರವನ್ನು ಉಂಟುಮಾಡಿರುವ ಕರ್ಮವು ಶರೀರವು ಇದ್ದುಕೊಂಡಿರುವದಕ್ಕೆ (ಆಗಬೇಕಾದ) ಪ್ರಯೋಜನವು ಹೋದರೂ ಸಂಸ್ಕಾರದ ವೇಗವು ಕ್ಷಯವಾಗುವವರೆಗೂ ಮೊದಲಿನಂತೆ ಇದ್ದುಕೊಂಡೇ ಇರುವದು.[2] ಆದರೆ ಅದೇ ಬಾಣವು (ಹೊರಕ್ಕೆ) ಹೊರಡುವದಕ್ಕೆ ಬೇಕಾದ ವೇಗವನ್ನು ಪ್ರಾರಂಭಿಸದೆ

---

1. ಶರೀರವೂ ಅದರ ಕರ್ಮವೂ ಸತ್ಯವೆಂದು ತಿಳಿದು ಪೂರ್ವಪಕ್ಷಿ ಈ ಆಕ್ಷೇಪವನ್ನು ಹೂಡಿರುತ್ತಾನೆ.

2. ಇದು ವ್ಯಾವಹಾರಿಕದೃಷ್ಟಿಯಿಂದ ಸಾಂಖ್ಯಸಿದ್ಧಾಂತವನ್ನು ಅನುಸರಿಸಿ ಹೇಳಿದ್ದು. ಸಾಂ. ಕಾ. ೬೭, ೬೮ ನೋಡಿ. ನಿಜವಾಗಿ ಶರೀರವು ಇಲ್ಲವೇ ಇಲ್ಲ: ಸೂ .ಭಾ. ೧-೧-೪.

ಇರುವಾಗ, ಇನ್ನೂ ಬಿಡದೆ ಇರುವದಾದ್ದರಿಂದ, ಬಿಲ್ಲಿನಲ್ಲಿ ಹೂಡಿದ್ದರೂ ಹಿಂದಕ್ಕೆ ಸೆಳೆದುಕೊಳ್ಳುವದಕ್ಕೆ ಆಗುವದೋ, ಅದರಂತೆ ಫಲವನ್ನುಂಟುಮಾಡದೆ ಇರುವ ಕರ್ಮಗಳು ತಮ್ಮ ಆಶ್ರಯದಲ್ಲಿರುವಾಗಲೇ [1] ಜ್ಞಾನದಿಂದ ನಿರ್ಬೀಜವಾಗಿ ಮಾಡಲ್ಪಡುತ್ತವೆ [2]. ಆದ್ದರಿಂದ ಜ್ಞಾನಿಶರೀರವು ಬಿದ್ದಮೇಲೆ "ಅವನು ಮತ್ತೆ ಹುಟ್ಟುವದಿಲ್ಲ [3]" ಎಂದು ಹೇಳಿದ್ದು ಯುಕ್ತವೇ ಎಂದು ಏರ್ಪಡುತ್ತದೆ. .

## ಆತ್ಮಸಾಕ್ಷಾತ್ಕಾರಕ್ಕೆ ಉಪಾಯಗಳು

(ಭಾಷ್ಯ)

೨೭೮. ಅತ್ರ ಆತ್ಮದರ್ಶನೇ [4] ಉಪಾಯವಿಕಲ್ಪಾಃ ಇಮೇ ಧ್ಯಾನಾದಯಃ ಉಚ್ಯನ್ತೇ —

(ಭಾಷ್ಯಾರ್ಥ)

ಈ ಆತ್ಮದರ್ಶನ (ವಿಷಯ)ದಲ್ಲಿ ಬೇರೆಬೇರೆಯ ಉಪಾಯಗಳೆಂದು ಈ ಧ್ಯಾನವೇ ಮುಂತಾದವನ್ನು ಹೇಳಲಾಗುತ್ತದೆ :—

**ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಙ್ಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥೨೪॥**

೨೪. ಕೆಲವರು ಧ್ಯಾನದಿಂದ ಆತ್ಮನಲ್ಲಿ ಆತ್ಮನನ್ನು ಆತ್ಮನಿಂದ ಕಂಡುಕೊಳ್ಳುತ್ತಾರೆ. ಮತ್ತೆ ಕೆಲವರು ಸಾಂಖ್ಯಯೋಗದಿಂದ (ಕಂಡುಕೊಳ್ಳುವರು) ; ಮತ್ತೂ ಕೆಲವರು ಕರ್ಮಯೋಗದಿಂದ (ಕಂಡುಕೊಳ್ಳುವರು).

---

1. ಅಂತಃಕರಣದಲ್ಲಿಯೇ ಸಂಚಿತವಾಸನೆಗಳು ನಿರ್ಬೀಜವಾಗಿ ಕರ್ಮರೂಪಕ್ಕೆ ಇಳಿಯದಂತೆ ಆಗಿಬಿಡುತ್ತವೆ.

2. ಕರ್ಮವನ್ನು ಜ್ಞಾನವು ನಿರ್ಬೀಜವಾಗಿ ಮಾಡುವದು ಅದರ ಅಸತ್ಯತ್ವವನ್ನು ತಿಳಿಸುವದರಿಂದ ; ಅಕರ್ತ್ರಾತ್ಮಜ್ಞಾನವು ತಪ್ಪುತಿಳಿವಳಿಕೆಯನ್ನು ಬಾಧಿಸುವದರಿಂದಲೇ ಕರ್ಮಗಳನ್ನು ನಾಶಗೊಳಿಸುತ್ತದೆ ಎಂಬುದಕ್ಕೆ ಸೂ. ಭಾ. ೪-೧-೧೪ ನೋಡಿ.

3. ಇದೂ ವ್ಯಾವಹಾರಿಕದೃಷ್ಟಿಯಿಂದ ; ನಿಜವಾಗಿ ಆತ್ಮನಿಗೆ ಹುಟ್ಟುಸಾವುಗಳೇ ಇಲ್ಲವೆಂಬ ಉತ್ತಮಸಿದ್ಧಾಂತವನ್ನು ಎರಡನೆಯ ಅಧ್ಯಾಯದಲ್ಲಿಯೇ ಹೇಳಿರುತ್ತದೆ.

4. 'ಬಹವಃ' ಎಂದು ಹೆಚ್ಚಾಗಿ ಮ॥ ಮೈ॥ ಗು॥

(ಭಾಷ್ಯ)

೨೭೯. ಧ್ಯಾನೇನ। ಧ್ಯಾನಂ ನಾಮ ಶಬ್ದಾದಿಭ್ಯೋ ವಿಷಯೇಭ್ಯಃ ಶ್ರೋತ್ರಾದೀನಿ ಕರಣಾನಿ ಮನಸಿ ಉಪಸಂಹೃತ್ಯ ಮನಶ್ಚ ಪ್ರತ್ಯಕ್ಚೇತಯಿತರಿ ಏಕಾಗ್ರತಯಾ ಯತ್ ಚಿನ್ತನಮ್, ತತ್ ಧ್ಯಾನಮ್। ತಥಾ 'ಧ್ಯಾಯತೀವ ಬಕಃ' 'ಧ್ಯಾಯತೀವ ಪೃಥಿವೀ,' 'ಧ್ಯಾಯನ್ತೀವ ಪರ್ವತಾಃ' ಇತಿ ಉಪಮೋಪಾದಾನಾತ್ ತೈಲಧಾರಾವತ್ ಸನ್ತತಃ ಅವಿಚ್ಛಿನ್ನಪ್ರತ್ಯಯಃ[1] ಧ್ಯಾನಮ್। ತೇನ ಧ್ಯಾನೇನ ಆತ್ಮನಿ ಬುದ್ಧೌ ಪಶ್ಯನ್ತಿ ಆತ್ಮಾನಂ ಪ್ರತ್ಯಕ್ಚೇತನಮ್ ಆತ್ಮನಾ ಸ್ವೇನೈವ ಧ್ಯಾನಸಂಸ್ಕೃತೇನ ಅನ್ತಃಕರಣೇನ[2] ಕೇಚಿತ್ ಯೋಗಿನಃ। ಅನ್ಯೇ ಸಾಙ್ಖ್ಯೇನ ಯೋಗೇನ। ಸಾಙ್ಖ್ಯಂ ನಾಮ "ಇಮೇ ಸತ್ತ್ವರಜಸ್ತಮಾಂಸಿ ಗುಣಾಃ ಮಯಾ ದೃಶ್ಯಾಃ, ಅಹಂ ತೇಭ್ಯೋಽನ್ಯಃ[3] ತದ್ವ್ಯಾಪಾರಸಾಕ್ಷಿಭೂತಃ ನಿತ್ಯಃ ಗುಣವಿಲಕ್ಷಣಃ ಆತ್ಮಾ" ಇತಿ ಚಿನ್ತನಮ್। ಏಷ ಸಾಙ್ಖ್ಯೋ ಯೋಗಃ। ತೇನ 'ಪಶ್ಯನ್ತ್ಯಾತ್ಮಾನಮಾತ್ಮನಾ' ಇತಿ ಅನುವರ್ತತೇ[4]। ಕರ್ಮಯೋಗೇನ। ಕರ್ಮೈವ ಯೋಗಃ ಈಶ್ವರಾರ್ಪಣಬುದ್ಧ್ಯಾ ಅನುಷ್ಠೀಯಮಾನಂ ಘಟನಾರೂಪಂ[5] ಯೋಗಾರ್ಥತ್ವಾತ್ ಯೋಗ ಉಚ್ಯತೇ ಗುಣತಃ। ತೇನ ಸತ್ತ್ವಶುದ್ಧಿಜ್ಞಾನೋತ್ಪತ್ತಿದ್ವಾರೇಣ ಚ ಅಪರೇ ॥

(ಭಾಷ್ಯಾರ್ಥ)

**ಧ್ಯಾನದಿಂದ**: ಧ್ಯಾನವೆಂದರೇನೆಂದರೆ, **ಶಬ್ದವೇ ಮುಂತಾದ ವಿಷಯಗಳಿಂದ ಶ್ರೋತ್ರವೇ ಮುಂತಾದ ಕರಣಗಳನ್ನು (ಜಗ್ಗಿ) ಮನಸ್ಸಿನಲ್ಲಿ ಇಟ್ಟುಕೊಂಡು ಮನಸ್ಸನ್ನು ಒಳಗಿನ ಅರಿಯುವ (ಆತ್ಮನಲ್ಲಿಟ್ಟು) ಏಕಾಗ್ರವಾಗಿಸಿ ಧ್ಯಾನಮಾಡುವದಿದೆಯಲ್ಲ, ಅದು ಧ್ಯಾನವು.** ಹಾಗೂ 'ಬಕವು ಧ್ಯಾನಮಾಡುವಂತಿದೆ', 'ಪೃಥಿವಿಯು ಧ್ಯಾನಮಾಡುವಂತಿದೆ,' 'ಪರ್ವತಗಳು ಧ್ಯಾನಮಾಡುವಂತಿವೆ' ಎಂದು (ಛಾಂ. ೭-೬-೧)ಉಪಮಾನವನ್ನು ತೆಗೆದುಕೊಂಡು

---

1. 'ಸನ್ತತಾವಿಚ್ಛಿನ್ನಪ್ರತ್ಯಯಃ' ಮು|| ಗು||

2. "ಪ್ರತ್ಯಕ್ಚೇತನೇನ ಧ್ಯಾನಸಂಸ್ಕೃತಾನ್ತಃಕರಣಾಃ" ಮು||; "ಪ್ರತ್ಯಕ್ಚೇತನೇನ ಧ್ಯಾನಸಂಸ್ಕೃತೇನ ಅನ್ತಃಕರಣೇನ" ಮೈ|| ಗು||

3. ಈ ವಾಕ್ಯವು ಮು|| ಮೈ|| ಗಳಲ್ಲಿಲ್ಲ.

4. 'ವರ್ತತೇ' ಎಂದಿಷ್ಟೇ ನಿ|| ಅ|| ವಾ||.

5. ಮು|| ಮೈ||ಗಳಲ್ಲಿಲ್ಲ.

(ಹೇಳಿರುವದ)ರಿಂದ[1] ಎಣ್ಣೆಯ ಧಾರೆಯಂತೆ ಒಂದೇ ಸಮನೆ ಕಡಿವಡೆಯದೆ ಇರುವ ಅರಿವಿನ (ಪ್ರವಾಹವೇ) ಧ್ಯಾನವು. ಆ ಧ್ಯಾನದಿಂದ ಆತ್ಮನಲ್ಲಿ ಎಂದರೆ ಬುದ್ಧಿಯಲ್ಲಿ, ಆತ್ಮನನ್ನು ಒಳಗಿನ ಚೈತನ್ಯವನ್ನು, ಆತ್ಮನಿಂದ ತನ್ನದೇ ಆದ ಧ್ಯಾನಸಂಸ್ಕೃತವಾದ ಅಂತಃಕರಣದಿಂದ[2] ಕೆಲವರು ಯೋಗಿಗಳು ಕಂಡುಕೊಳ್ಳುತ್ತಾರೆ.

ಮತ್ತೆ ಕೆಲವರು[3] **ಸಾಂಖ್ಯಯೋಗ**ದಿಂದ: ಸಾಂಖ್ಯವೆಂದರೆ "ಈ ಸತ್ತ್ವರಜಸ್ತಮಗಳೆಂಬ ಗುಣಗಳು ನನಗೆ ಗೋಚರವಾಗಿರುವವು; ನಾನು ಅವುಗಳಿಗಿಂತ ಬೇರೆಯಾಗಿ ಅವುಗಳ ವ್ಯಾಪಾರಗಳಿಗೆ ಸಾಕ್ಷಿಯಾಗಿರುವ ನಿತ್ಯನಾದ ಗುಣವಿಲಕ್ಷಣನಾದ ಆತ್ಮನು" ಎಂದು ಆಲೋಚಿಸಿಕೊಳ್ಳುತ್ತಿರುವದು. ಈ ಸಾಂಖ್ಯವೇ ಯೋಗವು; ಇದರಿಂದ 'ಆತ್ಮನನ್ನು ಆತ್ಮನಿಂದಲೇ ಕಂಡುಕೊಳ್ಳುವರು' ಎಂದು (ಹಿಂದಿರುವ ಮಾತುಗಳನ್ನು ಇಲ್ಲಿಯೂ) ಸೇರಿಸಿಕೊಳ್ಳಬೇಕು.

**ಕರ್ಮಯೋಗ**ದಿಂದ: ಕರ್ಮವೇ ಯೋಗವು; ಈಶ್ವರಾರ್ಪಣಬುದ್ಧಿಯಿಂದ ಮಾಡುವ ಘಟನೆಯ ರೂಪದ (ಕರ್ಮವು) ಯೋಗವೆಂಬ ಫಲವುಳ್ಳದ್ದಾದ್ದರಿಂದ (ಇದೂ) ಯೋಗವೆಂದು ಉಪಚಾರಕ್ಕೆ ಕರೆಯಲ್ಪಟ್ಟಿರುತ್ತದೆ[4]. ಇದರಿಂದ ಸತ್ತ್ವಶುದ್ಧಿ, ಜ್ಞಾನೋತ್ಪತ್ತಿ–ಇವುಗಳ ಮೂಲಕವಾಗಿ ಮತ್ತೂ ಕೆಲವರು (ಆತ್ಮನನ್ನು ಆತ್ಮನಿಂದ ಕಂಡುಕೊಳ್ಳುವರು).

---

1. ನಿಶ್ಚಲವಾಗಿ ನಿಂತಿರುವ ಪ್ರಾಣಿಗಳನ್ನೂ ವಸ್ತುಗಳನ್ನೂ ಧ್ಯಾನಿಗಳಿಗೆ ಉಪಮಾನವಾಗಿ ಕೊಟ್ಟಿರುವದರಿಂದ ಹೊರಗಿನ ಅರಿವಿಲ್ಲದೆ ಒಂದೇ ಸಮನೆ ಚಿಂತಿಸುವದೇ ಧ್ಯಾನವೆಂದು ನಿಶ್ಚಯವಾಗುತ್ತದೆ.

2. 'ಪ್ರತ್ಯಕ್ಚೇತನೇನ ಧ್ಯಾನಸಂಸ್ಕೃತಾನ್ತಃಕರಣಾಃ' ಎಂಬ ಮು|| ಪಾಠಕ್ಕೆ ಧ್ಯಾನದಿಂದ ಚಿತ್ತಸಂಸ್ಕಾರವನ್ನು ಹೊಂದಿದ ಯೋಗಿಗಳು ತಮ್ಮ ಆತ್ಮನಿಂದಲೇ ಆತ್ಮನನ್ನು ಕಂಡುಕೊಳ್ಳುತ್ತಾರೆ; ಅಂತಃಕರಣಕ್ಕೆ ಆತ್ಮನು ವಿಷಯನಲ್ಲ–ಎಂಬ ತಾತ್ಪರ್ಯವನ್ನು ಕಲ್ಪಿಸಬೇಕು. ಮಾಂ. ಕಾ. ಭಾ. ೩-೩೩ ನೋಡಿ.

3. ವಿಚಾರಪ್ರಧಾನರು. ಧ್ಯಾನಯೋಗದಲ್ಲಿ ಧ್ಯಾನಕ್ಕೆ ವಿಚಾರವು ಅಂಗ; ಸಾಂಖ್ಯಯೋಗದಲ್ಲಿ ವಿಚಾರಕ್ಕೆ ಧ್ಯಾನವು ಅಂಗ.

4. ನಾಲ್ಕನೆಯ ಅಧ್ಯಾಯದ ಅವತರಣಿಕೆ ಭಾ. ಭಾ. ೨೨೧; ೫-೫ರ ಭಾಷ್ಯ ಭಾ. ಭಾ. ೩೨೯-ಇವನ್ನು ನೋಡಿ.

**ಅನ್ಯೇ ತ್ವೇವಮಜಾನನ್ತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೫ ॥**

೨೫. ಆದರೆ ಬೇರೆ (ಕೆಲವರು) ಹೀಗೆ ತಿಳಿದುಕೊಳ್ಳದೆ ಮತ್ತೊಬ್ಬರಿಂದ ಕೇಳಿ ಉಪಾಸನೆಮಾಡುತ್ತಾರೆ. ಅವರೂ ಶ್ರುತಿಪರಾಯಣರಾದ್ದರಿಂದ ಮೃತ್ಯುವನ್ನು ದಾಟಿಯೇ ತೀರುತ್ತಾರೆ.

(ಭಾಷ್ಯ)

೨೮೦. ಅನ್ಯೇ ತು ಏಷು [1] ವಿಕಲ್ಪೇಷು ಅನ್ಯತರೇಣಾಪಿ ಏವಂ ಯಥೋಕ್ತಮ್ ಆತ್ಮಾನಮ್ ಅಜಾನನ್ತಃ ಅನ್ಯೇಭ್ಯಃ ಆಚಾರ್ಯೇಭ್ಯಃ ಶ್ರುತ್ವಾ "ಇದಮೇವ ಚಿನ್ತಯತ" ಇತ್ಯುಕ್ತಾಃ ಉಪಾಸತೇ ಶ್ರದ್ದಧಾನಾಃ ಸನ್ತಃ ಚಿನ್ತಯನ್ತಿ । ತೇಽಪಿ ಚ ಅತಿತರನ್ತ್ಯೇವ ಅತಿಕ್ರಾಮನ್ತ್ಯೇವ ಮೃತ್ಯುಂ ಮೃತ್ಯುಯುಕ್ತಂ ಸಂಸಾರಮ್ ಇತ್ಯೇತತ್ । ಶ್ರುತಿಪರಾಯಣಾಃ ಶ್ರುತಿಃ ಶ್ರವಣಂ ಪರಮ್ ಅಯನಂ ಗಮನಂ ಮೋಕ್ಷಮಾರ್ಗಪ್ರವೃತ್ತೌ ಪರಂ ಸಾಧನಂ ಯೇಷಾಂ ತೇ ಶ್ರುತಿಪರಾಯಣಾಃ ಕೇವಲಪರೋಪದೇಶಪ್ರಮಾಣಾಃ [2] ಸ್ವಯಂ ವಿವೇಕರಹಿತಾಃ ಇತ್ಯಭಿಪ್ರಾಯಃ । ಕಿಮು ವಕ್ತವ್ಯಂ ಪ್ರಮಾಣಂ ಪ್ರತಿ ಸ್ವತನ್ತ್ರಾಃ ವಿವೇಕಿನಃ ಮೃತ್ಯುಮ್ ಅತಿತರನ್ತೀತಿ ಇತ್ಯಭಿಪ್ರಾಯಃ [3]॥

(ಭಾಷ್ಯಾರ್ಥ)

ಇನ್ನು ಕೆಲವರಾದರೋ ಈ (ಮೂರು) ವಿಕಲ್ಪಗಳಲ್ಲಿ ಒಂದರಿಂದಲೂ ಹೀಗೆ ಮೇಲೆ ಹೇಳಿದ ಆತ್ಮನನ್ನು ಅರಿತುಕೊಳ್ಳದೆ ಮತ್ತೊಬ್ಬರಿಂದ ಆಚಾರ್ಯರಿಂದ ಕೇಳಿ, "ಇದನ್ನೇ ಚಿಂತಿಸಿರಿ" ಎಂದು (ಅವರು) ಹೇಳಿದ್ದನ್ನು (ಕೇಳಿ), ಉಪಾಸನೆ ಮಾಡುತ್ತಾರೆ, ಶ್ರದ್ಧೆಯುಳ್ಳವರಾಗಿ ಚಿಂತಿಸುತ್ತಿರುವರು. ಅವರೂ ಮೃತ್ಯುವನ್ನು ಮೃತ್ಯುಯುಕ್ತವಾದ ಸಂಸಾರವನ್ನು ಎಂದರ್ಥ; ದಾಟಿಯೇ ತೀರುತ್ತಾರೆ, ಮೀರಿ ಹೋಗಿಯೇ ತೀರುತ್ತಾರೆ. ಶ್ರುತಿಪರಾಯಣರು–ಶ್ರುತಿಯು ಎಂದರೆ ಕೇಳುವದೇ ಪರವಾದ ಅಯನವು, ಗಮನವು, ಮೋಕ್ಷಮಾರ್ಗದಲ್ಲಿ ತೊಡಗುವದಕ್ಕೆ ಹೆಚ್ಚಿನ

---

1. 'ಏತೇಷು' ಮ॥ ಮೈ॥

2. 'ಕೇವಲಂ ಪರೋಪದೇಶಪ್ರಮಾಣಕಾಃ' ಮ॥ ಗು॥; 'ಕೇವಲಂ............ಪ್ರಮಾಣಾಃ' ಮೈ॥

3. 'ಮೃತ್ಯುಮ್ ಅತಿಕ್ರಾಮನ್ತೀತ್ಯತ್ರ' ಮ॥ 'ಅತಿಕ್ರಾಮನ್ತೀತಿ' ಮೈ॥ 'ಇತ್ಯಭಿಪ್ರಾಯಃ' ಎಂಬ ನಿ॥ ಅ॥ ಗು॥ ವಾ॥ದಲ್ಲಿ ಒಂದು ಇತಿ ಬೇಕಾಗಿದೆ.

ಸಾಧನವು ಯಾರಿಗೋ ಅವರು ಶ್ರುತಿಪರಾಯಣರು–ಮತ್ತೊಬ್ಬರು ಹೇಳಿದ್ದನ್ನೇ ಪ್ರಮಾಣ(ವೆನ್ನುವವರು), ತಾವೇ ವಿವೇಕವುಳ್ಳವರಲ್ಲ ಎಂದರ್ಥ. (ಅಂಥ ಅವರೂ ಮೃತ್ಯುವನ್ನು ದಾಟುತ್ತಾರೆ). ಹೀಗಿರುವಲ್ಲಿ ಪ್ರಮಾಣವಿಷಯಕ್ಕೆ ಸ್ವತಂತ್ರರಾಗಿರುವ ವಿವೇಕಿಗಳು ಮೃತ್ಯುವನ್ನು ದಾಟುವರು ಎಂದು ಹೇಳುವದೇನಿದೆ?[1] –ಎಂದು ಅಭಿಪ್ರಾಯ.

## ಜನ್ಮಕ್ಕೆ ಕಾರಣವಾದ ಕ್ಷೇತ್ರಕ್ಷೇತ್ರಜ್ಞಸಂಯೋಗ

(ಭಾಷ್ಯ)

೨೮೧. ಕ್ಷೇತ್ರಜ್ಞೇಶ್ವರೈಕತ್ವವಿಷಯಂ[2] ವಿಜ್ಞಾನಂ ಮೋಕ್ಷಸಾಧನಂ "ಯಜ್ಜ್ಞಾತ್ವಾಮೃತಮಶ್ನುತೇ" (೧೩-೧೨) ಇತ್ಯುಕ್ತಮ್। ತತ್ ಕಸ್ಮಾತ್ ಹೇತೋಃ ಇತಿ? ತದ್ಧೇತುಪ್ರದರ್ಶನಾರ್ಥಂ ಶ್ಲೋಕಃ ಆರಭ್ಯತೇ[3]॥

(ಭಾಷ್ಯಾರ್ಥ)

ಕ್ಷೇತ್ರಜ್ಞ, ಈಶ್ವರ–(ಇಬ್ಬರೂ) ಒಂದೇ ಎಂಬ ವಿಷಯದ ಜ್ಞಾನವು ಮೋಕ್ಷ ಸಾಧನವು ಎಂಬುದನ್ನು "ಅದನ್ನು ಅರಿತುಕೊಂಡರೆ ಅಮೃತವನ್ನು ಹೊಂದುತ್ತಾನೆ" (೧೩-೧೨) ಎಂದು ಹೇಳಿತ್ತಷ್ಟೆ. ಇದಕ್ಕೆ ಕಾರಣವೇನು? ಎಂದರೆ ಆ ಕಾರಣವನ್ನು ತಿಳಿಸುವದಕ್ಕೋಸ್ಕರ (ಈ) ಶ್ಲೋಕವನ್ನು ಆರಂಭಿಸಿರುತ್ತದೆ:—

**ಯಾವತ್ ಸಞ್ಜಾಯತೇ ಕಿಂಚಿತ್ ಸತ್ತ್ವಂ ಸ್ಥಾವರಜಙ್ಗಮಮ್।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್ವಿದ್ಧಿ ಭರತರ್ಷಭ ॥ ೨೬ ॥**

೨೬. ಭರತರ್ಷಭನೆ, ಸ್ಥಾವರಜಂಗಮ(ರೂಪ)ವಾದ ಸತ್ತ್ವವು ಯಾವದೊಂದಿಷ್ಟು ಹುಟ್ಟುವದೋ ಅದು ಕ್ಷೇತ್ರಕ್ಷೇತ್ರಜ್ಞಸಂಯೋಗದಿಂದಲೇ (ಎಂದು) ತಿಳಿ.

---

1. ಮತ್ತೊಬ್ಬರ ಮಾತನ್ನು ನಂಬಿ ಸಾಧನೆಮಾಡುವವರಿಗೇ ಮುಕ್ತಿಯಾಗುವದೆಂದ ಮೇಲೆ ತಾವೇ ಅರಿತು ಸಾಧನವನ್ನು ಅನುಷ್ಠಾನಮಾಡುವವರಿಗೆ ಆಗುವದೆಂಬದನ್ನು ಹೇಳಬೇಕಾದದ್ದೇನು?–ಎಂದರ್ಥ.

2. 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಇತಿ ಕ್ಷೇತ್ರಜ್ಞೇಶ್ವರೈಕತ್ವವಿಷಯಂ' ಮ॥ ಮೈ॥ ಗು॥

3. ಇಲ್ಲಿ 'ಯಸ್ಮಾತ್' ಎಂದು ಹೆಚ್ಚಾಗಿ ಮ॥ ಮೈ॥

(ಭಾಷ್ಯ)

೨೮೨. ಯಾವತ್ ಯತ್ ಕಿಂಚಿತ್ ಸಞ್ಜಾಯತೇ ಸಮುತ್ಪದ್ಯತೇ ಸತ್ತ್ವಂ ವಸ್ತು । ಕಿಮ್ ಅವಿಶೇಷೇಣ [1] ? ನೇತ್ಯಾಹ–ಸ್ಥಾವರಜಙ್ಗಮಂ ಸ್ಥಾವರಂ ಜಙ್ಗಮಂ ಚ ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತತ್ ಜಾಯತೇ ಇತ್ಯೇವಂ ವಿದ್ಧಿ ಜಾನೀಹಿ ಹೇ ಭರತರ್ಷಭ ॥

(ಭಾಷ್ಯಾರ್ಥ)

ಎಲೈ ಭರತಶ್ರೇಷ್ಠನೆ, ಯಾವ ಯಾವ ಸತ್ತ್ವವು ವಸ್ತುವು ಹುಟ್ಟುವದೋ ಉಂಟಾಗುತ್ತಿರುವದೋ–(ಯಾವ) ವಿಶೇಷವೂ ಇಲ್ಲದೆಯೆ ? ಎಂದರೆ ಹಾಗಲ್ಲ (ಎಂದು ಭಗವಂತನು) ಹೇಳುತ್ತಾನೆ : ಸ್ಥಾವರಜಂಗಮವು, ಸ್ಥಾವರವೂ ಜಂಗಮವೂ (ಯಾವದು ಉಂಟಾಗಲಿ), ಅದು ಕ್ಷೇತ್ರಕ್ಷೇತ್ರಜ್ಞರ ಸಂಯೋಗದಿಂದ ಉಂಟಾಗುತ್ತದೆ ಎಂದೀ ಪರಿಯಲ್ಲಿ ತಿಳಿದುಕೊ, ಅರಿತುಕೊ.

(ಭಾಷ್ಯ)

೨೮೩. ಕಃ ಪುನರಯಂ ಕ್ಷೇತ್ರಕ್ಷೇತ್ರಜ್ಞಯೋಃ ಸಂಯೋಗಃ ಅಭಿಪ್ರೇತಃ ? ನ ತಾವತ್ ರಜ್ಜ್ವಾ ಇವ ಘಟಸ್ಯ ಅವಯವಸಂಶ್ಲೇಷದ್ವಾರಕಃ ಸಮ್ಬನ್ಧವಿಶೇಷಃ ಸಂಯೋಗಃ ಕ್ಷೇತ್ರೇಣ ಕ್ಷೇತ್ರಜ್ಞಸ್ಯ ಸಮ್ಭವತಿ । ಆಕಾಶವತ್ ನಿರವಯವತ್ವಾತ್ । ನಾಪಿ ಸಮವಾಯಲಕ್ಷಣಃ ತನ್ತುಪಟಯೋರಿವ [2] ಕ್ಷೇತ್ರಕ್ಷೇತ್ರಜ್ಞಯೋಃ ಇತರೇತರ ಕಾರ್ಯಕಾರಣಭಾವಾನಭ್ಯುಪಗಮಾತ್ ಇತಿ । ಉಚ್ಯತೇ । ಕ್ಷೇತ್ರಕ್ಷೇತ್ರಜ್ಞಯೋಃ ವಿಷಯವಿಷಯಿಣೋಃ ಭಿನ್ನಸ್ವಭಾವಯೋಃ ಇತರೇತರತದ್ಧರ್ಮಾಧ್ಯಾಸಲಕ್ಷಣಃ ಸಂಯೋಗಃ ಕ್ಷೇತ್ರಜ್ಞಸ್ವರೂಪವಿವೇಕಾಭಾವನಿಬನ್ಧನಃ ರಜ್ಜುಶುಕ್ತಿಕಾದೀನಾಂ ತದ್ವಿವೇಕಜ್ಞಾನಾಭಾವಾತ್ ಅಧ್ಯಾರೋಪಿತಸರ್ಪರಜತಾದಿಸಂಯೋಗವತ್ । ಸೋಽಯಮ್ ಅಧ್ಯಾಸಸ್ವರೂಪಃ ಕ್ಷೇತ್ರಕ್ಷೇತ್ರಜ್ಞಸಂಯೋಗಃ ಮಿಥ್ಯಾಜ್ಞಾನ ಲಕ್ಷಣಃ । ಯಥಾಶಾಸ್ತ್ರಂ ಕ್ಷೇತ್ರಕ್ಷೇತ್ರಜ್ಞಲಕ್ಷಣಭೇದಪರಿಜ್ಞಾನಪೂರ್ವಕಂ ಪ್ರಾಗ್ದರ್ಶಿತರೂಪಾತ್ ಕ್ಷೇತ್ರಾತ್ ಮುಞ್ಜಾದಿವ ಇಷೀಕಾಂ ಯಥೋಕ್ತಲಕ್ಷಣಂ ಕ್ಷೇತ್ರಜ್ಞಂ ಪ್ರವಿಭಜ್ಯ [3] " ನ ಸತ್ತನ್ನಾಸದುಚ್ಯತೇ " (೧೩-೧೨) ಇತ್ಯನೇನ ನಿರಸ್ತ

1. ' ಕಿಮ್ ಅವಿಶೇಷೇಣ ಇತಿ ' ಮೈ॥ ; ' ಕಿಂ ವಿಶೇಷೇಣ ಇತ್ಯಾಹ ' ಮು॥; ' ಕಿಮ್ ಅವಿಶೇಷೇಣ ಇತ್ಯಾಹ ' ಸ॥

2. ಮು॥ ಮೈ॥ ಗಳಲ್ಲಿಲ್ಲ.

3. ಪ್ರವಿಭಜ್ಯಮಾನಮ್ ' ಮು॥

ಸರ್ವೋಪಾಧಿವಿಶೇಷಂ ಜ್ಞೇಯಂ ಬ್ರಹ್ಮ ಸ್ವರೂಪೇಣ[1] ಯಃ ಪಶ್ಯತಿ ಕ್ಷೇತ್ರಂ ಚ ಮಾಯಾನಿರ್ಮಿತಹಸ್ತಿಸ್ವಪ್ನದೃಷ್ಟವಸ್ತುಗನ್ಧರ್ವನಗರಾದಿವತ್[2] ಅಸದೇವ ಸದಿವ ಅವಭಾಸತೇ ಇತ್ಯೇವಂ ನಿಶ್ಚಿತವಿಜ್ಞಾನೋ ಯಃ, ತಸ್ಯ ಯಥೋಕ್ತಸಮ್ಯಗ್ದರ್ಶನ ವಿರೋಧಾತ್ ಅಪಗಚ್ಛತಿ ಮಿಥ್ಯಾಜ್ಞಾನಮ್ । ತಸ್ಯ ಜನ್ಮಹೇತೋಃ ಅಪಗಮಾತ್ "ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ" (೧೩-೨೩) ಇತ್ಯನೇನ ವಿದ್ವಾನ್ ಭೂಯೋ ನಾಭಿಜಾಯತೇ ಇತಿ ಯತ್ ಉಕ್ತಮ್, ತತ್ ಉಪಪನ್ನ ಮುಕ್ತಮ್ ||

(ಭಾಷ್ಯಾರ್ಥ)

(ಆಕ್ಷೇಪ):—ಈ ಕ್ಷೇತ್ರಕ್ಷೇತ್ರಜ್ಞರ ಸಂಯೋಗವೆಂಬುದು ಯಾವದೆಂದು (ಭಗವಂತನ) ಅಭಿಪ್ರಾಯವು? ಮೊದಲನೆಯದಾಗಿ ಹಗ್ಗಕ್ಕೂ ಗಡಿಗೆಗೂ (ಆಗು) ವಂತೆ ಅವಯವಗಳ ಕೂಡುವಿಕೆಯಿಂದಾಗುವ ಸಂಬಂಧವಿಶೇಷವಾದ **ಸಂಯೋಗವು** ಕ್ಷೇತ್ರಕ್ಕೂ ಕ್ಷೇತ್ರಜ್ಞನಿಗೂ ಆಗುವ ಹಾಗಿಲ್ಲ; ಏಕೆಂದರೆ (ಆತ್ಮನು) ಆಕಾಶದಂತೆ ಅವಯವಗಳಿಲ್ಲದವ(ನಾಗಿರುತ್ತಾನೆ). **ಸಮವಾಯ**ರೂಪವಾದ (ಸಂಬಂಧವೂ ಆಗುವಂ)ತಿಲ್ಲ; ಏಕೆಂದರೆ ನೂಲುಬಟ್ಟೆಗಳಿಗಿರುವಂತೆ ಕ್ಷೇತ್ರಕ್ಷೇತ್ರಜ್ಞರುಗಳಿಗೆ ಪರಸ್ಪರವಾಗಿ ಕಾರ್ಯಕಾರಣಭಾವವನ್ನು[3] ಒಪ್ಪಿರುವದಿಲ್ಲವಲ್ಲ!

(ಪರಿಹಾರ):—ಇದಕ್ಕೆ(ಉತ್ತರವನ್ನು) ಹೇಳುತ್ತೇವೆ: (ಒಂದು) **ವಿಷಯ, (ಮತ್ತೊಂದು) ವಿಷಯಿ—(ಹೀಗಿದ್ದು), ಬೇರೆಬೇರೆಯ ಸ್ವಭಾವದವುಗಳಾಗಿರುವ ಕ್ಷೇತ್ರ, ಕ್ಷೇತ್ರಜ್ಞ—ಇವುಗಳಿಗೆ ಒಂದರಲ್ಲಿ ಮತ್ತೊಂದನ್ನೂ ಆ (ಮತ್ತೊಂದರ) ಧರ್ಮವನ್ನೂ (ಹುಟ್ಟುಗಟ್ಟುವದೆಂಬ) ಅಧ್ಯಾಸರೂಪ ವಾಗಿರುವದೇ ಸಂಯೋಗವು.** (ಇದಕ್ಕೆ) **ಕ್ಷೇತ್ರ, ಕ್ಷೇತ್ರಜ್ಞ—(ಇವರ) ಸ್ವರೂಪವನ್ನು ವಿಂಗಡಿಸಿ (ತಿಳಿದು)ಕೊಳ್ಳದೆ ಇರುವದೇ ಕಾರಣವು.** ಹಗ್ಗ, ಕಪ್ಪೆಯಚಿಪ್ಪು—ಮುಂತಾದವುಗಳಿಗೆ ಅವುಗಳನ್ನು ವಿಂಗಡಿಸಿ (ಅರಿತು)ಕೊಳ್ಳದೆ

---

1. 'ಬ್ರಹ್ಮಸ್ವರೂಪೇಣ' ಎಂಬ ಮ|| ಮೈ|| ಪಾಠಕ್ಕಿಂತ ಇದು ಮೇಲು.

2. "ಮಾಯಾನಿರ್ಮಿತಹಸ್ತಿಹಮ್ಯಾ೯ದಿವತ್, ಸ್ವಪ್ನದೃಷ್ಟವಸ್ತುವತ್, ಗನ್ಧರ್ವ ನಗರಾದಿವತ್" ಮ|| ಮೈ|| ಗು||

3. ಕಾರ್ಯಕಾರಣ, ಗುಣಗುಣಿ, ಕ್ರಿಯೆ ಕ್ರಿಯೆಯುಳ್ಳದ್ದು, ಜಾತಿವ್ಯಕ್ತಿ—ಈ ದ್ವಂದ್ವಗಳಿಗೆ ಸಮವಾಯಸಂಬಂಧವಿರುವದೆಂದು ತಾರ್ಕಿಕರ ಕಲ್ಪನೆ. ಕ್ಷೇತ್ರಕ್ಷೇತ್ರಜ್ಞರಿಗೆ ಈ ಯಾವ ಬಗೆಯ ಸಂಬಂಧವೂ ಇಲ್ಲ.

ಇರುವದರಿಂದ ಆರೋಪಿತವಾಗಿರುವ ಹಾವು, ಬೆಳ್ಳಿ-ಮುಂತಾದವುಗಳ ಸಂಯೋಗದಂತೆಯೇ (ಇದು). ಈ ಅಧ್ಯಾಸರೂಪವಾದ ಕ್ಷೇತ್ರಕ್ಷೇತ್ರಜ್ಞರ ಸಂಯೋಗವು ಮಿಥ್ಯಾಜ್ಞಾನರೂಪವಾಗಿರುತ್ತದೆ[1].

ಶಾಸ್ತ್ರದಲ್ಲಿ (ಹೇಳಿರು)ವಂತೆ ಕ್ಷೇತ್ರಕ್ಷೇತ್ರಜ್ಞರ ಲಕ್ಷಣಗಳ ಭೇದವನ್ನು ತಿಳಿದುಕೊಳ್ಳುವ ಮೂಲಕ ಹಿಂದೆ ತಿಳಿಸಿರುವ ರೂಪದ ಕ್ಷೇತ್ರದಿಂದ-ನೊದೆಹುಲ್ಲಿನಿಂದ (ಅದರ) ಗಟ್ಟಿಯಾದ ಭಾಗವನ್ನು (ಬಿಡಿಸಿಕೊಳ್ಳು)ವಂತೆ ಹಿಂದೆ ಹೇಳಿರುವಂಥ **ಕ್ಷೇತ್ರಜ್ಞನನ್ನು ವಿಂಗಡಿಸಿ "ಅದು ಸತ್ತೆನಿಸುವದಿಲ್ಲ, ಅಸತ್ತೆನಿಸುವದಿಲ್ಲ" (೧೩-೧೨) ಎಂಬೀ (ಶ್ಲೋಕದ ರೀತಿ)ಯಿಂದ ಯಾವದೊಂದು ಉಪಾಧಿಯೂ ಇಲ್ಲದ ಜ್ಞೇಯವಾದ ಬ್ರಹ್ಮವೆಂದು (ಅವನ) ಸ್ವರೂಪದಿಂದ ಯಾವನು ಕಂಡುಕೊಳ್ಳುವನೋ ಮತ್ತು ಕ್ಷೇತ್ರವನ್ನು ಮಾಯೆಯಿಂದ ನಿರ್ಮಿತವಾದ ಆನೆ, ಕನಸಿನಲ್ಲಿ ಕಂಡ ವಸ್ತು, ಗಂಧರ್ವನಗರ-ಮುಂತಾದವುಗಳಂತೆ (ತಾನು) ಅಸತ್ತಾಗಿಯೇ (ಇದ್ದುಕೊಂಡು) ಸತ್ತಿನಂತೆ ಕಾಣುತ್ತದೆ-ಎಂದೀ ಪರಿಯಲ್ಲಿ ಯಾವನಿಗೆ ನಿಶ್ಚಿತವಾದ ಅರಿವು ಉಂಟಾಗುವದೋ ಅವನಿಗೆ ಈ ಹೇಳಿದ ಸಮ್ಯಗ್ದರ್ಶನಕ್ಕೆ ವಿರುದ್ಧವಾಗಿರುವದರಿಂದ ಮಿಥ್ಯಾಜ್ಞಾನವು ತೊಲಗುತ್ತದೆ.** ಅವನಿಗೆ ಜನ್ಮಕ್ಕೆ ಕಾರಣವಾದ (ಈ ಅಜ್ಞಾನವು) ಹೋಗಿರುವದರಿಂದ "ಯಾವನು ಹೀಗೆ ಪುರುಷನನ್ನೂ ಪ್ರಕೃತಿಯನ್ನೂ ಗುಣಗಳೊಡನೆ ಅರಿತುಕೊಳ್ಳುವನೋ" (೧೩-೨೩) ಎಂಬೀ (ಶ್ಲೋಕ)ದಿಂದ ಜ್ಞಾನಿಯು ಮತ್ತೆ ಹುಟ್ಟುವದಿಲ್ಲ-ಎಂದು ಹೇಳಿದೆಯಲ್ಲ, ಅದು ಯುಕ್ತಿಗನುಸಾರವಾಗಿ[2] ಹೇಳಿದ್ದಾಗಿದೆ.

## ಅವಿದ್ಯೆಯನ್ನು ಕಳೆಯುವ ಜ್ಞಾನ

(ಭಾಷ್ಯ)

೨೮೪. "ನ ಸ ಭೂಯೋಽಭಿಜಾಯತೇ" (೧೩-೨೩) ಇತಿ ಸಮ್ಯಗ್ದರ್ಶನಫಲಮ್ ಅವಿದ್ಯಾದಿಬೀಜನಿವೃತ್ತಿದ್ವಾರೇಣ ಜನ್ಮಾಭಾವಃ ಉಕ್ತಃ। ಜನ್ಮಕಾರಣಂ

---

1. ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ-ಎರಡೂ ಪರ್ಯಾಯಶಬ್ದಗಳು ; ಸೂ. ಭಾ. ಅಧ್ಯಾಸಭಾಷ್ಯವನ್ನು ನೋಡಿ.

2. ಅಧ್ಯಾಸದಿಂದಾಗಿರುವ ಪ್ರಕೃತಿಪುರುಷಸಂಯೋಗವೇ ಜನ್ಮಕ್ಕೆ ನಿಮಿತ್ತವಾಗಿರುವದರಿಂದ ಸರಿಯಾದ ತಿಳಿವಳಿಕೆಯಿಂದ ಅದು ಇಲ್ಲವಾಗುವದೆಂಬುದು ಯುಕ್ತವಾಗಿದೆ ಎಂದು ಭಾವ.

ಚ ಅವಿದ್ಯಾನಿಮಿತ್ತಕಃ ಕ್ಷೇತ್ರಕ್ಷೇತ್ರಜ್ಞಸಂಯೋಗಃ ಉಕ್ತಃ। ಅತಃ ತಸ್ಯಾ ಅವಿದ್ಯಾಯಾಃ ನಿವರ್ತಕಂ ಸಮ್ಯಗ್ದರ್ಶನಮ್ ಉಕ್ತಮಪಿ ಪುನಃ ಶಬ್ದಾನ್ತರೇಣ ಉಚ್ಯತೇ—

(ಭಾಷ್ಯಾರ್ಥ)

"ಅವನು ಮತ್ತೆ ಹುಟ್ಟುವದಿಲ್ಲ'' (೧೩-೨೩) ಎಂಬ (ಶ್ಲೋಕದಲ್ಲಿ) ಸಮ್ಯಗ್ದರ್ಶನಕ್ಕೆ ಫಲವು ಅವಿದ್ಯೆಯೇ ಮುಂತಾದ ಸಂಸಾರಬೀಜವನ್ನು ಹೋಗಲಾಡಿಸುವದರ ಮೂಲಕ ಜನ್ಮವಿಲ್ಲದಂತೆ ಆಗುವದು ಎಂದು ಹೇಳಿರುತ್ತದೆ. ಮತ್ತು ಜನ್ಮಕ್ಕೆ ಕಾರಣವು ಅವಿದ್ಯೆಯೆಂಬ ನಿಮಿತ್ತದಿಂದ ಆಗಿರುವ ಕ್ಷೇತ್ರಕ್ಷೇತ್ರಜ್ಞಸಂಯೋಗವು ಎಂದು (ಹಿಂದಿನ ಶ್ಲೋಕದಲ್ಲಿ) ಹೇಳಿದ್ದಾಗಿದೆ. ಆದ್ದರಿಂದ ಆ ಅವಿದ್ಯೆಯನ್ನು ಕಳೆಯುವ ಸಮ್ಯಗ್ದರ್ಶನವನ್ನು (ಈ ಮೊದಲೇ) ಹೇಳಿದ್ದರೂ (ಅದನ್ನು) ಮತ್ತೂ ಬೇರೆಯ ಮಾತುಗಳಿಂದ ಹೇಳಲಾಗುತ್ತದೆ :—

**ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯನ್ತಂ ಯಃ ಪಶ್ಯತಿ ಸ ಪಶ್ಯತಿ ॥ ೨೭ ॥**

೨೭. ಸರ್ವಭೂತಗಳಲ್ಲಿಯೂ ಸಮನಾಗಿ ಇರುವ, (ಅವು) ನಾಶವಾದರೆ ನಾಶವಾಗದೆ ಇರುವ ಪರಮೇಶ್ವರನನ್ನು ಯಾವನು ಕಂಡುಕೊಳ್ಳುತ್ತಾನೋ ಅವನೇ ಕಾಣುತ್ತಾನೆ.

(ಭಾಷ್ಯ)

೨೮೫. ಸಮಂ ನಿರ್ವಿಶೇಷಂ ತಿಷ್ಠನ್ತಂ ಸ್ಥಿತಿಂ ಕುರ್ವನ್ತಮ್ । ಕ್ವ? ಸರ್ವೇಷು[1] ಭೂತೇಷು ಬ್ರಹ್ಮಾದಿಸ್ಥಾವರಾನ್ತೇಷು ಪ್ರಾಣಿಷು । ಕಮ್ ? ಪರಮೇಶ್ವರಂ ದೇಹೇನ್ದ್ರಿಯಮನೋಬುದ್ಧ್ಯವ್ಯಕ್ತಾತ್ಮನಃ ಅಪೇಕ್ಷ್ಯ ಪರಮಶ್ಚ ಅಸೌ ಈಶ್ವರಶ್ಚ ಈಶನಶೀಲಶ್ಚ ಇತಿ[2] ಪರಮೇಶ್ವರಃ ತಂ ಸರ್ವೇಷು ಭೂತೇಷು ಸಮಂ ತಿಷ್ಠನ್ತಮ್ । ತಾನಿ ವಿಶಿನಷ್ಟಿ 'ವಿನಶ್ಯತ್ಸು' ಇತಿ, ತಂ ಚ ಪರಮೇಶ್ವರಮ್ 'ಅವಿನಶ್ಯನ್ತಮ್' ಇತಿ, ಭೂತನಾಂ ಪರಮೇಶ್ವರಸ್ಯ ಚ ಅತ್ಯನ್ತವೈಲಕ್ಷಣ್ಯಪ್ರದರ್ಶನಾರ್ಥಮ್ । ಕಥಮ್ ? ಸರ್ವೇಷಾಂ ಹಿ ಭಾವವಿಕಾರಾಣಾಂ ಜನಿಲಕ್ಷಣಃ ಭಾವವಿಕಾರಃ ಮೂಲಮ್ । ಜನ್ಮೋತ್ತರಭಾವಿನಃ ಅನ್ಯೇ ಸರ್ವೇ ಭಾವವಿಕಾರಾಃ ವಿನಾಶಾನ್ತಾಃ । ವಿನಾಶಾತ್ ಪರಃ ನ ಕಶ್ಚಿತ್ ಅಸ್ತಿ ಭಾವವಿಕಾರಃ। ಭಾವಾಭಾವಾತ್। ಸತಿ ಹಿ ಧರ್ಮಿಣಿ

---

1. 'ಸರ್ವೇಷು ಸಮಸ್ತೇಷು' ಮು॥ ಮೈ॥ ವಾ॥
2. 'ಅಪೇಕ್ಷ್ಯ ಪರಮೇಶ್ವರಃ' ಎಂದಿಷ್ಟೇ ಅ॥ ನಿ॥ ವಾ॥

ಧರ್ಮಾ ಭವನ್ತಿ । ಅತಃ ಅನ್ತ್ಯಭಾವವಿಕಾರಾಭಾವಾನುವಾದೇನ[1] ಪೂರ್ವಭಾವಿನಃ[2] ಸರ್ವೇ ಭಾವವಿಕಾರಾಃ ಪ್ರತಿಷಿದ್ಧಾ ಭವನ್ತಿ ಸಹ ಕಾರ್ಯೈಃ[3] ।ತಸ್ಮಾತ್ ಸರ್ವಭೂತೈಃ ವೈಲಕ್ಷಣ್ಯಮ್ ಅತ್ಯನ್ತಮೇವ ಪರಮೇಶ್ವರಸ್ಯ ಸಿದ್ಧಮ್ । ನಿರ್ವಿಶೇಷತ್ವಮ್, ಏಕತ್ವಂ ಚ । ಯ ಏವಂ ಯಥೋಕ್ತಂ ಪರಮೇಶ್ವರಂ ಪಶ್ಯತಿ ಸ ಪಶ್ಯತಿ[4] ॥

(ಭಾಷ್ಯಾರ್ಥ)

ಸಮವಾಗಿ ಎಂದರೆ (ಯಾವ) ವಿಶೇಷವೂ ಇಲ್ಲದೆ, 'ತಿಷ್ಠನ್ತಮ್' ಇರುವಿಕೆಯನ್ನು ಮಾಡುತ್ತಿರುವ[5] (ಎಂದರ್ಥ). ಎಲ್ಲಿ? ಸರ್ವಭೂತಗಳಲ್ಲಿಯೂ ಬ್ರಹ್ಮನನ್ನು ಮೊದಲುಮಾಡಿಕೊಂಡು ಸ್ಥಾವರದವರೆಗಿನ ಪ್ರಾಣಿಗಳಲ್ಲಿ. (ಇರುವ) ಯಾವನನ್ನು? ಪರಮೇಶ್ವರನನ್ನು–**ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅವ್ಯಕ್ತ**[6]– **ಎಂಬ ಆತ್ಮರುಗಳಿಗೆ ಹೋಲಿಸಿದರೆ ಪರಮನೂ ಈಶ್ವರನೂ ಎಂದರೆ (ಎಲ್ಲವನ್ನೂ) ಆಳುವ ಸ್ವಭಾವದವನೂ ಆಗಿರುವದರಿಂದ (ಆತ್ಮನು) ಪರಮೇಶ್ವರನು;** ಆ ಸರ್ವಭೂತಗಳಲ್ಲಿಯೂ ಸಮನಾಗಿ ಇದ್ದುಕೊಂಡಿರುವ (ಪರಮೇಶ್ವರನನ್ನು). ಆ (ಭೂತಗಳನ್ನು) 'ನಾಶವಾಗುವ' ಎಂದೂ ಆ ಪರಮೇಶ್ವರನನ್ನು 'ನಾಶವಾಗದಿರುವ' ಎಂದೂ, ಭೂತಗಳಿಗೂ ಪರಮೇಶ್ವರನಿಗೂ ಅತ್ಯಂತವಾಗಿರುವ ವೈಲಕ್ಷಣವನ್ನು ತಿಳಿಸುವದಕ್ಕಾಗಿ, (ಭಗವಂತನು) ವಿಶೇಷಣದಿಂದ (ತಿಳಿಸಿರು) ತ್ತಾನೆ. (ಅದು) ಹೇಗೆ? (ಎಂದರೆ) ಭಾವವಿಕಾರಗಳಿಗೆಲ್ಲ ಹುಟ್ಟುವಿಕೆಯೆಂಬ ಭಾವವಿಕಾರವೇ ಮೂಲವು; ವಿನಾಶದವರೆಗಿನ ಮಿಕ್ಕ ಭಾವವಿಕಾರಗಳೆಲ್ಲ ಜನ್ಮವಾದ ಮೇಲೆ ಉಂಟಾಗುವವುಗಳು. ವಿನಾಶವಾದಮೇಲೆ ಯಾವ ಭಾವವಿಕಾರವೂ ಇರುವದಿಲ್ಲ; ಏಕೆಂದರೆ (ಆಮೇಲೆ) ಭಾವವೇ[7] ಇರುವದಿಲ್ಲ. ಧರ್ಮಿಯಿದ್ದರೇ ಅಲ್ಲವೆ, ಧರ್ಮಗಳು ಇರುವದು? ಆದ್ದರಿಂದ ಕೊನೆಯ ಭಾವವಿಕಾರವು ಇಲ್ಲವೆಂದು ಅನುವಾದಮಾಡಿಕೊಂಡಿರುವದರಿಂದ[8] (ಅದರ) ಹಿಂದೆ ಆಗುವ ಭಾವವಿಕಾರಗಳು

---

1 'ವಿಕಾರಾಭಾವೋಪಪಾದನೇನ' ಮ॥

2. 'ತತ್ಪೂರ್ವಭಾವಿನಃ' ಮ॥ ವ್ಯಾ॥

3. 'ತತ್ಕಾರ್ಯೈಃ' ಮ॥ ವ್ಯಾ॥

4. 'ಪಶ್ಯತಿ ಇತಿ' ಮ॥

5. ಇರುವ.

6. ಅವ್ಯಕ್ತವೆಂದರೆ ಅವ್ಯಾಕೃತವು. ಅಹಂಕಾರದ ಅವ್ಯಕ್ತಾವಸ್ಥೆ. ಇಲ್ಲಿ ಅಹಂಕಾರವೆಂದಿಟ್ಟುಕೊಂಡರೂ ಸಾಕಾಗುತ್ತದೆ.

7. ಧರ್ಮಿಯಾದ ವಸ್ತುವೇ.

8. ನಾಶವಿಲ್ಲದವನೆಂದು ಇಲ್ಲಿ ಹೇಳಿರುವದು ಆತ್ಮನು ಯಾವ ವಿಕಾರವೂ ಇಲ್ಲದವನೆಂದು ತಿಳಿಸುವದಕ್ಕೆ–ಎಂದಭಿಪ್ರಾಯ.

ಯಾವವೂ ಇಲ್ಲವೆಂದು, ಅವುಗಳ ಕಾರ್ಯಗಳೊಡನೆ[1] ಅಲ್ಲಗಳೆದಂತೆ ಆಯಿತು. ಆದ್ದರಿಂದ ಸರ್ವಭೂತಗಳಿಗಿಂತಲೂ ಪರಮೇಶ್ವರನಿಗೆ ಅತ್ಯಂತವೈಲಕ್ಷಣ್ಯವು[2] ಸಿದ್ಧವಾಯಿತು. ಅವನು (ಯಾವ) ವಿಶೇಷವೂ ಇಲ್ಲದವನೆಂತಲೂ ಒಬ್ಬನೇ ಎಂತಲೂ ಸಿದ್ಧವಾಯಿತು[3]. ಯಾವನು ಹೀಗೆ ಮೇಲೆ ಹೇಳಿದಂಥ ಪರಮೇಶ್ವರನನ್ನು ಕಂಡು ಕೊಂಡಿರುವನೋ ಅವನೇ ಕಂಡಿರುತ್ತಾನೆ.

(ಭಾಷ್ಯ)

೨೮೬. ನನು ಸರ್ವೋಽಪಿ ಲೋಕಃ ಪಶ್ಯತಿ, ಕಿಂ ವಿಶೇಷಣೇನ ಇತಿ ? ಸತ್ಯಂ ಪಶ್ಯತಿ, ಕಿಂ ತು ವಿಪರೀತಂ ಪಶ್ಯತಿ । ಅತಃ ವಿಶಿನಷ್ಟಿ ಸ ಏವ ಪಶ್ಯತಿ ಇತಿ । ಯಥಾ ತಿಮಿರದೃಷ್ಟಿಃ ಅನೇಕಂ ಚನ್ದ್ರಂ ಪಶ್ಯತಿ । ತಮ್ ಅಪೇಕ್ಷ್ಯ ಏಕಚನ್ದ್ರದರ್ಶೀ ವಿಶಿಷ್ಯತೇ ಸ ಏವ ಪಶ್ಯತಿ ಇತಿ । ತಥೈವ ಇಹಾಪಿ ಏಕಮ್ ಅವಿಭಕ್ತಂ ಯಥೋಕ್ತಮ್ ಆತ್ಮಾನಂ ಯಃ ಪಶ್ಯತಿ ಸ ವಿಭಕ್ತಾನೇಕಾತ್ಮವಿಪರೀತದರ್ಶಿಭ್ಯಃ ವಿಶಿಷ್ಯತೇ ಏವ ಪಶ್ಯತಿ ಇತಿ । ಇತರೇ ಪಶ್ಯನ್ತೋಽಪಿ ನ ಪಶ್ಯನ್ತಿ । ವಿಪರೀತದರ್ಶಿತ್ವಾತ್ ಅನೇಕಚನ್ದ್ರದರ್ಶಿವತ್ ಇತ್ಯರ್ಥಃ ।

(ಭಾಷ್ಯಾರ್ಥ)

(ಆಕ್ಷೇಪ) :—ಪ್ರತಿಯೊಬ್ಬ ಮನುಷ್ಯನೂ ಕಂಡೇ ಇರುತ್ತಾನೆ (ಹೀಗಿರುವಲ್ಲಿ ಅವನೇ ಕಂಡಿರುತ್ತಾನೆ ಎಂದು) ವಿಶೇಷವಾಗಿ ಹೇಳಿದ್ದರಿಂದ ಪ್ರಯೋಜನವೇನು ?

(ಪರಿಹಾರ) :—ನಿಜ. ಪ್ರತಿಯೊಬ್ಬನೂ ಕಂಡಿರುತ್ತಾನೆ. ಆದರೆ (ಅವನು) ಕಂಡಿರುವದು ವಿರುದ್ಧವಾಗಿ. ಆದ್ದರಿಂದ ಅವನೇ ಕಂಡಿರುತ್ತಾನೆ ಎಂದು (ಭಗವಂತನು) ವಿಶೇಷವಾಗಿ ಹೇಳುತ್ತಿದಾನೆ ಕಣ್ಣುಪರೆಯಿದ್ದವನಿಗೆ ಅನೇಕ ಚಂದ್ರರು ಕಾಣಿಸುತ್ತಾರೆ ; ಅವನಿಗೆ ಹೋಲಿಸಿದರೆ ಒಬ್ಬ ಚಂದ್ರನನ್ನು ಕಾಣುವವನನ್ನು 'ಅವನೇ (ಸರಿಯಾಗಿ) ಕಂಡಿರುತ್ತಾನೆ' ಎಂದು ಹೇಗೆ ವಿಶೇಷವಾಗಿ (ಹೇಳುತ್ತೇ)ವೋ ಹಾಗೆಯೇ ಇಲ್ಲಿಯೂ ಒಬ್ಬನೇ ಆಗಿ ವಿಭಾಗವಿಲ್ಲದೆ ಇರುವ ಮೇಲೆ ಹೇಳಿರುವಂಥ ಆತ್ಮನನ್ನು ಯಾವನು ಕಂಡಿರುತ್ತಾನೋ, ಅವನನ್ನು ವಿಭಕ್ತರಾಗಿರುವ, ಅನೇಕ

---

1. ಹಿಂದಿನ ವಿಕಾರಕ್ಕೆ ಮುಂದಿನ ವಿಕಾರವು ಕಾರ್ಯವೆಂದಾದರೂ ಅರ್ಥಮಾಡಬಹುದು. ಜನ್ಮದಿಂದ ಆಗುವ ದುಃಖಾದಿಕಾರ್ಯವು ಎಂದೂ ಒಂದೊಂದು ವಿಕಾರಕ್ಕೂ ಅನೇಕ ಕಾರ್ಯಗಳುಂಟು ಎಂದೂ ಅರ್ಥಮಾಡಬಹುದು.

2. ಭೂತಗಳಿಗೆ ಎಲ್ಲಾ ವಿಕಾರಗಳೂ ಉಂಟು; ಆತ್ಮನಿಗೆ ಯಾವ ವಿಕಾರವೂ ಇಲ್ಲ. ಗೀ. ಭಾ. ೨-೨೮ (ಭಾ. ಭಾ. ೩೪) ನೋಡಿ.

3. ಏಕೆಂದರೆ ಅನೇಕತ್ವವೂ ಸವಿಶೇಷತ್ವವೂ ಭೂತಗಳಿಗೇ ಸೇರಿದ್ದು.

ಆತ್ಮರನ್ನು ತಪ್ಪಾಗಿ ಕಾಣುವ ಮಿಕ್ಕ (ಜನ)ರಿಗಿಂತಲೂ (ವಿಂಗಡಿಸಿ) 'ಅವನೇ ಕಂಡಿರುತ್ತಾನೆ' ಎಂದು ವಿಶೇಷವಾಗಿ ಹೇಳಿರುತ್ತದೆ. ಮಿಕ್ಕವರು ಕಂಡರೂ (ಸರಿಯಾಗಿ) ಕಂಡಿರುವದಿಲ್ಲ; ಏಕೆಂದರೆ (ಅವರು) ಅನೇಕ ಚಂದ್ರರನ್ನು ಕಾಣುವಂತೆ ವಿರುದ್ಧವಾಗಿ ಕಂಡವರಾಗಿರುತ್ತಾರೆ ಎಂದರ್ಥ.

(ಭಾಷ್ಯ)

೨೮೭. ಯಥೋಕ್ತಸ್ಯ ಸಮ್ಯಗ್ದರ್ಶನಸ್ಯ ಫಲವಚನೇನ ಸ್ತುತಿಃ ಕರ್ತವ್ಯಾ ಇತಿ ಶ್ಲೋಕಃ ಆರಭ್ಯತೇ—

(ಭಾಷ್ಯಾರ್ಥ)

(ಈ) ಹೇಳಿದಂಥ ಸಮ್ಯಗ್ದರ್ಶನಕ್ಕೆ ಫಲವನ್ನು ಹೇಳುವದರಿಂದ (ಅದನ್ನು) ಹೊಗಳುವದಕ್ಕಾಗಿ (ಈ) ಶ್ಲೋಕವನ್ನು ಆರಂಭಿಸಿರುತ್ತದೆ :—

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ ೨೮ ॥**

೨೮. ಏಕೆಂದರೆ ಎಲ್ಲೆಲ್ಲಿಯೂ ಸಮನಾಗಿ ಇದ್ದುಕೊಂಡಿರುವ ಈಶ್ವರನನ್ನು ಸಮನಾಗಿ ಕಾಣುತ್ತಿರುವವನು ತನ್ನನ್ನು ತನ್ನಿಂದ ಕೊಲ್ಲುವದಿಲ್ಲ. ಆದರಿಂದ ಪರಗತಿಯನ್ನು ಹೊಂದುತ್ತಾನೆ.

(ಭಾಷ್ಯ)

೨೮೮. ಸಮಂ ಪಶ್ಯನ್ ಉಪಲಭಮಾನಃ ಹಿ ಯಸ್ಮಾತ್ ಸರ್ವತ್ರ ಸರ್ವಭೂತೇಷು ಸಮವಸ್ಥಿತಂ ತುಲ್ಯತಯಾ ಅವಸ್ಥಿತಮ್ ಈಶ್ವರಮ್ ಅತೀತಾನನ್ತರಶ್ಲೋಕೋಕ್ತಲಕ್ಷಣಮ್ ಇತ್ಯರ್ಥಃ। ಸಮಂ ಪಶ್ಯನ್ ಕಿಮ್ ? ನ ಹಿನಸ್ತಿ ಹಿಂಸಾಂ ನ ಕರೋತಿ ಆತ್ಮನಾ ಸ್ವೇನೈವ ಸ್ವಮ್ ಆತ್ಮಾನಮ್। ತತಃ ತದಹಿಂಸನಾತ್ ಯಾತಿ ಪರಾಂ ಪ್ರಕೃಷ್ಟಾಂ ಗತಿಂ ಮೋಕ್ಷಾಖ್ಯಾಮ್ ॥

(ಭಾಷ್ಯಾರ್ಥ)

ಹಿ ಏಕೆಂದರೆ ಎಲ್ಲೆಲ್ಲಿಯೂ ಸಮಸ್ತ ಪ್ರಾಣಿಗಳಲ್ಲಿಯೂ ಸಮವಸ್ಥಿತನಾಗಿರುವ ಸಮನಾಗಿ ಇದ್ದುಕೊಂಡಿರುವ, ಹಿಂದಿನ ಶ್ಲೋಕದಲ್ಲಿ ಹೇಳಿರುವಂಥ ಈಶ್ವರನನ್ನು ಸಮವಾಗಿ ಕಾಣುತ್ತಿರುವವನು ಎಂದರ್ಥ. ಸಮವಾಗಿ ಕಾಣುತ್ತಿರುವವನು ಏನು ? (ಎಂದರೆ) : ಆತ್ಮನಿಂದ ತನ್ನಿಂದಲೇ, ಆತ್ಮನನ್ನು ತನ್ನನ್ನು ಕೊಲ್ಲುವದಿಲ್ಲ, ಕೊಲೆ ಮಾಡಿಕೊಳ್ಳುವದಿಲ್ಲ. ಆದರಿಂದ ಆ (ಆತ್ಮನನ್ನು) ಕೊಲ್ಲದೆ ಇರುವದರಿಂದ ಪರಗತಿಯನ್ನು ಉತ್ಕೃಷ್ಟವಾದ ಮೋಕ್ಷವೆಂಬ ಗತಿಯನ್ನು ಹೊಂದುತ್ತಾನೆ.

(ಭಾಷ್ಯ)

೨೮. ನನು ನೈವ ಕಶ್ಚಿತ್ ಪ್ರಾಣೀ ಸ್ವಯಂ ಸ್ವಮ್ ಆತ್ಮಾನಂ ಹಿನಸ್ತಿ। ಕಥಮ್ ಉಚ್ಯತೇ ಅಪ್ರಾಪ್ತಮ್, ನ ಹಿನಸ್ತಿ ಇತಿ। ಯಥಾ "ನ ಪೃಥಿವ್ಯಾಂ ನಾನ್ತರಿಕ್ಷೇ ನ ದಿವ್ಯಗ್ನಿಶ್ಚೇತವ್ಯಃ[1]" (ತೈ. ಸಂ. ೫-೨-೭) ಇತ್ಯಾದಿ। ನೈಷ ದೋಷಃ। ಅಜ್ಞಾನಾಮ್ ಆತ್ಮತಿರಸ್ಕರಣೋಪಪತ್ತೇಃ। ಸರ್ವೋ ಹಿ ಅಜ್ಞಃ ಅತ್ಯನ್ತಪ್ರಸಿದ್ಧಂ ಸಾಕ್ಷಾತ್ ಅಪರೋಕ್ಷಾತ್[2] ಆತ್ಮಾನಂ ತಿರಸ್ಕೃತ್ಯ ಅನಾತ್ಮಾನಮ್ ಆತ್ಮತ್ವೇನ ಪರಿಗೃಹ್ಯ ತಮಪಿ ಧರ್ಮಾಧರ್ಮೌ ಕೃತ್ವಾ ಉಪಾತ್ತಮ್ ಆತ್ಮಾನಂ ಹತ್ವಾ ಅನ್ಯಮಾತ್ಮಾನಮ್ ಉಪಾದತ್ತೇ ನವಮ್। ತಂ ಚ ಏವಂ ಹತ್ವಾ ಅನ್ಯಮ್। ಏವಂ[3] ತಮಪಿ ಹತ್ವಾ ಅನ್ಯಮ್–ಇತ್ಯೇವಮ್ ಉಪಾತ್ತಮ್[4] ಆತ್ಮಾನಂ ಹನ್ತಿ ಇತಿ ಆತ್ಮಹಾ ಸರ್ವೋಽಜ್ಞಃ। ಯಸ್ತು ಪರಮಾರ್ಥಾತ್ಮಾ ಅಸಾವಪಿ ಸರ್ವದಾ ಅವಿದ್ಯಯಾ ಹತ ಇವ[5]। ವಿದ್ಯಮಾನಫಲಾಭಾವಾತ್। ಇತಿ ಸರ್ವೇ ಆತ್ಮಹನ ಏವ ಅವಿದ್ವಾಂಸಃ। ಯಸ್ತು ಇತರಃ ಯಥೋಕ್ತಾತ್ಮದರ್ಶೀ ಸಃ ಉಭಯಥಾಪಿ ಆತ್ಮನಾ ಆತ್ಮಾನಂ ನ ಹಿನಸ್ತಿ ನ ಹನ್ತಿ[6]। ತತಃ ಯಾತಿ ಪರಾಂ ಗತಿಮ್ ಯಥೋಕ್ತಂ ಫಲಂ ತಸ್ಯ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

(ಆಕ್ಷೇಪ): ಯಾವನೊಬ್ಬ ಪ್ರಾಣಿಯೂ ತಾನೇ ತನ್ನ ಆತ್ಮನನ್ನು ಕೊಂದುಕೊಳ್ಳುವದಿಲ್ಲವಲ್ಲ! (ಹೀಗಿರುವಲ್ಲಿ ಅವನು ತನ್ನನ್ನು ತಾನು) ಕೊಂದುಕೊಳ್ಳುವದಿಲ್ಲ– ಎಂದು ಆಗದೆ ಇರುವದನ್ನು ಹೇಳಿ ನಿಷೇಧಿಸಿದ್ದು ಹೇಗೆ (ಸರಿ)? "ಭೂಮಿಯಲ್ಲಿ ಅಗ್ನಿಯನ್ನು ಚಯನಮಾಡಬಾರದು, ಅಂತರಿಕ್ಷದಲ್ಲಿಯೂ (ಮಾಡ)ಬಾರದು, ಸ್ವರ್ಗದಲ್ಲಿಯೂ (ಮಾಡ)ಬಾರದು" (ತೈ. ಸಂ. ೫-೨-೭) ಎಂದಂತೆ ಆಗುವದಿಲ್ಲವೆ)[7]?

---

1. ಮ|| ಮೈ|| ಗು|| ಪಾಠವಿದು ; ಅ|| ನಿ|| ವಾ||ಗಳಲ್ಲಿರುವದು ಮಂತ್ರಾರ್ಥ.

2. 'ಅಪರೋಕ್ಷಮ್' ಮ|| ಮೈ||

3. 'ತಂ ಚ ...... ಏವಂ' ಇಲ್ಲಿಯವರೆಗಿನ ಭಾಷ್ಯಭಾಗವು ಮ|| ಮೈ|| ಗಳಲ್ಲಿಲ್ಲ.

4. "ಉಪಾತ್ತಮ್ ಉಪಾತ್ತಮ್" ಮ|| ಮೈ|| ಅ||

5. 'ಹತ ಏವ' ಮ|| ಮೈ||

6. 'ನ ಹಿನಸ್ತಿ' ಎಂದಿಷ್ಟೇ ನಿ||

7. ಅಂತರಿಕ್ಷದಲ್ಲಾಗಲಿ ಸ್ವರ್ಗದಲ್ಲಾಗಲಿ ಮನುಷ್ಯರು ಅಗ್ನಿಚಯನವನ್ನು ಮಾಡುವ ಸಂಭವವೇ ಇಲ್ಲ; ಆದ್ದರಿಂದ ಅದು ಅಪ್ರಾಪ್ತನಿಷೇಧ.

(ಪರಿಹಾರ) :—ಇದೇನೂ ತಪ್ಪಲ್ಲ. ಏಕೆಂದರೆ ಅಜ್ಞರು ಆತ್ಮನನ್ನು ಮುಚ್ಚಿ ಹಾಕುತ್ತಾರೆಂಬುದು ಯುಕ್ತವಾಗುತ್ತದೆ. ಅಜ್ಞನಾದವನು ಪ್ರತಿಯೊಬ್ಬನೂ ಅತ್ಯಂತ ಪ್ರಸಿದ್ಧನಾಗಿ ಸಾಕ್ಷಾತ್ತಾಗಿ ಅಪರೋಕ್ಷನಾಗಿರುವ ಆತ್ಮನನ್ನು ಮುಚ್ಚಿಹಾಕಿ ಅನಾತ್ಮ ವನ್ನೇ ಆತ್ಮನೆಂದು ಸ್ವೀಕರಿಸಿ ಧರ್ಮಾಧರ್ಮವನ್ನು ಮಾಡಿ ಹಾಗೆ ಸ್ವೀಕರಿಸಿದ ಆ (ಆತ್ಮನನ್ನು) ಕೂಡ ಕೊಂದು ಮತ್ತೊಬ್ಬ ಹೊಸ ಆತ್ಮನನ್ನು ತೆಗೆದುಕೊಳ್ಳು ತ್ತಾನೆ. ಅವನನ್ನೂ ಹೀಗೆಯೇ ಕೊಂದುಹಾಕಿ ಮತ್ತೊಬ್ಬನನ್ನು, ಹಾಗೂ ಅವ ನನ್ನೂ ಕೊಂದು ಮತ್ತೊಬ್ಬನನ್ನು (ಸ್ವೀಕರಿಸುತ್ತಾನೆ)[1]. ಇಂತೀ ಪರಿಯಲ್ಲಿ ತಾನು ಸ್ವೀಕರಿಸಿದ ಆತ್ಮನನ್ನು ಕೊಲ್ಲುತ್ತಾನಾದ್ದರಿಂದ ಪ್ರತಿಯೊಬ್ಬ ಅಜ್ಞನೂ ಆತ್ಮಘ್ನ (ನೆನಿಸುವನು. ಇನ್ನು) ನಿಜವಾಗಿಯೂ ಆತ್ಮ(ನಾದವನಿರು)ವನಲ್ಲ[2], ಅವನೂ ಅವಿದ್ಯೆ ಯಿಂದ ಯಾವಾಗಲೂ ಹತನಾದಂತೆಯೇ ಇರುತ್ತಾನೆ. ಏಕೆಂದರೆ ಇದ್ದರೆ (ಆಗಬೇ ಕಾದ) ಫಲವು ಆಗಿರುವದಿಲ್ಲ[3]. ಆದ್ದರಿಂದ ಅಜ್ಞರೆಲ್ಲರೂ ಆತ್ಮನನ್ನು ಕೊಲ್ಲು ವವರೇ[4]. ಆದರೆ ಮೇಲೆ ಹೇಳಿರುವ ಆತ್ಮನನ್ನು ಅರಿತುಕೊಂಡಿರುವ ಇನ್ನೊಬ್ಬ ನಿದಾನಲ್ಲ, ಆವನು (ಈ) ಎರಡು ಬಗೆಯಿಂದಲೂ[5] ತನ್ನಿಂದ ತನ್ನನ್ನು ಹಿಂಸೆ ಮಾಡಿ ಕೊಳ್ಳುವದಿಲ್ಲ, ಕೊಂದುಕೊಳ್ಳುವದಿಲ್ಲ. ಅದರಿಂದ ಪರಗತಿಯನ್ನು ಹೊಂದುತ್ತಾನೆ. ಮೇಲೆ ಹೇಳಿರುವ ಫಲವು[6] ಆವನಿಗೆ ಆಗುತ್ತದೆ ಎಂದರ್ಥ.

(ಭಾಷ್ಯ)

೨೯೦. ಸರ್ವಭೂತಸ್ಥಮ್ ಈಶ್ವರಂ ಸಮಂ ಪಶ್ಯನ್ ನ ಹಿನಸ್ತಿ ಆತ್ಮನಾ

---

1. ಅಹಂಪ್ರತ್ಯಯಗಮ್ಯನಾದ ಆತ್ಮನನ್ನು ಮರೆತು ದೇಹವೇ ತಾನೆಂದು ತಿಳಿದು ಆ ಆತ್ಮನನ್ನೂ ಬಿಟ್ಟು ಮತ್ತೊಂದು ದೇಹವನ್ನು ಧರ್ಮಾಧರ್ಮಗಳಿಂದ ಪಡೆದು ಆ ಹೊಸ ದೇಹ ವನ್ನೇ ತಾನೆಂದು ಭ್ರಾಂತಿಪಡುತ್ತಿರುತ್ತಾನೆ.

2. ಎಲ್ಲರೂ ಒಪ್ಪಿರುವ ಆತ್ಮನನ್ನೇ ಜನರು ದೇಹಾತ್ಮಬುದ್ಧಿಯಿಂದ ಮುಚ್ಚಿ ಆ ದೇಹಾತ್ಮನನ್ನೂ ಕೊಲ್ಲುತ್ತಿರುವದು ಪ್ರಸಿದ್ಧ. ಪರಮಾರ್ಥವಾಗಿ ಆತ್ಮನಾಗಿರುವ ಅದ್ವೈತಾತ್ಮ ನಂತೂ ಅವಿದ್ಯೆಯಿಂದ ನಿತ್ಯಹತನಾದಂತೆಯೇ ಆಗಿರುತ್ತಾನೆ. ಏಕೆಂದರೆ ದೇಹವ್ಯತಿರಿಕ್ತಾತ್ಮ ಜ್ಞಾನವಿದ್ದವನುಕೂಡ ಅವನನ್ನರಿಯದೆ ಸಂಸಾರವನ್ನು ಅನುಭವಿಸುತ್ತಿರುತ್ತಾನೆ ಎಂದರ್ಥ.

3. ಆತ್ಮನಿಂದ ಆಗಬೇಕಾದ ಫಲವು ಶೋಕನಾಶ; ಅಜ್ಞರಿಗೆ ಅದಾಗಿಲ್ಲ.

4. ದೇಹಾತ್ಮವಾದಿಗಳಾಗಲಿ, ದೇಹವ್ಯತಿರಿಕ್ತಾತ್ಮವಾದಿಗಳಾಗಲಿ—ಇಬ್ಬರೂ ಅಜ್ಞರೇ; ಆದ್ದರಿಂದ ಆತ್ಮಘಾತಿಗಳೇ. ಈ. ೩.

5. ಧರ್ಮಾಧರ್ಮಗಳಿಂದ ದೇಹಗಳನ್ನು ಪಡೆದು ಅವನ್ನು ಕೊಲ್ಲುವದು, ಪರ ಮಾರ್ಥಾತ್ಮನನ್ನು ಅವಿದ್ಯೆಯಿಂದ ಮರೆತು ಕೊಲ್ಲುವದು—ಈ ಎರಡು ಬಗೆಯಿಂದಲೂ.

6. ಆತ್ಮಜ್ಞಾನದಿಂದಾಗಬೇಕಾದ ಶೋಕನಾಶವು.

ಆತ್ಮಾನಮ್ ಇತ್ಯುಕ್ತಮ್ । ತತ್ ಅನುಪಪನ್ನಂ ಸ್ವಗುಣಕರ್ಮವೈಲಕ್ಷಣ್ಯಭೇದ ಭಿನ್ನೇಷು ಆತ್ಮಸು ಇತ್ಯೇತತ್ ಆಶಙ್ಕ್ಯ ಆಹ—

(ಭಾಷ್ಯಾರ್ಥ)

(ಆಕ್ಷೇಪ) :—ಸರ್ವಪ್ರಾಣಿಗಳಲ್ಲಿಯೂ ಇರುವ ಈಶ್ವರನನ್ನು ಸಮವಾಗಿ ಕಂಡರೆ ತನ್ನಿಂದ ತನ್ನನ್ನು ಕೊಂದುಕೊಳ್ಳುವದಿಲ್ಲ-ಎಂದು (ಹಿಂದಿನ ಶ್ಲೋಕದಲ್ಲಿ) ಹೇಳಿದೆಯಷ್ಟೆ. ಆತ್ಮರುಗಳು ತಮ್ಮ ತಮ್ಮ ಗುಣಗಳ ಮತ್ತು ಕರ್ಮಗಳ ವೈಲಕ್ಷಣ್ಯದಿಂದ ಆಗಿರುವ ಭೇದದಿಂದ ಬೇರೆಬೇರೆಯಾಗಿರುವದರಿಂದ ಅದು ಹೊಂದುವದಿಲ್ಲವಲ್ಲ !

(ಸಮಾಧಾನ) :—ಈ ಶಂಕೆಯನ್ನೆತ್ತಿ (ಭಗವಂತನು) ಹೇಳುತ್ತಾನೆ :—

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ೨೯ ॥**

೨೯. ಸರ್ವಪ್ರಕಾರದಿಂದಲೂ ಪ್ರಕೃತಿಯಿಂದಲೇ ಕರ್ಮಗಳು ಮಾಡಲ್ಪಡುತ್ತಿರುವವೆಂದು ಯಾವನು ಕಂಡುಕೊಂಡಿರುವನೋ ಹಾಗೂ ಆತ್ಮನು ಅಕರ್ತೃವೆಂದು (ಯಾವನು ಕಂಡುಕೊಂಡಿರುವನೋ) ಅವನೇ ಕಂಡಿರುತ್ತಾನೆ.

(ಭಾಷ್ಯ)

೨೯೧. ಪ್ರಕೃತ್ಯಾ ಪ್ರಕೃತಿಃ ಭಗವತಃ ಮಾಯಾ ತ್ರಿಗುಣಾತ್ಮಿಕಾ । "ಮಾಯಾಂ ತು ಪ್ರಕೃತಿಂ ವಿದ್ಯಾತ್" (ಶ್ವೇ. ೪-೧೦) ಇತಿ ಮಂತ್ರವರ್ಣಾತ್ । ತಯಾ ಪ್ರಕೃತ್ಯೈವ ಚ ನ ಅನ್ಯೇನ ಮಹದಾದಿಕಾರ್ಯಕಾರಣಾಕಾರಪರಿಣತಯಾ ಕರ್ಮಾಣಿ ವಾಙ್ಮನಃಕಾಯಾರಭ್ಯಾಣಿ ಕ್ರಿಯಮಾಣಾನಿ ನಿರ್ವರ್ತ್ಯಮಾನಾನಿ ಸರ್ವಶಃ ಸರ್ವಪ್ರಕಾರೈಃ ಯಃ ಪಶ್ಯತಿ ಉಪಲಭತೇ । ತಥಾ ಆತ್ಮಾನಂ ಕ್ಷೇತ್ರಜ್ಞಮ್ ಅಕರ್ತಾರಂ ಸರ್ವೋಪಾಧಿವಿವರ್ಜಿತಮ್ ಸ ಪಶ್ಯತಿ । ಸ ಪರಮಾರ್ಥದರ್ಶೀ ಇತ್ಯಭಿಪ್ರಾಯಃ । ನಿರ್ಗುಣಸ್ಯ ಅಕರ್ತುಃ ನಿರ್ವಿಶೇಷಸ್ಯ ಆಕಾಶಸ್ಯೇವ ಭೇದೇ ಪ್ರಮಾಣಾನುಪಪತ್ತಿಃ [1] ಇತ್ಯರ್ಥಃ ॥

(ಭಾಷ್ಯಾರ್ಥ)

ಪ್ರಕೃತಿಯಿಂದ—**ಪ್ರಕೃತಿ** (ಎಂದರೆ) ಭಗವಂತನ ತ್ರಿಗುಣಾತ್ಮಕವಾದ ಮಾಯೆ, "ಪ್ರಕೃತಿಯನ್ನು ಮಾಯೆಯೆಂದು ತಿಳಿಯಬೇಕು" (ಶ್ವೇ. ೪-೧೦)

1. 'ಪ್ರಮಾಣಾನುಪಪತ್ತೇಃ' ಮ॥

ಎಂಬ ಮಂತ್ರವರ್ಣದೀದ[1] (ಇದು ಸಿದ್ಧವಾಗುತ್ತದೆ). ಮಹತ್ತು ಮುಂತಾದ ಕಾರ್ಯಕಾರಣಗಳ[2] ರೂಪದಿಂದ ಪರಿಣತವಾದ ಪ್ರಕೃತಿಯಿಂದಲೇ, ಮತ್ತೊಂದ ರಿಂದಲ್ಲ, ವಾಕ್ಕು, ಮನಸ್ಸು, ಕಾಯ-ಇವುಗಳಿಂದ ಮಾಡುವ ಕರ್ಮಗಳು ಸರ್ವಶಃ ಸರ್ವಪ್ರಕಾರಗಳಿಂದಲೂ (ಪ್ರಕೃತಿಯಿಂದಲೇ) ಮಾಡಲ್ಪಡುತ್ತಿರುವವು. ಮಾಗಿಸ ಲ್ಪಡುತ್ತಿರುವವು (ಎಂದು) ಯಾವಾತನು ಕಂಡುಕೊಂಡಿರುವನೋ ಅರಿತುಕೊಂಡಿರು ವನೋ. ಹಾಗೂ ಆತ್ಮನು, ಕ್ಷೇತ್ರಜ್ಞನು, ಕರ್ತೃವಲ್ಲವೆಂದು, ಯಾವ ಉಪಾಧಿಯೂ ಇಲ್ಲದವನೆಂದು.[3] (ಅರಿತುಕೊಂಡಿರುವನೋ) ಅವನೇ ಕಂಡಿರುತ್ತಾನೆ; ಅವನೇ ಪರಮಾರ್ಥವನ್ನು ಕಂಡಿರುವಾತನು ಎಂದು ಅಭಿಪ್ರಾಯ. (ಯಾವ) ಗುಣಗಳೂ ಇಲ್ಲದ, ಕರ್ತೃವಲ್ಲದ, (ಯಾವ) ವಿಶೇಷವೂ ಇಲ್ಲದ (ಆತ್ಮನಿಗೆ) ಆಕಾಶಕ್ಕೆ ಹೇಗೆ[4] (ಭೇದವಿರುವದಕ್ಕೆ ಪ್ರಮಾಣವಿಲ್ಲವೋ ಹಾಗೆ) ಭೇದವುಂಟೆಂಬುದಕ್ಕೆ ಪ್ರಮಾಣವೇ ಹೊಂದುವದಿಲ್ಲ ಎಂದರ್ಥ.

(ಭಾಷ್ಯ)

೨೯೨. ಪುನರಪಿ ತದೇವ ಸಮ್ಯಗ್ದರ್ಶನಂ ಶಬ್ದಾನ್ತರೇಣ ಪ್ರಪಞ್ಚಯತಿ:—

(ಭಾಷ್ಯಾರ್ಥ)

ಮತ್ತು ಅದೇ ಸಮ್ಯಗ್ದರ್ಶನವನ್ನೇ ಬೇರೆಯ ಮಾತಿನಿಂದ ವಿಸ್ತರಿಸುತ್ತಾನೆ—

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥**

೩೦. ಯಾವಾಗ ಭೂತಗಳ ಪೃಥಗ್ಭಾವವು ಒಬ್ಬನಲ್ಲಿರುವದನ್ನು ಅನುದರ್ಶನಮಾಡಿಕೊಳ್ಳುವನೋ, ಮತ್ತು ಅದರಿಂದಲೇ ವಿಸ್ತಾರವಾಗಿರು

---

1. ಸಾಂಖ್ಯರು ಹೇಳುವಂಥ ಸ್ವತಂತ್ರವಾದ ಪ್ರಧಾನವಲ್ಲ. ಈಶ್ವರನ ವಶವಾಗಿರುವ ಮಾಯೆಯೇ ಇಲ್ಲಿ ಪ್ರಕೃತಿ ಎಂಬ ಶಬ್ದದಿಂದ ಹೇಳಿರುವದು ಎಂದರ್ಥ. ಸೂ. ಭಾ. ೧-೪-೩ ನೋಡಿ.

2. ಪ್ರಕೃತಿವಿಕೃತಿಗಳ. ಸಾಂಖ್ಯರ ಪ್ರತಿಕ್ರಿಯೆಯನ್ನೆಲ್ಲ ಉಪಯೋಗಿಸಿದ್ದರೂ ಪ್ರಕೃತಿಯು ಚೈತನ್ಯದ ವಶ, ಅವಿದ್ಯಕ—ಎಂಬ ಎರಡು ಅಂಶಗಳಲ್ಲಿ ಈ ಪ್ರಕ್ರಿಯೆಯು ಬೇರೆಯಾಗಿದೆ. ಪೀಠಿಕೆಯನ್ನು ನೋಡಿ.

3. ಉಪಾಧಿಯಿಂದಲೇ ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ—ಎಲ್ಲವೂ ತೋರುತ್ತಿರು ವದು; ಸ್ವತಃ ಆತ್ಮನಲ್ಲಿ ಇವು ಯಾವವೂ ಇಲ್ಲ.

4. ಮಾಂ. ಕಾ. ಭಾ. ೩-೬ ಮುಂತಾದ ಕಾರಿಕೆಗಳ ಭಾಷ್ಯವನ್ನು ನೋಡಿ.

ವದನ್ನೊ (ಅನುದರ್ಶನಮಾಡಿಕೊಳ್ಳುವನೋ) ಆಗ ಬ್ರಹ್ಮನನ್ನು ಸೇರಿ ಕೊಳ್ಳುತ್ತಾನೆ-

(ಭಾಷ್ಯ)

೨೯೩. ಯದಾ ಯಸ್ಮಿನ್ ಕಾಲೇ ಭೂತಪೃಥಗ್ಭಾವಂ ಭೂತಾನಾಂ ಪೃಥಗ್ಭಾವಂ ಪೃಥಕ್ತ್ವಮ್ ಏಕಸ್ಥಮ್ ಏಕಸ್ಮಿನ್ ಆತ್ಮನಿ ಸ್ಥಿತಮ್ ಏಕಸ್ಥಮ್ ಅನು ಪಶ್ಯತಿ ಶಾಸ್ತ್ರಾಚಾರ್ಯೋಪದೇಶಮ್ ಅನು ಆತ್ಮಪ್ರತ್ಯಕ್ಷತ್ವೇನ[1] ಪಶ್ಯತಿ "ಆತ್ಮೈವೇದಂ ಸರ್ವಮ್'' (ಛಾಂ. ೭-೨೫-೨) ಇತಿ। ತತ ಏವ ಚ ತಸ್ಮಾದೇವ ಚ ವಿಸ್ತಾರಮ್ ಉತ್ಪತ್ತಿಂ ವಿಕಾಸಮ್ "ಆತ್ಮತಃ ಪ್ರಾಣಃ ಆತ್ಮತ ಆಶಾತ್ಮತಃ ಸ್ಮರ ಆತ್ಮತ ಆಕಾಶ ಆತ್ಮತಸ್ತೇಜ ಆತ್ಮತ ಆಪ ಆತ್ಮತ ಆವಿರ್ಭಾವತಿರೋಭಾವಾವಾತ್ಮತೋಽನ್ನಮ್...." (ಛಾಂ. ೭-೨೬-೧) ಇತ್ಯೇವಮಾದಿಪ್ರಕಾರೈಃ ವಿಸ್ತಾರಂ ಯದಾ ಪಶ್ಯತಿ ಬ್ರಹ್ಮ ಸಂಪದ್ಯತೇ ಬ್ರಹ್ಮೈವ ಭವತಿ ತದಾ ತಸ್ಮಿನ್ ಕಾಲೇ ಇತ್ಯರ್ಥಃ ॥

(ಭಾಷ್ಯಾರ್ಥ)

ಯಾವಾಗ ಯಾವ ಕಾಲದಲ್ಲಿ ಭೂತಗಳ ಪೃಥಗ್ಭಾವವನ್ನು ಪ್ರಾಣಿಗಳ ಪೃಥಗ್ಭಾವವನ್ನು ಬೇರೆಬೇರೆಯಾಗಿರುವದನ್ನು, ಏಕಸ್ಥವನ್ನಾಗಿ, ಒಬ್ಬನೇ ಆದ ಆತ್ಮನಲ್ಲಿರುವ ಏಕಸ್ಥವನ್ನಾಗಿ, ಅನುದರ್ಶನಮಾಡಿಕೊಳ್ಳುವನೋ (ಅನು ಎಂದರೆ) **ಶಾಸ್ತ್ರಾಚಾರ್ಯರ ಉಪದೇಶಕ್ಕನುಗುಣವಾಗಿ ತನಗೆ ಪ್ರತ್ಯಕ್ಷವಾಗಿರುವಂತೆ[2] "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨) ಎಂದು ಕಂಡುಕೊಳ್ಳುತ್ತಾನೋ** ಮತ್ತು ಅದರಿಂದಲೇ ಆ (ಆತ್ಮ)ನಿಂದಲೇ ವಿಸ್ತಾರವಾಗಿರುವದನ್ನು, ಉಂಟಾಗಿರುವದನ್ನು, ಅರಳಿಕೊಂಡಿರುವದನ್ನು 'ಆತ್ಮನಿಂದಲೇ ಪ್ರಾಣವು, ಆತ್ಮನಿಂದಲೇ ಆಶೆಯು, ಆತ್ಮನಿಂದಲೇ ಸ್ಮರಣೆಯು, ಆತ್ಮನಿಂದಲೇ ಆಕಾಶವು, ಆತ್ಮನಿಂದಲೇ ತೇಜಸ್ಸು, ಆತ್ಮನಿಂದಲೇ ಅಪ್ಪು, ಆತ್ಮನಿಂದಲೇ ತೋರುವದು ಮರೆಯಾಗುವದು–ಇವುಗಳು, ಆತ್ಮನಿಂದಲೇ ಅನ್ನವು........" (ಛಾಂ. ೭-೨೬-೧) ಎಂಬೀ ಮುಂತಾದ ಪ್ರಕಾರ

---

1. "ಶಾಸ್ತ್ರಾಚಾರ್ಯೋಪದೇಶತೋ ಮತ್ವಾತ್ಮಪ್ರತ್ಯಕ್ಷೇಣ" ನಿ॥; ಶಾಸ್ತ್ರಾಚಾರ್ಯೋಪದೇಶಮನುಸೃತ್ಯ ಆತ್ಮಾನಂ ಪ್ರತ್ಯಕ್ಷೇಣ" ಮ॥; "ಶಾಸ್ತ್ರಾಚಾರ್ಯೋಪದೇಶಮನು ಆತ್ಮಾನಂ ಪ್ರತ್ಯಕ್ಷತ್ವೇನ" ಮೈ॥ ಆ॥ ವಾ॥– ಈ ಮುದ್ರಿತಪಾಠಗಳನ್ನು ಹೀಗೆ ತಿದ್ದಿಕೊಂಡಿದೆ.

2. ಶಾಸ್ತ್ರ, ಗುರು–ಇವರ ಉಪದೇಶಕ್ಕೆ ತಕ್ಕಂತೆ ತನಗೂ ಅನುಭವವಾಗಲು ಎಂದರ್ಥ.

ಗಳಿಂದ [1](ಆತ್ಮನಿಂದಲೇ) ವಿಸ್ತರಿಸಿರುವದನ್ನೂ ಯಾವಾಗ ಕಂಡುಕೊಳ್ಳುವನೋ ಆ ಕಾಲದಲ್ಲಿ[2] ಬ್ರಹ್ಮವನ್ನು ಸೇರಿಕೊಳ್ಳುವನು, ಬ್ರಹ್ಮವೇ ಆಗುವನು[3] ಎಂದರ್ಥ.

## ಆತ್ಮನಿಗೆ ದೇಹಸಂಬಂಧದ ಅಂಟು ಇಲ್ಲ

(ಭಾಷ್ಯ)

೨೯೪. ಏಕಸ್ಯ ಆತ್ಮನಃ ಸರ್ವದೇಹಾತ್ಮತ್ವೇ ತದ್ದೋಷಸಮ್ಬನ್ಧೇ ಪ್ರಾಪ್ತೇ ಇದಮ್ ಉಚ್ಯತೇ—

(ಭಾಷ್ಯಾರ್ಥ)

ಒಬ್ಬನೇ ಆತ್ಮನು ಸಕಲ ದೇಹಗಳಿಗೂ ಆತ್ಮನಾಗಿರುವದಾದರೆ ಅವುಗಳ ದೋಷದ ಸಂಬಂಧವೂ ಇರಬೇಕಾಯಿತು—ಎಂದು (ಶಂಕೆಯು) ಬರುವದು; (ಅದಕ್ಕೆ ಭಗವಂತನು) ಈ (ಪರಿಹಾರವನ್ನು) ಹೇಳುತ್ತಾನೆ:—

**ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌನ್ತೇಯ ನ ಕರೋತಿ ನ ಲಿಪ್ಯತೇ ॥ ೩೧ ॥**

೩೧. ಎಲೈ ಕೌಂತೇಯನೆ, ಅನಾದಿಯಾಗಿರುವದರಿಂದಲೂ ನಿರ್ಗುಣನಾಗಿರುವದರಿಂದಲೂ ಈ ಅವ್ಯಯನಾದ ಪರಮಾತ್ಮನು ಶರೀರದಲ್ಲಿದ್ದರೂ ಮಾಡುವದಿಲ್ಲ, ಲೇಪವನ್ನೂ ಹೊಂದುವದಿಲ್ಲ.

(ಭಾಷ್ಯ)

೨೯೫ ಅನಾದಿತ್ವಾತ್ । ಅನಾದೇಃ ಭಾವಃ ಅನಾದಿತ್ವಮ್ । ಆದಿಃ ಕಾರಣಮ್ । ತತ್ ಯಸ್ಯ ನಾಸ್ತಿ ಸ[4] ಅನಾದಿಃ । ಯತ್ ಹಿ ಆದಿಮತ್ ತತ್ ಸ್ವೇನ ಆತ್ಮನಾ ವ್ಯೇತಿ । ಅಯಂ ತು ಅನಾದಿತ್ವಾತ್ ನಿರವಯವಃ ಇತಿ ಕೃತ್ವಾ ನ

---

1. ಆಯಾ ಕಾರಣರೂಪದಿಂದ ಆತ್ಮನೇ ಎಲ್ಲಕ್ಕೂ ನೇರಾದ ಕಾರಣನು ಎಂಬುದಕ್ಕೆ ಶ್ರುತಿ.

2. ಜ್ಞಾನಸಮಕಾಲದಲ್ಲಿಯೇ.

3. ಜ್ಞಾನದಿಂದಲೇ ಸೇರಿಕೊಳ್ಳುವನು ಎಂದದ್ದರಿಂದ ಅಜ್ಞಾನದಿಂದಲೇ ಬೇರೆಯಾಗಿದ್ದನು ಎಂದರ್ಥವಾಗುವದು; ನಿಜವಾಗಿಯೂ ಭಿನ್ನವಾಗಿರುವ ವಸ್ತುಗಳಿಗೆ ಹೀಗೆ ಅಜ್ಞಾನದಿಂದ ವಿಂಗಡವೂ ಜ್ಞಾನಮಾತ್ರದಿಂದ ಸೇರುವೆಯೂ ಆಗಲಾರದು. ಮುಂ. ಭಾ. ೩-೨-೯ (ಭಾ. ಭಾ. ೧೨೩) ನೋಡಿ.

4. 'ತತ್' ಎಂಬ ಪಾಠಕ್ಕಿಂತ ಈ ಮ॥ ಪಾಠವು ಮೇಲು.

ವ್ಯೇತಿ। ತಥಾ ನಿರ್ಗುಣತ್ವಾತ್। ಸಗುಣೋ ಹಿ ಗುಣವ್ಯಯಾತ್ ವ್ಯೇತಿ। ಅಯಂ ತು ನಿರ್ಗುಣತ್ವಾತ್ ನ ವ್ಯೇತಿ ಇತಿ ಪರಮಾತ್ಮಾ ಅಯಮ್ ಅವ್ಯಯಃ। ನ ಅಸ್ಯ ವ್ಯಯಃ ವಿದ್ಯತೇ ಇತಿ ಅವ್ಯಯಃ। ಯತ ಏವಮ್ ಅತಃ[1] ಶರೀರಸ್ಥೋಽಪಿ। ಶರೀರೇಷು ಆತ್ಮನಃ ಉಪಲಬ್ಧಿಃ ಭವತಿ ಇತಿ ಶರೀರಸ್ಥಃ ಉಚ್ಯತೇ। ತಥಾಪಿ ನ ಕರೋತಿ ಕರ್ಮ[2]। ತದಕರಣಾದೇವ ತತ್ಫಲೇನ ನ ಲಿಪ್ಯತೇ। ಯೋ ಹಿ ಕರ್ತಾ ಸಃ ಕರ್ಮಫಲೇನ ಲಿಪ್ಯತೇ। ಅಯಂ ತು ಅಕರ್ತಾ ಅತಃ ನ ಫಲೇನ[3] ಲಿಪ್ಯತೇ ಇತ್ಯರ್ಥಃ॥

(ಭಾಷ್ಯಾರ್ಥ)

ಅನಾದಿತ್ವದಿಂದಲೂ ಅನಾದಿಯಾಗಿರುವದರ ಭಾವವು ಅನಾದಿತ್ವವು. ಆದಿ ಎಂದರೆ ಕಾರಣವು ; ಅದು ಯಾವನಿಗೆ ಇಲ್ಲವೋ ಅವನು ಅನಾದಿಯು. ಯಾವದಕ್ಕೆ ಆದಿಯಿರುವದೋ ಅದು ತನ್ನ ರೂಪದಿಂದ ವ್ಯಯವಾಗುತ್ತದೆ ; ಆದರೆ ಈ (ಆತ್ಮನು) ಅನಾದಿಯಾಗಿರುವದರಿಂದ ಅವಯವಗಳಿಲ್ಲದವನೆಂಬ ಕಾರಣದಿಂದ ವ್ಯಯವಾಗುವದಿಲ್ಲ. ಹಾಗೂ ನಿರ್ಗುಣತ್ವದಿಂದಲೂ (ವ್ಯಯವಾಗುವದಿಲ್ಲ). ಸಗುಣನಾದವನು ಗುಣಗಳ ವ್ಯಯದಿಂದ ವ್ಯಯನಾಗುತ್ತಾನಲ್ಲವೆ? ಆದರೆ ಇವನು ನಿರ್ಗುಣನಾಗಿರುವದರಿಂದ ವ್ಯಯವಿಲ್ಲವಾದ್ದರಿಂದ (ಇವನು) ಅವ್ಯಯನು. ಆದ್ದರಿಂದ ಈ ಪರಮಾತ್ಮನು ಅವ್ಯಯನು.

ಹೀಗಿರುವದರಿಂದ (ಇವನು) ಶರೀರಸ್ಥನಾದರೂ–ಶರೀರಗಳಲ್ಲಿಯೇ ಆತ್ಮನ ಅರಿವು ಆಗುತ್ತದೆಯಾದ್ದರಿಂದ (ಇವನು) ಶರೀರಸ್ಥನೆನಿಸಿರುತ್ತಾನೆ. ಹೀಗಿದ್ದರೂ–ಇವನು (ಯಾವ) ಕರ್ಮವನ್ನೂ ಮಾಡುವದಿಲ್ಲ. ಅದನ್ನು ಮಾಡದೆ ಇರುವದರಿಂದ ಅದರ ಫಲದಿಂದ ಲಿಪ್ತನಾಗುವದಿಲ್ಲ. ಯಾವನು ಮಾಡುವವನೋ ಅವನು ಕರ್ಮಫಲದಿಂದ ಲಿಪ್ತನಾಗುತ್ತಾನೆ. ಆದರೆ ಇವನು ಕರ್ತೃವಲ್ಲ, ಆದ್ದರಿಂದ ಫಲದಿಂದ ಲಿಪ್ತನಾಗುವದಿಲ್ಲ ಎಂದರ್ಥ.

(ಭಾಷ್ಯ)

೨೯೬. ಕಃ ಪುನಃ ದೇಹೇಷು ಕರೋತಿ ಲಿಪ್ಯತೇ ಚ? ಯದಿ ತಾವತ್ ಅನ್ಯಃ ಪರಮಾತ್ಮನಃ ದೇಹೀ ಕರೋತಿ ಲಿಪ್ಯತೇ ಚ ತತಃ ಇದಮ್ ಅನುಪಪನ್ನಮ್ ಉಕ್ತಂ ಕ್ಷೇತ್ರಜ್ಞೇಶ್ವರೈಕತ್ವಂ "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ" (೧೩-೨)

1. ಮ॥ ಮೈ॥ಗಳಲ್ಲಿಲ್ಲ.
2. ಮ॥ ಮೈ॥ಗಳಲ್ಲಿ ಮಾತ್ರ ಇದೆ ; ಇರುವದೊಳ್ಳೆಯದು.
3. ಈ ಎರಡು ಮಾತುಗಳು ಮ॥ ಮೈ॥ ಗು॥ ಗಳಲ್ಲಿಲ್ಲ.

ಇತ್ಯಾದಿ। ಅಥ ನಾಸ್ತಿ ಈಶ್ವರಾತ್ ಅನ್ಯಃ ದೇಹೀ, ಕಃ ಕರೋತಿ ಲಿಪ್ಯತೇ ಚ ಇತಿ ವಾಚ್ಯಮ್। ಪರೋ ವಾ ನಾಸ್ತಿ। ಇತಿ ಸರ್ವಥಾ ದುರ್ವಿಜ್ಞೇಯಂ ದುರ್ವಾಚ್ಯಂ ಚ ಇತಿ ಭಗವತ್ಪ್ರೋಕ್ತಮ್ ಔಪನಿಷದಂ ದರ್ಶನಂ ಪರಿತ್ಯಕ್ತಂ ವೈಶೇಷಿಕೈಃ ಸಾಙ್ಖ್ಯಾರ್ಹತಬೌದ್ಧೈಶ್ಚ। ತತ್ರ ಅಯಂ ಪರಿಹಾರಃ ಭಗವತಾ ಸ್ವೇನೈವ ಉಕ್ತಃ "ಸ್ವಭಾವಸ್ತು ಪ್ರವರ್ತತೇ" (೫-೧೪) ಇತಿ। ಅವಿದ್ಯಾಮಾತ್ರಸ್ವಭಾವೋ ಹಿ ಕರೋತಿ ಲಿಪ್ಯತೇ ಇತಿ ವ್ಯವಹಾರೋ ಭವತಿ। ನ ತು ಪರಮಾರ್ಥತ ಏಕಸ್ಮಿನ್[1] ಪರಮಾತ್ಮನಿ ತತ್ ಅಸ್ತಿ। ಅತಃ ಏತಸ್ಮಿನ್ ಪರಮಾರ್ಥಸಾಙ್ಖ್ಯದರ್ಶನೇ ಸ್ಥಿತಾನಾಂ ಜ್ಞಾನನಿಷ್ಠಾನಾಂ ಪರಮಹಂಸಪರಿವ್ರಾಜಕಾನಾಂ ತಿರಸ್ಕೃತಾವಿದ್ಯಾವ್ಯವಹಾರಾಣಾಂ ಕರ್ಮಾಧಿಕಾರೋ ನಾಸ್ತಿ ಇತಿ ತತ್ರ ತತ್ರ ದರ್ಶಿತಂ ಭಗವತಾ ॥

(ಭಾಷ್ಯಾರ್ಥ)

(ಆಕ್ಷೇಪ):— ಹಾಗಾದರೆ ದೇಹಗಳಲ್ಲಿ (ಕರ್ಮಗಳನ್ನು) ಮಾಡುವವನೂ (ಫಲದಿಂದ) ಲಿಪ್ತನಾಗುವವನೂ ಯಾವನು? ಮೊದಲನೆಯದಾಗಿ ಪರಮಾತ್ಮನಿಗಿಂತ ಬೇರೆಯಾಗಿರುವ ದೇಹಿಯು ಮಾಡುತ್ತಾನೆಂದೂ ಲಿಪ್ತನಾಗುತ್ತಾನೆಂದೂ (ಹೇಳುವ)ದಾದರೆ "ಕ್ಷೇತ್ರಜ್ಞನನ್ನು ನನ್ನನ್ನಾಗಿ ತಿಳಿ" (೧೩-೨) ಎಂದು ಮುಂತಾಗಿ ಹೇಳಿರುವ ಕ್ಷೇತ್ರಜ್ಞೇಶ್ವರೈಕ್ಯವೆಂಬುದು ಅಯುಕ್ತವಾಗುವದು ಹಾಗಿಲ್ಲದೆ ಈಶ್ವರನಿಗಿಂತ ಬೇರೆಯಾಗಿ ದೇಹಿಯೇ ಇಲ್ಲ(ವೆಂದರೆ, ಕರ್ಮವನ್ನು) ಮಾಡುವವನೂ (ಫಲದಿಂದ) ಲಿಪ್ತನಾಗುವವನೂ ಯಾರು?–ಎಂಬುದನ್ನು ಹೇಳಬೇಕಾಗುವದು. ಅಥವಾ ಈಶ್ವರನೇ ಇಲ್ಲ (ವೆಂದಾದರೂ ಆಗುವದು). **ಹೇಗೆ (ನೋಡಿ) ದರೂ ಭಗವಂತನು ಹೇಳಿರುವ ಉಪನಿಷದ್ದರ್ಶನವು ತಿಳಿದುಕೊಳ್ಳುವದಕ್ಕೆ ಕಷ್ಟವಾಗಿದೆ, ತಿಳಿಯಹೇಳುವದಕ್ಕೂ ಕಷ್ಟವಾಗಿರುತ್ತದೆ–ಎಂದು ವೈಶೇಷಿಕರು, ಸಾಂಖ್ಯರು, ಆರ್ಹತರು, ಮತ್ತು ಬೌದ್ಧರು-(ಇವರುಗಳೆಲ್ಲರೂ ಇದನ್ನು ಕೈಬಿಟ್ಟಿರುತ್ತಾರೆ.**[2]

(ಪರಿಹಾರ): ಇದಕ್ಕೆ "ಸ್ವಭಾವವೇ ಪ್ರವರ್ತಿಸುತ್ತಿರುವದು" (೫-೧೪) ಎಂಬೀ ಪರಿಹಾರವನ್ನು ಭಗವಂತನು ತಾನೇ ಹೇಳಿರುತ್ತಾನೆ. '**ಮಾಡುತ್ತಾನೆ,**

---

1. 'ಏವ ತಸ್ಮಿನ್' ಎಂಬ ಮು|| ಪ್ರ|| ಪಾಠಕ್ಕಿಂತ ಇದೇ ಮೇಲು.

2. ಆತ್ಮೈಕ್ಯವನ್ನು ಒಪ್ಪದ ವಾದಿಗಳೆಲ್ಲರೂ ಈ ಗುಂಪಿನಲ್ಲಿ ಸೇರಿರುತ್ತಾರೆ. ಈ ಅಧ್ಯಾಯದ ಎರಡನೆಯ ಶ್ಲೋಕದ ಭಾಷ್ಯದಲ್ಲಿ (ಭಾ. ಭಾ. ೨೧೫) ಯೂ ಈ ಬಗೆಯ ಆಕ್ಷೇಪವನ್ನು ಪರಿಹರಿಸಿರುತ್ತದೆ. ಆ ಪರಿಹಾರವನ್ನು ನೆನಪುಕೊಡುವದಕ್ಕೆ ಮತ್ತೆ ಇಲ್ಲಿ ಆಕ್ಷೇಪವನ್ನು ಅನುವಾದಮಾಡಿಕೊಂಡಿದೆ.

**ಲಿಪ್ತನಾಗುತ್ತಾನೆ'** ಎಂಬ **ವ್ಯವಹಾರವಾಗುವದು** ಬರಿಯ **ಅವಿದ್ಯಾಸ್ವಭಾವವೇ**[1]. ಅದರೆ ನಿಜವಾಗಿ ಒಬ್ಬನೇ ಆಗಿರುವ ಪರಮಾತ್ಮನಲ್ಲಿ ಆ (ಕರ್ತೃತ್ವ ಭೋಕ್ತೃತ್ವವು) ಇರುವದಿಲ್ಲ. ಆದ್ದರಿಂದ **ಈ ಪರಮಾರ್ಥವಾದ ಸಾಂಖ್ಯ ದರ್ಶನದಲ್ಲಿ ನಿಂತಿರುವ ಜ್ಞಾನನಿಷ್ಠರಾದ** ಪರಮಹಂಸಪರಿವ್ರಾಜಕರಾದವರು[2] **ಅವಿದ್ಯಾವ್ಯವಹಾರವನ್ನು ಹೋಗಲಾಡಿಸಿಕೊಂಡಿರುವದರಿಂದ ಕರ್ಮಕ್ಕೆ ಅಧಿಕಾರಿಗಳಲ್ಲ ಎಂದು ಅಲ್ಲಲ್ಲಿ**[3] **ಭಗವಂತನು ತೋರಿಸಿಕೊಟ್ಟಿರುತ್ತಾನೆ.**

(ಭಾಷ್ಯ)

೨೯೭. ಕಿಮಿವ ನ ಕರೋತಿ ನ ಲಿಪ್ಯತೇ ಇತಿ? ಅತ್ರ ದೃಷ್ಟಾನ್ತಮಾಹ—

(ಭಾಷ್ಯಾರ್ಥ)

(ಪರಮಾತ್ಮನು) ಏತರಂತೆ ಮಾಡುವದಿಲ್ಲ, ಲಿಪ್ತನಾಗುವದಿಲ್ಲ? ಎಂದರೆ ಆದಕ್ಕೆ ದೃಷ್ಟಾಂತವನ್ನು ಹೇಳುತ್ತಾನೆ—

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥ ೩೨ ॥**

೩೨. ಸರ್ವಗತವಾದ ಆಕಾಶವು ಹೇಗೆ ಸೂಕ್ಷ್ಮವಾಗಿರುವದರಿಂದ (ಏತರಿಂದಲೂ) ಲಿಪ್ತವಾಗುವದಿಲ್ಲವೋ ಅದರಂತೆ ಎಲ್ಲೆಲ್ಲಿಯೂ ದೇಹದಲ್ಲಿರುವ ಆತ್ಮನು ಲಿಪ್ತನಾಗುವದಿಲ್ಲ.

(ಭಾಷ್ಯ)

೨೯೮. ಯಥಾ ಸರ್ವಗತಂ ವ್ಯಾಪ್ಯಂ ಸತ್ ಸೌಕ್ಷ್ಮ್ಯಾತ್ ಸೂಕ್ಷ್ಮಭಾವಾತ್ ಆಕಾಶಂ ಖಂ ನ ಉಪಲಿಪ್ಯತೇ ನ ಸಂಬಧ್ಯತೇ। ಸರ್ವತ್ರ ಅವಸ್ಥಿತಃ ದೇಹೇ ತಥಾ ಆತ್ಮಾ ನ ಉಪಲಿಪ್ಯತೇ ॥

(ಭಾಷ್ಯಾರ್ಥ)

ಹೇಗೆ ಸರ್ವಗತವಾಗಿ (ಎಲ್ಲವನ್ನೂ) ವ್ಯಾಪಿಸಿಕೊಂಡಿರುವದಾಗಿದೆಯಾದರೂ ಸೌಕ್ಷ್ಮ್ಯದಿಂದ ಸೂಕ್ಷ್ಮವಾಗಿರುವದರಿಂದ ಆಕಾಶವು ಗಗನವು ಲಿಪ್ತವಾಗುವದಿಲ್ಲವೋ

---

1. ಕರ್ಮವ್ಯವಹಾರವೆಲ್ಲ ಅವಿದ್ಯಕವೆಂಬುದನ್ನು ಭಾ. ಭಾ. ೩೮, ೧೨೬ಗಳಲ್ಲಿಯೂ ತಿಳಿಸಿದೆ.

2. ಕಪಿಲರ ಸಾಂಖ್ಯವು ನಿಜವಾದ ಸಾಂಖ್ಯವಲ್ಲ; ಅವರು ಹೇಳುವ ಸಂನ್ಯಾಸವು ಸರಿಯಾದ ಸಂನ್ಯಾಸವೂ ಅಲ್ಲ–ಎಂಬ ಭಾವವು ಇದರಲ್ಲಡಗಿದೆ. ಛಾಂ. ಭಾ. ೨-೨೩-೧ರ ಉಪಸಂಹಾರವನ್ನು ನೋಡಿ.

3. ೨-೨೧, ೫-೧೩, ೧೮-೧೨ ಈ ಭಾಷ್ಯಗಳನ್ನು ನೋಡಿ.

ಸಂಬದ್ಧವಾಗುವದಿಲ್ಲವೋ ಅದರಂತೆ ಎಲ್ಲೆಲ್ಲಿಯೂ [1] ದೇಹದಲ್ಲಿರುವ ಆತ್ಮನು (ದೇಹಧರ್ಮಗಳಿಂದ) ಲಿಪ್ತನಾಗುವದಿಲ್ಲ.

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩ ॥**

೩೩. ಎಲೈ ಭಾರತನೆ, ಹೇಗೆ ಸೂರ್ಯನು ಈ ಲೋಕವನ್ನೆಲ್ಲ ತಾನೊಬ್ಬನೇ ಬೆಳಗುತ್ತಿರುವನೋ, ಹಾಗೆ ಕ್ಷೇತ್ರಿಯು ಕ್ಷೇತ್ರವೆಲ್ಲವನ್ನೂ ಬೆಳಗುತ್ತಾನೆ.

(ಭಾಷ್ಯ)

ಕಿಂಚ ಯಥಾ ಪ್ರಕಾಶಯತಿ ಅವಭಾಸಯತಿ ಏಕಃ ಕೃತ್ಸ್ನಂ ಲೋಕಮ್ ಇಮಂ ರವಿಃ ಸವಿತಾ ಆದಿತ್ಯಃ ತಥಾ ತದ್ವತ್ ಮಹಾಭೂತಾದಿ ಧೃತ್ಯಂತಂ [2] ಕ್ಷೇತ್ರಮ್ ಏಕಃ ಸನ್ ಪ್ರಕಾಶಯತಿ । ಕಃ [3]? ಕ್ಷೇತ್ರೀ ಪರಮಾತ್ಮಾ ಇತ್ಯರ್ಥಃ ಭಾರತ [4] । ರವಿದೃಷ್ಟಾಂತಃ ಅತ್ರ ಆತ್ಮನಃ ಉಭಯಾರ್ಥೋಽಪಿ ಭವತಿ ರವಿವತ್ ಸರ್ವಕ್ಷೇತ್ರೇಷು ಏಕ ಆತ್ಮಾ ಅಲೇಪಕಶ್ಚ ಇತಿ ॥

(ಭಾಷ್ಯಾರ್ಥ)

ಮತ್ತು ಹೇಗೆ ಎಲೈ ಭರತವಂಶೋತ್ಪನ್ನನೆ, ರವಿಯು ಸವಿತೃವು, ಸೂರ್ಯನು, ಈ ಲೋಕವೆಲ್ಲವನ್ನೂ ಒಬ್ಬನೇ ಬೆಳಗುತ್ತಿರುವನೋ ತೋರಿಸುತ್ತಿರುವನೋ ಹಾಗೆ ಅದರಂತೆ ಮಹಾಭೂತಗಳಿಂದ ಹಿಡಿದು ಧೃತಿಯವರೆಗಿನ ಕ್ಷೇತ್ರವನ್ನು [5] ಒಬ್ಬನೇ ಆಗಿ ಬೆಳಗುತ್ತಾನೆ. ಯಾರು? ಕ್ಷೇತ್ರಿಯು, ಪರಮಾತ್ಮನು ಎಂದರ್ಥ. ಸೂರ್ಯನ ದೃಷ್ಟಾಂತವನ್ನು ಕೊಟ್ಟಿರುವದು ಇಲ್ಲಿ ಸೂರ್ಯನಂತೆ ಸರ್ವಕ್ಷೇತ್ರಗಳಲ್ಲಿಯೂ ಒಬ್ಬನೇ ಆತ್ಮನು, ಅಲಿಪ್ತನೂ (ಆಗಿರುತ್ತಾನೆ) ಎಂದು ಎರಡು ಪ್ರಯೋಜನಗಳನ್ನೂ (ನೆರವೇರಿಸುವದಕ್ಕಾಗಿ ಬಂದಿದೆ).

---

1. ಎಲ್ಲಾ ದೇಹಗಳಲ್ಲಿಯೂ ಎಂದರ್ಥ. ಉತ್ತಮ, ಮಧ್ಯಮ, ನೀಚ—ಎಂಬ ತಾರತಮ್ಯದ ದೇಹಗಳಿಂದ ಆತ್ಮನಿಗೆ ಲೇಪವಿಲ್ಲ.

2. "ತಥಾ ಅವ್ಯಕ್ತಾದಿಸ್ಥಾವರಾಂತಂ ಮಹಾಭೂತಾದಿ...." ಮ॥ ; "ತದ್ವತ್ ಅವ್ಯಕ್ತಾದಿಸ್ಥಾವರಾಂತಂ ಮಹಾಭೂತಾದಿ...." ಮೈ॥

3. 'ಏಕಃ' ಮ॥

4. ಈ ಮಾತು ಅ॥ ನಿ॥ ಗಳಲ್ಲಿ ಬಿಟ್ಟುಹೋಗಿದೆ.

5. ೧೩-೫೬ ನೋಡಿ.

# ಉಪಸಂಹಾರ

(ಭಾಷ್ಯ)

೩೦೦. ಸಮುಸ್ತಾಧ್ಯಾಯಾರ್ಥೋಪಸಂಹಾರಾರ್ಥಃ ಅಯಂ ಶ್ಲೋಕಃ—

(ಭಾಷ್ಯಾರ್ಥ)

ಈ ಶ್ಲೋಕವು (ಈ) ಅಧ್ಯಾಯದ ಅರ್ಥವನ್ನೆಲ್ಲ ಉಪಸಂಹಾರಮಾಡುವದಕ್ಕಾಗಿ (ಬಂದಿದೆ)—

**ಕ್ಷೇತ್ರಕ್ಷೇತ್ರಜ್ಞಯೋರೇವಮನ್ತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾನ್ತಿ ತೇ ಪರಮ್ ॥೩೪॥**

೩೪. ಹೀಗೆ ಜ್ಞಾನಚಕ್ಷುವಿನಿಂದ ಕ್ಷೇತ್ರಕ್ಷೇತ್ರಜ್ಞರುಗಳಿಗೆ ಅಂತರವನ್ನೂ ಭೂತಪ್ರಕೃತಿಮೋಕ್ಷವನ್ನೂ ಯಾರು ತಿಳಿದುಕೊಳ್ಳುವರೋ ಅವರು ಪರ (ಗತಿ) ಯನ್ನು ಪಡೆಯುತ್ತಾರೆ.

(ಭಾಷ್ಯ)

೩೦೧. ಕ್ಷೇತ್ರಕ್ಷೇತ್ರಜ್ಞಯೋಃ ಯಥಾವ್ಯಾಖ್ಯಾತಯೋಃ ಏವಂ ಯಥಾಪ್ರದರ್ಶಿತಪ್ರಕಾರೇಣ ಅನ್ತರಮ್ ಇತರೇತರವೈಲಕ್ಷಣ್ಯವಿಶೇಷಂ ಜ್ಞಾನಚಕ್ಷುಷಾ ಶಾಸ್ತ್ರಾಚಾರ್ಯೋಪದೇಶಜನಿತಮ್[1] ಆತ್ಮಪ್ರತ್ಯಯಿಕಂ ಜ್ಞಾನಂ ಚಕ್ಷುಃ। ತೇನ ಜ್ಞಾನಚಕ್ಷುಷಾ । ಭೂತಪ್ರಕೃತಿಮೋಕ್ಷಂ ಚ। ಭೂತಾನಾಂ ಪ್ರಕೃತಿಃ ಅವಿದ್ಯಾಲಕ್ಷಣಾ ಅವ್ಯಕ್ತಾಖ್ಯಾ ತಸ್ಯಾ ಭೂತಪ್ರಕೃತೇಃ ಮೋಕ್ಷಂ[2] ಮೋಕ್ಷಣಮ್ ಅಭಾವಗಮನಂ ಚ ಯೇ ವಿದುಃ ವಿಜಾನನ್ತಿ ಯಾನ್ತಿ ಗಚ್ಛನ್ತಿ ತೇ ಪರಂ ಪರಮಾರ್ಥತತ್ತ್ವಂ ಬ್ರಹ್ಮ ನ ಪುನಃ ದೇಹಮ್ ಆದದತೇ ಇತ್ಯರ್ಥಃ ॥

(ಭಾಷ್ಯಾರ್ಥ)

(ಹಿಂದೆ) ವಿವರಿಸಿರುವಂಥ ಕ್ಷೇತ್ರಕ್ಷೇತ್ರಜ್ಞರುಗಳಿಗೆ ಹೀಗೆ ತಿಳಿಸಿರುವ ರೀತಿಯಿಂದ (ಇರುವ) ಅಂತರವನ್ನು ಒಂದಕ್ಕೊಂದಕ್ಕಿರುವ ಗೊತ್ತಾದ ವೈಲಕ್ಷಣ್ಯವನ್ನು ಜ್ಞಾನಚಕ್ಷುವಿನಿಂದ–**ಶಾಸ್ತ್ರದ ಮತ್ತು ಆಚಾರ್ಯರ ಉಪದೇಶದಿಂದ ತನ್ನ ಅನುಭವಕ್ಕೆ ಬಂದಿರುವ ಜ್ಞಾನವೇ ಚಕ್ಷು ;** ಆ ಜ್ಞಾನಚಕ್ಷುವಿನಿಂದ– (ಯಾರು ತಿಳಿದುಕೊಂಡಿರುವರೋ) ಮತ್ತು ಭೂತಪ್ರಕೃತಿಮೋಕ್ಷವನ್ನೂ–**ಭೂತಗಳ**

1. " ಶಾಸ್ತ್ರಾಚಾರ್ಯಪ್ರಸಾದೋಪದೇಶ " ಎಂಬ ಪಾಠದಲ್ಲಿ ಪ್ರಸಾದ ಬೇಕಿಲ್ಲ.
2. ಭಾಷ್ಯದಲ್ಲಿ ಈ ಮಾತು ಬಿಟ್ಟಿದೆ.

**ಪ್ರಕೃತಿಯು ಎಂದರೆ ಅವಿದ್ಯಾಕಲ್ಪಿತವಾದ ಅವ್ಯಕ್ತವೆಂಬ ಹೆಸರಿನ (ಮೂಲವು). ಆ ಭೂತಪ್ರಕೃತಿಯ ಮೋಕ್ಷವನ್ನು ಬಿಡಿಸುವಿಕೆಯನ್ನು (ವಿದ್ಯೆಯಿಂದ) ಇಲ್ಲವಾಗಿಸುವಿಕೆಯನ್ನು ಯಾರು ತಿಳಿದುಕೊಂಡಿರುವರೋ** ಅರಿತಿರುವರೋ ಅವರು ಪರವನ್ನು ಪರಮಾರ್ಥತತ್ತ್ವವಾದ ಬ್ರಹ್ಮವನ್ನು ಪಡೆಯುತ್ತಾರೆ, ಹೋಗಿ ಸೇರುತ್ತಾರೆ; ಮತ್ತೆ ದೇಹವನ್ನು ಸ್ವೀಕರಿಸುವದಿಲ್ಲ-ಎಂದರ್ಥ.

ಇತಿ ಶ್ರೀಮದ್ಭಗವದ್ಗೀತಾಭಾಷ್ಯೇ ಕ್ಷೇತ್ರಕ್ಷೇತ್ರಜ್ಞಯೋಗೋ ನಾಮ ತ್ರಯೋದಶಾಧ್ಯಾಯಃ



# ಹದಿಮೂರನೆಯ ಅಧ್ಯಾಯದ ಸಾರ

೧-೨. ಭಗವಂತನು ಹೇಳಿದ್ದೇನೆಂದರೆ: "ಅರ್ಜುನನೆ, ಈ ಶರೀರವೇ ಕ್ಷೇತ್ರವು ಇದನ್ನರಿಯುವ ಆತ್ಮನೇ ಕ್ಷೇತ್ರಜ್ಞನು. ಸರ್ವಕ್ಷೇತ್ರಗಳಲ್ಲಿಯೂ ಇರುವ ಈ ಕ್ಷೇತ್ರಜ್ಞನು ನಾನೇ. ಕ್ಷೇತ್ರಕ್ಷೇತ್ರಜ್ಞರ ವಿವೇಕವೇ ತತ್ತ್ವಜ್ಞಾನವು.

೩-೬. "ಕ್ಷೇತ್ರದ ಸ್ವರೂಪ, ಕ್ಷೇತ್ರಜ್ಞನ ಸ್ವರೂಪ, ಕ್ಷೇತ್ರಜ್ಞನ ಸ್ವರೂಪವನ್ನು ಸರಿಯಾಗಿ ತಿಳಿದುಕೊಳ್ಳುವದಕ್ಕೆ ಬೇಕಾಗುವ ಸಾಧನ—ಇವನ್ನು ಹೇಳುತ್ತೇನೆ ಕೇಳು. ಅವ್ಯಕ್ತ, ಮಹತ್ತು, ಅಹಂಕಾರ, ಪಂಚಭೂತಗಳು—ಎಂದು ಎಂಟು ಬಗೆಯಾಗಿರುವ ಪ್ರಕೃತಿಯೂ ಹನ್ನೊಂದು ಇಂದ್ರಿಯಗಳೂ ಐದು ವಿಷಯಗಳೂ ಸೇರಿ ಆಗಿರುವ ಹದಿನಾರು ಬಗೆಯ ವಿಕೃತಿಯೂ ಕ್ಷೇತ್ರವೆನಿಸುತ್ತದೆ. ಇಚ್ಛಾದ್ವೇಷವೇ ಮುಂತಾದ ಅಂತಃಕರಣಧರ್ಮಗಳೂ ಕ್ಷೇತ್ರದಲ್ಲಿಯೇ ಅಡಕವಾಗಿರುತ್ತವೆ.

೭-೧೧. "ಕ್ಷೇತ್ರಜ್ಞನ ಸ್ವರೂಪವನ್ನು ತಿಳಿಸುವದಕ್ಕಿಂತ ಮುಂಚೆ ಅದನ್ನು ಮನಗಾಣುವದಕ್ಕೆ ಬೇಕಾದ ಸಾಧನಗಳನ್ನು ತಿಳಿಸುವೆನು. ಅಮಾನಿತ್ವ, ಅದಂಭಿತ್ವ, ಅಹಿಂಸೆ, ಕ್ಷಾಂತಿ, ಆರ್ಜವ, ಆಚಾರ್ಯೋಪಾಸನೆ, ಶೌಚ, ಸ್ಥೈರ್ಯ, ಆತ್ಮನಿಗ್ರಹ, ವಿಷಯಭೋಗಗಳಲ್ಲಿ ವೈರಾಗ್ಯ, ಅನಹಂಕಾರ, ಜನ್ಮಮೃತ್ಯುಜರಾವ್ಯಾಧಿಗಳಲ್ಲಿರುವ ದುಃಖದೋಷಗಳನ್ನು ಆಲೋಚಿಸುತ್ತಿರುವದು, ಅಸಕ್ತಿ, ಅನಭಿಷ್ವಂಗ, ಸಮಚಿತ್ತತೆ, ಅನನ್ಯಭಕ್ತಿ, ವಿವಿಕ್ತದೇಶಸೇವಿತ್ವ, ಜನಸಂಸರ್ಗದಲ್ಲಿ ಅರತಿ, ಅಧ್ಯಾತ್ಮಜ್ಞಾನನಿತ್ಯತ್ವ, ತತ್ತ್ವಜ್ಞಾನಾರ್ಥದರ್ಶನ—ಎಂಬ ಇಪ್ಪತ್ತು ಸಾಧನಗಳು ಈ ಜ್ಞಾನಕ್ಕೆ ಬೇಕಾಗಿರುವವು. ಇವಕ್ಕೆ ಬದಲಾಗಿ ಮಾನಿತ್ವ, ದಂಭಿತ್ವ—ಮುಂತಾದವುಗಳೇ ಇದ್ದರೆ ಅಜ್ಞಾನವೇ ಬೆಳೆದು ಸಂಸಾರದಲ್ಲಿ ತೊಳಲುತ್ತಿರಬೇಕಾಗುವದು. ಆದ್ದರಿಂದ ಮುಮುಕ್ಷುವಾದವನು ಅಮಾನಿತ್ವಾದಿಗಳೆಂಬ ಜ್ಞಾನಸಾಧನಗಳನ್ನು ಅವಶ್ಯವಾಗಿ ಸಂಪಾದಿಸಿಕೊಳ್ಳಬೇಕು."

೧೨-೧೮. "ಈಗ ಕ್ಷೇತ್ರಜ್ಞನ ಪರಮಾರ್ಥಸ್ವರೂಪವನ್ನು ಹೇಳುವೆನು ಕೇಳು. ಅದನ್ನು ಅರಿತುಕೊಂಡರೆ ಮೋಕ್ಷವಾಗುತ್ತದೆ. ಅದು ನಿತ್ಯವಾದದ್ದು; ಇದೆಯೆಂದಾಗಲಿ ಇಲ್ಲವೆಂದಾಗಲಿ ಹೇಳಬಹುದಾದ ಇಂದ್ರಿಯಗೋಚರವಸ್ತುಗಳೆಲ್ಲಕ್ಕಿಂತಲೂ ಭಿನ್ನವಾದದ್ದು. ಅದಕ್ಕೆ ಎಲ್ಲೆಲ್ಲಿಯೂ ಕೈ, ಕಾಲು, ಕಣ್ಣು, ತಲೆ, ಮುಖ, ಕಿವಿ—ಇವುಗಳಿರುವವು; ಅದು ಎಲ್ಲವನ್ನೂ ವ್ಯಾಪಿಸಿಕೊಂಡಿರುವದು. ಈ ಎಲ್ಲಾ ಇಂದ್ರಿಯಗಳ ವ್ಯಾಪಾರಗಳನ್ನೂ ತೋರ್ಪಡಿಸಿಕೊಳ್ಳುವದಾದರೂ ಅದಕ್ಕೆ ನಿಜವಾಗಿ ಯಾವ ಇಂದ್ರಿಯವೂ ಇರುವದಿಲ್ಲ. ಅದು ಒಂದನ್ನೂ ಸೋಂಕದೆಯೇ ಎಲ್ಲವನ್ನೂ ಹಿಡಿದೆತ್ತಿ ನಿಲ್ಲಿಸಿಕೊಂಡಿದೆ, ಯಾವ ಗುಣವೂ ಇಲ್ಲದ್ದಾದರೂ ಗುಣಗಳನ್ನು ಅನುಭವಿಸುತ್ತಿರುತ್ತದೆ. ಅದು ಪ್ರಾಣಿಗಳ ಒಳಗೂ ಹೊರಗೂ ಇರುವದಲ್ಲದೆ ಚರಾಚರವಾದ ಪ್ರಾಣಿಗಳ ದೇಹದ ಸ್ವರೂಪದಿಂದಲೂ ಇರುತ್ತದೆ. ಇಷ್ಟಾದರೂ ಅದರ

ಪರಮಾರ್ಥಸ್ವರೂಪವು ಅತ್ಯಂತ ಸೂಕ್ಷ್ಮವಾಗಿರುತ್ತದೆಯಾದ್ದರಿಂದ ಅದು ಅಜ್ಞರಿಗೆ ತಿಳಿಯದೆ ಎಲ್ಲಿಯೋ ದೂರದಲ್ಲಿರುವಂತಿರುವದು; ತಿಳಿದವರಿಗೆ ಮಾತ್ರ ಅತ್ಯಂತ ಸಮೀಪದಲ್ಲಿರುವದು. ತಾನು ಅಖಂಡವಾಗಿ ಒಂದೇ ಆಗಿದ್ದರೂ ಪ್ರತಿಯೊಬ್ಬ ಜೀವನಲ್ಲಿಯೂ ಬೇರೆಬೇರೆಯಾಗಿದ್ದು ಕೊಂಡಿರುವಂತೆ ತೋರುವದು. ಅದು ಸಕಲ ಭೂತಗಳ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾಗಿರುತ್ತದೆ. ಅದು ಜ್ಯೋತಿಗಳಿಗೆ ಜ್ಯೋತಿಯಾಗಿ ಕತ್ತಲೆಯಾಚೆಗೆ ಇರುತ್ತದೆ. ಈವರೆಗೆ ಹೇಳಿದ ಅಮಾನಿತ್ವಾದಿಗಳೆಂಬ ಜ್ಞಾನವೂ ಜ್ಞೇಯವೂ, ಫಲರೂಪವಾದ ಜ್ಞಾನವೂ—ಈ ಮೂರೂ ನಮ್ಮೆಲ್ಲರ ಹೃದಯದಲ್ಲಿಯೇ ಇದ್ದುಕೊಂಡಿರುತ್ತದೆ.''

೧೮. '' ಈ ರೀತಿಯಾಗಿ ಕ್ಷೇತ್ರ; ಜ್ಞಾನಸಾಧನ ಮತ್ತು ಜ್ಞೇಯವಾದ ಕ್ಷೇತ್ರಜ್ಞನ ಪರಮಾರ್ಥರೂಪ—ಈ ಮೂರನ್ನೂ ಸಂಕ್ಷೇಪವಾಗಿ ಹೇಳಿದ್ದಾಯಿತು ನನ್ನ ಭಕ್ತನು ಇದನ್ನು ತಿಳಿದುಕೊಂಡು ನನ್ನ ಸ್ವರೂಪವನ್ನೇ ಹೊಂದುವನು ''

೧೯-೨೩. '' ಪ್ರಕೃತಿ, ಪುರುಷ—ಅಥವಾ ಕ್ಷೇತ್ರಕ್ಷೇತ್ರಜ್ಞ—ಎಂಬಿವೆರಡೂ ಪರಮೇಶ್ವರನ ಪ್ರಕೃತಿಗಳು; ಇವುಗಳಿಂದಲೇ ಸಕಲಭೂತಗಳ ಉತ್ಪತ್ತಿಯೂ ಆಗಿರುವದು; ಹೇಗೆಂದರೆ ಕಾರ್ಯಕಾರಣರೂಪವಾಗಿರುವದೆಲ್ಲವೂ ಪ್ರಕೃತಿಯಿಂದಾಗಿರುತ್ತದೆ; ಸುಖದುಃಖ ಭೋಗವು ಪುರುಷನಿಂದಾಗಿರುತ್ತದೆ. ಪ್ರಕೃತಿಯಲ್ಲಿರುವ ಮಿಥ್ಯಾಭಿಮಾನದಿಂದ ಗುಣಗಳಲ್ಲಿ, ಸಂಗವುಳ್ಳವನಾಗಿ ಪುರುಷನು ಸದಸದ್ಯೋನಿಗಳಲ್ಲಿ ಹುಟ್ಟುತ್ತಾ ಸಂಸಾರದಲ್ಲಿ ತೊಳಲುತ್ತಿರುವನು. ಆದರೆ ದೇಹದಲ್ಲಿರುವ ಈ ಪುರುಷನೇ ತನ್ನ ಪರಮಾರ್ಥಸ್ವರೂಪದಿಂದ ಎಲ್ಲವನ್ನೂ ನೋಡುವ ಚೈತನ್ಯಮಾತ್ರನಾಗಿ ದೇಹೇಂದ್ರಿಯಗಳ ಸಕಲ ವ್ಯಾಪಾರಗಳಿಗೂ, ತನ್ನ ಸನ್ನಿಧಿ ಮಾತ್ರದಿಂದ ಕಾರಣನಾಗಿ ಎಲ್ಲಕ್ಕೂ ಪುಷ್ಟಿಯನ್ನು ಕೊಡುತ್ತಿರುವನು. ಅವೆಲ್ಲವನ್ನೂ ಆಳುವ ಮಹೇಶ್ವರನಾಗಿರುವನು. ಹೀಗೆಂದು ಪ್ರಕೃತಿಪುರುಷರನ್ನೂ ಗುಣಗಳಿಂದಾಗುವ ಸಂಸಾರವನ್ನೂ ಯಾವನು ವಿಂಗಡಿಸಿ ತಿಳಿದುಕೊಳ್ಳುವನೋ ಅಂಥ ಜ್ಞಾನಿಗೆ ಪುನರ್ಜನ್ಮವಿಲ್ಲ

೨೪-೨೫. ಈ ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳುವದಕ್ಕೆ ಕೆಲವರು ಧ್ಯಾನವನ್ನು, ಕೆಲವರು ಸಾಂಖ್ಯಯೋಗವನ್ನು, ಮತ್ತೆ ಕೆಲವರು ಕರ್ಮಯೋಗವನ್ನು ಉಪಯೋಗಿಸುತ್ತಾರೆ; ಇನ್ನೂ ಕೆಲವರು ತಮಗೆ ಯಾವದೊಂದು ಮಾರ್ಗವೂ ತಿಳಿಯದ್ದರಿಂದ ದೊಡ್ಡವರು ಹೇಳಿದ ರೀತಿಯಿಂದಲೇ ಭಗವಂತನನ್ನು ಉಪಾಸನೆಮಾಡುತ್ತಾರೆ. ಇವರೆಲ್ಲರಿಗೂ ಮೋಕ್ಷವು ದೊರಕುತ್ತದೆ.

೨೬-೩೦. '' ಜನ್ಮಸಂಸಾರಕ್ಕೆ ಕಾರಣವಾದದ್ದು ಕ್ಷೇತ್ರಕ್ಷೇತ್ರಜ್ಞರ ಅಧ್ಯಾಸವು. ಯಾವನು ' ಕ್ಷೇತ್ರಗಳು ನಾಶವಾಗುವವು, ಇವುಗಳಲ್ಲಿರುವ ಆತ್ಮನು ಮಾತ್ರ ನಿಜವಾಗಿ ಅವಿನಾಶಿಯಾದ ಪರಮೇಶ್ವರನು ' ಎಂದು ತಿಳಿದುಕೊಳ್ಳುವನೋ ಅವನೇ ಜ್ಞಾನಿಯು. ಸರ್ವಕ್ಷೇತ್ರಗಳಲ್ಲಿಯೂ ಇರುವ ಪರಮಾತ್ಮನೇ ತಾನೆಂದು ತಿಳಿದುಕೊಂಡವನು ಮಿಕ್ಕವರಂತೆ ಅಜ್ಞಾನದಿಂದ ಆತ್ಮಹತ್ಯೆಯನ್ನು ಮಾಡಿಕೊಳ್ಳುವದಿಲ್ಲ. ಪ್ರಕೃತಿಯೇ ಸಕಲ ಕರ್ಮವನ್ನೂ ಮಾಡುವದು, ನಾನು ಅಕರ್ತನಾದ ಪರಮಾತ್ಮನು ಎಂದು ತಿಳಿದುಕೊಂಡು ಸಕಲ ಭೂತಗಳೂ ಆ ಒಬ್ಬ ಪರಮಾತ್ಮನಿಂದಲೇ ಹುಟ್ಟಿ ಅವನ ಆಧಾರದಿಂದಲೇ ನಿಂತಿರುವವೆಂಬುದನ್ನು ತಿಳಿದುಕೊಳ್ಳುವನೋ ಆಗ ಅವನು ಬ್ರಹ್ಮವೇ ಆಗುವನು.

೩೧-೩೩. ‘ ಈ ಪರಮಾತ್ಮನು ಅನಾದಿಯಾಗಿ ನಿರ್ಗುಣನಾಗಿರುವದರಿಂದ ನಾಶರಹಿತನಾಗಿರುತ್ತಾನೆ. ಇವನು ಶರೀರದಲ್ಲಿದ್ದರೂ ಯಾವ ಕರ್ಮವನ್ನೂ ಮಾಡುವದೂ ಇಲ್ಲ, ಕರ್ಮಫಲದ ಅಂಟು ಅವನಿಗೆ ಹತ್ತಿಕೊಳ್ಳುವದೂ ಇಲ್ಲ. ಆಕಾಶವು ಎಲ್ಲೆಲ್ಲಿಯೂ ಇರುತ್ತಿದ್ದರೂ ಸೂಕ್ಷ್ಮವಸ್ತುವಾದ್ದರಿಂದ ಸ್ಥೂಲವಸ್ತುಗಳ ಅಂಟು ಅದಕ್ಕೆ ಹೇಗೆ ಅಗುವದಿಲ್ಲವೋ ಅದರಂತೆ ಎಲ್ಲೆಲ್ಲಿಯೂ ದೇಹದಲ್ಲಿ ಇದ್ದರೂ ಈ ಪರಮಾತ್ಮನಿಗೆ ಅದರ ದೋಷಗಳು ಹತ್ತುವದಿಲ್ಲ. ಸೂರ್ಯನು ತಾನೊಬ್ಬನೇ ಲೋಕವನ್ನೆಲ್ಲ ಬೆಳಗುತ್ತಿರುವಂತೆ ಈ ಕ್ಷೇತ್ರಜ್ಞರೂಪವಾದ ಪರಮಾತ್ಮನು ಸಕಲ ಕ್ಷೇತ್ರಗಳನ್ನೂ ಬೆಳಗುತ್ತಾ ಅವುಗಳ ಲೇಪವಿಲ್ಲದೆ ಇರುತ್ತಾನೆ.

೩೪. “ ಹೀಗೆ ಕ್ಷೇತ್ರಕ್ಕೂ ಕ್ಷೇತ್ರಜ್ಞನಿಗೂ ಇರುವ ತಾರತಮ್ಯವನ್ನು ಕಂಡುಕೊಂಡು ಭೂತಗಳಿಗೆಲ್ಲ ಕಾರಣವಾದ ಪ್ರಕೃತಿಯನ್ನು ಲಯಗೊಳಿಸುವ ಬಗೆಯನ್ನು ಯಾರು ತಿಳಿದುಕೊಳ್ಳುವರೋ ಅವರು ಪರಬ್ರಹ್ಮವನ್ನೇ ಸೇರುತ್ತಾರೆ.”



# ಹದಿನಾಲ್ಕನೆಯ ಅಧ್ಯಾಯ

## (ಗುಣತ್ರಯವಿಭಾಗಯೋಗ)

## ಈ ಅಧ್ಯಾಯದ ಸಂಬಂಧ

**(ಭಾಷ್ಯ)**

೩೦೨. ಸರ್ವಮ್ ಉತ್ಪದ್ಯಮಾನಂ ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ಉತ್ಪದ್ಯತೇ (೧೩-೨೬) ಇತಿ ಉಕ್ತಮ್। ತತ್ ಕಥಮ್ ಇತಿ ತತ್ಪ್ರದರ್ಶನಾರ್ಥಂ "ಪರಂ ಭೂಯಃ" ಇತ್ಯಾದಿಃ ಅಧ್ಯಾಯಃ ಆರಭ್ಯತೇ । ಅಥವಾ ಈಶ್ವರಪರತನ್ತ್ರಯೋಃ ಕ್ಷೇತ್ರಕ್ಷೇತ್ರಜ್ಞಯೋಃ ಜಗತ್ಕಾರಣತ್ವಮ್ ನ ತು ಸಾಙ್ಖ್ಯಾನಾಮಿವ ಸ್ವತನ್ತ್ರಯೋಃ ಇತ್ಯೇವಮರ್ಥಮ್ । ಪ್ರಕೃತಿಸ್ಥತ್ವಂ ಗುಣೇಷು ಚ ಸಙ್ಗಃ ಸಂಸಾರಕಾರಣಮ್ ಇತಿ ಉಕ್ತಮ್। ಕಸ್ಮಿನ್ ಗುಣೇ ಕಥಂ ಸಙ್ಗಃ? ಕೇ ವಾ ಗುಣಾಃ? ಕಥಂ ವಾ ತೇ[1] ಬಧ್ನನ್ತಿ ಇತಿ? ಗುಣೇಭ್ಯಶ್ಚ ಮೋಕ್ಷಣಂ ಕಥಂ ಸ್ಯಾತ್? ಮುಕ್ತಸ್ಯ ಚ ಲಕ್ಷಣಂ ವಕ್ತವ್ಯಮ್–ಇತ್ಯೇವಮರ್ಥಂ ಚ ಭಗವಾನ್ ಉವಾಚ—

**(ಭಾಷ್ಯಾರ್ಥ)**

ಹುಟ್ಟುವದೆಲ್ಲ ಕ್ಷೇತ್ರಕ್ಷೇತ್ರಜ್ಞರ ಸಂಯೋಗದಿಂದಲೇ ಹುಟ್ಟುತ್ತದೆ ಎಂದು (೧೩-೨೬ ರಲ್ಲಿ) ಹೇಳಿರುತ್ತದೆ. ಅದು (ಹೇಗೆ?) ಎಂಬುದನ್ನು ತಿಳಿಸಿಕೊಡುವದಕ್ಕಾಗಿ "ಪರಂ ಭೂಯಃ" (ಇನ್ನೊಮ್ಮೆಯೂ) ಎಂದು ಮುಂತಾಗಿರುವ (ಈ) ಅಧ್ಯಾಯವನ್ನು ಪ್ರಾರಂಭಿಸಿರುತ್ತದೆ.

ಅಥವಾ ಈಶ್ವರನ ಅಧೀನವಾಗಿರುವ ಕ್ಷೇತ್ರಕ್ಷೇತ್ರಜ್ಞರು ಜಗತ್ಕಾರಣರಾಗಿರುವರೇ ಹೊರತು ಸಾಂಖ್ಯರು ಹೇಳುವಂತೆ ಸ್ವತಂತ್ರರಾಗಿರುವ (ಕ್ಷೇತ್ರಕ್ಷೇತ್ರಜ್ಞ)ರಲ್ಲ–ಎಂದು ತಿಳಿಸಿಕೊಡುವದಕ್ಕಾಗಿ[2] (ಈ ಅಧ್ಯಾಯವನ್ನು ಪ್ರಾರಂಭಿಸಿರುತ್ತದೆ ಎಂದೂ ಹೇಳಬಹುದು).

ಪ್ರಕೃತಿಯಲ್ಲಿದ್ದುಕೊಂಡಿರುವದೂ ಗುಣಗಳಲ್ಲಿ ಆಸಕ್ತಿಯನ್ನು (ಮಾಡುವದೂ)

---

1. "ವಾ ತೇ" ಈ ಮಾತುಗಳು ಮ|| ವ್ಯ|| ಗಳಲ್ಲಿಲ್ಲ.
2. ಸೂ. ಭಾ. ೧-೪-೩ ನ್ನು ನೋಡಿ.

ಸಂಸಾರಕ್ಕೆ ಕಾರಣವೆಂದು (೧೩-೨೧ ರಲ್ಲಿ) ಹೇಳಿದೆಯಷ್ಟೆ. ಯಾವ ಗುಣದಲ್ಲಿ ಹೇಗೆ ಸಂಗ(ವನ್ನು ಮಾಡುವದು)? ಗುಣಗಳು ಎಂದರಾದರೂ ಯಾವವು? ಅವು (ದೇಹಿಯನ್ನು) ಬಂಧಿಸುತ್ತವೆ ಎಂಬುದಾದರೂ ಹೇಗೆ? ಮತ್ತು ಗುಣಗಳಿಂದ ಮೋಕ್ಷವು ಹೇಗೆ ಆಗುವದು? ಮುಕ್ತನ ಲಕ್ಷಣವನ್ನೂ ಹೇಳಬೇಕಾಗಿದೆ. ಇದಕ್ಕಾಗಿಯೂ ಭಗವಂತನು ಇಂತೆಂದನು :—

## ಜ್ಞಾನದಿಂದಾಗುವ ಪ್ರಯೋಜನ

**ಶ್ರೀ ಭಗವಾನ್ ಉವಾಚ—**

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ॥೧॥**

೧. ಇನ್ನೊಮ್ಮೆಯೂ ಜ್ಞಾನಗಳಲ್ಲಿ ಉತ್ತಮವಾದ ಹೆಚ್ಚಿನ ಜ್ಞಾನವನ್ನು ಹೇಳುವೆನು. ಇದನ್ನರಿತು ಮುನಿಗಳೆಲ್ಲರೂ ಇಲ್ಲಿಂದ ಪರಸಿದ್ಧಿಯನ್ನು ಹೊಂದಿದರು.

(ಭಾಷ್ಯ)

೩೦೩. ಪರಂ ಜ್ಞಾನಮ್ ಇತಿ ವ್ಯವಹಿತೇನ ಸಮ್ಬನ್ಧಃ । ಭೂಯಃ ಪುನಃ ಪೂರ್ವೇಷು[1] ಅಧ್ಯಾಯೇಷು ಅಸಕೃತ್ ಉಕ್ತಮಪಿ ಪ್ರವಕ್ಷ್ಯಾಮಿ । ತಚ್ಚ ಪರಮ್। ಪರವಸ್ತುವಿಷಯತ್ವಾತ್ । ಕಿಂ ತತ್ ? ಜ್ಞಾನಂ ಸರ್ವೇಷಾಂ ಜ್ಞಾನಾನಾಮ್ ಉತ್ತಮಮ್। ಉತ್ತಮಫಲತ್ವಾತ್[2] । ಜ್ಞಾನಾನಾಮ್। ಇತಿ ನ[3] ಅಮಾನಿತ್ವಾದೀನಾಮ್, ಕಿಂ ತರ್ಹಿ, ಯಜ್ಞಾದಿಜ್ಞೇಯವಸ್ತುವಿಷಯಾಣಾಮ್ ಇತಿ । ತಾನಿ ನ ಮೋಕ್ಷಾಯ, ಇದಂ ತು ಮೋಕ್ಷಾಯ ಇತಿ ಪರೋತ್ತಮಶಬ್ದಾಭ್ಯಾಂ ಸ್ತೌತಿ ಶ್ರೋತೃಬುದ್ಧಿರುಚ್ಯುತ್ಪಾದನಾರ್ಥಮ್ । ಯತ್ ಜ್ಞಾತ್ವಾ ಯತ್ ಜ್ಞಾನಂ ಜ್ಞಾತ್ವಾ ಪ್ರಾಪ್ಯ ಮುನಯಃ ಸಂನ್ಯಾಸಿನಃ ಮನನಶೀಲಾಃ ಸರ್ವೇ ಪರಾಂ ಸಿದ್ಧಿಂ ಮೋಕ್ಷಾಖ್ಯಾಮ್ ಇತಃ ಅಸ್ಮಾತ್ ದೇಹಬನ್ಧನಾತ್[4] ಗತಾಃ ಪ್ರಾಪ್ತಾಃ ॥

---

1. ‘ ಸರ್ವೇಷು ’ ಎಂದು ಹೆಚ್ಚಾಗಿ ನಿ॥ ಅ॥ ನಿ॥ ಗು॥ ಮ॥
2. ‘ ಉತ್ತಮಫಲವತ್ತ್ವಾತ್ ’ ಮ॥
3. ‘ ನ ತು ’ ಮ॥
4. ‘ ಊರ್ಧ್ವಂ ’ ಎಂದು ಹೆಚ್ಚಾಗಿ ಅ॥ ಮ॥ ಗು॥ ವಾ॥

(ಭಾಷ್ಯಾರ್ಥ)

(ಮೂಲದಲ್ಲಿರುವ) ಪರಂ (ಎಂಬ ಮಾತನ್ನು) ಜ್ಞಾನಮ್ ಎಂದು ದೂರದಲ್ಲಿರುವ) ಮಾತಿಗೆ) ಸಂಬಂಧ(ವನ್ನು ಮಾಡಿಕೊಳ್ಳಬೇಕು). ಇನ್ನೊಮ್ಮೆ ಮತ್ತೊಂದು ಸಲ-ಹಿಂದಿದ ಅಧ್ಯಾಯಗಳಲ್ಲಿ ಅನೇಕ ಸಾರಿ ಹೇಳಿದ್ದರೂ (ಇನ್ನೊಮ್ಮೆ) ಹೇಳುವೆನು. ಮತ್ತು ಆ (ಜ್ಞಾನವು) ಹೆಚ್ಚಿನದು, ಏಕೆಂದರೆ ಹೆಚ್ಚಿನ (ಪರಮಾತ್ಮ) ವಸ್ತುವಿನ ವಿಷಯ(ವಾದ ಜ್ಞಾನವಾಗಿರುತ್ತದೆ). ಅದು ಯಾವದು? ಜ್ಞಾನಗಳಲ್ಲೆಲ್ಲ ಉತ್ತಮವಾದ ಜ್ಞಾನವು; ಏಕೆಂದರೆ (ಅದಕ್ಕೆ) ಉತ್ತಮವಾದ ಫಲವಿರುತ್ತದೆ. (ಇಲ್ಲಿ) 'ಜ್ಞಾನಗಳಲ್ಲಿ' ಎಂದರೆ ಅಮಾನಿತ್ವಾದಿಗಳಲ್ಲಿ (ಎಂದರ್ಥ)ವಲ್ಲ[1], ಮತ್ತೇನೆಂದರೆ ಯಜ್ಞವೇ ಮುಂತಾದ ಜ್ಞೇಯವಸ್ತು[2] ವಿಷಯಕವಾದ (ಜ್ಞಾನಗಳಲ್ಲಿ) ಎಂದು (ಅರ್ಥ). ಅವುಗಳು ಮೋಕ್ಷಕ್ಕೆ (ಕಾರಣ)ವಲ್ಲ. ಇದು ಮಾತ್ರ ಮೋಕ್ಷಕ್ಕೆ (ಕಾರಣ)-ಎಂದು (ಈ ಜ್ಞಾನವನ್ನು) ಪರ, ಉತ್ತಮ ಎಂಬ ಶಬ್ದಗಳಿಂದ-ಕೇಳುವ (ಅರ್ಜುನನ) ಬುದ್ಧಿಯಲ್ಲಿ ಸವಿ ಹುಟ್ಟಿಸುವದಕ್ಕಾಗಿ-ಹೊಗಳಿರುತ್ತಾನೆ. ಈ (ಜ್ಞಾನವನ್ನು) ಅರಿತುಕೊಂಡು, ಪಡೆದುಕೊಂಡು, ಮುನಿಗಳು ಮನನಶೀಲರಾದ ಸಂನ್ಯಾಸಿಗಳು ಎಲ್ಲರೂ ಮೋಕ್ಷವೆಂಬ ಹೆಸರಿನ ಹೆಚ್ಚಿನ ಸಿದ್ಧಿಯನ್ನು ಇಲ್ಲಿಂದ ಈ ದೇಹಬಂಧದಿಂದ (ಬಿಡುಗಡೆಯನ್ನು) ಹೊಂದಿರುತ್ತಾರೆ, ಪಡೆದಿರುತ್ತಾರೆ.

(ಭಾಷ್ಯ)

೩೦೪. ಅಸ್ಯಾಶ್ಚ[3] ಸಿದ್ಧೇಃ ಐಕಾನ್ತಿಕತ್ವಂ ದರ್ಶಯತಿ[4]–

(ಭಾಷ್ಯಾರ್ಥ)

ಮತ್ತು ಈ ಸಿದ್ಧಿಯು ನಿಯತವಾಗಿ ಆಗಿಯೇ ತೀರತಕ್ಕದ್ದೆಂಬುದನ್ನು ತಿಳಿಸುತ್ತಾನೆ :—

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ ॥೨॥**

1. ಜ್ಞಾನಕ್ಕೆ ಸಾಧನವಾಗಿರುವ ಅಮಾನಿತ್ವಾದಿಗಳಲ್ಲಿ ಉತ್ತಮವಾದ ಸಾಧನವನ್ನು ಹೇಳುವೆನು ಎಂದರ್ಥವಲ್ಲ.

2. ಯಜ್ಞ, ದಾನ, ತಪಸ್ಸು–ಇವುಗಳ ಜ್ಞಾನವು ಪರಂಪರೆಯಿಂದ ಮುಕ್ತಿಗೆ ಕಾರಣ; ಆದರೆ ಇದು ನೇರಾಗಿ ಕಾರಣವಾಗಿರುವದರಿಂದ ಅವುಗಳಿಗಿಂತ ಉತ್ತಮ.

3. "ತೇಷಾಂ ಚ ಕಿಂ ಫಲಮ್ ಇತಿ; ಉಚ್ಯತೇ" ಎಂದು ಹೆಚ್ಚಾಗಿ ಮ॥; ಈ ವಾಕ್ಯಕ್ಕಿಂತ ಮೊದಲು 'ತಸ್ಯಾಶ್ಚ....' ಮೈ॥

4. 'ಉಚ್ಯತೇ' ಮೈ॥

೨. ಈ ಜ್ಞಾನವನ್ನು ಆಶ್ರಯಿಸಿಕೊಂಡು ನನ್ನ ಸಾಮರ್ಥ್ಯವನ್ನು ಹೊಂದಿದವರು ಸೃಷ್ಟಿಯಲ್ಲಿಯೂ ಹುಟ್ಟುವದಿಲ್ಲ, ಪ್ರಲಯದಲ್ಲಿ ವ್ಯಥೆ ಪಡುವದೂ ಇಲ್ಲ.

(ಭಾಷ್ಯ)

೩೦೫. ಇದಂ ಜ್ಞಾನಂ ಯಥೋಕ್ತಮ್ ಉಪಾಶ್ರಿತ್ಯ ಜ್ಞಾನಸಾಧನಮ್ ಅನುಷ್ಠಾಯ ಇತ್ಯೇತತ್ । ಮಮ ಪರಮೇಶ್ವರಸ್ಯ ಸಾಧರ್ಮ್ಯಂ ಮತ್ಸ್ವರೂಪತಾಮ್ ಆಗತಾಃ ಪ್ರಾಪ್ತಾಃ ಇತ್ಯರ್ಥಃ । ನ ತು ಸಮಾನಧರ್ಮತಾ ಸಾಧರ್ಮ್ಯಮ್ । ಕ್ಷೇತ್ರಜ್ಞೇಶ್ವರಯೋಃ ಭೇದಾನಭ್ಯುಪಗಮಾತ್ ಗೀತಾಶಾಸ್ತ್ರೇ। ಫಲವಾದಶ್ಚ ಅಯಂ ಸ್ತುತ್ಯರ್ಥಮ್ ಉಚ್ಯತೇ । ಸರ್ಗೇಽಪಿ ಸೃಷ್ಟಿಕಾಲೇಽಪಿ ನೋಪಜಾಯನ್ತೇ ನ ಉತ್ಪದ್ಯನ್ತೇ । ಪ್ರಲಯೇ ಬ್ರಹ್ಮಣೋಽಪಿ[1] ವಿನಾಶಕಾಲೇ ನ ವ್ಯಥನ್ತಿ ಚ ವ್ಯಥಾಂ ನಾಪದ್ಯನ್ತೇ ನ ಚಲನ್ತಿ[2] ಇತ್ಯರ್ಥಃ ॥

(ಭಾಷ್ಯಾರ್ಥ)

(ಈ) ಹೇಳಿದ ಜ್ಞಾನವನ್ನು ಆಶ್ರಯಿಸಿಕೊಂಡು, ಎಂದರೆ ಜ್ಞಾನಸಾಧನವನ್ನು ಅನುಷ್ಠಾನಮಾಡಿ ಎಂದರ್ಥ. ಪರಮೇಶ್ವರನಾದ **ನನ್ನ ಸಾಧರ್ಮ್ಯವನ್ನು ನನ್ನ ಸ್ವರೂಪವನ್ನು ಹೊಂದಿದವರು ಪಡೆದುಕೊಂಡವರು ಎಂದರ್ಥ. ಸಾಧರ್ಮ್ಯವೆಂದರೆ (ನನಗೆ) ಸಮಾನವಾದ ಧರ್ಮವೆಂದೇನೂ ಅರ್ಥವಲ್ಲ; ಏಕೆಂದರೆ ಗೀತಾಶಾಸ್ತ್ರದಲ್ಲಿ ಕ್ಷೇತ್ರಜ್ಞ, ಈಶ್ವರ-ಇವರಿಬ್ಬರಿಗೂ ಭೇದವಿರುವದೆಂಬುದನ್ನು ಒಪ್ಪಿರುವದಿಲ್ಲ. ಇದೂ ಅಲ್ಲದೆ (ಜ್ಞಾನವನ್ನು) ಹೊಗಳುವದಕ್ಕಾಗಿ (ಹೇಳಿದ) ಫಲವಾದ(ವಿದು).**[3]

(ಈ ಜ್ಞಾನದಿಂದ ನನ್ನ ಸ್ವರೂಪವನ್ನು ಹೊಂದಿದವರು) ಸರ್ಗದಲ್ಲಿಯೂ ಸೃಷ್ಟಿಕಾಲದಲ್ಲಿಯೂ ಹುಟ್ಟುವದಿಲ್ಲ, ಉಂಟಾಗುವದಿಲ್ಲ; ಪ್ರಲಯದಲ್ಲಿ **ಬ್ರಹ್ಮನು ಕೂಡ ನಾಶವಾಗುವ ಕಾಲದಲ್ಲಿ** ವ್ಯಥೆಪಡುವದೂ ಇಲ್ಲ, ವ್ಯಥೆಯನ್ನು ಹೊಂದುವದಿಲ್ಲ, (ಸ್ವರೂಪವನ್ನು ಬಿಟ್ಟು) ಅಲುಗಾಡುವದಿಲ್ಲ ಎಂದರ್ಥ.

---

1. ಸ॥ ಮ್ಯೆ॥ ಗಳಲ್ಲಿ 'ಅಪಿ' ಇಲ್ಲ.

2. 'ಚ್ಯವನ್ತಿ' ಎಂಬ ಅ॥ ಸ॥ ಪಾಠಕ್ಕಿಂತ ಇದು ಉತ್ತಮ.

3. 'ಕ್ಷೇತ್ರಜ್ಞನನ್ನು ನನ್ನನ್ನಾಗಿ ತಿಳಿ' ಎಂದು ಭಗವಂತನು ಮೊದಲೇ ಹೇಳಿಬಿಟ್ಟಿರುವದರಿಂದ ಇಲ್ಲಿ ಸಾಧರ್ಮ್ಯವೆಂದರೆ ಸ್ವರೂಪವೆಂದೇ ಅರ್ಥವನ್ನು ಮಾಡಬೇಕು. ಜ್ಞಾನಕ್ಕೆ ಫಲವು ಇದೆಂದೂ ಹೇಳಿರುವದರಿಂದ ಮುಂ. ೩-೨-೯ ಮುಂತಾದ ಶ್ರುತಿಗನುಸಾರವಾಗಿ ಈ ಅರ್ಥವನ್ನೇ ಮಾಡಬೇಕು.

## ಎಂಥ ಕ್ಷೇತ್ರಕ್ಷೇತ್ರಜ್ಞಸಂಯೋಗವು ಜಗತ್ಕಾರಣವು ?

(ಭಾಷ್ಯ)

೩೦೬. ಕ್ಷೇತ್ರಕ್ಷೇತ್ರಜ್ಞಸಂಯೋಗಃ ಈದೃಶಃ ಭೂತಕಾರಣಮ್ ಇತ್ಯಾಹ–

(ಭಾಷ್ಯಾರ್ಥ)

ಇಂಥ ಕ್ಷೇತ್ರಕ್ಷೇತ್ರಜ್ಞಸಂಯೋಗವು ಭೂತಗಳಿಗೆ ಕಾರಣವೆಂದು (ಭಗವಂತನು) ಹೇಳುತ್ತಾನೆ:—

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಮ್ಭವಃ ಸರ್ವಭೂತಾನಾಮ್ ತತೋ ಭವತಿ ಭಾರತ ॥೩॥**

೩. ನನ್ನ ಯೋನಿಯು ದೊಡ್ಡ ಬ್ರಹ್ಮವು. ಅದರಲ್ಲಿ ನಾನು ಗರ್ಭವನ್ನು ಇಡುವೆನು. ಎಲೈ ಭಾರತನೆ, ಸರ್ವಭೂತಗಳ ಉತ್ಪತ್ತಿಯೂ ಅದರಿಂದ ಆಗುತ್ತದೆ.

(ಭಾಷ್ಯ)

೩೦೭. ಮಮ ಸ್ವಭೂತಾ [1] ಮದೀಯಾ ಮಾಯಾ ತ್ರಿಗುಣಾತ್ಮಿಕಾ ಪ್ರಕೃತಿಃ ಯೋನಿಃ ಸರ್ವಭೂತಾನಾಂ ಕಾರಣಮ್ [2] । ಸರ್ವಕಾರ್ಯೇಭ್ಯೋ ಮಹತ್ತ್ವಾತ್ ಭರಣಾಚ್ಚ ಸ್ವವಿಕಾರಾಣಾಂ [3]ಮಹತ್ ಬ್ರಹ್ಮ ಇತಿ ಯೋನಿರೇವ ವಿಶಿಷ್ಯತೇ । ತಸ್ಮಿನ್ ಮಹತಿ ಬ್ರಹ್ಮಣಿ ಯೋನೌ ಗರ್ಭಂ ಹಿರಣ್ಯಗರ್ಭಸ್ಯ ಜನ್ಮನಃ ಬೀಜಂ ಸರ್ವಭೂತಜನ್ಮಕಾರಣಂ ಬೀಜಂ [4] ದಧಾಮಿ ನಿಕ್ಷಿಪಾಮಿ । ಕ್ಷೇತ್ರಕ್ಷೇತ್ರಜ್ಞಪ್ರಕೃತಿದ್ವಯಶಕ್ತಿಮಾನ್ ಈಶ್ವರಃ ಅಹಮ್ ಅವಿದ್ಯಾಕಾಮಕರ್ಮೋಪಾಧಿಸ್ವರೂಪಾನುವಿಧಾಯಿನಂ ಕ್ಷೇತ್ರಜ್ಞಂ ಕ್ಷೇತ್ರೇಣ ಸಂಯೋಜಯಾಮಿ ಇತ್ಯರ್ಥಃ । ಸಮ್ಭವಃ ಉತ್ಪತ್ತಿಃ ಸರ್ವಭೂತಾನಾಂ ಹಿರಣ್ಯಗರ್ಭೋತ್ಪತ್ತಿದ್ವಾರೇಣ ತತಃ ತಸ್ಮಾತ್ ಗರ್ಭಾಧಾನಾತ್ [5] ಭವತಿ ಹೇ ಭಾರತ ॥

---

1. ' ಸ್ವರೂಪಭೂತಾ ' ಮ॥ ಮೈ॥
2. ಶ॥ ಗು॥ ಗಳಲ್ಲಿಲ್ಲ
3. " ಸರ್ವಕಾರ್ಯಾಣಾಂ ಮಹತ್ತ್ವಾತ್, ಕಾರಣತ್ವಾತ್, ಸ್ವವಿಕಾರಾಣಾಂ ಬೃಂಹಣತ್ವಾಚ್ಚ " ಮ॥ ; " ಸರ್ವಕಾರ್ಯೇಭ್ಯೋ ಮಹತ್ತ್ವಾತ್ ಕಾರಣತ್ವಾತ್ ಬೃಂಹಣತ್ವಾಚ್ಚ ಸ್ವವಿಕಾರಾಣಾಂ '' ಮೈ॥ ಗು॥
4. " ಗರ್ಭಂ ಸರ್ವಭೂತಜನ್ಮಕಾರಣಹಿರಣ್ಯಗರ್ಭಜನ್ಮನೋ ಬೀಜಮ್ '' ನು॥
5. ' ಗರ್ಭಸಿಧಾನಾತ್ ' ಮ॥ ಮೈ॥

(ಭಾಷ್ಯಾರ್ಥ)

ನನ್ನ ಸ್ವತ್ತಾಗಿರುವ[1] ನನ್ನ ಸಂಬಂಧವಾದ ತ್ರಿಗುಣಾತ್ಮಕವಾದ ಮಾಯೆಯೆಂಬ ಪ್ರಕೃತಿಯು ಯೋನಿಯು ಸರ್ವಭೂತಗಳಿಗೂ ಕಾರಣವು. **ಎಲ್ಲಾ ಕಾರ್ಯಗಳಿಗಿಂತ ದೊಡ್ಡದಾಗಿರುವದರಿಂದಲೂ, ತನ್ನ ಕಾರ್ಯಗಳೆಲ್ಲವನ್ನೂ ಧರಿಸಿರುವದರಿಂಲೂ 'ಮಹತ್ತು,' 'ಬ್ರಹ್ಮ' ಎಂದು ಯೋನಿಗೇ ವಿಶೇಷಣವನ್ನು ಕೊಟ್ಟಿರುತ್ತದೆ.**[2] ಆ ಮಹತ್ತಾದ ಬ್ರಹ್ಮವೆಂಬ ಯೋನಿಯಲ್ಲಿ ಗರ್ಭವನ್ನು ಹಿರಣ್ಯಗರ್ಭನು ಹುಟ್ಟುವದಕ್ಕೆ (ಬೇಕಾದ) ಬೀಜವನ್ನು, ಎಲ್ಲಾ ಭೂತಗಳಿಗೂ ಹುಟ್ಟುವದಕ್ಕೆ ಬೇಕಾದ ಬೀಜವನ್ನು, ಇಡುತ್ತೇನೆ, ಹಾಕುತ್ತೇನೆ. **ಕ್ಷೇತ್ರ ಕ್ಷೇತ್ರಜ್ಞ–ಎಂಬ ಎರಡು ಪ್ರಕೃತಿಗಳೆಂಬ ಶಕ್ತಿಯುಳ್ಳ ಈಶ್ವರನಾದ ನಾನು ಅವಿದ್ಯಾಕಾಮಕರ್ಮ(ಗಳಿಂದಾಗಿರುವ) ಉಪಾಧಿಸ್ವರೂಪವನ್ನು ಅನುಸರಿಸುವ ಕ್ಷೇತ್ರಜ್ಞನನ್ನು ಕ್ಷೇತ್ರಕ್ಕೆ ಕೂಡಿಸುತ್ತೇನೆ ಎಂದರ್ಥ.** ಎಲೈ ಭರತವಂಶೋತ್ಪನ್ನನೆ, ಹಿರಣ್ಯಗರ್ಭನ ಉತ್ಪತ್ತಿಯ ಮೂಲಕ ಸರ್ವಭೂತಗಳ ಸಂಭವವು, ಉತ್ಪತ್ತಿಯು, ಆದರಿಂದ ಆ ಗರ್ಭಾಧಾನದಿಂದ ಆಗುತ್ತದೆ.

**ಸರ್ವಯೋನಿಷು ಕೌನ್ತೇಯ ಮೂರ್ತಯಃ ಸಂಭವನ್ತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ ಯೋನಿರಹಂ ಬೀಜಪ್ರದಃ ಪಿತಾ ॥೪॥**

೪. ಕೌಂತೇಯನೆ, ಸರ್ವಯೋನಿಗಳಲ್ಲಿಯೂ ಯಾವ ಮೂರ್ತಿಗಳು ಉಂಟಾಗುತ್ತಿರುವವೋ, ಅವುಗಳಿಗೆ ಮಹತ್ತಾದ ಬ್ರಹ್ಮವು ಯೋನಿಯು, ನಾನು ಬೀಜಪ್ರದನಾದ ತಂದೆ.

(ಭಾಷ್ಯ)

೩೦೮. ದೇವಪಿತೃಮನುಷ್ಯಪಶುಮೃಗಾದಿಸರ್ವಯೋನಿಷು ಕೌನ್ತೇಯ ಮೂರ್ತಯಃ ದೇಹಸಂಸ್ಥಾನಲಕ್ಷಣಾಃ ಮೂರ್ಛಿತಾಙ್ಗಾವಯವಾಃ ಮೂರ್ತಯಃ ಸಂಭವನ್ತಿ ಯಾಃ ತಾಸಾಂ ಮೂರ್ತೀನಾಂ ಬ್ರಹ್ಮ ಮಹತ್ ಸರ್ವಾವಸ್ಥಂ ಯೋನಿಃ ಕಾರಣಮ್ ಅಹಮ್ ಈಶ್ವರಃ[3] ಬೀಜಪ್ರದಃ ಗರ್ಭಾಧಾನಸ್ಯ ಕರ್ತಾ ಪಿತಾ ॥

---

1. ಸೂ. ಭಾ. ೧–೪–೩.

2. ಮುಂ. ಭಾ. ೨-೧-೨ ರಲ್ಲಿ 'ಅಕ್ಷರಾತ್ ಪರತಃ' ಎಂಬುದರ ಭಾಷ್ಯವನ್ನು ನೋಡಿ.

3. 'ಈಶಃ' ಮು॥

(ಭಾಷ್ಯಾರ್ಥ)

ಕೌನ್ತೇಯನೆ, ದೇವತೆಗಳು, ಪಿತೃಗಳು, ಮನುಷ್ಯರು, ಪಶುಗಳು, ಮೃಗಗಳು ಮುಂತಾದ ಸರ್ವಯೋನಿಗಳಲ್ಲಿಯೂ ಶರೀರಾವಯವಗಳು ಸೇರಿರುವ ದೇಹಾಕಾರ ರೂಪವಾದ ಯಾವ (ಯಾವ) ಮೂರ್ತಿಗಳು ಉಂಟಾಗುತ್ತಿರುವವೋ, ಆ ಮೂರ್ತಿಗಳಿಗೆ ಎಲ್ಲರಲ್ಲಿಯೂ ಇರುವ ಮಹತ್ತಾದ ಬ್ರಹ್ಮವು[1] ಯೋನಿಯು, ಕಾರಣವು; ಈಶ್ವರನಾದ ನಾನು ಬೀಜಪ್ರದನಾದ, ಗರ್ಭಧಾನಕರ್ತನಾದ ತಂದೆಯು.[2]

## ಗುಣಗಳಿಂದಾಗುವ ಬಂಧ

(ಭಾಷ್ಯ)

೩೦೯. ಕೇ ಗುಣಾಃ? ಕಥಂ ಬಧ್ನನ್ತಿ ಇತಿ? ಉಚ್ಯತೇ—

(ಭಾಷ್ಯಾರ್ಥ)

ಗುಣಗಳು ಯಾವವು? (ಅವು) ಹೇಗೆ (ದೇಹಿಯನ್ನು) ಬಂಧಿಸುತ್ತವೆ?— ಎಂದರೆ (ಭಗವಂತನು) ಹೇಳುತ್ತಾನೆ:—

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಮ್ಭವಾಃ ।**
**ನಿಬಧ್ನನ್ತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥೫॥**

೫. ಎಲೈ ಮಹಾಬಾಹುವೆ, ಸತ್ತ್ವ, ರಜ, ತಮ–ಎಂಬ ಪ್ರಕೃತಿಯಿಂದುಂಟಾಗುವ ಗುಣಗಳು, ದೇಹದಲ್ಲಿ ಅವ್ಯಯನಾದ ದೇಹಿಯನ್ನು ಬಂಧಿಸುವವು.

(ಭಾಷ್ಯ)

೩೧೦. ಸತ್ತ್ವಮ್, ರಜಃ, ತಮಃ–ಇತ್ಯೇವಂನಾಮಾನಃ ಗುಣಾಃ ಇತಿ ಪಾರಿಭಾಷಿಕಃ ಶಬ್ದಃ । ನ ರೂಪಾದಿವತ್ ದ್ರವ್ಯಾಶ್ರಿತಾಃ ಗುಣಾಃ । ನ ಚ ಗುಣಗುಣಿನೋಃ ಅನ್ಯತ್ವಮ್ ಅತ್ರ ವಿವಕ್ಷಿತಮ್। ತಸ್ಮಾತ್ ಗುಣಾ ಇವ ನಿತ್ಯಪರತನ್ತ್ರಾಃ ಕ್ಷೇತ್ರಜ್ಞಂ ಪ್ರತಿ, ಅವಿದ್ಯಾತ್ಮಕತ್ವಾತ್ ಕ್ಷೇತ್ರಜ್ಞಂ ನಿಬಧ್ನನ್ತೀವ । ತಮ್ ಆಸ್ಪದೀಕೃತ್ಯ ಆತ್ಮಾನಂ ಪ್ರತಿಲಭನ್ತೇ ಇತಿ 'ನಿಬಧ್ನನ್ತಿ' ಇತ್ಯುಚ್ಯತೇ । ತೇ ಚ ಪ್ರಕೃತಿಸಮ್ಭವಾಃ ಭಗವನ್ಮಾಯಾಸಮ್ಭವಾಃ ನಿಬಧ್ನನ್ತೀವ ಹೇ ಮಹಾಬಾಹೋ

---

1. ಸರ್ವಕಾರಣವಾದ ಪ್ರಕೃತಿಯು.

2. ಬೇರೆಬೇರೆಯ ಯೋನಿಗಳಲ್ಲಿ ಉಂಟಾಗುವ ಶರೀರಗಳೆಲ್ಲ ಪ್ರಕೃತಿಯ ಪರಿಣಾಮಗಳೇ; ಅವುಗಳಲ್ಲಿರುವ ಚೇತನಶಕ್ತಿಯು ಈಶ್ವರನದೇ.

ಮಹಾನ್ತೌ ಸಮರ್ಥತರೌ ಆಜಾನುಪ್ರಲಮ್ಬೌ ಬಾಹೂ ಯಸ್ಯ ಸ ಮಹಾಬಾಹುಃ। ಹೇ ಮಹಾಬಾಹೋ! ದೇಹೇ ಶರೀರೇ ದೇಹಿನಮ್ ದೇಹವನ್ತಮ್ ಅವ್ಯಯಮ್। ಅವ್ಯಯತ್ವಂ ಚ ಉಕ್ತಮ್ "ಅನಾದಿತ್ವಾತ್" (೧೩-೩೧) ಇತ್ಯಾದಿಶ್ಲೋಕೇನ। ನನು "ದೇಹೀ ನ ಲಿಪ್ಯತೇ" (೧೩-೩೧) ಇತ್ಯುಕ್ತಮ್। ತತ್ ಕಥಮ್ ಇಹ 'ನಿಬಧ್ನನ್ತಿ' ಇತಿ ಅನ್ಯಥಾ ಉಚ್ಯತೇ? ಪರಿಹೃತಮ್ ಅಸ್ಮಾಭಿಃ ಇವಶಬ್ದೇನ 'ನಿಬಧ್ನನ್ತೀವ' ಇತಿ ||

(ಭಾಷ್ಯಾರ್ಥ)

ಸತ್ತ್ವ, ರಜ, ತಮ-ಎಂಬೀ ಹೆಸರುಗಳುಳ್ಳ (ಗುಣಗಳು)-'**ಗುಣಗಳು' ಎಂಬುದು ಪಾರಿಭಾಷಿಕಶಬ್ದವೇ ಹೊರತು ರೂಪವೇ ಮುಂತಾದವುಗಳಂತೆ ದ್ರವ್ಯವನ್ನು ಆಶ್ರಯಿಸಿರುವ ಗುಣಗಳ(ನ್ನು ಇಲ್ಲಿ ಗುಣಗಳೆಂದಿಲ್ಲ). ಗುಣ ಗುಣಿಗಳು ಬೇರೆಯೆಂಬುದೂ ಇಲ್ಲಿ ವಿವಕ್ಷಿತವಾಗಿರುವದಿಲ್ಲ.**[1] **ಆದ್ದರಿಂದ ಗುಣಗಳಂತೆ ಕ್ಷೇತ್ರಜ್ಞನಿಗೆ ಯಾವಾಗಲೂ ಅಧೀನವಾಗಿರುವದರಿಂದ (ಗುಣಗಳು)** ಅವಿದ್ಯಾಕಲ್ಪಿತವಾಗಿರುವದರಿಂದ ಕ್ಷೇತ್ರಜ್ಞನನ್ನು ಬಂಧಿಸುವಂತೆ ತೋರುತ್ತಿರುವವು ಆ (ಕ್ಷೇತ್ರಜ್ಞನನ್ನು) ಆಶ್ರಯಿಸಿಕೊಂಡು ಅವು ತೋರಿಕೊಳ್ಳುತ್ತವೆಯಾದ್ದರಿಂದ ಬಂಧಿಸುವವು' ಎಂದಿದೆ.

ಮತ್ತು ಅವು ಪ್ರಕೃತಿಸಂಭವವು ಎಂದರೆ ಭಗವಂತನ ಮಾಯೆಯಿಂದ ವುಂಟಾಗಿ[2], ಎಲೈ ಮಹಾಬಾಹುವೆ, ದೊಡ್ಡ ಮೊಳಕಾಲಿನವರೆಗೂ ನೀಡಿಕೊಂಡಿರುವ ಬಹು ಬಲವಾದ, ತೋಳುಗಳುಳ್ಳವನು ಮಹಾಬಾಹುವು, (ಅಂಥ) ಎಲೈ ಮಹಾಬಾಹುವೆ, ದೇಹದಲ್ಲಿ ಶರೀರದಲ್ಲಿ ದೇಹಿಯನ್ನು ದೇಹವುಳ್ಳ ಅವ್ಯಯನಾದ (ಆತ್ಮನನ್ನು) ಕಟ್ಟಿಹಾಕುವಂತಿರುವವು. (ಆತ್ಮನು) ಅವ್ಯಯನೆಂಬುದನ್ನು 'ಅನಾದಿತ್ವಾತ್' (೧೩-೩೧) ಮುಂತಾದ ಶ್ಲೋಕದಲ್ಲಿ ಹೇಳಿರುತ್ತದೆ.

(ಆಕ್ಷೇಪ):—"ದೇಹಿಯು ಲಿಪ್ತನಾಗುವದಿಲ್ಲ" (೧೩-೩೧) ಎಂದು (ಅಲ್ಲಿ)

---

1. ಗುಣಗಳು ಗುಣಿಯನ್ನು ಸಮವಾಯಸಂಬಂಧದಿಂದ ಆಶ್ರಯಿಸಿರುವವೆಂದು ಹೇಳುವ ತಾರ್ಕಿಕರ ಮತದಂತೆ ಇಲ್ಲಿ ಪ್ರಕೃತಿಯನ್ನು ಗುಣಗಳು ಆಶ್ರಯಿಸಿರುವವೆಂದು ಹೇಳಿರುವದಿಲ್ಲ ಎಂದರ್ಥ,

2. ಪ್ರಕೃತಿಯೆಂದರೇ ಗುಣಗಳ ಸಾಮ್ಯಾವಸ್ಥೆ. ಪ್ರಕೃತಿಯಿಂದ ಅಂಗಾಂಗಿಭಾವವನ್ನು ಹೊಂದ್ದಿದ ಗುಣಗಳು ಹೊರತೋರಿಕೊಳ್ಳುವವೆಂಬ ಅಭಿಪ್ರಾಯದಿಂದ 'ಉಂಟಾಗುತ್ತವೆ' ಎಂದಿದೆ.

ಹೇಳಿತ್ತಲ್ಲ ! ಇಲ್ಲಿ (ಗುಣಗಳು) ಬಂಧಿಸುವವು, ಎಂದು (ಅದಕ್ಕೆ) ವಿರುದ್ಧವಾಗಿ ಹೇಳಿರುವದು ಹೇಗೆ (ಸರಿ) ?

(ಪರಿಹಾರ):—"ಬಂಧಿಸುವಂತಿರುತ್ತವೆ" ಎಂದು ನಾವು ಇವಶಬ್ದವನ್ನು ಅಧ್ಯಾಹಾರಮಾಡಿಕೊಂಡು (ಇದನ್ನು) ಪರಿಹರಿಸಿರುತ್ತೇವೆ.

(ಭಾಷ್ಯ)

೩೧೧. ತತ್ರ ಸತ್ತ್ವಾದೀನಾಂ ಸತ್ತ್ವಸ್ಯೈವ ತಾವತ್ ಲಕ್ಷಣಮ್ ಉಚ್ಯತೇ–

(ಭಾಷ್ಯಾರ್ಥ)

ಸತ್ತ್ವವೇ ಮುಂತಾದ (ಗುಣ)ಗಳಲ್ಲಿ ಮೊದಲು ಸತ್ತ್ವಕ್ಕೇ ಲಕ್ಷಣವನ್ನು ಹೇಳಲಾಗುತ್ತದೆ:—

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಙ್ಗೇನ ಬಧ್ನಾತಿ ಜ್ಞಾನಸಙ್ಗೇನ ಚಾನಘ ॥೬॥**

೬. ಇವುಗಳಲ್ಲಿ ಸತ್ತ್ವವು ನಿರ್ಮಲವಾಗಿರುವದರಿಂದ ಪ್ರಕಾಶಕವೂ ಅನಾಮಯವೂ (ಆಗಿದ್ದು) ಎಲೈ ಅನಘನೆ, ಸುಖಸಂಗದಿಂದಲೂ ಜ್ಞಾನಸಂಗದಿಂದಲೂ ಬಂಧಿಸುತ್ತದೆ.

(ಭಾಷ್ಯ)

೩೧೨. ನಿರ್ಮಲತ್ವಾತ್ ಸ್ಫಟಿಕಮಣಿರಿವ[1] ಪ್ರಕಾಶಕಮ್ ಅನಾಮಯಂ ನಿರುಪದ್ರವಂ ಸತ್ತ್ವಂ ಬಧ್ನಾತಿ[2] । ಕಥಮ್ ? ಸುಖಸಙ್ಗೇನ । "ಸುಖೀ ಅಹಮ್" ಇತಿ ವಿಷಯಭೂತಸ್ಯ ಸುಖಸ್ಯ ವಿಷಯಿಣಿ ಆತ್ಮನಿ ಸಂಶ್ಲೇಷಾಪಾದನಂ[3] ಮೃಷೈವ ಸುಖೇ[4] ಸಞ್ಜನಮ್ ಇತಿ । ಸೈಷಾ ಅವಿದ್ಯಾ । ನ ಹಿ ವಿಷಯಧರ್ಮಃ ವಿಷಯಿಣೋ ಭವತಿ । ಇಚ್ಛಾದಿ ಧೃತ್ಯನ್ತಂ ಕ್ಷೇತ್ರಸ್ಯೈವ ವಿಷಯಸ್ಯ ಧರ್ಮಃ[5] ಇತಿ ಉಕ್ತಂ

---

1. 'ಸ್ಫಟಿಕ ಇವ ಮಣಿಃ' ಮು॥ಮೈ॥
2. 'ತನ್ ನಿಬಧ್ನಾತಿ' ನಿ॥ ಅ॥ ವಾ॥,
3. 'ಸಂಶ್ಲೇಷಾಪಾದನೇನೈವ' ಮು॥ ಮೈ॥ ವಾ॥
4. "ಮಮೈವ ಸುಖಂ ಸಞ್ಜಾತಮ್ ಇತಿ ಮೃಷೈವ ಸುಖೇನ ಸಞ್ಜನಮ್ ಮು॥ "ಮಮೈವ ಸುಖಂ ಜಾತಮ್ ಇತಿ ಮೃಷೈವ ಸುಖೇನ ಸಞ್ಜನಮ್" ಮೈ॥
5. 'ವಿಷಯಧರ್ಮಃ' ಮು॥ ಮೈ॥

**ಭಗವತಾ । ಅತಃ ಅವಿದ್ಯಯೈವ ಸ್ವಕೀಯಧರ್ಮಭೂತಯಾ ವಿಷಯವಿಷಯ್ಯ ವಿವೇಕಲಕ್ಷಣಯಾ ಅಸ್ವಾತ್ಮಭೂತೇ ಸುಖೇ ಸಞ್ಜಯತೀವ, ಅಸಕ್ತಮಿವ ಕರೋತಿ ಅಸಜ್ಗಂ ಸಕ್ತಮಿವ ಕರೋತಿ ಅಸುಖಿನಂ ಸುಖಿನಮಿವ । ತಥಾ ಜ್ಞಾನಸಙ್ಗೇನ ಚ । ಜ್ಞಾನಮ್ ಇತಿ ಸುಖಸಾಹಚರ್ಯಾತ್ ಕ್ಷೇತ್ರಸ್ಯೈವ ವಿಷಯಸ್ಯ ಅನ್ತಃಕರಣಸ್ಯ[1] ಧರ್ಮಃ ನಾತ್ಮನಃ । ಆತ್ಮಧರ್ಮತ್ವೇ ಸಙ್ಗಾನುಪಪತ್ತೇಃ, ಬನ್ಧಾನುಪಪತ್ತೇಶ್ಚ । ಸುಖೇ ಇವ ಜ್ಞಾನಾದೌ ಸಙ್ಗೋ ಮನ್ತವ್ಯಃ । ಹೇ[2] ಅನಘ ಅಪಾಪ[3] ॥**

(ಭಾಷ್ಯಾರ್ಥ)

ಸ್ಫಟಿಕಮಣಿಯಂತೆ ನಿರ್ಮಲವಾಗಿರುವದರಿಂದ ಪ್ರಕಾಶವಾಗಿಯೂ ಅನಾಮಯವಾಗಿಯೂ (ಯಾವ) ದೋಷವೂ ಇಲ್ಲದ್ದಾಗಿಯೂ ಇರುವ ಸತ್ತ್ವವು ಬಂಧಿಸುತ್ತದೆ. ಹೇಗೆ? ಎಂದರೆ ಸುಖದಿಂದ. "**ನಾನು ಸುಖಿಯು**" **ಎಂದು ವಿಷಯವಾಗಿರುವ ಸುಖವನ್ನು ಸುಳ್ಳಾಗಿಯೇ ವಿಷಯಿಯಾದ ಆತ್ಮನಲ್ಲಿ ಅಂಟಿಸುವದೇ ಸುಖದಲ್ಲಿ ಸಂಗವಿರುವಂತೆ ಮಾಡುವದು.** ಆ ಇದು **ಅವಿದ್ಯೆಯು, ಏಕೆಂದರೆ ವಿಷಯದ ಧರ್ಮವು ವಿಷಯಿಯದಾಗಲಾರದು.**[4] ಇಚ್ಛೆಯು ಮೊದಲಾಗಿ ಧೃತಿಯವರೆಗಿನ(ದೆಲ್ಲವೂ) ವಿಷಯವಾದ ಕ್ಷೇತ್ರದ ಧರ್ಮವೇ ಎಂದು ಭಗವಂತನು (೧೩-೬ ರಲ್ಲಿ) ಹೇಳಿರುತ್ತಾನೆ. ಆದ್ದರಿಂದ **ವಿಷಯವಿಷಯಿಗಳ ವಿವೇಕವಿಲ್ಲದಿರುವದೆಂಬ ತನ್ನ ಧರ್ಮವಾದ ಅವಿದ್ಯೆಯಿಂದಲೇ (ಆತ್ಮನನ್ನು) ಅವನ ಸ್ವರೂಪವಲ್ಲದ ಸುಖದಲ್ಲಿ ಸಂಗವುಳ್ಳವನನ್ನಾಗಿಸುವಂತೆ ಇರುತ್ತದೆ,** ಆಸಕ್ತನಾಗಿರುವವನಂತೆ ಮಾಡುತ್ತದೆ. ಅಸಕ್ತನನ್ನು ಸಕ್ತನಾಗಿರುವಂತೆಯೂ ಅಸುಖಿಯನ್ನು ಸುಖಿಯಾಗಿರುವಂತೆಯೂ ಮಾಡುತ್ತದೆ. ಇದರಂತೆ ಜ್ಞಾನಸಂಗದಿಂದಲೂ (ಬಂಧಿಸುತ್ತದೆ. ಇಲ್ಲಿ) '**ಜ್ಞಾನ**' **ವೆಂಬುದು ಸುಖದ ಜೊತೆಯಲ್ಲಿ (ಹೇಳಿರುವ)ದಾದ್ದರಿಂದ ವಿಷಯವಾದ ಕ್ಷೇತ್ರವೇ ಆಗಿರುವ ಅಂತಃಕರಣದ ಧರ್ಮವೇ ಹೊರತು ಆತ್ಮನ ಧರ್ಮವಲ್ಲ.**[5]. ಏಕೆಂದರೆ (ಅದು)

---

1. "ಕ್ಷೇತ್ರಸ್ಯೈವ ವಿಷಯಸ್ಯ ವೃತ್ತ್ಯಾತ್ಮಕಂ ಜಡಸ್ಯ ಅನ್ತಃಕರಣಸ್ಯ" ಮ॥; "ಕ್ಷೇತ್ರಸ್ಯೈವಾನ್ತಃಕರಣಸ್ಯ" ನಿ॥ ವಾ॥.

2. ಮ॥ ಮೈ॥ ಗಳಲ್ಲಿಲ್ಲ.

3. 'ಅವ್ಯಸನ' ಆ॥ ನಿ॥ ಗು॥ ವಾ॥

4 ವಿಷಯದ ಧರ್ಮವನ್ನು ವಿಷಯಿಯದಲ್ಲಿ ಆರೋಪಿಸುವದೇ ಅವಿದ್ಯೆಯೆಂದು **ಹೇಳಿ**ದಂತೆ ಆಯಿತು. ಸೂ. ಭಾ. ಅಧ್ಯಾಸಭಾಷ್ಯವನ್ನು ನೋಡಿ.

5. ಅವಿದ್ಯೆಯಿಂದ ಕ್ಷೇತ್ರಧರ್ಮವಾದ ಸುಖ, ಜ್ಞಾನ—ಮುಂತಾದ ವೃತ್ತಿಗಳ ರೂಪವಾದ ವಿಕಾರವನ್ನು ಆತ್ಮನಲ್ಲಿಯೇ ಹಾಕಿಕೊಳ್ಳುತ್ತಾರೆ ಎಂದು ಅಭಿಪ್ರಾಯ.

ಆತ್ಮನ ಧರ್ಮವಾಗಿದ್ದರೆ (ಅದರ) ಸಂಗವೆಂಬುದು ಹೊಂದಲಾರದು, ಬಂಧವೆಂಬುದೂ ಹೊಂದಲಾರದು.[1] ಸುಖದಲ್ಲಿ ಹೇಗೋ ಹಾಗೆ ಜ್ಞಾನವೇ ಮುಂತಾದವುಗಳಲ್ಲಿಯೂ[2] ಸಂಗವನ್ನು ಅರಿಯಬೇಕು. ಅನಘ ಎಂದರೆ ಎಲೈ ಪಾಪರಹಿತನೆ (ಎಂದರ್ಥ)

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಙ್ಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌನ್ತೇಯ ಕರ್ಮಸಙ್ಗೇನ ದೇಹಿನಮ್ ॥ ೭ ॥**

೭. ರಜವು ರಾಗಾತ್ಮಕವಾಗಿರುವದೆಂದು ತಿಳಿ. (ಅದು) ತೃಷ್ಣೆ, ಆಸಂಗ–ಇವುಗಳನ್ನುಂಟುಮಾಡುವದು, ಕೌಂತೇಯನೆ, (ಅದು) ಕರ್ಮಸಂಗದಿಂದ ದೇಹಿಯನ್ನು ಬಂಧಿಸುತ್ತದೆ.

(ಭಾಷ್ಯ)

೩೧೩. ರಜಃ ರಾಗಾತ್ಮಕಮ್ । ರಞ್ಜನಾತ್ ರಾಗಃ ಗೈರಿಕಾದಿವತ್[3] ರಾಗಾತ್ಮಕಂ ವಿದ್ಧಿ ಜಾನೀಹಿ । ತೃಷ್ಣಾಸಙ್ಗಸಮುದ್ಭವಮ್ । ತೃಷ್ಣಾ ಅಪ್ರಾಪ್ತಾಭಿಲಾಷಃ । ಆಸಙ್ಗಃ ಪ್ರಾಪ್ತೇ ವಿಷಯೇ ಮನಸಃ ಪ್ರೀತಿಲಕ್ಷಣಃ ಸಂಶ್ಲೇಷಃ । ತೃಷ್ಣಾಸಙ್ಗಯೋಃ ಸಮುದ್ಭವಂ[4] ತೃಷ್ಣಾಸಙ್ಗಸಮುದ್ಭವಮ್ । ತತ್ ನಿಬಧ್ನಾತಿ ತತ್ ರಜಃ ನಿಬಧ್ನಾತಿ ಕೌನ್ತೇಯ । ಕರ್ಮಸಙ್ಗೇನ । ದೃಷ್ಟಾದೃಷ್ಟಾರ್ಥೇಷು ಕರ್ಮಸು ಸಞ್ಜನಂ ತತ್ಪರತಾ ಕರ್ಮಸಙ್ಗಃ । ತೇನ ನಿಬಧ್ನಾತಿ ರಜಃ ದೇಹಿನಮ್ ॥

(ಭಾಷ್ಯಾರ್ಥ)

ರಜವು ರಾಗಾತ್ಮಕವು. ಹುರಿಮಂಜು ಮುಂತಾದವುಗಳಂತೆ ಬಣ್ಣ ಹಾಕುತ್ತಿರುವದರಿಂದ ರಾಗಸ್ವರೂಪವಾದದ್ದು ಎಂದು ತಿಳಿ, ಅರಿತುಕೊ. (ಅದು) ತೃಷ್ಣಾಸಂಗಗಳಿಗೆ ಕಾರಣವು. ತೃಷ್ಣೆ ಎಂದರೆ ಸಿಕ್ಕದೆ ಇರುವದರಲ್ಲಿರುವ ಅಭಿಲಾಷೆ;

---

1. ಆತ್ಮನ ಧರ್ಮವು ಅವನ ಸ್ವರೂಪವೇ ಆಗಿರುವದರಿಂದ ಅವನಿಗೆ ಅದರಲ್ಲಿ ಸಂಗವಾಗಲಿ ಅದರಿಂದ ಬಂಧವಾಗಲಿ ಆಗುವಹಾಗಿಲ್ಲ.

2. ವೈರಾಗ್ಯ, ಐಶ್ವರ್ಯ–ಮುಂತಾದವುಗಳಲ್ಲಿ ಎಂದು ಆ॥ ಟೀಕೆ. ಅದೂ ಆಗಬಹುದು. ಈ ಅಧ್ಯಾಯದಲ್ಲಿ ಹೇಳಿರುವ ಸಂಗಗಳೆಲ್ಲವೂ ಸುಖಸಂಗದಂತೆ ಕ್ಷೇತ್ರಕ್ಷೇತ್ರಜ್ಞನ ಅವಿವೇಕದಿಂದುಂಟಾಗುವ ಅಧ್ಯಾಸದ ಫಲವೆಂದು ತಿಳಿಯಬೇಕು–ಎಂಬ ಭಾವವನ್ನೂ ಸೂಚಿಸುವದು ಈ ಭಾಷ್ಯವಾಕ್ಯಕ್ಕೆ ಅಭಿಪ್ರಾಯವಿರಬಹುದು.

3. 'ಗೈರಿಕಾದಿರಿವ' ಮು॥ ಮೈ॥

4. "ತೃಷ್ಣಾಸಙ್ಗಯೋಃ ಸಮುದ್ಭವಃ ಯಸ್ಮಾತ್ ತತ್" ಮು॥ ಮೈ॥

**ಆಸಂಗ**ವೆಂದರೆ ಸಿಕ್ಕಿರುವ ವಿಷಯದಲ್ಲಿ ಮನಸ್ಸು ಸಂತೋಷಪಡುವದೆಂಬ ಅಂಟು. (ಈ) ತೃಷ್ಣೆ ಮತ್ತು ಆಸಂಗ–(ಇವು)ಗಳಿಗೆ ಕಾರಣವಾಗಿರುವದು ತೃಷ್ಣಾಸಂಗ ಸಮುದ್ಭವವು. ಆದು ಆ ರಜವು, ಎಲೈ ಕೌಂತೇಯನೆ, ಕರ್ಮಸಂಗದಿಂದ ಬಂಧಿಸುತ್ತದೆ, ಕಟ್ಟಿಹಾಕುತ್ತದೆ. **ಇಹಲೋಕದ ಮತ್ತು ಪರಲೋಕದ ಫಲಗಳಿಗಾಗಿ (ಮಾಡುವ) ಕರ್ಮಗಳಲ್ಲಿ ಸಕ್ತನಾಗುವದು, ಅವುಗಳಲ್ಲಿ ತತ್ಪರನಾಗಿರುವದು, ಕರ್ಮಸಂಗವು;** ರಜವು ದೇಹಿಯನ್ನು ಆದರಿಂದ ಬಂಧಿಸುತ್ತದೆ.

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ ೮ ॥**

೮. ತಮಸ್ಸಾದರೋ ಅಜ್ಞಾನಜವೆಂದೂ ಸರ್ವದೇಹಿಗಳನ್ನೂ ಮೋಹಪಡಿಸುವದೆಂದೂ ತಿಳಿ. ಅದು ಎಲೈ ಭಾರತನೆ, ಪ್ರಮಾದಾಲಸ್ಯನಿದ್ರೆಗಳಿಂದ ಬಂಧಿಸುತ್ತದೆ.

(ಭಾಷ್ಯ)

೩೧೪. ತಮಃ (ತು)[1] ತೃತೀಯಃ ಗುಣಃ ಅಜ್ಞಾನಜಮ್ । ಅಜ್ಞಾನಾತ್ ಜಾತಮ್ ಅಜ್ಞಾನಜಂ ವಿದ್ಧಿ । ಮೋಹನಂ ಮೋಹಕರಮ್ ಅವಿವೇಕಕರಂ ಸರ್ವದೇಹಿನಾಂ ಸರ್ವೇಷಾಂ ದೇಹವತಾಮ್ । ಪ್ರಮಾದಾಲಸ್ಯನಿದ್ರಾಭಿಃ ಪ್ರಮಾದಶ್ಚ ಆಲಸ್ಯಂ ಚ ನಿದ್ರಾ ಚ ಪ್ರಮಾದಾಲಸ್ಯನಿದ್ರಾಃ । ತಾಭಿಃ ಪ್ರಮಾದಾಲಸ್ಯನಿದ್ರಾಭಿಃ ತತ್ ತಮಃ ನಿಬಧ್ನಾತಿ ಭಾರತ ॥

(ಭಾಷ್ಯಾರ್ಥ)

ಮೂರನೆಯ ಗುಣವಾದ ತಮಸ್ಸಾದರೋ ಅಜ್ಞಾನಜವು, ಅಜ್ಞಾನದಿಂದ ಹುಟ್ಟಿದ್ದು[2] ಎಂದು ತಿಳಿ. (ಆದು) ಸರ್ವದೇಹಿಗಳನ್ನೂ ದೇಹವುಳ್ಳವರೆಲ್ಲರನ್ನೂ ಮೋಹಪಡಿಸುವದು, (ಅವರಿಗೆ) ಮೋಹವನ್ನುಂಟುಮಾಡುವಂಥದ್ದು, ಅವಿವೇಕವನ್ನುಂಟುಮಾಡುವಂಥದ್ದು[3]. ಎಲೈ ಭಾರತನೆ, ಪ್ರಮಾದಾಲಸ್ಯನಿದ್ರಾಭಿಃ ಅವ

---

1. ಈ ಮಾತು ಭಾಷ್ಯದಲ್ಲಿ ಬಿಟ್ಟುಹೋಗಿದೆ.

2. ಅಜ್ಞಾನಕೃತವಾದ ಪ್ರಕೃತಿಯಿಂದ ಹುಟ್ಟಿದ್ದು ; ಮೂರು ಗುಣಗಳೂ ಅಜ್ಞಾನದಿಂದಲೇ ಆದವುಗಳಾದರೂ ತಮಸ್ಸು ಅಜ್ಞಾನದ ಸ್ವಭಾವವನ್ನು ಬಿಟ್ಟಿರುವದಿಲ್ಲ.

3. ತಮಸ್ಸು ಎದ್ದುಕೊಂಡಾಗ ವಸ್ತುಗಳನ್ನು ವಿಂಗಡಿಸಿ ಅರಿತುಕೊಳ್ಳುವದಕ್ಕೆ ಆಗುವದಿಲ್ಲ.

ಧ್ಯಾನವಿಲ್ಲದಿರುವದು, ಪಾಲುಮಾರಿಕೆ, ನಿದ್ರೆ–ಇವುಗಳು ಪ್ರಮಾದಾಲಸ್ಯನಿದ್ರೆಗಳು ; ಆ ಪ್ರಮಾದಾಲಸ್ಯನಿದ್ರೆಗಳಿಂದ ಅದು, ತಮಸ್ಸು, ಕಟ್ಟಿಹಾಕುತ್ತದೆ.

(ಭಾಷ್ಯ)

೩೭೫. ಪುನರ್ಗುಣಾನಾಂ ವ್ಯಾಪಾರಃ ಸಂಕ್ಷೇಪತಃ ಉಚ್ಯತೇ[1]—

(ಭಾಷ್ಯಾರ್ಥ)

ಮತ್ತೂ ಗುಣಗಳ ವ್ಯಾಪಾರವನ್ನು ಸಂಕ್ಷೇಪವಾಗಿ ಹೇಳುತ್ತಾನೆ :—

**ಸತ್ತ್ವಂ ಸುಖೇ ಸಞ್ಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಞ್ಜಯತ್ಯುತ ॥೯॥**

೯. ಸತ್ತ್ವವು ಸುಖದಲ್ಲಿ ಸಂಗವನ್ನುಂಟುಮಾಡುತ್ತದೆ ; ರಜಸ್ಸು ಕರ್ಮದಲ್ಲಿ (ಸಂಗವನ್ನುಂಟುಮಾಡುತ್ತದೆ) ; ತಮಸ್ಸಾದರೋ ಜ್ಞಾನವನ್ನು ಆವರಿಸಿಕೊಂಡು ಪ್ರಮಾದದಲ್ಲಿ ಸಂಗವನ್ನುಂಟುಮಾಡುತ್ತದೆ.

(ಭಾಷ್ಯ)

೩೧೬. ಸತ್ತ್ವಂ ಸುಖೇ ಸಞ್ಜಯತಿ ಸಂಶ್ಲೇಷಯತಿ । ರಜಃ ಕರ್ಮಣಿ ಹೇ ಭಾರತ । ಸಞ್ಜಯತಿ ಇತಿ ಅನುವರ್ತತೇ । ಜ್ಞಾನಂ ಸತ್ತ್ವಕೃತಂ ವಿವೇಕಮ್ ಆವೃತ್ಯ ಆಚ್ಛಾದ್ಯ ತು ತಮಃ ಸ್ವೇನ ಆವರಣಾತ್ಮನಾ ಪ್ರಮಾದೇ ಸಞ್ಜಯತಿ ಉತ । ಪ್ರಮಾದೋ ನಾಮ ಪ್ರಾಪ್ತಕರ್ತವ್ಯಾಕರಣಮ್ ॥

(ಭಾಷ್ಯಾರ್ಥ)

ಸತ್ತ್ವವು ಸುಖದಲ್ಲಿ ಸಂಗವನ್ನುಂಟುಮಾಡುತ್ತದೆ, ಎಂದರೆ ಅಂಟಿಸುತ್ತದೆ. ರಜಸ್ಸು ಕರ್ಮದಲ್ಲಿ, ಎಲೈ ಭರತವಂಶೋತ್ಪನ್ನನೆ, ' ಸಂಗವನ್ನುಂಟುಮಾಡುತ್ತದೆ ' ಎಂದು (ಹಿಂದಿನಿಂದ) ಸೇರಿಕೊಳ್ಳುತ್ತದೆ. ಜ್ಞಾನವನ್ನು ಸತ್ತ್ವದಿಂದ ಆಗಿರುವ ವಿವೇಕವನ್ನು ಆವರಿಸಿಕೊಂಡು ತನ್ನ ಆವರಣರೂಪದಿಂದ ಮುಸುಕಿಕೊಂಡು ತಮಸ್ಸಾದರೋ, ಪ್ರಮಾದದಲ್ಲಿ ಸಂಗವನ್ನುಂಟುಮಾಡುವದು. ಪ್ರಮಾದವೆಂದರೆ ಮಾಡಬೇಕಾಗಿ ಬಂದೊದಗಿರುವದನ್ನು ಮಾಡದೆ ಇರುವದು.

1. " ವ್ಯಾಪಾರಾ ........ ಉಚ್ಯನ್ತೇ " ಮ॥

(ಭಾಷ್ಯ)

೩೧೭. ಉಕ್ತಂ ಕಾರ್ಯಂ ಕದಾ ಕುರ್ವನ್ತಿ ಗುಣಾಃ ಇತಿ? ಉಚ್ಯತೇ —

(ಭಾಷ್ಯಾರ್ಥ)

ಮೇಲೆ ಹೇಳಿದ ಕಾರ್ಯವನ್ನು ಗುಣಗಳು ಯಾವಾಗ ಮಾಡುತ್ತವೆ?— ಎಂದರೆ (ಭಗವಂತನು) ಹೇಳುತ್ತಾನೆ :—

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ ೧೦ ॥**

೧೦. ಎಲೈ ಭಾರತನೆ, ರಜಸ್ಸನ್ನೂ ತಮಸ್ಸನ್ನೂ ತಿರಸ್ಕರಿಸಿ ಸತ್ತ್ವವುಂಟಾಗುತ್ತದೆ. ರಜಸ್ಸು ಸತ್ತ್ವವನ್ನೂ ತಮಸ್ಸನ್ನೂ (ಗೆದ್ದು ಉಂಟಾಗುತ್ತದೆ). ಅದರಂತೆ ತಮಸ್ಸು ಸತ್ತ್ವವನ್ನೂ ರಜಸ್ಸನ್ನೂ (ಗೆದ್ದು ಉಂಟಾಗುತ್ತದೆ).

(ಭಾಷ್ಯ)

೩೧೮. ರಜಃ ತಮಶ್ಚ ಉಭಾವಪಿ ಅಭಿಭೂಯ ಸತ್ತ್ವಂ ಭವತಿ ಉದ್ಭವತಿ ವರ್ಧತೇ ಯದಾ ತದಾ ಲಬ್ಧಾತ್ಮಕಂ ಸತ್ತ್ವಂ ಸ್ವಕಾರ್ಯಂ ಜ್ಞಾನಸುಖಾದಿ ಆರಭತೇ ಹೇ ಭಾರತ। ತಥಾ ರಜೋಗುಣಃ ಸತ್ತ್ವಂ ತಮಶ್ಚೈವ ಉಭಾವಪಿ ಅಭಿಭೂಯ ವರ್ಧತೇ ಯದಾ ತದಾ ಕರ್ಮ ಕೃಷ್ಯಾದಿ ಸ್ವಕಾರ್ಯಮ್ ಆರಭತೇ। ತಮ[1] ಆಖ್ಯಃ ಗುಣಃ ಸತ್ತ್ವಂ ರಜಶ್ಚ ಉಭಾವಪಿ ಅಭಿಭೂಯ ತಥೈವ[2] ವರ್ಧತೇ ಯದಾ ತದಾ ಜ್ಞಾನಾವರಣಾದಿ ಸ್ವಕಾರ್ಯಮ್ ಆರಭತೇ ॥

(ಭಾಷ್ಯಾರ್ಥ)

ಎಲೈ ಭರತವಂಶೋತ್ಪನ್ನನೆ, ರಜಸ್ಸು, ತಮಸ್ಸು—(ಈ) ಎರಡನ್ನೂ ಗೆದ್ದು ಸತ್ತ್ವವು ಯಾವಾಗ ಉಂಟಾಗಿ ಬೆಳೆಯುತ್ತದೆಯೋ ಆಗ ಹುಟ್ಟಿಕೊಂಡ ಸತ್ತ್ವವು ತನ್ನ ಕಾರ್ಯವಾದ ಜ್ಞಾನ, ಸುಖ—ಮುಂತಾದದ್ದನ್ನು ಉಂಟುಮಾಡುತ್ತದೆ. ಹಾಗೂ ರಜೋಗುಣವು ಸತ್ತ್ವ ತಮಸ್ಸು—(ಈ) ಎರಡನ್ನೂ ಗೆದ್ದು ಯಾವಾಗ ಬೆಳೆದುಕೊಳ್ಳುತ್ತದೆಯೋ ಆಗ ತನ್ನ ಕಾರ್ಯವಾದ ಬೇಸಾಯವೇ ಮುಂತಾದ

---

1. . ತಥೈವ ತಮಃ ' ಮೈ॥
2. ಮೈ॥ದಲ್ಲಿಲ್ಲ.

ದ್ದನ್ನು ಉಂಟುಮಾಡುತ್ತದೆ. ಹಾಗೆಯೇ ತಮವೆಂಬ ಹೆಸರಿನ ಗುಣವು ಸತ್ತ್ವ, ಮತ್ತು ರಜ–(ಈ) ಎರಡನ್ನೂ ಗೆದ್ದು ಯಾವಾಗ ಬೆಳೆದುಕೊಳ್ಳುವದೋ ಆಗ ಜ್ಞಾನವನ್ನು ಮುಸುಕಿಕೊಳ್ಳುವದು ಮುಂತಾದ ತನ್ನ ಕಾರ್ಯವನ್ನು ಉಂಟುಮಾಡುತ್ತದೆ.

## ಯಾವ ಗುಣವು ಎದ್ದುಕೊಂಡಿರುವದೆಂಬುದಕ್ಕೆ ಗುರುತು

(ಭಾಷ್ಯ)

೩೧೯. ಯದಾ ಯೋ ಗುಣಃ ಉದ್ಭೂತೋ ಭವತಿ ತದಾ ತಸ್ಯ ಕಿಂ ಲಿಙ್ಗಮ್ ಇತಿ ? ಉಚ್ಯತೇ—

(ಭಾಷ್ಯಾರ್ಥ)

ಯಾವಾಗ ಯಾವ ಗುಣವು ಎದ್ದುಕೊಂಡಿರುವದೋ ಆಗ ಅದಕ್ಕೆ ಯಾವದು ಗುರುತು ?–ಎಂದರೆ ಹೇಳುತ್ತಾನೆ—

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥೧೧॥**

೧೧. ಈ ದೇಹದಲ್ಲಿ ಸರ್ವದ್ವಾರಗಳಲ್ಲಿಯೂ ಯಾವಾಗ ಜ್ಞಾನವೆಂಬ ಪ್ರಕಾಶವುಂಟಾಗುವದೋ ಆಗ ಸತ್ತ್ವವು ಬೆಳೆದುಕೊಂಡಿದೆ ಎಂದು ತಿಳಿದುಕೊಳ್ಳಬೇಕು.

(ಭಾಷ್ಯ)

೩೨೦. ಸರ್ವದ್ವಾರೇಷು ಆತ್ಮನಃ ಉಪಲಬ್ಧಿದ್ವಾರಾಣಿ ಶ್ರೋತ್ರಾದೀನಿ ಸರ್ವಾಣಿ ಕರಣಾನಿ ತೇಷು ಸರ್ವದ್ವಾರೇಷು ಅನ್ತಃಕರಣಸ್ಯ ಬುದ್ಧೇಃ ವೃತ್ತಿಃ[1] ಪ್ರಕಾಶಃ ದೇಹೇ ಅಸ್ಮಿನ್ ಉಪಜಾಯತೇ ।ತದೇವ ಜ್ಞಾನಮ್। ಯದಾ ಏವಂ ಪ್ರಕಾಶಃ ಜ್ಞಾನಾಖ್ಯಃ ಉಪಜಾಯತೇ ತದಾ ಜ್ಞಾನಪ್ರಕಾಶೇನ ಲಿಙ್ಗೇನ ವಿದ್ಯಾತ್ ವಿವೃದ್ಧಮ್ ಉದ್ಭೂತಂ ಸತ್ತ್ವಮ್ ಇತಿ ಉತ ಅಪಿ ॥

(ಭಾಷ್ಯಾರ್ಥ)

ಸರ್ವದ್ವಾರಗಳಲ್ಲಿಯೂ ಆತ್ಮನಿಗೆ ಶ್ರೋತ್ರವೇ ಮುಂತಾದ ಕರಣಗಳೆಲ್ಲವೂ ಅರಿಯುವದಕ್ಕೆ ದ್ವಾರಗಳು. ಆ ಸರ್ವದ್ವಾರಗಳಲ್ಲಿಯೂ ಅಂತಃಕರಣವಾದ ಬುದ್ಧಿಯ ವೃತ್ತಿಯಾದ ಪ್ರಕಾಶವು ಈ ದೇಹದಲ್ಲಿ ಉಂಟಾಗುತ್ತದೆಯೋ (ಬೆಳಕೇ)

---

1. ' ವ್ಯಾಪ್ತಿಃ ' ಎಂದು ಹೆಚ್ಚಾಗಿ ಮ॥ ಮೈ॥

ಜ್ಞಾನವು. ಯಾವಾಗ ಜ್ಞಾನವೆಂಬ ಹೆಸರಿನ ಬೆಳಕು ಹೀಗೆ ಉಂಟಾಗುವದೋ ಆಗ ಜ್ಞಾನದ ಬೆಳಕೆಂಬ ಗುರುತಿನಿಂದ ಸತ್ತ್ವವು ಬೆಳೆದುಕೊಂಡಿದೆ ತಲೆ ಎತ್ತಿದೆ ಎಂದು (ಉತ—) ಕೂಡ ತಿಳಿದುಕೊಳ್ಳಬೇಕು.

(ಭಾಷ್ಯ)

೩.೨೧. ರಜಸಃ ಉದ್ಭೂತಸ್ಯ ಇದಂ ಚಿಹ್ನಮ್—

(ಭಾಷ್ಯಾರ್ಥ)

ರಜಸ್ಸು ತಲೆ ಎತ್ತಿಕೊಂಡರೆ (ಅದಕ್ಕೆ) ಇದು ಗುರುತು :—

**ಲೋಭಃ ಪ್ರವೃತ್ತಿರಾರಮ್ಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯನ್ತೇ ವಿವೃದ್ಧೇ ಭರತರ್ಷಭ ॥ ೧೨ ॥**

೧೨. ಲೋಭ, ಪ್ರವೃತ್ತಿ, ಕರ್ಮಗಳ ಆರಂಭ, ಅಶಮ, ಸ್ಪೃಹೆ–ಇವುಗಳು, ಎಲೈ ಭರತರ್ಷಭನೆ, ರಜಸ್ಸು ಬೆಳೆದುಕೊಂಡರೆ ಉಂಟಾಗುವವು.

(ಭಾಷ್ಯ)

೩.೨೨. ಲೋಭಃ ಪರದ್ರವ್ಯಾದಿತ್ಸಾ । ಪ್ರವೃತ್ತಿಃ ಪ್ರವರ್ತನಂ ಸಾಮಾನ್ಯ ಚೇಷ್ಟಾ । ಆರಮ್ಭಃ । ಕಸ್ಯ ? ಕರ್ಮಣಾಮ್ । ಅಶಮಃ ಅನುಪಶಮಃ ಹರ್ಷ ರಾಗಾದಿಪ್ರವೃತ್ತಿಃ । ಸ್ಪೃಹಾ ಸರ್ವಸಾಮಾನ್ಯವಸ್ತುವಿಷಯಾ ತೃಷ್ಣಾ । ರಜಸಿ ಗುಣೇ ವಿವೃದ್ಧೇ ಏತಾನಿ ಲಿಙ್ಗಾನಿ ಜಾಯನ್ತೇ ಹೇ ಭರತರ್ಷಭ ॥

(ಭಾಷ್ಯಾರ್ಥ)

ಲೋಭವು, ಹೆರರ ಒಡವೆಯನ್ನು ಎತ್ತಿಕೊಳ್ಳುವ ಬಯಕೆ. ಪ್ರವೃತ್ತಿ, ತೊಡಗುವದು, ಸಾಮಾನ್ಯ ವ್ಯಾಪಾರವು. ಆರಂಭವು (ಮಾಡುವದು) ; ಏನನ್ನು ಎಂದರೆ ಕರ್ಮಗಳನ್ನು ಮಾಡುವದು ? ಅಶಮವು, ಉಪಶಾಂತಿಯಿಲ್ಲದಿರುವದು; ಹರ್ಷ, ರಾಗ –ಮುಂತಾದವುಗಳುಂಟಾಗುವದು, ಸ್ಪೃಹೆ, ಸಾಮಾನ್ಯವಸ್ತುಗಳೆಲ್ಲದರ ವಿಷಯವಾದ ಬಯಕೆ. ರಜವೆಂಬ ಗುಣವು ಬೆಳೆದುಕೊಂಡರೆ, ಎಲೈ ಭರತಶ್ರೇಷ್ಠನೆ, ಈ ಗುರುತುಗಳು ಉಂಟಾಗುವವು.

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ**
**ತಮಸ್ಯೇತಾನಿ ಜಾಯನ್ತೇ ವಿವೃದ್ಧೇ ಕುರುನನ್ದನ ॥ ೧೩ ॥**

೧೩. ಅಪ್ರಕಾಶ, ಅಪ್ರವೃತ್ತಿ, ಪ್ರಮಾದ ಮತ್ತು ಮೋಹ. ಎಲೈ ಕುರುನಂದನನೆ, ತಮಸ್ಸು ಬೆಳೆದುಕೊಂಡರೆ ಇವುಗಳು ಉಂಟಾಗುವವು.

(ಭಾಷ್ಯ)

೩.೨೩. ಅಪ್ರಕಾಶಃ ಅವಿವೇಕಃ। ಅತ್ಯನ್ತಮ್ ಅಪ್ರವೃತ್ತಿಶ್ಚ ಪ್ರವೃತ್ತ್ಯಭಾವಃ। ತತ್ಕಾರ್ಯಂ ಪ್ರಮಾದಃ ಮೋಹ ಏವ ಚ ಅವಿವೇಕಃ ಮೂಢತಾ ಇತ್ಯರ್ಥಃ। ತಮಸಿ ಗುಣೇ ವಿವೃದ್ಧೇ ಏತಾನಿ ಲಿಙ್ಗಾನಿ ಜಾಯನ್ತೇ ಹೇ ಕುರುನನ್ದನ ॥

(ಭಾಷ್ಯಾರ್ಥ)

ಎಲೈ ಕುರುನಂದನನೆ, ಅಪ್ರಕಾಶವು (ಎಂದರೆ) ವಿವೇಕವಿಲ್ಲದಿರುವದು. ಮತ್ತು ಅಪ್ರವೃತ್ತಿಯು (ಎಂದರೆ) ಸ್ವಲ್ಪವೂ (ಕಾರ್ಯದಲ್ಲಿ) ತೊಡಗದಿರುವದು. ಅದರ ಕಾರ್ಯವಾದ[1] ಪ್ರಮಾದವು ಮತ್ತು ಮೋಹವು ಎಂದರೆ ಅವಿವೇಕವು, ಮೌಢ್ಯವು ಎಂದರ್ಥ. ತಮಸ್ಸೆಂಬ ಗುಣವು ಬೆಳೆದುಕೊಂಡರೆ ಈ ಗುರುತುಗಳು ಉಂಟಾಗುತ್ತವೆ.

## ಮರಣಾನಂತರದಲ್ಲಿ ಆಗುವ ಫಲಗಳ ಗುಣಗಳೂ ಕಾರ್ಯವೇ

(ಭಾಷ್ಯ)

೩.೨೪. ಮರಣದ್ವಾರೇಣಾಪಿ ಯತ್ ಫಲಂ ಪ್ರಾಪ್ಯತೇ ತದಪಿ ಸಙ್ಗರಾಗಹೇತುಕಂ ಸರ್ವಂ ಗೌಣಮೇವ ಇತಿ ದರ್ಶಯನ್ ಆಹ—

(ಭಾಷ್ಯಾರ್ಥ)

ಸಾವಿನ ದ್ವಾರದಿಂದ[2] ಯಾವ ಫಲವು ದೊರಕುವದೋ ಸಂಗರಾಗಗಳಿಂದಾ

---

1. ಅಪ್ರಕಾಶದ ಕಾರ್ಯವು ಅಪ್ರವೃತ್ತಿಯು ಮುಂತಾದವುಗಳಾಗಿವೆ; ಆದ್ದರಿಂದ 'ತತ್ಕಾರ್ಯಮ್' ಎಂಬ ಮಾತನ್ನು ಎರಡು ಕಡೆಗೂ ಅನ್ವಯಿಸಿಕೊಳ್ಳಬೇಕು.

2. ಸತ್ತ ಬಳಿಕ ಲೋಕಾಂತರದಲ್ಲಿ ಜನ್ಮಾಂತರದಲ್ಲಿ.

ಗಿರುವದರಿಂದ ಅದೆಲ್ಲವೂ ಗುಣಗಳ (ಕಾರ್ಯ)ವೇ ಎಂದು ತಿಳಿಸುವದಕ್ಕಾಗಿ (ಭಗವಂತನು) ಹೇಳುತ್ತಾನೆ: —

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥ ೧೪ ॥**

೧೪. ದೇಹಧಾರಿಯು ಸತ್ತ್ವವು ಬೆಳೆದುಕೊಂಡಿರುವಾಗ ಯಾವಾಗಲಾದರೆ ಪ್ರಲಯವನ್ನು ಹೊಂದುವನೋ, ಆಗ ಉತ್ತಮ ಜ್ಞಾನಿಗಳ ಅಮಲವಾದ ಲೋಕಗಳನ್ನು ಹೊಂದುತ್ತಾನೆ.

(ಭಾಷ್ಯ)

೩.೨೫ ಯದಾ ಸತ್ತ್ವೇ ಪ್ರವೃದ್ಧೇ ಉದ್ಭೂತೇ ತು ಪ್ರಲಯಂ ಮರಣಂ ಯಾತಿ ಪ್ರತಿಪದ್ಯತೇ ದೇಹಭೃತ್ ಆತ್ಮಾ ತದಾ ಉತ್ತಮವಿದಾಂ ಮಹದಾದಿತತ್ತ್ವವಿದಾಮ್ ಇತ್ಯೇತತ್ । ಲೋಕಾನ್ ಅಮಲಾನ್ ಮಲರಹಿತಾನ್ ಪ್ರತಿಪದ್ಯತೇ ಪ್ರಾಪ್ನೋತಿ ಇತ್ಯೇತತ್ ॥

(ಭಾಷ್ಯಾರ್ಥ)

ಸತ್ತ್ವವು ಬೆಳೆದುಕೊಂಡಿರುವ ಎದ್ದುತೋರುತ್ತಿರುವ ಯಾವಾಗಲಾದರೆ ದೇಹಧಾರಿಯು ಆತ್ಮನು, ಪ್ರಲಯವನ್ನು ಹೊಂದುವನೋ ಸಾವನ್ನು ಪಡೆಯುವನೋ ಆಗ ಉತ್ತಮಜ್ಞಾನಿಗಳಿಗೆ ಎಂದರೆ ಮಹತ್ತೇ ಮುಂತಾದ ತತ್ತ್ವಗಳನ್ನು ತಿಳಿದವರಿಗೆ (ಸಿಕ್ಕುವ) ಎಂದಭಿಪ್ರಾಯ. (ಅಂಥ) ಅಮಲವಾದ (ಯಾವ) ದೋಷವೂ ಇಲ್ಲದ[1] ಲೋಕಗಳನ್ನು ಪಡೆಯುತ್ತಾನೆ, ಸೇರುತ್ತಾನೆ ಎಂದು ಅಭಿಪ್ರಾಯ.

**ರಜಸಿ ಪ್ರಲಯಂ ಗತ್ವಾ ಕರ್ಮಸಙ್ಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫ ॥**

೧೫. ರಜಸ್ಸಿನಲ್ಲಿ ಪ್ರಲಯವನ್ನು ಹೊಂದಿದರೆ ಕರ್ಮಸಂಗಿಗಳಲ್ಲಿ ಹುಟ್ಟುತ್ತಾನೆ. ಹಾಗೆಯೇ ತಮಸ್ಸಿನಲ್ಲಿ ಪ್ರಲಯವಾದವನು ಮೂಢಯೋನಿಗಳಲ್ಲಿ ಹುಟ್ಟುತ್ತಾನೆ.

---

1. ರಜಸ್ತಮೋದೋಷಗಳಿಲ್ಲದ ಉತ್ತಮಲೋಕಗಳನ್ನು ; ಬ್ರಹ್ಮಾದಿಲೋಕಗಳನ್ನು ಅಥವಾ ಬ್ರಾಹ್ಮಣಾದಿ ಜನ್ಮಗಳನ್ನು.

(ಭಾಷ್ಯ)

೩೨೬. ರಜಸಿ ಪ್ರವೃದ್ಧೇ[1] ತು ಪ್ರಲಯಂ ಮರಣಂ ಗತ್ವಾ ಪ್ರಾಪ್ಯ ಕರ್ಮಸಙ್ಗಿಷು ಕರ್ಮಾಸಕ್ತಿಯುಕ್ತೇಷು ಮನುಷ್ಯೇಷು ಜಾಯತೇ । ತಥಾ ತದ್ವದೇವ ಪ್ರಲೀನಃ ಮೃತಃ ತಮಸಿ ಪ್ರವೃದ್ಧೇ[2] ಮೂಢಯೋನಿಷು ಪಶ್ವಾದಿಯೋನಿಷು ಜಾಯತೇ ॥

(ಭಾಷ್ಯಾರ್ಥ)

ರಜೋ (ಗುಣ)ವು ಬೆಳೆದುಕೊಂಡಿರುವಾಗ ಪ್ರಲಯವನ್ನು ಹೊಂದಿದರೆ ಮರಣವನ್ನು ಪಡೆದರೆ ಕರ್ಮಸಂಗಿಗಳಲ್ಲಿ ಕರ್ಮದಲ್ಲಿ ಆಸಕ್ತಿಯುಳ್ಳ ಮನುಷ್ಯರಲ್ಲಿ ಹುಟ್ಟುತ್ತಾನೆ. ಹಾಗೆಯೇ ಅದರಂತೆಯೇ ತಮಸ್ಸು ಬೆಳೆದುಕೊಂಡಿರುವಾಗ ಪ್ರಲಯವಾದವನು ಸತ್ತವನು ಮೂಢಯೋನಿಗಳಲ್ಲಿ ಪಶ್ವಾದಿಗಳ ಯೋನಿಗಳಲ್ಲಿ ಹುಟ್ಟುತ್ತಾನೆ.

(ಭಾಷ್ಯ)

೩೨೭. ಅತೀತಶ್ಲೋಕಾರ್ಥಸ್ಯೈವ ಸಙ್ಕ್ಷೇಪಃ ಉಚ್ಯತೇ --

(ಭಾಷ್ಯಾರ್ಥ)

ಕಳೆದ ಶ್ಲೋಕಗಳ ವಿಷಯವನ್ನೇ ಸಂಕ್ಷೇಪವಾಗಿ ಹೇಳುತ್ತಾನೆ:—

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ ೧೬ ॥**

೧೬. ಸುಕೃತ ಕರ್ಮಕ್ಕೆ ಸಾತ್ತ್ವಿಕವಾದ ನಿರ್ಮಲವಾದ ಫಲವೆನ್ನುವರು. ರಜಸ್ಸಿಗೆ ದುಃಖವು ಫಲವು, ತಮಸ್ಸಿಗೆ ಅಜ್ಞಾನವು ಫಲವು.

(ಭಾಷ್ಯ)

೩೨೮. ಕರ್ಮಣಃ ಸುಕೃತಸ್ಯ ಸಾತ್ತ್ವಿಕಸ್ಯ ಇತ್ಯರ್ಥಃ । ಆಹುಃ ಶಿಷ್ಟಾಃ ಸಾತ್ತ್ವಿಕಮೇವ ನಿರ್ಮಲಂ ಫಲಮ್ ಇತಿ । ರಜಸಸ್ತು ಫಲಂ ದುಃಖಮ್ । ರಾಜಸಸ್ಯ ಕರ್ಮಣಃ ಇತ್ಯರ್ಥಃ । ಕರ್ಮಾಧಿಕಾರಾತ್ । ಫಲಮಪಿ ದುಃಖಮೇವ

---

1. ‘ ಗುಣೇ ವಿವೃದ್ಧೇ ತು ’ ಅ॥ ನಿ॥ ವಾ॥
2. ‘ ವಿವೃದ್ಧೇ ’ ಅ॥ ನಿ॥ ವಾ॥

ಕಾರಣಾನುರೂಪ್ಯಾತ್ ರಾಜಸಮೇವ। ತಥಾ ಅಜ್ಞಾನಂ ತಮಸಃ ತಾಮಸಸ್ಯ ಕರ್ಮಣಃ ಅಧರ್ಮಸ್ಯ। ಪೂರ್ವವತ್ ॥

(ಭಾಷ್ಯಾರ್ಥ)

ಸುಕೃತವಾದ ಎಂದರೆ ಸಾತ್ತ್ವಿಕವಾದ ಎಂದರ್ಥ; (ಇಂಥ) ಕರ್ಮಕ್ಕೆ ಸಾತ್ತ್ವಿಕವೇ ಆಗಿರುವ ನಿರ್ಮಲವಾದ ಫಲವು (ಆಗುವದು) ಎಂದು ಬಲ್ಲವರು ಹೇಳುವರು. ರಜಸ್ಸಿಗಾದರೆ ದುಃಖವು ಫಲವು. (ರಜಸ್ಸಿಗೆ ಎಂದರೆ) ರಾಜಸ ಕರ್ಮಕ್ಕೆ ಎಂದೇ ಅರ್ಥ; ಏಕೆಂದರೆ (ಇದು) ಕರ್ಮದ ಪ್ರಕರಣವಾಗಿರುತ್ತದೆ. (ಇದಕ್ಕೆ) ಫಲವೂ ಕಾರಣಕ್ಕೆ ಅನುರೂಪವಾಗಿರುವದರಿಂದ ರಾಜಸವೇ ಆಗಿರುವ ದುಃಖವೇ. ಹಾಗೂ ತಮಸ್ಸಿಗೆ, ತಾಮಸ ಕರ್ಮಕ್ಕೆ, ಅಧರ್ಮಕ್ಕೆ, ಅಜ್ಞಾನವು ಫಲವು (ಎಂಬುದು) ಹಿಂದೆ ಹೇಳಿದಂತೆ[1].

## ಗುಣಗಳಿಂದಾಗುವ ಬಂಧದ ಉಪಸಂಹಾರ

(ಭಾಷ್ಯ)

೩೨೯. ಕಿಂಚ ಗುಣೇಭ್ಯೋ ಭವತಿ ?

(ಭಾಷ್ಯಾರ್ಥ)

ಗುಣಗಳಿಂದ ಮತ್ತೂ ಏನು ಆಗುತ್ತದೆ ?

**ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥ ೧೭ ॥**

೧೭. ಸತ್ತ್ವದಿಂದ ಜ್ಞಾನವುಂಟಾಗುತ್ತದೆ, ರಜಸ್ಸಿನಿಂದ ಲೋಭ (ವುಂಟಾಗುತ್ತದೆ). ತಮಸ್ಸಿನಿಂದ ಪ್ರಮಾದಮೋಹಗಳು ಉಂಟಾಗುತ್ತವೆ, ಅಜ್ಞಾನವೂ (ಉಂಟಾಗುತ್ತದೆ).

---

1. ತಮಸ್ಸೆಂದರೆ ತಾಮಸ ಕರ್ಮವೆಂದೂ ತಾಮಸವಾದ ಕರ್ಮಕ್ಕೆ ತಾಮಸವಾದ ಅಜ್ಞಾನವೇ ಫಲವೆಂದೂ ಅರ್ಥಮಾಡಿರುವದು ರಜೋಗುಣದ ವಿಷಯದಂತೆಯೇ_ಎಂದರ್ಥ.

(ಭಾಷ್ಯ)

೩೩೦. ಸತ್ತ್ವಾತ್ ಲಬ್ಧಾತ್ಮಕಾತ್ ಸಞ್ಜಾಯತೇ ಸಮುತ್ಪದ್ಯತೇ ಜ್ಞಾನಮ್ ರಜಸಃ ಲೋಭ ಏವ ಚ । ಪ್ರಮಾದಮೋಹೌ[1] ಚ ಉಭೌ ತಮಸಃ ಭವತಃ । ಅಜ್ಞಾನಮೇವ ಚ ಭವತಿ ॥

(ಭಾಷ್ಯಾರ್ಥ)

ಹುಟ್ಟಿಕೊಂಡ ಸತ್ತ್ವದಿಂದ ಜ್ಞಾನವು ಉಂಟಾಗುತ್ತದೆ, ಹುಟ್ಟುತ್ತದೆ. ರಜಸ್ಸಿನಿಂದ ಲೋಭವೇ (ಉಂಟಾಗುತ್ತದೆ). ತಮಸ್ಸಿನಿಂದ ಪ್ರಮಾದ, ಮೋಹ-(ಈ) ಎರಡೂ ಆಗುತ್ತವೆ, ಅಜ್ಞಾನವೂ ಆಗುತ್ತದೆ.

**ಊರ್ಧ್ವಂ ಗಚ್ಛನ್ತಿ ಸತ್ತ್ವಸ್ಥಾ ಮಧ್ಯೇ ತಿಷ್ಠನ್ತಿ ರಾಜಸಾಃ ।**
**ಜಘನ್ಯಗುಣವೃತ್ತಸ್ಥಾ ಅಧೋ ಗಚ್ಛನ್ತಿ ತಾಮಸಾಃ ॥ ೧೮ ॥**

೧೮. ಸತ್ತ್ವದಲ್ಲಿರುವವರು ಮೇಲಕ್ಕೆ ಹೋಗುವರು; ರಾಜಸರು ನಡುವೆ ಇರುವರು; ಕೆಳಗಿನ ಗುಣದ ವೃತ್ತದಲ್ಲಿರುವ ತಾಮಸರು ಕೆಳಕ್ಕೆ ಹೋಗುತ್ತಾರೆ.

(ಭಾಷ್ಯ)

೩೩೧. ಕಿಂಚ ಊರ್ಧ್ವಂ ಗಚ್ಛನ್ತಿ ದೇವಲೋಕಾದಿಷು ಉತ್ಪದ್ಯನ್ತೇ ಸತ್ತ್ವಸ್ಥಾಃ ಸತ್ತ್ವಗುಣವೃತ್ತಸ್ಥಾಃ । ಮಧ್ಯೇ ತಿಷ್ಠನ್ತಿ ಮನುಷ್ಯೇಷು ಉತ್ಪದ್ಯನ್ತೇ ರಾಜಸಾಃ ಜಘನ್ಯಗುಣವೃತ್ತಸ್ಥಾಃ । ಜಘನ್ಯಶ್ಚ ಅಸೌ ಗುಣಶ್ಚ ಜಘನ್ಯಗುಣಃ ತಮಃ । ತಸ್ಯ ವೃತ್ತಂ ನಿದ್ರಾಲಸ್ಯಾದಿ । ತಸ್ಮಿನ್ ಸ್ಥಿತಾಃ ಜಘನ್ಯಗುಣವೃತ್ತಸ್ಥಾಃ ಮೂಢಾಃ ಅಧೋ ಗಚ್ಛನ್ತಿ ಪಶ್ವಾದಿಷು[2] ಉತ್ಪದ್ಯನ್ತೇ ತಾಮಸಾಃ ॥

(ಭಾಷ್ಯಾರ್ಥ)

ಮತ್ತು ಸತ್ತ್ವಸ್ಥರು ಎಂದರೆ ಸತ್ತ್ವಗುಣದ ವ್ಯಾಪಾರದಲ್ಲಿರುವವರು ಮೇಲಕ್ಕೆ ಹೋಗುವರು, ದೇವಲೋಕವೇ ಮುಂತಾದವುಗಳಲ್ಲಿ ಹುಟ್ಟುತ್ತಾರೆ.

---

1. 'ಪ್ರಮಾದಶ್ಚ ಮೋಹಶ್ಚ ಪ್ರಮಾದಮೋಹೌ' ಎಂದು_ಹೆಚ್ಚಾಗಿ ಮು॥ ಮ್ಯೆ॥
2. 'ಪಶ್ವಾದಿಯೋನಿಷು' ಮು॥

ರಾಜಸರು ನಡುವೆ ಇರುವರು, ಮನುಷ್ಯರೊಳಗೆ ಹುಟ್ಟುವರು. ಜಘನ್ಯಗುಣ ವೃತ್ತಸ್ಥರು-ಕೆಳಗಿನ ಗುಣವಾದ ತಮಸ್ಸು ಜಘನ್ಯ ಗುಣವು; ಅದರ ವೃತ್ತವು ಎಂದರೆ ನಿದ್ರೆ, ಆಲಸ್ಯ ಮುಂತಾದ (ವ್ಯಾಪಾರವು). ಅದರಲ್ಲಿ ಇರುತ್ತಿರುವ ಜಘನ್ಯ ಗುಣವೃತ್ತಸ್ಥರಾದ ಮೂಢರು ಕೆಳಕ್ಕೆ ಹೋಗುವರು; ತಾಮಸರು ಪಶುಗಳೇ ಮುಂತಾದ (ಯೋನಿಗಳಲ್ಲಿ) ಹುಟ್ಟುತ್ತಾರೆ.

## ಗುಣಗಳಿಂದ ಬಿಡುಗಡೆ ಹೇಗೆ ?

(ಭಾಷ್ಯ)

೩೩೨. ಪುರುಷಸ್ಯ ಪ್ರಕೃತಿಸ್ಥತ್ವರೂಪೇಣ ಮಿಥ್ಯಾಜ್ಞಾನೇನ ಯುಕ್ತಸ್ಯ ಭೋಗ್ಯೇಷು ಗುಣೇಷು ಸುಖದುಃಖಮೋಹಾತ್ಮಕೇಷು-' ಸುಖೀ, ದುಃಖೀ, ಮೂಢೋಽಹಮಸ್ಮಿ '-ಇತ್ಯೇವಂರೂಪೋ ಯಃ ಸಙ್ಗಃ ತತ್ ಕಾರಣಂ ಪುರುಷಸ್ಯ ಸದಸದ್ಯೋನಿಜನ್ಮಪ್ರಾಪ್ತಿಲಕ್ಷಣಸ್ಯ ಸಂಸಾರಸ್ಯ ಇತಿ ಸಮಾಸೇನ ಪೂರ್ವಾಧ್ಯಾಯೇ ಯದುಕ್ತಮ್, ತತ್ ಇಹ " ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಮ್ಭವಾಃ " (೧೪-೫) ಇತ್ಯತ ಆರಭ್ಯ ಗುಣಸ್ವರೂಪಮ್, ಗುಣವೃತ್ತಂ, ಸ್ವವೃತ್ತೇನ[1] ಗುಣಾನಾಂ ಬನ್ಧಕತ್ವಮ್, ಗುಣವೃತ್ತನಿಬದ್ಧಸ್ಯ ಚ ಪುರುಷಸ್ಯ ಯಾ ಗತಿಃ-ಇತ್ಯೇತತ್ ಸರ್ವಂ ಮಿಥ್ಯಾಜ್ಞಾನಮೂಲಂ ಬನ್ಧಕಾರಣಂ ವಿಸ್ತರೇಣ ಉಕ್ತ್ವಾ ಅಧುನಾ ಸಮ್ಯಗ್ದರ್ಶನಾತ್ ಮೋಕ್ಷೋ ವಕ್ತವ್ಯಃ ಇತ್ಯತಃ ಆಹ ಭಗವಾನ್—

(ಭಾಷ್ಯಾರ್ಥ)

ಪ್ರಕೃತಿಯಲ್ಲಿರುವದೆಂಬ ಮಿಥ್ಯಾಜ್ಞಾನದಿಂದ ಕೂಡಿರುವ ಪುರುಷನು ಸುಖ ದುಃಖಮೋಹರೂಪವಾದ ಭೋಗ್ಯವಾದ ಗುಣಗಳಲ್ಲಿ " ನಾನು ಸುಖಿಯು, ದುಃಖಿಯು, ಮೂಢನಾಗಿರುತ್ತೇನೆ" ಎಂಬ ರೂಪದಲ್ಲಾಗುವ ಸಂಗವಿದೆಯಲ್ಲ, ಅದೇ ಪುರುಷನು ಸದಸದ್ಯೋನಿಗಳಲ್ಲಿ ಜನ್ಮವನ್ನು ಪಡೆಯುವದೆಂಬ ಸಂಸಾರಕ್ಕೆ ಕಾರಣವು ಎಂದು ಸಂಕ್ಷೇಪವಾಗಿ ಹಿಂದಿನ ಅಧ್ಯಾಯದಲ್ಲಿ (೧೩-೨೧) ಹೇಳಿತ್ತಷ್ಟೆ; ಅದನ್ನು ಇಲ್ಲಿ " ಸತ್ತ್ವ, ರಜ, ತಮ-ಎಂಬ ಪ್ರಕೃತಿಯಿಂದುಂಟಾಗಿರುವ ಗುಣ ಗಳು " (೧೪-೫) ಎಂಬ ಶ್ಲೋಕದಿಂದ ಹಿಡಿದು ಗುಣಗಳ ಸ್ವರೂಪ, ಗುಣಗಳ

---

1. ಇದರ ಮುಂದಿನ ಚ ಬೇಕಿಲ್ಲ.

ವ್ಯಾಪಾರ, ತಮ್ಮ ವ್ಯಾಪಾರದಿಂದ ಗುಣಗಳು ಬಂಧಕವಾಗುವವೆಂಬುದು, ಗುಣ ವ್ಯಾಪಾರದಿಂದ ಕಟ್ಟುವಡೆದ ಪುರುಷನಿಗೆ ಯಾವ ಗತಿ(ಯಾಗುವದು) ಎಂಬೀ **ಮಿಥ್ಯಾಜ್ಞಾನದ ಮೂಲಕವಾಗಿರುವ ಈ ಬಂಧಕಾರಣವೆಲ್ಲವನ್ನೂ ವಿಸ್ತಾರ ವಾಗಿ ಹೇಳಿ[1] ಈಗ ಸಮ್ಯಗ್ದರ್ಶನದಿಂದ ಮೋಕ್ಷವಾಗುವದೆಂಬುದನ್ನು ಹೇಳಬೇಕೆಂದು ಭಗವಂತನು (ಹೀಗೆಂದು) ಹೇಳುತ್ತಿದ್ದಾನೆ :—**

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥**

೧೯. ದ್ರಷ್ಟೃವು ಯಾವಾಗ ಗುಣಗಳಿಗಿಂತ ಬೇರೊಬ್ಬ ಕರ್ತೃವಿಲ್ಲ ವೆಂದು ಕಂಡುಕೊಳ್ಳುತ್ತಾನೋ ಮತ್ತು ಗುಣಗಳಿಗಿಂತಲೂ ಆಚಿನವನನ್ನು ಅರಿತುಕೊಳ್ಳುತ್ತಾನೋ, (ಆಗ) ಅವನು ನನ್ನ ಭಾವವನ್ನು ಹೊಂದುವನು.

(ಭಾಷ್ಯ)

೩೩೩ ನಾನ್ಯಂ ಕಾರ್ಯಕರಣವಿಷಯಾಧಾರಪರಿಣತೇಭ್ಯಃ[2] ಗುಣೇಭ್ಯಃ ಕರ್ತಾರಮ್ ಅನ್ಯಂ ಯದಾ ದ್ರಷ್ಟಾ ವಿದ್ವಾನ್ ಸನ್[3] ನ ಅನುಪಶ್ಯತಿ ಗುಣಾ ಏವ ಸರ್ವಾವಸ್ಥಾಃ[4] ಸರ್ವಕರ್ಮಣಾಂ ಕರ್ತಾರಃ ಇತ್ಯೇವಂ ಪಶ್ಯತಿ, ಗುಣೇಭ್ಯಶ್ಚ ಪರಂ ಗುಣವ್ಯಾಪಾರಸಾಕ್ಷಿಭೂತಂ ವೇತ್ತಿ, ಮದ್ಭಾವಂ ಮಮ ಭಾವಂ[6] ಸ ದ್ರಷ್ಟಾ ಅಧಿಗಚ್ಛತಿ ॥

---

1. ಅವಿದ್ಯಾಕೃತವಾದ ಗುಣಬಂಧವನ್ನು ವಿವರಿಸಿದ ಬಳಿಕ ವಿರಕ್ತರಾದವರಿಗೆ ಗುಣ ಗಳಿಂದ ಬಿಡುಗಡೆಯಾಗುವ ರೀತಿಯನ್ನು ಹೇಳುತ್ತಾನೆ ಎಂದರ್ಥ.

2. 'ಕಾರ್ಯಕಾರಣ' ಎಂದು ಆ॥ ಹೊರತು ಮಿಕ್ಕ ಪುಸ್ತಕಗಳ ಪಾಠ; ಆದರೆ ಈ ಪಾಠವೇ ಮೇಲು.

3. ಮು॥ ಮೈ॥ ಗಳಲ್ಲಿಲ್ಲ.

4. 'ಸರ್ವಾವಸ್ಥಾಸು' ಮು॥

5. "ಮಮ ಭಾವಂ ವಾಸುದೇವತ್ವಂ ವಾಸುದೇವಃ ಸರ್ವಮ್ ಇತ್ಯೇವಂ" ಮು॥ ಮೈ॥; "ಮಮ ಭಾವಂ ವಾಸುದೇವಾಖ್ಯಂ ವಾಸುದೇವಃ ಸರ್ವಮ್ ಇತ್ಯೇವಂ" ಗು॥

(ಭಾಷ್ಯಾರ್ಥ)

ಕಾರ್ಯಕರಣಗಳು, ವಿಷಯಗಳು–(ಇವುಗಳ) ಆಕಾರದಿಂದ ಪರಿಣಾಮವಾದ ಗುಣಗಳಿಗಿಂತ ಬೇರೆಯೊಬ್ಬ ಕರ್ತೃವನ್ನು ಯಾವಾಗ ದ್ರಷ್ಟೃವಾದವನು ಜ್ಞಾನಿಯಾಗಿ ಕಂಡುಕೊಳ್ಳದೆ ಇರುವನೋ, ಗುಣಗಳೇ ಸರ್ವಾವಸ್ಥೆಯನ್ನೂ ಪಡೆದು ಸರ್ವಕರ್ಮಗಳನ್ನೂ ಮಾಡುವವು ಎಂದು ಈ ಪರಿಯಲ್ಲಿ ಕಂಡುಕೊಳ್ಳುವನೋ, ಮತ್ತು ಗುಣಗಳಿಗಿಂತ ಆಚಿನವನಾಗಿ ಗುಣವ್ಯಾಪಾರಗಳಿಗೆ ಸಾಕ್ಷಿಯಾಗಿರುವ (ಆತ್ಮ)ನನ್ನು (ಯಾವಾಗ) ಅರಿತುಕೊಳ್ಳುವನೋ ಆ ದ್ರಷ್ಟೃವು ಆಗ ಮದ್ಭಾವವನ್ನು ನನ್ನ ಭಾವವನ್ನು ಹೊಂದುವನು.

(ಭಾಷ್ಯ)

೩೩೪. ಕಥಮ್ [1] ಅಧಿಗಚ್ಛತಿ ಇತಿ ? ಉಚ್ಯತೇ —

(ಭಾಷ್ಯಾರ್ಥ)

ಹೇಗೆ ಹೊಂದುವನು ? ಎಂದರೆ (ಭಗವಂತನು) ಹೇಳುತ್ತಾನೆ:—

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥**

೨೦. ದೇಹಿಯು ದೇಹಕ್ಕೆ ಕಾರಣವಾಗಿರುವ ಈ ಮೂರು ಗುಣಗಳನ್ನೂ ದಾಟಿದರೆ ಜನ್ಮಮೃತ್ಯುಜರಾದುಃಖಗಳಿಂದ ಬಿಡುಗಡೆಯನ್ನು ಹೊಂದಿ ಅಮೃತವನ್ನು ಪಡೆಯುತ್ತಾನೆ.

(ಭಾಷ್ಯ)

೩೩೫. ಗುಣಾನ್ ಏತಾನ್ ಯಥೋಕ್ತಾನ್ ಅತೀತ್ಯ ಜೀವನ್ನೇವ ಅತಿಕ್ರಮ್ಯ ಮಾಯೋಪಾಧಿಭೂತಾನ್ ತ್ರೀನ್ ದೇಹೀ ದೇಹಸಮುದ್ಭವಾನ್ ದೇಹೋತ್ಪತ್ತಿಬೀಜಭೂತಾನ್ ಜನ್ಮಮೃತ್ಯುಜರಾದುಃಖೈಃ ಜನ್ಮ ಚ ಮೃತ್ಯುಶ್ಚ ಜರಾ ಚ ದುಃಖಾನಿ ಚ ಜನ್ಮಮೃತ್ಯುಜರಾದುಃಖಾನಿ ತೈಃ ಜೀವನ್ನೇವ ವಿಮುಕ್ತಃ ಸನ್ ವಿದ್ವಾನ್ ಅಮೃತಮ್ ಅಶ್ನುತೇ । ಏವಂ ಮದ್ಭಾವಮ್ ಅಧಿಗಚ್ಛತಿ ಇತ್ಯರ್ಥಃ ॥

---

1. ‘ಕಥಂ ಸೋಽಧಿಗಚ್ಛತಿ’ ಮು॥

(ಭಾಷ್ಯಾರ್ಥ)

**ದೇಹಿಯು ಈ ಮೇಲೆ ಹೇಳಿರುವ ಗುಣಗಳನ್ನು ದಾಟಿದರೆ ಬದುಕಿರುವಾಗಲೇ ಮಾಯಿಕವಾದ ಉಪಾಧಿಗಳಾಗಿರುವ[1] ದೇಹಕ್ಕೆ ಕಾರಣವಾಗಿರುವ ದೇಹವು ಹುಟ್ಟುವದಕ್ಕೆ ಕಾರಣವಾಗಿರುವ (ಈ) ಮೂರನ್ನೂ ಮೀರಿದರೆ** ಜನ್ಮಮೃತ್ಯುಜರಾದುಃಖಗಳಿಂದ-ಹುಟ್ಟುವದು, ಸಾವು, ಮುಪ್ಪು ಮತ್ತು ದುಃಖಗಳು—ಎಂಬಿವು ಜನ್ಮಮೃತ್ಯುಜರಾದುಃಖಗಳು. ಇವುಗಳಿಂದ ಬದುಕಿರುವಾಗಲೇ ಬಿಡುಗಡೆ ಹೊಂದಿದವನಾಗಿ ಜ್ಞಾನಿಯು ಅಮೃತವನ್ನು ಪಡೆಯುತ್ತಾನೆ. ಹೀಗೆ ನನ್ನ ಭಾವವನ್ನು ಪಡೆದುಕೊಳ್ಳುತ್ತಾನೆ ಎಂದರ್ಥ.

## ಗುಣಾತೀತನ ಲಕ್ಷಣ

(ಭಾಷ್ಯ)

೨೩೬. ಜೀವನ್ನೇವ ಗುಣಾನ್ ಅತೀತ್ಯ ಅಮೃತಮ್ ಅಶ್ನುತೇ ಇತಿ ಪ್ರಶ್ನಬೀಜಂ ಪ್ರತಿಲಭ್ಯ ಅರ್ಜುನ ಉವಾಚ—

(ಭಾಷ್ಯಾರ್ಥ)

ಬದುಕಿರುವಾಗಲೇ ಗುಣಗಳನ್ನು ದಾಟಿ ಅಮೃತವನ್ನು ಹೊಂದುತ್ತಾನೆ-ಎಂದು (ಹೇಳಿದ್ದರಲ್ಲಿ) ಪ್ರಶ್ನೆಗೆ ಕಾರಣವು ದೊರೆತದ್ದರಿಂದ ಅರ್ಜುನನು ಇಂತೆಂದನು :—

**ಅರ್ಜುನ ಉವಾಚ—**

**ಕೈರ್ಲಿಙ್ಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥ ೨೧ ॥**

೨೧. ಅರ್ಜುನನಿಂತೆಂದನು :—ಪ್ರಭುವೆ, ಈ ಮೂರು ಗುಣಗಳನ್ನು ದಾಟಿದವನು ಯಾವ ಗುರುತುಗಳಿಂದ (ಕೂಡಿ) ಇರುವನು ? (ಅವನು) ಯಾವ ಆಚಾರದವನು ? ಮತ್ತು ಈ ಮೂರು ಗುಣಗಳನ್ನು ಹೇಗೆ ಮೀರಿರುವನು ?

---

1. **ಗುಣಗಳೂ ಅವುಗಳ ಪರಿಣಾಮವಾಗಿರುವ ಶರೀರವೇ ಮುಂತಾದವೂ ಮಾಯಿಕ, ಬರಿಯ ಹುಸಿ ತೋರಿಕೆ.**

(ಭಾಷ್ಯ)

೩೩೭. ಕೈಃ ಲಿಙ್ಗೈಃ ಚಿಹ್ನೈಃ ತ್ರೀನ್ ಏತಾನ್ ವ್ಯಾಖ್ಯಾತಾನ್ ಗುಣಾನ್ ಅತೀತಃ ಅತಿಕ್ರಾನ್ತಃ ಭವತಿ ಪ್ರಭೋ। ಕಿಮಾಚಾರಃ ಕಃ ಅಸ್ಯ ಆಚಾರಃ ಇತಿ ಕಿಮಾಚಾರಃ। ಕಥಂ ಕೇನ ಚ ಪ್ರಕಾರೇಣ ಏತಾನ್ ತ್ರೀನ್ ಗುಣಾನ್ ಅತಿವರ್ತತೇ ಅತೀತ್ಯ ವರ್ತತೇ [1] ?

(ಭಾಷ್ಯಾರ್ಥ)

ಪ್ರಭುವೆ, ಯಾವ ಲಿಂಗಗಳಿಂದ (ಯಾವ) ಚಿಹ್ನೆಗಳಿಂದ [2] ಈ (ಮೇಲೆ) ವಿವರಿಸಿರುವ ಮೂರು ಗುಣಗಳನ್ನು ದಾಟಿದವನು ಮೀರಿಹೋದವನು ಆಗುತ್ತಾನೆ ? (ಅವನು) ಕಿಮಾಚಾರನು, ಅವನ ಆಚಾರವು ಎಂಥದ್ದು ಎಂಬುದನ್ನು ಕಿಮಾಚಾರನು, (ಎಂದು ಕೇಳಿರುತ್ತದೆ). ಮತ್ತು ಹೇಗೆ, ಯಾವ ಪ್ರಕಾರದಿಂದ ಈ ಮೂರು ಗುಣಗಳನ್ನು ಮೀರಿರುತ್ತಾನೆ, ದಾಟಿರುತ್ತಾನೆ ?

(ಭಾಷ್ಯ)

೩೩೮. ಗುಣಾತೀತಸ್ಯ ಲಕ್ಷಣಂ ಗುಣಾತೀತತ್ವೋಪಾಯಂ ಚ ಅರ್ಜುನೇನ ಪೃಷ್ಟಃ ಅಸ್ಮಿನ್ ಶ್ಲೋಕೇ ಪ್ರಶ್ನದ್ವಯಾರ್ಥಂ ಪ್ರತಿವಚನಂ ಭಗವಾನ್ ಉವಾಚ । ಯತ್ ತಾವತ್ ಕೈರ್ಲಿಙ್ಗೈಃ ಯುಕ್ತೋ ಗುಣಾತೀತೋ ಭವತೀತಿ, ತತ್ ಶೃಣು [3]—

(ಭಾಷ್ಯಾರ್ಥ)

ಈ (ಮೇಲಿನ) ಶ್ಲೋಕದಲ್ಲಿ ಗುಣಾತೀತನ ಲಕ್ಷಣವನ್ನೂ ಗುಣಾತೀತನಾಗುವದಕ್ಕೆ ಸಾಧನವನ್ನೂ ಅರ್ಜುನನು ಕೇಳಲಾಗಿ (ಈ) ಪ್ರಶ್ನೆಗಳೆರಡಕ್ಕೂ ಉತ್ತರವನ್ನು ಭಗವಂತನು ಹೇಳಿದನು. ಮೊದಲು ಯಾವ ಲಕ್ಷಣಗಳಿಂದ ಕೂಡಿದವನು ಗುಣಾತೀತನಾಗಿರುತ್ತಾನೆ ?-ಎಂದು ಕೇಳಿದೆಯಲ್ಲ, ಅದನ್ನು (ಹೇಳುತ್ತೇನೆ), ಕೇಳು :—

---

1. ನಿ|| ಗು|| ಮಾ||ಗಳಲ್ಲಿ ಈ ಎರಡು ಮಾತುಗಳಿಲ್ಲ.

2. ಇಲ್ಲಿ ಗುಣಾತೀತನ ಲಕ್ಷಣವನ್ನು ಹಿಂದೆ ಹೇಳಿದ ಸ್ಥಿತಪ್ರಜ್ಞನ ಲಕ್ಷಣದಂತೆಯೇ ಭಾವಿಸಬೇಕು ; ಇದು ಸಿದ್ಧನ ಲಕ್ಷಣವು, ಮುಮುಕ್ಷುವಿಗೆ ಸಾಧನವು.

3. ‘ ಭವತಿ ತತ್ ಶೃಣುಷ್ವ ’ ನಿ||

ಶ್ರೀ ಭಗವಾನ್ ಉವಾಚ—

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಣ್ಡವ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಙ್ಕ್ಷತಿ ॥ ೨೨ ॥**

೨೨. ಶ್ರೀ ಭಗವಂತನಿಂತೆಂದನು : —ಪಾಂಡವನೆ, ಪ್ರಕಾಶವನ್ನೂ ಪ್ರವೃತ್ತಿಯನ್ನೂ ಮೋಹವನ್ನೂ ಬಂದವುಗಳನ್ನು ದ್ವೇಷಿಸುವದಿಲ್ಲ, ಹೋದವನ್ನು ಬಯಸುವದಿಲ್ಲ

(ಭಾಷ್ಯ)

೩೩೯. ಪ್ರಕಾಶಂ ಚ ಸತ್ತ್ವಕಾರ್ಯಂ ಪ್ರವೃತ್ತಿಂ ಚ ರಜಃ ಕಾರ್ಯಂ ಮೋಹಮೇವ ಚ ತಮಃಕಾರ್ಯಂ ಇತ್ಯೇತಾನಿ ನ ದ್ವೇಷ್ಟಿ, ಸಂಪ್ರವೃತ್ತಾನಿ ಸಮ್ಯಗ್ವಿಷಯಭಾವೇನ ಉದ್ಭೂತಾನಿ । ಮಮ ತಾಮಸಃ ಪ್ರತ್ಯಯೋ ಜಾತಃ, ತೇನ ಅಹಂ ಮೂಢಃ । ತಥಾ ರಾಜಸೀ ಪ್ರವೃತ್ತಿಃ ಮಮ ಉತ್ಪನ್ನಾ ದುಃಖಾತ್ಮಿಕಾ, ತೇನ ಅಹಂ ರಜಸಾ ಪ್ರವರ್ತಿತಃ ಪ್ರಚಲಿತಃ ಸ್ವರೂಪಾತ್ । ಕಷ್ಟಂ ಮಮ ವರ್ತತೇ ಯೋಽಯಂ ಮತ್ಸ್ವರೂಪಾವಸ್ಥಾನಾತ್ ಭ್ರಂಶಃ[1] । ತಥಾ ಸಾತ್ತ್ವಿಕೋ ಗುಣಃ ಪ್ರಕಾಶಾತ್ಮಾ ಮಾಂ ವಿವೇಕಿತ್ವಮ್ ಆಪಾದಯನ್ ಸುಖೇ[2] ಚ ಸಞ್ಜಯನ್ ಬಧ್ನಾತಿ " ಇತಿ ತಾನಿ ದ್ವೇಷ್ಟಿ ಅಸಮ್ಯಗ್ದರ್ಶಿತ್ವೇನ । ತತ್ ಏವಂ ಗುಣಾತೀತೋ ನ ದ್ವೇಷ್ಟಿ ಸಂಪ್ರವೃತ್ತಾನಿ । ಯಥಾ ಚ ಸಾತ್ತ್ವಿಕಾದಿಪುರುಷಃ ಸತ್ತ್ವಾದಿಕಾರ್ಯಾಣಿ ಆತ್ಮಾನಂ ಪ್ರತಿ ಪ್ರಕಾಶ್ಯ ನಿವೃತ್ತಾನಿ ಕಾಙ್ಕ್ಷತಿ, ನ ತಥಾ ಗುಣಾತೀತಃ ನಿವೃತ್ತಾನಿ ಕಾಙ್ಕ್ಷತಿ, ಇತ್ಯರ್ಥಃ । ಏತತ್ ನ ಪರಪ್ರತ್ಯಕ್ಷಂ[3] ಲಿಙ್ಗಮ್, ಕಿಂ ತರ್ಹಿ ಸ್ವಾತ್ಮಪ್ರತ್ಯಕ್ಷತ್ವಾತ್ ಆತ್ಮವಿಷಯಮೇವ[4] ಏತತ್ ಲಕ್ಷಣಮ್ । ನ ಹಿ ಸ್ವಾತ್ಮವಿಷಯಂ ದ್ವೇಷಮ್ ಆಕಾಙ್ಕ್ಷಾಂ ವಾ ಪರಃ ಪಶ್ಯತಿ ॥

---

1. ಸ್ವರೂಪಾವಸ್ಥಾಭ್ರಂಶಃ ' ಮ॥ ಮೈ॥
2. ' ಸುಖೇನ ' ಮ॥ ಮೈ॥
3. ' ಪರಪ್ರತ್ಯಕ್ಷಲಿಙ್ಗಮ್ ' ಶಿ॥ ವಾ॥
4. ' ಆತ್ಮಾರ್ಥಮೇವ ' ಮ॥ ಮೈ॥ ಗು॥

(ಭಾಷ್ಯಾರ್ಥ)

ಸತ್ತ್ವದ ಕಾರ್ಯವಾದ ಪ್ರಕಾಶವನ್ನೂ ರಜಸ್ಸಿನ ಕಾರ್ಯವಾದ ಪ್ರವೃತ್ತಿಯನ್ನೂ ತಮಸ್ಸಿನ ಕಾರ್ಯವಾದ ಮೋಹವನ್ನೂ-(ಪ್ರಕಾಶ, ಪ್ರವೃತ್ತಿ, ಮೋಹ) ಎಂಬಿವುಗಳು ಬಂದವುಗಳನ್ನು, (ಸಂಪ್ರವೃತ್ತಾನಿ ಎಂಬ ಮೂಲಕ್ಕೆ) ಚೆನ್ನಾಗಿ ವಿಷಯವಾಗಿ ತೋರಿಕೊಂಡವುಗಳನ್ನು ದ್ವೇಶಿಸುವದಿಲ್ಲ " ನನಗೆ ತಾಮಸಪ್ರತ್ಯಯವುಂಟಾಗಿದೆ, ಆದ್ದರಿಂದ ನಾನು ಮೂಢನಾಗಿರುವೆನು ; ಇದರಂತೆ " ನನಗೆ ರಜಸ್ಸಿನ ದುಃಖಾತ್ಮಕವಾದ ಪ್ರವೃತ್ತಿಯು ಉಂಟಾಗಿದೆ, ಆ ರಜಸ್ಸಿನಿಂದ ಪ್ರೇರಿತನಾಗಿ ಸ್ವರೂಪದಿಂದ ಚಲಿಸಿರುತ್ತೇನೆ, ನನ್ನ ಸ್ವರೂಪದಿಂದ ಜಾರಿರುವೆನಲ್ಲ, ಇದು ನನಗೆ ಕಷ್ಟವಾಗಿರುತ್ತದೆ " ; ಹಾಗೂ " ಪ್ರಕಾಶರೂಪವಾದ ಸಾತ್ತ್ವಿಕ ಗುಣವು ನನಗೆ ವಿವೇಕವನ್ನುಂಟುಮಾಡುತ್ತಲೂ ಸುಖದಲ್ಲಿ ಸಂಗವನ್ನುಂಟುಮಾಡುತ್ತಲೂ ಕಟ್ಟಿಹಾಕುತ್ತಿದೆ "-ಎಂದು (ಸಾಮಾನ್ಯ ಮನುಷ್ಯನು) ಸರಿಯಾದ ಜ್ಞಾನವಿಲ್ಲದಿರುವದರಿಂದ ಆ (ಗುಣ)ಗಳನ್ನು ದ್ವೇಷಿಸುತ್ತಾನೆ [1] ; (ಆದರೆ) ಆ ರೀತಿಯಲ್ಲಿ ಗುಣಾತೀತನು ಬಂದ (ಗುಣ)ಗಳನ್ನು ದ್ವೇಷಿಸುವದಿಲ್ಲ. ಮತ್ತು ಹೇಗೆ ಸಾತ್ತ್ವಿಕನು ಮುಂತಾದ ಪುರುಷನು ಸತ್ತ್ವವೇ ಮುಂತಾದವುಗಳ ಕಾರ್ಯಗಳು ತನಗೆ ತೋರಿಸಿಕೊಂಡವು ಹಿಂತಿರುಗಿದರೆ (ಆ ಗುಣಗಳು ಬೇಕೆಂದು) ಬಯಸುತ್ತಾನೋ, ಹಾಗೆ ಗುಣಾತೀತನು (ಹಿಂತಿರುಗಿ) ಹೋದ ಗುಣಗಳನ್ನು ಬಯಸುವದಿಲ್ಲ -- ಎಂದರ್ಥ.

**ಇದು ಮತ್ತೊಬ್ಬರಿಗೆ ಕಾಣುವ ಚಿಹ್ನೆಯಲ್ಲ, ಮತ್ತೇನೆಂದರೆ ತನಗೆ (ಮಾತ್ರ) ನೇರಾಗಿ ತಿಳಿದುಬರುವದರಿಂದ ಈ ಲಕ್ಷಣವು ತನಗೋಸ್ಕರವಾಗಿಯೇ ಹೇಳಿದ ಲಕ್ಷಣವು. ಏಕೆಂದರೆ ತನಗೆ ಉಂಟಾಗುವ ದ್ವೇಷವನ್ನಾಗಲಿ ಬಯಕೆಯನ್ನಾಗಲಿ ಮತ್ತೊಬ್ಬರು ಕಾಣುವ (ಹಾಗಿ)ಲ್ಲ.**

(ಭಾಷ್ಯ)

೨೪೦. ಅಥ ಇದಾನೀಂ " ಗುಣಾತೀತಃ ಕಿಮಾಚಾರಃ ? [2] ಇತಿ ಪ್ರಶ್ನಸ್ಯ ಪ್ರತಿವಚನಮ್ ಆಹ—

(ಭಾಷ್ಯಾರ್ಥ)

ಇನ್ನು ಈಗ " ಗುಣಾತೀತನ ಆಚಾರವು ಎಂಥದ್ದು ? " ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾನೆ :—

---

1. ಅಂತಃಕರಣಧರ್ಮವನ್ನು ಅವಿವೇಕಿಯು ತನ್ನಲ್ಲಿಯೇ ಆರೋಪಿಸಿಕೊಳ್ಳುತ್ತಾನೆ ; ಮಾಂ. ಕಾ. ಭಾ. ೨-೩೮.

2. 'ಸ್ಥಿತಃ' ಮ|| ಮ್ಯ||

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ।**
**ಗುಣಾ ವರ್ತನ್ತ ಇತ್ಯೇವ ಯೋಽವತಿಷ್ಠತಿ ನೇಙ್ಗತೇ ॥ ೨೩ ॥**

೨೩. ಉದಾಸೀನನಂತೆ ಕುಳಿತಿರುವವನಾಗಿ ಯಾವನು ಗುಣಗಳಿಂದ ಚಲಿತನಾಗದೆ ಇರುವನೋ ' ಗುಣಗಳು ವರ್ತಿಸುತ್ತವೆ,' ಎಂದೇ ನಿಲುಗಡೆ ಹೊಂದಿರುತ್ತಾನೋ ಅಲುಗಾಡದೆ ಇರುತ್ತಾನೋ ;

(ಭಾಷ್ಯ)

೩೪೧. ಉದಾಸೀನವತ್ ಯಥಾ ಉದಾಸೀನಃ ನ ಕಸ್ಯಚಿತ್ ಪಕ್ಷಂ ಭಜತೇ ತಥಾ ಅಯಂ ಗುಣಾತೀತತ್ವೋಪಾಯಮಾರ್ಗೇ ಅವಸ್ಥಿತಃ ಆಸೀನಃ ಆತ್ಮವಿತ್ ಗುಣೈಃ ಯಃ ಸಂನ್ಯಾಸೀ ನ ವಿಚಾಲ್ಯತೇ ವಿವೇಕದರ್ಶನಾವಸ್ಥಾತಃ। ತದೇತತ್ ಸ್ಫುಟೀಕರೋತಿ–ಗುಣಾಃ ಕಾರ್ಯಕರಣವಿಷಯಾಕಾರಪರಿಣತಾಃ ಅನ್ಯೋನ್ಯಸ್ಮಿನ್ ವರ್ತನ್ತೇ ಇತಿ ಯಃ ಅವತಿಷ್ಠತಿ। ಛನ್ದೋಭಙ್ಗಭಯಾತ್ ಪರಸ್ಮೈಪದಪ್ರಯೋಗಃ। ಯಃ ಅನುತಿಷ್ಠತಿ ಇತಿ ವಾ ಪಾಠಾನ್ತರಮ್, ನ ಇಙ್ಗತೇ ನ ಚಲತಿ ಸ್ವರೂಪಾವಸ್ಥ ಏವ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಉದಾಸೀನನಂತೆ–ಹೇಗೆ ಉದಾಸೀನನಾದವನು ಯಾವನೊಬ್ಬನ ಪಕ್ಷವನ್ನೂ ಸೇರದೆ ಇರುವನೋ ಹಾಗೆ. ಗುಣಾತೀತನಾಗುವ ಸಾಧನದ ಮಾರ್ಗದಲ್ಲಿರುವ ಇವನು ಕುಳಿತಿರುವವನು, ಆತ್ಮಜ್ಞಾನಿಯಾದ ಯಾವ ಸಂನ್ಯಾಸಿಯು ವಿವೇಕದರ್ಶನದ ಅವಸ್ಥೆಯನ್ನು ಬಿಟ್ಟು ಗುಣಗಳಿಂದ ಅಲುಗಾಡಿಸಲ್ಪಡದೆ ಇರುವನೋ (ಎಂದರ್ಥ). ಇದನ್ನೇ ಸ್ಫುಟಗೊಳಿಸುತ್ತಾನೆ : ಕಾರ್ಯ, ಕರಣಗಳು, ವಿಷಯಗಳು–(ಇವುಗಳ) ರೂಪವಾಗಿ ಪರಿಣಮಿಸಿರುವ ಗುಣಗಳು ಒಂದರಲ್ಲೊಂದು ವ್ಯಾಪಾರ ಮಾಡುತ್ತಿರುತ್ತವೆ.[1] –ಎಂದು ಯಾವನು ನಿಲುಗಡೆ ಹೊಂದಿರುತ್ತಾನೋ ' (ಅವತಿಷ್ಠತೇ ' ಎಂದು ಆತ್ಮನೋಪದವಿರಬೇಕಾದರೂ) ಛಂದೋಭಂಗ (ವಾದೀತೆಂಬ) ಅಂಜಿಕೆಯಿಂದ (' ಅವತಿಷ್ಠತಿ ' ಎಂದು) ಪರಸ್ಮೈಪದವನ್ನೇ ಪ್ರಯೋಗಿಸಿರುತ್ತದೆ. ಅಥವಾ ' ಯೋಽನುತಿಷ್ಠತಿ ' (ಯಾವನು ಹೀಗೆಂದು ತಿಳಿದು ಅನುಷ್ಠಾನಮಾಡು

1. ೩-೨೮ರ ಭಾಷ್ಯವನ್ನು ನೋಡಿ.

ತ್ತಿರುವನೋ)[1] ಎಂದು ಪಾಠ(ವನ್ನು) ಕಲ್ಪಿಸಬೇಕು. ಆ ಪಾಠದಲ್ಲಿ ಪರಸ್ಮೈಪದವೇ ಸರಿ. ಯಾವನು) ಅಲುಗಾಡದೆ ಇರುತ್ತಾನೋ ಚಲಿಸದೆ ಇರುತ್ತಾನೋ (ತನ್ನ) ಸ್ವರೂಪದಲ್ಲಿಯೇ ಇದ್ದುಕೊಂಡಿರುವನೋ ಎಂದರ್ಥ.

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಞ್ಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿನ್ದಾತ್ಮಸಂಸ್ತುತಿಃ ॥ ೨೪ ॥**

೨೪. (ಯಾವನು) ಸಮದುಃಖಸುಖನಾಗಿ ಸ್ವಸ್ಥನಾಗಿ ಸಮಲೋಷ್ಟಾಶ್ಮಕಾಂಚನನಾಗಿರುವನೋ ತುಲ್ಯಪ್ರಿಯಾಪ್ರಿಯನಾಗಿ ಧೀರನಾಗಿ ತುಲ್ಯನಿಂದಾತ್ಮಸಂಸ್ತುತಿಯಾಗಿರುವನೋ ;

(ಭಾಷ್ಯ)

೩೪೨. ಕಿಂಚ ಸಮದುಃಖಸುಖಃ ಸಮೇ ದುಃಖಸುಖೇ ಯಸ್ಯ ಸಃ ಸಮದುಃಖಸುಖಃ । ಸ್ವಸ್ಥಃ ಸ್ವೇ ಆತ್ಮನಿ ಸ್ಥಿತಃ ಪ್ರಸನ್ನಃ । ಸಮಲೋಷ್ಟಾಶ್ಮಕಾಞ್ಚನಃ । ಲೋಷ್ಟಂ ಚ ಅಶ್ಮಾ ಚ ಕಾಞ್ಚನಂ ಚ ಸಮಾನಿ ಯಸ್ಯ ಸಃ ಸಮಲೋಷ್ಟಾಶ್ಮಕಾಞ್ಚನಃ[2] ತುಲ್ಯಪ್ರಿಯಾಪ್ರಿಯಃ ಪ್ರಿಯಂ ಚ ಅಪ್ರಿಯಂ ಚ ಪ್ರಿಯಾಪ್ರಿಯೇ ತುಲ್ಯೇ ಸಮೇ ಯಸ್ಯ ಸೋಽಯಂ ತುಲ್ಯಪ್ರಿಯಾಪ್ರಿಯಃ । ಧೀರಃ ಧೀಮಾನ್ । ತುಲ್ಯನಿನ್ದಾತ್ಮಸಂಸ್ತುತಿಃ ನಿನ್ದಾ ಚ ಆತ್ಮಸಂಸ್ತುತಿಶ್ಚ ನಿನ್ದಾತ್ಮಸಂಸ್ತುತೀ । ತುಲ್ಯೇ ನಿನ್ದಾತ್ಮಸಂಸ್ತುತೀ ಯಸ್ಯ ಯತೇಃ ಸಃ ತುಲ್ಯನಿನ್ದಾತ್ಮಸಂಸ್ತುತಿಃ ॥

(ಭಾಷ್ಯಾರ್ಥ)

ಮತ್ತು (ಯಾವನು) ಸಮದುಃಖಸುಖನಾಗಿ ದುಃಖವೂ ಸುಖವೂ ಯಾವನಿಗೆ ಒಂದೇ ಆಗಿರುವವೋ[3] ಅವನು ಸಮದುಃಖಸುಖನು. ಸ್ವಸ್ಥನು, ತನ್ನಲ್ಲಿ

---

1. ತ್ರಿಗುಣಾತೀತನಿಗೂ ಯಾವದಾದರೊಂದು ಮಾಡಬೇಕಾದ ಕರ್ಮವಿದೆ ಎಂದು ಅಭಿಪ್ರಾಯವಲ್ಲ ; ಸ್ವಭಾವದಿಂದ ನಿವೃತ್ತಿ ಮಾರ್ಗದಲ್ಲಿದ್ದುಕೊಂಡಿರುವದೇ ಅವನ ಅನುಷ್ಠಾನವು. ಇದನ್ನೇ ಉದಾಸೀನನಾಗಿರುವದು ಎಂದಿದೆ.

2. “ಸಮಾನಿ ಲೋಷ್ಟಾಶ್ಮಕಾಞ್ಚನಾನಿ ಯಸ್ಯ ಸಃ ಸಮಲೋಷ್ಟಾಶ್ಮಕಾಞ್ಚನಃ” ಮ್ಮೈ॥

2. ಎರಡೂ ಒಂದೇ ವಿಧವಾಗಿ ಅವನ ಮನಸ್ಸಿನ ಮೇಲೆ ಪರಿಣಾಮವನ್ನು ಮಾಡುವವು. ದುಃಖದಿಂದಲಾಗಲಿ ಸುಖದಿಂದಲಾಗಲಿ ಮನಸ್ಸು ಏರುಪೇರುಗಳನ್ನು ಹೊಂದುವದಿಲ್ಲ.—ಎಂದಭಿಪ್ರಾಯ.

ಎಂದರೆ ಆತ್ಮನಲ್ಲಿ ನಿಲುಗಡೆಯನ್ನು ಹೊಂದಿ ಪ್ರಸನ್ನನಾಗಿರುವವನೇ. ಸಮಲೋಷ್ಟಾಶ್ಮಕಾಂಚನನು. ಹೆಂಟೆಯೂ ಕಲ್ಲೂ ಚಿನ್ನವೂ ಯಾವನಿಗೆ ಒಂದೇ ಆಗಿರುದೆವೋ ಅವನು ಸಮಲೋಷ್ಟಾಶ್ಮಕಾಂಚನನು. ತುಲ್ಯಪ್ರಿಯಾಪ್ರಿಯನು: ಯಾವನಿಗೆ ಬೇಕಾದದ್ದೂ ಬೇಡವಾದದ್ದೂ (ಎಂಬ) ಪ್ರಿಯಾಪ್ರಿಯಗಳು ತುಲ್ಯವಾಗಿ ಒಂದೇ ಆಗಿರುವವೋ ಅಂಥವನು ತುಲ್ಯಪ್ರಿಯಾಪ್ರಿಯನು. ಧೀರನು, ಬುದ್ಧಿವಂತನು. ತುಲ್ಯನಿಂದಾತ್ಮಸಂಸ್ತುತಿಯು: (ತನ್ನನ್ನು) ನಿಂದಿಸುವದೂ (ತನ್ನನ್ನು) ಹೊಗಳುವದೂ ನಿಂದಾತ್ಮಸಂಸ್ತುತಿಗಳು ; ನಿಂದಾತ್ಮಸಂಸ್ತುತಿಗಳು ಯಾವ ಯತಿಗೆ ಸಮಾನವಾಗಿರುವವೋ ಆತನು ತುಲ್ಯನಿಂದಾತ್ಮಸಂಸ್ತುತಿಯು ;

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಮ್ಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫ ॥**

೨೫. ಮಾನಾಪಮಾನಗಳಲ್ಲಿ ತುಲ್ಯನಾಗಿ ಮಿತ್ರಾರಿಪಕ್ಷಗಳಲ್ಲಿ ತುಲನಾಗಿ, ಸರ್ವಾರಂಭಪರಿತ್ಯಾಗಿಯಾಗಿ (ಇರು)ವವನು (ಯಾರೋ) ಅವನು ಗುಣಾತೀತನೆನಿಸುವನು.

(ಭಾಷ್ಯ)

೩೪೩. ಮಾನಾಪಮಾನಯೋಃ ತುಲ್ಯಃ ಸಮಃ ನಿರ್ವಿಕಾರಃ । ತುಲ್ಯಃ ಮಿತ್ರಾರಿಪಕ್ಷಯೋಃ । ಯದ್ಯಪಿ ಅಸ್ಯ ಉದಾಸೀನಸ್ಯ ಪರೇಷು ಮಿತ್ರಾದಿಪ್ರತಿಭಾಸೋ ನಾಸ್ತಿ, ತಥಾಪಿ ಪರೇಷಾಂ "ವಯಮ್ ಅಸ್ಯ ಮಿತ್ರಾಣಿ ವಯಮ್ ಅಸ್ಯ ಅರಯಃ" ಇತಿ ಪ್ರತಿಭಾಸಃ ಸಮ್ಭವತಿ ಇತಿ ತದಭಿಪ್ರಾಯೇಣ 'ತುಲ್ಯೋ ಮಿತ್ರಾರಿಪಕ್ಷಯೋಃ' ಇತ್ಯಾಹ[1] । ಸರ್ವಾರಮ್ಭಪರಿತ್ಯಾಗೀ ದೃಷ್ಟಾದೃಷ್ಟಾರ್ಥಾನಿ ಕರ್ಮಾಣಿ ಆರಭ್ಯನ್ತೇ ಇತಿ ಆರಮ್ಭಾಃ । ಸರ್ವಾನ್ ಆರಮ್ಭಾನ್ ಪರಿತ್ಯಕ್ತುಂ ಶೀಲಮ್ ಅಸ್ಯ ಇತಿ ಸರ್ವಾರಮ್ಭಪರಿತ್ಯಾಗೀ । ದೇಹಧಾರಣಮಾತ್ರನಿಮಿತ್ತವ್ಯತಿರೇಕೇಣ ಸರ್ವಕರ್ಮಪರಿತ್ಯಾಗೀ ಇತ್ಯರ್ಥಃ । ಗುಣಾತೀತಃ ಸ ಉಚ್ಯತೇ ॥

1. 'ಮಿತ್ರಾದೀತಿ ಭಾಸಃ ನಾಸ್ತಿ . . . ವಯಮಸ್ಯ ಅರಾತಯಃ ಇತಿ ಪ್ರತಿಭಾಸಃ ಸಂಭವತಿ' ಎಂದು ಮು|| ಪಾಠವು. ಈ ಪಾಠವೇ ಅಚ್ಚಿನ ತಪ್ಪಿನಿಂದ ಬೇರೆಯಾಗಿದೆ ಎಂದು ತೋರುತ್ತದೆ." ಯದ್ಯಪಿ ಉದಾಸೀನಾ ಭವನ್ತಿ ಕೇಚಿತ್ ಸ್ವಾಭಿಪ್ರಾಯೇಣ ತಥಾಪಿ ಪರಾಭಿಪ್ರಾಯೇಣ ಮಿತ್ರಾರಿಪಕ್ಷಯೋರಿವ ಭವನ್ತಿ ॥ ಎಂಬ ಆ|| ಸಿ|| ವಾ|| ಎಂಬ ಪಾಠಕ್ಕಿಂತ ಇದೇ ಮೇಲು.

(ಭಾಷ್ಯಾರ್ಥ)

(ಯಾವನು) ಮಾನ, ಅಪಮಾನ–(ಇವು)ಗಳಲ್ಲಿ ತುಲ್ಯನೋ, ಸಮನಾಗಿ (ಯಾವ) ವಿಕಾರವೂ ಇಲ್ಲದೆ (ಇರುವ)ನೋ. ಮಿತ್ರಾರಿಪಕ್ಷಗಳಲ್ಲಿ ತುಲ್ಯನಾಗಿರುವನೋ : ಉದಾಸೀನನಾಗಿರುವ ಈತನಿಗೆ ಮತ್ತೊಬ್ಬರಲ್ಲಿ ಮಿತ್ರರು, ಅರಿಗಳು–(ಎಂಬ ಭಾವನೆಗಳು) ತೋರುವದೇನೋ ಇಲ್ಲ ; ಆದರೂ ಮಿಕ್ಕವರಿಗೆ " ನಾವು ಇವನಿಗೆ ಮಿತ್ರರು, ನಾವು ಇವನಿಗೆ ಅರಿಗಳು " ಎಂದು ತೋರಬಹುದಾಗಿದೆ ; ಆದ್ದರಿಂದ ಅವರ ಅಭಿಪ್ರಾಯದಿಂದ " ಮಿತ್ರಾರಿಪಕ್ಷಗಳಲ್ಲಿ ತುಲ್ಯನಾಗಿ '' ಎಂದು (ಭಗವಂತನು) ಹೇಳಿರುತ್ತಾನೆ. (ಯಾವನು) ಸರ್ವಾರಂಭಪರಿತ್ಯಾಗಿಯೋ : ಕಂಡಿರುವ (ಈ ಲೋಕದ), ಕಾಣದ (ಪರಲೋಕದ) ಫಲಕ್ಕಾಗಿ (ಮಾಡುವ) ಕರ್ಮಗಳನ್ನು (ಅಧಿಕಾರಿಗಳು) ಮಾಡುತ್ತಾರೆ, ಆದ್ದರಿಂದ (ಅವು) ಆರಂಭಗಳು (ಎನಿಸುತ್ತವೆ) ; (ಅಂಥ) ಎಲ್ಲಾ ಆರಂಭಗಳನ್ನೂ ಬಿಡುವ ಸ್ವಭಾವವುಳ್ಳವನಾದ್ದರಿಂದ (ಇವನು) ಸರ್ವಾರಂಭಪರಿತ್ಯಾಗಿಯು. (ಯಾವನು ಹೀಗೆ ಸರ್ವಾರಂಭಪರಿತ್ಯಾಗಿಯೋ) ದೇಹವನ್ನು ಧರಿಸಿರುವವಮಟ್ಟಿಗೆ ನಿಮಿತ್ತವಾಗಿರುವ(ವುಗಳನ್ನು) ಬಿಟ್ಟು (ಮಿಕ್ಕ) ಎಲ್ಲಾ ಕರ್ಮಗಳನ್ನೂ ಪರಿತ್ಯಾಗಮಾಡುವವನಾದವನೋ [1] ಎಂದರ್ಥ. ಅಂಥವನು ಗುಣಾತೀತನೆನಿಸುವನು.

## ಗುಣಗಳನ್ನು ಮೀರುವದಕ್ಕೆ ಮುಖ್ಯ ಉಪಾಯ

(ಭಾಷ್ಯ)

೩೪೪. " ಉದಾಸೀನವತ್ " (೧೪-೨೩) ಇತ್ಯಾದಿ " ಗುಣಾತೀತಃ ಸ ಉಚ್ಯತೇ '' (೧೪-೨೫) ಇತ್ಯೇತದನ್ತಮ್ ಉಕ್ತಂ ಯಾವತ್ ಯತ್ನಸಾಧ್ಯಂ ತಾವತ್ ಸಂನ್ಯಾಸಿನಃ [2] ಅನುಷ್ಠೇಯಂ ಗುಣಾತೀತತ್ವಸಾಧನಂ ಮುಮುಕ್ಷೋಃ । ಸ್ಥಿರೀಭೂತಂ ತು ಸ್ವಸಂವೇದ್ಯಂ ಸತ್ ಗುಣಾತೀತಸ್ಯ ಯತೇಃ ಲಕ್ಷಣಂ ಭವತಿ ಇತಿ [3] । ಅಧುನಾ " ಕಥಂ ಚ ತ್ರೀನ್ ಗುಣಾನ್ ಅತಿವರ್ತತೇ " (೧೪-೨೧) ಇತಿ ಪ್ರಶ್ನಸ್ಯ ಪ್ರತಿವಚನಮ್ ಆಹ—

1. ೪-೨೧ನೆಯ ಶ್ಲೋಕದ ಭಾಷ್ಯವನ್ನು ನೋಡಿ. ದೇಹವನ್ನು ಧರಿಸಿರುವವಮಟ್ಟಿಗೆ ಕರ್ಮಗಳನ್ನು ಮಾಡುತ್ತಾನೆಂಬುದೂ ಅಜ್ಞರ ದೃಷ್ಟಿಯಿಂದ.

2. ' ಸಂನ್ಯಾಸಿನಾ ' ನಿ|| ಗು||

3. ಮ|| ಮೈ||ಗಳಲ್ಲಿಲ್ಲ.

(ಭಾಷ್ಯಾರ್ಥ)

**"ಉದಾಸೀನವತ್" (೧೪-೨೩) ಎಂದು ಮುಂತಾಗಿ "ಗುಣಾತೀತಃ ಸ ಉಚ್ಯತೇ" (೧೪-೨೫) ಎಂಬೀವರೆಗೆ ಹೇಳಿದ ಗುಣಾತೀತತ್ವಸಾಧನವನ್ನು ಎಷ್ಟರವಟ್ಟಿಗೆ ಯತ್ನದಿಂದ ಸಾಧಿಸಿಕೊಳ್ಳಬಹುದೋ ಅಷ್ಟರಮಟ್ಟಿಗೆ ಮುಮುಕ್ಷುವಾದ ಸಂನ್ಯಾಸಿಯು (ಅದನ್ನು) ಮಾಡತಕ್ಕದ್ದು. (ಅದು) ಸ್ಥಿರವಾದರೋ, ತನಗೇ ಅನುಭವಕ್ಕೆ ಬರುವದಾಗಿ ಗುಣಾತೀತನಾದ ಯತಿಯ ಲಕ್ಷಣವಾಗುತ್ತದೆ[1] ಎಂಬ (ಅಭಿಪ್ರಾಯದಿಂದ ಇದನ್ನು ಹೇಳಿರುತ್ತದೆ).**

ಈಗ "(ಈ) ಮೂರು ಗುಣಗಳನ್ನು ಹೇಗೆ ಮೀರುವನು?" ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾನೆ:—

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥**

೨೬. ಮತ್ತು ಯಾವನು ನನ್ನನ್ನು ಅವ್ಯಭಿಚರಿತವಾದ ಭಕ್ತಿಯೋಗದಿಂದ ಸೇವಿಸುತ್ತಾನೋ ಅವನು ಈ ಗುಣಗಳನ್ನು ಸಂಪೂರ್ಣವಾಗಿ ದಾಟಿ ಬ್ರಹ್ಮಭೂಯಕ್ಕೆ ಸಮರ್ಥನಾಗುತ್ತಾನೆ.

(ಭಾಷ್ಯ)

೩೪೫. ಮಾಂ[2] ಚ ಈಶ್ವರಂ ನಾರಾಯಣಂ ಸರ್ವಭೂತಹೃದಯಾಶ್ರಿತಂ[3] ಯೋ ಯತಿಃ ಕರ್ಮೀ ವಾ । ಅವ್ಯಭಿಚಾರೇಣ ನ ಕದಾಚಿತ್ ಯೋ ವ್ಯಭಿಚರತಿ । ಭಕ್ತಿಯೋಗೇನ ಭಜನಂ ಭಕ್ತಿಃ ಸೈವ ಯೋಗಃ ತೇನ ಭಕ್ತಿಯೋಗೇನ ಸೇವತೇ[4] । ಸಃ ಗುಣಾನ್ ಸಮತೀತ್ಯ ಏತಾನ್ ಯಥೋಕ್ತಾನ್ । ಬ್ರಹ್ಮಭೂಯಾಯ । ಭವನಂ ಭೂಯಃ । ಬ್ರಹ್ಮಭೂಯಾಯ ಬ್ರಹ್ಮಭವನಾಯ ಮೋಕ್ಷಾಯ ಕಲ್ಪತೇ ಸಮರ್ಥೋ ಭವತಿ ಇತ್ಯರ್ಥಃ ॥

---

1. ೨-೫೫ನೆಯ ಶ್ಲೋಕದ ಭಾಷ್ಯದ ಅವತರಣಿಕೆಯನ್ನು ನೋಡಿರಿ.

2. ಈ ವಾಕ್ಯದ ಹಿಂದೆ "ಅಯಮ್ ಅನ್ಯಃ ಗುಣಾತೀತತ್ವಾಭ್ಯುಪಾಯಃ ವಿಶಿಷ್ಟತರಃ ಪೂರ್ವಸ್ಮಾತ್ ಉಚ್ಯತೇ" ಎಂದು ಹೆಚ್ಚಾಗಿ ಮು|| ಪಾಠ.

3. 'ಹೃದಯಾಶ್ರಯಮ್' ಮು||

4. "ತೇನ ವಿವೇಕವಿಜ್ಞಾನಾತ್ಮಕೇನ ಭಕ್ತಿಯೋಗೇನ । ಸ ಹಿ ಭಕ್ತಿಯೋಗಃ ಭಗವದನುಗ್ರಹಪ್ರಸಾದಜೋ ಭವತಿ" ಎಂದು ಮು|| ವ್ಯಾ||

(ಭಾಷ್ಯಾರ್ಥ)

ಮತ್ತು[1] ನನ್ನನ್ನು ಸರ್ವಪ್ರಾಣಿಗಳ ಹೃದಯವನ್ನೂ ಆಶ್ರಯಿಸಿಕೊಂಡಿರುವ ನಾರಾಯಣನೆಂಬ ಈಶ್ವರನನ್ನು ಯಾವ ಯತಿಯು ಅಥವಾ ಕರ್ಮಿಯು, ಅವ್ಯಭಿಚರಿತವಾದ, ಯಾವದು ಎಂದಿಗೂ (ನನ್ನನ್ನು) ಬಿಟ್ಟುಹೋಗುವದಿಲ್ಲವೋ (ಅಂಥ) ಭಕ್ತಿಯೋಗದಿಂದ–ಭಕ್ತಿಯೆಂದರೆ ಭಜಿಸುವದು ; ಭಕ್ತಿಯೇ ಯೋಗವು, ಆ ಭಕ್ತಿಯೋಗದಿಂದ–(ಯಾವನು) ಸೇವಿಸುತ್ತಿರುವನೋ[2] , ಅವನು ಈ ಮೇಲೆ ಹೇಳಿರುವ ಗುಣಗಳನ್ನು ಸಂಪೂರ್ಣವಾಗಿ ದಾಟಿ ಬ್ರಹ್ಮಭೂಯಕ್ಕೆ–ಭೂಯವೆಂದರೆ ಆಗುವದು; ಬ್ರಹ್ಮಭೂಯಕ್ಕೆ ಎಂದರೆ ಬ್ರಹ್ಮವಾಗುವದಕ್ಕೆ[3], ಮೋಕ್ಷ(ವನ್ನು ಪಡೆಯುವದಕ್ಕೆ) (ಕಲ್ಪತೇ) ಸಮರ್ಥನಾಗುವನು ಎಂದರ್ಥ.

(ಭಾಷ್ಯ)

೩೪೬. ಕುತ ಏತತ್ ಇತಿ ? ಉಚ್ಯತೇ—

(ಭಾಷ್ಯಾರ್ಥ)

ಇದು ಏತರಿಂದ? ಎಂದರೆ ಹೇಳುತ್ತಾನೆ:—

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾನ್ತಿಕಸ್ಯ ಚ ॥ ೨೭ ॥**

೨೭. ಏಕೆಂದರೆ ಅಮೃತವೂ ಅವ್ಯಯವೂ (ಆಗಿರುವ) ಬ್ರಹ್ಮಕ್ಕೂ ಶಾಶ್ವತವಾದ ಧರ್ಮಕ್ಕೂ ಐಕಾಂತಿಕವಾದ ಸುಖಕ್ಕೂ ನಾನು ಆಶ್ರಯವಾಗಿರುತ್ತೇನೆ.

---

1. "ಹಿಂದಿನ (ಉಪಾಯಕ್ಕಿಂತಲೂ) ಹೆಚ್ಚಿನದಾದ ಈ ಮತ್ತೊಂದು ಗುಣಾತೀತತ್ವಸಾಧನವನ್ನು ಹೇಳುತ್ತೇನೆ (ಕೇಳು)'' ಎಂದು ಮ||ದ ಅಧಿಕಪಾಠಕ್ಕೆ ಅರ್ಥವನ್ನು ಇಲ್ಲಿ ಸೇರಿಸಿಕೊಳ್ಳಬೇಕು.

2. "ಆ ಭಜನವೆಂಬ ಯೋಗದಿಂದ, ವಿವೇಕವಿಜ್ಞಾನಸ್ವರೂಪವಾದ ಭಕ್ತಿಯೋಗದಿಂದ (ಎಂದರ್ಥ). ಆ ಭಕ್ತಿಯೋಗವೇ ಅಲ್ಲವೆ, ಭಗವಂತನ ಅನುಗ್ರಹರೂಪವಾದ ಪ್ರಸಾದದಿಂದ ಹುಟ್ಟತಕ್ಕದ್ದಾಗಿರುವದು ?" ಎಂದು ಮ|| ಮೈ||ಗಳಲ್ಲಿರುವ ಅಧಿಕ ಪಾಠಕ್ಕೆ ಅರ್ಥ.

3. ಮುಕ್ತಿಯಲ್ಲಿಯೂ, ಜೀವೇಶ್ವರಭೇದವಿರುವದೆಂಬವರ ವಾದಕ್ಕೆ ಈ ಮಾತು ವಿರುದ್ಧವಾಗಿರುತ್ತದೆ.

(ಭಾಷ್ಯ)

೩೪೭. ಬ್ರಹ್ಮಣಃ ಪರಮಾತ್ಮನಃ ಹಿ ಯಸ್ಮಾತ್ ಪ್ರತಿಷ್ಠಾ ಅಹಮ್? ಪ್ರತಿತಿಷ್ಠತಿ ಅಸ್ಮಿನ್ ಇತಿ ಪ್ರತಿಷ್ಠಾ ಅಹಂ ಪ್ರತ್ಯಗಾತ್ಮಾ। ಕೀದೃಶಸ್ಯ[1] ಬ್ರಹ್ಮಣಃ। ಅಮೃತಸ್ಯ ಅವಿನಾಶಿನಃ। ಅವ್ಯಯಸ್ಯ ಅವಿಕಾರಿಣಃ। ಶಾಶ್ವತಸ್ಯ ಚ ನಿತ್ಯಸ್ಯ ಧರ್ಮಸ್ಯ ಜ್ಞಾನಸ್ಯ[2]। ಜ್ಞಾನಯೋಗಧರ್ಮಪ್ರಾಪ್ಯಸ್ಯ ಸುಖಸ್ಯ ಆನನ್ದರೂಪಸ್ಯ। ಐಕಾನ್ತಿಕಸ್ಯ ಅವ್ಯಭಿಚಾರಿಣಃ। ಅಮೃತಾದಿಸ್ವಭಾವಸ್ಯ ಪರಮಾನನ್ದರೂಪಸ್ಯ[3] ಪರಮಾತ್ಮನಃ ಪ್ರತ್ಯಗಾತ್ಮಾ ಪ್ರತಿಷ್ಠಾ ಸಮ್ಯಗ್ಜ್ಞಾನೇನ ಪರಮಾತ್ಮತಯಾ ನಿಶ್ಚೀಯತೇ। ತದೇತತ್ "ಬ್ರಹ್ಮಭೂಯಾಯ ಕಲ್ಪತೇ" (೧೪-೨೬) ಇತಿ ಉಕ್ತಮ್। ಯಯಾ ಚ ಈಶ್ವರಶಕ್ತ್ಯಾ ಭಕ್ತಾನುಗ್ರಹಾದಿಪ್ರಯೋಜನಾಯ ಬ್ರಹ್ಮ ಪ್ರತಿಷ್ಠತೇ ಪ್ರವರ್ತತೇ ಸಾ ಶಕ್ತಿಃ ಬ್ರಹ್ಮೈವ ಅಹಮ್। ಶಕ್ತಿಶಕ್ತಿಮತೋಃ ಅನನ್ಯತ್ವಾತ್ ಇತ್ಯಭಿಪ್ರಾಯಃ। ಅಥ ವಾ ಬ್ರಹ್ಮಶಬ್ದವಾಚ್ಯತ್ವಾತ್ ಸವಿಕಲ್ಪಕಂ ಬ್ರಹ್ಮ। ತಸ್ಯ ಬ್ರಹ್ಮಣಃ ನಿರ್ವಿಕಲ್ಪಕಃ ಅಹಂ ಅವಾಚ್ಯಃ[4] ಪ್ರತಿಷ್ಠಾ ಆಶ್ರಯಃ! ಕಿಂವಿಶಿಷ್ಟಸ್ಯ? ಅಮೃತಸ್ಯ ಅಮರಣಧರ್ಮಕಸ್ಯ[5] ಅವ್ಯಯಸ್ಯ ವ್ಯಯರಹಿತಸ್ಯ[6]। ಕಿಂಚ ಶಾಶ್ವತಸ್ಯ ಚ ನಿತ್ಯಸ್ಯ ಧರ್ಮಸ್ಯ ಜ್ಞಾನನಿಷ್ಠಾಲಕ್ಷಣಸ್ಯ। ಸುಖಸ್ಯ ತಜ್ಜನಿತಸ್ಯ ಐಕಾನ್ತಿಕಸ್ಯ ಏಕಾನ್ತನಿಯತಸ್ಯ ಚ। 'ಪ್ರತಿಷ್ಠಾ ಅಹಮ್' ಇತಿ ಅನುವರ್ತತೇ[7]॥

(ಭಾಷ್ಯಾರ್ಥ)

'ಹಿ' ಏಕೆಂದರೆ ಬ್ರಹ್ಮಕ್ಕೆ, ಪರಮಾತ್ಮನಿಗೆ, ನಾನು ಪ್ರತಿಷ್ಠೆಯು. ಇವನಲ್ಲಿ (ಬ್ರಹ್ಮವು) ನಿಂತಿರುತ್ತದೆಯಾದ್ದರಿಂದ (ಈ) ಪ್ರತ್ಯಗಾತ್ಮನಾದ ನಾನು (ಬ್ರಹ್ಮಕ್ಕೆ) ಪ್ರತಿಷ್ಠೆಯು. ಎಂಥ ಬ್ರಹ್ಮಕ್ಕೆ (ಆಶ್ರಯ)? ಎಂದರೆ ಅಮೃತವೂ ನಾಶರಹಿತವೂ,

---

1. 'ಕೀದೃಗ್ಭೂತಸ್ಯ?' ಮು॥ ಮೈ॥
2. 'ಧರ್ಮಜ್ಞಾನಸ್ಯ' ಎಂಬ ಪಾಠಕ್ಕಿಂತ ಈ ಮೈ॥ ಪಾಠವು ಮೇಲು.
3. ಶಿ॥ ಪಾಠದಲ್ಲಿಲ್ಲ.
4. ಮೈ॥ ಪಾಠದಲ್ಲಿ ಮಾತ್ರ ಇದೆ; 'ಅಹಮೇವ ನಾನ್ಯಃ' ಎಂಬ ಪಾಠಕ್ಕಿಂತ ಇದೇ ಉತ್ತಮ.
5. 'ಅಮರಣಧರ್ಮಾತ್ಮಕಸ್ಯ' ಎಂಬ ಮು॥ ಪಾಠದಲ್ಲಿ 'ಆತ್ಮ' ಹೆಚ್ಚು.
6. ಇದರ ಮುಂದೆ "ಚ ಮೋಕ್ಷಾಖ್ಯಸ್ಯ। ಮದಾಶ್ರಯಂ ಹಿ ಅಮೃತಮ್ ಅವ್ಯಯಮ್ ಅನನ್ತಂ ಮುಮುಕ್ಷುಭಿಃ ಪ್ರಾಪ್ಯತೇ" ಎಂದು ಹೆಚ್ಚಾಗಿ ಮು॥; ಅದು ಕಿಂ ವಿಶಿಷ್ಟಸ್ಯ? ಎಂಬ ಆಕಾಂಕ್ಷೆಗೆ ಹೊಂದುವದಿಲ್ಲ.
7. 'ವರ್ತತೇ' ಆ॥ ನಿ॥ ವಾ॥

ಅವ್ಯಯವೂ (ಯಾವ) ಮಾರ್ಪಾಡೂ ಇಲ್ಲದ್ದೂ (ಆದ ಬ್ರಹ್ಮಕ್ಕೆ). ಶಾಶ್ವತವಾದ ನಿತ್ಯವಾದ ಧರ್ಮಕ್ಕೂ ಜ್ಞಾನಕ್ಕೂ, ಜ್ಞಾನಯೋಗವೆಂಬ ಧರ್ಮದಿಂದ ದೊರಕ ಬೇಕಾದ ಐಕಾಂತಿಕ (ಸ್ವಲ್ಪವೂ) ಬೇರ್ಪಡದ ಆನಂದರೂಪವಾದ ಸುಖಕ್ಕೂ ಆಶ್ರ ಯವು. **ಅಮೃತವೇ ಮುಂತಾದ ಸ್ವಭಾವವುಳ್ಳ ಪರಮಾನಂದರೂಪವಾದ ಪರಮಾತ್ಮನಿಗೆ ಪ್ರತ್ಯಗಾತ್ಮನು ಪ್ರತಿಷ್ಠೆಯು; (ಎಂದರೆ) ಸರಿಯಾದ ಜ್ಞಾನದಿಂದ (ಪ್ರತ್ಯಗಾತ್ಮನೇ) ಪರಮಾತ್ಮನೆಂದು ನಿಶ್ಚಯವಾಗುತ್ತದೆ. ಇದನ್ನೇ "ಬ್ರಹ್ಮಭೂಯಾಯ ಕಲ್ಪತೇ" (೧೪-೨೬) ಎಂದು (ಹಿಂದಿನ ಶ್ಲೋಕದಲ್ಲಿ) ಹೇಳಿರುತ್ತದೆ.**

ಮತ್ತು ಯಾವ ಈಶ್ವರಶಕ್ತಿಯಿಂದ ಭಕ್ತರಿಗೆ ಅನುಗ್ರಹವನ್ನು ಮಾಡುವದೇ ಮುಂತಾದ ಪ್ರಯೋಜನಕ್ಕಾಗಿ ಬ್ರಹ್ಮವು ಪ್ರತಿಷ್ಠತೇ ಮುಂಬರಿಯುವದೋ ಆ **ಶಕ್ತಿಯಾದ ಬ್ರಹ್ಮವೇ ನಾನು; ಏಕೆಂದರೆ ಶಕ್ತಿ, ಶಕ್ತಿಯುಳ್ಳ (ಬ್ರಹ್ಮ)- ಇವೆರಡೂ ಬೇರೆ(ಬೇರೆ)ಯಲ್ಲ**[1] ಎಂದು ಅಭಿಪ್ರಾಯ.

ಅಥವಾ ಬ್ರಹ್ಮಶಬ್ದಕ್ಕೆ ವಾಚ್ಯವಾಗಿರುವದರಿಂದ ಸವಿಕಲ್ಪಕವಾಗಿರುವದು ಬ್ರಹ್ಮವು; ಆ ಬ್ರಹ್ಮಕ್ಕೆ ನಿರ್ವಿಕಲ್ಪಕವಾಗಿ ವಾಚ್ಯವಲ್ಲದ ನಾನು ಪ್ರತಿಷ್ಠೆಯು, ಆಶ್ರಯವು.[2] ಎಂಥ (ಬ್ರಹ್ಮಕ್ಕೆ)? ಎಂದರೆ ಅಮೃತವಾದ ಮರಣಧರ್ಮವಿಲ್ಲದ ಅವ್ಯಯವಾದ ವ್ಯಯರಹಿತವಾದ (ಬ್ರಹ್ಮಕ್ಕೆ). ಮತ್ತು ಶಾಶ್ವತವಾದ ನಿತ್ಯವಾದ ಧರ್ಮಕ್ಕೆ ಜ್ಞಾನನಿಷ್ಠಾರೂಪವಾದ (ಧರ್ಮಕ್ಕೆ). ಮತ್ತು ಅದರಿಂದುಂಟಾಗುವ ಐಕಾಂತಿಕವಾದ ಒಂದೇ ನಿಯತವಾಗಿರುವ ಸುಖಕ್ಕೂ ನಾನು ಪ್ರತಿಷ್ಠೆಯು (ಆಶ್ರಯವು) ಎಂದು ಹಿಂದಿನಿಂದ ಸೇರಿಕೊಳ್ಳುತ್ತದೆ.[3]

---

1. 'ಬ್ರಹ್ಮಕ್ಕೆ ನಾನು ಪ್ರತಿಷ್ಠೆಯು ಎಂಬ ವಾಕ್ಯಕ್ಕೆ ಪ್ರತ್ಯಗಾತ್ಮನೇ ಬ್ರಹ್ಮವೆಂದು ಶಾಸ್ತ್ರದಿಂದ ನಿಶ್ಚಿತನಾಗುವನು ಎಂದು ಅರ್ಥವನ್ನು ಮಾಡಿತ್ತು. ಈಗ ಬ್ರಹ್ಮದ ಪ್ರತಿಷ್ಠೆಯು, ಎಂದರೆ ಶಕ್ತಿಯು ನಾನೇ; ಬೆಂಕಿಯ ಬಿಸಿಯಂತೆ ಬ್ರಹ್ಮವೂ ಶಕ್ತಿಯೂ ಅಭಿನ್ನವಾಗಿರುತ್ತವೆ- ಎಂದು ಅರ್ಥವನ್ನು ಮಾಡಿದೆ.

2. ಬ್ರಹ್ಮಕ್ಕೆ ಬ್ರಹ್ಮಶಬ್ದವಾಚ್ಯವಾಗಿರುವ ಜಗತ್ಕಾರಣಕ್ಕೆ 'ನಾನು' ಎಂದರೆ ಇದಲ್ಲ, ಇದಲ್ಲ-ಎಂದು ಶ್ರುತಿಯಲ್ಲಿ ಹೇಳಿರುವ ತತ್ತ್ವವು ಆಶ್ರಯ ಎಂದರ್ಥ,

3. ಜ್ಞಾನವೂ ಅದರಿಂದ ಸಿಕ್ಕುವ ಮೋಕ್ಷಾನಂದವೂ ನನ್ನಿಂದಲೇ ದೊರೆಯುವವು; ಅವುಗಳ ಮೂಲವು ನಾನೇ ಎಂದರ್ಥ.

ಇತಿ ಶ್ರೀಮದ್ಭಗವದ್ಗೀತಾಭಾಷ್ಯೇ ಗುಣತ್ರಯವಿಭಾಗೋ ನಾಮ
ಚತುರ್ದಶೋಽಧ್ಯಾಯಃ



# ಹದಿನಾಲ್ಕನೆಯ ಅಧ್ಯಾಯದ ಸಾರ

೧—೪ ಕ್ಷೇತ್ರಕ್ಷೇತ್ರಜ್ಞರೆಂಬ ಪ್ರಕೃತಿಗಳಿಂದ ಜಗತ್ತು ಉಂಟಾಗುವ ಬಗೆಯನ್ನೂ ಗುಣತ್ರಯದಿಂದಾಗಿರುವ ಪ್ರಕೃತಿಯ ಸಂಗದಿಂದ ಬಾಧವಾಗುವ ರೀತಿಯನ್ನೂ ಗುಣಗಳನ್ನು ದಾಟುವದಕ್ಕೆ ಉಪಾಯವನ್ನೂ ತಿಳಿಸಬೇಕೆಂದು ಭಗವಂತನು ಇಂತೆಂದನು: ಅರ್ಜುನನೆ, ಯಾವುದರ ಜ್ಞಾನದಿಂದ ಪರಮ ಸಿದ್ಧಿಯಾದ ಮೋಕ್ಷವು ದೊರಕುವದೋ ಅದನ್ನು ಹೇಳುವೆನು, ಕೇಳು. ನಾನು, ನನ್ನ ಪ್ರಕೃತಿ—ಈ ಎರಡರ ಸಂಯೋಗದಿಂದಲೇ ಜಗತ್ತುಂಟಾಗುವದು. ದೇವಾದಿಸಮಸ್ತಮೂರ್ತಿಗಳೂ ಈ ಸಂಯೋಗದಿಂದಲೇ ಆಗಿರುತ್ತಾರೆ. ಅವುಗಳಿಗೆ ನನ್ನ ಪ್ರಕೃತಿಯು ಉಪಾದಾನವು, ನಾನು ನಿಮಿತ್ತವು.

೫—೯. ಪ್ರತಿಯೊಬ್ಬ ಜೀವನೂ ಪ್ರಕೃತಿಯ ಮೂರು ಗುಣಗಳಿಂದ ಬದ್ಧನಾಗಿರುತ್ತಾನೆ. ಇವುಗಳಲ್ಲಿ ಸತ್ತ್ವವು ಜೀವನನ್ನು ಸುಖಜ್ಞಾನಗಳ ಸಂಗದಿಂದ ಬಂಧಿಸುತ್ತದೆ; ರಜಸ್ಸು ತೃಷ್ಣೆ, ವಿಷಯಸಂಗ, ಕರ್ಮಸಂಗ—ಇವುಗಳಿಂದ ಬಂಧಿಸುತ್ತದೆ, ತಮೋಗುಣವು ಅಜ್ಞಾನ, ಪ್ರಮಾದ, ಆಲಸ್ಯ, ನಿದ್ರೆ—ಇವುಗಳಿಂದ ಬಂಧಿಸುತ್ತದೆ.

೧೦—೧೩. ಈ ಮೂರು ಗುಣಗಳಲ್ಲಿ ಒಂದೊಂದೂ ಮಿಕ್ಕೆರಡನ್ನು ಮೆಟ್ಟಿ ಯಾವಾಗ ತಾನೇ ತಲೆಯೆತ್ತುವದೋ ಆಗ ಅದು ಜೀವನನ್ನು ತನ್ನ ಸ್ವಭಾವದಿಂದ ಬಂಧಿಸುತ್ತದೆ. ಯಾವಾಗ ಯಾವ ಗುಣದ ಕಾರ್ಯವು ಜೀವನಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುವದೋ ಆಗ ಆ ಗುಣವು ತಲೆಯೆತ್ತಿರುವದೆಂದು ನಿಶ್ಚಯಿಸಬೇಕು.

೧೪—೧೮. ಜೀವನು ಸಾಯುವಾಗ ಯಾವ ಗುಣವು ಹೆಚ್ಚಾಗಿರುವದೋ ಅದಕ್ಕೆ ಅನುಗುಣವಾಗಿ ಸತ್ತಮೇಲೆ ಸಾತ್ತ್ವಿಕ, ರಾಜಸ, ಅಥವಾ ತಾಮಸವಾದ ಲೋಕವನ್ನು ಪಡೆಯುತ್ತಾನೆ. ಅಂತೂ ಈ ಜನ್ಮದಲ್ಲಿಯೂ ಜನ್ಮಾಂತರದಲ್ಲಿಯೂ, ಈ ಲೋಕದಲ್ಲಿಯೂ ಪರಲೋಕದಲ್ಲಿಯೂ, ಎಲ್ಲೆಲ್ಲಿಯೂ ಸತ್ತ್ವದಿಂದ ಜ್ಞಾನಾದಿಗಳು, ರಜಸ್ಸಿನಿಂದ ಲೋಭಾದಿಗಳು, ತಮಸ್ಸಿನಿಂದ ಅಜ್ಞಾನಾದಿಗಳು—ಹೀಗೆಯೇ ನಿಯತವಾಗಿ ಫಲಗಳಾಗುತ್ತಿರುವವು.

೧೯—೨೦. ಜೀವನು ಎಲ್ಲಿಯವರೆಗೆ ತಾನೇ ಕರ್ತೃವೆಂದೂ ಭೋಕ್ತೃವೆಂದೂ ತಿಳಿದುಕೊಂಡಿರುವನೋ ಅಲ್ಲಿಯವರೆಗೂ ಈ ಗುಣಗಳಿಂದಾಗುವ ಬಂಧವು ಅವನಿಗೆ ತಪ್ಪದು. ಯಾವಾಗ "ಗುಣಗಳೇ ಕರ್ತೃಗಳು, ನಾನು ಅಸಂಗನು" ಎಂಬ ಜ್ಞಾನವನ್ನು ಪಡೆದುಕೊಳ್ಳುವನೋ ಆಗ ಪರಮಾತ್ಮಸ್ವರೂಪವನ್ನೇ ಪಡೆದುಕೊಳ್ಳುತ್ತಾನೆ ಜನ್ಮಾದಿದುಃಖಗಳಿಂದ ಬಿಡುಗಡೆಯನ್ನೂ ಹೊಂದುತ್ತಾನೆ. ಅಂಥವನೇ ಜೀವನ್ಮುಕ್ತನು.

೨೧—೨೫. ಹೀಗೆ ಮೂರು ಗುಣಗಳನ್ನೂ ದಾಟಿ ಮುಕ್ತನಾದವನ ಲಕ್ಷಣವನ್ನು ಹೇಳುತ್ತೇನೆ ಕೇಳು: ಅವನು ಗುಣಗಳ ಧರ್ಮವಾದ ಜ್ಞಾನಾದಿಗಳು ಬಂದರೂ ಹೋದರೂ ಮನಸ್ಸಿನಲ್ಲಿ ಏರುಪೇರಿಲ್ಲದೆ ಇರುತ್ತಾನೆ. ಗುಣಗಳೇ ತಮ್ಮ ತಮ್ಮ ವ್ಯಾಪಾರವನ್ನು ಮಾಡುತ್ತವೆ

ಎಂದು ತಿಳಿದು ಆ ಗುಣಗಳ ಕಾರ್ಯದಿಂದ ಒಂದಿಷ್ಟೂ ಅಲುಗಾಡದೆ ತಾನು ಅಸಂಗನಾಗಿಯೇ ಇದ್ದುಕೊಂಡಿರುತ್ತಾನೆ. ಸುಖದುಃಖಗಳಲ್ಲಿ ಯಾವದು ಬಂದರೂ ವಿಚಾರವಿಲ್ಲದೆ ಇರುತ್ತಾನೆ. ತನಗೆ "ಇಂಥದ್ದು ಬೇಕು, ಇಂಥದ್ದು ಬೇಡ" ಎಂಬುದಿಲ್ಲದೆ ಮಣ್ಣುಹೆಂಟೆ, ಕಲ್ಲು, ಚಿನ್ನ—ಇವುಗಳಲ್ಲಿ ಒಂದೇ ಭಾವವುಳ್ಳವನಾಗಿ ಔದಾಸೀನ್ಯದಿಂದ ಇರುತ್ತಾನೆ. ಅವನಿಗೆ ಶತ್ರುಮಿತ್ರರಿಲ್ಲ, ಮಾನಾಪಮಾನಗಳಿಂದ ಆಗುವ ಹರ್ಷಖೇದಗಳಿರುವದಿಲ್ಲ. ಅವನು ತನಗಾಗಿ ಯಾವದೊಂದು ಕಾರ್ಯವನ್ನೂ ಕೈಕೊಳ್ಳುವದಿಲ್ಲ.

೨೬-೨೭ ಈ ತ್ರಿಗುಣಾತೀತತತ್ವಸ್ಥಿತಿಯು ಬರಬೇಕಾದರೆ ಸಾಧಕನು ಮೇಲೆ ಹೇಳಿದ ಧರ್ಮಗಳನ್ನು ಅಳವಡಿಸಿಕೊಳ್ಳಬೇಕಲ್ಲದೆ ಮುಖ್ಯವಾಗಿ ಪರಮೇಶ್ವರನಾದ ನನ್ನನ್ನು ಅನನ್ಯಭಕ್ತಿಯಿಂದ ಬಿಡದೆ ಭಜಿಸುತ್ತಿರಬೇಕು; ಅಂಥವನೇ ಈ ಗುಣಗಳನ್ನು ಮೀರಿ ಬ್ರಹ್ಮಸ್ವರೂಪನಾಗುವನು. ಏಕೆಂದರೆ ಬ್ರಹ್ಮಕ್ಕೆ ಪ್ರತಿಷ್ಠೆಯು ನಾನು; ಅದನ್ನು ಪಡೆಯುವದಕ್ಕೆ ಬೇಕಾದ ಜ್ಞಾನಕ್ಕೂ ಜ್ಞಾನದಿಂದ ಪಡೆದುಕೊಳ್ಳಬೇಕಾಗಿರುವ ನಿತ್ಯಸುಖಕ್ಕೂ ನಾನೇ ಆಶ್ರಯವು.

# ಹದಿನೈದನೆಯ ಅಧ್ಯಾಯ

## (ಪುರುಷೋತ್ತಮ ಯೋಗ)

## ಈ ಅಧ್ಯಾಯದ ಸಂಬಂಧ

(ಭಾಷ್ಯ)

೨೪೮. ಯಸ್ಮಾತ್ ಮದಧೀನಂ ಕರ್ಮಿಣಾಂ[1] ಕರ್ಮಫಲಂ ಜ್ಞಾನಿನಾಂ ಚ ಜ್ಞಾನಫಲಮ್, ಅತಃ ಭಕ್ತಿಯೋಗೇನ ಮಾಂ ಯೇ ಸೇವನ್ತೇ ತೇ ಮತ್ಪ್ರಸಾದಾತ್ ಜ್ಞಾನಪ್ರಾಪ್ತಿಕ್ರಮೇಣ ಗುಣಾತೀತಾಃ ಮೋಕ್ಷಂ ಗಚ್ಛನ್ತಿ। ಕಿಮು ವಕ್ತವ್ಯಮ್ ಆತ್ಮನಃ ತತ್ತ್ವಮೇವ ಸಮ್ಯಗ್ ವಿಜಾನನ್ತಃ ಇತ್ಯತಃ ಭಗವಾನ್ ಅರ್ಜುನೇನ ಅಪೃಷ್ಟೋಽಪಿ ಆತ್ಮನಃ ತತ್ತ್ವಂ ವಿವಕ್ಷುಃ ಉವಾಚ ಊರ್ಧ್ವಮೂಲಮ್ ಇತ್ಯಾದಿನಾ। ತತ್ರ ತಾವತ್ ವೃಕ್ಷರೂಪಕಕಲ್ಪನಯಾ ವೈರಾಗ್ಯಹೇತೋಃ ಸಂಸಾರಸ್ವರೂಪಂ ವರ್ಣಯತಿ। ವಿರಕ್ತಸ್ಯ ಹಿ ಸಂಸಾರಾತ್ ಭಗವತ್ತತ್ತ್ವಜ್ಞಾನೇ ಅಧಿಕಾರಃ ನಾನ್ಯಸ್ಯ ಇತಿ ||

(ಭಾಷ್ಯಾರ್ಥ)

**ಕರ್ಮಿಗಳಿಗೆ (ಆಗುವ) ಕರ್ಮದ ಫಲವೂ ಜ್ಞಾನಿಗಳಿಗೆ (ಆಗುವ) ಜ್ಞಾನದ ಫಲವೂ ನನ್ನ ಅಧೀನವಾಗಿರುವದಷ್ಟೆ, ಆದ್ದರಿಂದ ಭಕ್ತಿಯೋಗದಿಂದ ನನ್ನನ್ನು ಯಾರು ಸೇವಿಸುತ್ತಾರೋ ಅವರು ನನ್ನ ಅನುಗ್ರಹದಿಂದ ಜ್ಞಾನವನ್ನು ಹೊಂದುವದರ ಮೂಲಕ ಗುಣಗಳನ್ನು ದಾಟಿ ಮೋಕ್ಷವನ್ನು ಹೊಂದುತ್ತಾರೆ**[2]. (ಹೀಗಿರುವಲ್ಲಿ) ಆತ್ಮನ ತತ್ತ್ವವನ್ನೇ (ನೇರಾಗಿ) ಚೆನ್ನಾಗಿ ಅರಿತುಕೊಂಡವರು (ಮೋಕ್ಷವನ್ನು ಹೊಂದುವರೆಂಬುದನ್ನು) ಹೇಳುವದೇನು? ಎಂಬ (ಅಭಿಪ್ರಾಯ)ದಿಂದ ಭಗವಂತನು (ತನ್ನನ್ನು) ಅರ್ಜುನನು ಕೇಳದೆ ಇದ್ದರೂ ಆತ್ಮನ ತತ್ತ್ವವನ್ನು ತಾನೇ ಹೇಳಬೇಕೆಂಬ ಇಚ್ಛೆಯಿಂದ 'ಊರ್ಧ್ವಮೂಲಮ್' ಮುಂತಾದ (ವಾಕ್ಯ)ದಿಂದ ಹೇಳಿರುತ್ತಾನೆ. ಅದರಲ್ಲಿಯೂ ಮೊದಲು ವೈರಾಗ್ಯ

---

1. ಪ್ರಾಣಿನಾಂ ಎಂಬ ಮ॥ಮೈ॥ ಪಾಠಗಳಿಗಿಂತ ಈ ಪಾಠವೇ ಉತ್ತಮ. ೧೪-೨೬ರಲ್ಲಿರುವ 'ಯಃ' ಎಂಬ ಪದಕ್ಕೆ ಭಾಷ್ಯವನ್ನು ನೋಡಿ.

2. ೧೪-೨೬, ಸೂ. ಭಾ. ೩-೨-೩೮.

ವುಂಟಾಗಲೆಂಬ ಕಾರಣದಿಂದ ವೃಕ್ಷರೂಪಕವನ್ನು ಕಲ್ಪನೆಮಾಡಿ ಸಂಸಾರಸ್ವರೂಪವನ್ನು ವರ್ಣಿಸುತ್ತಿದಾನೆ. ಏಕೆಂದರೆ ಸಂಸಾರದಲ್ಲಿ ವಿರಕ್ತನಾದವನಿಗೇ ಭಗವಂತನ ತತ್ತ್ವವನ್ನು ಅರಿತುಕೊಳ್ಳುವದಕ್ಕೆ ಅಧಿಕಾರ(ವಿರುವದೇ ಹೊರತು) ಮತ್ತೆ (ಯಾರಿಗೂ ಇರುವ)ದಿಲ್ಲ.

## ಸಂಸಾರವೆಂಬ ವೃಕ್ಷ

**ಶ್ರೀ ಭಗವಾನ್ ಉವಾಚ—**

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥**

೧. ಶ್ರೀ ಭಗವಂತನಿಂತೆಂದನು: ಮೇಲುಗಡೆ ಮೂಲವುಳ್ಳದ್ದೂ ಕೆಳಗಡೆ ಶಾಖೆಗಳುಳ್ಳದ್ದೂ ಆದ ಅಶ್ವತ್ಥವು ಅವ್ಯಯವಾಗಿರುವದೆನ್ನುವರು. ಅದರ ಎಲೆಗಳು ಛಂದಸ್ಸುಗಳು. ಅದನ್ನು ಯಾವನು ಅರಿತುಕೊಳ್ಳುವನೋ ಅವನು ವೇದವನ್ನು ಬಲ್ಲವನು.

(ಭಾಷ್ಯ)

೩೪೯. ಊರ್ಧ್ವಮೂಲಮ್ । ಕಾಲತಃ ಸೂಕ್ಷ್ಮತ್ವಾತ್, ಕಾರಣತ್ವಾತ್ ನಿತ್ಯತ್ವಾತ್, ಮಹತ್ವಾಚ್ಚ ಊರ್ಧ್ವಮ್ ಉಚ್ಯತೇ[1] ಬ್ರಹ್ಮ ಅವ್ಯಕ್ತಮಾಯಾಶಕ್ತಿಮತ್[2] । ತತ್ ಮೂಲಮ್ ಅಸ್ಯ ಇತಿ ಸೋಽಯಂ ಸಂಸಾರವೃಕ್ಷಃ ಊರ್ಧ್ವಮೂಲಃ । ಶ್ರುತೇಶ್ಚ "ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ" (ಕ. ೨-೩-೧) ಇತಿ । ಪುರಾಣೇ ಚ

**ಅವ್ಯಕ್ತಮೂಲಪ್ರಭವಸ್ತಸ್ಯೈವಾನುಗ್ರಹೋಚ್ಛ್ರಿತಃ[3]**
**ಬುದ್ಧಿಸ್ಕಂಧಮಯಶ್ಚೈವ ಇಂದ್ರಿಯಾಂತರಕೋಟರಃ ॥**
**ಮಹಾಭೂತವಿಶಾಖಶ್ಚ ವಿಷಯೈಃ ಪತ್ರವಾಂಸ್ತಥಾ ।[4]**
**ಧರ್ಮಾಧರ್ಮಸುಪುಷ್ಪಶ್ಚ ಸುಖದುಃಖಫಲೋದಯಃ ॥**

---

1. 'ಉಚ್ಯತೇ ಊರ್ಧ್ವಮಿತಿ' ಮು॥ ಮೈ॥
2. 'ಅವ್ಯಕ್ತಂ ಮಾಯಾಶಕ್ತಿಮತ್' ಅ॥ ನಿ॥
3. 'ಅನುಗ್ರಹೋತ್ಥಿತಃ' ಮು॥
4. 'ಪತ್ರಶಾಖವಾನ್' ಮು॥ ಮೈ॥

ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಃ ಸನಾತನಃ ||
ಏತದ್ ಬ್ರಹ್ಮವನಂ ಚೈವ ಬ್ರಹ್ಮಾ ಚರತಿ ನಿತ್ಯಶಃ[1] ||
ಏತಚ್ಛಿತ್ತ್ವಾ ಚ ಭಿತ್ತ್ವಾ ಚ ಜ್ಞಾನೇನ ಪರಮಾಸಿನಾ |
ತತಶ್ಚಾತ್ಮರತಿಂ ಪ್ರಾಪ್ಯ ತಸ್ಮಾನ್ನಾವರ್ತತೇ[2] ಪುನಃ ||

—ಇತ್ಯಾದಿ[3] | ತಮ್ ಊರ್ಧ್ವಮೂಲಂ ಸಂಸಾರಂ ಮಾಯಾಮಯಂ ವೃಕ್ಷಮ್[4] | ಅಧಃಶಾಖಮ್[5] | ಮಹದಹಙ್ಕಾರತನ್ಮಾತ್ರಾದಯಃ ಶಾಖಾ ಇವ ಅಸ್ಯ ಅಧೋ ಭವನ್ತಿ ಇತಿ ಸೋಽಯಮ್ ಅಧಃಶಾಖಃ | ತಮ್ ಅಧಃಶಾಖಮ್ | ನ ಶ್ವೋಽಪಿ ಸ್ಥಾತಾ[6] ಇತಿ ಅಶ್ವತ್ಥಃ | ತಂ ಕ್ಷಣಪ್ರಧ್ವಂಸಿನಮ್ ಅಶ್ವತ್ಥಂ ಪ್ರಾಹುಃ ಕಥಯನ್ತಿ | ಅವ್ಯಯಮ್ | ಸಂಸಾರಮಾಯಾಯಾಃ[7] ಅನಾದಿಕಾಲಪ್ರವೃತ್ತತ್ವಾತ್ ಸೋಽಯಂ ಸಂಸಾರವೃಕ್ಷಃ ಅವ್ಯಯಃ | ಅನಾದ್ಯನನ್ತದೇಹಾದಿಸನ್ತಾನಾಶ್ರಯೋ ಹಿ ಸ[8] ಪ್ರಸಿದ್ಧಃ | ತಮ್ ಅವ್ಯಯಮ್ | ತಸ್ಯೈವ ಸಂಸಾರವೃಕ್ಷಸ್ಯ ಇದಮ್ ಅನ್ಯತ್ ವಿಶೇಷಣಮ್[9]

---

1. ಬ್ರಹ್ಮವೃಕ್ಷಸ್ಯ ತಸ್ಯ ತತ್' ಮ|| ಮೈ||
2. 'ಯಸ್ಮಾನ್ನಾವರ್ತತೇ' ಮ||
3. ಇದು ಯಾವ ಪುರಾಣವೆಂಬುದು ತಿಳಿಯಲಿಲ್ಲ. ಮಹಾಭಾರತ (ಅಶ್ವ. ೪೭) ದಲ್ಲಿ ಹೀಗಿದೆ:

ಅವ್ಯಕ್ತಯೋನಿಪ್ರಭವೋ ಬುದ್ಧಿಸ್ಕನ್ಧಮಯೋ ಮಹಾನ್ |
ಮಹಾಹಙ್ಕಾರವಿಟಪ ಇನ್ದ್ರಿಯಾಙ್ಕುರಕೋಟರಃ ||೧೨||
ಮಹಾಭೂತವಿಶಾಲಶ್ಚ ವಿಶೇಷಯುತಿ ಶಾಖಿನಃ |
ಸದಾಪತ್ರಃ ಸದಾಪುಷ್ಪಃ ಶುಭಾಶುಭಫಲೋದಯಃ ||೧೩||
ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಃ ಸನಾತನಃ |
ಏವಂ ಛಿತ್ತ್ವಾ ಚ ಭಿತ್ತ್ವಾ ಚ ತತ್ತ್ವಜ್ಞಾನಾಸಿನಾ ಬುಧಃ ||೧೪||
ಹಿತ್ವಾ ಸಙ್ಗಮಯಾನ್ ಪಾಶಾನ್ ಮೃತ್ಯುಜನ್ಮಜರೋದಯಾನ್ |
ನಿರ್ಮಮೋ ನಿರಹಙ್ಕಾರೋ ಮುಚ್ಯತೇ ನಾತ್ರ ಸಂಶಯಃ ||೧೫||

ಇದೇ ಪರ್ವದ ೩೫ನೆಯ ಅಧ್ಯಾಯದಲ್ಲಿಯೂ ಈ ಅರ್ಥದ ಶ್ಲೋಕಗಳಿವೆ.

4. ಇದರ ಮುಂದೆ 'ಆಹುಃ' ಎಂದು ಹೆಚ್ಚಾಗಿ ಮ|| ಮೈ|| ಗು||
5. ಇದು ಮ|| ಮೈ|| ಗಳಲ್ಲಿಲ್ಲ.
6. 'ಸ್ಥಾಸ್ಯತಿ' ಮ||
7. 'ಸಂಸಾರಂ ಮಾಯಾಮಯಂ ಮಾಯಾಯಾಃ' ಮ|| ಸಂಸಾರಮಾಯಾಮಯಮ್ ಅನಾದಿಕಾಲಪ್ರವೃತ್ತತ್ವಾತ್' ನಿ|| ಎಂಬ ಪಾಠಗಳಿಗಿಂತ ಇದು ಉತ್ತಮ.
8. 'ಸುಪ್ರಸಿದ್ಧಃ' ಎಂಬ ಅ|| ನಿ|| ವಾ|| ಪಾಠಗಳಿಗಿಂತ ಇದು ಉತ್ತಮ.
9. 'ವಿಶೇಷಣಾನ್ತರಮ್' ಮ|| ಮೈ||

ಛನ್ದಾಂಸಿ ಯಸ್ಯ ಪರ್ಣಾನಿ। ಛನ್ದಾಂಸಿ ಛಾದನಾತ್ ಋಗ್ಯಜುಃಸಾಮಲಕ್ಷಣಾನಿ ಯಸ್ಯ ಸಂಸಾರವೃಕ್ಷಸ್ಯ ಪರ್ಣಾನೀವ ಪರ್ಣಾನಿ। ಯಥಾ ವೃಕ್ಷಸ್ಯ ಪರಿರಕ್ಷಣಾ ರ್ಥಾನಿ[1] ಪರ್ಣಾನಿ ತಥಾ ವೇದಾಃ ಸಂಸಾರವೃಕ್ಷಪರಿರಕ್ಷಣಾರ್ಥಾಃ। ಧರ್ಮಾಧರ್ಮ ತದ್ಧೇತುಫಲಪ್ರದರ್ಶನಾರ್ಥತ್ವಾತ್ । ಯಥಾವ್ಯಾಖ್ಯಾತಂ ಸಂಸಾರವೃಕ್ಷಂ ಸಮೂಲಂ ಯಃ ತಂ ವೇದ ಸ ವೇದವಿತ್ ವೇದಾರ್ಥವಿತ್ ಇತ್ಯರ್ಥಃ। ನ ಹಿ ಸಮೂಲಾತ್ ಸಂಸಾರವೃಕ್ಷಾತ್ ಅಸ್ಮಾತ್ ಜ್ಞೇಯೋಽನ್ಯಃ ಅಣುಮಾತ್ರೋಽಪಿ ಅವ ಶಿಷ್ಟೋಽಸ್ತಿ। ಅತಃ ಸರ್ವಜ್ಞಃ ಸರ್ವವೇದಾರ್ಥವಿತ್ ಇತಿ ಸಮೂಲಸಂಸಾರ ವೃಕ್ಷಜ್ಞಾನಂ ಸ್ತೌತಿ ||

(ಭಾಷ್ಯಾರ್ಥ)

ಕಾಲಕ್ಕಿಂತ[2] ಸೂಕ್ಷ್ಮವಾಗಿರುವದರಿಂದಲೂ ಕಾರಣವಾಗಿರುವದರಿಂದಲೂ[3] ನಿತ್ಯವಾಗಿರುವದರಿಂದಲೂ ದೊಡ್ಡದಾಗಿರುವದರಿಂದಲೂ[4] ಅವ್ಯಕ್ತಮಾಯಾಶಕ್ತಿ ಯುಳ್ಳ ಬ್ರಹ್ಮವು ಊರ್ಧ್ವ (ಮೇಲ್ಪಟ್ಟದ್ದು) ಎನಿಸುತ್ತದೆ. ಆ (ಊರ್ಧ್ವವು) ಇದಕ್ಕೆ ಬೇರು; ಆದ್ದರಿಂದ ಆ ಈ ಸಂಸಾರವೃಕ್ಷವು ಊರ್ಧ್ವಮೂಲವು. "ಮೇಲೆ ಬೇರೂ ಕೆಳಗೆ ಕೊಂಬೆಗಳೂ ಇರುವ ಈ ಅಶ್ವತ್ಥವು ಸನಾತನವಾದದ್ದು" (ಕ. ೨-೩-೧) ಎಂಬ ಶ್ರುತಿಯ (ಆಧಾರ)ದಿಂದಲೂ (ಹೀಗೆಂದು ತಿಳಿಯಬೇಕು).

ಪುರಾಣದಲ್ಲಿಯೂ "ಸನಾತನವಾದ ಬ್ರಹ್ಮವೃಕ್ಷವು ಅವ್ಯಕ್ತವೆಂಬ ಬೇರಿನಿಂದ ಹುಟ್ಟಿದ್ದು. ಅದೇ (ಅವ್ಯಕ್ತದ) ಅನುಗ್ರಹದಿಂದ ಬೆಳೆದದ್ದು. (ಅದರ) ಬುಡವು ಬುದ್ಧಿಯು; ಇಂದ್ರಿಯಗಳ ಗುಣಿಗಳೇ (ಅದರ) ಪೊಟರೆಗಳು; ಮಹಾಭೂತಗಳೇ ರೆಂಬೆಗಳು; ವಿಷಯಗಳೇ ಎಲೆಗಳು; ದರ್ಮಾಧರ್ಮಗಳು (ಅದರ) ಉತ್ತಮವಾದ ಹೂಗಳು; ಸುಖದುಃಖಗಳೇ ಅದರಲ್ಲಿ ಬಿಡುವ ಹಣ್ಣುಗಳು. ಇದು ಸಮಸ್ತ ಪ್ರಾಣಿಗಳಿಗೂ ಜೀವನಕ್ಕೆ ಆಸರೆಯಾಗಿರುವದು. ಈ ಬ್ರಹ್ಮವನದಲ್ಲಿ ಬ್ರಹ್ಮವು ಯಾವಾಗಲೂ ಸಂಚರಿಸುತ್ತಿರುವದು. ಇದನ್ನು ಜ್ಞಾನವೆಂಬ ಬಲವಾದ ಖಡ್ಗ ದಿಂದ ಕಡಿದು ಸೀಳಿ ಆತ್ಮರತಿಯನ್ನು ಹೊಂದಿದರೆ ಮತ್ತೆ ಅಲ್ಲಿಂದ ಹಿಂತಿರುಗುವ ದಿಲ್ಲ"–ಎಂದು ಮುಂತಾಗಿ (ಹೇಳಿರುತ್ತದೆ). ಈ ಊರ್ಧ್ವಮೂಲವಾದ ಸಂಸಾರ

---

1. 'ರಕ್ಷಣಾರ್ಥಾನಿ ಮು|| ವ್ಯಾ||'

2. ಕಾಲವೂ ಬ್ರಹ್ಮದ ಕಾರ್ಯವಾಗಿರುವದರಿಂದ ಕಾಲಕ್ಕಿಂತಲೂ ಸೂಕ್ಷ್ಮತ್ವವೇ ಮುಂತಾದ ಧರ್ಮಗಳು ಬ್ರಹ್ಮದಲ್ಲಿರುವವು

3. ಇಲ್ಲಿ ತಿಳಿಸಿರುವ ಕಾರಣತ್ವವು ಕಾಲಾಪೇಕ್ಷವಾದದ್ದಲ್ಲ

4. ವ್ಯಾಪಕವಾಗಿರುವದರಿಂದಲೂ.

ವೆಂಬ ಮಾಯಾಮಯವಾದ[1] ವೃಕ್ಷವು ಅಧಃಶಾಖವು; **ಮಹತ್ತು, ಅಹಂಕಾರ, ತನ್ಮಾತ್ರೆಗಳು**–ಮುಂತಾದವು ಇದರ ಕೊಂಬೆಗಳಂತೆ ಕೆಳಗಡೆ ಇರುವದರಿಂದ ಆ ಇದು ಅಧಃಶಾಖವು. ಆ ಅಧಃಶಾಖವಾದ (ಮರವನ್ನು ಎಂದರ್ಥ). (ಇದು) ನಾಳೆಗೆ ಕೂಡ ನಿಲ್ಲದು; ಆದ್ದರಿಂದ (ಇದು) ಅಶ್ವತ್ಥವು. ಇದನ್ನು ಅಶ್ವತ್ಥವು ಕ್ಷಣ (ಮಾತ್ರ)ದಲ್ಲಿ ನಾಶವಾಗತಕ್ಕದ್ದು ಎನ್ನುತ್ತಾರೆ (ಎಂದು) ಕರೆಯುತ್ತಾರೆ. (ಇದು) ಅವ್ಯಯವು: ಸಂಸಾರಮಾಯೆಯು ಅನಾದಿಕಾಲದಿಂದಲೂ ನಡೆದುಬಂದಿರುವದರಿಂದ ಆ ಈ ಸಂಸಾರವೃಕ್ಷವು ಅವ್ಯಯವು. ಅನಾದಿಯಾಗಿರುವ ಅನಂತವಾದ ದೇಹಾದಿ ಸಂತಾನಕ್ಕೆ ಆಶ್ರಯವಾಗಿರುವದೆಂದು ಇದು ಪ್ರಸಿದ್ಧವಾಗಿರುವದಲ್ಲವೆ?[2] (ಆದ್ದರಿಂದ) ಅದನ್ನು ಅವ್ಯಯ(ವೆನ್ನುತ್ತಾರೆ). ಅದೇ ಸಂಸಾರವೃಕ್ಷಕ್ಕೆ ಇದು ಮತ್ತೊಂದು ವಿಶೇಷಣವು: 'ಅದಕ್ಕೆ ಛಂದಸ್ಸುಗಳು ಪರ್ಣಗಳು'. ಋಕ್ಕು, ಯಜುಸ್ಸು, ಸಾಮ–ಎಂಬಿವು ಆಚ್ಛಾದನಮಾಡಿಕೊಂಡಿರುವದರಿಂದ ಛಂದಸ್ಸುಗಳು; (ಇವು) ಈ ಸಂಸಾರವೃಕ್ಷಕ್ಕೆ ಎಲೆಗಳಂತೆ ಇರುವದರಿಂದ ಪರ್ಣಗಳು. ಹೇಗೆ ಎಲೆಗಳು ಮರವನ್ನು ಕಾಪಾಡುವದಕ್ಕಾಗಿ(ರುತ್ತವೆಯೋ) ಹಾಗೆಯೇ ವೇದಗಳು ಸಂಸಾರವೃಕ್ಷವನ್ನು ಕಾಪಾಡುವದಕ್ಕಾಗಿ(ರುವವು); ಏಕೆಂದರೆ (ಅವು) ಧರ್ಮಾಧರ್ಮಗಳನ್ನೂ ಅವುಗಳ ಕಾರಣವನ್ನೂ ಫಲವನ್ನೂ ತೋರಿಸುವದಕ್ಕಾಗಿಯೇ (ಹೊರಟಿವೆ.)

ಮೇಲೆ ವಿವರಿಸಿರುವಂಥ ಸಂಸಾರವೃಕ್ಷವನ್ನು ಮೂಲಸಹಿತವಾಗಿ ಯಾವನು ಅರಿತುಕೊಂಡಿರುವನೋ ಅವನು ವೇದವನ್ನು ಬಲ್ಲವನು, ವೇದಾರ್ಥವನ್ನು ಬಲ್ಲವನು ಎಂದರ್ಥ. ಏಕೆಂದರೆ ಮೂಲದಿಂದೊಡಗೂಡಿದ ಈ ಸಂಸಾರವೃಕ್ಷಕ್ಕಿಂತ ಬೇರೆಯಾಗಿ ಅರಿತುಕೊಳ್ಳಬೇಕಾದದ್ದು (ಒಂದು)ಅಣುವಿನಷ್ಟೂ ಇರುವದಿಲ್ಲ[3]. ಆದ್ದರಿಂದ ಅವನೇ ಸರ್ವಜ್ಞನು, ಸರ್ವವೇದಾರ್ಥವನ್ನೂ ಬಲ್ಲವನು, ಎಂದು ಸಮೂಲ ಸಂಸಾರವೃಕ್ಷದ ಜ್ಞಾನವನ್ನು ಹೊಗಳಿರುತ್ತಾನೆ.

(ಭಾಷ್ಯ)

೩೫೦. ತಸ್ಯೈತಸ್ಯ ಸಂಸಾರವೃಕ್ಷಸ್ಯ ಅಪರಾ ಅವಯವಕಲ್ಪನಾ[4] ಉಚ್ಯತೇ–

---

1. ಸಂಸಾರವು ಹುಸಿಯಾದ್ದರಿಂದ ಜ್ಞಾನಬಾಧ್ಯ.
2. ಸೂ ಭಾ ೨-೧-೩೬
3. ಬೃ. ಭಾ. ೧-೪-೭ರ ಅವತರಣಿಕೆಯನ್ನು ನೋಡಿ.
4. 'ಅವಯವವ್ಯಾಪಾರಕಲ್ಪನಾ' ಎಂಬ ಮು॥ವ್ಯ॥ ಪಾಠಕ್ಕೆ ಪ್ರತಿಪಾದ್ಯವಿಷಯದ ಅನುಗುಣ್ಯವಾಗಲಿ ವ್ಯಾಖ್ಯಾನದ ಬೆಂಬಲವಾಗಲಿ ಇಲ್ಲ.

(ಭಾಷ್ಯಾರ್ಥ)

೬ ಈ ಸಂಸಾರವೃಕ್ಷಕ್ಕೇ ಇನ್ನೊಂದು ಅವಯುವಕಲ್ಪನೆಯನ್ನು ಹೇಳು ತ್ತಾನೆ :—

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚಮೂಲಾನ್ಯನುಸನ್ತತಾನಿ**
**ಕರ್ಮಾನುಬನ್ಧೀನಿ ಮನುಷ್ಯಲೋಕೇ ॥ ೨ ॥**

೨. ಕೆಳಕ್ಕೂ ಮೇಲಕ್ಕೂ ಅದರ ಶಾಖೆಗಳು ಹಬ್ಬಿಕೊಂಡಿರುತ್ತವೆ. (ಅವು) ಗುಣಗಳಿಂದ ಬೆಳೆದುಕೊಂಡಿರುತ್ತವೆ, ವಿಷಯಗಳೆಂಬ ಚಿಗುರು ಗಳುಳ್ಳವಾಗಿವೆ; ಮನುಷ್ಯಲೋಕದಲ್ಲಿ ಕರ್ಮದ ಅನುಭವವುಳ್ಳ ಬೇರು ಗಳು ವ್ಯಾಪಿಸಿಕೊಂಡಿರುತ್ತವೆ.

(ಭಾಷ್ಯ)

೩೫೧. ಅಧಃ ಮನುಷ್ಯಾದಿಭ್ಯಃ ಯಾವತ್ ಸ್ಥಾವರಮ್[1] ಊರ್ಧ್ವಂ ಚ ಯಾವತ್ "ಬ್ರಹ್ಮಾ ವಿಶ್ವಸೃಜೋ ಧರ್ಮಃ"[2] (ಮನು. ೧೨-೫೦) ಇತ್ಯೇತದನ್ತಂ ಯಥಾಕರ್ಮ ಯಥಾಶ್ರುತಂ ಜ್ಞಾನಕರ್ಮಫಲಾನಿ ತಸ್ಯ ವೃಕ್ಷಸ್ಯ ಶಾಖಾ ಇವ ಶಾಖಾಃ ಪ್ರಸೃತಾಃ ಪ್ರಗತಾಃ । ಗುಣಪ್ರವೃದ್ಧಾಃ । ಗುಣೈಃ ಸತ್ತ್ವರಜಸ್ತಮೋಭಿಃ ಪ್ರವೃದ್ಧಾಃ ಸ್ಥೂಲೀಕೃತಾಃ ಉಪಾದಾನಭೂತೈಃ । ವಿಷಯಪ್ರವಾಲಾಃ ವಿಷಯಾಃ ಶಬ್ದಾದಯಃ ಪ್ರವಾಲಾ ಇವ ದೇಹಾದಿಕರ್ಮಫಲೇಭ್ಯಃ ಶಾಖಾಭ್ಯಃ[3] ಅಙ್ಕುರೀ ಭವನ್ತೀವ । ತೇನ ವಿಷಯಪ್ರವಾಲಾಃ ಶಾಖಾಃ। ಸಂಸಾರವೃಕ್ಷಸ್ಯ ಪರಮಮೂಲಮ್[4] ಉಪಾದಾನಂ ಕಾರಣಂ ಪೂರ್ವಮ್ ಉಕ್ತಮ್ । ಅಥ ಇದಾನೀಂ ಕರ್ಮಫಲಜನಿತ ರಾಗದ್ವೇಷಾದಿವಾಸನಾಃ ಮೂಲಾನೀವ ಧರ್ಮಾಧರ್ಮಪ್ರವೃತ್ತಿಕಾರಣಾನಿ ಅವಾನ್ತರ ಭಾವೀನಿ ತಾನಿ ಅಧಶ್ಚ ದೇವಾದ್ಯಪೇಕ್ಷಯಾ[5] ಮೂಲಾನಿ ಅನುಸನ್ತತಾನಿ ಅನುಪ್ರವಿ

---

1. ಇಲ್ಲಿ 'ಅತಃ' ಎಂದು ಹೆಚ್ಚಾಗಿ ಮ|| ಮೈ||

2. "ಬ್ರಹ್ಮಣಃ ವಿಶ್ವಸೃಜೋ ಧಾಮ" ಎಂಬ ಅ|| ಮ|| ಮೈ|| ವಾ|| ಗಳಿಗಿಂತ ಈ ಪಾಠವೇ ಮೇಲು; ಏಕೆಂದರೆ ಇದು ಮನುಸ್ಮೃತಿಗೆ ಹೊಂದುಗೆಯಾಗಿದೆ.

3. 'ಶಾಖಾದಿಭ್ಯಃ' ಎಂಬ ಮ|| ಮೈ|| ಪಾಠಗಳಲ್ಲಿ ಆದಿ ಹೆಚ್ಚು.

4. "ಪರಂ ಮೂಲಮ್" ನಿ|| ವಾ||

5. 'ದೇಹಾದ್ಯಪೇಕ್ಷಯಾ' ಎಂಬ ಅ|| ನಿ|| ಗು|| ಪಾಠಗಳಿಗಿಂತ ಈ ಮ|| ಮೈ|| ಪಾಠವೇ ಮೇಲು.

ಷ್ಟಾನಿ । ಕರ್ಮಾನುಬನ್ಧೀನಿ ಕರ್ಮ ಧರ್ಮಾಧರ್ಮಲಕ್ಷಣಂ ಅನುಬನ್ಧಃ ಪಶ್ಚಾದ್ಭಾವೀ ಯೇಷಾಮ್ ಉದ್ಭೂತಿಮ್ ಅನು ಉದ್ಭವತಿ[1] ತಾನಿ ಕರ್ಮಾನುಬನ್ಧೀನಿ । ಮನುಷ್ಯಲೋಕೇ ವಿಶೇಷತಃ । ಅತ್ರ ಹಿ ಮನುಷ್ಯಾಣಾಂ ಕರ್ಮಾಧಿಕಾರಃ ಪ್ರಸಿದ್ಧಃ॥

(ಭಾಷ್ಯಾರ್ಥ)

ಮನುಷ್ಯರೇ ಮುಂತಾದವರಿಗಿಂತ[2] ಕೆಳಕ್ಕೆ ಸ್ಥಾವರದವರೆಗೆ, ಮೇಲಕ್ಕೂ ಎಂದರೆ “ ಬ್ರಹ್ಮ, ಪ್ರಪಂಚವನ್ನು ಸೃಷ್ಟಿಸುವ ಪ್ರಜಾಪತಿಗಳು, ಧರ್ಮನು ” ಎಂಬ ವರೆಗೂ[3] (ಮನು. ೧೨-೫೦) ಕರ್ಮಾನುಸಾರವಾಗಿಯೂ ಭಾವನಾನುಸಾರವಾಗಿಯೂ[4] ಜ್ಞಾನಕರ್ಮಗಳ ಫಲಗಳು ಆ ಮರದ ಕೊಂಬೆಗಳಂತಿರುವದರಿಂದ ಶಾಖೆಗಳು, ಹಬ್ಬಿಕೊಂಡಿರುತ್ತವೆ, ಹೋಗಿರುತ್ತವೆ. (ಅವು) ಗುಣಗಳಿಂದ ಬೆಳೆದುಕೊಂಡಿರುತ್ತವೆ. ಗುಣಗಳಿಂದ, ಉಪಾದಾನವಾಗಿರುವ ಸತ್ತ್ವರಜಸ್ತಮಗಳಿಂದ[5] ಬೆಳೆದುಕೊಂಡಿರುತ್ತವೆ, ದಪ್ಪವಾಗಿ ಮಾಡಲ್ಪಟ್ಟಿರುತ್ತವೆ. ವಿಷಯಗಳೆಂಬ ಚಿಗುರುಗಳುಳ್ಳವಾಗಿವೆ : ವಿಷಯಗಳಾದ ಶಬ್ದಾದಿಗಳು ಚಿಗುರುಗಳಂತೆ ದೇಹವೇ ಮುಂತಾದವುಗಳ ಕರ್ಮದ ಫಲಗಳಾಗಿರುವ ಶಾಖೆಗಳಿಂದ ಚಿಗುರುಗಳಂತೆ ಮೊಳಕೆಯಾಗುವಂತಿರುವವು[6]. ಆದ್ದರಿಂದ ಶಾಖೆಗಳು ವಿಷಯಗಳೆಂಬ ಚಿಗುರುಗಳುಳ್ಳವು (ಎಂದಿರುತ್ತದೆ).

ಸಂಸಾರವೆಂಬ ಮರದ ತಾಯಿಬೇರಾಗಿರುವ ಉಪಾದಾನಕಾರಣವನ್ನು ಹಿಂದೆ (ಊರ್ಧ್ವಮೂಲಮ್ ಎಂದು) ಹೇಳಿತ್ತು. ಇನ್ನು ಈಗ ಕರ್ಮಫಲದಿಂದಾಗುವ ರಾಗದ್ವೇಷಗಳೇ ಮುಂತಾದ ವಾಸನೆಗಳು ಬೇರುಗಳಂತೆ ಧರ್ಮಾಧರ್ಮಗಳಲ್ಲಿ ತೊಡಗುವದಕ್ಕೆ ಕಾರಣವಾಗಿರುವದರಿಂದ (ಅವು) ಸಿಡಿ (ಬೇರುಗಳಾಗಿರುತ್ತವೆಯೆಂದು

---

1. ‘ಅನುಭವನ್ತಿ’ ನಿ||; ‘ಅನು ಉದ್ಭವನ್ತಿ’ ಮ|| ಎಂಬ ಪಾಠಗಳಿಗಿಂತ ಈ ವ್ಯೆ|| ಗು|| ವಾ|| ಪಾಠವು ಮೇಲು.

2. ಮನುಷ್ಯರು, ದೇವತೆಗಳು_ಮುಂತಾದವರಿಗಿಂತ ಕೆಳಗಿನ ಜನ್ಮಗಳು ‘ಅಧಃ’ ಎಂಬ ಮಾತಿನಿಂದ ಉಕ್ತವಾಗಿವೆ.

3. ಕರ್ಮದ ಫಲವನ್ನು ಹೀಗೆ ಬ್ರಹ್ಮಾದಿಸ್ಥಾವರಾಂತವಾಗಿ ವರ್ಣಿಸಿರುವದನ್ನು ಸೂ. ಭಾ. ೧-೧-೪, ೧-೩-೩೦ ಮುಂತಾದ ಕಡೆಗಳಲ್ಲಿ ಕಾಣಬಹುದು.

4. ಕ. ಭಾ. ೨-೨-೭

5. ಹಿಂದಿನ ಅಧ್ಯಾಯದಲ್ಲಿ ೧೪, ೧೫, ೧೬ನೆಯ ಶ್ಲೋಕಗಳಲ್ಲಿ ಹೇಳಿರುವಂತೆ ಗುಣಗಳಿಂದಲೇ ಆಯಾ ಫಲಗಳಾಗುತ್ತವೆ.

6. ಆಯಾ ಧರ್ಮಾಧರ್ಮಗಳ ಫಲವಾಗಿ ಜನ್ಮಗಳೂ ಆ ಜನ್ಮಗಳ ಭೋಗಕ್ಕೆ ತಕ್ಕಂತೆ ವಿಷಯಗಳೂ ಉಂಟಾಗುವವು. ಆದ್ದರಿಂದ ವಿಷಯಗಳನ್ನು ಶಾಖೆಗಳಲ್ಲಿ ಮೊಳೆಯುವ ಚಿಗುರುಗಳು ಎಂದು ಕರೆದಿದೆ ಎಂದು ಭಾವ.

ಹೇಳಿರುತ್ತದೆ.) ಅವು ದೇವತೆಗಳೇ ಮುಂತಾದವರಿಗೆ ಹೋಲಿಸಿದರೆ ಕೆಳಗಡೆಯೂ ವ್ಯಾಪಿಸಿಕೊಂಡಿರುತ್ತವೆ, ಬಂದು ಸೇರಿಕೊಂಡಿರುತ್ತವೆ.[1] ಕರ್ಮದ ಅನುಬಂಧವುಳ್ಳವಾಗಿರುತ್ತವೆ: ಧರ್ಮಾಧರ್ಮರೂಪವಾದ ಕರ್ಮವು ಅನುಬಂಧವಾಗಿರುತ್ತದೆ, ಆಮೇಲೆ ಉಂಟಾಗುತ್ತದೆ, ಆ (ಮೂಲಗಳು) ಹುಟ್ಟಿದಮೇಲೆ ಹುಟ್ಟುತ್ತದೆ ; (ಆದ್ದರಿಂದ) ಅವು ಕರ್ಮವೆಂಬ ಅನುಬಂಧವುಳ್ಳವಾಗಿರುತ್ತವೆ. (ಅದರಲ್ಲಿಯೂ) ಮನುಷ್ಯಲೋಕದಲ್ಲಿ ವಿಶೇಷವಾಗಿ (ಕರ್ಮಾನುಬಂಧಿಗಳಾಗಿರುತ್ತವೆ). ಏಕೆಂದರೆ ಇಲ್ಲಿಯೇ ಮನುಷ್ಯರಿಗೆ ಕರ್ಮದಲ್ಲಿ ಅಧಿಕಾರವಿರುವದೆಂಬುದು ಪ್ರಸಿದ್ಧವಾಗಿರುತ್ತದೆ.

## ಸಂಸಾರದಲ್ಲಿ ಆಸಕ್ತಿಯಿಲ್ಲದವರಿಗೆ ಪರಮಪುರುಷಾರ್ಥ

(ಭಾಷ್ಯ)

೩೫೨. ಯಸ್ತ್ವಯಂ ವರ್ಣಿತಃ ಸಂಸಾರವೃಕ್ಷಃ—

(ಭಾಷ್ಯಾರ್ಥ)

ಹೀಗೆ ವರ್ಣಿಸಿದ ಸಂಸಾರವೃಕ್ಷವುಂಟಷ್ಟೆ—

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾನ್ತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**
**ಅಶ್ವತ್ಥಮೇನಂ ಸುವಿರೂಢಮೂಲ-**
**ಮಸಙ್ಗಶಸ್ತ್ರೇಣ ದೃಢೇನ ಛಿತ್ತ್ವಾ ॥ ೩ ॥**
**ತತಃ ಪದಂ ತತ್ಪರಿಮಾರ್ಗಿತವ್ಯಂ**
**ಯಸ್ಮಿನ್ ಗತಾ ನ ನಿವರ್ತನ್ತಿ ಭೂಯಃ ।**
**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪ ॥**

೩–೪. ಇಲ್ಲಿ ಇದಕ್ಕೆ ಹಾಗೆ ರೂಪವು ಕಾಣಬರುವದಿಲ್ಲ ; ಅಂತವಾಗಲಿ ಆದಿಯಾಗಲಿ ಸಂಪ್ರತಿಷ್ಠೆಯಾಗಲಿ (ಕಾಣಬರುವ)ದಿಲ್ಲ. ಈ ಸುವಿರೂಢಮೂಲವಾದ ಅಶ್ವತ್ಥವನ್ನು ದೃಢವಾದ ಅಸಂಗಶಸ್ತ್ರದಿಂದ ಛೇದಿಸಿ

---

1. ಇಲ್ಲಿ ಚಶಬ್ದದ ಸ್ವಾರಸ್ಯದಿಂದ ದೇವತೆಗಳಿಗೂ ವಾಸನೆಗಳುಂಟೆಂದು ಏರ್ಪಡುತ್ತದೆ. ಬೇರೂ ಎರಡು ಕಡೆಗೆ, ಕೊಂಬೆಗಳೂ ಎರಡು ಕಡೆಗೆ_ಹೀಗಿರುವ ಮರವನ್ನು ಕಡಿಯುವದು ಬಲು ಕಷ್ಟ_ಎಂದು ಭಾವ.

ಆಮೇಲೆ ಯಾವಲ್ಲಿಗೆ ಹೋದವರು ಮತ್ತೆ ಹಿಂತೆರಳುವದಿಲ್ಲವೋ ಆ ಪದವನ್ನು ಪರಿಮಾರ್ಗಣಮಾಡಬೇಕು. "ಪುರಾಣವಾದ ಈ ಪ್ರವೃತ್ತಿಯು ಯಾವಾತನಿಂದ ಹೊರಟುಬಂದಿರುವದೋ ಅದೇ ಆದ್ಯಪುರುಷನನ್ನು ಶರಣುಹೊಕ್ಕಿದ್ದೇನೆ" (ಎಂದು ಪರಿಮಾರ್ಗಣಮಾಡಬೇಕು.)

(ಭಾಷ್ಯ)

೩೫೩. ನ ರೂಪಮ್ ಅಸ್ಯ ಇಹ ಯಥಾ ಉಪವರ್ಣಿತಂ ತಥಾ ನೈವ ಉಪಲಭ್ಯತೇ[1] । ಸ್ವಪ್ನಮರೀಚ್ಯುದಕಮಾಯಾಗನ್ಧರ್ವನಗರಸಮತ್ವಾತ್ ದೃಷ್ಟನಷ್ಟಸ್ವರೂಪೋ ಹಿ ಸಃ ಇತಿ। ಅತ ಏವ ನಾನ್ತಃ ನ ಪರ್ಯನ್ತಃ ನಿಷ್ಠಾ ಪರಿಸಮಾಪ್ತಿರ್ವಾ[2] ವಿದ್ಯತೇ । ತಥಾ ನ ಚ ಆದಿಃ । ಇತ ಆರಭ್ಯ ಅಯಂ ಪ್ರವೃತ್ತಃ ಇತಿ ನ ಕೇನಚಿತ್ ಗಮ್ಯತೇ । ನ ಚ ಸಮ್ಪ್ರತಿಷ್ಠಾ ಸ್ಥಿತಿಃ ಮಧ್ಯಮ್ ಅಸ್ಯ ನ ಕೇನಚಿತ್ ಉಪಲಭ್ಯತೇ । ಅಶ್ವತ್ಥಮ್ ಏನಂ ಯಥೋಕ್ತಂ ಸುವಿರೂಢಮೂಲಮ್ । ಸುಷ್ಠು ವಿರೂಢಾನಿ ವಿರೋಹಂ ಗತಾನಿ ಸುದೃಢಾನಿ ಮೂಲಾನಿ ಯಸ್ಯ ತಮೇನಂ ಸುವಿರೂಢಮೂಲಮ್ । ಅಸಙ್ಗಶಸ್ತ್ರೇಣ ಅಸಙ್ಗಃ ಪುತ್ರವಿತ್ತಲೋಕೈಷಣಾದಿಭ್ಯೋ ವ್ಯುತ್ಥಾನಮ್ । ತೇನ ಅಸಙ್ಗಶಸ್ತ್ರೇಣ ದೃಢೇನ ಪರಮಾತ್ಮಾಭಿಮುಖ್ಯನಿಶ್ಚಯದೃಢೀಕೃತೇನ ಪುನಃಪುನಃ ವಿವೇಕಾಭ್ಯಾಸಾಶ್ಮನಿಶಿತೇನ ಛಿತ್ವಾ ಸಂಸಾರವೃಕ್ಷಂ ಸಬೀಜಮ್ ಉದ್ಧೃತ್ಯ—

(ಭಾಷ್ಯಾರ್ಥ)

ಇದಕ್ಕೆ ಇಲ್ಲಿ ಮೇಲೆ ಹೇಗೆ ವರ್ಣಿಸಿದೆಯೋ ಹಾಗಿರುವ[3] ರೂಪವು ಕಾಣಬರುವದೇ ಇಲ್ಲ. ಕನಸು, ಬಿಸಿಲುಕುದುರೆಯ ನೀರು, ಮಾಯೆ, ಗಂಧರ್ವನಗರ–ಇವುಗಳಂತೆ ಇರುತ್ತದೆಯಾದ್ದರಿಂದ ತೋರಿಹಾರುವದೇ (ಇದರ) ಸ್ವರೂಪವು. ಆದ್ದರಿಂದಲೇ (ಇದಕ್ಕೆ) ಅಂತವು, ಕೊನೆ, ನಿಷ್ಠೆಯು (ಇಲ್ಲಿಗೆ) ಮುಗಿಯುವದೆಂಬುದೂ ಇಲ್ಲ. ಹಾಗೂ ಆದಿಯೂ ಇಲ್ಲ, 'ಇಲ್ಲಿಂದ ಮೊದಲಾಗಿ ಇದು ಹೊರಟಿರುತ್ತದೆ' ಎಂದು ಯಾರಿಗೂ ತಿಳಿಯುವಂತಿಲ್ಲ, ಇದಕ್ಕೆ ಸಂಪ್ರತಿಷ್ಠೆಯೂ ಇಲ್ಲ. (ಸಂಪ್ರತಿಷ್ಠೆ ಎಂದರೆ) ಸ್ಥಿತಿ, ನಡುವೆ; (ಇದೂ) ಯಾರಿಗೂ ತಿಳಿಯುವಂತಿಲ್ಲ[4].

---

1. 'ನೋಪಲಿಪ್ಯತೇ' ಮ॥

2. 'ಸಮಾಪ್ತಿರ್ವಾ' ನಿ॥ ವಾ॥

3. ಬ್ರಹ್ಮದಿಂದ ಬಂದಿದೆಯಾಗಿ ಬ್ರಹ್ಮವೇ ಎಂದು ಹಿಂದೆ ವರ್ಣಿಸಿದ ರೂಪವು ಕಾಣಬರುವದಿಲ್ಲ; ಇದರ ಅಧ್ಯಸ್ತರೂಪವೇ ಕಾಣುತ್ತಿರುವದು.

4. ಸಂಸಾರವು ತೋರುವ ರೂಪದಿಂದ ಅಚಿಂತ್ಯವಾಗಿದೆ; ಅದರ ಮೊದಲು, ನಡುವೆ, ತುದಿ—ಯಾವದೂ ತಿಳಿಯುವ ಹಾಗಿಲ್ಲ. ಪರಮಾರ್ಥವಾಗಿ ಅದು ಆತ್ಮನೇ ಆಗಿರುವದರಿಂದ ಆ ರೂಪದಿಂದಲೇ ಅದನ್ನು ತಿಳಿದುಕೊಳ್ಳಬೇಕು.

ಮೇಲೆ ಹೇಳಿದ ಈ ಅಶ್ವತ್ಥವನ್ನು ಸುವಿರೂಢಮೂಲವಾದ-ಚೆನ್ನಾಗಿ ವಿರೂಢವಾದ ಬಿಟ್ಟುಕೊಂಡಿರುವ ಬಲು ಗಟ್ಟಿಯಾಗಿರುವ ಬೇರುಗಳು ಯಾವದಕ್ಕೆ (ಇರುವವೋ) ಅಂಥ ಈ ಸುವಿರೂಢಮೂಲವಾದ (ಮರವನ್ನು)-ಅಸಂಗಶಸ್ತ್ರದಿಂದ: ಅಸಂಗವೆಂದರೆ ಮಕ್ಕಳು, ಹಣ, ಲೋಕ-ಇವುಗಳ ಏಷಣೆಯೇ ಮುಂತಾದವುಗಳನ್ನು ಬಿಟ್ಟುಬಿಡುವದು[1]. ದೃಢವಾಗಿರುವ ಪರಮಾತ್ಮನಕಡೆಗೆ ತಿರುಗುವ ನಿಶ್ಚಯದಿಂದ ಗಟ್ಟಿಮಾಡಿಕೊಂಡಿರುವ, ಮತ್ತೆಮತ್ತೆ ವಿವೇಕಾಭ್ಯಾಸವೆಂಬ (ಒರೆ)ಗಲ್ಲಿನಲ್ಲಿ ಸಾಣೆ ಹಿಡಿದಿರುವ, ಆ ಅಸಂಗವೆಂಬ ಶಸ್ತ್ರದಿಂದ ಕತ್ತರಿಸಿಹಾಕಿ, ಸಂಸಾರವೃಕ್ಷವನ್ನು ಬೀಜ ಸಹಿತವಾಗಿ ಕಿತ್ತುಹಾಕಿ.—

(ಭಾಷ್ಯ)

೩೫೪. ತತಃ ಪಶ್ಚಾತ್ ಯತ್ [2]ಪದಂ ವೈಷ್ಣವಂ ತತ್ ಪರಿಮಾರ್ಗಿತವ್ಯಮ್। ಪರಿಮಾರ್ಗಣಮ್ ಅನ್ವೇಷಣಮ್। ಜ್ಞಾತವ್ಯಮ್ ಇತ್ಯರ್ಥಃ। ಯಸ್ಮಿನ್ ಪದೇ ಗತಾಃ ಪ್ರವಿಷ್ಟಾಃ ನ ನಿವರ್ತನ್ತಿ ನಾವರ್ತನ್ತೇ ಭೂಯಃ ಪುನಃ ಸಂಸಾರಾಯ। ಕಥಂ ಪರಿಮಾರ್ಗಿತವ್ಯಮ್ ಇತಿ? ಆಹ—ತಮೇವ ಚ ಯಃ ಪದಶಬ್ದೇನ ಉಕ್ತಃ ಆದ್ಯಮ್ ಆದೌ ಭವಂ ಪುರುಷಂ ಪ್ರಪದ್ಯೇ ಇತ್ಯೇವಂ ಪರಿಮಾರ್ಗಿತವ್ಯಂ ತಚ್ಛರಣತಯಾ ಇತ್ಯರ್ಥಃ। ಕೋಽಸೌ ಪುರುಷ ಇತಿ? ಉಚ್ಯತೇ। ಯತಃ ಯಸ್ಮಾತ್ ಪುರುಷಾತ್ ಸಂಸಾರಮಾಯಾವೃಕ್ಷಪ್ರವೃತ್ತಿಃ ಪ್ರಸೃತಾ ನಿಃಸೃತಾ ಐನ್ದ್ರಜಾಲಿಕಾದಿವ ಮಾಯಾ ಪುರಾಣೀ ಚಿರನ್ತನೀ ॥

(ಭಾಷ್ಯಾರ್ಥ)

ಆಮೇಲೆ ಬಳಿಕ ಯಾವದು ವಿಷ್ಣುವಿನ ಪದವೋ[3] ಅದನ್ನು ಪರಿಮಾರ್ಗಣೆ ಮಾಡಬೇಕು. ಪರಿಮಾರ್ಗಣೆ ಎಂದರೆ ಹುಡುಕುವದು; (ಹುಡುಕಬೇಕು ಎಂದರೆ) ಅರಿತುಕೊಳ್ಳಬೇಕು ಎಂದರ್ಥ. ಯಾವ ಪದದಲ್ಲಿಗೆ ಹೋದವರು (ಯಾವದನ್ನು) ಸೇರಿಕೊಂಡವರು ಮತ್ತೆ ಇನ್ನೊಂದು ಸಲ ಸಂಸಾರಕ್ಕೆ (ನ ನಿವರ್ತನ್ತಿ) ಹಿಂತಿರುಗುವದಿಲ್ಲವೋ (ಅದನ್ನು ಪರಿಮಾರ್ಗಣೆಮಾಡಬೇಕು). ಹೇಗೆ ಪರಿಮಾರ್ಗಣೆಮಾಡಬೇಕು? ಎಂದರೆ ಹೇಳುತ್ತಾನೆ: ಯಾವನನ್ನು (ಮೇಲೆ) ಪದ ಎಂಬ ಮಾತಿನಿಂದ ಹೇಳಲಾಗಿದೆಯೋ ಅವನನ್ನೇ (ಆ) ಆದ್ಯನಾದ ಆದಿಯಲ್ಲಿರುವ ಪುರುಷನನ್ನೇ

---

1. ಬೃ ೩-೫-೧; ಏಷಣೆಯಿಂದ ಕರ್ಮಗಳನ್ನು ಮಾಡುವದು, ಫಲಗಳನ್ನು ಪಡೆದು ಉಪಭೋಗಿಸುವದು—ಇವುಗಳನ್ನು ಮುಂತಾದ ಎಂಬ ಶಬ್ದದಿಂದ ಸೂಚಿಸಿದೆ.

2. ನಿ|| ಆ|| ಗಳಲ್ಲಿಲ್ಲವಾದರೂ ಇರಬೇಕಾದದ್ದು ಅವಶ್ಯ.

3. ಕ. ೧-೩-೯ರ ಸೂಚನೆ

(ಶರಣು)ಹೊಂದಿದ್ದೇನೆ ಎಂದೀ ಪರಿಯಲ್ಲಿ ಅವನನ್ನೇ ಶರಣು (ಮಾಡಿಕೊಂಡು) ಹುಡುಕಬೇಕು ಎಂದರ್ಥ. ಆ ಪುರುಷನು ಯಾರು? ಎಂದರೆ ಹೇಳುತ್ತಾನೆ: ಯಾವಾತನಿಂದ ಯಾವ ಪುರುಷನಿಂದ ಪುರಾಣವಾದ ಪುರಾತನವಾದ ಸಂಸಾರವೆಂಬ ಮಾಯಾವೃಕ್ಷದ ಪ್ರವೃತ್ತಿಯು ಇಂದ್ರಜಾಲಗಾರನಿಂದ ಮಾಯೆಯು (ಹೊರಟು ಬಂದಿರು)[1] ವಂತೆ ಹೊರಟು ಬಂದಿರುವದೋ (ಉಂಟಾಗಿ) ಈಚೆಗೆ ಬಂದಿರುವದೋ (ಆತನನ್ನೇ ಹೊಂದಿರುತ್ತೇನೆ ಎಂದು ಪರಿಮಾರ್ಗಣೆ ಮಾಡಬೇಕು.)

(ಭಾಷ್ಯ)

೩೮೫. ಕಥಂಭೂತಾಃ ತತ್ಪದಂ ಗಚ್ಛನ್ತಿ ಇತಿ? ಉಚ್ಯತೇ—

(ಭಾಷ್ಯಾರ್ಥ)

ಆ ಪದವನ್ನು ಎಂಥವರು ಸೇರುತ್ತಾರೆ? ಎಂದರೆ ಹೇಳುತ್ತಾನೆ:--

**ನಿರ್ಮಾನಮೋಹಾ ಜಿತಸಙ್ಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವನ್ದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-**
**ರ್ಗಚ್ಛನ್ತ್ಯಮೂಢಾಃ ಪದಮವ್ಯಯಂ ತತ್ ॥ ೫ ॥**

೫. ನಿರ್ಮಾನಮೋಹರೂ ಜಿತಸಂಗದೋಷರೂ ಅಧ್ಯಾತ್ಮನಿತ್ಯರೂ ವಿನಿವೃತ್ತಕಾಮರೂ ಸುಖದುಃಖಗಳೆಂಬ ಹೆಸರಿನ ದ್ವಂದ್ವಗಳಿಂದ ವಿಮುಕ್ತರೂ ಆಗಿರುವ ಅಮೂಢರು ಆ ಅವ್ಯಯವಾದ ಪದವನ್ನು ಸೇರುತ್ತಾರೆ.

(ಭಾಷ್ಯ)

೩೫೬. ನಿರ್ಮಾನಮೋಹಾಃ। ಮಾನಶ್ಚ ಮೋಹಶ್ಚ ಮಾನಮೋಹೌ। ತೌ ನಿರ್ಗತೌ ಯೇಭ್ಯಃ ತೇ ನಿರ್ಮಾನಮೋಹಾಃ ಮಾನಮೋಹವರ್ಜಿತಾಃ। ಜಿತಸಙ್ಗದೋಷಾಃ। ಸಙ್ಗ ಏವ ದೋಷಃ ಸಙ್ಗದೋಷಃ। ಜಿತಃ ಸಙ್ಗದೋಷಃ ಯೈಃ ತೇ ಜಿತಸಙ್ಗದೋಷಾಃ। ಅಧ್ಯಾತ್ಮನಿತ್ಯಾಃ ಪರಮಾತ್ಮಸ್ವರೂಪಾಲೋಚನನಿತ್ಯಾಃ[2] ತತ್ಪರಾಃ।

---

1. ಮಾಯಾವಿಯು ಹುಸಿತೋರಿಕೆಯಾದ ಮಾಯೆಯನ್ನು ಹೊರಡಿಸಿ ಅದರ ಅಸಾರತೆಯನ್ನೂ ತಿಳಿದಿರುವಂತೆ ಈಶ್ವರನೇ ಸಂಸಾರವನ್ನು ಹೊರಡಿಸಿದಾನೆ; ಅದರ ಅಸಾರತೆಯನ್ನೂ ತಿಳಿಸಿಕೊಡಬಲ್ಲವನಾಗಿರುತ್ತಾನೆ.

2. 'ಆಲೋಚನೇ ನಿತ್ಯಾಃ' ಮ॥ ಮೈ॥ ಗು॥

ವಿನಿವೃತ್ತಕಾಮಾಃ ವಿಶೇಷತಃ ನಿರ್ಲೇಪೇನ ನಿವೃತ್ತಾಃ ಕಾಮಾಃ ಯೇಷಾಂ ತೇ ವಿನಿವೃತ್ತಕಾಮಾಃ ! ಯತಯಃ ಸಂನ್ಯಾಸಿನಃ । ದ್ವಂದ್ವೈಃ ಪ್ರಿಯಾಪ್ರಿಯಾದಿಭಿಃ ವಿಮುಕ್ತಾಃ ಸುಖದುಃಖಸಂಜ್ಞೈಃ ಪರಿತ್ಯಕ್ತಾ ಗಚ್ಛನ್ತಿ ಅಮೂಢಾಃ ಮೋಹ ವರ್ಜಿತಾಃ ಪದಮ್ ಅವ್ಯಯಂ ತತ್ ಯಥೋಕ್ತಮ್ ||

(ಭಾಷ್ಯಾರ್ಥ)

ನಿರ್ಮಾನಮೋಹರು : ಮಾನವೂ ಮೋಹವೂ ಮಾನಮೋಹಗಳು ; ಇವು ಯಾರಿಂದ ಸಂಪೂರ್ಣವಾಗಿ ಹೋಗಿಬಿಟ್ಟಿರುವವೋ ಅವರು ನಿರ್ಮಾನಮೋಹರು. ಮಾನವೂ ಮೋಹವೂ ಇಲ್ಲದವರು (ಎಂದರ್ಥ). ಜಿತಸಂಗದೋಷರು : ಸಂಗವೆಂಬ ದೋಷವು, ಸಂಗದೋಷವು. ಸಂಗದೋಷವನ್ನು ಯಾರು ಗೆದ್ದುಕೊಂಡಿರುವರೋ ಅವರು ಜಿತಸಂಗದೋಷರು. ಅಧ್ಯಾತ್ಮನಿತ್ಯರು : ಪರಮಾತ್ಮಸ್ವರೂಪವನ್ನು ಯಾವಾಗಲೂ ಆಲೋಚನೆಮಾಡುತ್ತಿರುವವರು, ಅದರಲ್ಲಿಯೇ ತಾತ್ಪರ್ಯವುಳ್ಳವರು (ಎಂದರ್ಥ). ವಿನಿವೃತ್ತಕಾಮರು : ವಿಶೇಷವಾಗಿ (ಒಂದಿಷ್ಟೂ) ಅಂಟದ ಹಾಗೆ ಯಾರ ಕಾಮಗಳು ತೊಲಗಿರುವವೋ ಅವರು ವಿನಿವೃತ್ತಕಾಮರು. ಯತಿಗಳು, ಸಂನ್ಯಾಸಿಗಳು. ಸುಖದುಃಖಗಳೆಂಬ ದ್ವಂದ್ವಗಳಿಂದ ಎಂದರೆ ಬೇಕಾದದ್ದು, ಬೇಡವಾದದ್ದು–ಮುಂತಾದ (ಜೋಡಿಗಳಿಂದ) ವಿಮುಕ್ತರಾದವರು, ಬಿಡುಗಡೆಯನ್ನು ಹೊಂದಿರುವವರು. (ಇಂಥ) ಅಮೂಢರು, ಮೋಹವಿಲ್ಲದ (ಜನರು) ಮೇಲೆ ಹೇಳಿರುವ ಅವ್ಯಯವಾದ ಆ ಪದವನ್ನು ಸೇರುತ್ತಾರೆ.

(ಭಾಷ್ಯ)

೩೫೭. ತದೇವ ಪದಂ ಪುನರ್ವಿಶಿಷ್ಯತೇ—

(ಭಾಷ್ಯಾರ್ಥ)

ಅದೇ ಪದವನ್ನೇ ಮತ್ತೂ (ಬೇರೆಯ) ವಿಶೇಷಣದಿಂದ ತಿಳಿಸುತ್ತಾನೆ:—

**ನ ತದ್ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ ।**
**ಯದ್ ಗತ್ವಾ ನ ನಿವರ್ತನ್ತೇ ತದ್ ಧಾಮ ಪರಮಂ ಮಮ ||೬||**

೬. ಅದನ್ನು ಸೂರ್ಯನು ಬೆಳಗುವದಿಲ್ಲ, ಶಶಾಂಕನೂ (ಬೆಳಗುವದಿಲ್ಲ), ಪಾವಕನೂ (ಬೆಳಗುವದಿಲ್ಲ). ಯಾವ ಸ್ಥಾನವನ್ನು ಸೇರಿದರೆ ಹಿಂತೆರಳುವದಿಲ್ಲವೋ ಅದೇ ನನ್ನ ಪರಮಸ್ಥಾನವು.

(ಭಾಷ್ಯ)

೩೫೮. ತದ್ ಧಾಮ ಇತಿ ವ್ಯವಹಿತೇನ ಧಾಮ್ನಾ ಸಂಬಧ್ಯತೇ[1] । ತತ್ ಧಾಮ ತೇಜೋರೂಪಂ ಪದಂ ನ ಭಾಸಯತೇ ಸೂರ್ಯಃ ಆದಿತ್ಯಃ ಸರ್ವಾವಭಾಸನಶಕ್ತಿಮತ್ತ್ವೇಽಪಿ ಸತಿ । ತಥಾ ನ ಶಶಾಙ್ಕಃ ಚನ್ದ್ರಃ । ನ ಪಾವಕಃ ನಾಗ್ನಿರಪಿ । ಯದ್ ಧಾಮ ವೈಷ್ಣವಂ ಪದಂ ಗತ್ವಾ ಪ್ರಾಪ್ಯ ನ ನಿವರ್ತನ್ತೇ ಯಚ್ಚ ಸೂರ್ಯಾದಿಃ ನ ಭಾಸಯತೇ ತದ್ ಧಾಮ ಪದಂ ಪರಮಂ ಮಮ ವಿಷ್ಣೋಃ ॥

(ಭಾಷ್ಯಾರ್ಥ)

(ಮೂಲದಲ್ಲಿರುವ) ತತ್ (ಆ) ಎಂಬ ಮಾತನ್ನು ದೂರದಲ್ಲಿರುವ ಧಾಮ (ಸ್ಥಾನವನ್ನು) ಎಂಬ (ಮಾತಿಗೆ) ಸಂಬಂಧಿಸಿಕೊಳ್ಳಬೇಕು. ಆ ಧಾಮವನ್ನು ಪ್ರಕಾಶರೂಪವಾದ (ವಿಷ್ಣು) ಪದವನ್ನು ಸೂರ್ಯನು ಆದಿತ್ಯನು, ಎಲ್ಲವನ್ನೂ ಬೆಳಗುವ ಶಕ್ತಿಯುಳ್ಳವನಾದರೂ ಬೆಳಗಲಾರನು. ಹಾಗೆಯೇ ಶಶಾಂಕನೂ ಚಂದ್ರನೂ(ಬೆಳಗಲಾರನು). ಪಾವಕನೂ ಅಗ್ನಿಯೂ ಬೆಳಗಲಾರನು[2]. ಯಾವ ಧಾಮವನ್ನು, ವೈಷ್ಣವಪದವನ್ನು ಸೇರಿದವರು ಪಡೆದವರು ಹಿಂತಿರುಗುವದಿಲ್ಲವೋ ಮತ್ತು ಯಾವದನ್ನು ಸೂರ್ಯನೇ ಮುಂತಾದದ್ದು ಬೆಳಗಲಾರದೋ ಆ ಧಾಮವು ವಿಷ್ಣುವಾದ ನನ್ನ ಪರಮಪದವು.

## ಜೀವನು ಪರಮಾರ್ಥವಾಗಿ ಪರಮಾತ್ಮಸ್ವರೂಪನೇ

(ಭಾಷ್ಯ)

೩೫೯. "ಯದ್ಗತ್ವಾ ನ ನಿವರ್ತನ್ತೇ" (೧೫-೬) ಇತ್ಯುಕ್ತಮ್ । ನನು ಸರ್ವಾ ಹಿ ಗತಿಃ ಆಗತ್ಯನ್ತಾ । 'ಸಂಯೋಗಾ ವಿಪ್ರಯೋಗಾನ್ತಾಃ' (ಅಶ್ವ. ೪೪-೧೯) ಇತಿ ಹಿ ಪ್ರಸಿದ್ಧಮ್ । ಕಥಮ್ ಉಚ್ಯತೇ ತದ್ಧಾಮಗತಾನಾಂ ನಾಸ್ತಿ ನಿವೃತ್ತಿಃ ಇತಿ ? ಶೃಣು ತತ್ರ ಕಾರಣಮ್—

(ಭಾಷ್ಯಾರ್ಥ)

(ಆಕ್ಷೇಪ) :—"ಯಾವ ಸ್ಥಾನವನ್ನು ಸೇರಿದರೆ ಹಿಂತೆರಳುವದಿಲ್ಲವೋ (ಅದು ನನ್ನ ಸ್ಥಾನವು) ಎಂದು (೧೫-೬) ಹೇಳಿದೆ. ಆದರೆ ಯಾವ ಗಮನವಾದರೂ

1. 'ಸಂಬನ್ಧಃ' ಪಾ॥ ಗು॥
2. ಕ. ೨-೨-೧೧ ; ಮುಂ. ೨-೨-೧೦.

ಆಗಮನದಲ್ಲಿ ಕೊನೆಗಾಣಬೇಕು. "ಸೇರುವಿಕೆಗಳು ಆಗಲುವಿಕೆಯಲ್ಲಿ ಕೊನೆಗಾಣತಕ್ಕವು" (ಅಶ್ವ. ೪೪-೧೯) ಎಂಬದು ಪ್ರಸಿದ್ಧವಲ್ಲವೆ? (ಹೀಗಿರುವಲ್ಲಿ) ಆ ಧಾಮವನ್ನು ಸೇರಿದವರಿಗೆ ಹಿಂತಿರುಗುವಿಕೆಯಿಲ್ಲ ಎಂದು ಹೇಳುವದು ಹೇಗೆ (ಸರಿ)?

(ಸಮಾಧಾನ) :—ಇದಕ್ಕೆ ಕಾರಣವನ್ನು (ಹೇಳುವೆನು) ಕೇಳು: —

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀನ್ದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥**

೭. ಸನಾತನವಾದ ನನ್ನದೇ ಅಂಶವು ಜೀವಲೋಕದಲ್ಲಿ ಜೀವನಾಗಿದ್ದುಕೊಂಡು ಪ್ರಕೃತಿಯಲ್ಲಿರುವ, ಮನಸ್ಸೆಂಬ ಆರನೆಯದರೊಡಗೂಡಿದ ಇಂದ್ರಿಯಗಳನ್ನು ಸೆಳೆದುಕೊಳ್ಳುತ್ತದೆ.

(ಭಾಷ್ಯ)

೩೬೦. ಮಮೈವ ಪರಮಾತ್ಮನಃ ನಾರಾಯಣಸ್ಯ[1] । ಅಂಶಃ ಭಾಗಃ ಅವಯವಃ ಏಕದೇಶಃ ಇತಿ ಅನರ್ಥಾನ್ತರಮ್ । ಜೀವಲೋಕೇ ಜೀವಾನಾಂ ಲೋಕೇ ಸಂಸಾರೇ ಜೀವಭೂತಃ ಕರ್ತಾ ಭೋಕ್ತಾ ಇತಿ ಪ್ರಸಿದ್ಧಃ ಸನಾತನಃ ಚಿರನ್ತನಃ[2] । ಯಥಾ ಜಲಸೂರ್ಯಕಃ ಸೂರ್ಯಾಂಶಃ ಜಲನಿಮಿತ್ತಾಪಾಯೇ ಸೂರ್ಯಮೇವ ಗತ್ವಾ ನ ನಿವರ್ತತೇ,[3] ತೇನೈವ ಆತ್ಮನಾ ಸಜ್ಗಚ್ಛತಿ, ಏವಮೇವ । ಯಥಾ ವಾ ಘಟಾದ್ಯುಪಾಧಿಪರಿಚ್ಛಿನ್ನಃ ಘಟಾದ್ಯಾಕಾಶಃ ಆಕಾಶಾಂಶಃ ಸನ್ ಘಟಾದಿನಿಮಿತ್ತಾ-ಪಾಯೇ ಆಕಾಶಂ ಪ್ರಾಪ್ಯ ನ ನಿವರ್ತತೇ[4] । ಅತಃ ಉಪಪನ್ನಮ್ ಉಕ್ತಂ "ಯದ್ ಗತ್ವಾ ನ ನಿವರ್ತನ್ತೇ" (೧೫-೬) ಇತಿ ॥

(ಭಾಷ್ಯಾರ್ಥ)

ನನ್ನದೇ ಎಂದರೆ ಪರಮಾತ್ಮನಾದ **ನಾರಾಯಣನದೇ**[5] ಅಂಶವು. ಅಂಶ, ಭಾಗ, ಅವಯವ, ಏಕದೇಶ–ಇವೆಲ್ಲ ಪರ್ಯಾಯಶಬ್ದಗಳು. (ಈ ಅಂಶವು) ಜೀವ

1. ಶಿ॥ ಗು॥ ವಾ॥ ಗಳಲ್ಲಿಲ್ಲ.

2. ಶಿ॥ ಗು॥ ಗಳಲ್ಲಿಲ್ಲ.

3. "ತಥಾ ಅಯಮಪ್ಯಂಶಃ ತೇನೈವಾತ್ಮನಾ ಸಜ್ಗಚ್ಛತಿ ಏವಮೇವ। ಯಥಾ ವಾ...." ಶಿ॥ ಗು॥ ವಾ॥

4. 'ಇತ್ಯೇವಂ' ಎಂದು ಹೆಚ್ಚಾಗಿ ಶಿ॥ ಗು॥ ವಾ॥

5. 'ನಾರಾಯಣನದೇ ಅಂಶವು' ಎಂಬಲ್ಲಿ ಅಂಶವೇ ಎಂದು ಅವಧಾರಣೆಮಾಡಿಲ್ಲವೆಂಬುದನ್ನು ಲಕ್ಷಿಸಬೇಕು.

ಲೋಕದಲ್ಲಿ ಜೀವರುಗಳ ಲೋಕವಾದ ಸಂಸಾರದಲ್ಲಿ [1] ಜೀವಭೂತವಾಗಿ, ಕರ್ತನು, ಭೋಕ್ತನು–ಎಂದು ಪ್ರಸಿದ್ಧವಾಗಿದೆ. (ಅದು) ಸನಾತನವು ಬಹುಕಾಲದಿಂದ ಇರುವ (ಅನಾದಿಯಾ)ದದ್ದು. **ಹೇಗೆ ನೀರಿನಲ್ಲಿರುವ ಸೂರ್ಯನ ಪ್ರತಿಬಿಂಬವು ಸೂರ್ಯಾಂಶವಾಗಿದ್ದು ನೀರೆಂಬ ನಿಮಿತ್ತವು ಹೋಗಲಾಗಿ ಸೂರ್ಯನನ್ನೇ ಸೇರಿ ಹಿಂತಿರುಗದಿರುವದೋ, ಆ (ಸೂರ್ಯ)ರೂಪದಲ್ಲಿಯೇ ಬೆರೆತುಕೊಳ್ಳುವದೋ, ಅದರಂತೆಯೇ; ಅಥವಾ ಹೇಗೆ ಗಡಿಗೆಯೇ ಮುಂತಾದ ಉಪಾಧಿಯಿಂದ ಕಟ್ಟುವಡೆದಿರುವ ಘಟಾಕಾಶವೇ ಮುಂತಾದದ್ದು ಆಕಾಶದ ಅಂಶವಾಗಿದ್ದುಕೊಂಡು ಗಡಿಗೆಯೇ ಮುಂತಾದ ನಿಮಿತ್ತವು ಹೋಗಲು ಆಕಾಶವನ್ನು ಸೇರಿ ಹಿಂತಿರುಗದಿರುವದೋ (ಅದರಂತೆ ಪರಮಾತ್ಮನ ಅಂಶವಾಗಿರುವ ಜೀವನೂ ಆ ಪದವನ್ನು ಸೇರಿದ ಬಳಿಕ ಹಿಂತಿರುಗುವದಿಲ್ಲ).**[2] ಆದ್ದರಿಂದ "ಯಾವದನ್ನು ಸೇರಿದರೆ ಮರಳಿ ಬರುವದಿಲ್ಲವೋ" (೧೫–೬) ಎಂದು ಹೇಳಿದ್ದು ಯುಕ್ತವೇ ಆಗಿದೆ.

(ಭಾಷ್ಯ)

೩೬೧. ನನು ನಿರವಯವಸ್ಯ ಪರಮಾತ್ಮನಃ ಕುತೋಽವಯವಃ ಏಕದೇಶಃ, ಅಂಶಃ ಇತಿ? ಸಾವಯವತ್ವೇ ಚ ವಿನಾಶಪ್ರಸಙ್ಗಃ ಅವಯವವಿಭಾಗಾತ್ । ನೈಷ ದೋಷಃ । ಅವಿದ್ಯಾಕೃತೋಪಾಧಿಪರಿಚ್ಛಿನ್ನಃ ಏಕದೇಶಃ ಅಂಶ ಇವ ಕಲ್ಪಿತೋ ಯತಃ । ದರ್ಶಿತಶ್ಚ ಅಯಮರ್ಥಃ ಕ್ಷೇತ್ರಾಧ್ಯಾಯೇ ವಿಸ್ತರಶಃ । ಸ ಚ ಜೀವಃ ಮದಂಶತ್ವೇನ ಕಲ್ಪಿತಃ ಕಥಂ ಸಂಸರತಿ ಉತ್ಕ್ರಾಮತಿ ಚ ಇತಿ? ಉಚ್ಯತೇ । ಮನಃಷಷ್ಠಾನಿ ಇನ್ದ್ರಿಯಾಣಿ ಶ್ರೋತ್ರಾದೀನಿ ಪ್ರಕೃತಿಸ್ಥಾನಿ ಸ್ವಸ್ಥಾನೇ ಕರ್ಣಶಷ್ಕುಲ್ಯಾದೌ ಪ್ರಕೃತೌ ಸ್ಥಿತಾನಿ ಕರ್ಷತಿ ಆಕರ್ಷತಿ ॥

(ಭಾಷ್ಯಾರ್ಥ)

(ಆಕ್ಷೇಪ) :—ನಿರವಯವನಾಗಿರುವ ಪರಮಾತ್ಮನಿಗೆ ಅವಯವವು ಏಕದೇಶ

---

1. ಹಿಂತಿರುಗದಿರುವದು ಪರಮಾತ್ಮನ ಲೋಕವು, ಮತ್ತೆ ಮತ್ತೆ ಹುಟ್ಟಿಸಾಯುವದು ಜೀವಲೋಕವು.

2. ಸೂ. ಭಾ ೨-೩-೪೩, ೨-೩-೫೦ ನೋಡಿ. ಈಚಿನ ವೇದಾಂತಿಗಳು ಈ ದೃಷ್ಟಾಂತಗಳಿಂದ ಎರಡು ವಾದಗಳನ್ನೇ ಕಲ್ಪಿಸಿಕೊಂಡಿರುತ್ತಾರೆ. ಕ.ತ.ಪ. ೧-೧-೪, ಪು. ೧೫೫ ನೋಡಿ.

ರೂಪವಾದ ಅಂಶವು, ಎಲ್ಲಿಯದು? (ಅವನಿಗೆ) ಅವಯವಗಳಿರುವವಾದರೆ (ಆ) ಅವಯವಗಳು ವಿಂಗಡವಾಗಲು ನಾಶವಾಗಬೇಕಾಗುವದಲ್ಲ!

(ಪರಿಹಾರ):—ಇದೇನೂ ತಪ್ಪಲ್ಲ. ಏಕೆಂದರೆ ಅವಿದ್ಯೆಯಿಂದ ಆಗಿರುವ ಉಪಾಧಿಯ ಎಲ್ಲೆಕಟ್ಟುಳ್ಳ ಏಕದೇಶವನ್ನೇ ಅಂಶದಂತೆ ಕಲ್ಪಿಸಿರುತ್ತದೆ. ಈ ವಿಷಯವನ್ನು ಕ್ಷೇತ್ರಾಧ್ಯಾಯದಲ್ಲಿ ವಿಸ್ತಾರವಾಗಿ ತೋರಿಸಿಕೊಟ್ಟು ಇರುತ್ತದೆ.

ಮತ್ತು (ಹೀಗೆ) ನನ್ನ ಅಂಶವೆಂದು ಕಲ್ಪಿತನಾಗಿರುವ ಆ ಜೀವನು ಸಂಸಾರದಲ್ಲಿ (ತೊಳಲು)ವದು ಹೇಗೆ? (ದೇಹವನ್ನು ಬಿಟ್ಟು) ತೆರಳುವದು ಹೇಗೆ?–ಎಂಬುದನ್ನು ಹೇಳುತ್ತೇನೆ, (ಕೇಳು) ಪ್ರಕೃತಿಯಲ್ಲಿರುವ ತನ್ನ ಸ್ಥಾನವಾದ ಕಿವಿಯು ಪೊಳ್ಳೇ ಮುಂತಾದದ್ದೆಂಬ ಪ್ರಕೃತಿಯಲ್ಲಿ ಇರುವ ಶ್ರೋತ್ರವೇ ಮುಂತಾದ–ಮನಸ್ಸೆಂಬ ಆರನೆಯ (ಇಂದ್ರಿಯ) ದೊಡಗೂಡಿಸುವ–ಇಂದ್ರಿಯಗಳನ್ನು [1] ಸೆಳೆದುಕೊಳ್ಳುತ್ತಾನೆ, (ತನ್ನ ಕಡೆಗೆ) ಜಗ್ಗುತ್ತಾನೆ.

(ಭಾಷ್ಯ)

೩೭೨, ಕಸ್ಮಿನ್ ಕಾಲೇ?

(ಭಾಷ್ಯಾರ್ಥ)

ಯಾವ ಕಾಲದಲ್ಲಿ (ಸೆಳೆಯುತ್ತಾನೆ)? ಎಂದರೆ:—

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗನ್ಧಾನಿವಾಶಯಾತ್ ॥ ೮ ॥**

೮, (ಆ) ಈಶ್ವರನು ಶರೀರವನ್ನು ಯಾವಾಗ ಪಡೆದುಕೊಳ್ಳುವನೋ ಮತ್ತು ಯಾವಾಗ (ಶರೀರವನ್ನು ಬಿಟ್ಟು) ತೆರಳುವನೋ ಆಗ ಇವುಗಳನ್ನು, ವಾಯುವು ಗಂಧಗಳನ್ನು (ತಮ್ಮ) ಆಶ್ರಯದಿಂದ (ಒಯ್ಯು)ವಂತೆ ತೆಗೆದುಕೊಂಡು ಹೋಗುತ್ತಾನೆ.

(ಭಾಷ್ಯ)

೩೭೩. ಯಚ್ಚಾಪಿ ಯದಾ ಚಾಪಿ ಉತ್ಕ್ರಾಮತಿ ಈಶ್ವರಃ ದೇಹಾದಿಸಙ್ಘಾತಸ್ವಾಮೀ ಜೀವಃ ತದಾ ‘ಕರ್ಷತಿ’ ಇತಿ ಶ್ಲೋಕಸ್ಯ ದ್ವಿತೀಯಪಾದಃ ಅರ್ಥ

1. ಮನಸ್ಸು ಇಂದ್ರಿಯವೆಂಬ ಬಗ್ಗೆ ಭಾಷ್ಯಕಾರರ ಅಭಿಪ್ರಾಯವನ್ನು ಸೂ. ಭಾ. ೨-೪-೧೭ರಲ್ಲಿ ನೋಡಿ. ಈ ವಿಷಯಕ್ಕೆ ಈಚಿನ ವೇದಾಂತಿಗಳಲ್ಲಿ ವಿವಾದವುಂಟು.

**ವಶಾತ್ ಪ್ರಾಥಮ್ಯೇನ ಸಂಬಧ್ಯತೇ । ಯದಾ ಚ ಪೂರ್ವಸ್ಮಾತ್ ಶರೀರಾತ್ ಶರೀರಾನ್ತರಮ್ ಅವಾಪ್ನೋತಿ ತದಾ ಗೃಹೀತ್ವಾ ಏತಾನಿ ಮನಃಷಷ್ಠಾನಿ ಇನ್ದ್ರಿಯಾಣಿ ಸಂಯಾತಿ ಸಮ್ಯಕ್ ಯಾತಿ ಗಚ್ಛತಿ । ಕಿಮಿವ ಇತಿ ? ಆಹ–ವಾಯುಃ ಪವನಃ ಗನ್ಧಾನಿವ ಆಶಯಾತ್ ಪುಷ್ಪಾದೇಃ ॥**

(ಭಾಷ್ಯಾರ್ಥ)

ಈಶ್ವರನು, ದೇಹವೇ ಮುಂತಾದವುಗಳ ಸಂಘಾತದ ಒಡೆಯನಾದ ಜೀವನು[1] ಯಾವಾಗ (ದೇಹವನ್ನು ಬಿಟ್ಟು) ತೆರಳುವನೋ ಆಗ (ಇವುಗಳನ್ನು) 'ಸೆಳೆದುಕೊಳ್ಳುತ್ತಾನೆ' ಎಂದು ಅರ್ಥವಶದಿಂದ ಶ್ಲೋಕದ ಎರಡನೆಯ ಪಾದವನ್ನು ಮೊದಲು ಸಂಬಂಧಿಸಿಕೊಳ್ಳಬೇಕು. ಮತ್ತು ಯಾವಾಗ ಹಿಂದಿನ ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಹೊಂದುವನೋ ಆಗ ಮನಸ್ಸೆಂಬ ಆರನೆಯ (ಇಂದ್ರಿಯದಿಂ) ದೊಡಗೂಡಿದ ಈ ಇಂದ್ರಿಯಗಳನ್ನು ತೆಗೆದುಕೊಂಡು ಸಂಯಾತಿ ಚೆನ್ನಾಗಿ ಹೋಗುತ್ತಾನೆ (ಮುಂದಕ್ಕೆ) ನಡೆಯುತ್ತಾನೆ. ಏತರಂತೆ ? ಎಂದರೆ ಹೇಳುತ್ತಾನೆ: ವಾಯುವು ಗಾಳಿಯು ಆಶ್ರಯವಾದ ಹೂವೇ ಮುಂತಾದದ್ದರಿಂದ ವಾಸನೆಗಳನ್ನು (ಕೊಂಡೊಯ್ಯು)ವಂತೆ.

(ಭಾಷ್ಯ)

೩೬೪. **ಕಾನಿ ಪುನಸ್ತಾನಿ ಇತಿ ?**

(ಭಾಷ್ಯಾರ್ಥ)

ಆ (ಆರು ಇಂದ್ರಿಯ)ಗಳಾದರೂ ಯಾವವು ? ಎಂದರೆ :—

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥೯॥**

೯. ಶ್ರೋತ್ರ, ಚಕ್ಷುಸ್ಸು, ಸ್ಪರ್ಶನ, ರಸನೆ, ಘ್ರಾಣ, ಮತ್ತು ಮನಸ್ಸು–ಇವುಗಳಲ್ಲಿದ್ದುಕೊಂಡು ಇವನು ವಿಷಯಗಳನ್ನು ಉಪಸೇವಿಸುತ್ತಾನೆ.

---

1. ಇದು ಜೀವನ ಪ್ರಕರಣವಾದ್ದರಿಂದ ಹೀಗೆ ಅರ್ಥವನ್ನು ಮಾಡಿದೆ. ಜೀವನಿಗೆ ಉಪಾಧಿಗಳ ಮೂಲಕವೇ ಉತ್ಕ್ರಾಂತ್ಯಾದಿಗಳು, ಸ್ವತಃ ಇಲ್ಲ. ಸೂಂ. ಶಾ. ಭಾ. ೩-೯ ನ್ನು ನೋಡಿ.

(ಭಾಷ್ಯ)

೩೬೫. ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ತ್ವಗಿನ್ದ್ರಿಯಂ ರಸನಂ ಘ್ರಾಣಮೇವ ಚ ಮನಶ್ಚ ಷಷ್ಠಂ ಪ್ರತ್ಯೇಕಮ್ ಇನ್ದ್ರಿಯೇಣ ಸಹ ಅಧಿಷ್ಠಾಯ ದೇಹಸ್ಥಃ ವಿಷಯಾನ್ ಶಬ್ದಾದೀನ್ ಉಪಸೇವತೇ ||

(ಭಾಷ್ಯಾರ್ಥ)

ಶ್ರೋತ್ರೇಂದ್ರಿಯ, ಚಕ್ಷುರಿಂದ್ರಿಯ, ಸ್ಪರ್ಶನೇಂದ್ರಿಯ ಎಂದರೆ ತ್ವಗಿಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ–ಈ ರೀತಿಯಲ್ಲಿ ಒಂದೊಂದು ಇಂದ್ರಿಯವನ್ನೂ ಆರನೆಯದಾದ ಮನಸ್ಸನ್ನೂ ಆಶ್ರಯಿಸಿಕೊಂಡು [1] (ಇವನು) ದೇಹದಲ್ಲಿದ್ದುಕೊಂಡು [2] ಶಬ್ದವೇ ಮುಂತಾದ ವಿಷಯಗಳನ್ನು ಉಪಸೇವಿಸುತ್ತಿರುತ್ತಾನೆ.

(ಭಾಷ್ಯ)

೩೬೬. ಏವಂ ದೇಹಗತಃ, ದೇಹಾತ್—

(ಭಾಷ್ಯಾರ್ಥ)

ಹೀಗೆ ದೇಹದಲ್ಲಿದ್ದು, ದೇಹವನ್ನು ಬಿಟ್ಟು : —

**ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಞ್ಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥೧೦॥**

೧೦. ಉತ್ಕ್ರಮಿಸುವ ಅಥವಾ ಇದ್ದುಕೊಂಡಿರುವ ಅಥವಾ ಗುಣಗಳಿಂದ ಕೂಡಿ ಭೋಗಿಸುತ್ತಿರುವ (ಇವನನ್ನು) ವಿಮೂಢರು ಕಾಣಲಾರದೆ ಇರುವರು, ಜ್ಞಾನಚಕ್ಷುಗಳಾದವರು ಕಾಣುತ್ತಾರೆ.

(ಭಾಷ್ಯ)

೩೬೭. ಉತ್ಕ್ರಾಮನ್ತಂ ದೇಹಂ ಪೂರ್ವೋಪಾತ್ತಂ ಪರಿತ್ಯಜನ್ತಂ ಸ್ಥಿತಂ ವಾಪಿ ದೇಹೇ ತಿಷ್ಠನ್ತಂ ಭುಞ್ಜಾನಂ ಶಬ್ದಾದೀಂಶ್ಚ ಉಪಲಭಮಾನಂ ಗುಣಾನ್ವಿತಂ ಸುಖದುಃಖಮೋಹಾಖ್ಯೈಃ [3] ಗುಣೈಃ ಅನ್ವಿತಮ್ ಅನುಗತಂ ಸಂಯುಕ್ತಮ್

---

1. ಇಂದ್ರಿಯಗಳಮೂಲಕವಾಗಿ ಭೋಕ್ತನೇ ಹೊರತು ಸ್ವರೂಪದಿಂದ ಭೋಕ್ತನಲ್ಲ ಎಂದು ಭಾವ, ಛಾಂ ಭಾ. ೮-೧೨-೪, ಇನ್ನು ನೋಡಿ.

2. ದೇಹದಲ್ಲಿರುವದೆಂದರೆ ತಾನು ದೇಹಿ ಎಂಬ ಅಭಿಮಾನವನ್ನು ತಳೆದಿರುವದೇ.

3. 'ಮೋಹಾದ್ಯೈಃ' ಎಂಬ ಅ|| ಪಾಠಕ್ಕಿಂತ ಇದು ಮೇಲು.

ಇತ್ಯರ್ಥಃ । ಏವಂಭೂತಮಪಿ ಏನಂ ಅತ್ಯನ್ತದರ್ಶನಗೋಚರಪ್ರಾಪ್ತಂ ವಿಮೂಢಾಃ ದೃಷ್ಟಾದೃಷ್ಟವಿಷಯಭೋಗಬಲಾಕೃಷ್ಟಚೇತಸ್ತಯಾ ಅನೇಕಧಾ ಮೂಢಾಃ ನಾನುಪಶ್ಯನ್ತಿ । 'ಅಹೋ ಕಷ್ಟಂ ವರ್ತತೇ' ಇತಿ ಅನುಕ್ರೋಶತಿ ಚ ಭಗವಾನ್ । ಯೇ ತು ಪುನಃ ಪ್ರಮಾಣಜನಿತಜ್ಞಾನಚಕ್ಷುಷಃ ತೇ ಏನಂ ಪಶ್ಯನ್ತಿ ಜ್ಞಾನಚಕ್ಷುಷಃ ವಿವಿಕ್ತದೃಷ್ಟಯಃ ಇತ್ಯರ್ಥಃ ॥

(ಭಾಷ್ಯಾರ್ಥ)

ಉತ್ಕ್ರಮಿಸುವ ಹಿಂದೆ ಸಂಪಾದಿಸಿದ್ದ ದೇಹವನ್ನು ಬಿಟ್ಟುಬಿಡುತ್ತಿರುವ, ಅಥವಾ ಇದ್ದುಕೊಂಡಿರುವ ದೇಹದಲ್ಲಿದ್ದುಕೊಂಡಿರುವ, ಗುಣಗಳಿಂದೊಡಗೂಡಿ ಸುಖ, ದುಃಖ, ಮೋಹ-ಎಂಬ ಗುಣಗಳಿಂದೊಡಗೂಡಿ. (ಅವುಗಳಿಂದ) ಹಿಂಬಾಲಿಸಲ್ಪಟ್ಟು, (ಅವುಗಳೊಡನೆ) ಬೆರೆತುಕೊಂಡಿರುವ ಎಂದರ್ಥ. (ಹೀಗೆ) ಭೋಗಿಸುತ್ತಿರುವ ಎಂದರೆ ಶಬ್ದಾದಿಗಳನ್ನು ಅನುಭವಿಸುತ್ತಿರುವ ಇಂಥ ಅತ್ಯಂತವಾಗಿ ದರ್ಶನಗೋಚರತ್ವವನ್ನು ಪಡೆದಿರುವನಾದರೂ ಈ (ಆತ್ಮನನ್ನು) ವಿಮೂಢರು, ಕಂಡ (ಈ ಲೋಕದ) ಮತ್ತು ಕಾಣದ (ಪರಲೋಕದ) ವಿಷಯಭೋಗದಿಂದ ಬಲವಾಗಿ ಸೆಳೆಯಲ್ಪಟ್ಟ ಚಿತ್ತವುಳ್ಳವರಾಗಿರುವದರಿಂದ ಬಲು ಬಗೆಯಿಂದ ಮೂಢರಾದ ಜನರು ಕಾಣದೆ ಇರುವರಲ್ಲ[1]! ಅಯ್ಯೊ, ಎಂಥ ಕಷ್ಟಸ್ಥಿತಿಯಾಗಿದೆ!-ಎಂದು ಭಗವಂತನು ಕನಿಕರಪಡುತ್ತಿದಾನೆ. ಆದರೆ ಯಾರು (ಹೀಗಲ್ಲದೆ) ಪ್ರಮಾಣದಿಂದುಂಟಾದ ಜ್ಞಾನಚಕ್ಷುವುಳ್ಳವರೋ ಶುದ್ಧವಾದ ದೃಷ್ಟಿಯುಳ್ಳವರೋ ಅವರು ಈತನನ್ನು ಕಾಣುತ್ತಾರೆ ಎಂದರ್ಥ.

**ಯತನ್ತೋ ಯೋಗಿನಶ್ಚೈನಂ ಪಶ್ಯನ್ತ್ಯಾತ್ಮನ್ಯವಸ್ಥಿತಮ್ ।**
**ಯತನ್ತೋಽಪ್ಯಕೃತಾತ್ಮಾನೋ ನೈನಂ ಪಶ್ಯನ್ತ್ಯಚೇತಸಃ ॥ ೧೧ ॥**

೧೧. ಯತ್ನಮಾಡುವ ಯೋಗಿಗಳು ಈತನು ತಮ್ಮಲ್ಲಿರುವನೆಂದು ಕಂಡುಕೊಳ್ಳುವರು. ಅಕೃತಾತ್ಮರಾದವರು ಪ್ರಯತ್ನಮಾಡಿದರೂ ಅಚೇತಸರಾಗಿರುವದರಿಂದ ಇವನನ್ನು ಕಾಣದೆ ಇರುವದು.

---

1. ಯಾವ ಚೈತನ್ಯಸ್ವರೂಪದಲ್ಲಿ ಈ ಉತ್ಕ್ರಾಂತ್ಯಾದಿಗಳು ಕಲ್ಪಿತವಾಗಿರುವವೋ ಯಾವ ಆತ್ಮನಿಗಾಗಿ ಶರೀರಾದಿಸಂಘಾತವು ಕೆಲಸಮಾಡುತ್ತಿರುವದೋ ಆ ಅಸಂಗನಾದ ಅಸಂಹತನಾದ ಆತ್ಮನನ್ನು ಈ ಮೂಲಕವಾಗಿಯಾದರೂ ಅರಿತುಕೊಳ್ಳದೆ ಇರುವರಲ್ಲ, ಏನಾಶ್ಚರ್ಯ!-ಎಂದು ಭಾವ. ಕೌ. ೪-೮.

(ಭಾಷ್ಯ)

೩೬೮. ಕೇಚಿತ್ತು[1] ಯತನ್ತಃ ಪ್ರಯತ್ನಂ ಕುರ್ವನ್ತಃ ಯೋಗಿನಶ್ಚ ಸಮಾಹಿತಚಿತ್ತಾ ಏನಂ ಪ್ರಕೃತಮ್ ಆತ್ಮಾನಂ ಪಶ್ಯನ್ತಿ 'ಅಯಮ್ ಅಹಮಸ್ಮಿ' ಇತಿ ಉಪಲಭನ್ತೇ । ಆತ್ಮನಿ ಸ್ವಸ್ಯಾಂ ಬುದ್ಧೌ ಅವಸ್ಥಿತಮ್ । ಯತನ್ತೋಽಪಿ ಶಾಸ್ತ್ರಾದಿಪ್ರಮಾಣೈಃ ಅಕೃತಾತ್ಮಾನಃ ಅಸಂಸ್ಕೃತಾತ್ಮಾನಃ ತಪಸಾ ಇನ್ದ್ರಿಯಜಯೇನ ಚ ದುಶ್ಚರಿತಾತ್ ಅನುಪರತಾಃ ಅಶಾನ್ತದರ್ಪಾಃ[2] ಪ್ರಯತ್ನಂ ಕುರ್ವನ್ತೋಽಪಿ ನೈನಂ ಪಶ್ಯನ್ತಿ ಅಚೇತಸಃ ಅವಿವೇಕಿನಃ ॥

(ಭಾಷ್ಯಾರ್ಥ)

ಆದರೆ ಯತ್ನಮಾಡುವ ಪ್ರಯತ್ನವನ್ನು ಮಾಡುವ ಕೆಲವರು ಯೋಗಿಗಳು ಚಿತ್ತವನ್ನು ಸಮಾಧಾನವಾಗಿಟ್ಟುಕೊಂಡವರು ಈ ಪ್ರಕೃತನಾದ ಆತ್ಮನನ್ನು 'ಇವನೇ ನಾನು' ಎಂದು[3] ತಮ್ಮಲ್ಲಿ ಎಂದರೆ ತಮ್ಮ ಬುದ್ಧಿಯಲ್ಲಿ ಇರುವನೆಂದು ಕಂಡುಕೊಳ್ಳುತ್ತಾರೆ, ಅರಿತುಕೊಳ್ಳುತ್ತಾರೆ. ಯತ್ನಮಾಡಿದರೂ ಶಾಸ್ತ್ರವೇ ಮುಂತಾದ ಪ್ರಮಾಣಗಳಿಂದ[4] ಅಕೃತಾತ್ಮರಾದವರು ತಪಸ್ಸಿನಿಂದಲೂ ಇಂದ್ರಿಯಜಯದಿಂದಲೂ ಅಂತಃಕರಣಸಂಸ್ಕಾರವನ್ನು ಹೊಂದದವರು, ಕೆಟ್ಟ ನಡತೆಯನ್ನು ಬಿಡದೆ[5] ಗರ್ವವನ್ನಳಿದು ಶಾಂತರಾಗದೆ ಇರುವವರು, ಪ್ರಯತ್ನವನ್ನು ಮಾಡಿದರೂ ಅಚೇತಸರಾದ್ದರಿಂದ ತಿಳಿಗೇಡಿಗಳಾದ್ದರಿಂದ ಈತನನ್ನು ಕಾಣದೆ ಇರುವರು.

## ಪರಮಾತ್ಮನ ವಿಭೂತಿಸಂಕ್ಷೇಪ

(ಭಾಷ್ಯ)

೩೬೯. ಯತ್ ಪದಂ ಸರ್ವಸ್ಯಾವಭಾಸಕಮಪಿ ಆದಿತ್ಯಾದಿಕಂ[1] ಜ್ಯೋತಿ

---

1. ಈ ಮಾತು ಆ॥ನಿ॥ವಾ॥ಗಳಲ್ಲಿಲ್ಲ ; ಇಲ್ಲದಿದ್ದರೂ ಸಾಗುತ್ತದೆ.
2. 'ಅಶಾನ್ತದರ್ಪಾತ್ಮಾನಃ' ಪು॥ ಗು॥
3. ಸಾಕ್ಷಾತ್ಕಾರರೂಪವಾಗಿ ಎಂದರ್ಥ.
4. ಪ್ರಮಾಣವೆಂದರೆ ಸಾಧನವು ; ಶಾಸ್ತ್ರಾಚಾರ್ಯರಿಂದ ಶ್ರವಣ, ಯುಕ್ತಿಯಿಂದ ಮನನ ಮುಂತಾದದ್ದು.
5. ಕ. ೧-೨-೨೪ ರ ಸೂಚನೆ. ನಿತ್ಯಾನಿತ್ಯವಿವೇಕವೇ ಮುಂತಾದ ಸಾಧನಗಳಿಂದೊಡಗೂಡಿದವರಿಗೇ ಪರಮಾರ್ಥದ ಜ್ಞಾನವಾಗುವದು. ವ್ಯವಹಾರದಲ್ಲಿ ಜೀವನೆಂದು ತೋರುತ್ತಿದ್ದರೂ ಪರಮಾರ್ಥವಾಗಿ ಪರಮಾತ್ಮಸ್ವರೂಪನೇ ಎಂದು ತಿಳಿಯುವದಕ್ಕೆ ಸಾಧನಸಂಪತ್ತಿಯು ಅವಶ್ಯ.

ರ್ಸಾವಭಾಸಯುತೇ, ಯತ್ ಪ್ರಾಪ್ತಾಶ್ಚ ಮುಮುಕ್ಷವಃ ಪುನಃ ಸಂಸಾರಾಭಿಮುಖಾ ನ ನಿವರ್ತನ್ತೇ । ಯಸ್ಯ ಚ ಪದಸ್ಯ ಉಪಾಧಿಭೇದಮನುವಿಧೀಯಮಾನಾ ಜೀವಾಃ–ಘಟಾಕಾಶಾದಯ ಇವ ಆಕಾಶಸ್ಯ–ಅಂಶಾಃ, ತಸ್ಯ ಪದಸ್ಯ ಸರ್ವಾತ್ಮತ್ವಂ ಸರ್ವವ್ಯವಹಾರಾಸ್ಪದತ್ವಂ ಚ ವಿವಕ್ಷುಃ ಚತುರ್ಭಿಃ ಶ್ಲೋಕೈರ್ವಿಭೂತಿ ಸಙ್ಕ್ಷೇಪಮ್ ಆಹ ಭಗವಾನ್—

(ಭಾಷ್ಯಾರ್ಥ)

ಎಲ್ಲವನ್ನೂ ಬೆಳಗುವದಾದರೂ ಆದಿತ್ಯನೇ ಮುಂತಾದ ಬೆಳಕು ಯಾವ ಸ್ಥಾನವನ್ನು ಬೆಳಗಿ ತೋರಿಸಲಾರದೋ, ಯಾವದನ್ನು ಪಡೆದ ಮುಮುಕ್ಷುಗಳು ಮತ್ತೆ ಸಂಸಾರದಕಡೆಗೆ ಹಿಂತಿರುಗಿಬರುವದಿಲ್ಲವೋ, ಮತ್ತು ಯಾವ ಸ್ಥಾನಕ್ಕೆ ಆಯಾ ಉಪಾಧಿಯನ್ನನುಸರಿಸಿ (ತೋರುತ್ತಿರುವ) ಜೀವರುಗಳು ಆಕಾಶಕ್ಕೆ ಘಟಾಕಾಶವೇ ಮುಂತಾದವು (ಅಂಶವಾಗಿರು) ವಂತೆ ಅಂಶವಾಗಿರುವವೋ, ಆ ಪದವು ಸರ್ವಾತ್ಮವಾಗಿರುವದೆಂಬುದನ್ನು ಸರ್ವವ್ಯವಹಾರಕ್ಕೂ ಆಸ್ಪದವಾಗಿರುವದೆಂಬುದನ್ನು ತಿಳಿಸಿಕೊಡಲಿಚ್ಛಿಸಿ ಭಗವಂತನು ನಾಲ್ಕು ಶ್ಲೋಕಗಳಿಂದ ಸಂಗ್ರಹವಾಗಿ[2] ವಿಭೂತಿಯನ್ನು ಹೇಳುತ್ತಾನೆ :—

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥೧೨॥**

೧೨. ಆದಿತ್ಯನಲ್ಲಿರುವ ಯಾವ ತೇಜಸ್ಸು ಜಗತ್ತೆಲ್ಲವನ್ನೂ ಬೆಳಗುತ್ತಿರುವದೋ, ಯಾವದು ಚಂದ್ರನಲ್ಲಿಯೂ ಮತ್ತು ಯಾವದು ಅಗ್ನಿಯಲ್ಲಿಯೂ (ಇರುವದೋ), ಆ ತೇಜಸ್ಸನ್ನು ನನ್ನದೆಂದು ತಿಳಿ.

(ಭಾಷ್ಯ)

೩೭೦. ಯತ್ ಆದಿತ್ಯಗತಮ್ ಆದಿತ್ಯಾಶ್ರಯಮ್ । ಕಿಂ ತತ್ ? ತೇಜಃ ದೀಪ್ತಿಃ ಪ್ರಕಾಶಃ ಜಗತ್ ಭಾಸಯತೇ ಪ್ರಕಾಶಯತಿ ಅಖಿಲಮ್ ಸಮಸ್ತಮ್ ।

---

1. ‘ಅಗ್ನ್ಯಾದಿತ್ಯಾದಿಕಂ’ ಎಂಬ ಆ॥ನಿ॥ಗು॥ಮು॥ ಪಾಠಕ್ಕಿಂತ ‘ಆದಿತ್ಯಾದಿಕಂ’ ಎಂಬ ಮು॥ಮ್ಯೆ॥ ಪಾಠವೇ ಮೇಲು.

2. ಹಿಂದೆ ೭, ೧೦ ಈ ಅಧ್ಯಾಯಗಳಲ್ಲಿ ವಿಸ್ತಾರವಾಗಿ ವಿಭೂತಿಯನ್ನು ಹೇಳಿದ್ದಾಗಿದೆ.

ಯತ್ ಚನ್ದ್ರಮಸಿ ಶಶಭೃತಿ[1] ತೇಜಃ ಅವಭಾಸಕಂ ವರ್ತತೇ । ಯಚ್ಚ ಅಗ್ನೌ ಹುತವಹೇ । ತತ್ ತೇಜಃ ವಿದ್ಧಿ ವಿಜಾನೀಹಿ ಮಾಮಕಂ ಮದೀಯಮ್ । ಮಮ ವಿಷ್ಣೋಃ ತತ್ ಜ್ಯೋತಿಃ । ಅಥವಾ ಯತ್[2] ಆದಿತ್ಯಗತಂ ತೇಜಃ ಚೈತನ್ಯಾತ್ಮಕಂ ಜ್ಯೋತಿಃ ಯತ್ ಚನ್ದ್ರಮಸಿ ಯಚ್ಚ ಅಗ್ನೌ ವರ್ತತೇ ತತ್ ತೇಜಃ ವಿದ್ಧಿ ಮಾಮಕಂ ಮದೀಯಮ್ । ಮಮ ವಿಷ್ಣೋಃ ತತ್ ಜ್ಯೋತಿಃ ॥

(ಭಾಷ್ಯಾರ್ಥ)

ಯಾವದು ಆದಿತ್ಯಗತವೋ, ಆದಿತ್ಯನನ್ನು ಆಶ್ರಯಿಸಿ-ಅದು ಯಾವದು ? ಎಂದರೆ ತೇಜಸ್ಸು, ಉರಿಯು, ಬೆಳಕು. (ಯಾವ ತೇಜಸ್ಸು)-ಜಗತ್ತೆಲ್ಲವನ್ನೂ ಸಮಸ್ತ ಜಗತ್ತನ್ನೂ, ತೋರಿಸುತ್ತಿರುವದೋ ಬೆಳಗುತ್ತಿರುವದೋ ; ಯಾವ ತೇಜಸ್ಸು ಚಂದ್ರನಲ್ಲಿ ಶಶಾಂಕನಲ್ಲಿ ಪ್ರಕಾಶಕವಾಗಿರುವದೋ ; ಮತ್ತು ಅಗ್ನಿಯಲ್ಲಿ ಹೋಮಮಾಡಿದ್ದನ್ನು ಒಯ್ಯುವ (ಅಗ್ನಿಯಲ್ಲಿ) ಯಾವ (ತೇಜಸ್ಸು ಇರುವದೋ), ಆ ತೇಜಸ್ಸು ನನ್ನದು ನನ್ನ ಸಂಬಂಧವಾದದ್ದು-ಎಂದು ತಿಳಿ, ಆ ಜ್ಯೋತಿಯು ವಿಷ್ಣುವಾದ ನನ್ನದು.

ಅಥವಾ ಆದಿತ್ಯನಲ್ಲಿ ಯಾವ ತೇಜಸ್ಸು ಚೈತನ್ಯರೂಪವಾದ ಬೆಳಕು ಇರುವದೋ, ಆ ತೇಜಸ್ಸು ನನ್ನದು, ನನ್ನ ಸಂಬಂಧವಾದದ್ದು ಎಂದು ತಿಳಿ. ಆ ಜ್ಯೋತಿಯು ವಿಷ್ಣುವಾದ ನನ್ನದು.

(ಭಾಷ್ಯ)

೩೭೧. ನನು ಸ್ಥಾವರೇಷು ಜಙ್ಗಮೇಷು ಚ ತತ್ ಸಮಾನಂ ಚೈತನ್ಯಾತ್ಮಕಂ ಜ್ಯೋತಿಃ । ತತ್ರ ಕಥಮ್ ಇದಂ ವಿಶೇಷಣಮ್ 'ಯದಾದಿತ್ಯಗತಮ್' ಇತ್ಯಾದಿ ? ನೈಷ ದೋಷಃ। ಸತ್ತ್ವಾಧಿಕ್ಯಾತ್ ಆವಿಸ್ತರತ್ವೋಪಪತ್ತೇಃ[3]। ಆದಿತ್ಯಾದಿಷು ಹಿ ಸತ್ತ್ವಮ್ ಅತ್ಯನ್ತಪ್ರಕಾಶಮ್ ಅತ್ಯನ್ತಭಾಸ್ವರಮ್ । ಅತಃ ತತ್ರೈವ ಆವಿಸ್ತರಂ ಜ್ಯೋತಿಃ ಇತಿ ತತ್ ವಿಶಿಷ್ಯತೇ । ನ ತು ತತ್ರೈವ ತತ್ ಅಧಿಕಮ್ ಇತಿ । ಯಥಾ ಹಿ ಲೋಕೇ ತುಲ್ಯೇಽಪಿ ಮುಖಸಂಸ್ಥಾನೇ ನ ಕಾಷ್ಠಕುಡ್ಯಾದೌ ಮುಖಮ್ ಆವಿರ್ಭವತಿ । ಆದರ್ಶಾದೌ ತು ಸ್ವಚ್ಛೇ ಸ್ವಚ್ಛತರೇ ಚ ತಾರತಮ್ಯೇನ ಆವಿರ್ಭವತಿ ತದ್ವತ್ ॥

---

1. 'ಶಶಿನಿ' ಮು॥
2. ಈ ಮಾತು ಅಚ್ಚಿನ ಪುಸ್ತಕಗಳಲ್ಲಿಲ್ಲ.
3. 'ಆಧಿಕ್ಯೋಪಪತ್ತೇಃ' ಎಂಬ ನಿ॥ ಪಾಠವು ಸರಿಯಲ್ಲ.

(ಭಾಷ್ಯಾರ್ಥ)

(ಆಕ್ಷೇಪ) :—ಸ್ಥಾವರಗಳಲ್ಲಿಯೂ ಜಂಗಮಗಳಲ್ಲಿಯೂ ಆ ಚೈತನ್ಯರೂಪವಾದ ಬೆಳಕು ಸಮಾನವೇ ಅಲ್ಲವೆ? ಹೀಗಿರುವಲ್ಲಿ ಆದಿತ್ಯನಲ್ಲಿರುವ (ಬೆಳಕು ಮುಂತಾದದ್ದು ಮಾತ್ರ ನನ್ನದು) ಎಂದು ಮುಂತಾಗಿ (ಹೇಳಿರುವ) ಈ ವಿಶೇಷಣವು ಹೇಗೆ (ಸರಿ) ?

(ಪರಿಹಾರ) !—ಇದೇನೂ ತಪ್ಪಲ್ಲ. ಏಕೆಂದರೆ ಸತ್ತ್ವವು ಹೆಚ್ಚಾಗಿರುವದರಿಂದ (ಅಲ್ಲಿ) ಹೆಚ್ಚು ಪ್ರಕಟವಾಗಿದೆ ಎಂಬುದು ಹೊಂದುತ್ತದೆ. ಹೇಗೆಂದರೆ ಆದಿತ್ಯಾದಿಗಳಲ್ಲಿ ಸತ್ತ್ವವು ಅತ್ಯಂತ ಪ್ರಕಾಶವಾಗಿ ಅತ್ಯಂತವಾಗಿ ಹೊಳೆಯುತ್ತಿರುತ್ತದೆ. ಆದ್ದರಿಂದ ಆ ಜ್ಯೋತಿಯು ಅಲ್ಲಿಯೇ ಹೆಚ್ಚಾಗಿ ಪ್ರಕಟವಾಗಿರುತ್ತದೆಯಾಗಿ ಅದನ್ನು (ನನ್ನದು ಎಂದು) ವಿಶೇಷಣವನ್ನು ಕೊಟ್ಟು (ಹೇಳಿದೆ)ಯೇ ಹೊರತು ಅಲ್ಲಿಯೇ ಅದು ಅಧಿಕವಾಗಿದೆ ಎಂಬ (ಅಭಿಪ್ರಾಯ)ದಿಂದಲ್ಲ.[1] ಹೇಗೆ ಲೋಕದಲ್ಲಿ ಮುಖದ ರೂಪವು ಒಂದೇ ಸಮನಾಗಿರುತ್ತಿದ್ದರೂ ಕಟ್ಟಿಗೆ ಗೋಡೆ ಮುಂತಾದದ್ದರಲ್ಲಿ ಮುಖವು ಮೂಡುವದಿಲ್ಲವೋ, ಆದರೆ ಸ್ವಚ್ಛವಾದ ಕನ್ನಡಿ ಮುಂತಾದದ್ದರಲ್ಲಿ (ಸ್ವಲ್ಪಮಟ್ಟಿಗೆ) ಇನ್ನೂ ಸ್ವಚ್ಛವಾಗಿರುವದರಲ್ಲಿ (ಇನ್ನಷ್ಟು-ಹೀಗೆ) ಹೆಚ್ಚು ಕಡಿಮೆಯಾಗಿ ಮೂಡುತ್ತದೆಯೋ ಆದರಂತೆ(ಯೇ ಇದನ್ನು ತಿಳಿಯಬೇಕು).

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥**

೧೩. ನಾನು ಭೂಮಿಯನ್ನು ಒಳಹೊಕ್ಕು ಪ್ರಾಣಿಗಳನ್ನು ಓಜಸ್ಸಿನಿಂದ ಹಿಡಿದುಕೊಂಡಿರುತ್ತೇನೆ. ಮತ್ತು ರಸಾತ್ಮಕನಾದ ಸೋಮನಾಗಿ ಸಕಲ ಔಷಧಿಗಳನ್ನೂ ಪೋಷಿಸುತ್ತೇನೆ.

(ಭಾಷ್ಯ)

೩೭೨. ಕಿಂ ಚ ಗಾಂ ಪೃಥಿವೀಮ್ ಆವಿಶ್ಯ ಪ್ರವಿಶ್ಯ ಚ[2] ಧಾರಯಾಮಿ

---

1. ಈಶ್ವರಚೈತನ್ಯವು ಸ್ವರೂಪದಿಂದ ಸಮಾನವಾದರೂ ಉಪಾಧಿವಿಶೇಷದ ತಾರತಮ್ಯದಿಂದ ಹೆಚ್ಚುಕಡಿಮೆಯಾಗಿ ಪ್ರಕಟವಾಗುತ್ತದೆ. ಸೂ. ಭಾ ೧-೧-೧೨ ರ ಅವತರಣಿಕೆಯನ್ನು ನೋಡಿ.

2. ಮ|| ಹೊರತು ಉಳಿದವುಗಳಲ್ಲಿ ಚ ಬಿಟ್ಟುಹೋಗಿದೆ.

ಭೂತಾನಿ [1] ಜಗತ್ ಅಹಮ್ ಓಜಸಾ ಬಲೇನ ಯದ್ ಬಲಂ ಕಾಮರಾಗವಿವರ್ಜಿತಮ್ ಐಶ್ವರಂ ರೂಪಂ [2] ಜಗದ್ವಿಧಾರಣಾಯ ಪೃಥಿವ್ಯಾಮ್ ಆವಿಷ್ಟಂ [3] ಯೇನ ಗುರ್ವೀ ಪೃಥಿವೀ ನಾಧಃ ಪತತಿ ನ ವಿದೀರ್ಯತೇ ಚ । ತಥಾ ಚ ಮನ್ತ್ರವರ್ಣಃ "ಯೇನ ದ್ಯೌರುಗ್ರಾ ಪೃಥಿವೀ ಚ ದೃಢಾ" (ತೈ. ಸಂ. ೪-೧-೮) ಇತಿ, "ಸ ದಾಧಾರ ಪೃಥಿವೀಮ್ [4]" (ತೈ.ಸಂ. ೪-೧-೮) ಇತ್ಯಾದಿಶ್ಚ । ಅತಃ ಗಾಮಾವಿಶ್ಯ ಚ ಭೂತಾನಿ ಚರಾಚರಾಣಿ ಧಾರಯಾಮಿ ಇತಿ ಯುಕ್ತಮುಕ್ತಮ್ [5] । ಕಿಂಚ ಪೃಥಿವ್ಯಾಂ ಜಾತಾಃ ಓಷಧೀಃ ಸರ್ವಾಃ ವ್ರೀಹಿಯವಾದ್ಯಾಃ ಪುಷ್ಣಾಮಿ ಪುಷ್ಟಿಮತೀಃ ರಸಸ್ವಾದುಮತೀಶ್ಚ [6] ಕರೋಮಿ ಸೋಮೋ ಭೂತ್ವಾ ರಸಾತ್ಮಕಃ ಸೋಮಃ ಸನ್ ರಸಾತ್ಮಕಃ [7] ರಸಸ್ವಭಾವಃ । ಸರ್ವರಸಾನಾಮ್ ಆಕರಃ ಸೋಮಃ । ಸ ಹಿ ಸರ್ವಾ ಓಷಧೀಃ ಸ್ವಾತ್ಮರಸಾನ್ ಅನುಪ್ರವೇಶಯನ್ [8] ಪುಷ್ಣಾತಿ ॥

(ಭಾಷ್ಯಾರ್ಥ)

ಮತ್ತು ಗೋವನ್ನು (ಎಂದರೆ ಇಲ್ಲಿ) ಭೂಮಿಯನ್ನು ಆವಿಶ್ಯ ಎಂದರೆ ಒಳಹೊಕ್ಕು ನಾನು ಓಜಸ್ಸಿನಿಂದ ಬಲದಿಂದ ಭೂತಗಳನ್ನು ಜಗತ್ತನ್ನು ಧರಿಸಿರುವೆನು. ಈ ಬಲವು ಕಾಮರಾಗಗಳಿಲ್ಲದ್ದಾಗಿ [9] ಈಶ್ವರನ ರೂಪವಾದ ಜಗತ್ತನ್ನೇ ಧರಿಸುವದಕ್ಕಾಗಿ ಪೃಥ್ವಿಯನ್ನು ಒಳಹೊಕ್ಕಿರುತ್ತದೆ. ಆದ್ದರಿಂದಲೇ ತೂಕವಾಗಿರುವ ಭೂಮಿಯು ಕೆಳಗೆ ಬೀಳದೆ ಇವೆ, ಒಡೆದುಕೊಂಡು ಹೋಗದೆಯೂ ಇದೆ. ಆದ್ದರಿಂದಲೇ ಯಾವ

---

1. 'ಭೂತಾನಿ ಧಾರಯಾಮಿ' ಎಂಬ ಮೂಲದ ಅನುಕ್ರಮವನ್ನು ಇಲ್ಲಿ ವ್ಯತ್ಯಾಸ ಮಾಡಿರುವದೇಕೋ ತಿಳಿಯದು. ಭಾಷ್ಯಕಾರರು ಮೂಲದ ಅನುಕ್ರಮವನ್ನನುಸರಿಸುವದೇ ಬಹಳ.

2. ಸಿ॥ ಗು॥ ಗಳಲ್ಲಿ 'ಪ್ರವಿಷ್ಟಂ' ಎಂದಿದೆ.

3. ನಿ॥ ಪಾಠದಲ್ಲಿಲ್ಲ.

4. 'ಪೃಥಿವೀ ಮುತ ದ್ಯಾಮ್' ಎಂದು ಮು॥

5. 'ಇತಿ ಯುಕ್ತಮುಕ್ತಮ್' ಎಂಬ ಮಾತುಗಳು ಮು॥ ವ್ಯೈ॥ ಗಳಲ್ಲಿಲ್ಲ.

6. 'ಸ್ವಾದುಮತೀಶ್ಚ' ಎಂದಿಷ್ಟೇ ಮು॥ ವ್ಯೈ॥

7. 'ಸೋಮಃ ಸರ್ವರಸಾತ್ಮಕಃ' ನಿ॥ ಗು॥

8. "ಸಹಿ ಸರ್ವರಸಾತ್ಮಕಃ ಸರ್ವಾ ಓಷಧೀಃ ಸ್ವಾತ್ಮರಸಾನನು ಪ್ರವೇಶಯನ್" ಮು॥ ವ್ಯೈ॥ ಗು॥ ; 'ಸ್ವಾತ್ಮರಸಾನುಪ್ರವೇಶೇನ' ಎಂದು ನಿ॥ ವಾ॥

9. ೭-೧೧ ರ ಭಾಷ್ಯವನ್ನು ನೋಡಿ.

ಅಂತರಿಕ್ಷವು ಉಗ್ರವಾಗಿರುತ್ತದೆಯೋ ಪೃಥ್ವಿಯೂ ಗಟ್ಟಿಯಾಗಿರುತ್ತದೆಯೋ (ತೈ. ಸಂ. ೩-೧-೮), "ಆತನೇ ಪೃಥ್ವಿಯನ್ನೂ (ಅಂತರಿಕ್ಷವನ್ನೂ) ಎತ್ತಿಹಿಡಿದಿರುವನು" (ತೈ. ಸಂ. ೪-೧-೮) ಎಂದು ಮುಂತಾಗಿಯೂ ಮಂತ್ರವರ್ಣವಿರುತ್ತದೆ.[1] ಆದ್ದರಿಂದ ಭೂಮಿಯನ್ನು ಒಳಹೊಕ್ಕು ಚರಾಚರಭೂತಗಳನ್ನು[2] ಹಿಡಿದೆತ್ತಿಕೊಂಡಿಟ್ಟಿರುತ್ತೇನೆ ಎಂದು ಹೇಳಿದ್ದು ಯುಕ್ತವಾಗಿದೆ.

ಮತ್ತು ಪೃಥ್ವಿಯಲ್ಲಿ ಹುಟ್ಟಿರುವ ಬತ್ತ, ಜವೆ–ಮುಂತಾದ ಎಲ್ಲಾ ಪೈರುಪಚ್ಚೆಗಳನ್ನೂ ಪೋಷಿಸುತ್ತೇನೆ. ಅವನ್ನು ಪುಷ್ಟಿಯುಳ್ಳವನ್ನಾಗಿಯೂ ರಸದಿಂದ ರುಚಿಯುಳ್ಳವುಗಳನ್ನಾಗಿಯೂ ಮಾಡುತ್ತೇನೆ; ಸೋಮನಾಗಿ, ರಸಾತ್ಮಕವಾದ ಸೋಮನಾಗಿ (ಪೋಷಿಸುತ್ತೇನೆ). ರಸಾತ್ಮಕನು ಎಂದರೆ ರಸಸ್ವಭಾವದವನಾದ (ಎಂದರ್ಥ). ಸೋಮನು ರಸಗಳಿಗೆಲ್ಲ ಮೂಲವು; ಏಕೆಂದರೆ ಅವನೇ ಎಲ್ಲಾ ಗಿಡಮರಗಳಿಗೂ ತನ್ನ ರಸವನ್ನು ಒಳಹೊಗಿಸುವದರ ಮೂಲಕ ಪೋಷಿಸುತ್ತಿರುತ್ತಾನೆ.[3]

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥೧೪॥**

೧೪. ನಾನು ಪ್ರಾಣಿಗಳ ದೇಹವನ್ನು ಆಶ್ರಯಿಸಿರುವ ವೈಶ್ವಾನರನಾಗಿ ಪ್ರಾಣಾಪಾನಸಮಾಯುಕ್ತನಾಗಿ ನಾಲ್ಕುಬಗೆಯ ಅನ್ನವನ್ನು ಪಚನ ಮಾಡುತ್ತೇನೆ.

(ಭಾಷ್ಯ)

೩೭೩. ಕಿಂಚ ಅಹಮೇವ ವೈಶ್ವಾನರಃ ಉದರಸ್ಥಃ ಅಗ್ನಿಃ ಭೂತ್ವಾ "ಅಯಮಗ್ನಿರ್ವೈಶ್ವಾನರೋ ಯೋಽಯಮನ್ತಃ ಪುರುಷೇ ಯೇನೇದಮನ್ನಂ ಪಚ್ಯತೇ" (ಬೃ. ೫-೯-೧) ಇತ್ಯಾದಿಶ್ರುತೇಃ । ವೈಶ್ವಾನರಃ ಸನ್ ಪ್ರಾಣಿನಾಂ ಪ್ರಾಣವತಾಂ ದೇಹಮ್ ಆಶ್ರಿತಃ ಪ್ರವಿಷ್ಟಃ । ಪ್ರಾಣಾಪಾನಸಮಾಯುಕ್ತಃ ಪ್ರಾಣಾಪಾನಾಭ್ಯಾಂ ಸಮಾಯುಕ್ತಃ ಸಂಯುಕ್ತಃ ಪಚಾಮಿ ಪಕ್ತಿಂ ಕರೋಮಿ ಅನ್ನಮ್

---

1. ಹಿರಣ್ಯಗರ್ಭನು ಜಗತ್ತೆಲ್ಲವನ್ನೂ ಧರಿಸಿರುವದೂ ಪರಮಾತ್ಮನ ಬಲವೇ ಎಂಬ ಅಭಿಪ್ರಾಯದಿಂದ ಈ ಮಂತ್ರವರ್ಣವನ್ನು ಇಲ್ಲಿ ಉದಾಹರಿಸಿದೆ.

2. 'ಗಾವಮ್' ಎಂಬುದು ಬರಿಯ ಭೂಗೋಳವನ್ನೇ ಅಲ್ಲದೆ ಭೂಮಿಯ ಮೇಲಿರುವ ಸಕಲ ಪ್ರಾಣಿಗಳ ಶರೀರಕ್ಕೂ ಉಪಲಕ್ಷಣವಾಗಿ ಪ್ರಯುಕ್ತವಾಗಿದೆ ಎಂದು ಭಾವ.

3. ಸೋಮನಿಂದ ಸಸ್ಯಗಳ ಪೋಷಣದ್ರವ್ಯವು ಒದಗುವದೆಂದು ವೇದವಾದ.

ಅಶನಂ ಚತುರ್ವಿಧಂ ಚತುಷ್ಪ್ರಕಾರಂ ಭೋಜ್ಯಂ[1] ಭಕ್ಷ್ಯಂ ಚೋಷ್ಯಂ ಲೇಹ್ಯಂ ಚ । ಭೋಕ್ತಾ ವೈಶ್ವಾನರೋಽಗ್ನಿಃ ಭೋಜ್ಯಮ್ ಅನ್ನಂ[2] ಸೋಮಃ ತದೇತದುಭಯಮ್ ಅಗ್ನೀಷೋಮೌ ಸರ್ವಮ್ ಇತಿ ಪಶ್ಯತಃ ಅನ್ನದೋಷಲೇಪೋ ನ ಭವತಿ ॥

(ಭಾಷ್ಯಾರ್ಥ)

ಮತ್ತು ನಾನೇ ಹೊಟ್ಟೆಯಲ್ಲಿರುವ ವೈಶ್ವಾನರನೆಂಬ ಅಗ್ನಿಯಾಗಿ-"ಮನುಷ್ಯನಲ್ಲಿದ್ದುಕೊಂಡು ಯಾವದು ಈ ಅನ್ನವನ್ನು ಪಚನಮಾಡುತ್ತಿರುವದೋ ಅದೇ ಈ ವೈಶ್ವನರಾಗ್ನಿಯು" (ಬೃ. ೫-೯-೧) ಎಂಬುದೇ ಮುಂತಾದ ಶ್ರುತಿಯು ಹೇಳುವಂತೆ ವೈಶ್ವಾನರನಾಗಿ ಪ್ರಾಣಿಗಳ ಪ್ರಾಣವುಳ್ಳ (ಜೀವರ) ದೇಹವನ್ನು ಆಶ್ರಯಿಸಿ ಒಳಹೊಕ್ಕು ಪ್ರಾಣಾಪಾನಸಮಾಯುಕ್ತನಾಗಿ ಪ್ರಾಣಾಪಾನಗಳಿಂದ ಸಮಾಯುಕ್ತನಾಗಿ ಕೂಡಿಕೊಂಡು ಭೋಜ್ಯ (ಉಣ್ಣತಕ್ಕದ್ದು), ಭಕ್ಷ್ಯ (ತಿನ್ನತಕ್ಕದ್ದು), ಚೋಷ್ಯ (ಹೀರಿಕೊಳ್ಳತಕ್ಕದ್ದು), ಲೇಹ್ಯ (ನೆಕ್ಕತಕ್ಕದ್ದು)-ಎಂದು ನಾಲ್ಕುಬಗೆಯಾಗಿರುವ ನಾಲ್ಕುಪ್ರಕಾರವಾಗಿರುವ ಅನ್ನವನ್ನು ಆಹಾರವನ್ನು ಪಚನಮಾಡುತ್ತೇನೆ, ಅರಗಿಸುವಿಕೆಯನ್ನು ಮಾಡುತ್ತಿರುವೆನು.

ಭೋಕ್ತನಾದವನು ವೈಶ್ವಾನರಾಗ್ನಿಯು, ಭೋಜ್ಯವಾದ ಅನ್ನವು ಸೋಮವು. ಆ ಈ ಎರಡೂ-ಅಗ್ನಿ, ಸೋಮ-ಇಬ್ಬರೇ-ಎಲ್ಲವೂ[3] ಎಂದು ಭಾವಿಸುವವನಿಗೆ ಅನ್ನದೋಷದ ಅಂಟು ಆಗುವದಿಲ್ಲ.

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾನ್ತಕೃದ್ವೇದವಿದೇವ ಚಾಹಮ್ ॥ ೧೫ ॥**

೧೫. ನಾನು ಪ್ರತಿಯೊಬ್ಬನ ಹೃದಯದಲ್ಲಿಯೂ ಇದ್ದುಕೊಂಡಿರುವೆನು. ನನ್ನಿಂದಲೇ ಸ್ಮೃತಿಯೂ ಜ್ಞಾನವೂ (ಅವುಗಳ) ಹೋಗುವಿಕೆಯೂ

---

1. 'ಅನ್ನಂ ಚತುರ್ವಿಧಂ ಭೋಜ್ಯಮ್' ಮ॥ ವೈ॥ ; ಅನ್ನಮಶನಂ ಚತುರ್ವಿಧಂ ಚತುಷ್ಪ್ರಕಾರಂ ಭೋಜ್ಯಮ್ ' ಗು॥ ವಾ॥
2. ' ಅಗ್ನೇರ್ಭೋಜ್ಯಮ್ ಅನ್ನಂ ' ಮ॥ ವೈ॥ ಗು॥ ವಾ॥
3. ಪ್ರಶ್ನೋಪನಿಷತ್ತಿನ ಮೊದಲನೆಯ ಪ್ರಶ್ನೆಯನ್ನು ನೋಡಿ.

(ಆಗುವವು). ಸರ್ವವೇದಗಳಿಗೂ ನಾನೇ ವೇದ್ಯನು. ನಾನು ವೇದಾಂತ ವನ್ನು ಮಾಡಿದವನು, ವೇದವಿದನು.

೩೭೪. ಕಿಂಚ ಸರ್ವಸ್ಯ ಪ್ರಾಣಿಜಾತಸ್ಯ ಅಹಮ್ ಆತ್ಮಾ ಸನ್ ಹೃದಿ ಬುದ್ಧೌ ಸಂನಿವಿಷ್ಟಃ। ಅತಃ ಮತ್ತಃ ಆತ್ಮನಃ ಸರ್ವಪ್ರಾಣಿನಾಂ ಸ್ಮೃತಿಃ ಜ್ಞಾನಂ ತದಪೋಹನಮ್[1] ಅಪಗಮನಂ ಚ। ಯಥಾ[2] ಪುಣ್ಯಕರ್ಮಣಾಂ ಪುಣ್ಯಕರ್ಮಾನು ರೋಧೇನ ಜ್ಞಾನಸ್ಮೃತೀ ಭವತಃ, ತಥಾ ಪಾಪಕರ್ಮಣಾಂ ಪಾಪಕರ್ಮಾನು ರೂಪೇಣ ಸ್ಮೃತಿಜ್ಞಾನಯೋಃ ಅಪೋಹನಮ್[3] ಅಪಗಮನಂ ಚ। ವೇದೈಶ್ಚ ಸರ್ವೈಃ ಅಹಮೇವ ಪರಮಾತ್ಮಾ ವೇದ್ಯೋ ವೇದಿತವ್ಯಃ। ವೇದಾನ್ತಕೃತ್ ವೇದಾನ್ತಾರ್ಥಸಂಪ್ರದಾಯಕೃತ್ ಇತ್ಯರ್ಥಃ। ವೇದವಿದ್ ವೇದಾರ್ಥವಿದೇವ ಚ ಅಹಮ್ ||

(ಭಾಷ್ಯಾರ್ಥ)

ಮತ್ತು ಪ್ರತಿಯೊಂದು ಜೀವರಾಶಿಗೂ ನಾನು ಆತ್ಮನಾಗಿ ಹೃದಯದಲ್ಲಿ ಬುದ್ಧಿ ಯಲ್ಲಿ ಇರುತ್ತೇನೆ.[4] ಆದ್ದರಿಂದ ಆತ್ಮನಾದ ನನ್ನಿಂದಲೇ ಎಲ್ಲಾ ಪ್ರಾಣಿಗಳಿಗೂ ನೆನಪೂ ಅರಿವೂ ಅವುಗಳ ಅಪೋಹನವೂ (ಇಲ್ಲವಾಗಿ) ಹೋಗಿಬಿಡುವದೂ (ಆಗು ತ್ತಿರುವವು). **ಹೇಗೆ ಪುಣ್ಯಕರ್ಮವನ್ನು ಮಾಡಿದವರಿಗೆ ಪುಣ್ಯಕರ್ಮಕ್ಕೆ ತಕ್ಕಂತೆ ಜ್ಞಾನಸ್ಮೃತಿಗಳು ಉಂಟಾಗುವವೋ ಹಾಗೆಯೇ ಪಾಪಕರ್ಮ ವನ್ನು ಮಾಡಿದವರಿಗೆ ಪಾಪಕರ್ಮಕ್ಕೆ ತಕ್ಕಂತೆ ಸ್ಮೃತಿಜ್ಞಾನಗಳ ಅಪೋ ಹನವು, ಹೋಗಿಬಿಡುವದೂ (ನನ್ನಿಂದಲೇ ಆಗುವದು)**[6]. ಸರ್ವವೇದ ಗಳಿಗೂ ಪರಮಾತ್ಮನಾದ ನಾನೇ ವೇದ್ಯನು, (ಅವುಗಳಿಂದ) ತಿಳಿಯಲ್ಪಡತಕ್ಕವನು

---

1. ಇದಾದಮೇಲೆ 'ಅಪಾಯನಮ್' ಎಂದು ಹೆಚ್ಚಾಗಿ ಅ|| ನಿ||

2. 'ಯೇಷಾಂ' ಎಂದು ಕೆಲವು ಪುಸ್ತಕಗಳಲ್ಲಿ ಇದರ ಹಿಂದೆ ಇರುವದು ಬೇಕಿಲ್ಲ.

3. 'ಅಪೋಹನಮ್ ಅಪಾಯನಮ್' ಅ|| ನಿ|| ವಾ||

4. ಬುದ್ಧಿಪ್ರತ್ಯಯಗಳಿಗೆ ಸಾಕ್ಷಿಯಾಗಿರುತ್ತೇನೆ.

5. ಕರ್ಮಗಳಿಗನುಗುಣವಾಗಿ ಜ್ಞಾನಸ್ಮೃತಿಗಳಾಗುವವಾದರೂ ಕರ್ಮಕ್ಕೆ ಫಲವನ್ನು ಕೊಡುವವನೂ ಈಶ್ವರನೇ. ಸೂ. ಭಾ. ೩-೩-೩೮.

6. ವೇದಾಂತವು ವೇದದಲ್ಲಿ ಅಡಕವಾಗಿರುವದರಿಂದ ಅನಾದಿ; ವೇದಾಂತ ಸಂಪ್ರದಾಯಕರ್ತನೂ ನಾರಾಯಣನೇ.

ವೇದಾಂತವನ್ನು ಮಾಡಿದವನು ಎಂದರೆ ವೇದಾಂತಾರ್ಥದ ಸಂಪ್ರದಾಯಕರ್ತನೂ ಎಂದರ್ಥ [6]; (ಅವನು) ವೇದವಿದನೂ, ವೇದಾರ್ಥವನ್ನು ಬಲ್ಲವನೂ ನಾನೇ [1].

## ಪರಮಾತ್ಮನು ವ್ಯಕ್ತಾವ್ಯಕ್ತಗಳನ್ನು ಮೀರಿದ ಪುರುಷೋತ್ತಮನು

(ಭಾಷ್ಯ)

೩೭೫. ಭಗವತಃ ಈಶ್ವರಸ್ಯ ನಾರಾಯಣಾಖ್ಯಸ್ಯ ವಿಭೂತಿಸಙ್ಕ್ಷೇಪಃ ಉಕ್ತಃ ವಿಶಿಷ್ಟೋಪಾಧಿಕೃತಃ " ಯದಾದಿತ್ಯಗತಂ ತೇಜಃ '' (೧೫-೧೨) ಇತ್ಯಾದಿನಾ । ಅಥಾಧುನಾ [2] ತಸ್ಯೈವ ಕ್ಷರಾಕ್ಷರೋಪಾಧಿಪ್ರವಿಭಕ್ತತಯಾ ನಿರುಪಾಧಿಕಸ್ಯ ಕೇವಲಸ್ಯ ಸ್ವರೂಪ [3] ನಿರ್ದಿಧಾರಯಿಷಯಾ ಉತ್ತರೇ [4] ಶ್ಲೋಕಾ ಆರಭ್ಯನ್ತೇ । ತತ್ರ ಸರ್ವಮೇವ ಅತೀತಾನಾಗತಾಧ್ಯಾಯಾರ್ಥಜಾತಂ [5] ತ್ರಿಧಾ ರಾಶೀಕೃತ್ಯ ಆಹ —

(ಭಾಷ್ಯಾರ್ಥ)

**ನಾರಾಯಣ**ನೆಂಬ ಹೆಸರಿನ ಭಗವಂತನಾದ ಈಶ್ವರನ ಅಸಾಧಾರಣವಾದ ಉಪಾಧಿಗಳಿಂದುಂಟಾಗಿರುವ ವಿಭೂತಿಯನ್ನು ಸಂಕ್ಷೇಪವಾಗಿ " ಯದಾದಿತ್ಯಗತಮ್" (೧೫-೧೨) ಮುಂತಾದ (ಗ್ರಂಥದಿಂದ) ಹೇಳಿದ್ದಾಯಿತು. ಇನ್ನು ಈಗ ಆತನನ್ನೇ **ಕ್ಷರ, ಅಕ್ಷರ-ಎಂಬ ಉಪಾಧಿಗಳಿಂದ ಬಿಡಿಸಿ ಆತನ ನಿರುಪಾಧಿಕವಾದ ಕೇವಲ ಸ್ವರೂಪವನ್ನು ಗೊತ್ತುಪಡಿಸಬೇಕೆಂದು** ಮುಂದಿನ **ಶ್ಲೋಕಗಳನ್ನು ಪ್ರಾರಂಭಿಸಿರುತ್ತದೆ.** ಇಲ್ಲಿ ಹಿಂದಿನ ಮತ್ತು ಮುಂದಿನ ಅಧ್ಯಾಯಗಳಲ್ಲಿ (ಹೇಳಿರುವ) ವಿಷಯಸಮೂಹವನ್ನೆಲ್ಲ ಮೂರು **ರಾಶಿಯಾಗಿ ಮಾಡಿ** (ಭಗವಂತನು) ಹೇಳುತ್ತಾನೆ :—

---

1. ವೇದಕ್ಕೆ ಆವಿರ್ಭಾವವನ್ನು ಕೊಡುವ ಪರಮಾತ್ಮನೇ ಅದರ ಅರ್ಥವನ್ನು ಸರಿಯಾಗಿ ಬಲ್ಲವನು ಎಂಬುದು ಸ್ಪಷ್ಟ. ವೇದಾಂತಸಂಪ್ರದಾಯಕರ್ತೃವಾದ ಗುರುವೂ ಅದನ್ನು ಅರಿತುಕೊಳ್ಳುವ ಶಿಷ್ಯನೂ ನಿಜವಾಗಿ ಪರಮಾತ್ಮನೇ—ಎಂಬ ಅಭಿಪ್ರಾಯವನ್ನೂ ತೆಗೆಯಬಹುದು.

2. ‘ ಅಧುನಾ ’ ಮ||

3. ‘‘ ತತ್ತ್ವ ’’ ಮ|| ಮೈ||

4. ‘ ಉತ್ತರಶ್ಲೋಕಾಃ ’ ನಿ|| ಗು||

5. ಅತೀತಾನಾಗತಾನನ್ತರಾಧ್ಯಾಯಾರ್ಥಜಾತಂ ’ ಎಂಬ ನಿ|| ಗು|| ಪಾಠದಲ್ಲಿ ಅನನ್ತರ ಹೆಚ್ಚು.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**

೧೬. ಲೋಕದಲ್ಲಿ ಈ ಇಬ್ಬರು ಪುರುಷರು: ಕ್ಷರನು ಮತ್ತು ಅಕ್ಷರನು. ಕ್ಷರನೆಂದರೆ ಸರ್ವಭೂತಗಳು, ಕೂಟಸ್ಥನು ಅಕ್ಷರನೆನಿಸಿರುತ್ತಾನೆ.

(ಭಾಷ್ಯ)

೩೭೬. ದ್ವೌ ಇಮೌ ಪೃಥಗ್ರಾಶೀಕೃತೌ ಪುರುಷೌ ಇತಿ ಉಚ್ಯೇತೇ ಲೋಕೇ ಸಂಸಾರೇ। ಕ್ಷರಶ್ಚ ಕ್ಷರತೀತಿ ಕ್ಷರಃ ವಿನಾಶೀ ಇತಿ ಏಕೋ ರಾಶಿಃ। ಅಪರಃ ಪುರುಷಃ ಅಕ್ಷರಃ ತದ್ವಿಪರೀತಃ ಭಗವತಃ ಮಾಯಾಶಕ್ತಿಃ[1] ಕ್ಷರಾಖ್ಯಸ್ಯ ಪುರುಷಸ್ಯ ಉತ್ಪತ್ತಿಬೀಜಮ್। ಅನೇಕಸಂಸಾರಿಜನ್ತುಕಾಮಕರ್ಮಾದಿಸಂಸ್ಕಾರಾಶ್ರಯಃ ಅಕ್ಷರಃ ಪುರುಷಃ ಉಚ್ಯತೇ। ಕೌ ತೌ ಪುರುಷೌ ಇತಿ? ಆಹ ಸ್ವಯಮೇವ ಭಗವಾನ್। ಕ್ಷರಃ ಸರ್ವಾಣಿ ಭೂತಾನಿ ಸಮಸ್ತಂ ವಿಕಾರಜಾತಮ್ ಇತ್ಯರ್ಥಃ। ಕೂಟಸ್ಥಃ ಕೂಟಃ ರಾಶಿಃ ರಾಶಿರಿವ ಸ್ಥಿತಃ। ಅಥವಾ ಕೂಟಃ ಮಾಯಾ ವಞ್ಚನಾ ಜಿಹ್ಮತಾ ಕುಟಿಲತಾ ಇತಿ ಪರ್ಯಾಯಾಃ। ಅನೇಕಮಾಯಾವಞ್ಚನಾದಿಪ್ರಕಾರೇಣ[2] ಸ್ಥಿತಃ ಕೂಟಸ್ಥಃ। ಸಂಸಾರಬೀಜಾನನ್ತ್ಯಾತ್ ನ ಕ್ಷರತಿ ಇತಿ ಅಕ್ಷರಃ ಉಚ್ಯತೇ ॥

(ಭಾಷ್ಯಾರ್ಥ)

ಲೋಕದಲ್ಲಿ (ಈ) ಸಂಸಾರದಲ್ಲಿ ಬೇರೆಬೇರೆಯ ರಾಶಿಯಾಗಿ ಮಾಡಿದ[3] ಇವೆರಡೂ ಪುರುಷರೆನಿಸಿರುವವು. (ಇವುಗಳಲ್ಲಿ) ನಾಶವಾಗುವದರಿಂದ ಕ್ಷರವು, ವಿನಾಶಿ, ಎಂಬುದು ಒಂದು ರಾಶಿ. ಮತ್ತೊಂದು ಪುರುಷನು (ಯಾವದೆಂದರೆ) ಅಕ್ಷರವು ಆ (ಕ್ಷರ)ಕ್ಕೆ ವಿರುದ್ಧವಾಗಿರುವ, ಭಗವಂತನ ಮಾಯಾಶಕ್ತಿಯು; (ಇದು) ಕ್ಷರನೆಂಬ ಪುರುಷನು ಹುಟ್ಟುವದಕ್ಕೆ ಬೀಜವು. ಅನೇಕ ಸಂಸಾರಿಜೀವರುಗಳ

---

1. ಭಗವನ್ಮಾಯಾಶಕ್ತಿಃ' ಮು॥ ಮೈ॥
2. 'ಮಾಯಾದಿಪ್ರಕಾರೇಣ' ನಿ॥ ಗು॥
3. ಕ್ಷರ, ಅಕ್ಷರ—ಎಂದು ಪೃಥಕ್ಕಾಗಿ ರಾಶಿ ಮಾಡಿರುವದರಿಂದ ಪುರುಷನು ಎಂದು ಪುರುಷಶಬ್ದಕ್ಕೆ ವ್ಯುತ್ಪತ್ತಿಯನ್ನು ತಿಳಿಸಿದಂತೆ ಆಯಿತು. ಉಪಾಧಿಗಳು ಜಡವಾಗಿದ್ದರೂ ಪುರುಷನೆನ್ನಬಹುದೆಂಬುದಕ್ಕೆ ತೈತ್ತಿರೀಯಾದಿಗಳಲ್ಲಿ ಅನ್ನಮಯಾದಿಗಳನ್ನು ಪುರುಷನೆಂದು ಕರೆದಿರುವದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಈ ಎರಡು ಉಪಾಧಿಗಳುಳ್ಳ ಆತ್ಮನನ್ನೂ ಈ ಹೆಸರಿನಿಂದ ಕರೆಯಬಹುದು. ಛಾಂ. ಭಾ. ೮-೧೨-೩ರಲ್ಲಿ ಉತ್ತಮಪುರುಷ ಎಂಬುದರ ಭಾಷ್ಯವನ್ನು ನೋಡಿ.

ಕಾಮ, ಕರ್ಮ-ಮುಂತಾದವುಗಳ ಸಂಸ್ಕಾರಕ್ಕೆ [1] ಆಶ್ರಯವಾಗಿರುವ.(ಇದು) ಅಕ್ಷರ ಪುರುಷನೆನಿಸಿರುವದು. ಆ ಪುರುಷರು ಯಾರು? ಎಂದರೆ ಭಗವಂತನು ತಾನೇ ಹೇಳುತ್ತಾನೆ: ಸರ್ವಭೂತಗಳೂ ಎಂದರೆ ಕಾರ್ಯಸಮೂಹವೆಲ್ಲವೂ ಎಂದರ್ಥ. (ಸರ್ವಭೂತಗಳೂ) ಕ್ಷರ (ಪುರುಷನು). **ಕೂಟಸ್ಥನು**-ಕೂಟವೆಂದರೆ ರಾಶಿಯು. ರಾಶಿಯಂತೆ ಇರತಕ್ಕದ್ದು. ಅಥವಾ ಕೂಟವೆಂದರೆ ಮಾಯೆ. (ಮಾಯೆ) ವಂಚನೆ, ಜಿಹ್ಮತೆ, ಕುಟಿಲತೆ-ಇವೆಲ್ಲ ಪರ್ಯಾಯಗಳು. ಮಾಯೆ, ವಂಚನೆ-ಮುಂತಾದ ಅನೇಕ ಪ್ರಕಾರಗಳಿಂದಿರುವದೇ ಕೂಟಸ್ಥವು ಸಂಸಾರಬೀಜವು ಅನಂತವಾಗಿರುವದರಿಂದ ಸವೆಯುವದಿಲ್ಲವಾಗಿ [2] ಅಕ್ಷರ (ಪುರುಷ)ನೆನಿಸಿರುತ್ತದೆ.

(ಭಾಷ್ಯ)

೩೭೭. ಆಭ್ಯಾಂ ಕ್ಷರಾಕ್ಷರಾಭ್ಯಾಮ್ ಅನ್ಯಃ ವಿಲಕ್ಷಣಃ ಕ್ಷರಾಕ್ಷರೋಪಾಧಿದ್ವಯದೋಷೇಣ ಅಸ್ಪೃಷ್ಟಃ ನಿತ್ಯಶುದ್ಧಬುದ್ಧಮುಕ್ತಸ್ವಭಾವಃ—

(ಭಾಷ್ಯಾರ್ಥ)

ಈ ಕ್ಷರಾಕ್ಷರಗಳಿಗಿಂತ ಬೇರೆಯಾಗಿ ಬೇರೆಯ ಸ್ವಭಾವದವನಾಗಿ ಕ್ಷರಾಕ್ಷರಗಳೆಂಬ ಎರಡು ಉಪಾಧಿಗಳ ದೋಷಗಳೂ ಸೋಂಕದೆ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿರುವದರಿಂದ—

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**

೧೭. ಆದರೆ ಪರಮಾತ್ಮನೆನಿಸಿಕೊಂಡಿರುವ ಉತ್ತಮ ಪುರುಷನು ಬೇರೆ. ಆ ಅವ್ಯಯನಾದ ಈಶ್ವರನು ಲೋಕತ್ರಯವನ್ನು ಪ್ರವೇಶಿಸಿ ಧರಿಸಿಕೊಂಡಿರುತ್ತಾನೆ.

(ಭಾಷ್ಯ)

೩೭೮. ಉತ್ತಮಃ ಉತ್ಕೃಷ್ಟತಮಃ ಪುರುಷಸ್ತು ಅನ್ಯಃ ಅತ್ಯನ್ತವಿಲಕ್ಷಣಃ ಆಭ್ಯಾಮ್। ಪರಮಾತ್ಮೇತಿ ಪರಮಶ್ಚ ಅಸೌ ದೇಹಾದ್ಯವಿದ್ಯಾಕೃತಾತ್ಮಭ್ಯಃ ಆತ್ಮಾ

---

1. ಪ್ರಲಯದಲ್ಲಿ ಕಾಮಕರ್ಮಾದಿಗಳು ಸಂಸ್ಕಾರರೂಪದಿಂದ ಅವ್ಯಾಕೃತದಲ್ಲಿದ್ದುಕೊಂಡು ಸೃಷ್ಟಿಯಾಗುವಾಗ ಎದ್ದುಕೊಳ್ಳುವವು.

2. ಸಂಸಾರಬೀಜವು ಸಂಸಾರವಾಗಿ ಪರಿಣಮಿಸುವದು, ಮತ್ತೆ ಬೀಜರೂಪವಾಗುವದು—ಹೀಗೆ ಅನಂತವಾಗಿಯೇ ಜ್ಞಾನದಿಂದ ಬಾಧಿತವಾಗುವವರೆಗೆ ಇರುತ್ತದೆ.

(ಭಾಷ್ಯಾರ್ಥ)

ನಾನು ಕ್ಷರವನ್ನು ಅಶ್ವತ್ಥವೆಂಬ ಸಂಸಾರಮಾಯಾವೃಕ್ಷವನ್ನು ದಾಟಿರುವೆನಲ್ಲ, ಮೀರಿರುವೆನಲ್ಲ (ಆದರಿಂದಲೂ), ಅಕ್ಷರಕ್ಕಿಂತಲೂ ಸಂಸಾರಮಾಯಾವೃಕ್ಷಕ್ಕೆ ಬೀಜವಾಗಿರುವದಲ್ಲ (ಆ ಅಕ್ಷರಕ್ಕಿಂತಲೂ) ಉತ್ತಮನಾಗಿರುವದರಿಂದಲೂ ಹೆಚ್ಚಿನವನಾಗಿರುವದರಿಂದಲೂ ಅಥವಾ (ಅದಕ್ಕಿಂತಲೂ) ಮೇಲುಗಡೆಯಲ್ಲಿರುವೆನಲ್ಲ, ಆದ್ದರಿಂದಲೂ ಆ ಕ್ಷರಾಕ್ಷರಗಳಿಗಿಂತ ಉತ್ತಮನಾಗಿರುವದರಿಂದ, ಲೋಕದಲ್ಲಿಯೂ ವೇದದಲ್ಲಿಯೂ[1] ಪುರುಷೋತ್ತಮನೆಂದು ಪ್ರಸಿದ್ಧನಾಗಿರುತ್ತೇನೆ. ಪುರುಷೋತ್ತಮನೆಂದು ಪ್ರಸಿದ್ಧನಾಗಿರುತ್ತೇನೆ. ಪುರುಷೋತ್ತಮನೆಂದು ನನ್ನನ್ನು (ಭಕ್ತ) ಜನರು ತಿಳಿಯುತ್ತಾರೆ; ಕವಿಗಳೂ ಕಾವ್ಯಾದಿಗಳಲ್ಲಿ ಈ ಹೆಸರಿನಿಂದ (ನನ್ನನ್ನು) ಕರೆಯುತ್ತಾರೆ.

(ಭಾಷ್ಯ)

೩೮೧. ಅಥೇದಾನೀಂ ಯಥಾ ನಿರುಕ್ತಮ್ ಆತ್ಮಾನಂ ಯೋ ವೇದ ತಸ್ಯ ಇದಂ ಫಲಮ್ ಉಚ್ಯತೇ—

(ಭಾಷ್ಯಾರ್ಥ)

ಇನ್ನು ಈಗ ಹೀಗೆ ವಿವರಿಸಿದ (ಹೆಸರಿನ) ಆತ್ಮನನ್ನು ಯಾವನು ಅರಿತುಕೊಳ್ಳುವನೋ ಅವನಿಗೆ ಈ ಫಲ(ವಾಗುವದೆಂದು) ಹೇಳುತ್ತಾನೆ: -

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**

೧೯. ಎಲೈ ಭಾರತನೆ, ಯಾವನು ಅಸಂಮೂಢನಾಗಿ ಹೀಗೆ ನನ್ನನ್ನು ಪುರುಷೋತ್ತಮನೆಂದು ತಿಳಿಯುವನೋ ಆ ಸರ್ವವೇತ್ತನು ನನ್ನನ್ನು ಸರ್ವಭಾವದಿಂದ ಭಜಿಸುತ್ತಿರುತ್ತಾನೆ.

(ಭಾಷ್ಯ)

೩೮೨. ಯೋ ಮಾಮ್ ಈಶ್ವರಂ ಯಥೋಕ್ತವಿಶೇಷಣಮ್ ಏವಂ ಯಥೋಕ್ತೇನ ಪ್ರಕಾರೇಣ ಅಸಂಮೂಢಃ ಸಂಮೋಹವರ್ಜಿತಃ ಸನ್ ಜಾನಾತಿ 'ಅಯಮ್ ಅಹಮಸ್ಮಿ' ಇತಿ ಪುರುಷೋತ್ತಮಮ್ ಸ ಸರ್ವವಿತ್ ಸರ್ವಾತ್ಮನಾ[2] ಸರ್ವಂ ವೇತ್ತಿ

1. ಛಾಂ. ೮-೧೨-೩.
2. ಮ॥ ಮೈ॥ ಗಳಲ್ಲಿಲ್ಲ.

ಇತಿ ಸರ್ವಜ್ಞಃ ಸರ್ವಭೂತಸ್ಥಂ ಭಜತಿ ಮಾಂ ಸರ್ವಭಾವೇನ ಸರ್ವಾತ್ಮತಯಾ[1] ಹೇ ಭಾರತ ||

(ಭಾಷ್ಯಾರ್ಥ)

ಎಲೈ ಭರತಕುಲೋತ್ಪನ್ನನೆ, ಯಾವನು ಈಶ್ವರನಾದ, ಮೇಲೆ ಹೇಳಿದ ವಿಶೇಷಣಗಳುಳ್ಳ[2] ನನ್ನನ್ನು ಹೀಗೆ ಮೇಲೆ ಹೇಳಿದ ರೀತಿಯಿಂದ[3] ಸಂಮೂಢನಾಗದೆ ಸಂಮೋಹವಿಲ್ಲದವನಾಗಿ[4] ಇವನು ನಾನೇ ಎಂದು ನನ್ನನ್ನು ಪುರುಷೋತ್ತಮನಾಗಿ ಅರಿತುಕೊಳ್ಳುವದೋ, ಆ ಸರ್ವವಿದನು–ಸರ್ವಾತ್ಮನಾಗಿ[5] ಸರ್ವವನ್ನೂ ಬಲ್ಲವನಾದ್ದರಿಂದ (ಅವನು) ಸರ್ವಜ್ಞನು. (ಅವನು) ಸರ್ವಭೂತಗಳಲ್ಲಿಯೂ ಇರುವ ನನ್ನನ್ನು ಸರ್ವಭಾವದಿಂದ ಸರ್ವಾತ್ಮರೂಪದಿಂದ[6] ಭಜಿಸಿದವನಾಗುತ್ತಾನೆ..

## ಈ ಅಧ್ಯಾಯದಲ್ಲಿ ಹೇಳಿದ ಜ್ಞಾನದ ಮಹಿಮೆ.

(ಭಾಷ್ಯ)

೩೮೩. ಅಸ್ಮಿನ್ ಅಧ್ಯಾಯೇ ಭಗವತ್ತತ್ತ್ವಜ್ಞಾನಂ ಮೋಕ್ಷಫಲಮ್ ಉಕ್ತ್ವಾ ಅಥ ಇದಾನೀಂ ತತ್ ಸ್ತೌತಿ—

(ಭಾಷ್ಯಾರ್ಥ)

ಈ ಅಧ್ಯಾಯದಲ್ಲಿ ಮೋಕ್ಷಫಲವನ್ನು (ಕೊಡುವ) ಭಗವಂತನ ತತ್ತ್ವದ ಜ್ಞಾನವನ್ನು ಹೇಳಿ(ದ್ದಾಯಿತು); ಇನ್ನು ಈಗ ಅದನ್ನು ಹೊಗಳುತ್ತಾನೆ :—

---

1. 'ಸರ್ವಾತ್ಮಚಿತ್ತತಯಾ' ಸಿ|| ಗು|| ವಾ|| ; 'ಸರ್ವಾತ್ಮಕತಯಾ'

2. ಅವ್ಯಯನು, ಲೋಕತ್ರಯವನ್ನು ಧರಿಸಿರುವ ಈಶ್ವರನು—ಎಂಬ ವಿಶೇಷಣಗಳುಳ್ಳ.

3. ಕ್ಷರವನ್ನೂ ಅಕ್ಷರವನ್ನೂ ದಾಟಿರುವದರಿಂದ ಪುರುಷೋತ್ತಮನು ಎಂದು.

4. ಉಪಾಧಿಯಾದ ಕ್ಷರದ ಅಥವಾ ಅಕ್ಷರದ ಸಂಬಂಧವನ್ನು ಆತ್ಮನಲ್ಲಿ ಆರೋಪಿಸುವ ಅಜ್ಞಾನಕ್ಕೆ ವಶನಾಗದೆ.

5. ಎಲ್ಲರ ಆತ್ಮನಾಗಿ.

6. ಎಲ್ಲರ ಆತ್ಮನೂ ಎಲ್ಲಾ ರೂಪದಿಂದ ಇರುವವನೂ ಭಗವಂತನೇ ಎಂಬ ಭಾವದಿಂದ.

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ೨೦ ॥**

೨೦. ಎಲೈ ಅನಘನೆ, ಇಂತು ಗುಹ್ಯತಮವಾದ ಈ ಶಾಸ್ತ್ರವು ನನ್ನಿಂದ ಉಕ್ತವಾಯಿತು. ಇದನ್ನು ಅರಿತುಕೊಂಡವನು ಬುದ್ಧಿವಂತನೂ ಕೃತಕೃತ್ಯನೂ ಆಗುವನು.

(ಭಾಷ್ಯ)

೩೮೪. ಇತಿ ಏತತ್ ಗುಹ್ಯತಮಂ ಗೋಪ್ಯತಮಮ್ । ಅತ್ಯನ್ತರಹಸ್ಯಮ್ ಇತ್ಯೇತತ್ । ಕಿಂ ತತ್ ? ಶಾಸ್ತ್ರಮ್ । ಯದ್ಯಪಿ ಗೀತಾಖ್ಯಂ ಸಮಸ್ತಂ ಶಾಸ್ತ್ರಮ್ ಉಚ್ಯತೇ, ತಥಾಪಿ ಅಯಮೇವ ಅಧ್ಯಾಯಃ ಇಹ ಶಾಸ್ತ್ರಮ್ ಇತಿ ಉಚ್ಯತೇ ಸ್ತುತ್ಯರ್ಥಂ ಪ್ರಕರಣಾತ್ । ಸರ್ವೋ ಹಿ ಗೀತಾಶಾಸ್ತ್ರಾರ್ಥಃ ಅಸ್ಮಿನ್ ಅಧ್ಯಾಯೇ ಸಮಾಸೇನ ಉಕ್ತಃ । ನ ಕೇವಲಂ ಗೀತಾಶಾಸ್ತ್ರಾರ್ಥ ಏವ, ಕಿಂ ತು ಸರ್ವಶ್ಚ ವೇದಾರ್ಥಃ ಇಹ ಪರಿಸಮಾಪ್ತಃ । “ ಯಸ್ತಂ ವೇದ ಸ ವೇದವಿತ್ ” (೧೫-೧), “ ವೇದೈಶ್ಚ ಸರ್ವೈರಹಮೇವ ವೇದ್ಯಃ ” (೧೫-೧೫) ಇತಿ ಚ ಉಕ್ತಮ್ । ಇದಮ್ ಉಕ್ತಂ ಕಥಿತಂ ಮಯಾ ಹೇ ಅನಘ ಅಪಾಪ । ಏತತ್ ಶಾಸ್ತ್ರಂ ಯಥಾದರ್ಶಿತಾರ್ಥಂ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಭವೇತ್ ನಾನ್ಯಥಾ । ಕೃತಕೃತ್ಯಶ್ಚ ಭಾರತ । ಕೃತಂ ಕೃತ್ಯಂ ಕರ್ತವ್ಯಂ ಯೇನ ಸ ಕೃತಕೃತ್ಯಃ । ವಿಶಿಷ್ಟಜನ್ಮಪ್ರಸೂತೇನ ಬ್ರಾಹ್ಮಣೇನ ಯತ್ ಕರ್ತವ್ಯಂ ತತ್ ಸರ್ವಂ ಭಗವತ್ತತ್ತ್ವೇ ವಿದಿತೇ ಕೃತಂ ಭವೇತ್ ಇತ್ಯರ್ಥಃ । ನ ಚ ಅನ್ಯಥಾ ಕರ್ತವ್ಯಂ ಪರಿಸಮಾಪ್ಯತೇ ಕಸ್ಯಚಿತ್ ಇತ್ಯಭಿಪ್ರಾಯಃ । “ ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ” (೪.೩೩) ಇತಿ ಚ ಉಕ್ತಮ್ । “ ಏತದ್ಧಿ ಜನ್ಮಸಾಫಲ್ಯಂ ಬ್ರಾಹ್ಮಣಸ್ಯ ವಿಶೇಷತಃ । ಪ್ರಾಪ್ಯೈತತ್ಕೃತಕೃತ್ಯೋ ಹಿ ದ್ವಿಜೋ ಭವತಿ ನಾನ್ಯಥಾ ” (ಮನು. ೧೨-೯೩) ಇತಿ ಚ ಮಾನವಂ ವಚನಮ್[1] । ಯತ ಏತತ್ ಪರಮಾರ್ಥತತ್ತ್ವಂ ಮತ್ತಃ ಶ್ರುತವಾನಸಿ, ಅತಃ ಕೃತಾರ್ಥಸ್ತ್ವಂ ಭಾರತ ಇತಿ ॥

---

1. “ ಏತದ್ಧಿ ಜನ್ಮಸಾಮಗ್ರ್ಯಮ್ ಇತಿ ಚ ಮಾನವಂ ವಾಕ್ಯಮ್ ” ಎಂದಿಷ್ಟೇ ಮು॥ಮೈ॥; ಅ॥ನಿ॥ವಾ॥ಗಳಲ್ಲಿ ಪೂರ ಶ್ಲೋಕವಿದೆ ; ವಾ॥ದಲ್ಲಿ “ ಸಾಮ್ಯಗ್ರ್ಯಮ್ ” ಎಂದೇ ಪಾಠ. ನಿರ್ಣಯಸಾಗರದ ಅಚ್ಚಿನ ಮನುಸ್ಮೃತಿಯಲ್ಲಿ ‘ ಸಾಫಲ್ಯಂ ’ ಎಂದಿದೆ; ಆದರೆ ಭಾರತದಲ್ಲಿರುವ ಇದೇ ಶ್ಲೋಕಕ್ಕೆ ‘ ಸಾಮಗ್ರ್ಯಂ ’ ಎಂಬ ಪಾಠವಿದೆ.

(ಭಾಷ್ಯಾರ್ಥ)

ಈ ರೀತಿಯಲ್ಲಿ ಗುಹ್ಯತಮವಾದ ಎಲ್ಲಕ್ಕಿಂತಲೂ ಗುಟ್ಟಾಗಿರುವ ಅತ್ಯಂತ ರಹಸ್ಯವಾದ[1] ಎಂದು ಅಭಿಪ್ರಾಯ. ಅದು ಯಾವದು ? ಎಂದರೆ ಶಾಸ್ತ್ರವು. ಗೀತೆಯೆಂಬುದೆಲ್ಲವೂ[2] ಸೇರಿ ಶಾಸ್ತ್ರವೆನಿಸಿರುವದಾದರೂ[3] ಇಲ್ಲಿ ಹೊಗಳುವದಕ್ಕಾಗಿ ಈ ಅಧ್ಯಾಯವನ್ನೇ ಶಾಸ್ತ್ರವೆಂದು ಕರೆದಿರುತ್ತದೆ (ಎಂಬುದು ಯುಕ್ತ); ಏಕೆಂದರೆ (ಇಲ್ಲಿ ಅಧ್ಯಾಯಾರ್ಥವೇ) ಪ್ರಕೃತವಾಗಿರುತ್ತದೆ. **ಗೀತಾಶಾಸ್ತ್ರವೆಲ್ಲವೂ ಈ ಅಧ್ಯಾಯದಲ್ಲಿ ಸಂಕ್ಷೇಪವಾಗಿ ಉಕ್ತವಾಗಿರುತ್ತದೆ. ಬರಿಯ ಗೀತಾಶಾಸ್ತ್ರದ ಅರ್ಥವೇ ಅಲ್ಲ, ಸಕಲ ವೇದಾರ್ಥವೂ ಇದರಲ್ಲಿ ಮುಗಿದಿರುತ್ತದೆ**[4]. "ಅದನ್ನು ಯಾವನು ಅರಿತಿರುವನೋ ಅವನು ವೇದವನ್ನು ಬಲ್ಲವನಾಗಿರುತ್ತಾನೆ" (೧೫-೧) ಎಂದೂ, "ಎಲ್ಲಾ ವೇದಗಳಿಗೂ ವೇದ್ಯನಾದವನು ನಾನೇ" (೧೫-೧೫) ಎಂದೂ ಹಿಂದೆ ಹೇಳಿಯೂ ಇರುತ್ತದೆ. ಈ (ಶಾಸ್ತ್ರವು) ಎಲೈ ಅನಘನೆ ಪಾಪರಹಿತನೆ, ನನ್ನಿಂದ ಉಕ್ತವಾಗಿದೆ, ಹೇಳಲ್ಪಟ್ಟಿರುತ್ತದೆ.

ಇದನ್ನು (ನಾನು) ತಿಳಿಸಿರುವ ಅರ್ಥವುಳ್ಳ (ಈ) ಶಾಸ್ತ್ರವನ್ನು ಅರಿತುಕೊಂಡರೆ ಬುದ್ಧಿವಂತನಾಗುವನೇ ಹೊರತು ಬೇರೆ ರೀತಿಯಿಂದ ಆಗಲಾರನು[5]. ಎಲೈ ಭರತ ವಂಶೋತ್ಪನ್ನನೆ, (ಅಂಥವನು) ಕೃತಕೃತ್ಯನೂ (ಆಗುವನು). ಮಾಡತಕ್ಕದ್ದನ್ನು ಮಾಡಿದವನು ಕೃತಕೃತ್ಯನು. ಅಸಾಧಾರಣವಾದ (ಉತ್ತಮ) ಜನ್ಮದಲ್ಲಿ ಹುಟ್ಟಿದ ಬ್ರಾಹ್ಮಣನು ಮಾಡತಕ್ಕದ್ದು ಏನೇನಿರುವದೋ ಭಗವತ್ತತ್ತ್ವವನ್ನು ಅರಿತುಕೊಂಡರೆ

---

1. ಬಹು ಜನರು ಅನಧಿಕಾರಿಗಳಾದ್ದರಿಂದ ಇದನ್ನು ತಿಳಿಯದೆ ಇರುವರು ; ಆದ್ದರಿಂದ ಇದು ರಹಸ್ಯವು.

2. ಭಗವದ್ಗೀತೆಯ ಶ್ಲೋಕಗಳಿಗೇ ಗೀತೆಗಳೆಂಬ ಹೆಸರೆಂದು ಗೀತಾಭಾಷ್ಯದ ಅವತರಣಿಕೆಯಲ್ಲಿ ಬರೆದಿರುತ್ತದೆ ; ಆದ್ದರಿಂದ ಗ್ರಂಥಕ್ಕೆ ಗೀತೆ ಎಂಬ ಹೆಸರು ಶ್ಲೋಕಗಳ ಹೆಸರಿನಿಂದ ಬಂದದ್ದು ಎಂದು ತಿಳಿಯಬೇಕು.

3. ಶಾಸ್ತ್ರವೆಂದರೆ ಪ್ರವೃತ್ತಿನಿವೃತ್ತಿಧರ್ಮಗಳನ್ನು ತಿಳಿಸುವದು.

4. ಮುಖ್ಯಾರ್ಥದಲ್ಲಿ ವೇದವೇ ಶಾಸ್ತ್ರವು, ಅದರ ಸಾರವನ್ನು ಸಂಗ್ರಹಿಸಿ ಹೇಳುವ ಗೀತೆಯೂ ಗೌಣಾರ್ಥದಲ್ಲಿ ಶಾಸ್ತ್ರವೆನಿಸಿದೆ, ಗೀತೆಯ ಒಟ್ಟರ್ಥವನ್ನು ಹಿಂಡಿ ಹೇಳುವದರಿಂದ ಈ ಅಧ್ಯಾಯಕ್ಕೆ ಶಾಸ್ತ್ರವೆಂಬ ಹೆಸರು ಬಂದಿದೆ_ಎಂದು ಭಾವ.

5. ಪರಮಾತ್ಮನನ್ನು ಅರಿತರೆ ಎಲ್ಲವನ್ನೂ ಅರಿತಂತೆ, ಅದರಿಂದಲೇ ಪರಮಪುರುಷಾರ್ಥವು ದೊರಕುವದು, ಬೇರೊಂದರಿಂದಲ್ಲ. ಛಾಂ. ೬-೧-೩ ನೋಡಿ.

ಅದೆಲ್ಲವೂ ಮಾಡಿದಂತೆ ಆಗುವದು. ಹಾಗಿಲ್ಲದಿದ್ದರೆ ಯಾವನಿಗೂ ಮಾಡತಕ್ಕದ್ದು ಮುಗಿಯುವದಿಲ್ಲ.[1]–ಎಂದು ಅಭಿಪ್ರಾಯ. "ಎಲೈ ಪಾರ್ಥನೆ, ಜ್ಞಾನದಲ್ಲಿ ಎಲ್ಲಾ ಕರ್ಮವೂ ಅಖಿಲವಾಗಿ ಕೊನೆಗಾಣುತ್ತದೆ" (೪-೩೩) ಎಂದು ಹಿಂದೆ ಹೇಳಿಯೂ ಇರುತ್ತದೆ. "ಇದೇ ಜನ್ಮಸಾಫಲ್ಯವು, ಅದರಲ್ಲಿಯೂ ಬ್ರಾಹ್ಮಣನಿಗೆ (ಇದೇ ಜನ್ಮಸಾಫಲ್ಯವು); ಏಕೆಂದರೆ ಇದನ್ನು ಪಡೆದುಕೊಂಡರೇ ದ್ವಿಜನು ಕೃತಕೃತ್ಯನಾಗುವನೇ ಹೊರತು ಬೇರೆ ರೀತಿಯಿಂದಾಗಲಾರನು (ಮನು. ೧೨-೯೩) ಎಂದು **ಮನುವಚನವೂ** (ಇದೆ).

ಎಲೈ ಭರತವಂಶೋತ್ಪನ್ನನೆ, (ನೀನು) ಈ ಪರಮಾರ್ಥತತ್ತ್ವವನ್ನು ನನ್ನಿಂದ ಕೇಳಿ (ತಿಳಿದುಕೊಂಡಿ)ರುವದರಿಂದ ನೀನು ಕೃತಾರ್ಥನು ಎಂದು (ಅಭಿಪ್ರಾಯ).

ಇತಿ ಶ್ರೀಮದ್ಭಗವದ್ಗೀತಾಭಾಷ್ಯೇ ಪುರುಷೋತ್ತಮಯೋಗೋ ನಾಮ
ಪಞ್ಚದಶೋಽಧ್ಯಾಯಃ



1. ಕರ್ತೃತ್ವಬುದ್ಧಿಯಿರುವವರೆಗೆ ಕರ್ತವ್ಯವೂ ಇದ್ದೇ ಇರುತ್ತದೆ.

# ಹದಿನೈದನೆಯ ಅಧ್ಯಾಯದ ಸಾರ

೧-೩. ಭಗವಂತನಿಂತೆಂದನು : “ ಈ ಸಂಸಾರನೆಂಬ ಅಶ್ವತ್ಥವೃಕ್ಷವು ಪರಮಸೂಕ್ಷ್ಮವಾದ ಉತ್ಕೃಷ್ಟವಾದ ಬ್ರಹ್ಮವೆಂಬ ಬೇರಿನಿಂದ ಹುಟ್ಟಿ ಕೆಳಗಡೆಗೆ ಬೆಳೆದುಕೊಂಡು ತುದಿ ಮೊದಲಿಲ್ಲದೆ ಹುಟ್ಟಿಕೊಂಡಿರುವದು. ಈ ಸಂಸಾರವನ್ನು ವೇದಗಳೆಂಬ ಎಲೆಗಳು ರಕ್ಷಣೆಗೈಯುತ್ತಿರುವವು. ಇದರ ಕೊಂಬೆಗಳು ಕೆಳಕ್ಕೂ ಮೇಲಕ್ಕೂ ಚಾಚಿರುತ್ತವೆ. ವಿಷಯಗಳಿಂದ ಅವು ಚಿಗುರುತ್ತವೆ, ಕರ್ಮದಿಂದ ಇದಕ್ಕೆ ಬಿಳಿಲುಗಳು ಬಿಟ್ಟುಕೊಂಡಿರುತ್ತವೆ,

೩-೬. “ ಈ ವೃಕ್ಷವನ್ನು ಅಸಂಗವೆಂಬ ಶಸ್ತ್ರದಿಂದ ಕತ್ತರಿಸಿ ಅಧ್ಯಾತ್ಮಚಿಂತನೆಯಲ್ಲಿಯೇ ನಿರತರಾಗುವ ವಿವೇಕಿಗಳಾದ ಸಾಧಕರು ಅವ್ಯಯವಾದ ಸ್ವಪ್ರಕಾಶವಾದ ವಿಷ್ಣುಪದವನ್ನು ಸೇರುವರು,

೭-೧೧. “ ಜೀವನು ಪರಮಾರ್ಥವಾಗಿ ನನ್ನದೇ ಆಗಿರುವ ಅಂಶವಾಗಿ ನಿತ್ಯಶುದ್ಧಬುದ್ಧಮುಕ್ತನೇ ಆಗಿರುತ್ತಿದ್ದರೂ ಆ ತನ್ನ ಸ್ವರೂಪವನ್ನು ಅರಿಯದೆ ವಿಷಯಾಸಕ್ತಿಯಿಂದ ಸಂಸಾರದಲ್ಲಿ ತೊಳಲುತ್ತಿರುವನು. ಯಾರು ಪಾಪವನ್ನು ತೊರೆದು ಶಮದಮಾದಿಗಳನ್ನು ಸಾಧಿಸಿಕೊಂಡು ಪ್ರಯತ್ನಮಾಡುವರೋ ಅವರು ತಮ್ಮ ಪರಮಾರ್ಥವಾದ ಈ ಸ್ವರೂಪವನ್ನು ಕಂಡುಕೊಳ್ಳುವರು.

೧೨-೧೫. “ ನನ್ನ ಸ್ವರೂಪವು ಸರ್ವಾತ್ಮವಾಗಿರುವದರಿಂದ ಸೂರ್ಯ, ಚಂದ್ರ, ಅಗ್ನಿ, ಭೂಮಿ, ಸೋಮ, ಉದರದಲ್ಲಿರುವ ವೈಶ್ವಾನರಾಗ್ನಿ ಮುಂತಾದ ರೂಪಗಳಿಂದ ಸಕಲ ವ್ಯವಹಾರಗಳನ್ನೂ ನೆರವೇರಿಸುತ್ತಿರುವದಲ್ಲದೆ ಸಕಲ ಪ್ರಾಣಿಗಳ ಹೃದಯದಲ್ಲಿ ಅವರ ಆತ್ಮರೂಪದಿಂದಲೇ ಇದ್ದುಕೊಂಡಿರುತ್ತದೆ.

೧೬-೧೯. “ ಇರವಿನ ರಾಶಿಯನ್ನೆಲ್ಲ ಮೂರು ಪಂಗಡಗಳಾಗಿ ವಿಂಗಡಿಸಬಹುದು, ಇಲ್ಲಿ ಮೂರಕ್ಕೂ ಪುರುಷನೆಂದು ಹೆಸರು. ಇವುಗಳಲ್ಲಿ ಭೂತಭೌತಿಕರೂಪದಿಂದ ಹೊರಗೆ ತೋರುತ್ತಿರುವ ಕಾರ್ಯಪ್ರಪಂಚವೇ ಒಂದು ರಾಶಿ. ಇದಕ್ಕೆ ಕ್ಷರಪುರುಷ ಎಂದು ಹೆಸರು ಏಕೆಂದರೆ ಇದು ವಿಕಾರವಾಗುತ್ತಿದ್ದು ಕೊನೆಗೆ ನಾಶವಾಗುತ್ತದೆ. ಈ ಕ್ಷರವು ಪ್ರಲಯದಲ್ಲಿ ಯಾವ ಬೀಜರೂಪವನ್ನು ಹೊಂದುವದೋ ಅದು ಎರಡನೆಯ ರಾಶಿ. ಅದಕ್ಕೆ ಅಕ್ಷರಪುರುಷ ಎಂದು ಹೆಸರು. ಏಕೆಂದರೆ ಅದು ಸಂಸಾರವಿರುವವರೆಗೂ ನಾಶವಾಗುವದಿಲ್ಲ. ಈ ಕ್ಷರಾಕ್ಷರಗಳೆರಡನ್ನೂ ಬೆಳಗುತ್ತಾ ತನ್ನ ಇರವಿನಿಂದ ಅವಕ್ಕೂ ಇರವನ್ನು ಕೊಡುತ್ತಾ ಅವುಗಳಿಗೆ ತಿರುಳಾಗಿರುವ ನಿರ್ವಿಕಾರನಾದ ಪರಮಾತ್ಮನೇ ಇವೆರಡಕ್ಕಿಂತಲೂ ಅತ್ಯಂತವಿಲಕ್ಷಣಸ್ವಭಾವವುಳ್ಳ ಮೂರನೆಯ ರಾಶಿ. ಕ್ಷರಾಕ್ಷರಗಳು ಪರತಂತ್ರವಾದ ಇರವುಗಳುಳ್ಳವಾದ್ದರಿಂದ ಅವೆರಡು ರಾಶಿಗಳನ್ನೂ ಪುರುಷನೆನ್ನುವದು ಉಪಚಾರಕ್ಕೆ. ಅವುಗಳ ಆತ್ಮನೇ ಆಗಿರುವ ನಾನು ನಿಜ

ವಾಗಿಯೂ ಪುರುಷನಾಗಿರುವದರಿಂದ ಪುರುಷೋತ್ತಮನು. ಆದ್ದರಿಂದಲೇ ವೇದದಲ್ಲಿಯೂ ಲೋಕದಲ್ಲಿಯೂ ನನಗೆ '' ಪುರುಷೋತ್ತಮ '' ನೆಂಬ ಹೆಸರು ಪ್ರಸಿದ್ಧವಾಗಿರುತ್ತದೆ. ಇದನ್ನರಿತುಕೊಂಡವನು ಸರ್ವಾತ್ಮಭಾವವನ್ನು ಹೊಂದಿ ನನ್ನನ್ನು ಸರ್ವಭಾವದಿಂದಲೂ ಭಜಿಸುವ ಸರ್ವಜ್ಞನಾಗುವನು. ''

೨೦. '' ಇದೇ ಇಡಿಯ ಶಾಸ್ತ್ರದ ಒಳಗುಟ್ಟು. ಇದನ್ನು ಅರಿತುಕೊಂಡವನೇ ಜ್ಞಾನಿಯು, ಕೃತಕೃತ್ಯನು. ಏಕೆಂದರೆ ಪುರುಷೋತ್ತಮತತ್ತ್ವವನ್ನು ಅರಿತುಕೊಂಡಮೇಲೆ ಅರಿಯತಕ್ಕದ್ದಾಗಲಿ ಮಾಡತಕ್ಕದ್ದಾಗಲಿ ಮತ್ತೇನೂ ಉಳಿದಿರುವದಿಲ್ಲ,

---

# ಹದಿನಾರನೆಯ ಅಧ್ಯಾಯ

## (ದೈವಾಸುರ ಸಂಪದ್ವಿಭಾಗಯೋಗ)

## ಅಧ್ಯಾಯದ ಸಂಬಂಧ

(ಭಾಷ್ಯ)

೩೮೫. ದೈವೀ ಆಸುರೀ ರಾಕ್ಷಸೀ ಚ ಇತಿ ಪ್ರಾಣಿನಾಂ ಪ್ರಕೃತಯಃ ನವಮೇ ಅಧ್ಯಾಯೇ ಸೂಚಿತಾಃ । ತಾಸಾಂ ವಿಸ್ತರೇಣ ಪ್ರದರ್ಶನಾಯ "ಅಭಯಂ ಸತ್ತ್ವಸಂಶುದ್ಧಿಃ" ಇತ್ಯಾದಿಃ ಅಧ್ಯಾಯಃ ಆರಭ್ಯತೇ । ತತ್ರ ಸಂಸಾರಮೋಕ್ಷಾಯ ದೈವೀ ಪ್ರಕೃತಿಃ, ನಿಬನ್ಧಾಯ ಆಸುರೀ ರಾಕ್ಷಸೀ ಚ ಇತಿ ದೈವ್ಯಾಃ ಆದಾನಾಯ ಪ್ರದರ್ಶನಂ ಕ್ರಿಯತೇ ಇತರಯೋಃ ಪರಿವರ್ಜನಾಯ ಚ ॥

(ಭಾಷ್ಯಾರ್ಥ)

ಒಂಬತ್ತನೆಯ ಅಧ್ಯಾಯದಲ್ಲಿ (೯-೧೨, ೧೩) ದೇವತೆಗಳಿಗೆ ಸೇರಿದ್ದು, ಅಸುರರಿಗೆ ಸೇರಿದ್ದು, ರಾಕ್ಷಸರಿಗೆ ಸೇರಿದ್ದು-ಎಂದು ಜೀವರಿಗೆ (ಮೂರು ಬಗೆಯ) ಪ್ರಕೃತಿಗಳು (ಇರುವವೆಂದು) ಸೂಚಿಸಲಾಗಿತ್ತು. ಅವುಗಳನ್ನು ವಿಸ್ತಾರವಾಗಿ ತಿಳಿಯಿಸಿ ಕೊಡುವದಕ್ಕಾಗಿ "ಅಭಯಂ ಸತ್ತ್ವಸಂಶುದ್ಧಿಃ" ಎಂದು ಮುಂತಾಗಿರುವ (ಈ) ಅಧ್ಯಾಯವನ್ನು ಪ್ರಾರಂಭಿಸಿರುತ್ತದೆ ಇವುಗಳಲ್ಲಿ ದೈವಪ್ರಕೃತಿಯು ಸಂಸಾರದಿಂದ ಬಿಡುಗಡೆಯಾಗುವ (ಫಲವನ್ನು ಕೊಡುವ)ದಕ್ಕೆ, ಆಸುರೀ (ಪ್ರಕೃತಿಯೂ) ರಾಕ್ಷಸೀ (ಪ್ರಕೃತಿಯೂ ಸಂಸಾರಕ್ಕೆ) ಕಟ್ಟುಬೀಳುವದಕ್ಕೆ (ಕಾರಣವಾಗುತ್ತವೆ). ಆದ್ದರಿಂದ ದೈವ (ಪ್ರಕೃತಿಯನ್ನು) ಸಂಪಾದಿಸಿಕೊಳ್ಳಬೇಕು ಎಂಬುದಕ್ಕಾಗಿ (ಅದನ್ನೂ) ಉಳಿದವುಗಳನ್ನು ಬಿಡಬೇಕೆಂಬುದಕ್ಕಾಗಿ (ಅವನ್ನೂ) ವಿವರಿಸಲಾಗುತ್ತದೆ.

## ದೈವ ಸಂಪತ್ತು

**ಶ್ರೀ ಭಗವಾನ್ ಉವಾಚ—**

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ೧ ॥**
**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾನ್ತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್॥**

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವನ್ತಿ ಸಮ್ಪದಂ ದೈವೀಮಭಿಜಾತಸ್ಯ ಭಾರತ ॥ ೩ ॥**

೧-೩. ಎಲೈ ಭರತವಂಶೋತ್ಪನ್ನನೆ, ಅಭಯ, ಸತ್ತ್ವಸಂಶುದ್ಧಿ, ಜ್ಞಾನಯೋಗವ್ಯವಸ್ಥಿತಿ, ದಾನ, ದಮ, ಯಜ್ಞ, ಸ್ವಾಧ್ಯಾಯ, ತಪ, ಆರ್ಜವ; ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ, ಶಾನ್ತಿ, ಅಪೈಶುನ, ಭೂತಗಳಲ್ಲಿ ದಯೆ, ಅಲೋಲುಪ್ತ್ವ, ಮಾರ್ದವ, ಹ್ರೀ, ಅಚಾಪಲ; ತೇಜ, ಕ್ಷಮೆ, ಧೃತಿ, ಶೌಚ, ಅದ್ರೋಹ, ನಾತಿಮಾನತೆ-(ಇವುಗಳು) ದೈವಸಂಪತ್ತಿಗಾಗಿ ಹುಟ್ಟಿರುವವನಿಗೆ ಉಂಟಾಗುವವು.

(ಭಾಷ್ಯ)

೩೮೬. ಅಭಯಮ್ ಅಭೀರುತಾ। ಸತ್ತ್ವಸಂಶುದ್ಧಿಃ ಸತ್ತ್ವಸ್ಯ ಅನ್ತಃಕರಣಸ್ಯ ಸಂಶುದ್ಧಿಃ ಸಂವ್ಯವಹಾರೇಷು ಪರವಞ್ಚನಮಾಯಾನೃತಾದಿಪರಿವರ್ಜನಮ್ । ಶುದ್ಧಸತ್ತ್ವಭಾವೇನ[1] ವ್ಯವಹಾರಃ ಇತ್ಯರ್ಥಃ । ಜ್ಞಾನಯೋಗವ್ಯವಸ್ಥಿತಿಃ । ಜ್ಞಾನಂ ಶಾಸ್ತ್ರತಃ ಆಚಾರ್ಯತಶ್ಚ ಆತ್ಮಾದಿಪದಾರ್ಥಾನಾಮ್ ಅವಗಮಃ। ಅವಗತಾನಾಮ್ ಇನ್ದ್ರಿಯಾದ್ಯುಪಸಂಹಾರೇಣ ಏಕಾಗ್ರತಯಾ ಸ್ವಾತ್ಮಸಂವೇದ್ಯತಾಪಾದನಂ ಯೋಗಃ। ತಯೋಃ ಜ್ಞಾನಯೋಗಯೋಃ ವ್ಯವಸ್ಥಿತಿಃ ವ್ಯವಸ್ಥಾನಂ ತನ್ನಿಷ್ಠತಾ[2] ।ಏಷಾ ಪ್ರಧಾನಾ ದೈವೀ ಸಾತ್ತ್ವಿಕೀ ಸಂಪತ್। ಯತ್ರ ಚ[3] ಯೇಷಾಮ್ ಅಧಿಕೃತಾನಾಂ ಯಾ ಪ್ರಕೃತಿಃ ಸಮ್ಭವತಿ ಸಾತ್ತ್ವಿಕೀ ಸಾ ಉಚ್ಯತೇ। ದಾನಂ ಯಥಾಶಕ್ತಿ ಸಂವಿಭಾಗೋಽನ್ನಾದೀನಾಮ್ । ದಮಶ್ಚ ಬಾಹ್ಯಕರಣಾನಾಮ್ ಉಪಶಮಃ। ಅನ್ತಃಕರಣಸ್ಯ ಉಪಶಮಂ ಶಾನ್ತಿಂ[4] ವಕ್ಷ್ಯತಿ। ಯಜ್ಞಶ್ಚ ಶ್ರೌತಃ ಅಗ್ನಿಹೋತ್ರಾದಿಃ ಸ್ಮಾರ್ತಶ್ಚ ದೈವಯಜ್ಞಾದಿಃ। ಸ್ವಾಧ್ಯಾಯಃ ಋಗ್ವೇದಾದ್ಯಧ್ಯಯನಮ್ ಅದೃಷ್ಟಾರ್ಥಮ್ । ತಪಃ ವಕ್ಷ್ಯಮಾಣಂ ಶಾರೀರಾದಿ। ಆರ್ಜವಮ್ ಋಜುತ್ವಂ ಸರ್ವದಾ ॥

---

1. ' ಶುದ್ಧಭಾವೇನ ' ನಿ||; ಇಷ್ಟಿದ್ದರೂ ಸಾಕು.
2. ' ತನ್ನಿಷ್ಠಾ' ಮ||
3. ಮ||ಮೈ|| ಗಳಲ್ಲಿಲ್ಲ.
4. ' ಉಪಶಾನ್ತಿಮ್ ' ಎಂದಿಷ್ಟೇ ಇರುವ ಮ|| ಪಾಠವು ಅಚ್ಚಿನ ತಪ್ಪಾಗಿರಬೇಕು.

(ಭಾಷ್ಯಾರ್ಥ)

**ಅಭಯವು :** ಅಂಜುಬುರುಕನಾಗದೆ[1] ಇರುವದು. **ಸತ್ತ್ವಸಂಶುದ್ಧಿ :** ಸತ್ತ್ವದ, ಅಂತಃಕರಣದ, ಸಂಶುದ್ಧಿ ; ನಡೆನುಡಿಗಳಲ್ಲಿ ಹೆರರನ್ನು ಮೋಸಗೊಳಿಸುವದು ; ಕಪಟ, ಸುಳ್ಳು[2] ಮುಂತಾದವುಗಳನ್ನು ಬಿಟ್ಟಿರುವದು. ಶುದ್ಧ (ಸತ್ತ್ವದಿಂದ ಕೂಡಿದ ಮನೋ[3])ಭಾವದಿಂದ ವ್ಯವಹರಿಸುವದು ಎಂದರ್ಥ. **ಜ್ಞಾನಯೋಗವ್ಯವಸ್ಥಿತಿ:** ಜ್ಞಾನವೆಂದರೆ ಶಾಸ್ತ್ರದಿಂದಲೂ ಆಚಾರ್ಯರಿಂದಲೂ ಆತ್ಮನೇ ಮುಂತಾದ ಪದಾರ್ಥಗಳನ್ನು ನಿಶ್ಚಯಿಸಿಕೊಳ್ಳುವದು ; ಯೋಗವೆಂದರೆ (ಹಾಗೆ) ನಿಶ್ಚಯಿಸಿಕೊಂಡದ್ದನ್ನು ಇಂದ್ರಿಯವೇ ಮುಂತಾದವುಗಳನ್ನು ಒಳಸರಿಯಿಸಿಕೊಂಡು (ಮನಸ್ಸನ್ನು) ಏಕಾಗ್ರತೆ(ಗೊಳಿಸಿಕೊಂಡು) ತನ್ನ ಅರಿವಿಗೆ ಗೋಚರವಾಗಿಸಿಕೊಳ್ಳುವದು[4]. ಆ ಜ್ಞಾನಯೋಗಗಳಲ್ಲಿ ವ್ಯವಸ್ಥಿತಿ ಎಂದರೆ ನಿಲ್ಲುವದು. ಅವುಗಳಲ್ಲಿ ನಿಷ್ಠನಾಗಿರುವದು. **ಇದೇ ಮುಖ್ಯವಾದ ಸಾತ್ತ್ವಿಕವಾದ ದೈವಸಂಪತ್ತು.**[5]

ಇನ್ನು ಎಲ್ಲಿ ಯಾವ ಅಧಿಕಾರಿಗಳಿಗೆ ಯಾವ ಸಾತ್ತ್ವಿಕ ಪ್ರಕೃತಿಯು ಇರಬಹುದೋ ಅದನ್ನು[6] ಹೇಳುತ್ತಾನೆ :—**ದಾನ:** ಕೈಯಲ್ಲಾದಮಟ್ಟಿಗೆ ಅನ್ನವೇ ಮುಂತಾದವುಗಳನ್ನು (ಯೋಗ್ಯರಿಗೆ) ಹಂಚಿಕೊಡುವದು. **ದಮ :** ಹೊರಗಿನ ಕರಣಗಳನ್ನು ಹಿಡಿತದಲ್ಲಿಡುವದು. ಅಂತಃಕರಣವನ್ನು ಹಿಡಿತದಲ್ಲಿಡುವದೆಂಬ **ಶಾಂತಿ**ಯನ್ನು (ಮುಂದಿನ ಶ್ಲೋಕದಲ್ಲಿ) ಹೇಳುವನು. (ಆದ್ದರಿಂದ ಇಲ್ಲಿ ದಮಶಬ್ದಕ್ಕೆ ಈ ಅರ್ಥವನ್ನೇ ಮಾಡಬೇಕು). **ಯಜ್ಞ :** ಅಗ್ನಿಹೋತ್ರವೇ ಮುಂತಾದ **ಶ್ರೌತ** (ಯಜ್ಞ) ಮತ್ತು ದೇವಯಜ್ಞವೇ ಮುಂತಾದ **ಸ್ಮಾರ್ತ** (ಯಜ್ಞ)[7]

---

1. ಅಂಜುವ ಸ್ವಭಾವವಿಲ್ಲದೆ.

2. ಪ್ರ. ೧-೧೬.

3. ಕಂಸದಲ್ಲಿರುವ ಭಾಗವು ಪ|| ಪಾಠಕ್ಕೆ ಬೇಕಿಲ್ಲ.

4. ಶಾಸ್ತ್ರಾಚಾರ್ಯರಿಂದ ನಿಶ್ಚಯಿಸಿಕೊಳ್ಳುವದು ಶ್ರವಣಮನನಗಳು ; ತನ್ನ ಅರಿವಿಗೆ ಗೋಚರಿಸಿಕೊಳ್ಳುವದು_ಎಂದರೆ ಅನುಭವಕ್ಕೆ ತಂದುಕೊಳ್ಳುವದು_ನಿದಿಧ್ಯಾಸನ. ಆತ್ಮನನ್ನು ವಿಷಯವಾಗಿಸಿಕೊಳ್ಳುವದು ಎಂಬ ಅರ್ಥವನ್ನು ಮಾಡಬಾರದು. ಯೋಗಶಬ್ದಕ್ಕೆ ಜ್ಞಾನಕ್ಕೆ ಸಾಧನವಾದ ಧ್ಯಾನ ಎಂಬ ಅರ್ಥವನ್ನೂ ಮಾಡಬಾರದು.

5. ಇದು ಎಲ್ಲಾ ದೈವಸಂಪತ್ತಿನ ಫಲವು. ಇದೇ ಮುಮುಕ್ಷುವಿಗೆ ಮುಖ್ಯವಾಗಿ ಲಕ್ಷ್ಯದಲ್ಲಿರತಕ್ಕದ್ದು.

6. ಇನ್ನು ಮುಂದೆ ಹೇಳುವ ದೈವಸಂಪತ್ತಿನ ವಿವರವು ಎಲ್ಲಾ ಆಶ್ರಮದವರಿಗೂ ಹೊಂದುವದಿಲ್ಲ ; ಸಂದರ್ಭಾನುಸಾರವಾಗಿ ಹೊಂದಿಸಿ ತಿಳಿದುಕೊಳ್ಳಬೇಕು ಎಂದು ಭಾವ.

7. ಸ್ಮೃತಿಯಲ್ಲಿ ವಿಧಿಸಿರುವ ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ.

**ಸ್ವಾಧ್ಯಾಯ**: ಋಗ್ವೇದವೇ ಮುಂತಾದದ್ದನ್ನು ಅದೃಷ್ಟ (ಫಲಕ್ಕಾಗಿ) ಅಧ್ಯಯನ ಮಾಡುತ್ತಿರುವದು.[1] **ತಪಸ್ಸು**: ಮುಂದೆ ಹೇಳಿರುವ ಶಾರೀರವೇ ಮುಂತಾದ (ತಪಸ್ಸು).[2] **ಆರ್ಜವ**: ಯಾವಾಗಲೂ ಸರಳಸ್ವಭಾವದಿಂದ ಇರುವದು.[3]

(ಭಾಷ್ಯ)

೩೮೭. ಕಿಂಚ ಅಹಿಂಸಾ ಅಹಿಂಸನಂ ಪ್ರಾಣಿನಾಂ ಪೀಡಾವರ್ಜನಮ್ । ಸತ್ಯಮ್ ಅಪ್ರಿಯಾನೃತವರ್ಜಿತಂ ಯಥಾಭೂತಾರ್ಥವಚನಮ್ । ಅಕ್ರೋಧಃ ಪರೈಃ ಆಕ್ರುಷ್ಟಸ್ಯ ಅಭಿಹತಸ್ಯ ವಾ ಪ್ರಾಪ್ತಸ್ಯ ಕ್ರೋಧಸ್ಯ ಉಪಶಮನಮ್। ತ್ಯಾಗಃ ಸಂನ್ಯಾಸಃ । ಪೂರ್ವಂ ದಾನಸ್ಯ ಉಕ್ತತ್ವಾತ್ । ಶಾನ್ತಿಃ ಅನ್ತಃಕರಣಸ್ಯ ಉಪಶಮಃ । ಅಪೈಶುನಮ್ ಅಪಿಶುನತಾ । ಪರಸ್ಮೈ ಪರರನ್ಧ್ರಪ್ರಕಟೀಕರಣಂ ಪೈಶುನಮ್ । ತದಭಾವಃ ಅಪೈಶುನಮ್ । ದಯಾ ಕೃಪಾ ಭೂತೇಷು ದುಃಖಿತೇಷು । ಅಲೋಲುಪ್ತ್ವಮ್ ಇನ್ದ್ರಿಯಾಣಾಂ ವಿಷಯಸಂನಿಧೌ ಅವಿಕ್ರಿಯಾ । ಮಾರ್ದವಂ ಮೃದುತಾ ಅಕ್ರೌರ್ಯಮ್ । ಹ್ರೀಃ ಲಜ್ಜಾ । ಅಚಾಪಲಮ್ ಅಸತಿ ಪ್ರಯೋಜನೇ ವಾಕ್ಪಾಣಿಪಾದಾದೀನಾಮ್ ಅವ್ಯಾಪಾರಯಿತೃತ್ವಮ್ ।

(ಭಾಷ್ಯಾರ್ಥ)

ಮತ್ತು **ಅಹಿಂಸೆ**: ಹಿಂಸೆ ಮಾಡದಿರುವದು, ಪ್ರಾಣಿಗಳಿಗೆ ತೊಂದರೆಯನ್ನು ಮಾಡದಿರುವದು. **ಸತ್ಯ**: ಅಪ್ರಿಯವಾದದ್ದನ್ನೂ ಸುಳ್ಳನ್ನೂ ಬಿಟ್ಟು ಇದ್ದದ್ದನ್ನೇ ಹೇಳುತ್ತಿರುವದು. **ಅಕ್ರೋಧ**: ಮತ್ತೊಬ್ಬರು ತನ್ನನ್ನು ಬಯ್ದರೂ ಹೊಡೆದರೂ ಬಂದ ಸಿಟ್ಟನ್ನು ತಡೆದುಕೊಳ್ಳುವದು. **ತ್ಯಾಗ**: ಸಂನ್ಯಾಸವು; ದಾನವನ್ನು (ಆಗಲೆ) ಹೇಳಿರುವದರಿಂದ (ಇಲ್ಲಿ ಸಂನ್ಯಾಸವೆಂಬ ಅರ್ಥವನ್ನು ಇಟ್ಟುಕೊಂಡಿದೆ). **ಶಾಂತಿ**: ಅಂತಃಕರಣವನ್ನು ಹಿಡಿತದಲ್ಲಿಟ್ಟುಕೊಂಡಿರುವದು **ಅಪೈಶುನ**: ಪಿಶುನನಾಗದೆ ಇರುವದು: ಒಬ್ಬನಿಗೆ ಇನ್ನೊಬ್ಬನ ಮರ್ಮವನ್ನು ತಿಳಿಯಪಡಿಸುವದು ಪೈಶುನವು (ಚಾಡಿಕೋರತನವು); ಅದಿಲ್ಲದಿರುವದು ಅಪೈಶುನವು. **ದಯೆ**: ದುಃಖ

1. ಇದು ಬ್ರಹ್ಮಯಜ್ಞವೆಂಬ ಸ್ಮಾರ್ತಯಜ್ಞವು. ಇದು ಕಾಮ್ಯವಲ್ಲವೆಂದು ತಿಳಿಸುವದಕ್ಕೆ ಅದೃಷ್ಟಫಲವುಳ್ಳದ್ದೆಂದು ಹೇಳಿದೆ.

2. ಯಜ್ಞದಾನಾದಿಗಳಿಗೂ ಇದು ಅನ್ವಯಿಸುತ್ತದೆ, ಏಕೆಂದರೆ ಅವನ್ನೂ ಮೂರು ಬಗೆಯೆಂದು ಮುಂದಿನ ಅಧ್ಯಾಯದಲ್ಲಿ ಹೇಳಿದೆ.

3. ತ್ರಿಕರಣಗಳಿಂದ ಒಂದೇ ಸ್ವಭಾವವನ್ನು ಪ್ರಕಟಿಸುತ್ತಿರುವದು.

ಪಡುತ್ತಿರುವ ಪ್ರಾಣಿಗಳಲ್ಲಿ ಕನಿಕರವು. **ಅಲೋಲುಪ್ತ್ವ** : ವಿಷಯಗಳು ಹತ್ತಿರ ವಿರುವಾಗಲೂ ಇಂದ್ರಿಯಗಳು ವಿಕಾರವಿಲ್ಲದೆ ಇರುವದು. **ಮಾರ್ದವ** : ಮೃದುವಾಗಿರುವಿಕೆ, ಕ್ರೂರತನವಿಲ್ಲದಿರುವದು. **ಹ್ರೀ** : ನಾಚಿಕೆ. **ಅಚಾಪಲ** : (ಯಾವ) ಪ್ರಯೋಜನವೂ ಇಲ್ಲದಿರುವಾಗ ವಾಕ್ಕು, ಪಾಣಿ, ಪಾದ-ಮುಂತಾದವುಗಳನ್ನು ಕೆಲಸ ಮಾಡಿಸದೆ ಇರುವದು.

(ಭಾಷ್ಯ)

೩೮೮. ಕಿಂಚ **ತೇಜಃ** ಪ್ರಾಗಲ್ಭ್ಯಮ್, ನ ತ್ವಗ್ಗತಾ ದೀಪ್ತಿಃ । **ಕ್ಷಮಾ** ಆಕ್ರುಷ್ಟಸ್ಯ ತಾಡಿತಸ್ಯ ವಾ ಅನ್ತರ್ವಿಕ್ರಿಯಾನುತ್ಪತ್ತಿಃ । ಉತ್ಪನ್ನಾಯಾಂ ವಿಕ್ರಿಯಾಯಾಮ್ ಉಪಶಮನಮ್ ಅಕ್ರೋಧಃ ಇತ್ಯವೋಚಾಮ । ಇತ್ಥಂ ಕ್ಷಮಾಯಾಃ ಅಕ್ರೋಧಸ್ಯ ಚ ವಿಶೇಷಃ । **ಧೃತಿಃ** ದೇಹೇನ್ದ್ರಿಯೇಷು ಅವಸಾದಂ ಪ್ರಾಪ್ತೇಷು ತಸ್ಯ ಪ್ರತಿಷೇಧಕಃ ಅನ್ತಃಕರಣವೃತ್ತಿವಿಶೇಷಃ, ಯೇನ ಉತ್ತಮ್ಭಿತಾನಿ ಕರಣಾನಿ ದೇಹಶ್ಚ ನಾವಸೀದನ್ತಿ । **ಶೌಚಂ** ದ್ವಿವಿಧಮ್ । ಮೃಜ್ಜಲಕೃತಂ ಬಾಹ್ಯಮ್, ಆಭ್ಯನ್ತರಂ ಚ ಮನೋಬುದ್ಧ್ಯೋಃ ನೈರ್ಮಲ್ಯಮ್ ಮಾಯಾರಾಗಾದಿಕಾಲುಷ್ಯಾಭಾವಃ। ಏವಂ ದ್ವಿವಿಧಂ ಶೌಚಮ್ । **ಅದ್ರೋಹಃ** ಪರಜಿಘಾಂಸಾಭಾವಃ, ಅಹಿಂಸನಮ್ । **ನಾತಿಮಾನಿತಾ** । ಅತ್ಯರ್ಥಂ ಮಾನಃ ಅತಿಮಾನಃ । ಸ ಯಸ್ಯ ವಿದ್ಯತೇ ಸಃ ಅತಿಮಾನೀ । ತದ್ಭಾವಃ ಅತಿಮಾನಿತಾ । ತದಭಾವಃ ನಾತಿಮಾನಿತಾ । ಆತ್ಮನಃ ಪೂಜ್ಯತಾತಿಶಯಭಾವನಾಭಾವಃ ಇತ್ಯರ್ಥಃ । ಭವನ್ತಿ ಅಭಯಾದೀನಿ ಏತದನ್ತಾನಿ ಸಮ್ಪದಮ್ ಅಭಿಜಾತಸ್ಯ । ಕಿಂವಿಶಿಷ್ಟಾಂ ಸಂಪದಮ್ ? ದೈವೀಂ ದೇವಾನಾಂ ಯಾ ಸಂಪತ್ ತಾಮ್ ಅಭಿಲಕ್ಷ್ಯ ಜಾತಸ್ಯ ದೇವವಿಭೂತ್ಯರ್ಹಸ್ಯ ಭಾವಿಕಲ್ಯಾಣಸ್ಯ ಇತ್ಯರ್ಥಃ । ಹೇ ಭಾರತ ॥

(ಭಾಷ್ಯಾರ್ಥ)

ಮತ್ತು-**ತೇಜಸ್ಸು** : ಗಟ್ಟಿಗತನ, ಚರ್ಮದ ಕಾಂತಿಯಲ್ಲ. **ಕ್ಷಮೆ** : ಬಯ್ದರೂ ಹೊಡೆದರೂ ಒಳಗೆ ವಿಕಾರವಿಲ್ಲದಿರುವದು. ವಿಕಾರವುಂಟಾದಮೇಲೆ (ಅದನ್ನು) ತಡೆದುಕೊಳ್ಳುವದು ಅಕ್ರೋಧ ಎಂದು (ಮೇಲೆ) ಹೇಳಿರುತ್ತೇವೆ. ಹೀಗೆ ಕ್ಷಮೆಗೂ ಅಕ್ರೋಧಕ್ಕೂ ವಿಶೇಷವಿರುತ್ತದೆ. **ಧೃತಿ** : ದೇಹವೂ ಇಂದ್ರಿಯಗಳೂ ಕುಸಿಬೀಳುತ್ತಿರುವಾಗ ಅದನ್ನು ತಡೆಗಟ್ಟುವ ಅಂತಃಕರಣದ ಒಂದಾನೊಂದು ವೃತ್ತಿ(ಯಿದು). ಇದರ ಒತ್ತಾಸೆಯಿಂದ ಕರಣಗಳೂ ದೇಹವೂ ಕುಸಿಬೀಳದೆ ಇರುತ್ತವೆ. **ಶೌಚ** : (ಇದು) ಎರಡು ಬಗೆ: ಮಣ್ಣು, ನೀರು-(ಇವುಗಳಿಂದ) ಮಾಡಿಕೊಳ್ಳುವ (ಶೌಚವು) ಹೊರಗಿನದು. ಒಳಗಿನ ಶುಚಿತ್ವವೆಂದರೆ ಮನೋಬುದ್ಧಿಗಳನ್ನು ನಿರ್ಮಲವಾಗಿಟ್ಟು

ಕೊಳ್ಳುವದು; ಮಾಯೆ, ರಾಗ-ಮುಂತಾದ ಕಲ್ಮಷವಿಲ್ಲದಿರುವದು. ಹೀಗೆ ಎರಡು ಬಗೆಯ ಶೌಚವು. **ಅದ್ರೋಹ**: ಮತ್ತೊಬ್ಬರಿಗೆ ಹಿಂಸೆಯನ್ನುಂಟುಮಾಡಬೇಕೆಂಬ ಇಚ್ಛೆಯಿಲ್ಲದಿರುವದೆಂಬ ಅಹಿಂಸೆ. **ನಾತಿಮಾನಿತೆ**: ಬಹಳವಾಗಿ ಅಭಿಮಾನವುಳ್ಳವನಾಗಿರುವದು ಅತಿಮಾನವು; ಅದು ಯಾವನಿಗೆ ಇರುವದೋ ಅವನು ಅತಿಮಾನಿಯು; ಅವನ ಸ್ವಭಾವವು ಅತಿಮಾನಿತ್ವವು. ಅದಿಲ್ಲದ್ದು ನಾತಿಮಾನಿತೆ. ತನ್ನಲ್ಲಿ ಹೆಚ್ಚಿನ ಪೂಜ್ಯತೆಯಿರುವದೆಂಬ ಭಾವನೆಯಿಲ್ಲದಿರುವದು ಎಂದರ್ಥ.

ಅಭಯವೇ ಮುಂತಾಗಿ ಈ (ನಾತಿಮಾನತೆಯ)ವರೆಗಿನ (ಗುಣಗಳು) ಸಂಪತ್ತಿಗಾಗಿ ಹುಟ್ಟಿದವನಿಗೆ ಇರುತ್ತವೆ. ಎಂಥಾ ಸಂಪತ್ತಿಗಾಗಿ? ಎಂದರೆ ದೈವ (ಸಂಪತ್ತಿಗಾಗಿ), ದೇವತೆಗಳ ಸಂಪತ್ತಿದೆಯಲ್ಲ, ಅದಕ್ಕಾಗಿ ಹುಟ್ಟಿದವನಿಗೆ, ದೇವ ವಿಭೂತಿಗೆ ಅರ್ಹನಾಗಿರುವವನಿಗೆ, ಮುಂದೆ ಕಲ್ಯಾಣವಾಗಬೇಕಾಗಿರುವಾತನಿಗೆ ಎಂದರ್ಥ. ಎಲೈ ಭರತವಂಶೋತ್ಪನ್ನನೆ, (ಇವು ಇಂಥವನಲ್ಲಿರುತ್ತವೆ).

## ಆಸುರ ಸಂಪತ್ತು

(ಭಾಷ್ಯ)

೩೮೯. ಅಥ ಇದಾನೀಮ್ ಆಸುರೀ ಸಮ್ಪತ್ ಉಚ್ಯತೇ—

(ಭಾಷ್ಯಾರ್ಥ)

ಇನ್ನು ಈಗ ಆಸುರಸಂಪತ್ತನ್ನು ಹೇಳಲಾಗುತ್ತದೆ —

**ದಮ್ಭೋ ದರ್ಪೋಽತಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಮ್ಪದಮಾಸುರೀಮ್ ॥ ೪ ॥**

೪. ದಂಭ, ದರ್ಪ, ಅತಿಮಾನ, ಕ್ರೋಧ, ಪಾರುಷ್ಯ, ಮತ್ತು ಅಜ್ಞಾನ-(ಇವು) ಎಲೈ ಪಾರ್ಥನೆ, ಆಸುರಸಂಪತ್ತಿಗಾಗಿ ಹುಟ್ಟಿರುವವನಿಗೆ (ಉಂಟಾಗಿರುತ್ತವೆ).

(ಭಾಷ್ಯ)

೩೯೦. ದಮ್ಭಃ ಧರ್ಮಧ್ವಜಿತ್ವಮ್ । ದರ್ಪಃ ವಿದ್ಯಾಧನಸ್ವಜನಾದಿ ನಿಮಿತ್ತ ಉತ್ಸೇಕಃ । ಅತಿಮಾನಃ ಪೂರ್ವೋಕ್ತಃ । ಕ್ರೋಧಶ್ಚ । ಪಾರುಷ್ಯಮೇವ ಚ ಪರುಷವಚನಮ್ । ಯಥಾ ಕಾಣಂ ಚಕ್ಷುಷ್ಮಾನ್ ವಿರೂಪಂ ರೂಪವಾನ್, ಹೀನಾಭಿಜನಮ್ ಉತ್ತಮಾಭಿಜನಃ ಇತ್ಯಾದಿ । ಅಜ್ಞಾನಂ ಚ ಅವಿವೇಕಜ್ಞಾನಮ್,

ಕರ್ತವ್ಯಾಕರ್ತವ್ಯಾದಿ[1] ವಿಷಯಮಿಥ್ಯಾಪ್ರತ್ಯಯಃ ಅಭಿಜಾತಸ್ಯ ಪಾರ್ಥ। ಕಿಮಭಿಜಾತಸ್ಯ ಇತಿ ? ಆಹ–ಸಮ್ಪದಮ್ ಆಸುರೀಮ್। ಅಸುರಾಣಾಂ ಸಂಪತ್ ಆಸುರೀ। ತಾಮ್ ಅಭಿಜಾತಸ್ಯ ಇತ್ಯರ್ಥಃ[2]॥

(ಭಾಷ್ಯಾರ್ಥ)

**ದಂಭ**: ಧರ್ಮವುಳ್ಳಾತನೆಂದು ತೋರಿಸಿಕೊಳ್ಳುತ್ತಿರುವದು. **ದರ್ಪ**: ವಿದ್ಯೆ, ಧನ, ತಮ್ಮವರು–ಮುಂತಾದ ನಿಮಿತ್ತದಿಂದಾಗಿರುವ ಸೊಕ್ಕು **ಅತಿಮಾನ**: ಹಿಂದಿನ (ಶ್ಲೋಕದ ಭಾಷ್ಯದಲ್ಲಿ) ಹೇಳಿರುವ (ಅಭಿಮಾನ). **ಕ್ರೋಧ**: (ಸಿಟ್ಟು) ಮತ್ತು **ಪಾರುಷ್ಯ**: ಬಿರುಸಾದ ಮಾತು, ಹೇಗೆಂದರೆ ಒಕ್ಕಣ್ಣನನ್ನು ಸುಂದರವಾದ ಕಣ್ಣುಳ್ಳವನೆನ್ನುವದು, ಕುರೂಪಿಯನ್ನು ರೂಪವಂತನೆನ್ನುವದು, ಕೀಳುವಂಶದಲ್ಲಿ ಹುಟ್ಟಿದವನನ್ನು ಉತ್ತಮಕುಲದವನೆನ್ನುವದು–ಮುಂತಾದದ್ದು. ಮತ್ತು **ಅಜ್ಞಾನವು**: ವಿಂಗಡಿಸಿ ತಿಳಿಯದೆ ಇರುವದು ; ಮಾಡಬಹುದಾದದ್ದು, ಮಾಡಬಾರದ್ದು-ಮುಂತಾದವುಗಳ[3] ವಿಷಯಕ್ಕೆ ಇರುವ ತಪ್ಪು ತಿಳಿವಳಿಕೆ. ಎಲೈ ಪಾರ್ಥನೆ, ಇವು (ಅದಕ್ಕಾಗಿ) ಹುಟ್ಟಿದವನಿಗೆ (ಉಂಟಾಗಿರುವವು). ಯಾವದಕ್ಕಾಗಿ ಹುಟ್ಟಿದವನಿಗೆ ? ಆಸುರ ಸಂಪತ್ತನ್ನು–ಅಸುರರ ಸಂಪತ್ತು ಆಸುರ ಸಂಪತ್ತು ; ಅದನ್ನು–(ಪಡೆಯುವದಕ್ಕಾಗಿ) ಹುಟ್ಟಿದಾತನಿಗೆ (ಉಂಟಾಗಿರುವವು ಎಂದು ಸೇರಿಸಿಕೊಳ್ಳಬೇಕು).[4]

## ದೈವಾಸುರಸಂಪತ್ತುಗಳ ಕಾರ್ಯ

(ಭಾಷ್ಯ).

೩೯೧. ಅನಯೋಃ ಸಮ್ಪದೋಃ ಕಾರ್ಯಮ್ ಉಚ್ಯತೇ—

(ಭಾಷ್ಯಾರ್ಥ)

ಈ ಸಂಪತ್ತುಗಳ ಕಾರ್ಯವನ್ನು ಹೇಳುತ್ತಾನೆ:—

**ದೈವೀಸಮ್ಪದ್ವಿಮೋಕ್ಷಾಯ ನಿಬನ್ಧಾಯಾಸುರೀ ಮತಾ।**
**ಮಾ ಶುಚಃ ಸಮ್ಪದಂ ದೈವೀಮಭಿಜಾತೋಽಸಿ ಪಾಣ್ಡವ ॥ ೫ ॥**

---

1. ' ಕರ್ತವ್ಯಾದಿ ' ಎಂದಿಷ್ಟೇ ಮ॥
2. " ಭವನ್ತಿ ಇತಿ ಅನುವರ್ತತೇ " ಎಂದು ಹೆಚ್ಚಾಗಿ ಮ॥
3. ನಿಜವಾದದ್ದು, ನಿಜವಲ್ಲದ್ದು–ಮುಂತಾದದ್ದರ.
4. ಮ॥ ದಲ್ಲಿರುವ ಹೆಚ್ಚಿನ ವಾಕ್ಯದ ಅರ್ಥವಿದು.

೫. ಎಲೈ ಪಾಂಡವನೆ, ದೈವಸಂಪತ್ತು ವಿಮೋಕ್ಷಕ್ಕೆ, ಆಸುರ (ಸಂಪತ್ತು) ನಿಬಂಧಕ್ಕೆ (ಕಾರಣವೆಂದು) ಸಮ್ಮತವಾಗಿರುತ್ತದೆ. ಶೋಕಿಸದಿರು, ದೈವಸಂಪತ್ತನ್ನು (ಪಡೆಯುವದಕ್ಕೆ) ಹುಟ್ಟಿರುವೆ.

(ಭಾಷ್ಯ)

೩೯೨. ದೈವೀ ಸಮ್ಪದ್ ಯಾ ಸಾ ವಿಮೋಕ್ಷಾಯ ಸಂಸಾರಬನ್ಧನಾತ್ । ನಿಬನ್ಧಾಯ ನಿಯತಃ ಬನ್ಧಃ ನಿಬನ್ಧಃ ತದರ್ಥಮ್ ಆಸುರೀ ಸಮ್ಪತ್ ಮತಾ ಅಭಿಪ್ರೇತಾ । ತಥಾ ರಾಕ್ಷಸೀ ಚ । ತತ್ರ ಏವಮುಕ್ತೇ ಅರ್ಜುನಸ್ಯ ಅನ್ತರ್ಗತಂ ಭಾವಂ "ಕಿಮ್ ಅಹಮ್ ಆಸುರಸಂಪದ್ಯುಕ್ತಃ ಕಿಂವಾ ದೈವಸಮ್ಪದ್ಯುಕ್ತಃ ?" ಇತ್ಯೇವಮಾಲೋಚನಾರೂಪಮ್ ಆಲಕ್ಷ್ಯ ಆಹ ಭಗವಾನ್–ಮಾ ಶುಚಃ ಶೋಕಂ ಮಾ ಕಾರ್ಷೀಃ । ಸಮ್ಪದಂ ದೈವೀಮ್ ಅಭಿಜಾತೋಽಸಿ ಅಭಿಲಕ್ಷ್ಯ ಜಾತೋಽಸಿ । ಭಾವಿಕಲ್ಯಾಣಸ್ತ್ವಮಸಿ ಇತ್ಯರ್ಥಃ । ಹೇ ಪಾಣ್ಡವ ॥

(ಭಾಷ್ಯಾರ್ಥ)

ಎಲೈ ಪಾಂಡವನೆ, ದೈವಸಂಪತ್ತು ಇರುವದಲ್ಲ, ಅದು ಸಂಸಾರಬಂಧದಿಂದ ಬಿಡುಗಡೆಯಾಗುವದಕ್ಕೆ (ಕಾರಣವು). ಆಸುರ ಸಂಪತ್ತು ನಿಬಂಧಕ್ಕೆ–ನಿಯತವಾಗಿ ಬಂಧವನ್ನೇ ಉಂಟುಮಾಡುವದು ನಿಬಂಧವು. ಅದಕ್ಕೆ (ಕಾರಣವು ಎಂದು) ಸಮ್ಮತವಾಗಿರುತ್ತದೆ, (ನನ್ನ) ಅಭಿಪ್ರಾಯವಾಗಿರುತ್ತದೆ. ರಾಕ್ಷಸ (ಸಂಪತ್ತೂ) ಹಾಗೆಯೇ.[1] ಹೀಗೆಂದು (ಭಗವಂತನು) ಹೇಳಲು "ನಾನೇನು ಆಸುರಸಂಪತ್ತಿನಿಂದೊಡಗೂಡಿದವನೊ, ಅಥವಾ ದೈವಸಂಪತ್ತಿನಿಂದೊಡಗೂಡಿದವನೊ ?" ಎಂದೀ ಬಗೆಯಲ್ಲಿ ಆಲೋಚಿಸುತ್ತಿರುವ ಅರ್ಜುನನ (ಮನಸ್ಸಿನ) ಒಳಗಿನ ಭಾವವನ್ನು ಕಂಡು ಭಗವಂತನು ಹೇಳುತ್ತಿದಾನೆ : ಶೋಕಿಸದಿರು, ಶೋಕವನ್ನು ಮಾಡಬೇಡ ; (ನೀನು) ದೈವಸಂಪತ್ತಿಗಾಗಿ ಅಭಿಜಾತನಾಗಿರುವೆ, ಅದಕ್ಕಾಗಿ ಹುಟ್ಟಿರುತ್ತೀಯೆ. ನೀನು ಮುಂದೆ ಒಳ್ಳೆಯದೇ ಆಗಬೇಕಾದವನಾಗಿರುವೆ ಎಂದರ್ಥ.

## ಆಸುರ ಸಂಪತ್ತಿನ ವಿವರ

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬ ॥**

---

1. ಆಸುರಸಂಪತ್ತಿನಲ್ಲಿಯೇ ಇದೂ ಅಡಕವಾಗಿದೆ.

೬. ಪಾರ್ಥನೆ, ಈ ಲೋಕದಲ್ಲಿ ದೈವವೆಂದೂ ಆಸುರವೆಂದೂ ಎರಡು ಭೂತಸರ್ಗಗಳು, ದೈವ (ಸರ್ಗ) ವನ್ನು ವಿಸ್ತಾರವಾಗಿ ಹೇಳಿದ್ದಾಯಿತು, ಆಸುರ (ಸರ್ಗ)ವನ್ನು ನನ್ನಿಂದ ಕೇಳಿ(ತಿಳಿದುಕೊ).

(ಭಾಷ್ಯ)

೩೯೩. ದ್ವೌ ದ್ವಿಸಙ್ಖ್ಯಾಕೌ ಭೂತಸರ್ಗೌ[1]। ಸೃಜ್ಯೇತೇ ಇತಿ ಸರ್ಗೌ। ಭೂತಾನ್ಯೇವ ಸೃಜ್ಯಮಾನಾನಿ ದೈವಾಸುರಸಂಪದ್ದ್ವಯಯುಕ್ತಾನಿ ದ್ವೌ ಭೂತಸರ್ಗೌ ಇತ್ಯುಚ್ಯೇತೇ। "ದ್ವಯಾ ಹ ವೈ ಪ್ರಾಜಾಪತ್ಯಾ ದೈವಾಶ್ಚಾಸುರಾಶ್ಚ" (ಬೃ. ೧-೩-೧) ಇತಿ ಶ್ರುತೇಃ। ಲೋಕೇ ಅಸ್ಮಿನ್। ಸಂಸಾರೇ ಇತ್ಯರ್ಥಃ। ಸರ್ವೇಷಾಂ ದ್ವೈವಿಧ್ಯೋಪಪತ್ತೇಃ। ಕೌ ತೌ ಭೂತಸರ್ಗೌ ಇತಿ? ಉಚ್ಯತೇ[2]। ಪ್ರಕೃತೌ ಏವ ದೈವಃ ಆಸುರ ಏವ ಚ। ಉಕ್ತಯೋರೇವ ಪುನಃ ಅನುವಾದೇ ಪ್ರಯೋಜನಮ್ ಆಹ–ದೈವಃ ಭೂತಸರ್ಗಃ "ಅಭಯಂ ಸತ್ತ್ವಸಂಶುದ್ಧಿಃ" (೧೬-೧) ಇತ್ಯಾದಿನಾ ವಿಸ್ತರಶಃ ವಿಸ್ತರಪ್ರಕಾರೈಃ ಪ್ರೋಕ್ತಃ ಕಥಿತಃ। ನ ತು ಆಸುರಃ[3]।ಅತಃ[4] ತತ್ಪರಿವರ್ಜನಾರ್ಥಮ್ ಆಸುರಂ ಪಾರ್ಥ ಮೇ ಮಮ ವಚನಾತ್ ಉಚ್ಯಮಾನಂ ವಿಸ್ತರಶಃ ಶೃಣು ಅವಧಾರಯ ॥

(ಭಾಷ್ಯಾರ್ಥ)

ಎಲೈ ಪಾರ್ಥನೆ, ಭೂತಸರ್ಗಗಳು ಎರಡು, ಎರಡು ಸಂಖ್ಯೆಯುಳ್ಳವು. ಭೂತಗಳ ಮನುಷ್ಯರ[5] ಸರ್ಗಗಳು, ಸೃಷ್ಟಿಗಳು ಭೂತಸರ್ಗಗಳು; ಸೃಷ್ಟಿಸಲ್ಪಡುವದರಿಂದ (ಇವು) ಸರ್ಗಗಳು. (ಈ) ಭೂತಗಳೇ ಸೃಷ್ಟಿಯಾಗುವಾಗ ದೈವ, ಆಸುರ –ಎಂಬ ಎರಡು ಸಂಪತ್ತುಗಳಿಂದೊಡಗೂಡಿ(ರುವದರಿಂದ) ಎರಡು ಭೂತಸರ್ಗಗಳು

---

1. ಭೂತಸರ್ಗೌ ಭೂತಸೃಷ್ಟೀ । ಸೃಜ್ಯತೇ ಇತಿ ಸರ್ಗಃ । ಭೂತಾನ್ಯೇವ ಸೃಜ್ಯಮಾನಾನಿ.... ಭೂತಸರ್ಗೌ ಇತಿ ಉಚ್ಯತೇ ಮ॥ ಮೈ॥

2. "ಕೌ ತೌ ಭೂತಸರ್ಗೌ ಇತಿ ಉಚ್ಯೇತೇ" ಅ॥ ನಿ॥

3. 'ವಿಸ್ತರಶಃ' ಎಂದು ಹೆಚ್ಚಾಗಿ ಅ॥ ನಿ॥

4. 'ಇತ್ಯತಃ' ಮೈ॥

5. ಭೂತಗಳೆಂದರೆ ಪ್ರಾಣಿಗಳೆಂದು ಸಾಮಾನ್ಯ ಅರ್ಥವಾದರೂ ಶಾಸ್ತ್ರದಲ್ಲಿ ಮನುಷ್ಯರಿಗೇ ಅಧಿಕಾರವೆಂಬುದನ್ನು ಸೂಚಿಸುವದಕ್ಕೆ ಮನುಷ್ಯರ ಎಂದು ಅರ್ಥಮಾಡಿರುತ್ತದೆ.

ಎಂದು ಹೇಳಿದೆ[1]. "ಪ್ರಜಾಪತಿಯ ವಂಶದವರು ದೇವತೆಗಳೆಂದೂ ಅಸುರರೆಂದೂ ಎರಡು ಬಗೆಯವರಾಗಿದ್ದರು." (ಬೃ ೧-೩-೧) ಎಂಬ ಶ್ರುತಿಯು (ಇದಕ್ಕೆ ಪ್ರಮಾಣವು). ಈ ಲೋಕದಲ್ಲಿ ಎಂದರೆ ಸಂಸಾರದಲ್ಲಿ ಎಂದು ಅರ್ಥ; ಏಕೆಂದರೆ ಎಲ್ಲರೂ (ಈ) ಎರಡು ಬಗೆಯವರಾಗಿರುತ್ತಾರೆಂಬುದೇ ಹೊಂದುತ್ತದೆ[2]. ಈ ಭೂತ ಸರ್ಗಗಳು ಯಾವವು? ಎಂದರೆ ಹೇಳುತ್ತಾನೆ: ಪ್ರಕೃತವಾಗಿರುವ ದೈವ, ಆಸುರ (ಎಂಬ ಸಂಪತ್ತು)ಗಳೇ (ಆ ಎರಡು ಸರ್ಗಗಳು). ಹಿಂದೆ ಹೇಳಿದ್ದನ್ನೇ ಮತ್ತೊಂದು ಸಲ (ದೈವ, ಆಸುರ–ಎಂಬೆರಡು ಭೂತಸರ್ಗಗಳಿವೆ ಎಂದು) ಹೇಳಿಕೊಂಡಿರುವದು (ಏಕಂದರೆ ಆ) ಪ್ರಯೋಜನವನ್ನು ಹೇಳುತ್ತಾನೆ: ದೈವವೆಂಬ ಭೂತಸರ್ಗವನ್ನು 'ಅಭಯ, ಸತ್ತ್ವಸಂಶುದ್ಧಿ' (೧೬-೧) ಎಂದು ಮುಂತಾಗಿ ವಿಸ್ತಾರವಾಗಿ ವಿಸ್ತಾರ ವಾದ ಪ್ರಕಾರಗಳಿಂದ ಹೇಳಿದ್ದಾಗಿದೆ, ತಿಳಿಸಿದ್ದಾಗಿದೆ. ಆದರೆ ಆಸುರವನ್ನು (ವಿಸ್ತಾರ ವಾಗಿ ತಿಳಿಸಿರುವ)ದಿಲ್ಲ. ಆದ್ದರಿಂದ ಅದನ್ನು ಬಿಟ್ಟುಬಿಡುವದಕ್ಕಾಗಿ ವಿಸ್ತಾರವಾಗಿ, ನನ್ನಿಂದ ನನ್ನ ವಚನದಿಂದ ಕೇಳು, ನಿಶ್ಚಯಿಸಿಕೊ.

(ಭಾಷ್ಯ)

ಆ ಅಧ್ಯಾಯಪರಿಸಮಾಪ್ತೇಃ ಆಸುರೀ ಸಮ್ಪತ್ ಪ್ರಾಣಿವಿಶೇಷಣ ತ್ವೇನ[3] ಪ್ರದರ್ಶ್ಯತೇ । ಪ್ರತ್ಯಕ್ಷೀಕರಣೇನ[4] ಚ ಶಕ್ಯತೇ ತಸ್ಯಾಃ[5] ಪರಿವರ್ಜನಂ ಕರ್ತುಮ್ ಇತಿ—

(ಭಾಷ್ಯಾರ್ಥ)

(ಈ) ಅಧ್ಯಾಯವು ಮುಗಿಯುವವರೆಗೂ ಆಸುರಸಂಪತ್ತನ್ನು (ಆಸುರ) ಜೀವರಿಗೆ ವಿಶೇಷಣವೆಂದು (ವರ್ಣಿಸಿ) ತಿಳಿಸಿರುತ್ತದೆ. ಏಕೆಂದರೆ (ಅದನ್ನು) ಪ್ರತ್ಯಕ್ಷವಾಗಿ ಮಾಡಿಕೊಂಡರೆ ಅದನ್ನು ಬಿಟ್ಟುಬಿಡುವದು ಸಾಧ್ಯವಾಗುತ್ತದೆ.

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭ ॥**

---

1. ಇಲ್ಲಿ ಹೇಳರುವದು ಎರಡು ಬೇರೆಬೇರೆಯ ಸೃಷ್ಟಿಗಳನ್ನಲ್ಲ. ಸೃಷ್ಟಿಸಲ್ಪಡುವ ಎರಡು ಪ್ರಕಾರದ ಭೂತಗಳನ್ನೇ. ಸರ್ಗ ಎಂಬ ಶಬ್ದವನ್ನು ಕರ್ಮಾರ್ಥದಲ್ಲಿ ಪ್ರಯೋಗಿಸಿದೆ, ಭಾವಾರ್ಥದಲ್ಲಲ್ಲ.

2. ಮನುಷ್ಯರು ಮಾತ್ರವೇ ಅಲ್ಲ, ಎಲ್ಲರೂ ಎರಡು ಬಗೆಯಾಗಿರುತ್ತಾರೆ; ಅದರೂ ವಿಶೇಷತಃ ಶಾಸ್ತ್ರಾಧಿಕಾರವುಳ್ಳ ಮನುಷ್ಯರಿಗೆ ಇದನ್ನು ಅನ್ವಯಿಸಿಕೊಳ್ಳಬೇಕು–ಎಂದು ಭಾವ.

3. 'ಪ್ರಾಣಿವಿಶೇಷವಿಷಯತ್ವೇನ' ಮು॥

4. 'ಪ್ರತ್ಯಕ್ಷೀಕರಣೇ' ಮು॥ ವ್ಯಾ॥,

5. 'ಅಸ್ಯ' ವಿ॥ ;

೭. ಆಸುರಜನರು ಪ್ರವೃತ್ತಿಯನ್ನೂ ನಿವೃತ್ತಿಯನ್ನೂ ಅರಿಯರು ಅವರಲ್ಲಿ ಶೌಚವಿಲ್ಲ, ಆಚಾರವೂ ಇಲ್ಲ, ಸತ್ಯವೂ ಇಲ್ಲ.

(ಭಾಷ್ಯ)

೩೯೫. ಪ್ರವೃತ್ತಿಂ ಚ ಪ್ರವರ್ತನಮ್ ಯಸ್ಮಿನ್ ಪುರುಷಾರ್ಥಸಾಧನೇ ಕರ್ತವ್ಯೇ ಪ್ರವೃತ್ತಿಃ [1] ತಾಮ್ । ನಿವೃತ್ತಿಂ ಚ ಏತದ್ವಿಪರೀತಾಮ್ । ಯಸ್ಮಾತ್ ಅನರ್ಥಹೇತೋಃ ನಿವರ್ತಿತವ್ಯಂ ಸಾ ನಿವೃತ್ತಿಃ । ತಾಂ ಚ । ಜನಾ ಆಸುರಾಃ ನ ವಿದುಃ ನ ಜಾನನ್ತಿ । ನ ಕೇವಲಂ ಪ್ರವೃತ್ತಿನಿವೃತ್ತೀ ಏವ ತೇ ನ ವಿದುಃ । ನ ಶೌಚಂ ನಾಪಿ ಚ ಆಚಾರಃ ನ ಸತ್ಯಂ ತೇಷು ವಿದ್ಯತೇ । ಅಶೌಚಾ ಅನಾಚಾರಾಃ ಮಾಯಾವಿನಃ ಅನೃತವಾದಿನೋ ಹಿ ಆಸುರಾಃ ॥

(ಭಾಷ್ಯಾರ್ಥ)

**ಪ್ರವೃತ್ತಿ**ಯನ್ನೂ (ಪ್ರವೃತ್ತಿ ಎಂದರೆ ಕರ್ಮದಲ್ಲಿ) ತೊಡಗುವದು. ಯಾವ ಪುರುಷಾರ್ಥವನ್ನು ಸಾಧನಮಾಡುವದಕ್ಕೆ ಪ್ರವೃತ್ತಿಯನ್ನು ಮಾಡಬೇಕೋ ಅದನ್ನೂ ನಿವೃತ್ತಿಯನ್ನೂ ಈ (ಪ್ರವೃತ್ತಿಗೆ) ವಿರುದ್ಧವಾದದ್ದನ್ನೂ ಯಾವ ಅನರ್ಥ ಹೇತುವಾದ (ಕರ್ಮದಿಂದ) ಹಿಂಜರಿಯಬೇಕೋ ಅದು ನಿವೃತ್ತಿಯು; ಅದನ್ನೂ ಆಸುರ ಜನರು ಅರಿಯರು, ತಿಳಿಯದೆ ಇರುತ್ತಾರೆ. ಅವರು ಬರಿಯ ಪ್ರವೃತ್ತಿ ನಿವೃತ್ತಿಗಳನ್ನು ಮಾತ್ರ ಅರಿಯರೆಂದಲ್ಲ. ಅವರಲ್ಲಿ ಶೌಚವಿರುವದಿಲ್ಲ, ಆಚಾರವೂ ಇರುವದಿಲ್ಲ, ಸತ್ಯವೂ ಇರುವದಿಲ್ಲ. ಅಶುಚಿಗಳಾಗಿ, ಆಚಾರಹೀನರಾಗಿ, ಮಾಯಾವಿಗಳಾಗಿ, ಸುಳ್ಳುಹೇಳುವ ಸ್ವಭಾವದವರೇ ಅಲ್ಲವೆ, ಆಸುರ (ಸಂಪತ್ತಿನವ)ರು ?

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಮ್ಭೂತಂ ಕಿಮನ್ಯತ್ ಕಾಮಹೈತುಕಮ್ ॥ ೮ ॥**

೮. "ಜಗತ್ತು ಅನಿತ್ಯವು, ಅಪ್ರತಿಷ್ಠವು, ಅನೀಶ್ವರವು, ಅಪರಸ್ಪರ ಸಂಭೂತವಾದದ್ದು ಮತ್ತೇನು? ಕಾಮಹೇತುವಿನಿಂದಲೇ ಆದದ್ದು" ಎನ್ನುತ್ತಿರುವರು.

(ಭಾಷ್ಯ)

೩೯೬. ಅಸತ್ಯಮ್ । ಯಥಾ ವಯಮ್ ಅನೃತಪ್ರಾಯಾಃ ತಥಾ ಇದಂ

1. 'ಯಾ ಪ್ರವೃತ್ತಿಃ' ಮಾ॥

ಜಗತ್ ಸರ್ವಮ್ ಅಸತ್ಯಮ್। ಅಪ್ರತಿಷ್ಠಮ್। ನಾಸ್ಯ ಧರ್ಮಾಧರ್ಮೌ ಪ್ರತಿಷ್ಠಾ। ಅತಃ ಅಪ್ರತಿಷ್ಠಂ ಚ। ಇತಿ ತೇ ಅಸುರಾಃ ಜನಾಃ ಜಗತ್ ಆಹುಃ। ಅನೀಶ್ವರಮ್। ನ ಚ ಧರ್ಮಾಧರ್ಮಸವ್ಯಪೇಕ್ಷಕಃ[1] ಅಸ್ಯ ಶಾಸಿತಾ ಈಶ್ವರಃ ವಿದ್ಯತೇ ಇತ್ಯತಃ ಅನೀಶ್ವರಂ ಜಗತ್ ಆಹುಃ। ಕಿಂಚ ಅಪರಸ್ಪರಸಮ್ಭೂತಮ್। ಕಾಮಪ್ರಯುಕ್ತಯೋಃ ಸ್ತ್ರೀಪುರುಷಯೋಃ ಅನ್ಯೋನ್ಯಸಂಯೋಗಾತ್ ಜಗತ್ ಸರ್ವಂ ಸಮ್ಭೂತಮ್। ಕಿಮನ್ಯತ್? ಕಾಮಹೈತುಕಮ್। ಕಾಮಹೇತುಕಮೇವ ಕಾಮಹೈತುಕಮ್। ಕಿಮನ್ಯತ್ ಜಗತಃ ಕಾರಣಮ್[2]? ನ ಕಿಂಚಿತ್ ಅದೃಷ್ಟಂ ಧರ್ಮಾಧರ್ಮಾದಿ[3] ಕಾರಣಾನ್ತರಂ ವಿದ್ಯತೇ ಜಗತಃ। ಕಾಮ ಏವ ಪ್ರಾಣಿನಾಂ ಕಾರಣಮ್ ಇತಿ ಲೋಕಾಯತಿಕದೃಷ್ಟಿರಿಯಮ್॥

(ಭಾಷ್ಯಾರ್ಥ)

ಅಸತ್ಯವು: ನಾವು ಹೇಗೆ ಸುಳ್ಳು ಹೇಳುವದೆಂಬುದೇ ಪ್ರಚುರವಾಗಿರುವೆವೋ ಅದರಂತೆ ಈ ಜಗತ್ತೆಲ್ಲವೂ ಅಸತ್ಯ (ಮಾಯವಾಗಿರುತ್ತದೆ)[4]. (ಇದು) ಅಪ್ರತಿಷ್ಠವಾಗಿರುತ್ತದೆ. ಇದಕ್ಕೆ ಧರ್ಮಾಧರ್ಮಗಳೆಂಬ ಆಧಾರವು ಇರುವದಿಲ್ಲ; ಆದ್ದರಿಂದ ಅಪ್ರತಿಷ್ಠವೂ ಆಗಿರುತ್ತದೆ. ಹೀಗೆಂದು ಆ ಅಸುರಜನರು ಜಗತ್ತನ್ನು (ಅಪ್ರತಿಷ್ಠವೆಂದು) ಹೇಳುವರು. ಅನೀಶ್ವರವು: ಧರ್ಮಾಧರ್ಮಗಳನ್ನು ಅಪೇಕ್ಷಿಸಿ ಇದನ್ನು ಆಳುವ[5] ಈಶ್ವರನು ಇಲ್ಲವಾದ್ದರಿಂದ ಜಗತ್ತು ಅನೀಶ್ವರವು ಎಂದು ಹೇಳುವರು. ಮತ್ತು ಅಪರಸ್ಪರಸಂಭೂತವಾದದ್ದು: ಕಾಮದಿಂದ ಪ್ರೇರಿತರಾದ ಸ್ತ್ರೀಪುರುಷರ ಅನ್ಯೋನ್ಯಸಂಯೋಗದಿಂದಲೇ ಜಗತ್ತೆಲ್ಲವೂ ಉಂಟಾಗಿರುತ್ತದೆ. ಮತ್ತೇನು? ಕಾಮಹೈತುಕವೇ: ಕಾಮಹೇತುಕವೆಂದರೂ ಕಾಮಹೈತುಕವೆಂದರೂ (ಒಂದೇ

---

1. "ಸವ್ಯಪೇಕ್ಷಮ್" ಎಂಬ ಮ॥ ವ್ಯೈ॥ ಪಾಠವು

2. ಈ ವಾಕ್ಯವು ಮ॥ ಪಾಠದಲ್ಲಿಲ್ಲ; "ವಿದ್ಯತೇ ಜಗತಃ। ಕಿಮಸ್ಯ ಜಗತಃ ಕಾರಣಂ। ಕಾಮಹೇತುರೇವ ಕಾಮಹೈತುಕಮ್। ಕಿಮನ್ಯತ್ ಕಾರಣಾನ್ತರಮ್ ನ ಕಿಂಚ ನ ಕಾಮಾನ್ಯಕಾರಣಂ ಸ್ಯಾತ್। ದೃಷ್ಟಂ ಕಾಮ ಏವ..." ಎಂದು ಆ ಪಾಠದಲ್ಲಿದೆ.

3. 'ಕರ್ಮಾದಿ' ಮ॥ ವ್ಯೈ॥

4. ಸತ್ಯ, ಅನೃತ,; ಧರ್ಮ, ಅಧರ್ಮ; ಫಲ, ಈಶ್ವರ–ಎಂಬ ವಿಭಾಗವನ್ನು ಅಸುರರು ಒಪ್ಪುವದಿಲ್ಲವೆಂದು ಭಾವ. ಜಗತ್ತು ಸತ್ಯವೆ, ಅಲ್ಲವೆ–ಎಂಬುದು ಪ್ರಕೃತವಲ್ಲ.

5. ಜೀವನ ಕರ್ಮಕ್ಕೆ ಅನುಗುಣವಾಗಿ ಫಲವನ್ನು ಕೊಡುವ ಈಶ್ವರನನ್ನು ಆಸ್ತಿಕರಂತೆ ಅಸುರರು ಒಪ್ಪುವದಿಲ್ಲ. ಕರ್ಮೇಶ್ವರಸಂಬಂಧವನ್ನು ಸೂ. ಭಾ. ೩-೧-೩೮ರಲ್ಲಿ ಪ್ರತಿಪಾದಿಸಿದೆ.

ಅರ್ಥ. ಹೈತುಕವೆಂಬುದು ಸ್ವಾರ್ಥವನ್ನು ಹೇಳುವ ಪ್ರತ್ಯಯವು ಬಂದು ಆಗಿರುವ ರೂಪವು). ಜಗತ್ತಿಗೆ ಮತ್ತೇನು ಕಾರಣವು? ಅದೃಷ್ಟವಾದ ಧರ್ಮಾಧರ್ಮಗಳೇ ಮುಂತಾದ ಬೇರೆ (ಯಾವ) ಕಾರಣವೂ ಜಗತ್ತಿಗೆ ಇರುವದಿಲ್ಲ: ಕಾಮವೇ ಪ್ರಾಣಿ (ಸೃಷ್ಟಿಯಾಗುವದಕ್ಕೆ) ಕಾರಣವು ಎಂಬಿದು **ಲೋಕಾಯತಿಕರ**[1] ದೃಷ್ಟಿಯು.

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವನ್ತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೯ ॥**

೯. ಈ ದೃಷ್ಟಿಯನ್ನು ಅವಲಂಬಿಸಿಕೊಂಡು ನಷ್ಟಾತ್ಮರಾಗಿ ಅಲ್ಪಬುದ್ಧಿಗಳಾದ (ಇವರು) ಉಗ್ರಕರ್ಮಿಗಳಾದ ಅಹಿತರಾಗಿ ಜಗತ್ತಿನ ಕ್ಷಯಕ್ಕೆ (ಕಾರಣ)ರಾಗುವರು.

(ಭಾಷ್ಯ)

೩೯೭. ಏತಾಂ ದೃಷ್ಟಿಮ್ ಅವಷ್ಟಭ್ಯ ಆಶ್ರಿತ್ಯ ನಷ್ಟಾತ್ಮಾನಃ ನಷ್ಟಸ್ವಭಾವಾಃ ವಿಭ್ರಷ್ಟಪರಲೋಕಸಾಧನಾಃ ಅಲ್ಪಬುದ್ಧಯಃ ವಿಷಯವಿಷಯಾ ಅಲ್ಪೈವ ಬುದ್ಧಿಃ ಯೇಷಾಂ ತೇ ಅಲ್ಪಬುದ್ಧಯಃ । ಪ್ರಭವನ್ತಿ ಉದ್ಭವನ್ತಿ ಉಗ್ರಕರ್ಮಾಣಃ ಕ್ರೂರಕರ್ಮಾಣಃ ಹಿಂಸಾತ್ಮಕಾಃ । ಕ್ಷಯಾಯ ಜಗತಃ ಪ್ರಭವನ್ತಿ ಇತಿ ಸಂಬನ್ಧಃ । ಜಗತಃ ಅಹಿತಾಃ ಶತ್ರವಃ ಇತ್ಯರ್ಥಃ ॥

(ಭಾಷ್ಯಾರ್ಥ)

ಈ ದೃಷ್ಟಿಯನ್ನು ಅವಲಂಬಿಸಿ ಆಶ್ರಯಿಸಿಕೊಂಡು ನಷ್ಟಾತ್ಮರಾಗಿ ಸ್ವಭಾವವನ್ನು ಕಳೆದುಕೊಂಡು ಪರಲೋಕಸಾಧನದಿಂದ ಕೆಳಗೆ ಜಾರಿಬಿದ್ದು ಅಲ್ಪಬುದ್ಧಿಗಳಾದ–ವಿಷಯವನ್ನೇ ವಿಷಯವಾಗಿಸಿಕೊಳ್ಳುವ ಬಹು ಸ್ವಲ್ಪವಾದ ಬುದ್ಧಿಯುಳ್ಳವರಾದ್ದರಿಂದ (ಇವರು) ಅಲ್ಪಬುದ್ಧಿಗಳು.–ಇವರು ಉಗ್ರಕರ್ಮಿಗಳಾಗಿ ಕ್ರೂರಕರ್ಮಗಳನ್ನು ಮಾಡುವ ಹಿಂಸಾತ್ಮಕರಾಗಿ ಜಗತ್ತಿನ ಕ್ಷಯಕ್ಕೆ ಕಾರಣರಾಗುವರು. (ಕಾರಣರಾಗಿ) ಹುಟ್ಟುವರು ಎಂದು ಸಂಬಂಧ(ವನ್ನು ಮಾಡಿಕೊಳ್ಳಬೇಕು). ಜಗತ್ತಿಗೆ (ಇವರು) ಅಹಿತರು ಶತ್ರುಗಳು ಎಂದರ್ಥ.

**ಕಾಮಮಾಶ್ರಿತ್ಯ ದುಷ್ಪೂರಂ ದಮ್ಭಮಾನಮದಾನ್ವಿತಾಃ ।**
**ಮೋಹಾದ್ಗೃಹೀತ್ವಾಸದ್ಗ್ರಾಹಾನ್ ಪ್ರವರ್ತನ್ತೇಽಶುಚಿವ್ರತಾಃ ॥**

---

1. ಚಾರ್ವಾಕರ ದೃಷ್ಟಿಯಲ್ಲಿ ದೇಹವೇ ಆತ್ಮ, ಈಶ್ವರಾದಿಗಳು ಇಲ್ಲ.

೧೦. ದುಷ್ಪೂರವಾದ ಕಾಮವನ್ನು ಆಶ್ರಯಿಸಿ, ದಂಭ, ಮಾನ, ಮದ–ಇವುಗಳಿಂದೊಡಗೂಡಿ ಮೋಹದಿಂದ ಅಸದ್ಗ್ರಾಹಗಳನ್ನು ಹಿಡಿದು ಅಶುಚಿವ್ರತರಾಗಿ ಪ್ರವರ್ತಿಸುತ್ತಾರೆ.

(ಭಾಷ್ಯ)

೩೯೮. ತೇ ಚ ಕಾಮಮ್ ಇಚ್ಛಾವಿಶೇಷಮ್[1] ಆಶ್ರಿತ್ಯ ಅವಷ್ಟಭ್ಯ ದುಷ್ಪೂರಮ್ ಅಶಕ್ಯಪೂರಣಂ ದಮ್ಭಮಾನಮದಾನ್ವಿತಾಃ ದಮ್ಭಶ್ಚ ಮಾನಶ್ಚ ಮದಶ್ಚ ದಮ್ಭಮಾನಮದಾಃ ತೈಃ ಅನ್ವಿತಾಃ ದಮ್ಭಮಾನಮದಾನ್ವಿತಾಃ ಮೋಹಾತ್ ಅವಿವೇಕತಃ ಗೃಹೀತ್ವಾ ಉಪಾದಾಯ ಅಸದ್ಗ್ರಾಹಾನ್ ಅಶುಭನಿಶ್ಚಯಾನ್ ಪ್ರವರ್ತನ್ತೇ ಲೋಕೇ ಅಶುಚಿವ್ರತಾಃ ಅಶುಚೀನಿ ವ್ರತಾನಿ ಯೇಷಾಂ ತೇ ಅಶುಚಿ ವ್ರತಾಃ ||

(ಭಾಷ್ಯಾರ್ಥ)

ಮತ್ತು ಅವರು ದುಷ್ಪೂರವಾದ ತುಂಬಿಸುವದಕ್ಕೆ ಆಗದೆ ಇರುವ ಕಾಮವನ್ನು ಇಚ್ಛಾವಿಶೇಷವನ್ನು ಆಶ್ರಯಿಸಿ ಅವಲಂಬಿಸಿಕೊಂಡು ದಂಭಮಾನಮದಾನ್ವಿತರಾಗಿ–ದಂಭ, ಅಭಿಮಾನ, ಮದ ಇವುಗಳು ದಂಭಮಾನಮದಗಳು; ಇವುಗಳಿಂದ ಒಡಗೂಡಿದವರು ದಂಭಮಾನಮದಾನ್ವಿತರು (ಅಂಥವರಾಗಿ)–ಮೋಹದಿಂದ ಅವಿವೇಕದಿಂದ ಅಸದ್ಗ್ರಾಹಗಳನ್ನು ಕೆಟ್ಟ ಮನೋನಿಶ್ಚಯಗಳನ್ನು ಹಿಡಿದು ಕೈಕೊಂಡು ಲೋಕದಲ್ಲಿ ಅಶುಚಿವ್ರತರಾಗಿ ನಡೆಯುತ್ತಿರುವರು. ಅಶುಚಿಯಾದ ನಿಯಮಗಳುಳ್ಳವರು ಯಾರೋ ಅವರು ಅಶುಚಿವ್ರತರು. (ಅಂಥವರಾಗಿ ನಡೆಯುತ್ತಿರುವರು.)

**ಚಿನ್ತಾಮಪರಿಮೇಯಾಂ ಚ ಪ್ರಲಯಾನ್ತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥**
**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹನ್ತೇ ಕಾಮಭೋಗಾರ್ಥಮನ್ಯಾಯೇನಾರ್ಥಸಞ್ಚಯಾನ್ ॥ ೧೨ ॥**

೧೧-೧೨. ಅಪರಿಮೇಯವಾದ ಪ್ರಲಯಾಂತವಾದ ಚಿಂತೆಯನ್ನು ಆಶ್ರಯಿಸಿದವರಾಗಿ, ಕಾಮೋಪಭೋಗಪರಮರಾಗಿ ಇಷ್ಟೇ ಎಂದು ನಿಶ್ಚಯಿಸಿದವರಾಗಿ ಆಶಾಪಾಶಶತಗಳಿಂದ ಬದ್ಧರಾಗಿ ಕಾಮಕ್ರೋಧಪರಾಯಣ

---

1. ಮು|| ಮೈ|| ಗಳಲ್ಲಿಲ್ಲ.

ರಾಗಿ ಕಾಮಭೋಗಾರ್ಥವಾಗಿ ಅನ್ಯಾಯದಿಂದ ಅರ್ಥಸಂಚಯಗಳನ್ನು (ಪಡೆಯುವದಕ್ಕೆ) ಪ್ರಯತ್ನಿಸುತ್ತಿರುತ್ತಾರೆ.

(ಭಾಷ್ಯ)

೩೯೯. ಕಿಂಚ ಚಿನ್ತಾಮ್ ಅಪರಿಮೇಯಾಂ ಚ। ನ ಪರಿಮಾತುಂ ಶಕ್ಯತೇ ಯಸ್ಯಾಃ ಚಿನ್ತಾಯಾಃ ಇಯತ್ತಾ ಸಾ ಅಪರಿಮೇಯಾ। ತಾಮ್ ಅಪರಿಮೇಯಾಮ್। ಪ್ರಲಯಾನ್ತಾಂ ಮರಣಾನ್ತಾಮ್। ಉಪಾಶ್ರಿತಾಃ। ಸದಾ ಚಿನ್ತಾಪರಾಃ ಇತ್ಯರ್ಥಃ। ಕಾಮೋಪಭೋಗಪರಮಾಃ। ಕಾಮ್ಯನ್ತೇ ಇತಿ ಕಾಮಾಃ ವಿಷಯಾಃ ಶಬ್ದಾದಯಃ। ತದುಪಭೋಗಪರಮಾಃ। ಅಯಮೇವ ಪರಮಃ ಪುರುಷಾರ್ಥಃ ಯಃ ಕಾಮೋಪಭೋಗಃ ಇತ್ಯೇವಂ ನಿಶ್ಚಿತಾತ್ಮಾನಃ ಏತಾವದಿತಿ ನಿಶ್ಚಿತಾಃ ||

(ಭಾಷ್ಯಾರ್ಥ)

ಮತ್ತು ಅಪರಿಮೇಯವಾದ ಚಿಂತೆಯನ್ನು-ಯಾವ ಚಿಂತೆಯ ಪರಿಮಾಣವು ಇಷ್ಟೆಂದು) ಅಳತೆ ಮಾಡುವದಕ್ಕಾಗುವದಿಲ್ಲವೋ ಅದು ಅಪರಿಮೇಯವಾದದ್ದು. ಅಂಥ ಅಪರಿಮೇಯವಾದ, ಪ್ರಲಯಾಂತವಾದ ಸಾಯುವಾಗ ಮಾತ್ರವೇ ಕೊನೆಗಾಣುವ (ಚಿಂತೆಯನ್ನು)-ಆಶ್ರಯಿಸಿದವರಾಗಿ. ಯಾವಾಗಲೂ ಚಿಂತೆಯಲ್ಲಿಯೇ ತೊಡಗಿರುವರಾಗಿ ಎಂದರ್ಥ, ಕಾಮೋಪಭೋಗಪರಮರಾಗಿ : ಕಾಮಿಸಲ್ಪಡುವದರಿಂದ ಶಬ್ದವೇ ಮುಂತಾದ ವಿಷಯಗಳು ಕಾಮಗಳೆನಿಸುವವು ; ಅವುಗಳ ಉಪಭೋಗವೇ ಹೆಚ್ಚಿನದಾಗಿರುವರಾಗಿ (ಎಂದರ್ಥ). ಕಾಮಗಳನ್ನು ಉಪಭೋಗಿಸದೆಂಬುದಿದೆಯಲ್ಲ, ಇದೇ ಹೆಚ್ಚಿನ ಪುರುಷಾರ್ಥವು ಎಂದೀ ಪರಿಯಲ್ಲಿ ನಿಶ್ಚಯಿಸಿರುವ ಮನಸ್ಸುಳ್ಳವರಾಗಿರುವವರು, ಇಷ್ಟೇ ಸರಿ ಎಂದು ನಿಶ್ಚಯಿಸಿದವರು. (ಅಂಥವರಾಗಿ)—

(ಭಾಷ್ಯ)

೪೦೦. ಆಶಾಪಾಶಶತೈಃ ಆಶಾ ಏವ ಪಾಶಾಃ। ತಚ್ಛತೈಃ ಆಶಾಪಾಶಶತೈಃ ಬದ್ಧಾಃ ನಿಯನ್ತ್ರಿತಾಃ[1] ಸನ್ತಃ ಸರ್ವತ ಆಕೃಷ್ಯಮಾಣಾಃ। ಕಾಮಕ್ರೋಧಪರಾಯಣಾಃ । ಕಾಮಕ್ರೋಧೌ ಪರಮ್ ಅಯನಂ ಆಶ್ರಯಃ ಯೇಷಾಂ ತೇ ಕಾಮಕ್ರೋಧಪರಾಯಣಾಃ ಈಹನ್ತೇ ಚೇಷ್ಟನ್ತೇ ಕಾಮಭೋಗಾರ್ಥಂ ಕಾಮಭೋಗಾರ್ಥಂ ಕಾಮಭೋಗಪ್ರಯೋಜನಾಯ ನ ಧರ್ಮಾರ್ಥಮ್ ಅನ್ಯಾಯೇನ

1. ಮ॥ ಮೈ॥ ಗಳಲ್ಲಿಲ್ಲ.

ಪರಸ್ವಾಪಹರಣಾದಿನಾ ಇತ್ಯರ್ಥಃ। ಕಿಮ್[1]? ಅರ್ಥಸಞ್ಚಯಾನ್ ಅರ್ಥಪ್ರಚಯಾನ್[2]॥

(ಭಾಷ್ಯಾರ್ಥ)

ಆಶಾಪಾಶಶತಗಳಿಂದ-ಆಶೆಗಳೆಂಬ ಹಗ್ಗಗಳು ; ಅಂಥ ನೂರಾರು ಹಗ್ಗಗಳಿಂದ ಎಂದರ್ಥ;-ಆಶಾಪಾಶಶತಗಳಿಂದ ಬದ್ಧರಾಗಿ ಕಟ್ಟುವಡೆದವರಾಗಿ ಎಲ್ಲೆಲ್ಲಿಯೂ (ಅವುಗಳ) ಸೆಳೆತಕ್ಕೆ ಸಿಕ್ಕಿ ; ಕಾಮಕ್ರೋಧಪರಾಯಣರಾಗಿ : ಆಸೆ, ಸಿಟ್ಟು-ಇವೆರಡೇ ಪರ ಅಯನವು, ಹೆಚ್ಚಿನ ಆಶ್ರಯವು ಯಾರಿಗೋ ಅಂಥವರಾಗಿ ಕಾಮಕ್ರೋಧಪರಾಯಣರಾಗಿ ; ಕಾಮಭೋಗಕ್ಕಾಗಿ ಕಾಮಗಳನ್ನು ಭೋಗಿಸುವ ಪ್ರಯೋಜನಕ್ಕೇ ಹೊರತು ಧರ್ಮಕ್ಕಲ್ಲ. ಅನ್ಯಾಯದಿಂದ ಮತ್ತೊಬ್ಬರ ಸ್ವತ್ತನ್ನು ಅಪಹರಿಸುವದೇ ಮುಂತಾದ ರೀತಿಯಿಂದ ಎಂದರ್ಥ. (ಅನ್ಯಾಯದಿಂದ) ಅರ್ಥಸಂಚಯಗಳನ್ನು ಅರ್ಥರಾಶಿಗಳನ್ನು (ಕೂಡಿಹಾಕುವದಕ್ಕೆ) ಪ್ರಯತ್ನಿಸುತ್ತಿರುತ್ತಾರೆ. (ಅದಕ್ಕಾಗಿಯೇ) ಕೆಲಸಮಾಡುತ್ತಿರುತ್ತಾರೆ.

(ಭಾಷ್ಯ)

೪೦೧. ಈದೃಶಶ್ಚ ತೇಷಾಮ್ ಅಭಿಪ್ರಾಯಃ—

(ಭಾಷ್ಯಾರ್ಥ)

ಮತ್ತು ಅವರ ಅಭಿಪ್ರಾಯವು ಹೀಗಿರುವದು :—

**ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥ ೧೩ ॥**
**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥**
**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯೇ ಇತ್ಯಜ್ಞಾನವಿಮೋಹಿತಾಃ ॥ ೧೫ ॥**
**ಅನೇಕಚಿತ್ತವಿಭ್ರಾನ್ತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತನ್ತಿ ನರಕೇಽಶುಚೌ ॥ ೧೬ ॥**

---

1. ಈ ವ್ಯಾ॥ ವಾ॥ ಪಾಠವು ಗೀತಾಮೂಲಾನುಕ್ರಮಾನುಸಾರಿಯಾಗಿರುವದರಿಂದ ಇದನ್ನೇ ಅನುಸರಿಸಿದೆ. ಮಿಕ್ಕಪುಸ್ತಕಗಳಲ್ಲಿ ' ಅನ್ಯಾಯೇನ ' ಎಂಬುದು ' ಅರ್ಥಪ್ರಚಯಾನ್ ' ಎಂಬುದಾದಮೇಲೆ ಇದೇ ; 'ಕಿಮ್' ಎಂಬುದೂ ಇಲ್ಲ.

2. " ಪ್ರಚಯಾನ್ ಪ್ರತಿ " ಮ॥

೧೩-೧೬. ಇಂದು ನನಗೆ ಇದು ಸಿಕ್ಕಿತು, ಮನೋರಥವಾದ ಇದನ್ನು (ಮುಂದೆ) ಪಡೆದುಕೊಳ್ಳುವೆನು. ಇದು ಇದೆ, ಈ ಧನವು ನನಗೆ ಆಗುವದು. ಆ ಶತ್ರು ನನ್ನಿಂದ ಹತನಾದನು, ಮಿಕ್ಕವರನ್ನೂ ಕೊಲ್ಲುವೆನು. ನಾನು ಈಶ್ವರನು, ನಾನು ಭೋಗಿಯು, ನಾನು ಸಿದ್ಧನು, ಬಲವಂತನು, ಸುಖಿಯು, ಆಢ್ಯನು, ಅಭಿಜನವಂತನಾಗಿರುವೆನು, ನನಗೆ ಸದೃಶನಾದವನು ಬೇರೆ ಯಾವನಿರುತ್ತಾನೆ? ಯಾಗ ಮಾಡುವೆನು, ದಾನಮಾಡುವೆನು, ಸಂತೋಷಪಡುವೆನು—ಎಂದು ಅಜ್ಞಾನಮೋಹಿತರಾಗಿ ಅನೇಕಚಿತ್ತವಿಭ್ರಾಂತರಾಗಿ ಮೋಹಜಾಲಸಮಾವೃತರಾಗಿ ಕಾಮಭೋಗಗಳಲ್ಲಿ ಪ್ರಸಕ್ತರಾಗಿ, ಅಶುಚಿಯಾದ ನರಕದಲ್ಲಿ ಬೀಳುವರು.

(ಭಾಷ್ಯ)

೪೦೨. ಇದಂ ದ್ರವ್ಯಮ್ ಅದ್ಯ ಇದಾನೀಂ ಮಯಾ ಲಬ್ಧಮ್ । ಇದಮ್ ಅನ್ಯತ್ ಪ್ರಾಪ್ಸ್ಯೇ ಮನೋರಥಂ ಮನಸ್ತುಷ್ಟಿಕರಮ್ । ಇದಂ ಚ ಅಸ್ತಿ । ಇದಮಪಿ ಮೇ ಭವಿಷ್ಯತಿ ಆಗಾಮಿನಿ ಸಂವತ್ಸರೇ ಪುನರ್ಧನಮ್ । ತೇನ ಅಹಂ ಧನೀ। ವಿಖ್ಯಾತಃ ಭವಿಷ್ಯಾಮಿ ಇತಿ[1] ॥

(ಭಾಷ್ಯಾರ್ಥ)

ಈ ದ್ರವ್ಯವು ಇಂದು ನನಗೆ ಸಿಕ್ಕಿದೆ. ಬೇರೆಯಾಗಿರುವ ಮನೋರಥವಾಗಿರುವ ಮನಸ್ಸಿಗೆ ಸಂತೋಷವನ್ನುಂಟುಮಾಡುವ ಇದನ್ನು ಪಡೆದುಕೊಳ್ಳುವೆನು. ಮತ್ತು ಇದು ಇದೆ, ಬರುವ ವರ್ಷದಲ್ಲಿ ಈ ಹಣವೂ ಮತ್ತೆ ನನಗೆ ಆಗುವದು; ಅದರಿಂದ ನಾನು ಹಣವಂತನಾಗಿ ಹೆಸರುವಾಸಿಯನ್ನು ಪಡೆದವನಾಗುವೆನು ಎಂದು (ಯೋಚಿಸಿಕೊಳ್ಳುವರು).

(ಭಾಷ್ಯ)

೪೦೩. ಅಸೌ ದೇವದತ್ತನಾಮಾ ಮಯಾ ಹತಃ ದುರ್ಜಯಃ ಶತ್ರುಃ ! ಹನಿಷ್ಯೇ ಚ ಅಪರಾನ್ ಅನ್ಯಾನ್ ಅಪಿ[2] । ಕಿಮೇತೇ ಕರಿಷ್ಯನ್ತಿ ತಪಸ್ವಿನಃ? ಸರ್ವಥಾಪಿ ನಾಸ್ತಿ ಮತ್ತುಲ್ಯಃ[3] । ಈಶ್ವರೋಽಹಮ್ ಅಹಂ ಭೋಗೀ । ಸರ್ವಪ್ರಕಾರೇಣ

1. ನಿ|| ಗು॥ ಗಳಲ್ಲಿಲ್ಲ.
2. ‘ ವರಾಕಾನ್ ಅಪಿ ’ ಅ|| ನಿ|| ಗು||
3. ‘ ಕಥಮ್ ? ’ ಎಂದು ಹೆಚ್ಚಾಗಿ ಮು|| ಮೈ||

ಚ ಸಿದ್ಧಃ ಅಹಂ ಸಂಪನ್ನಃ ಪುತ್ರೈಃ[1] ನಪ್ತೃಭಿಃ। ನ ಕೇವಲಂ ಮಾನುಷೋಽಹಮ್[2]। ಬಲವಾನ್ ಸುಖೀ ಚ ಅಹಮೇವ। ಅನ್ಯೇ ತು ಭೂಮಿಭಾರಾಯ ಅವತೀರ್ಣಾಃ[3] ॥

(ಭಾಷ್ಯಾರ್ಥ)

ಈ ದೇವದತ್ತನೆಂಬ ಗೆಲ್ಲುವದಕ್ಕಸದಳನಾದ ಶತ್ರುವು ನನ್ನಿಂದ ಹತನಾದನು. ಮಿಕ್ಕವರನ್ನೂ ಉಳಿದವರನ್ನೂ ಕೊಂದುಹಾಕುವೆನು; ಈ ಬಡಪಾಯಿಗಳೇನು ಮಾಡಿಯಾರು? ಹೇಗೆ ನೋಡಿದರೂ ನನಗೆ ಸಮನು ಇಲ್ಲವೇ ಇಲ್ಲ. (ಹೇಗೆಂದರೆ)[4] ನಾನು ಸ್ವತಂತ್ರನು, ನಾನು ಭೋಗಿಯು; ಎಲ್ಲಾ ಬಗೆಯಿಂದಲೂ ನಾನು ಸಿದ್ಧನು, ಮಕ್ಕಳುಮೊಮ್ಮಕ್ಕಳಿಂದ ಕೂಡಿರುವೆನು. ನಾನು ಸಾಮಾನ್ಯವಾದ ಮನುಷ್ಯನಲ್ಲ. ಬಲವಂತನೂ ಸುಖಿಯೂ ನಾನೇ; ಮಿಕ್ಕವರೋ ಭೂಮಿಗೆ ಹೊರೆಯಾಗಿ ಹುಟ್ಟಿರುವರು.

(ಭಾಷ್ಯ)

೪೦೪. ಆಢ್ಯಃ ಧನೇನ। ಅಭಿಜನವಾನ್ ಸಪ್ತಪುರುಷಂ ಶ್ರೋತ್ರಿಯತ್ವಾದಿಸಮ್ಪನ್ನಃ। ತೇನಾಪಿ ನ ಮಮ ತುಲ್ಯಃ ಅಸ್ತಿ ಕಶ್ಚಿತ್। ಕಃ ಅನ್ಯಃ ಅಸ್ತಿ ಸದೃಶಃ ತುಲ್ಯಃ ಮಯಾ? ಕಿಂಚ ಯಕ್ಷ್ಯೇ। ಯಾಗೇನಾಪಿ ಅನ್ಯಾನ್ ಅಭಿಭವಿಷ್ಯಾಮಿ। ದಾಸ್ಯಾಮಿ ನಟಾದಿಭ್ಯಃ। ಮೋದಿಷ್ಯೇ ಹರ್ಷಂ ಚ ಅತಿಶಯಂ ಪ್ರಾಪ್ಸ್ಯಾಮಿ। ಇತಿ ಏವಮ್ ಅಜ್ಞಾನವಿಮೋಹಿತಾಃ ವಿವಿಧಮ್ ಅವಿವೇಕಭಾವಮ್ ಆಪನ್ನಾಃ ॥

(ಭಾಷ್ಯಾರ್ಥ)

ಆಢ್ಯನು, ಹಣವಂತನು; ಅಭಿಜನವಂತ(ನಾಗಿರುವೆನು)[5], ಏಳುತಲೆಯಿಂದಲೂ ಶ್ರೋತ್ರಿಯತ್ವವೇ ಮುಂತಾದ (ಗುಣಗಳಿಂದ) ಕೂಡಿದವನು. ಆದ

---

1. ಪುತ್ರೈಃ ಪೌತ್ರೈರ್ನಪ್ತೃಭಿಃ' ಎಂಬ ಆ॥ದಿ॥ಗು॥ಪಾಠದಲ್ಲಿ ಕೊನೆಯ ಎರಡು ಮಾತುಗಳಲ್ಲಿ ಒಂದು ಹೆಚ್ಚು.

2. 'ಅಹಮ್' ಎಂಬ ಮಾತು ಮು॥ ಮೈ॥ ವಾ॥ಗಳಲ್ಲಿಲ್ಲ.

3. ಈ ವಾಕ್ಯವು ಮು॥ ಮೈ॥ಗಳಲ್ಲಿಲ್ಲ.

4. ಮು॥ ಮೈ॥ಗಳಲ್ಲಿ 'ಕಥಮ್' ಎಂಬುದರ ಅರ್ಥವಿದು.

5. ಒಳ್ಳೆಯವಂಶದವನು.

ರಲ್ಲಿಯೂ ನನಗೆ ಸಮನಾದವನು ಯಾವನೂ ಇಲ್ಲ. ಇನ್ನು ಯಾವನು ನನಗೆ ಸದೃಶನು ಸಮನಾದವನು ಇದಾನೆ? ಇದಲ್ಲದೆ, (ನಾನು) ಯಾಗವನ್ನು ಮಾಡು ವೆನು, ಯಾಗ (ಮಾಡುವದ)ರಿಂದಲೂ ಮಿಕ್ಕವರನ್ನು ಸೋಲಿಸುವೆನು; ನಟರೇ ಮುಂತಾದವರಿಗೆ (ಹಣವನ್ನು) ಕೊಡುವೆನು; ಸಂತೋಷಪಡುವೆನು, ಹೆಚ್ಚಿನ ಹರ್ಷ ವನ್ನು ಹೊಂದುವೆನು. ಎಂದು ಈ ರೀತಿಯಲ್ಲಿ ಅಜ್ಞಾನವಿಮೋಹಿತರಾಗಿ ಅಜ್ಞಾನ ದಿಂದ ವಿಮೋಹಿತರಾಗಿ ಬಗೆಬಗೆಯಾಗಿ ಅವಿವೇಕಭಾವವನ್ನು ಹೊಂದಿದವರಾಗಿ—

(ಭಾಷ್ಯ)

೪೦೫. ಅನೇಕಚಿತ್ತವಿಭ್ರಾನ್ತಾಃ ಉಕ್ತಪ್ರಕಾರೈಃ ಅನೇಕೈಃ ಚಿತ್ತೈಃ ವಿವಿಧಂ ಭ್ರಾನ್ತಾಃ ಅನೇಕಚಿತ್ತವಿಭ್ರಾನ್ತಾಃ। ಸಮಾವೃತಾಃ। ಮೋಹಃ ಅವಿವೇಕಃ, ಅಜ್ಞಾನಮ್। ತದೇವ ಜಾಲಮಿವ ಆವರಣಾತ್ಮಕತ್ವಾತ್। ತೇನ ಸಮಾವೃತಾಃ। ಪ್ರಸಕ್ತಾಃ ಕಾಮಭೋಗೇಷು ತತ್ರೈವ ನಿಷಣ್ಣಾಃ ಸನ್ತಃ ತೇನ ಉಪಚಿತಕಲ್ಮಷಾಃ ಪತನ್ತಿ ನರಕೇ ಅಶುಚೌ ವೈತರಣ್ಯಾದೌ ॥

(ಭಾಷ್ಯಾರ್ಥ)

ಅನೇಕಚಿತ್ತವಿಭ್ರಾಂತರಾಗಿ, ಮೇಲೆ ಹೇಳಿದಂಥ ಪ್ರಕಾರವಾಗಿರುವ ಅನೇಕ ವಿಚಾರಗಳಿಂದ ಬಗೆಬಗೆಯಾಗಿ ಭ್ರಾಂತರಾಗಿ ಮೋಹಜಾಲಸಮಾವೃತರಾಗಿ: ಮೋಹವೆಂದರೆ ಅವಿವೇಕವು, ಅಜ್ಞಾನವು. ಅದೇ ಮುಸುಕಿಕೊಳ್ಳುವದರಿಂದ ಬಲೆ ಯಂತೆ ಇರುತ್ತದೆ. ಅದರಿಂದ ಸುತ್ತುವರಿಯಲ್ಪಟ್ಟಿರುವವರಾಗಿ (ಎಂದರ್ಥ). ಕಾಮ ಭೋಗಗಳಲ್ಲಿ (ಪ್ರಸಕ್ತರಾಗಿ), ಅವುಗಳಲ್ಲಿಯೇ ಮುಳುಗಿದವರಾಗಿ ಅದರಿಂದ ಪಾಪ ವನ್ನು ರಾಶಿಹಾಕಿಕೊಂಡು ವೈತರಣಿಯೇ ಮುಂತಾದ ಅಶುಚಿಯಾದ ನರಕದಲ್ಲಿ ಬೀಳುವರು.

**ಆತ್ಮಸಮ್ಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ।**
**ಯಜನ್ತೇ ನಾಮಯಜ್ಞೈಸ್ತೇ ದಮ್ಭೇನಾವಿಧಿಪೂರ್ವಕಮ್ ॥೧೭॥**

೧೭. ತಮ್ಮನ್ನು ತಾವೇ ಸಂಭಾವಿಸಿಕೊಂಡು ಸ್ತಬ್ಧರಾಗಿ ಧನ ಮಾನಮದಾನ್ವಿತರಾಗಿ ಅವರು ದಂಭದಿಂದ ಅವಿಧಿಪೂರ್ವಕವಾಗಿ ನಾಮ ಯಜ್ಞಗಳನ್ನು ಮಾಡುತ್ತಿರುವರು.

(ಭಾಷ್ಯ)

೪೦೬. ಆತ್ಮಸಮ್ಭಾವಿತಾಃ ಸರ್ವಗುಣವಿಶಿಷ್ಟತಯಾ ಆತ್ಮನೈವ ಸಂಭಾ

ವಿತಾಃ ಆತ್ಮಸಂಭಾವಿತಾಃ ನ ಸಾಧುಭಿಃ[1]। ಸ್ತಬ್ಧಾಃ ಅಪ್ರಣತಾತ್ಮಾನಃ। ಧನಮಾನ ಮದಾನ್ವಿತಾಃ। ಧನನಿಮಿತ್ತಃ ಮಾನಃ ಮದಶ್ಚ। ತಾಭ್ಯಾಂ ಧನಮಾನಮದಾ ಭ್ಯಾಮ್ ಅನ್ವಿತಾಃ ಯಜನ್ತೇ ನಾಮಯಜ್ಞೈಃ। ನಾಮಮಾತ್ರೈಃ ಯಜ್ಞೈಃ। ತೇ ದಮ್ಭೇನ ಧರ್ಮಧ್ವಜಿತಯಾ ಅವಿಧಿಪೂರ್ವಕಂ ವಿಧಿವಿಹಿತಾಙ್ಗೇತಿಕರ್ತವ್ಯತಾ ರಹಿತಮ್ ॥

(ಭಾಷ್ಯಾರ್ಥ)

ಆತ್ಮಸಂಭಾವಿತರಾಗಿ ಎಲ್ಲಾ ಗುಣಗಳಿಂದಲೂ ಕೂಡಿದವರೆಂದು (ತಮ್ಮನ್ನು) ತಾವೇ ಸಂಭಾವಿಸಿಕೊಂಡು (ತಾವೇ ಗೌರವಿಸಿಕೊಳ್ಳುವರೇ ಹೊರತು) ಸತ್ಪುರುಷ ರಿಂದ (ಸಂಭಾವಿತ)ರಲ್ಲ (ಎಂದರ್ಥ); ಸ್ತಬ್ಧರಾಗಿ ತಗ್ಗಿ ನಡೆಯುವ ಸ್ವಭಾವವಿಲ್ಲ ದವರಾಗಿ; ಧನಮಾನಮದಾನ್ವಿತರಾಗಿ ಧನನಿಮಿತ್ತದಿಂದ ಉಂಟಾಗಿರುವ ಮಾನವೂ ಮದವೂ (ಇರುವವಲ್ಲ), ಆ ಧನಮಾನಮದಗಳಿಂದ ಕೂಡಿದವರಾಗಿ; ಅವರು ನಾಮ ಯಜ್ಞಗಳಿಂದ ಹೆಸರಿಗೆ ಮಾತ್ರ ಯಜ್ಞ(ವೆನಿಸಿರುವ ಕರ್ಮ)ಗಳಿಂದ, ದಂಭದಿಂದ (ತಮ್ಮ) ಧರ್ಮವನ್ನು ಪ್ರಕಟನೆಮಾಡುವ ನಿಮಿತ್ತದಿಂದ ಅವಿಧಿಪೂರ್ವಕವಾಗಿ ವಿಧಿಯಲ್ಲಿ ವಿಧಿಸಿರುವ ಅಂಗಗಳು, ಇತಿಕರ್ತವ್ಯತೆ[2] (ಯಾವದೂ) ಇಲ್ಲದೆ ಯಾಗ ವನ್ನು ಮಾಡುತ್ತಾರೆ.

**ಅಹಙ್ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ।**
**ಮಾಮಾತ್ಮಪರದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ ॥ ೧೮ ॥**

೧೮. ಅಹಂಕಾರವನ್ನೂ ಬಲವನ್ನೂ ದರ್ಪವನ್ನೂ ಕಾಮವನ್ನೂ ಕ್ರೋಧವನ್ನೂ ಆಶ್ರಯಿಸಿ ತಮ್ಮ ಮತ್ತು ಮಿಕ್ಕವರ ದೇಹಗಳಲ್ಲಿರುವ ನನ್ನನ್ನು ಪ್ರದ್ವೇಷಿಸುತ್ತಾ ಅಸೂಯೆಯುಳ್ಳವರಾಗಿರುವರು.

(ಭಾಷ್ಯ)

೪೦೭. ಅಹಙ್ಕಾರಮ್। ಅಹಙ್ಕರಣಮ್ ಅಹಙ್ಕಾರಃ। ವಿದ್ಯಮಾನೈಃ

---

1. ಮು॥ ಮೈ॥ ಗಳಲ್ಲಿಲ್ಲ.

2. ಯಜ್ಞದಲ್ಲಿ ಮಾಡಬೇಕಾದ ಉಪಕರ್ಮಗಳು ಮುಂತಾದವು ಅದರ ಅಂಗಗಳು; ಹೀಗೆ ಮಾಡಬೇಕೆಂಬ ಕರ್ಮವು ಇತಿಕರ್ತವ್ಯತೆ.

ಅವಿದ್ಯಮಾನೈಶ್ಚ ಗುಣೈಃ ಆತ್ಮನಿ ಅಧ್ಯಾರೋಪಿತೈಃ ವಿಶಿಷ್ಟಮ್ ಆತ್ಮಾನಮ್[1] ಅಹಮ್ ಇತಿ ಮನ್ಯತೇ ಸಃ ಅಹಙ್ಕಾರಃ ಅವಿದ್ಯಾಖ್ಯಃ ಕಷ್ಟತಮಃ ಸರ್ವ ದೋಷಾಣಾಂ ಮೂಲಂ ಸರ್ವಾನರ್ಥಪ್ರವೃತ್ತೀನಾಂ ಚ । ತಮ್ । ತಥಾ ಬಲಂ ಪರಾಭಿಭವನಿಮಿತ್ತಂ ಕಾಮರಾಗಾನ್ವಿತಮ್ । ದರ್ಪಮ್ । ದರ್ಪೋ ನಾಮ ಯಸ್ಯ ಉದ್ಭವೇ ಧರ್ಮಮತಿಕ್ರಾಮತಿ । ಸೋಽಯಮ್ ಅನ್ತಃಕರಣಾಶ್ರಯಃ ದೋಷ ವಿಶೇಷಃ । ಕಾಮಂ ಸ್ತ್ರ್ಯಾದಿವಿಷಯಮ್ । ಕ್ರೋಧಮ್ ಅನಿಷ್ಟವಿಷಯಮ್ । ಏತಾನ್ ಅನ್ಯಾಂಶ್ಚ ಮಹತೋ ದೋಷಾನ್ ಸಂಶ್ರಿತಾಃ । ಕಿಂಚ ತೇ ಮಾಮ್ ಈಶ್ವರಮ್ ಆತ್ಮಪರದೇಹೇಷು ಸ್ವದೇಹೇ ಪರದೇಹೇಷು ಚ ತದ್ಬುದ್ಧಿಕರ್ಮಸಾಕ್ಷಿ ಭೂತಂ ಮಾಂ ಪ್ರದ್ವಿಷನ್ತಃ । ಮಚ್ಛಾಸನಾತಿವರ್ತಿತ್ವಂ ಪ್ರದ್ವೇಷಃ । ತಂ ಕುರ್ವನ್ತಃ । ಅಭ್ಯಸೂಯಕಾಃ ಸನ್ಮಾರ್ಗಸ್ಥಾನಾಂ ಗುಣೇಷು ಅಸಹಮಾನಾಃ ॥

(ಭಾಷ್ಯಾರ್ಥ)

**ಅಹಂಕಾರವನ್ನು**: ಅಹಂಕಾರವೆಂದರೆ ನಾನು ಎಂದುಕೊಳ್ಳುವದು. ಇರುವ ಮತ್ತು ಇಲ್ಲದ ಗುಣಗಳನ್ನು ತನ್ನಲ್ಲಿ ಆರೋಪಿಸಿಕೊಂಡು ಅವು ತನ್ನಲ್ಲಿ ಅಸಾಧಾರಣ ವಾಗಿರುವವೆಂದು (ಅಂಥವನು)ನಾನು ಎಂದು ತಿಳಿಯುತ್ತಾನಲ್ಲ, ಅದೇ **ಅವಿದ್ಯೆ ಎಂಬ ಹೆಸರಿನ ಅಹಂಕಾರವು ; (ಇದು) ಬಹಳ ಕೆಟ್ಟದ್ದು, ಎಲ್ಲಾ ದೋಷಗಳಿಗೂ ಅನರ್ಥವನ್ನುಂಟುಮಾಡುವ ಎಲ್ಲಾ ಪ್ರವೃತ್ತಿಗಳಿಗೂ ಮೂಲವು ;** ಅದನ್ನು ಹಾಗೂ **ಬಲವನ್ನು** : ಮತ್ತೊಬ್ಬರನ್ನು ಕೆಳಕ್ಕೆ ತಳ್ಳುವದಕ್ಕೆ ಕಾರಣವಾಗುವ ಕಾಮ ರಾಗಗಳಿಂದೊಡಗೂಡಿದ (ಶಕ್ತಿಯನ್ನು). **ದರ್ಪವನ್ನು**: ದರ್ಪವೆಂದರೆ ಯಾವದು ಉಂಟಾದರೆ ಧರ್ಮವನ್ನು ಮೀರುವನೋ ಆ ಅಂತಃಕರಣವನ್ನಾಶ್ರಯಿಸಿರುವ ಒಂದಾನೊಂದು ದೋಷವು ; (ಅದನ್ನು). **ಕಾಮವನ್ನು** : ಹೆಂಗಸರೇ ಮುಂತಾದ ವಿಷಯದ (ಆಸೆಯನ್ನು). **ಕ್ರೋಧವನ್ನು**: ಬೇಡವಾದ ವಿಷಯದಲ್ಲಿ ಆಗುವ (ಸಿಟ್ಟನ್ನು). **ಇವನ್ನೂ (ಇನ್ನೂ)** ಬೇರೆಯ ದೊಡ್ಡದೊಡ್ಡ ದೋಷಗಳನ್ನೂ **ಅವ ಲಂಬಿಸಿಕೊಂಡು (ಇರುತ್ತಾರೆ)**. ಮತ್ತು ಅವರು **ಈಶ್ವರನಾದ ನನ್ನನ್ನು–ಆತ್ಮಪರ ದೇಹಗಳಲ್ಲಿ** ತಮ್ಮ ದೇಹದಲ್ಲಿಯೂ ಮತ್ತು ಮಿಕ್ಕವರ ದೇಹಗಳಲ್ಲಿಯೂ ಅವರ ಬುದ್ಧಿಗಳಿಗೂ ಕರ್ಮಗಳಿಗೂ ಸಾಕ್ಷಿಯಾಗಿರುವ **ನನ್ನನ್ನು–ಪ್ರದ್ವೇಷಿಸುತ್ತಾ** ನನ್ನ ಅಪ್ಪಣೆಯನ್ನು ಮೀರುವದೇ ನನ್ನ ಪ್ರದ್ವೇಷವು. ಆ (ಪ್ರದ್ವೇಷವನ್ನು) ಮಾಡುತ್ತಾ. **ಅಭ್ಯಸೂಯಕರಾಗಿ**, ಸನ್ಮಾರ್ಗದಲ್ಲಿರುವವರ ಗುಣಗಳಲ್ಲಿ ಸಹನೆಯಿಲ್ಲದವರಾಗಿ (ಪ್ರದ್ವೇಷವನ್ನು ಮಾಡುತ್ತಿರುವರು).

---

1. 'ವಿಶಿಷ್ಟಾತ್ಮಾನಮ್' ಮೈ॥

## ಅಸುರರಿಗೆ ಆಗುವ ದುರ್ಗತಿ

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥**

೧೯. (ಹೀಗೆ ನನ್ನನ್ನು) ದ್ವೇಷಮಾಡುತ್ತಿರುವ ಆ ಕ್ರೂರರಾದ, ಅಶುಭರಾದ ನರಾಧಮರನ್ನು ನಾನು ಸಂಸಾರಗಳಲ್ಲಿಯೇ, ಆಸುರಯೋನಿಗಳಲ್ಲಿಯೇ ಅಜಸ್ರವಾಗಿ ಹಾಕುತ್ತಿರುವೆನು.

(ಭಾಷ್ಯ)

೪೦೮. ತಾನ್ ಅಹಂ ಸರ್ವಾನ್ [1] ಸನ್ಮಾರ್ಗಪ್ರತಿಪಕ್ಷಭೂತಾನ್ ಸಾಧುದ್ವೇಷಿಣಃ ದ್ವಿಷತಶ್ಚ ಮಾಂ ಕ್ರೂರಾನ್ ಸಂಸಾರೇಷ್ವೇವ ಅನೇಕನರಕಸಂಸರಣಮಾರ್ಗೇಷು [2] ನರಾಧಮಾನ್ ಅಧರ್ಮದೋಷವತ್ತ್ವಾತ್ ಕ್ಷಿಪಾಮಿ ಪ್ರಕ್ಷಿಪಾಮಿ ಅಜಸ್ರಮ್ ಸನ್ತತಮ್ ಅಶುಭಾನ್ ಅಶುಭಕರ್ಮಕಾರಿಣಃ ಆಸುರೀಷ್ವೇವ ಕ್ರೂರಕರ್ಮಪ್ರಾಯಾಸು ವ್ಯಾಘ್ರಸಿಂಹಾದಿಯೋನಿಷು ಕ್ಷಿಪಾಮಿ ಇತಿ ಅನೇನ ಸಮ್ಬನ್ಧಃ ॥

(ಭಾಷ್ಯಾರ್ಥ)

ಒಳ್ಳೆಯ ದಾರಿಗೆ ಎದುರಾಳಿಗಳಾಗಿ ಸಾಧುಗಳನ್ನು ಹಗೆಮಾಡುತ್ತಿರುವ ನನ್ನನ್ನೂ ಹಗೆಮಾಡುತ್ತಿರುವ ಆ ಕ್ರೂರರೆಲ್ಲರನ್ನೂ ಸಂಸಾರಗಳಲ್ಲಿಯೇ ಅನೇಕ ನರಕಗಳಲ್ಲಿ ತೊಳಲುವ ಮಾರ್ಗಗಳಲ್ಲಿಯೇ, (ಆ) ನರಾಧಮರನ್ನು ಅಧರ್ಮವೆಂಬ ದೋಷವಿರುವದರಿಂದ (ಅವರು ನರಾಧಮರು. ಅವರನ್ನು) ಹಾಕುವೆನು ಕೆಡಹುವೆನು. ಅಜಸ್ರವಾಗಿ ಯಾವಾಗಲೂ ಅಶುಭವಾದ ಕೆಟ್ಟ ಕರ್ಮಗಳನ್ನೇ ಮಾಡುತ್ತಿರುವ (ಅವರನ್ನು) ಆಸುರವಾದ, ಕ್ರೂರಕರ್ಮವೇ ಬಹಳವಾಗಿರುವ ಹುಲಿ, ಸಿಂಹ-ಮುಂತಾದ ಯೋನಿಗಳಲ್ಲಿ (ಕ್ಷಿಪಾಮಿ) 'ಹಾಕುವೆನು' ಎಂಬೀ ಮಾತಿಗೆ ಸಂಬಂಧ (ವನ್ನು ಮಾಡಿಕೊಳ್ಳಬೇಕು.)

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತ್ಯಧಮಾಂ ಗತಿಮ್॥**

---

1. ಮ॥ಮೈ॥ಗಳಲ್ಲಿಲ್ಲ.
2. ಸಿ॥॥ಗು॥ಗಳಲ್ಲಿ 'ಅನೇಕ' ಇಲ್ಲ; 'ಸಂಸಾರೇಷು ಅನೇಕನರಕಸಂಸಾರಮಾರ್ಗೇಷು' ಮ॥ಮೈ॥; 'ಸಂಸಾರೇಷ್ವೇವ ಅನೇಕನರಕಸಂಸರಣಮಾರ್ಗೇಷು' ವಾ॥

೨೦. ಕೌಂತೇಯನೆ, ಜನ್ಮಜನ್ಮದಲ್ಲಿಯೂ ಆಸುರಯೋನಿಯನ್ನು ಪಡೆದ ಮೂಢರು ನನ್ನನ್ನು ಪಡೆಯದೆಯೇ ಅದಕ್ಕಿಂತಲೂ ಅಧಮವಾದ ಗತಿಯನ್ನೇ ಹೊಂದುವರು.

(ಭಾಷ್ಯ)

೪೦೯. ಆಸುರೀಂ ಯೋನಿಮ್ ಆಪನ್ನಾಃ ಪ್ರತಿಪನ್ನಾಃ ಮೂಢಾಃ ಅವಿವೇಕಿನಃ ಜನ್ಮನಿ ಜನ್ಮನಿ ಪ್ರತಿಜನ್ಮ ತಮೋಬಹುಲಾಸ್ವೇವ ಯೋನಿಷು ಜಾಯಮಾನಾಃ ಅಧಃ ಗಚ್ಛನ್ತಃ। ಮೂಢಾಃ ಮಾಮ್ ಈಶ್ವರಮ್ ಅಪ್ರಾಪ್ಯ[1] ಅನಾಸಾದ್ಯೈವ, ಹೇ ಕೌನ್ತೇಯ, ತತಃ ತಸ್ಮಾದಪಿ ಯಾನ್ತಿ ಅಧಮಾಂ ನಿಕೃಷ್ಟತಮಾಂ ಗತಿಮ್। ಮಾಮ್ ಅಪ್ರಾಪ್ಯೈವ ಇತಿ ನ ಮತ್ಪ್ರಾಪ್ತೌ ಕಾಂಚಿದಪಿ[2] ಆಶಙ್ಕಾ ಅಸ್ತಿ। ಅತಃ ಮದುಪದಿಷ್ಟಸಾಧುಮಾರ್ಗಮ್ ಅಪ್ರಾಪ್ಯ ಇತ್ಯರ್ಥಃ ॥

(ಭಾಷ್ಯಾರ್ಥ)

ಎಲೈ ಕೌಂತೇಯನೆ, ಆಸುರಯೋನಿಯನ್ನು ಜನ್ಮಜನ್ಮದಲ್ಲಿಯೂ ಪಡೆಯುತ್ತಿರುವ ಹೊಂದುತ್ತಿರುವ (ಆ) ಮೂಢರು ಅವಿವೇಕಿಗಳು ತಮಸ್ಸೇ ಹೆಚ್ಚಾಗಿರುವ ಯೋನಿಗಳಲ್ಲಿ ಹುಟ್ಟುವಾಗ ಕೆಳಕೆಳಕ್ಕೇ ಹೋಗುತ್ತಾ (ಆ) ಮೂಢರು ಈಶ್ವರನಾದ ನನ್ನನ್ನು ಹೊಂದದೆ ಸೇರದೆಯೇ, ಅದಕ್ಕಿಂತಲೂ ಆ (ಯೋನಿಗಿಂತಲೂ) ಅಧಮವಾದ ಅತ್ಯಂತ ಕೆಳಗಿನ ಗತಿಯನ್ನೇ ಹೋಗಿ ಸೇರುತ್ತಾರೆ. "ನನ್ನನ್ನು ಪಡೆಯದೆಯೇ" ಎಂಬಲ್ಲಿ ನನ್ನನ್ನು ಪಡೆಯುವರೆಂಬ ಶಂಕೆಯೇ ಯಾವದೂ ಇಲ್ಲ. ಆದ್ದರಿಂದ ನಾನು (ಜನರಿಗೆ) ತಿಳಿಸಿಕೊಟ್ಟಿರುವ ಒಳ್ಳೆಯ ದಾರಿಯನ್ನು (ಕೂಡ) ಪಡೆಯದೆ ಎಂದೇ (ನನ್ನನ್ನು ಪಡೆಯದೆಯೇ ಎಂಬ ಮಾತಿಗೆ) ಅರ್ಥ.

## ಆಸುರಸಂಪತ್ತನ್ನು ಬಿಟ್ಟವರಿಗೆ ಶ್ರೇಯಸ್ಸಾಗುವದು

(ಭಾಷ್ಯ)

೪೧೦. ಸರ್ವಸ್ಯಾ ಆಸುರ್ಯಾಃ ಸಮ್ಪದಃ ಸಙ್ಕ್ಷೇಪಃ ಅಯಮ್ ಉಚ್ಯತೇ। ಯಸ್ಮಿನ್ ತ್ರಿವಿಧೇ ಸರ್ವಃ ಆಸುರಸಮ್ಪದ್ಭೇದಃ ಅನನ್ತೋಽಪಿ ಅನ್ತರ್ಭವತಿ। ಯತ್ಪರಿಹಾರೇಣ ಪರಿಹೃತಶ್ಚ ಭವತಿ, ಯತ್ ಮೂಲಂ ಸರ್ವಸ್ಯ ಅನರ್ಥಸ್ಯ ತದೇತತ್ ಉಚ್ಯತೇ—

---

1. 'ಅಪ್ರಾಪ್ಯೈವ' ಮ॥
2. 'ಕದಾಚಿದಪಿ' ಮ॥

(ಭಾಷ್ಯಾರ್ಥ)

(ಈಗ) ಎಲ್ಲಾ ಆಸುರಸಂಪತ್ತಿನ ಈ ಸಂಕ್ಷೇಪವನ್ನು ಹೇಳಲಾಗುತ್ತದೆ. ಯಾವ ಮೂರು ಬಗೆಯ (ಆಸುರಸಂಪತ್ತಿನಲ್ಲಿ) ಅನಂತವಾಗಿರುವ ಆಸುರಸಂಪತ್ತಿನ ಎಲ್ಲಾ ಪ್ರಕಾರವೂ ಅಡಕವಾಗಿರುವದೋ, ಯಾವದನ್ನು ಬಿಟ್ಟರೆ (ಅದನ್ನು) ಬಿಟ್ಟಂತೆಯೂ ಆಗುವದೋ, ಯಾವದು ಸರ್ವ ಅನರ್ಥಕ್ಕೂ ಕಾರಣವೋ, ಆ ಇದನ್ನು (ಭಗವಂತನು) ಹೇಳುತ್ತಾನೆ :—

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್ ॥**

೨೧. ಕಾಮ, ಕ್ರೋಧ ಮತ್ತು ಲೋಭ–ಎಂದು ಮೂರು ಬಗೆಯಾಗಿರುವ ಇದೇ ನರಕಕ್ಕೆ ಬಾಗಿಲು, ಆತ್ಮನ ನಾಶಕ್ಕೆ (ಕಾರಣವು). ಆದ್ದರಿಂದ ಈ ಮೂರನ್ನು ಬಿಡಬೇಕು.

(ಭಾಷ್ಯ)

೪೧೧. ತ್ರಿವಿಧಂ ತ್ರಿಪ್ರಕಾರಂ ನರಕಸ್ಯ ಪ್ರಾಪ್ತೌ ಇದಂ[1] ದ್ವಾರಂ ನಾಶನಮ್ ಆತ್ಮನಃ । ಯತ್ ದ್ವಾರಂ ಪ್ರವಿಶನ್ನೇವ ನಶ್ಯತಿ ಆತ್ಮಾ[2] । ಕಸ್ಮೈಚಿತ್ ಪುರುಷಾರ್ಥಾಯ ಯೋಗ್ಯೋ ನ ಭವತಿ ಇತ್ಯೇತತ್[3] । ಅತಃ ಉಚ್ಯತೇ ದ್ವಾರಂ ನಾಶನಮಾತ್ಮನಃ ಇತಿ । ಕಿಂ ತತ್ ? **ಕಾಮಃ ಕ್ರೋಧಃ** ತಥಾ **ಲೋಭಃ ।** ತಸ್ಮಾತ್ **ಏತತ್ ತ್ರಯಂ ತ್ಯಜೇತ್ ।** ಯತಃ ಏತತ್ ದ್ವಾರಂ ನಾಶನಮ್ ಆತ್ಮನಃ ತಸ್ಮಾತ್ ಕಾಮಾದಿತ್ರಯಮ್ ಏತತ್ ತ್ಯಜೇತ್ ॥

(ಭಾಷ್ಯಾರ್ಥ)

ಇದು ಮೂರು ಬಗೆಯಾಗಿರುವ ಮೂರು ಪ್ರಕಾರವಾಗಿರುವ ನರಕವನ್ನು ಪಡೆಯಿಸುವ ಬಾಗಿಲು, ಆತ್ಮನನ್ನು ನಾಶಪಡಿಸತಕ್ಕದ್ದು ; ಈ ಬಾಗಿಲನ್ನು ಹೊಗುತ್ತಲೇ ಆತ್ಮನು ನಾಶವಾಗುತ್ತಾನೆ, ಯಾವ ಪುರುಷಾರ್ಥಕ್ಕೂ ಯೋಗ್ಯನಾಗುವದಿಲ್ಲ–ಎಂದು ಅಭಿಪ್ರಾಯ. ಆದ್ದರಿಂದ (ಇದು) ಆತ್ಮನನ್ನು ನಾಶಪಡಿಸುವ ಬಾಗಿಲು ಎಂದು

---

1. ಅ॥ಶಿ॥ಗಳಲ್ಲಿ ಮಾತ್ರ ಇದೆ ; ಇರಬೇಕು.
2. ‘ಆತ್ಮಾ ನಶ್ಯತಿ’ ಮು॥
3. ಮು॥ಮೈ॥ಗಳಲ್ಲಿಲ್ಲ.

ಹೇಳಿರುತ್ತದೆ. ಇದು ಯಾವದು ? ಎಂದರೆ, ಕಾಮ, ಕ್ರೋಧ ಮತ್ತು ಲೋಭ. ಆದ್ದರಿಂದ ಈ ಮೂರನ್ನು ಬಿಡಬೇಕು. ಇದು ಆತ್ಮನನ್ನು ನಾಶಪಡಿಸುವ ದ್ವಾರವಾಗಿದೆಯಲ್ಲವೆ, ಆದ್ದರಿಂದ ಈ ಕಾಮಾದಿತ್ರಯವನ್ನು ಬಿಟ್ಟುಬಿಡಬೇಕು.

**ಏತೈರ್ವಿಮುಕ್ತಃ ಕೌನ್ತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ ೨೨ ॥**

೨೨. ಕೌಂತೇಯನೆ, ಈ ಮೂರು ತಮೋದ್ವಾರಗಳಿಂದ ಬಿಡುಗಡೆಯನ್ನು ಹೊಂದಿದ ನರನು ತನಗೆ ಶ್ರೇಯಸ್ಸನ್ನು ಮಾಡಿಕೊಳ್ಳುತ್ತಾನೆ, ಅದರಿಂದ ಪರಗತಿಯನ್ನು ಹೊಂದುತ್ತಾನೆ.

(ಭಾಷ್ಯ)

೪೮೨. ತ್ಯಾಗಸ್ತುತಿರಿಯಮ್ । ಏತೈಃ ವಿಮುಕ್ತಃ ಕೌನ್ತೇಯ ತಮೋದ್ವಾರೈಃ ತಮಸಃ ನರಕಸ್ಯ ದುಃಖಮೋಹಾತ್ಮಕಸ್ಯ ದ್ವಾರಾಣಿ ಕಾಮಾದಯಃ । ತೈಃ ಏತೈಃ ತ್ರಿಭಿಃ ಮುಕ್ತಃ ನರಃ ಆಚರತಿ ಅನುತಿಷ್ಠತಿ । ಕಿಮ್ ? ಆತ್ಮನಃ ಶ್ರೇಯಃ। ಯತ್ಪ್ರತಿಬದ್ಧಃ ಪೂರ್ವಂ ನ ಆಚಚಾರ[1] ತದಪಗಮಾತ್ ಆಚರತಿ। ತತಃ ತದಾಚರಣಾತ್ ಯಾತಿ ಪರಾಂ ಗತಿಂ ಮೋಕ್ಷಮಪಿ ಇತಿ ॥

(ಭಾಷ್ಯಾರ್ಥ)

ಇದು (ಆಸುರಸಂಪತ್ತನ್ನು) ತ್ಯಾಗಮಾಡುವದನ್ನು ಹೊಗಳುವದು : ಕೌಂತೇಯನೆ, ಇವುಗಳಿಂದ ವಿಮುಕ್ತನಾದವನು ತಮೋದ್ವಾರಗಳಾದ–ತಮಸ್ಸಿಗೆ, ದುಃಖಮೋಹಾತ್ಮಕವಾದ ನರಕಕ್ಕೆ ಕಾಮಾದಿಗಳು ಬಾಗಿಲುಗಳು. ಅಂಥ ಈ (ಕಾಮಾದಿಗಳೆಂಬ) ಮೂರರಿಂದಲೂ ಬಿಡುಗಡೆಹೊಂದಿದ ನರನು ಆಚರಿಸುತ್ತಾನೆ, ಮಾಡುತ್ತಾನೆ. ಏನನ್ನು ? ತನಗೆ ಶ್ರೇಯಸ್ಸನ್ನು ಯಾವದರ ಅಡ್ಡಿಯಿಂದ ಮೊದಲು ಮಾಡಿಕೊಳ್ಳಲಿಲ್ಲವೋ ಅದು (ಈಗ) ಹೋಗಿರುವದರಿಂದ ಮಾಡಿಕೊಳ್ಳುತ್ತಾನೆ. ಅದರಿಂದ ಆ (ಸಾಧನೆಯನ್ನು) ಮಾಡುವದರಿಂದ ಪರಗತಿಯನ್ನು ಮೋಕ್ಷವನ್ನು ಕೂಡ ಹೊಂದುತ್ತಾನೆ.

---

1. 'ನಾಚರತಿ' ಎಂಬ ಎ||ಗು|| ಪಾಠಕ್ಕಿಂತ ಮೇಲು.

## ಶಾಸ್ತ್ರವೇ ಸನ್ಮಾರ್ಗಕ್ಕೆ ಸಾಧನವು

(ಭಾಷ್ಯ)

೪೧೩. ಸರ್ವಸ್ಯ ಏತಸ್ಯ ಆಸುರಸಮ್ಪತ್ಪರಿವರ್ಜನಸ್ಯ ಶ್ರೇಯಆಚರಣಸ್ಯ ಚ ಶಾಸ್ತ್ರಂ ಕಾರಣಮ್ । ಶಾಸ್ತ್ರಪ್ರಮಾಣಾತ್ ಉಭಯಂ ಶಕ್ಯಂ ಕರ್ತುಂ ನಾನ್ಯಥಾ । **ಅತಃ—**

(ಭಾಷ್ಯಾರ್ಥ)

ಆಸುರಸಂಪತ್ತನ್ನು ಬಿಟ್ಟುಬಿಡುವದು ಮತ್ತು (ತನ್ನ) ಶ್ರೇಯಸ್ಸಿಗೆ (ಬೇಕಾದ ಸಾಧನವನ್ನು) ಆಚರಿಸುವದು–ಇದೆಲ್ಲಕ್ಕೂ ಶಾಸ್ತ್ರವೇ ಕಾರಣವು. ಶಾಸ್ತ್ರಪ್ರಮಾಣ ದಿಂದಲೇ ಈ ಎರಡನ್ನೂ ಮಾಡುವದಕ್ಕೆ ಆಗುತ್ತದೆಯೇ ಹೊರತು ಬೇರೆಯ ರೀತಿ ಯಿಂದ ಆಗುವದಿಲ್ಲ. ಆದ್ದರಿಂದ—

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥ ೨೩ ॥**

೨೩. ಯಾವನು ಶಾಸ್ತ್ರವಿಧಿಯನ್ನು ಬಿಟ್ಟು ಕಾಮಕಾರದಿಂದ ನಡೆಯುವನೋ ಅವನು ಸಿದ್ಧಿಯನ್ನು (ಹೊಂದುವ)ದಿಲ್ಲ, ಸುಖವನ್ನೂ (ಹೊಂದುವ)ದಿಲ್ಲ, ಪರಗತಿಯನ್ನೂ (ಹೊಂದುವ)ದಿಲ್ಲ.

(ಭಾಷ್ಯ)

೪೧೪. ಯಃ ಶಾಸ್ತ್ರವಿಧಿಮ್ । ಶಾಸ್ತ್ರಂ ವೇದಃ ತಸ್ಯ ವಿಧಿಂ[1] ಕರ್ತವ್ಯಾ ಕರ್ತವ್ಯಜ್ಞಾನಕಾರಣಂ ವಿಧಿಪ್ರತಿಷೇಧಾಖ್ಯಮ್ ಉತ್ಸೃಜ್ಯ ತ್ಯಕ್ತ್ವಾ ವರ್ತತೇ ಕಾಮಕಾರತಃ ಕಾಮಪ್ರಯುಕ್ತಃ ಸಃ ನ ಸ ಸಿದ್ಧಿಂ ಪುರುಷಾರ್ಥಯೋಗ್ಯತಾಮ್ ಅವಾಪ್ನೋತಿ । ನಾಪಿ ಅಸ್ಮಿನ್ ಲೋಕೇ ಸುಖಮ್ । ನಾಪಿ ಪರಾಂ ಪ್ರಕೃಷ್ಟಾಂ ಗತಿಮ್, ಸ್ವರ್ಗಂ ಮೋಕ್ಷಂ ವಾ ॥

(ಭಾಷ್ಯಾರ್ಥ)

ಯಾವನು ಶಾಸ್ತ್ರವಿಧಿಯನ್ನು–ಶಾಸ್ತ್ರವೆಂದರೆ ವೇದವು ; ಅದರ ವಿಧಿಯನ್ನು, ಮಾಡತಕ್ಕದ್ದರ (ಮತ್ತು) ಬಿಡತಕ್ಕದ್ದರ ತಿಳಿವಳಿಕೆಗೆ ಕಾರಣವಾಗಿರುವ ವಿಧಿ

---

1. ಅ॥ಶಿ॥ಗಳಲ್ಲಿ 'ಶಾಸ್ತ್ರವಿಧಿಂ ಕರ್ತವ್ಯಾಕರ್ತವ್ಯಜ್ಞಾನಕಾರಣಂ' ಎಂದಿಷ್ಟೇ ಇದೆ.

ನಿಷೇಧ (ವಚನ)ಗಳೆಂಬ[1] (ಶಾಸ್ತ್ರವಿಧಿಯನ್ನು), ಬಿಟ್ಟು ತ್ಯಜಿಸಿ ಕಾಮಕಾರದಿಂದ, ಕಾಮದ ಪ್ರೇರಣೆಗೆ ಒಳಗಾಗಿ, ನಡೆಯುವನೋ, ಅವನು ಸಿದ್ಧಿಯನ್ನು ಪುರುಷಾರ್ಥಕ್ಕೆ (ತಕ್ಕ) ಯೋಗ್ಯತೆಯನ್ನು ಹೊಂದುವದಿಲ್ಲ. ಈ ಲೋಕದಲ್ಲಿ ಸುಖವನ್ನೂ ಹೊಂದುವದಿಲ್ಲ. ಪರವಾದ ಉತ್ಕೃಷ್ಟವಾದ ಗತಿಯನ್ನು, ಸ್ವರ್ಗವನ್ನು ಅಥವಾ ಮೋಕ್ಷವನ್ನು (ಕೂಡ ಹೊಂದುವ)ದಿಲ್ಲ.

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥೨೪॥**

೨೪. ಆದ್ದರಿಂದ ಕಾರ್ಯ, ಅಕಾರ್ಯ ಇವುಗಳ ವ್ಯವಸ್ಥೆಯಲ್ಲಿ ಶಾಸ್ತ್ರವೇ ನಿನಗೆ ಪ್ರಮಾಣವು. ನೀನು ಶಾಸ್ತ್ರವಿಧಾನದಲ್ಲಿ ಹೇಳಿರುವದನ್ನು ಅರಿತುಕೊಂಡು ಇಲ್ಲಿ ಕರ್ಮವನ್ನು ಮಾಡಬೇಕು.

(ಭಾಷ್ಯ)

೪೧೫. ತಸ್ಮಾತ್ ಶಾಸ್ತ್ರಂ ಪ್ರಮಾಣಂ ಜ್ಞಾನಸಾಧನಂ ತೇ ತವ ಕಾರ್ಯಾಕಾರ್ಯವ್ಯವಸ್ಥಿತೌ ಕರ್ತವ್ಯಾಕರ್ತವ್ಯವ್ಯವಸ್ಥಾಯಾಮ್ । ಅತಃ ಜ್ಞಾತ್ವಾ ಬುದ್ಧ್ವಾ ಶಾಸ್ತ್ರವಿಧಾನೋಕ್ತಮ್ । ವಿಧಿಃ ವಿಧಾನಮ್ । ಶಾಸ್ತ್ರಮೇವ ವಿಧಾನಂ[2] ಶಾಸ್ತ್ರವಿಧಾನಂ "ಕುರ್ಯಾತ್ ನ ಕುರ್ಯಾತ್"[3] ಇತ್ಯೇವಂಲಕ್ಷಣಮ್ ; ತೇನ ಉಕ್ತಂ ಸ್ವಕರ್ಮ ಯತ್ ತತ್ ಕರ್ತುಮರ್ಹಸಿ । ಇಹ ಇತಿ ಕರ್ಮಾಧಿಕಾರಭೂಮಿಪ್ರದರ್ಶನಾರ್ಥಮ್ ಇತಿ ॥

(ಭಾಷ್ಯಾರ್ಥ)

ಆದ್ದರಿಂದ ನಿನಗೆ ಕಾರ್ಯಾಕಾರ್ಯವ್ಯವಸ್ಥಿತಿಯಲ್ಲಿ ಎಂದರೆ ಮಾಡತಕ್ಕದ್ದು, ಮಾಡತಕ್ಕದ್ದಲ್ಲ-(ಎಂಬುದನ್ನು)ಗೊತ್ತುಪಡಿಸಿಕೊಳ್ಳುವದಕ್ಕೆ ಶಾಸ್ತ್ರವು ಪ್ರಮಾಣವು, ಜ್ಞಾನಸಾಧನವು ಆದ್ದರಿಂದ ಶಾಸ್ತ್ರವಿಧಾನೋಕ್ತವಾದದ್ದನ್ನು ಅರಿತುಕೊಂಡು

---

1. ಹಿತಕ್ಕೆ ಸಾಧನವನ್ನು ತಿಳಿಸುವದರಿಂದ ಶಾಸ್ತ್ರವೆಂದರೆ ವೇದವೇ; ಇಲ್ಲಿ ವಿಧಿಯೆಂಬ ಮಾತಿನಿಂದ ನಿಷೇಧವನ್ನೂ ಉಪಲಕ್ಷಣವಾಗಿ ಹೇಳಿರುತ್ತದೆ.

2. ಮು॥ಮೈ॥ಪಾಠ; "ಶಾಸ್ತ್ರೇಣ ವಿಧಾನಮ್" ಎಂಬ ಅ॥ಶಿ॥ಗು॥ದಲ್ಲಿ ಉಕ್ತಮ್ ಎಂಬ ಮಾತು ಹೆಚ್ಚಾಗುತ್ತದೆ.

3. 'ಕುರ್ಯಾತ್ ಇದಂ ನ ಕುರ್ಯಾತ್' ಮು॥

ಮನವರಿಕೆಮಾಡಿಕೊಂಡು–ವಿಧಾನವೆಂದರೆ ವಿಧಿಯು ; ಶಾಸ್ತ್ರವೆಂಬ ವಿಧಾನವು, ಶಾಸ್ತ್ರವಿಧಾನವು, (ಇದನ್ನು) ಮಾಡಬೇಕು, (ಇದನ್ನು) ಮಾಡಬಾರದು ಎಂಬ ರೂಪದ (ಶಾಸ್ತ್ರವು). ಅದು ಹೇಳಿರುವ ಸ್ವಕರ್ಮವು ಯಾವದೋ ಅದನ್ನು (ನೀನು) ಮಾಡಬೇಕು ಇಲ್ಲಿ ಎಂದು ತಿಳಿಸಿರುವದು ಕರ್ಮಾಧಿಕಾರದ ಅಂತಸ್ತನ್ನು ತಿಳಿಸುವದಕ್ಕೆ[1]. ಹೀಗೆ (ಅಧ್ಯಾಯವು ಮುಗಿಯಿತು).

ಇತಿ ಶ್ರೀಮದ್ಭಗವದ್ಗೀತಾಭಾಷ್ಯೇ ದೈವಾಸುರಸಂಪದ್ವಿಭಾಗಯೋಗೋ ನಾಮ ಷೋಡಶೋಽಧ್ಯಾಯಃ



1. ನೀನು ಕರ್ಮಯೋಗಕ್ಕೆ ಅರ್ಹನಾದ್ದರಿಂದ ಶಾಸ್ತ್ರೋಕ್ತಕರ್ಮವನ್ನೇ ಮಾಡಬೇಕು ಎಂದು ತಿಳಿಸುವದಕ್ಕೆ.

# ಹದಿನಾರನೆಯ ಅಧ್ಯಾಯದ ಸಾರ

೧-೪. ಜ್ಞಾನದಿಂದ ಮುಕ್ತನಾಗಿ ಕೃತಕೃತ್ಯನಾಗುವವನಿಗೆ ಇರಬೇಕಾದ ದೈವಸಂಪತ್ತನ್ನು ತಿಳಿಸುವದಕ್ಕೆಂದು ಭಗವಂತನಿಂತೆಂದನು: "ಅಂಜಿಕೆಯಿಲ್ಲದಿರುವದು, ಅಂತಃಕರಣ ಶುದ್ಧಿ, ಜ್ಞಾನಯೋಗಗಳಲ್ಲಿ ನೆಲೆನಿಂತಿರುವದು, ದಾನ, ದಮ, ಯಜ್ಞ, ವೇದಾಧ್ಯಯನ, ತಪಸ್ಸು, ಋಜುತೆ, ಅಹಿಂಸೆ, ಸತ್ಯ; ಅಕ್ರೋಧ, ಸಂನ್ಯಾಸ, ಶಮ, ಚಾಡಿಯನ್ನು ಹೇಳುವ ಸ್ವಭಾವವಿಲ್ಲದಿರುವಿಕೆ, ಭೂತದಯೆ, ವಿಷಯಗಳಲ್ಲಿ ಲೋಲುಪನಾಗದಿರುವದು, ಮೃದುತ್ವ, ನಾಚಿಕೆ, ಚಂಚಲತೆಯಿಲ್ಲದಿರುವದು, ಪ್ರಗಲ್ಭನಾಗಿರುವದು, ಕ್ಷಮೆ, ಧೈರ್ಯ, ಶುಚಿತ್ವ, ಅದ್ರೋಹ, ಅಭಿಮಾನವಿಲ್ಲದಿರುವದು–ಇವೆಲ್ಲವೂ ದೈವಸಂಪತ್ತುಳ್ಳವನಿಗೆ ಉಂಟಾಗುತ್ತವೆ. ದಂಭ, ದರ್ಪ, ಅಭಿಮಾನ, ಕ್ರೋಧ, ಸಿಟ್ಟು, ಕಟುವಾದ ಮಾತು, ಅಜ್ಞಾನ–ಇವು 'ಆಸುರ ಸಂಪತ್ತುಳ್ಳವರಿಗೆ ಉಂಟಾಗಿರುತ್ತವೆ.

೫. "ಈ ಎರಡರಲ್ಲಿ ದೈವಸಂಪತ್ತಿನಿಂದ ಮೋಕ್ಷವುಂಟಾಗುತ್ತದೆ, ಆಸುರಸಂಪತ್ತಿನಿಂದ ಬಂಧವುಂಟಾಗುತ್ತದೆ. ನಿನಗೆ ದೈವಸಂಪತ್ತಿರುವದರಿಂದ ನೀನು ಚಿಂತಿಸಬೇಕಾದದ್ದಿಲ್ಲ.

೬-೧೮, "ಈ ಲೋಕದಲ್ಲಿ ಸೃಷ್ಟವಾಗಿರುವ ಪ್ರಾಣಿಗಳಿಗೆಲ್ಲ ಈ ಎರಡರಲ್ಲಿ ಒಂದ, ಸಂಪತ್ತು ಇರುತ್ತದೆ. ಆಸುರಸಂಪತ್ತನ್ನು ಬಿಟ್ಟರೆ ಮಾತ್ರ ಅಧ್ಯಾತ್ಮಸಾಧನವು ಅಳವಡುತ್ತದೆ ಯಾದ್ದರಿಂದ ಆ ಸಂಪತ್ತನ್ನು ವಿವರಿಸಿ ಹೇಳುವೆನು, ಕೇಳು. ಆಸುರಸಂಪತ್ತಿನವರಿಗೆ ಯಾವದನ್ನು ಮಾಡಬೇಕು, ಯಾವದನ್ನು ಬಿಡಬೇಕು–ಎಂಬುದು ತಿಳಿದಿರುವದಿಲ್ಲ, ಅವರಲ್ಲಿ ಶುಚಿತ್ವವಿರುವದಿಲ್ಲ, ಆಚಾರವಿರುವದಿಲ್ಲ, ಸತ್ಯವಿರುವದಿಲ್ಲ. ಈ ಜಗತ್ತಿನವರೆಲ್ಲ ಅಸತ್ಯವಂತರೆಂದು ಅವರು ಭಾವಿಸುವರು; ಪ್ರಜೆಗಳು ಕಾಮಹೇತುವಿನಿಂದ ಹುಟ್ಟುವರೇ ಹೊರತು ಧರ್ಮಾಧರ್ಮವೆಂಬ ನಿಮಿತ್ತವಾಗಲಿ ಅದಕ್ಕೆ ಅನುಗುಣವಾಗಿ ಫಲವನ್ನು ಕೊಡುವ ಈಶ್ವರನಾಗಲಿ ಇಲ್ಲ–ಎಂದೇ ಅವರ ಭಾವನೆ. ಈ ದೃಷ್ಟಿಯನ್ನವಲಂಬಿಸಿ ಅವರು ಅಧ್ಯಾತ್ಮಸಾಧನವನ್ನೆಲ್ಲ ತ್ಯಜಿಸಿ ಲೋಕಕ್ಷಯಕಾರಕವಾದ ಉಗ್ರಕರ್ಮಗಳಲ್ಲಿಯೇ ನಿರತರಾಗಿರುತ್ತಾರೆ. ಅವರ ಕಾಮವು ಎಂದಿಗೂ ಪೂರೈಸುವಹಾಗಿರುವದಿಲ್ಲ, ಅವರು ದಂಭ, ಅಭಿಮಾನ, ಮದ–ಇವುಗಳಿಂದ ಕೂಡಿ ಕೆಟ್ಟ ಸಂಕಲ್ಪದಿಂದ ಪಾಪಮಾರ್ಗದಲ್ಲಿಯೇ ಗೊತ್ತಾಗಿ ನಡೆಯುತ್ತಿರುವರು. ಅವರ ಯೋಚನೆಯು ಅಷ್ಟಿಷ್ಟಲ್ಲ, ಸಾಯುವವರೆಗೂ ಮುಗಿಯದೆ ಇರುತ್ತದೆ. ಕಾಮವೇ ಅವರಿಗೆ ಮುಖ್ಯ ಪುರುಷಾರ್ಥ. ನೂರಾರು ಆಶೆಗಳ ಹಗ್ಗಗಳ ಬಿಗಿತಕ್ಕೆ ಸಿಕ್ಕಿ ಕಾಮಕ್ರೋಧಗಳಲ್ಲಿಯೇ ನಿಂತು ಅನ್ಯಾಯದಿಂದಲೇ ಧನಸಂಪಾದನೆಯನ್ನು ಮಾಡಿಕೊಂಡು ಭೋಗಿಸುವದಕ್ಕೆ ಹವಣಿಸುತ್ತಿರುತ್ತಾರೆ. ಇದು ಸಿಕ್ಕಿತು, ಇದು ಸಿಕ್ಕಬೇಕು; ಇವರನ್ನು ಗೆದ್ದೆನು, ಉಳಿದವರನ್ನು ಗೆಲ್ಲಬೇಕು; ನನಗೆ ಸಮಾನರಾದವರು ಯಾರಿದ್ದಾರೆ?–ಎಂದು ಅವರು ಎಲ್ಲಾ ಬಗೆಯಿಂದಲೂ ತಮ್ಮನ್ನು ತಾವೇ ಮೆಚ್ಚಿಕೊಳ್ಳುತ್ತಾ ಬಗೆಬಗೆಯ ಚಿತ್ತವೃತ್ತಿಗಳಿಂದ ಕೂಡಿ ಭೋಗಗಳ

ಲ್ಲಿಯೇ ಪ್ರಸಕ್ತರಾಗಿ ದುರ್ಗತಿಯನ್ನು ಪಡೆಯುತ್ತಾರೆ. ಅವರು ಮಾಡುವ ಕರ್ಮಗಳು ತೋರುಗಾಣಿಕೆಯ ಕರ್ಮಗಳು ; ಅವರಿಗೆ ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ–ಇವೇ ಆಶ್ರಯವು ; ನನ್ನನ್ನು ಹಗೆಮಾಡುವದೇ ಅವರ ಸ್ವಭಾವವಾದ್ದರಿಂದ ತಮಗೂ ಮತ್ತೊಬ್ಬರಿಗೂ ಅಹಿತವನ್ನೇ ಮಾಡುತ್ತಿರುವರು.

೧೯-೨೦ “ ಹೀಗೆ ನನ್ನನ್ನು ದ್ವೇಷಿಸುತ್ತಿರುವ ಆ ಕ್ರೂರರನ್ನು ಅವರಿಗೆ ತಕ್ಕ ಅಸುರ ಜನ್ಮಗಳಲ್ಲಿಯೇ ಮತ್ತೆ ಮತ್ತೆ ಹಾಕುತ್ತಿರುವೆನು. ಅವರಿಗೆ ಪರಮಾತ್ಮಪ್ರಾಪ್ತಿಯೆಂಬುದಿಲ್ಲವೇ ಇಲ್ಲ. ಬರುಬರುತ್ತಾ ಹೆಚ್ಚುಹೆಚ್ಚು ಕೆಟ್ಟ ಜನ್ಮಗಳಲ್ಲಿ ಹುಟ್ಟಿ ಕೊನೆಗೆ ಅವರು ಅತ್ಯಂತವಾಗಿ ಅಧಮಗತಿಯನ್ನು ಪಡೆಯುತ್ತಾರೆ.

೨೧-೨೨. ಕಾಮ, ಕ್ರೋಧ, ಲೋಭ–ಈ ಮೂರೇ ನರಕಕ್ಕೆ ಕಾರಣವಾಗಿರುವ ಅಸುರ ಸಂಪತ್ತಿನ ಸಂಗ್ರಹವು. ಆದ್ದರಿಂದ ವಿವೇಕಿಯಾದವನು ಈ ಮೂರನ್ನೂ ಬಿಟ್ಟು ತನ್ನ ಮುಕ್ತಿಗೆ ಕಾರಣವಾದ ಸಾಧನಗಳನ್ನು ಮಾಡಿಕೊಳ್ಳಬೇಕು.

೨೩-೨೪. “ ಶಾಸ್ತ್ರದಲ್ಲಿ ಯಾವದನ್ನು ಮಾಡಬೇಕು, ಯಾವದನ್ನು ಬಿಡಬೇಕು– ಎಂಬುದನ್ನು ತಿಳಿಸಿರುತ್ತದೆ. ಆದ್ದರಿಂದ ಅದನ್ನು ತಿಳಿದುಕೊಂಡು ಕರ್ಮವನ್ನು ಮಾಡಬೇಕು ಯಾರು ಶಾಸ್ತ್ರವಿಧಿಯನ್ನೇ ಕೈಬಿಟ್ಟು ಮನಸ್ಸಿಗೆ ತೋಚಿದಂತೆ ನಡೆಯುವರೋ ಅವರಿಗೆ ಇಲ್ಲಿಯೂ ಸುಖವಿಲ್ಲ, ಪರದಲ್ಲಿಯೂ ಗತಿಯಿಲ್ಲ ಆದ್ದರಿಂದ ನೀನು ಶಾಸ್ತ್ರವಿಧಾನದಂತೆಯೇ ಕರ್ಮವನ್ನು ಮಾಡುವದು ಒಳ್ಳೆಯದು.



# ಹದಿನೇಳನೆಯ ಅಧ್ಯಾಯ

(ಶ್ರ ದ್ಧಾ ತ್ರ ಯ ವಿ ಭಾ ಗ ಯೋ ಗ)

## ಅರ್ಜುನನ ಪ್ರಶ್ನೆ

(ಭಾಷ್ಯ)

೪೧೬. "ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ" (೧೬-೨೪) ಇತಿ ಭಗವದ್ವಾಕ್ಯಾತ್ ಲಬ್ಧಪ್ರಶ್ನಬೀಜಃ ಅರ್ಜುನ ಉವಾಚ—

(ಭಾಷ್ಯಾರ್ಥ)

"ಆದ್ದರಿಂದ ಶಾಸ್ತ್ರವೇ ನಿನಗೆ ಪ್ರಮಾಣವು" (೧೬-೨೪) ಎಂದು ಭಗವಂತನು ಹೇಳಿದ್ದರಿಂದ ಪ್ರಶ್ನೆ(ಮಾಡಲು) ಅವಕಾಶವು ಸಿಕ್ಕಿದ್ದರಿಂದ ಅರ್ಜುನನು ಇಂತೆಂದನು :—

**ಅರ್ಜುನ ಉವಾಚ :** –

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ ೧ ॥**

೧. ಅರ್ಜುನನಿಂತೆಂದನು :—ಕೃಷ್ಣನೆ, ಯಾರು ಶಾಸ್ತ್ರವಿಧಿಯನ್ನು ಬಿಟ್ಟು ಶ್ರದ್ಧೆಯಿಂದ ಕೂಡಿ ಪೂಜಿಸುವರೋ ಅವರ ನಿಷ್ಠೆ ಎಂಥದ್ದು ? ಸತ್ತ್ವವೊ, ರಜವೊ, ಇಲ್ಲ, ತಮವೊ ?

(ಭಾಷ್ಯ)

೪೧೭. ಯೇ ಕೇಚಿತ್ ಅವಿಶೇಷಿತಾಃ ಶಾಸ್ತ್ರವಿಧಿಂ ಶಾಸ್ತ್ರವಿಧಾನಂ ಶ್ರುತಿಸ್ಮೃತಿಶಾಸ್ತ್ರಚೋದನಾಮ್ ಉತ್ಸೃಜ್ಯ ಪರಿತ್ಯಜ್ಯ ಯಜನ್ತೇ ದೇವಾದೀನ್ ಪೂಜಯನ್ತಿ ಶ್ರದ್ಧಯಾ ಅನ್ವಿತಾಃ ಶ್ರದ್ಧಯಾ ಆಸ್ತಿಕ್ಯಬುದ್ಧ್ಯಾ ಅನ್ವಿತಾಃ[1] ಸಂಯುಕ್ತಾಃ

---

1. 'ವೃದ್ಧವ್ಯವಹಾರದರ್ಶನಾತ್' ಎಂದು ಮು॥ಮೈ॥ಗಳಲ್ಲಿ ಹೆಚ್ಚಾಗಿರುವದು ಮುಂದೆ 'ಶ್ರದ್ದಧಾನತಯಾ' ಎಂಬ ಮಾತಿನ ಹಿಂದುಗಡೆಯಲ್ಲಿರುವದೇ ಸರಿ.

ಸನ್ತಃ। ಶ್ರುತಿಲಕ್ಷಣಂ ಸ್ಮೃತಿಲಕ್ಷಣಂ ವಾ ಕಿಂಚಿತ್ ಶಾಸ್ತ್ರವಿಧಿಮ್ ಅಪಶ್ಯನ್ತಃ ವೃದ್ಧವ್ಯವಹಾರದರ್ಶನಾದೇವ ಶ್ರದ್ದಧಾನತಯಾ ಯೇ ದೇವಾದೀನ್ ಪೂಜಯನ್ತಿ ತೇ ಇಹ "ಯೇ ಶಾಸ್ತ್ರವಿಧಿಮ್ ಉತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ" ಇತ್ಯೇವಂ ಗೃಹ್ಯನ್ತೇ। ಯೇ ಪುನಃ ಕೇಚಿತ್ ಶಾಸ್ತ್ರವಿಧಿಮ್ ಉಪಲಭಮಾನಾ ಏವ ತಮ್ ಉತ್ಸೃಜ್ಯ ಅಯಥಾವಿಧಿ ದೇವಾದೀನ್ ಪೂಜಯನ್ತಿ ತೇ ಇಹ "ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ" ಇತಿ ನ ಪರಿಗೃಹ್ಯನ್ತೇ। ಕಸ್ಮಾತ್? ಶ್ರದ್ಧಯಾನ್ವಿತತ್ವವಿಶೇಷಣಾತ್ । ದೇವಾದಿಪೂಜಾವಿಧಿಪರಂ[1] ಕಿಂಚಿತ್ ಶಾಸ್ತ್ರಂ ಪಶ್ಯನ್ತ ಏವ ತತ್ ಉತ್ಸೃಜ್ಯ ಅಶ್ರದ್ದಧಾನತಯಾ ತದ್ವಿಹೀನಾಯಾಂ[2] ದೇವಾದಿಪೂಜಾಯಾಂ ಶ್ರದ್ಧಯಾ ಅನ್ವಿತಾಃ ಪ್ರವರ್ತನ್ತೇ ಇತಿ ನ ಶಕ್ಯಂ ಕಲ್ಪಯಿತುಂ ಯಸ್ಮಾತ್। ತಸ್ಮಾತ್ ಪೂರ್ವೋಕ್ತಾ ಏವ "ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ" ಇತ್ಯತ್ರ ಗೃಹ್ಯನ್ತೇ। ತೇಷಾಮ್ ಏವಂಭೂತಾನಾಂ ನಿಷ್ಠಾ ತು ಕಾ[3] ಕೃಷ್ಣ। ಸತ್ತ್ವಮ್ ಆಹೋ ರಜಃ, ತಮಃ। ಕಿಂ ಸತ್ತ್ವಂ ನಿಷ್ಠಾ ಅವಸ್ಥಾನಮ್, ಆಹೋಸ್ವಿತ್ ರಜಃ, ಅಥ ವಾ ತಮಃ ಇತಿ? ಏತತ್ ಉಕ್ತಂ ಭವತಿ—ಯಾ ತೇಷಾಂ ದೇವಾದಿವಿಷಯಾ ಪೂಜಾ ಸಾ ಕಿಂ ಸಾತ್ತ್ವಿಕೀ ಆಹೋಸ್ವಿತ್ ರಾಜಸೀ, ಉತ ತಾಮಸೀ? ಇತಿ ||

(ಭಾಷ್ಯಾರ್ಥ)

ಯಾರೇ ಆಗಲಿ, (ಇಂಥವರೆಂಬ) ವಿಶೇಷವಿಲ್ಲ, ಶಾಸ್ತ್ರವಿಧಿಯನ್ನು ಶಾಸ್ತ್ರವಿಧಾನವನ್ನು ಶ್ರುತಿಸ್ಮೃತಿಗಳೆಂಬ ಶಾಸ್ತ್ರದ ಚೋದನೆಯನ್ನು[4] ಬಿಟ್ಟು, ಪರಿತ್ಯಜಿಸಿ ಶ್ರದ್ಧೆಯಿಂದ ಅನ್ವಿತರಾಗಿ ಆಸ್ತಿಕ್ಯಬುದ್ಧಿಯಿಂದ ಅನ್ವಿತರಾಗಿ, ಕೂಡಿದವರಾಗಿ ಯಜನಮಾಡುತ್ತಾರೋ ದೇವತೆಗಳೇ ಮುಂತಾದವರನ್ನು ಪೂಜಿಸುತ್ತಾರೋ (ಎಂದರ್ಥ).

---

1. 'ಪೂಜಾವಿಧಿಪರಾಃ' ಮ॥

2. ಮ॥ಮೈ॥ಗಳಲ್ಲಿ ಮಾತ್ರ ಇದೆ; ಇದೇ 'ತದ್ವಿಹಿತಾಯಾಂ' ಎಂಬ ಪಾಠಕ್ಕಿಂತ ಉತ್ತಮವೆಂದು ತೋರುತ್ತದೆ.

3. "ನಿಷ್ಠಾ ತು ಅವಸ್ಥಾ ಅವಸ್ಥಾನಂ ಕಾ" ಮ॥ "ನಿಷ್ಠಾ ತು ಅವಸ್ಥಾನಮ್" ಮೈ॥

4. ಚೋದನೆಯೆಂದರೆ ವಿಧಿಪ್ರತಿಷೇಧರೂಪವಾದ ವಾಕ್ಯ. ಹಿಂದಿನ ಅಧ್ಯಾಯದಲ್ಲಿ ಶ್ರುತಿಯೇ ಶಾಸ್ತ್ರವೆಂದು ಹೇಳಿದೆಯಾದರೂ ಶ್ರುತಿಗೆ ವಿರುದ್ಧವಲ್ಲದ ಕರ್ಮವಿಧಿಯು ಶ್ರುತಿಯಿಲ್ಲದಿರುವಾಗ ವಿಧಿಸುವ ಸ್ಮೃತಿಯೂ ಶಾಸ್ತ್ರವೇ ಎಂದು ಭಾವ.

ಶ್ರುತಿರೂಪವಾದ ಅಥವಾ ಸ್ಮೃತಿರೂಪವಾದ ಯಾವ ಶಾಸ್ತ್ರವಿಧಿಯನ್ನೂ ಕಾಣದೆ ಹಿರಿಯರು ಮಾಡುವದನ್ನು ನೋಡುವದರಿಂದಲೇ ಶ್ರದ್ಧೆಯಿಂದ ಕೂಡಿದವರಾಗಿ ಯಾರು ದೇವಾದಿಗಳನ್ನು ಪೂಜಿಸುತ್ತಾರೋ ಅವರನ್ನೇ ಇಲ್ಲಿ "ಯಾರು ಶಾಸ್ತ್ರವಿಧಿಯನ್ನು ಬಿಟ್ಟು ಶ್ರದ್ಧೆಯಿಂದನ್ವಿತರಾಗಿ ಪೂಜಿಸುವರೋ" ಎಂದೀ ಪರಿಯಲ್ಲಿ ಹಿಡಿದು (ಹೇಳಿ)ರುತ್ತದೆ. **ಆದರೆ ಯಾರು ಯಾವದಾದರೊಂದು ಶಾಸ್ತ್ರವಿಧಿಯನ್ನು ಕಂಡರೂ ಅದನ್ನು ಬಿಟ್ಟು (ಅಶ್ರದ್ಧೆಯಿಂದ) ವಿಧಿಗೆ ವಿರುದ್ಧವಾಗಿ ದೇವತೆಗಳೇ ಮುಂತಾದವರನ್ನು ಪೂಜಿಸುತ್ತಾರೋ ಅವರನ್ನು ಇಲ್ಲಿ ಯಾಗು "ಶಾಸ್ತ್ರವಿಧಿಯನ್ನು ಬಿಟ್ಟು ಪೂಜಿಸುವರೋ" ಎಂದು ಹಿಡಿದು (ಹೇಳಿ)ಲ್ಲ.** ಏಕೆಂದರೆ 'ಶ್ರದ್ಧೆಯಿಂದ ಕೂಡಿದವರಾಗಿ' ಎಂಬ ವಿಶೇಷಣವನ್ನು (ಕೊಟ್ಟಿರುವ)ದರಿಂದ. ದೇವತೆಗಳೇ ಮೊದಲಾದವರ ಪೂಜೆಯನ್ನು ವಿಧಿಸುವದರಲ್ಲಿ ತಾತ್ಪರ್ಯವುಳ್ಳ ಯಾವದಾದರೊಂದು ಶಾಸ್ತ್ರವನ್ನು ಕಂಡರೂ ಅದನ್ನು ಬಿಟ್ಟು ಅಶ್ರದ್ಧೆಯುಳ್ಳವರಾಗಿ ಆ (ವಿಧಿ)ಯಿಲ್ಲದ ದೇವಾದಿಪೂಜೆಯಲ್ಲಿ ಶ್ರದ್ಧೆಯಿಂದ ಅನ್ವಿತರಾಗಿ, ತೊಡಗುತ್ತಾರೆ ಎಂದು ಕಲ್ಪಿಸುವದಕ್ಕೆ ಆಗುವ ಹಾಗಿಲ್ಲವಷ್ಟೆ[1]; ಆದ್ದರಿಂದ (ನಾವು) ಮೊದಲು ಹೇಳಿದವರನ್ನೇ "ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ" ಎಂಬಲ್ಲಿ ಹಿಡಿದಿರುತ್ತದೆ (ಎಂದು ಸಿದ್ಧವಾಯಿತು).

ಎಲೈ ಕೃಷ್ಣನೆ, ಅವರ ಹೀಗಿರುವ (ಪೂಜಕರ) ನಿಷ್ಠೆಯು ಎಂಥದ್ದು? ಸತ್ತ್ವವೊ, ರಜವೊ, ತಮವೊ? ಸತ್ತ್ವವೇ (ಅವರ) ನಿಷ್ಠೆಯೊ, ನಿಲ್ಲುವ ಸ್ಥಾನವೊ? ಅಥವಾ ರಜವೊ, ಅಥವಾ ತಮವೊ? ಎಂದು (ಪ್ರಶ್ನೆ). ಇದನ್ನು ಹೇಳಿದಂತೆ ಆಯಿತು: ಅವರು ಮಾಡುವ ದೇವಾದಿವಿಷಯವಾದ ಪೂಜೆಯಿದೆಯಲ್ಲ, ಅದೇನು ಸಾತ್ತ್ವಿಕವೊ, ಅಥವಾ ರಾಜಸವೊ, ಅಥವಾ ತಾಮಸವೊ?

## ಶ್ರದ್ಧಾವಂತರಾದ ಅಜ್ಞರ ಪೂಜೆಯ ಸ್ವಭಾವ

(ಭಾಷ್ಯ)

೪೧೮. ಸಾಮಾನ್ಯವಿಷಯೋಽಯಂ[2] ಪ್ರಶ್ನಃ ನ ಅಪ್ರವಿಭಜ್ಯ ಪ್ರತಿವಚನಮ್ ಅರ್ಹತಿ ಇತಿ ಶ್ರೀ ಭಗವಾನ್ ಉವಾಚ—

---

1. ಯಾರು ವಿಧಿಯನ್ನು ಕಂಡರೂ ಅದಕ್ಕೆ ವಿರುದ್ಧವಾಗಿ ವರ್ತಿಸುವರೋ ಅವರಿಗೆ ಅದರಲ್ಲಿ ಶ್ರದ್ಧೆಯಿಲ್ಲವೆಂದೇ ಆಗುತ್ತದೆ. ಆದ್ದರಿಂದ ಇಲ್ಲಿ ಕೇಳಿರುವದು ಅವರ ವಿಷಯವಲ್ಲ. ವಿಧಿಯನ್ನರಿಯದೆ ಕರ್ಮದಲ್ಲಿ ಶ್ರದ್ಧಾಮಾತ್ರದಿಂದ ತೊಡಗುವವರ ವಿಷಯ.

2. "ಏವಂ ಸಾಮಾನ್ಯವಿಷಯಃ ಪ್ರಶ್ನಃ" ಮ||; "ಸಾಮಾನ್ಯವಿಷಯಃ" ಮೈ||

(ಭಾಷ್ಯಾರ್ಥ)

ಈ ಪ್ರಶ್ನೆಯು ಸಾಮಾನ್ಯವಿಷಯಕವಾದದ್ದು, (ಇದನ್ನು) ವಿಭಾಗಿಸಿಕೊಳ್ಳದೆ ಉತ್ತರವನ್ನು ಹೇಳುವದಕ್ಕೆ ಆಗಲಾರದು ಎಂದು ಶ್ರೀಭಗವಂತನು ಇಂತೆಂದನು :—

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥**

೨. ದೇಹಿಗಳ ಸ್ವಭಾವದಿಂದ ಹುಟ್ಟಿದ ಆ ಶ್ರದ್ಧೆಯು ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂದು ತ್ರಿವಿಧವಾಗಿರುತ್ತದೆ. ಅದನ್ನು (ಹೇಳ್ವೆನು) ಕೇಳು.

(ಭಾಷ್ಯ)

೪೧೯. ತ್ರಿವಿಧಾ ತ್ರಿಪ್ರಕಾರಾ ಭವತಿ ಶ್ರದ್ಧಾ । ಯಸ್ಯಾಂ ನಿಷ್ಠಾಂ[1] ತ್ವಂ ಪೃಚ್ಛಸಿ ದೇಹಿನಾಂ ಶರೀರಿಣಾಂ[2] ಸಾ ಸ್ವಭಾವಜಾ । ಜನ್ಮಾನ್ತರಕೃತಃ ಧರ್ಮಾದಿ ಸಂಸ್ಕಾರೋ ಮರಣಕಾಲೇ ಅಭಿವ್ಯಕ್ತಃ ಸ್ವಭಾವಃ ಉಚ್ಯತೇ । ತತೋ ಜಾತಾ ಸ್ವಭಾವಜಾ । ಸಾತ್ತ್ವಿಕೀ ಸತ್ತ್ವನಿರ್ವೃತ್ತಾ ದೇವಪೂಜಾದಿವಿಷಯಾ[3] ರಾಜಸೀ ರಜೋನಿರ್ವೃತ್ತಾ ಯಕ್ಷರಕ್ಷಃಪೂಜಾದಿವಿಷಯಾ । ತಾಮಸೀ ತಮೋನಿರ್ವೃತ್ತಾ ಪ್ರೇತಪಿಶಾಚಪೂಜಾದಿವಿಷಯಾ[4] । ಏವಂ ತ್ರಿವಿಧಾ । ತಾಮ್ ಉಚ್ಯಮಾನಾಂ ಶ್ರದ್ಧಾಂ ಶೃಣು ಅವಧಾರಯ ॥

(ಭಾಷ್ಯಾರ್ಥ)

ಯಾವದರ ನಿಷ್ಠೆಯನ್ನು (ಕುರಿತು) ನೀನು ಕೇಳುತ್ತಿರುವೆಯೋ ದೇಹಿಗಳ, ಶರೀರಿಗಳ, ಸ್ವಭಾವಜವಾದ ಆ ಶ್ರದ್ಧೆಯು ತ್ರಿವಿಧವಾಗಿರುತ್ತದೆ, ಮೂರು ಪ್ರಕಾರವಾಗಿರುತ್ತದೆ. (ಹಿಂದಿನ) **ಬೇರೊಂದು ಜನ್ಮದಲ್ಲಿ ಮಾಡಿದ ಧರ್ಮಾದಿಗಳ ಸಂಸ್ಕಾರವು ಸಾಯುವ ಕಾಲದಲ್ಲಿ ಅಭಿವ್ಯಕ್ತವಾದರೆ ಸ್ವಭಾವವೆನಿಸುವದು**[5]. ಅದರಿಂದ ಹುಟ್ಟಿದ್ದು ಸ್ವಭಾವಜ (ಶ್ರದ್ಧೆ); ಸಾತ್ತ್ವಿಕ, ಸತ್ತ್ವದಿಂದಾಗಿರುವ, ದೇವ

---

1. 'ನಿಷ್ಠಾಯಾಂ' ಎಂಬ ಆ॥ನಿ॥ಮಾ॥ ಪಾಠಕ್ಕಿಂತ ಇದು ಮೇಲು.
2. ಆ॥ನಿ॥ಗಳಲ್ಲಿಲ್ಲ.
3. ನಿ॥ದಲ್ಲಿ ಆದಿ ಎಂಬ ಮಾತು ಬಿಟ್ಟುಹೋಗಿದೆ.
4. 'ಪ್ರೇತಪಿಶಾಚಾದಿಪೂಜಾವಿಷಯಾ' ಎಂಬ ಆ॥ನಿ॥ ಪಾಠಕ್ಕಿಂತ ಇದೇ ಮೇಲು.
5. **೩-೩೩, ೮-೬ರ ಭಾಷ್ಯವನ್ನು ನೋಡಿರಿ.**

ಪೂಜೆಯೇ ಮುಂತಾದ ವಿಷಯದ, (ಶ್ರದ್ಧೆ). ರಾಜಸ, ರಜಸ್ಸಿನಿಂದ ಆಗಿರುವ, ಯಕ್ಷರಾಕ್ಷಸಪೂಜೆಯೇ ಮುಂತಾದವುಗಳ ವಿಷಯವಾದ (ಶ್ರದ್ಧೆ); ತಾಮಸ, ತಮಸ್ಸಿನಿಂದಾದ, ಪ್ರೇತಪಿಶಾಚಪೂಜೆಯೇ ಮುಂತಾದವುಗಳ ವಿಷಯವಾದ (ಶ್ರದ್ಧೆ). ಹೀಗೆಂದು ಮೂರು ವಿಧವಾಗಿರುವದು. ಆ ಶ್ರದ್ಧೆಯನ್ನು ಹೇಳುವೆನು ಕೇಳು, ಗೊತ್ತುಪಡಿಸಿಕೊ.

(ಭಾಷ್ಯ)

೪೨೦. ಸೇಯಂ[1] ತ್ರಿವಿಧಾ ಭವನ್ತೀ —

(ಭಾಷ್ಯಾರ್ಥ)

ಅಂಥ ಈ ಮೂರು ಬಗೆಯಾಗಿರುವ (ಶ್ರದ್ಧೆಯು)—

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ॥**

೩. ಭಾರತನೆ, ಪ್ರತಿಯೊಬ್ಬನ ಶ್ರದ್ಧೆಯೂ ಸತ್ತ್ವಾನುರೂಪವಾಗಿರುತ್ತದೆ. ಈ ಪುರುಷನು ಶ್ರದ್ಧಾಮಯನು, ಯಾವನು ಯಾವ ಶ್ರದ್ಧೆಯುಳ್ಳವನೋ ಅವನು ಅವನೇ.

(ಭಾಷ್ಯ)

೪೨೧. ಸತ್ತ್ವಾನುರೂಪಾ ವಿಶಿಷ್ಟಸಂಸ್ಕಾರೋಪೇತಾನ್ತಃಕರಣಾನುರೂಪಾ ಸರ್ವಸ್ಯ ಪ್ರಾಣಿಜಾತಸ್ಯ ಶ್ರದ್ಧಾ ಭವತಿ ಭಾರತ। ಯದ್ಯೇವಂ ತತಃ ಕಿಂ ಸ್ಯಾತ್ ಇತಿ? ಉಚ್ಯತೇ। ಶ್ರದ್ಧಾಮಯಃ ಶ್ರದ್ಧಾಪ್ರಾಯಃ ಅಯಂ ಪುರುಷಃ ಸಂಸಾರೀ ಜೀವಃ। ಕಥಮ್? ಯಃ ಯಚ್ಛ್ರದ್ಧಃ ಯಾ ಶ್ರದ್ಧಾ ಯಸ್ಯ ಜೀವಸ್ಯ ಸ ಯಚ್ಛ್ರದ್ಧಃ ಸ ಏವ ತಚ್ಛ್ರದ್ಧಾನುರೂಪ ಏವ ಸ ಜೀವಃ॥

(ಭಾಷ್ಯಾರ್ಥ)

ಎಲೈ ಭರತವಂಶೋತ್ಪನ್ನನೆ, ಪ್ರತಿಯೊಂದು ಪ್ರಾಣಿಸಮೂಹಕ್ಕೂ ಸತ್ತ್ವಾನುರೂಪವಾಗಿ, ಆಯಾ ಸಂಸ್ಕಾರದಿಂದೊಡಗೂಡಿದ ಅಂತಃಕರಣಕ್ಕೆ ತಕ್ಕಂತೆ ಶ್ರದ್ಧೆಯುಂಟಾಗುತ್ತದೆ. ಹೀಗಿದ್ದರೆ ಆದರಿಂದೇನಾಗುವದು?–ಎಂದರೆ ಹೇಳುತ್ತಾನೆ:—

1. ಮ॥ಮೈ॥ವಾ॥ ಪಾಠವನ್ನು ಹೀಗೆ ತಿದ್ದಿಕೊಂಡಿದೆ; 'ಸೈವಂ' ಎಂಬ ಆ॥ನಿ॥ ಪಾಠಕ್ಕಿಂತ ಸೇಯಂ ಎಂಬುದೇ ಮೇಲು.

ಈ ಪುರುಷನು, ಸಂಸಾರಿಯಾದ ಜೀವನು ಶ್ರದ್ಧಾಮಯನು, ಶ್ರದ್ಧೆ(ಯಿರುವಂತೆ) ಬಹಳವುಟ್ಟಿಗೆ ಇರುವವನಾಗುತ್ತಾನೆ. ಹೇಗೆಂದರೆ ಯಾವನು ಯಚ್ಛ್ರದ್ಧನೋ, ಯಾವ ಶ್ರದ್ಧೆಯು ಯಾವ ಜೀವನಿಗೆ ಇರುವದೋ ಅವನು ಯಚ್ಛ್ರದ್ಧನು; (ಯಾವನು ಯಚ್ಛ್ರದ್ಧನೋ) ಆ ಜೀವನು ಅವನೇ ಆ ಶ್ರದ್ಧೆಗೆ ಅನುರೂಪನೇ (ಆಗಿರುತ್ತಾನೆ).

(ಭಾಷ್ಯ)

೪.೨. ತತಶ್ಚ ಕಾರ್ಯೇಣ ಲಿಙ್ಗೇನ ದೇವಾದಿಪೂಜಯಾ ಸತ್ತ್ವಾದಿ ನಿಷ್ಠಾ ಅನುಮೇಯಾ ಇತ್ಯಾಹ—

(ಭಾಷ್ಯಾರ್ಥ)

ಹೀಗಿರುವದರಿಂದಲೇ ಕಾರ್ಯವಾದ[1] ದೇವತೆಗಳೇ ಮುಂತಾದವರನ್ನು ಪೂಜಿಸುವದೆಂಬ ಗುರುತಿನಿಂದ ಸತ್ತ್ವವೇ ಮುಂತಾದ ನಿಷ್ಠೆಯನ್ನು ಅನುಮಾನ ದಿಂದ (ನಿಶ್ಚಯಿಸ)ಬೇಕು ಎಂದು ಹೇಳುತ್ತಾನೆ:–

**ಯಜನ್ತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜನ್ತೇ ತಾಮಸಾ ಜನಾಃ ॥**

೪. ಸಾತ್ತ್ವಿಕರು ದೇವತೆಗಳನ್ನು ಪೂಜಿಸುತ್ತಾರೆ, ರಾಜಸರು ಯಕ್ಷರಾಕ್ಷಸರನ್ನು (ಪೂಜಿಸುವರು), ಮಿಕ್ಕ ತಾಮಸ ಜನರು ಪ್ರೇತಗಳನ್ನೂ ಭೂತಗಣಗಳನ್ನೂ ಪೂಜಿಸುವರು.

(ಭಾಷ್ಯ)

೪.೩. ಯಜನ್ತೇ ಪೂಜಯನ್ತಿ ಸಾತ್ತ್ವಿಕಾಃ ಸತ್ತ್ವನಿಷ್ಠಾಃ ದೇವಾನ್ ಯಕ್ಷರಕ್ಷಾಂಸಿ ರಾಕ್ಷಸಾಃ। ಪ್ರೇತಾನ್ ಭೂತಗಣಾಂಶ್ಚ ಸಪ್ತಮಾತೃಕಾದೀಂಶ್ಚ ಅನ್ಯೇ ಯಜನ್ತೇ ತಾಮಸಾ ಜನಾಃ ॥

(ಭಾಷ್ಯಾರ್ಥ)

ಸಾತ್ತ್ವಿಕರು ಸತ್ತ್ವನಿಷ್ಠರು ದೇವತೆಗಳನ್ನು ಯಜನಮಾಡುತ್ತಾರೆ.

---

1. ಸತ್ತ್ವನಿಷ್ಠೆಯನ್ನು ಊಹಿಸುವದಕ್ಕೆ ದೇವಪೂಜೆಯೇ ಮುಂತಾದದ್ದು ಗುರುತಾಗಿರುತ್ತದೆ; ಏಕೆಂದರೆ ಈ ಗುರುತು ಆಯಾ ಜೀವನ ಸ್ವಭಾವಕ್ಕನುಗುಣವಾಗಿ ಉಂಟಾಗಿರುತ್ತದೆ.

ಪೂಜಿಸುತ್ತಾರೆ. ರಾಜಸರು ಯಕ್ಷರನ್ನೂ ರಾಕ್ಷಸರನ್ನೂ (ಪೂಜಿಸುತ್ತಾರೆ). ಮಿಕ್ಕ ತಾಮಸಜನರು ಪ್ರೇತಗಳನ್ನೂ **ಸಪ್ತಮಾತೃಕೆಯರೇ** [1] ಮುಂತಾದ ಭೂತಗಣಗಳನ್ನೂ ಪೂಜಿಸುತ್ತಾರೆ.

## ರಾಜಸತಾಮಸರ ನಿಷ್ಠೆ ಆಸುರವಾದದ್ದು

(ಭಾಷ್ಯ)

೪೨೪. ಏವಂ ಕಾರ್ಯತೋ ನಿರ್ಣೀತಾಃ ಸತ್ತ್ವಾದಿನಿಷ್ಠಾಃ ಶಾಸ್ತ್ರವಿಧ್ಯುತ್ಸರ್ಗೇ । ತತ್ರ ಕಶ್ಚಿದೇವ ಸಹಸ್ರೇಷು ದೇವಪೂಜಾದಿಪರಃ ಸತ್ತ್ವನಿಷ್ಠಃ ಭವತಿ । ಬಾಹುಲ್ಯೇನ ತು ರಜೋನಿಷ್ಠಾಃ ತಮೋನಿಷ್ಠಾಶ್ಚೈವ ಪ್ರಾಣಿನೋ ಭವನ್ತಿ । **ಕಥಮ್ ?**

(ಭಾಷ್ಯಾರ್ಥ)

ಹೀಗೆ ಶಾಸ್ತ್ರವಿಧಿಯನ್ನು ಬಿಟ್ಟಿರುವದರಲ್ಲಿ ಸತ್ತ್ವವೇ ಮುಂತಾದ ನಿಷ್ಠೆಯನ್ನು ಕಾರ್ಯದಿಂದ ನಿರ್ಣಯಿಸಿದ್ದಾಯಿತು. ಇಲ್ಲಿ ಸಾವಿರಕ್ಕೆ ಯಾವನೋ ಒಬ್ಬನು ದೇವಪೂಜೆಯೇ ಮುಂತಾದವುಗಳಲ್ಲಿ ತತ್ಪರನಾಗಿ ಸತ್ತ್ವನಿಷ್ಠನಾಗಿರುತ್ತಾನೆ. ಆದರೆ ಬಹಳಮಟ್ಟಿಗೆ ಪ್ರಾಣಿಗಳು ರಜೋನಿಷ್ಠರೂ ತಮೋನಿಷ್ಠರೂ ಆಗಿಯೇ ಇರುತ್ತಾರೆ. ಹೇಗೆಂದರೆ :—

**ಅಶಾಸ್ತ್ರವಿಹಿತಂ ಘೋರಂ ತಪ್ಯನ್ತೇ ಯೇ ತಪೋ ಜನಾಃ ।**
**ದಮ್ಭಾಹಙ್ಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥**
**ಕರ್ಶಯನ್ತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾನ್ತಃಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥**

೫-೬. ಯಾವ ಜನರು ದಂಭಾಹಂಕಾರಸಂಯುಕ್ತರಾಗಿ ಶಾಸ್ತ್ರವಿಹಿತವಲ್ಲದ ಘೋರವಾದ ತಪಸ್ಸನ್ನು ಮಾಡುತ್ತಿರುವರೋ, ಶರೀರದಲ್ಲಿರುವ ಭೂತಗ್ರಾಮವನ್ನೂ ಶರೀರದೊಳಗೆ ಇರುವ ನನ್ನನ್ನೂ ಅಚೇತಸರಾಗಿ ಕೃಶಗೊಳಿಸುತ್ತಿರುವರೋ ಅವರನ್ನು ಆಸುರನಿಶ್ಚಯವುಳ್ಳವರೆಂದು ತಿಳಿದುಕೊ.

---

1. ೯-೨೫ರ ಭಾ. ಭಾ. ೪೩ ನೋಡಿ.

(ಭಾಷ್ಯ)

೪-೫. ಅಶಾಸ್ತ್ರವಿಹಿತಂ ನ ಶಾಸ್ತ್ರವಿಹಿತಮ್ ಅಶಾಸ್ತ್ರವಿಹಿತಮ್ । ಘೋರಂ ಪೀಡಾಕರಂ ಪ್ರಾಣಿನಾಮ್ ಆತ್ಮನಶ್ಚ । ತಪಃ ತಪ್ಯನ್ತೇ ನಿರ್ವರ್ತಯನ್ತಿ ಯೇ ಜನಾಃ । ತೇ ಚ ದಮ್ಭಾಹಙ್ಕಾರಸಂಯುಕ್ತಾಃ ದಮ್ಭಶ್ಚ ಅಹಙ್ಕಾರಶ್ಚ ದಮ್ಭಾಹಙ್ಕಾರೌ ತಾಭ್ಯಾಂ ಸಂಯುಕ್ತಾಃ ದಮ್ಭಾಹಙ್ಕಾರಸಂಯುಕ್ತಾಃ । ಕಾಮರಾಗಬಲಾನ್ವಿತಾಃ । ಕಾಮಶ್ಚ ರಾಗಶ್ಚ ಕಾಮರಾಗೌ ತತ್ಕೃತಂ ಬಲಂ ಕಾಮರಾಗಬಲಮ್ । ತೇನ ಅನ್ವಿತಾಃ ಕಾಮರಾಗಬಲಾನ್ವಿತಾಃ [1] ॥

(ಭಾಷ್ಯಾರ್ಥ)

ಅಶಾಸ್ತ್ರವಿಹಿತವಾದ--ಶಾಸ್ತ್ರದಲ್ಲಿ ವಿಧಿಸದೆ ಇರುವದು ಅಶಾಸ್ತ್ರವಿಹಿತವಾದದ್ದು (ಅಂಥ)-ಘೋರವಾದ ಪ್ರಾಣಿಗಳಿಗೂ ತಮಗೂ ತೊಂದರೆಯನ್ನುಂಟುಮಾಡುವ, ತಪಸ್ಸನ್ನು ಯಾವ ಜನರು ಮಾಡುತ್ತಿರುವರೋ ಆಚರಿಸುತ್ತಿರುವರೋ, ಮತ್ತು ತಾವು ದಂಭಾಹಂಕಾರಸಂಯುಕ್ತರಾಗಿ ; ದಂಭವೂ ಅಹಂಕಾರವೂ ದಂಭಾಹಂಕಾರಗಳು, ಅವುಗಳಿಂದ ಕೂಡಿದವರಾಗಿ ದಂಭಾಹಂಕಾರಸಂಯುಕ್ತರಾಗಿರುವರೋ ; ಕಾಮರಾಗಬಲಾನ್ವಿತರಾಗಿ ಕಾಮವೂ ರಾಗವೂ ಕಾಮರಾಗಗಳು, ಅವುಗಳಿಂದಾದ ಬಲವು ಕಾಮರಾಗಬಲವು; ಅದರಿಂದ ಕೂಡಿದವರಾಗಿ ಕಾಮರಾಗಬಲಾನ್ವಿತರಾಗಿರುವರೋ—

(ಭಾಷ್ಯ)

೪-೬. ಕರ್ಶಯನ್ತಃ ಕೃಶೀಕುರ್ವನ್ತಃ ಶರೀರಸ್ಥಂ ಭೂತಗ್ರಾಮಂ ಕರಣಸಮುದಾಯಮ್ ಅಚೇತಸಃ ಅವಿವೇಕಿನಃ ಮಾಂ ಚೈವ ತತ್ಕರ್ಮಬುದ್ಧಿಸಾಕ್ಷಿಭೂತಮ್ ಅನ್ತಃ ಶರೀರಸ್ಥಂ [2] ಕರ್ಶಯನ್ತಃ । ಮದನುಶಾಸನಾಕರಣಮೇವ ಮತ್ಕರ್ಶನಮ್ । ತಾನ್ ವಿದ್ಧಿ ಆಸುರನಿಶ್ಚಯಾನ್ ಆಸುರಃ [3] ನಿಶ್ಚಯಃ ಯೇಷಾಂ ತೇ ಆಸುರನಿಶ್ಚಯಾಃ । ತಾನ್ ಪರಿಹರಣಾರ್ಥಂ ವಿದ್ಧಿ ಇತ್ಯುಪದೇಶಃ ॥

(ಭಾಷ್ಯಾರ್ಥ)

ಶರೀರದಲ್ಲಿರುವ ಭೂತಗ್ರಾಮವನ್ನು ಕರಣಗಳ ಸಮೂಹವನ್ನೂ ಮತ್ತು ತಮ್ಮ ಕರ್ಮಗಳಿಗೂ ಬುದ್ಧಿಗೂ ಸಾಕ್ಷಿಯಾಗಿರುವ ನನ್ನನ್ನು (ಕರ್ಶಯನ್ತಃ) ಕೃಶ

---

1. ' ಕಾಮರಾಗಬಲೈರ್ವಾ ಅನ್ವಿತಾಃ ' ಎಂಬ ವ್ಯಾ॥ ನಿ॥ ಗು॥ ಪಾಠವು ಹೆಚ್ಚು. ಹಿಂದೆ ೭-೧೧, ೧೫-೧೬—ಇವುಗಳ ಭಾಷ್ಯಗಳನ್ನು ನೋಡಿ.

2. ' ನಾರಾಯಣಮ್ ಎಂದು ಹೆಚ್ಚಾಗಿ ಅ॥ಸಿ॥

3. ' ಅಸುರಾಣಾಂ ' ಮು॥ವ್ಯಾ॥

ಗೊಳಿಸುತ್ತಾ-(ಇರುವ)-ನನ್ನ ಅಪ್ಪಣೆಯಂತೆ ಮಾಡದಿರುವದೇ ನನ್ನನ್ನು ಕೃಶಗೊಳಿಸುವದು [1].-ಅಚೇತಸರು ಅವಿವೇಕಿಗಳು ಆಸುರನಿಶ್ಚಯವುಳ್ಳವರು-ಅಸುರರ ನಿಶ್ಚಯವು ಯಾರಿಗೆ ಇರುವದೋ ಅವರು ಆಸುರನಿಶ್ಚಯವುಳ್ಳವರು. (ಅಂಥವರು ಎಂದು)-(ಅವರ ಸ್ವಭಾವವನ್ನು) ಬಿಟ್ಟುಬಿಡುವದಕ್ಕಾಗಿ ತಿಳಿದುಕೊ ಎಂದು ಉಪದೇಶ (ಮಾಡಿರುತ್ತದೆ).

## ಆಹಾರಾದಿಗಳ ವಿಂಗಡದ ಪ್ರತಿಜ್ಞೆ

(ಭಾಷ್ಯ)

೪೨೭. ಆಹಾರಾಣಾಂ ಚ ರಸ್ಯಸ್ನಿಗ್ಧಾದಿವರ್ಗತ್ರಯರೂಪೇಣ ಭಿನ್ನಾನಾಂ ಯಥಾಕ್ರಮಂ ಸಾತ್ತ್ವಿಕರಾಜಸತಾಮಸಪುರುಷಪ್ರಿಯತ್ವದರ್ಶನಮ್ ಇಹ ಕ್ರಿಯತೇ ರಸ್ಯಸ್ನಿಗ್ಧಾದಿಷು [2] ಆಹಾರವಿಶೇಷೇಷು ಆತ್ಮನಃ ಪ್ರೀತ್ಯತಿರೇಕೇಣ ಲಿಙ್ಗೇನ ಸಾತ್ತ್ವಿಕತ್ವಂ ರಾಜಸತ್ವಂ ತಾಮಸತ್ವಂ ಚ ಬುದ್ಧ್ವಾ ರಜಸ್ತಮೋಲಿಙ್ಗಾನಾಮ್ ಆಹಾರಾಣಾಂ ಪರಿವರ್ಜನಾರ್ಥಂ ಸತ್ತ್ವಲಿಙ್ಗಾನಾಂ ಚ ಉಪಾದಾನಾರ್ಥಮ್। ತಥಾ ಯಜ್ಞಾದೀನಾಮಪಿ ಸತ್ತ್ವಾದಿಗುಣಭೇದೇನ ತ್ರಿವಿಧತ್ವಪ್ರತಿಪಾದನಮ್ ಇಹ ರಾಜಸತಾಮಸಾನ್ ಬುದ್ಧ್ವಾ ಕಥಂ ನು ನಾಮ ಪರಿತ್ಯಜೇತ್, ಸಾತ್ತ್ವಿಕಾನೇವ ಅನುತಿಷ್ಠೇತ್ ಇತ್ಯೇವಮರ್ಥಮ್ [3]। ಆಹ—

(ಭಾಷ್ಯಾರ್ಥ)

ಇಲ್ಲಿ ಆಹಾರಗಳನ್ನು ರಸ್ಯಸ್ನಿಗ್ಧವೇ ಮುಂತಾಗಿ ಮೂರು ವರ್ಗಗಳಾಗಿ ವಿಂಗಡಿಸಿ ಅವು ಕ್ರಮವಾಗಿ ಸಾತ್ತ್ವಿಕರಾಜಸತಾಮಸಜನರಿಗೆ ಪ್ರಿಯವಾಗಿರುವವೆಂದು ತಿಳಿಸಲಾಗುತ್ತದೆ. ರಸ್ಯಸ್ನಿಗ್ಧವೇ ಮುಂತಾದ ಆಯಾ ಆಹಾರಗಳಲ್ಲಿ ತನಗೆ ಹೆಚ್ಚಿನ ಪ್ರೀತಿಯಿರುವದೆಂಬ ಗುರುತಿನಿಂದ ತಾನು ಸಾತ್ತ್ವಿಕನು, ರಾಜಸನು, ಅಥವಾ ತಾಮಸನು ಎಂಬುದನ್ನರಿತುಕೊಂಡು ರಜಸ್ತಮಸ್ಸುಗಳಿಗೆ ಗುರುತಾಗಿರುವ ಆಹಾರಗಳನ್ನು ಬಿಡುವದಕ್ಕೂ ಸತ್ತ್ವದ ಗುರುತಾಗಿರುವ (ಆಹಾರಗಳನ್ನು) ಸ್ವೀಕರಿ

---

1. ಪರಮಾತ್ಮನು ವಿಧಿಸದೆ ಇರುವ ಕರ್ಮಗಳನ್ನು ಮಾಡುವವರಿಗೆ ಅನಾತ್ಮಬುದ್ಧಿ ಹೆಚ್ಚುವದರಿಂದ ಅವರು ಆತ್ಮನನ್ನು ಕೃಶಗೊಳಿಸಿದವರಾಗುತ್ತಾರೆ.

2. 'ರಸ್ಯಾಃ ಸ್ನಿಗ್ಧಾಃ ಸ್ಥಿರಾಃ ಹೃದ್ಯಾಃ ಇತ್ಯಾದಿಷು' ಮು||

3. 'ಇತ್ಯೇವಮರ್ಥಂ ಚ ಆಹ' ಮು||; ಇಲ್ಲಿ 'ಆಹ' ಎಂಬ ಮಾತು ಇಲ್ಲದಿದ್ದರೂ ಆಗುತ್ತಿತ್ತು.

ಸುವದಕ್ಕೂ (ಅವನ್ನು ಇಲ್ಲಿ ಹೇಳಿದೆ). ಮತ್ತು ಯಜ್ಞಾದಿಗಳನ್ನು ಇಲ್ಲಿ ಸತ್ತ್ವವೇ ಮುಂತಾದ ಗುಣಗಳ (ಗುರುತಾಗಿ) ಮೂರು ವಿಧವೆಂದು ಹೇಳಿರುವದೂ ರಾಜಸ ತಾಮಸಗಳನ್ನು ಅರಿತುಕೊಂಡು (ಅವನ್ನು) ಹೇಗಾದರೂ ಪರಿತ್ಯಾಗಮಾಡಲಿ, ಸಾತ್ತ್ವಿಕವಾದವುಗಳನ್ನೇ ಸೇವೆಮಾಡಲಿ-ಎಂಬುದಕ್ಕಾಗಿ, (ಇದಕ್ಕಾಗಿ ಭಗವಂತನು ಹೇಳುತ್ತಾನೆ:—

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥**

೭. ಪ್ರತಿಯೊಬ್ಬನಿಗೂ ಪ್ರಿಯವಾದ ಆಹಾರವೂ ಮೂರುಬಗೆಯಾಗಿರುತ್ತದೆ; ಮತ್ತು ಯಜ್ಞ, ತಪಸ್ಸು, ದಾನ-ಇವೂ ಮೂರುಬಗೆಯಾಗಿರುತ್ತವೆ.) ಅವುಗಳ ಈ ಭೇದವನ್ನು ಕೇಳು.

(ಭಾಷ್ಯ)

೪೨೮. ಆಹಾರಸ್ತ್ವಪಿ ಸರ್ವಸ್ಯ ಭೋಕ್ತುಃ ಪ್ರಾಣಿನಃ ತ್ರಿವಿಧಃ ಭವತಿ ಪ್ರಿಯಃ ಇಷ್ಟಃ । ತಥಾ ಯಜ್ಞಃ ತಥಾ[1] ತಪಃ, ತಥಾ ದಾನಮ್ । ತೇಷಾಮ್ ಆಹಾರಾದೀನಾಂ ಭೇದಮ್ ಇಮಂ ವಕ್ಷ್ಯಮಾಣಂ ಶೃಣು ॥

(ಭಾಷ್ಯಾರ್ಥ)

ಭುಂಜಿಸುವ ಪ್ರತಿಯೊಂದು ಪ್ರಾಣಿಗೂ ಪ್ರಿಯವಾಗಿರುವ ಬೇಕಾಗಿರುವ ಆಹಾರವೂ ಮೂರು ಬಗೆಯಾಗಿರುತ್ತದೆ. ಇದರಂತೆ ಯಜ್ಞವೂ (ಮೂರುಬಗೆ), ಇದರಂತೆ ತಪಸ್ಸೂ (ಮೂರುಬಗೆ), ಇದರಂತೆ ದಾನವೂ (ಮೂರುಬಗೆ). ಈ ಆಹಾರಾದಿಗಳ ಈ ಮುಂದೆ ಹೇಳುವ ಭೇದವನ್ನು ಕೇಳು.

## ಆಹಾರದಲ್ಲಿ ಸಾತ್ತ್ವಿಕಾದಿಭೇದ

**ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ ೮ ॥**

೮. ಆಯುಸ್ಸು, ಸತ್ತ್ವ, ಬಲ, ಆರೋಗ್ಯ, ಸುಖ, ಪ್ರೀತಿ— (ಇವನ್ನು) ವೃದ್ಧಿಗೊಳಿಸುವವಾಗಿಯೂ ರಸ್ಯವಾಗಿಯೂ ಸ್ನಿಗ್ಧವಾಗಿಯೂ

---

1. ನಾ॥ವಾ॥ಗಳಲ್ಲಿಲ್ಲ.

ಸ್ಥಿರವಾಗಿಯೂ ಹೃದ್ಯವಾಗಿಯೂ (ಇರುವ) ಆಹಾರಗಳು ಸಾತ್ತ್ವಿಕರಿಗೆ ಪ್ರಿಯಗಳು.

(ಭಾಷ್ಯ)

೪೨೯. ಆಯುಶ್ಚ ಸತ್ತ್ವಂ ಚ ಬಲಂ ಚ ಆರೋಗ್ಯಂ ಚ ಸುಖಂ ಚ ಪ್ರೀತಿಶ್ಚ ಆಯುಃಸತ್ತ್ವಬಲಾರೋಗ್ಯಸುಖಪ್ರೀತಯಃ ತಾಸಾಂ[1] ವಿವರ್ಧನಾಃ ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ । ತೇ ಚ ರಸ್ಯಾಃ ರಸೋಪೇತಾಃ । ಸ್ನಿಗ್ಧಾಃ ಸ್ನೇಹವನ್ತಃ, ಸ್ಥಿರಾಃ ಚಿರಕಾಲಸ್ಥಾಯಿನಃ ದೇಹೇ, ಹೃದ್ಯಾಃ ಹೃದಯಪ್ರಿಯಾಃ ಆಹಾರಾಃ ಸಾತ್ತ್ವಿಕಪ್ರಿಯಾಃ ಸಾತ್ತ್ವಿಕಸ್ಯ ಇಷ್ಟಾಃ ॥

(ಭಾಷ್ಯಾರ್ಥ)

ಆಯುಸ್ಸೂ ಸತ್ತ್ವವೂ ಬಲವೂ ಆರೋಗ್ಯವೂ ಸುಖವೂ ಸಂತೋಷವೂ ಆಯುಃಸತ್ತ್ವಬಲಾರೋಗ್ಯಸುಖಪ್ರೀತಿಗಳು ; ಇವುಗಳನ್ನು ಬೆಳೆಯಿಸುವವು ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಗಳು. ಮತ್ತು ಅವು ರಸ್ಯವಾಗಿ ರುಚಿಯಿಂದೊಡಗೂಡಿದ, ಸ್ನಿಗ್ಧವಾದ ಜಿಡ್ಡುಳ್ಳ, ಸ್ಥಿರವಾದ ದೇಹದಲ್ಲಿ ಬಹುಕಾಲ ಬಾಳಿಕೆ ಬರುವ[2] ಹೃದ್ಯವಾದ ಹೃದಯಕ್ಕೆ ಮೆಚ್ಚಾದ-(ಇಂಥ) ಆಹಾರಗಳು ಸಾತ್ತ್ವಿಕಪ್ರಿಯಗಳು, ಸಾತ್ತ್ವಿಕನಾದವನಿಗೆ ಬೇಕಾಗಿರುತ್ತವೆ.

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥**

೯. ಅತಿಯಾಗಿ ಕಟು, ಅಮ್ಲ, ಲವಣ, ಉಷ್ಣ, ತೀಕ್ಷ್ಣ, ರೂಕ್ಷ, ವಿದಾಹಿ-(ಇಂಥ) ದುಃಖ, ಶೋಕ, ಆಮಯ-(ಇವುಗಳನ್ನು) ಕೊಡುವ ಆಹಾರಗಳು ಇವನಿಗೆ ಇಷ್ಟವಾಗಿರುತ್ತವೆ.

(ಭಾಷ್ಯ)

೪೩೦. ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ಇತ್ಯತ್ರ ಅತಿಶಬ್ದಃ ಕಟ್ವಾದಿಷು ಸರ್ವತ್ರ ಯೋಜ್ಯಃ। 'ಅತಿಕಟುಃ' 'ಅತಿತೀಕ್ಷ್ಣಃ' ಇತ್ಯೇವಮ್।

---

1. 'ಆಯುಃಸತ್ತ್ವಾದೀನಾಮ್' ಎಂದು ಹೆಚ್ಚಾಗಿ ಮು॥ಪ್ರ॥; "ಆಯುಶ್ಚ.... ಪ್ರೀತಿಶ್ಚ ಆಯುಃಸತ್ತ್ವಬಲಾರೋಗ್ಯಸುಖಪ್ರೀತಯಃ । ತಾಸಾಂ ವಿವರ್ಧನಾಃ" ವಾ॥

2. ಒಂದು ಸಲ ತಿಂದರೆ ಬಹಳ ಹೊತ್ತಿನವರೆಗೂ ಹಸಿವು ಬಾರದಂತೆ ಇರುವ.

ಕಟುಶ್ಚ ಅಮ್ಲಶ್ಚ ಲವಣಶ್ಚ ಅತ್ಯುಷ್ಣಶ್ಚ ತೀಕ್ಷ್ಣಶ್ಚ ರೂಕ್ಷಶ್ಚ ವಿದಾಹೀ ಚ ಕಟ್ವಮ್ಲ ಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ[1] । ತೇ ಚ ಆಹಾರಾಃ ರಾಜಸಸ್ಯ ಇಷ್ಟಾಃ । ದುಃಖಶೋಕಾಮಯಪ್ರದಾಃ । ದುಃಖಂ ಚ ಶೋಕಂ ಚ ಆಮಯಂ ಚ ಪ್ರಯಚ್ಛನ್ತಿ ಇತಿ ದುಃಖಶೋಕಾಮಯಪ್ರದಾಃ ॥

(ಭಾಷ್ಯಾರ್ಥ)

ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ಎಂಬಲ್ಲಿರುವ ಅತಿ ಶಬ್ದ ವನ್ನು ಕಟುವೇ ಮುಂತಾದವುಗಳೆಲ್ಲಕ್ಕೂ ಅತಿಕಟು . . . ಅತಿತೀಕ್ಷ್ಣ . . . ಹೀಗೆ ಸೇರಿಸಿಕೊಳ್ಳಬೇಕು[2]. ಕಹಿಯಾಗಿಯೂ ಹುಳಿಯಾಗಿಯೂ ಉಪ್ಪಾಗಿಯೂ ಬಲು ಬಿಸಿಯಾಗಿಯೂ ಕಾರವಾಗಿಯೂ ಒಣಕಲಾಗಿಯೂ[3] ನಾಲಗೆಯುರಿಯುವವಾ ಗಿಯೂ[4] ಇರುವ (ಆಹಾರಗಳು) ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿಗಳು ಆ ಆಹಾರಗಳು ರಾಜಸರಿಗೆ ಇಷ್ಟವಾದವುಗಳು. ದುಃಖಶೋಕಾಮಯಪ್ರದಗಳು ದುಃಖ, ಶೋಕ, ರೋಗ—ಇವುಗಳನ್ನು ಕೊಡುವದರಿಂದ ದುಃಖಶೋಕಾಮಯ ಪ್ರದಗಳು.

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥**

೧೦. ಯಾತಯಾಮವೂ ಗತರಸವೂ ದುರ್ಗಂಧವುಳ್ಳದ್ದೂ

---

1. 'ಇತ್ಯೇವಮ್' ಎಂಬ ಪದದ ಮುಂದೆ 'ವಿದಾಹಿನಃ' ಎಂಬವರೆಗಿನ ವಾಕ್ಯವು ಮು॥ದಲ್ಲಿದ್ದು ಆ॥ದಲ್ಲಿ ಬಿಟ್ಟುಹೋಗಿದೆ. ಮಿಕ್ಕ ಅಚ್ಚಿನ ಪುಸ್ತಕಗಳಲ್ಲಿ ಹೆಚ್ಚುಕಡಿಮೆಯ ರೂಪದಲ್ಲಿದೆ.

2. ಒಂದೇ ಕಡೆಯಲ್ಲಿರುವ ಅತಿಶಬ್ದವನ್ನು ದೇಹಲೀದೀಪನ್ಯಾಯದಿಂದ ಎಲ್ಲಾ ಶಬ್ದಗಳಿಗೂ ಸೇರಿಸಿಕೊಳ್ಳಬೇಕು. ಏಕೆಂದರೆ ಕಟ್ವಮ್ಲಾದಿಗಳು ಸಾತ್ತ್ವಿಕರಿಗೂ ಸರ್ವಥಾ ನಿಷಿದ್ಧವಲ್ಲ—ಎಂದು ಭಾವ.

3. ರೂಕ್ಷವೆಂದರೆ ರಾಗಿ, ನವಣೆ—ಮುಂತಾದವುಗಳಂತೆ ಒಣಕಲಾಗಿರುವದು ಎಂದು ವ್ಯಾಖ್ಯಾನಕಾರರನ್ನನುಸರಿಸಿ ಬರೆದ ಅರ್ಥವಿದು ; ಹೆಚ್ಚಾಗಿ ಹುರಿದು ಜಿಡ್ಡುಹೋಗಿರುವದು ಎಂದೂ ಅರ್ಥವನ್ನು ಮಾಡಬಹುದು.

4. 'ಅತಿವಿದಾಹಿ' ಎಂದರೆ ಅತ್ಯುಷ್ಣವೆಂದೇ ಆಗುವದರಿಂದ ಸಾಸುವೆಯೇ ಮುಂತಾ ದವುಗಳಂತೆ ನಾಲಗೆಯುರಿಯುವ ಎಂದು ವ್ಯಾಖ್ಯಾನಕಾರರು ಅರ್ಥಮಾಡಿದಾರೆ

ಪರ್ಯುಷಿತವಾದದ್ದೂ ಉಚ್ಛಿಷ್ಟವೂ ಅಮೇಧ್ಯವೂ ಆದ ಭೋಜನವಿರುವ ದಲ್ಲ, (ಅದು) ತಾಮಸಪ್ರಿಯವು.

(ಭಾಷ್ಯ)

೪೩೧. ಯಾತಯಾಮಂ ಮನ್ದಪಕ್ವಮ್[1] ನಿರ್ವೀರ್ಯಸ್ಯ ಗತರಸೇನ ಉಕ್ತತ್ವಾತ್। ಗತರಸಂ ರಸವಿಯುಕ್ತಮ್[2]। ಪೂತಿ ದುರ್ಗನ್ಧಮ್। ಪರ್ಯುಷಿತಂ ಚ ಪಕ್ವಂ ಸತ್ ರಾತ್ರ್ಯನ್ತರಿತಂ ಚ ಯತ್। ಉಚ್ಛಿಷ್ಟಮಪಿ ಚ ಭುಕ್ತ ಶಿಷ್ಟಮಪಿ[3]। ಅಮೇಧ್ಯಮ್ ಅಯಜ್ಞಾರ್ಹಮ್। ಭೋಜನಮ್ ಈದೃಶಂ ತಾಮಸಪ್ರಿಯಮ್ ॥

(ಭಾಷ್ಯಾರ್ಥ)

ಯಾತಯಾಮ, ಸ್ವಲ್ಪವಾಗಿ ಬೆಂದಿರುವದು (ಎಂದರ್ಥ); ಏಕೆಂದರೆ ಸಾರ ವಿಲ್ಲದ್ದನ್ನು 'ಗತರಸ' ಎಂಬ (ಮಾತಿ)ನಿಂದ ಹೇಳಿರುತ್ತದೆ[4]. ಗತರಸವು ಸವಿ ಯಿಲ್ಲದಿರುವದು. ಪೂತಿ, ದುರ್ವಾಸನೆಯುಳ್ಳದ್ದು. ಪರ್ಯುಷಿತ, ಬೇಯಿಸಿದ ಬಳಿಕ (ಒಂದು) ರಾತ್ರೆ ಕಳೆದದ್ದು. ಉಚ್ಛಿಷ್ಟ, ಊಟಮಾಡಿ ಮಿಕ್ಕದ್ದು[5]. ಅಮೇಧ್ಯ, ಯಜ್ಞಕ್ಕೆ ತಕ್ಕದ್ದಲ್ಲದ್ದು. ಇಂಥ ಭೋಜನವು ತಾಮಸರಿಗೆ ಪ್ರಿಯವಾಗಿರುತ್ತದೆ.

## ಯಜ್ಞದಲ್ಲಿ ಸಾತ್ತ್ವಿಕಾದಿಭೇದ

(ಭಾಷ್ಯ)

೪೩೨. ಅಥ ಇದಾನೀಂ ಯಜ್ಞಸ್ತ್ರಿವಿಧಃ ಉಚ್ಯತೇ—

---

1. 'ಅರ್ಧಪಕ್ವಮ್' ಮೈ॥
2. 'ವಿಯುಕ್ತರಸಮ್' ಮ॥
3. 'ಉಚ್ಛಿಷ್ಟಮಪಿ ಭುಕ್ತಶಿಷ್ಟಮ್ ಉಚ್ಛಿಷ್ಟಮ್' ಮ॥ಮೈ॥

4 ಯಾತಯಾಮವೆಂದರೂ ಸಾರವು ಕಡಿಮೆಯಾಗಿರುವದು ಎಂದೇ ಅರ್ಥ; ಪುನ ರುಕ್ತಿಯಿಲ್ಲದೆ ಇರುವದಕ್ಕಾಗಿ ಅದಕ್ಕೆ ಸ್ವಲ್ಪವಾಗಿ ಬೆಂದಿರುವ ಎಂದು ಅರ್ಥಮಾಡಬೇಕು ಎಂದು ಭಾವ. ಪಕ್ವವಾಗಿ ಕಾಲವಾಗಿರುವದರಿಂದ ಆರಿ ತಣ್ಣಗಾಗಿರುವದು ಎಂದೂ ಬೇರೆಯ ಕೆಲವರು ವ್ಯಾಖ್ಯಾನಮಾಡಿರುತ್ತಾರೆ

5. ಎಂಜಲು ಎಂದು ಅರ್ಥವಲ್ಲ; ಒಬ್ಬರು ಊಟಮಾಡಿ ಉಳಿದಿರುವದು ಎಂದಿಷ್ಟೇ ಅರ್ಥ. ಶಾಸ್ತ್ರದಲ್ಲಿ ಹೇಳಿರುವ ಕಡೆಯಲ್ಲಲ್ಲದೆ ಮಿಕ್ಕ ಕಡೆಯಲ್ಲಿಯೂ ತಾಮಸರು ಉಚ್ಛಿಷ್ಟ ವನ್ನು ಭೋಜನಮಾಡುತ್ತಾರೆ. ನೇರಾಗಿ ಎಂಜಲು ತಿನ್ನುವದು ಅತಿ ತಾಮಸವೆಂಬುದು ಸ್ಪಷ್ಟ ವಾಗಿರುವದರಿಂದ ಅದನ್ನು ಹೇಳಬೇಕಾದದ್ದೇ ಇಲ್ಲ.

(ಭಾಷ್ಯಾರ್ಥ)

ಇನ್ನು ಈಗ ಮೂರುವಿಧವಾದ ಯಜ್ಞವನ್ನು ಹೇಳಲಾಗುವದು :—

**ಅಫಲಾಕಾಙ್ಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧ ॥**

೧೧. ಯಾಗವನ್ನು ಮಾಡತಕ್ಕದ್ದೇ ಎಂದು ಮನಸ್ಸನ್ನು ಸಮಾಧಾನಗೊಳಿಸಿಕೊಂಡು ಫಲಾಕಾಂಕ್ಷೆಯಿಲ್ಲದವರಿಂದ ವಿಧಿದೃಷ್ಟವಾದ ಯಾವ ಯಜ್ಞವು ಮಾಡಲ್ಪಡುವದೋ ಅದು ಸಾತ್ತ್ವಿಕವು.

(ಭಾಷ್ಯ)

೪೩೩. ಅಫಲಾಕಾಙ್ಕ್ಷಿಭಿಃ ಅಫಲಾರ್ಥಿಭಿಃ ಯಜ್ಞಃ ವಿಧಿದೃಷ್ಟಃ ಶಾಸ್ತ್ರಚೋದನಾದೃಷ್ಟಃ ಯೋ ಯಜ್ಞಃ ಇಜ್ಯತೇ ನಿರ್ವರ್ತ್ಯತೇ ಯಷ್ಟವ್ಯಮೇವ ಇತಿ ಯಜ್ಞಸ್ವರೂಪನಿರ್ವರ್ತನಮೇವ ಕಾರ್ಯಮ್ ಇತಿ ಮನಃ ಸಮಾಧಾಯ ನಾನೇನ ಪುರುಷಾರ್ಥಃ ಮಮ ಕರ್ತವ್ಯಃ ಇತ್ಯೇವಂ ನಿಶ್ಚಿತ್ಯ ಸ ಸಾತ್ತ್ವಿಕಃ ಯಜ್ಞಃ ಉಚ್ಯತೇ ॥

(ಭಾಷ್ಯಾರ್ಥ)

ಫಲಾಕಾಂಕ್ಷೆಯಿಲ್ಲದವರಿಂದ ಫಲವನ್ನು ಬಯಸದವರಿಂದ ಯಜ್ಞವು, ವಿಧಿದೃಷ್ಟವಾದ, ಶಾಸ್ತ್ರಚೋದನೆಯಿಂದ ತಿಳಿದುಬರುವ ಯಾವ ಯಜ್ಞವು ಮಾಡಲ್ಪಡುವದೋ, ಯಾಗವನ್ನು ಮಾಡತಕ್ಕದ್ದೇ ಯಜ್ಞಸ್ವರೂಪವನ್ನುಂಟುಮಾಡುವದೇ ಕರ್ತವ್ಯವು ಎಂದು, ಮನಸ್ಸಮಾಧಾನದಿಂದ–ಇದರಿಂದ ನನಗೆ ಪಡೆದುಕೊಳ್ಳಬೇಕಾದ ಪುರುಷಾರ್ಥವು (ಯಾವದೂ) ಇರುವದಿಲ್ಲ ಎಂದು ನಿಶ್ಚಯಿಸಿ[1]–(ಯಾವ ಯಜ್ಞವು ಮಾಡಲ್ಪಡುವದೋ) ಆ ಯಜ್ಞವು ಸಾತ್ತ್ವಿಕಯಜ್ಞವೆನಿಸುತ್ತದೆ.

**ಅಭಿಸನ್ಧಾಯ ತು ಫಲಂ ದಮ್ಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ ೧೨ ॥**

೧೨. ಭರತಶ್ರೇಷ್ಠನೆ, ಆದರೆ ಫಲವನ್ನು ಅಭಿಸಂಧಾನಮಾಡುತ್ತಾ

1. ಕೇವಲಕರ್ತವ್ಯತಾಬುದ್ಧಿಯಿಂದ. ಇದು ಮುಂದೆ ಹೇಳುವ ದಾನಾದಿಗಳಿಗೂ ಅನ್ವಯಿಸುತ್ತದೆ.

ದಂಭಕ್ಕಾಗಿಯೇ ಯಾವದು ಮಾಡಲ್ಪಡುತ್ತಿದೆಯೋ ಆ ಯಜ್ಞವು ರಾಜಸವೆಂದು ತಿಳಿ.

(ಭಾಷ್ಯ)

೪೩೪. ಅಭಿಸನ್ಧಾಯ ತು[1] ಉದ್ದಿಶ್ಯ ಫಲಂ ದಮ್ಭಾರ್ಥಮಪಿ ಚೈವ ಯತ್ ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ||

(ಭಾಷ್ಯಾರ್ಥ)

ಆದರೆ ಫಲವನ್ನು ಮನಸ್ಸಿನಲ್ಲಿಟ್ಟುಕೊಂಡು ಅದಕ್ಕಾಗಿಯೂ ದಂಭಕ್ಕಾಗಿಯೂ ಯಾವದು ಮಾಡಲ್ಪಡುವದೋ, ಎಲೈ ಭರತಶ್ರೇಷ್ಠನೆ, ಆ ಯಜ್ಞವನ್ನು ರಾಜಸವೆಂದು ತಿಳಿ.

**ವಿಧಿಹೀನಮಸೃಷ್ಟಾನ್ನಂ ಮನ್ತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ || ೧೩ ||**

೧೩. ವಿಧಿಹೀನವಾಗಿ, ಅಸೃಷ್ಟಾನ್ನವಾಗಿ, ಮಂತ್ರಹೀನವಾಗಿ, ಅದಕ್ಷಿಣವಾಗಿ, ಶ್ರದ್ಧಾವಿರಹಿತವಾಗಿರುವ ಯಜ್ಞವನ್ನು ತಾಮಸವೆನ್ನುವರು.

(ಭಾಷ್ಯ)

೪೩೫. ವಿಧಿಹೀನಂ ಯಥಾಚೋದಿತವಿಪರೀತಮ್[2] । ಅಸೃಷ್ಟಾನ್ನಂ ಬ್ರಾಹ್ಮಣೇಭ್ಯಃ ನ ಸೃಷ್ಟಂ ನ ದತ್ತಮ್ ಅನ್ನಂ ಯಸ್ಮಿನ್ ಯಜ್ಞೇ ಸಃ ಅಸೃಷ್ಟಾನ್ನಃ। ತಮ್ ಅಸೃಷ್ಟಾನ್ನಮ್ । ಮನ್ತ್ರಹೀನಂ ಮನ್ತ್ರತಃ[3] ಸ್ವರತಃ ವರ್ಣತೋ ವಾ ವಿಯುಕ್ತಂ ಮನ್ತ್ರಹೀನಮ್ । ಅದಕ್ಷಿಣಮ್ ಉಕ್ತದಕ್ಷಿಣಾರಹಿತಮ್ । ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ತಮೋನಿರ್ವೃತ್ತಂ ಕಥಯನ್ತಿ ||

(ಭಾಷ್ಯಾರ್ಥ)

ವಿಧಿಹೀನವಾಗಿ (ಶಾಸ್ತ್ರದಲ್ಲಿ) ಚೋದಿತವಾಗಿರುವದಕ್ಕೆ ವಿರುದ್ಧವಾಗಿ[4]

---

1. ಅ|| ನಿ|| ಗಳಲ್ಲಿ ಬಿಟ್ಟುಹೋಗಿದೆ.
2. ‘ ಚೋದಿತವಿಧಿವಿಪರೀತಮ್ ’ ನಿ|| ವಾ||
3. ಮ|| ಮೈ||ಗಳಲ್ಲಿ ಬಿಟ್ಟುಹೋಗಿದೆ.
4. ‘ ವಿಧಿಹೀನ ’ ಎಂದರೆ ವಿಧಿಯಿಲ್ಲದೆ ಎಂದಿಷ್ಟೇ ಅರ್ಥವಲ್ಲ. ಅದಕ್ಕೆ ವಿರುದ್ಧವಾಗಿ ಎಂದು ಭಾವರೂಪವಾದ ಅರ್ಥ. ಇಲ್ಲಿರುವ ನಿಷೇಧಕಶಬ್ದಗಳಿಗೆಲ್ಲ ಹೀಗೇ ಅರ್ಥ.

ಅಸೃಷ್ಟಾನ್ನವಾಗಿ; ಬ್ರಾಹ್ಮಣರಿಗೆ ಅನ್ನವು ಯಾವ ಯಜ್ಞದಲ್ಲಿ ಸೃಷ್ಟವಾಗದೆ ಕೊಡದೆ ಇರುವದೋ ಅದು ಅಸೃಷ್ಟಾನ್ನವು.[1] ಅಂಥ ಅಸೃಷ್ಟಾನ್ನವಾಗಿ. ಮಂತ್ರಹೀನವಾಗಿ: ಮಂತ್ರದಿಂದ ಎಂದರೆ ಸ್ವರದಿಂದ ಅಥವಾ ವರ್ಣದಿಂದ ರಹಿತವಾಗಿರುವದು ಮಂತ್ರ ಹೀನವು[2]. ಅದಕ್ಷಿಣವಾಗಿ: (ಶಾಸ್ತ್ರದಲ್ಲಿ) ಹೇಳಿರುವ ದಕ್ಷಿಣೆಯಿಲ್ಲದೆ. ಶ್ರದ್ಧಾವಿರಹಿತ ವಾಗಿ[3] (ಮಾಡಿದ) ಯಜ್ಞವನ್ನು ತಾಮಸವೆನ್ನುವರು; ತಮೋ (ಗುಣ)ದಿಂದಾದದ್ದು ಎಂದು ಹೇಳುತ್ತಾರೆ.

## ತಪಸ್ಸಿನಲ್ಲಿ ಸಾತ್ತ್ವಿಕಾದಿಭೇದ

(ಭಾಷ್ಯ)

೪೩೬. ಅಥ ಇದಾನೀಂ ತಪಸ್ತ್ರಿವಿಧಮ್ ಉಚ್ಯತೇ—

(ಭಾಷ್ಯಾರ್ಥ)

ಇನ್ನು ಈಗ ಮೂರು ಬಗೆಯ ತಪಸ್ಸನ್ನು ಹೇಳಲಾಗುತ್ತದೆ:—

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥೧೪॥**

೧೪. ದೇವದ್ವಿಜಗುರುಪ್ರಾಜ್ಞಪೂಜನವೂ ಶೌಚವೂ ಆರ್ಜವವೂ ಬ್ರಹ್ಮಚರ್ಯವೂ ಅಹಿಂಸೆಯೂ ಶಾರೀರ ತಪಸ್ಸು ಎನಿಸುವದು.

(ಭಾಷ್ಯ)

೪೩೭. ದೇವಾಶ್ಚ ದ್ವಿಜಾಶ್ಚ ಗುರವಶ್ಚ ಪ್ರಾಜ್ಞಾಶ್ಚ ದೇವದ್ವಿಜಗುರುಪ್ರಾಜ್ಞಾಃ । ತೇಷಾಂ ಪೂಜನಂ ದೇವದ್ವಿಜಗುರುಪ್ರಾಜ್ಞಪೂಜನಮ್ । ಶೌಚಮ್ । ಆರ್ಜವಮ್ ಋಜುತ್ವಮ್ । ಬ್ರಹ್ಮಚರ್ಯಮ್ ಅಹಿಂಸಾ ಚ ಶರೀರನಿರ್ವರ್ತ್ಯಂ

---

1. ಸರಿಯಾದ ಗುಣವುಳ್ಳ, ಸರಿಯಾದ ಪ್ರಮಾಣದ, ಆದರದಿಂದ ಬಡಿಸಿದ ಅನ್ನ– ಎಂದರ್ಥ.

2. ಸ್ವರವರ್ಣಗಳು ಸರಿಯಾಗಿಲ್ಲದೆ ಉಚ್ಚರಿಸಿದ ಮಂತ್ರದಿಂದ ಮಾಡಿದ ಕರ್ಮವು ಯಜಮಾನನಿಗೆ ದುಷ್ಫಲವನ್ನು ಕೊಡುವದು ಎಂಬ ಉಕ್ತಿಯು ಸೂಚನೆ ಇಲ್ಲಿದೆ.

3. ಅಶ್ರದ್ಧೆಯಿಂದ ಎಂದೇ ಅರ್ಥ.

ಶಾರೀರಮ್ । ಶರೀರಪ್ರಧಾನೈಃ ಸರ್ವೈರೇವ ಕಾರ್ಯಕರಣೈಃ ಕರ್ತ್ರಾದಿಭಿಃ ಸಾಧ್ಯಂ ಶಾರೀರಂ ತಪಃ ಉಚ್ಯತೇ । " ಪಞ್ಚೈತೇ ತಸ್ಯ ಹೇತವಃ " (೧೮-೧೫) ಇತಿ ಹಿ ವಕ್ಷ್ಯತಿ ॥

(ಭಾಷ್ಯಾರ್ಥ)

ದೇವತೆಗಳೂ ದ್ವಿಜರೂ ಗುರುಗಳೂ ಪ್ರಾಜ್ಞರೂ ದೇವದ್ವಿಜಗುರುಪ್ರಾಜ್ಞರು ; ಅವರನ್ನು ಪೂಜಿಸುವದು ದೇವದ್ವಿಜಗುರುಪ್ರಾಜ್ಞಪೂಜನವು ; ಶೌಚವು ; ಆರ್ಜವವು, ಋಜುತೆ ; ಬ್ರಹ್ಮಚರ್ಯ, ಮತ್ತು ಅಹಿಂಸೆ. (ಇದು) ಶರೀರದಿಂದ ಮಾಡತಕ್ಕ ಶಾರೀರ (ತಪಸ್ಸು). ಶರೀರಪ್ರಧಾನವಾದ ಎಲ್ಲಾ ಕಾರ್ಯಕರಣಗಳಿಂದಲೂ [1]ಕರ್ತೃವೇ ಮುಂತಾದವರಿಂದ ನೆರವೇರತಕ್ಕದ್ದು. (ಆದ್ದರಿಂದ) ಶಾರೀರ (ತಪಸ್ಸು) ಎನಿಸಿಕೊಳ್ಳುತ್ತದೆ. " ಇವೈದೂ ಅದಕ್ಕೆ ಹೇತುಗಳು " (೧೮-೧೫) ಎಂದಲ್ಲವೆ, ಮುಂದೆ ಹೇಳಿರುತ್ತದೆ ?

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥೧೫॥**

೧೫. ಯಾವದು ಉದ್ವೇಗಕರವಲ್ಲದ್ದೂ ಸತ್ಯವೂ ಪ್ರಿಯಹಿತವೂ ಆಗಿರುವ ವಾಕ್ಯವೋ (ಅದೂ) ಸ್ವಾಧ್ಯಾಯಾಭ್ಯಸನವೂ ವಾಙ್ಮಯ ತಪಸ್ಸು ಎನಿಸುತ್ತದೆ.

(ಭಾಷ್ಯ)

೪೩೮. ಅನುದ್ವೇಗಕರಂ ಪ್ರಾಣಿನಾಮ್ ಅದುಃಖಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್। ಪ್ರಿಯಹಿತೇ ದೃಷ್ಟಾದೃಷ್ಟಾರ್ಥೇ।ಅನುದ್ವೇಗಕರತ್ವಾದಿಭಿಃ ಧರ್ಮೈಃ ವಾಕ್ಯಂ ವಿಶೇಷ್ಯತೇ [2] । ಅವಿಶೇಷೇಣ [3] ಧರ್ಮಸಮುಚ್ಚಯಾರ್ಥಃ ಚಶಬ್ದಃ। ಪರಪ್ರತ್ಯಯಾರ್ಥಂ ಪ್ರಯುಕ್ತಸ್ಯ ವಾಕ್ಯಸ್ಯ ಅನುದ್ವೇಗಕರಸ್ಯ ಸತ್ಯಪ್ರಿಯಹಿತಾನಾಮ್

---

1. ಆದ್ದರಿಂದ ಶಾರೀರ ತಪಸ್ಸು ಎಂದರೆ ಬರಿಯ ಶರೀರದಿಂದಾಗುವ ತಪಸ್ಸೆಂದು ಅರ್ಥವಲ್ಲ.

2. ' ವಿಶಿಷ್ಯತೇ ' ಮ|| ವ್ಯಾ||

3. ' ವಿಶೇಷಣಧರ್ಮ ' ಆ|| ನಿ|| ಗು|| ವಾ||

ಅನ್ಯತಮೇನ[1] ದ್ವಾಭ್ಯಾಂ ತ್ರಿಭಿರ್ವಾ ಹೀನತಾ ಸ್ಯಾತ್ ಯದಿ ನ ತತ್ ವಾಙ್ಮಯಂ ತಪಃ[2] | ತಥಾ ಸತ್ಯವಾಕ್ಯಸ್ಯ[3] ಇತರೇಷಾಮ್ ಅನ್ಯತಮೇನ ದ್ವಾಭ್ಯಾಂ ತ್ರಿಭಿರ್ವಾ ವಿಹೀನತಾಯಾಂ ನ ವಾಙ್ಮಯತಪಸ್ತ್ವಮ್ | ತಥಾ ಪ್ರಿಯವಾಕ್ಯಸ್ಯಾಪಿ ಇತರೇಷಾಮ್ ಅನ್ಯತಮೇನ ದ್ವಾಭ್ಯಾಂ ತ್ರಿಭಿರ್ವಾ ವಿಹೀನಸ್ಯ ನ ವಾಙ್ಮಯತಪಸ್ತ್ವಮ್ । ತಥಾ ಹಿತವಾಕ್ಯಸ್ಯಾಪಿ ಇತರೇಷಾಮ್ ಅನ್ಯತಮೇನ ದ್ವಾಭ್ಯಾಂ ತ್ರಿಭಿರ್ವಾ ವಿಹೀನಸ್ಯ[4] ನ ವಾಙ್ಮಯತಪಸ್ತ್ವಮ್ | ಕಿಂ ಪುನಸ್ತತ್ ತಪಃ? ಯತ್ ಸತ್ಯಂ ವಾಕ್ಯಮ್ ಅನುದ್ವೇಗಕರಂ ಪ್ರಿಯಂ ಹಿತಂ ಚ ತತ್ ತಪಃ[5] ವಾಙ್ಮಯಮ್ । ಯಥಾ "ಶಾನ್ತೋ ಭವ ವತ್ಸ | ಸ್ವಾಧ್ಯಾಯಂ ಯೋಗಂ ಚ[6] ಅನುತಿಷ್ಠ | ತಥಾ ತೇ ಶ್ರೇಯೋ ಭವಿಷ್ಯತಿ" ಇತಿ | ಸ್ವಾಧ್ಯಾಯಾಭ್ಯಸನಂ ಚೈವ ಯಥಾವಿಧಿ ವಾಙ್ಮಯಂ ತಪ ಉಚ್ಯತೇ ||

(ಭಾಷ್ಯಾರ್ಥ)

ಉದ್ವೇಗಕರವಲ್ಲದ ಪ್ರಾಣಿಗಳಿಗೆ ದುಃಖವನ್ನುಂಟುಮಾಡದೆ ಇರುವ ವಾಕ್ಯವು. ಯಾವದು (ಉದ್ವೇಗಕರವಲ್ಲದ್ದೂ) ಸತ್ಯವೂ ಮತ್ತು ಪ್ರಿಯಹಿತವೂ ಆಗಿರುವದೋ (ಅಂಥ). (ಇಲ್ಲಿ) ಪ್ರಿಯ, ಹಿತ-ಎಂಬ (ಎರಡು ವಿಶೇಷಣಗಳನ್ನು ಕೊಟ್ಟಿರುವದು) ದೃಷ್ಟಾದೃಷ್ಟ ಪ್ರಯೋಜನಕ್ಕಾಗಿ[7]. ಅನುದ್ವೇಗಕರತ್ವವೇ ಮುಂತಾದ ಧರ್ಮಗಳನ್ನು ವಾಕ್ಯಕ್ಕೆ ವಿಶೇಷಣವಾಗಿ ಕೊಟ್ಟಿದೆ. (ಅನುದ್ವೇಗಕರತ್ವವೇ ಮುಂತಾದ) ಧರ್ಮಗಳನ್ನು ಸಾಮಾನ್ಯವಾಗಿ (ಎಲ್ಲವನ್ನೂ) ಸಮುಚ್ಚಯಮಾಡುವದಕ್ಕಾಗಿ ಚ (ಮತ್ತು) ಎಂಬ ಶಬ್ದ(ವನ್ನು ಪ್ರಯೋಗಿಸಿರುತ್ತದೆ). ಮತ್ತೊಬ್ಬನಿಗೆ ಅಭಿಪ್ರಾಯವು ತಿಳಿಯಲೆಂದು ಉಪಯೋಗಿಸಿದ ಅನುದ್ವೇಗಕರವಾದ ವಾಕ್ಯದಲ್ಲಿ ಸತ್ಯಪ್ರಿಯಹಿತ

---

1. 'ಸತ್ಯಪ್ರಿಯಹಿತಾನುದ್ವೇಗಕರತ್ವಾನಾಮನ್ಯತಮೇನ' ಎಂಬ ಅ|| ನಿ|| ಗು|| ವಾ|| ಪಾಠಕ್ಕಿಂತ ಈ ಮು|| ಮೈ|| ಪಾಠವು ಮೇಲೆಂದು ತೋರುತ್ತದೆ.

2. 'ವಿಹೀನಸ್ಯ ನ ವಾಙ್ಮಯತಪಸ್ತ್ವಮ್' ಮು|| ಮೈ||

3. 'ಸತ್ಯಸ್ಯ ವಾಕ್ಯಸ್ಯ' ಮು|| ಮೈ||

4. 'ವಿಯುಕ್ತಸ್ಯ' ನಿ||

5. "ಪ್ರಿಯಹಿತಂ ಚ ತತ್ ಪರಮಂ ತಪಃ" ನಿ||

6. 'ವಾ' ಎಂಬ ನಿ|| ಪಾಠವು ಸರಿಯಲ್ಲ.

7. ಸದ್ಯಕ್ಕೆ ಸಂತೋಷವನ್ನುಂಟುಮಾಡುವದರಿಂದ ಪ್ರಿಯವೂ ಮುಂದೆ ಜನ್ಮಾಂತರ ಲೋಕಾಂತರದಲ್ಲಿ ಒಳ್ಳೆಯ ಪರಿಣಾಮವನ್ನುಂಟುಮಾಡುವದರಿಂದ ಹಿತವೂ ಆಗಿರುವ ವಚನವು ಎಂದು ತಿಳಿಸುವದಕ್ಕೆ. ಈ ತಪಸ್ಸು ಮಾಡಿದವನಿಗೂ ದೃಷ್ಟಾದೃಷ್ಟಫಲಗಳುಂಟು.

(ಗಳೆಂಬಿವು)ಗಳಲ್ಲಿ ಯಾವದಾದರೊಂದು, ಎರಡು, ಅಥವಾ (ಆ) ಮೂರು ಇಲ್ಲವಾದರೆ ಅದು ವಾಙ್ಮಯತಪಸ್ಸಲ್ಲ. ಇದರಂತೆ ಸತ್ಯವಾದ ವಾಕ್ಯದಲ್ಲಿ ಉಳಿದವುಗಳಲ್ಲಿ ಒಂದು, ಎರಡು, ಅಥವಾ ಮೂರು ಇಲ್ಲವಾದರೆ (ಅದಕ್ಕೆ) ವಾಙ್ಮಯತಪಸ್ತ್ವವಿಲ್ಲ; ಇದರಂತೆ ಹಿತವಾಕ್ಯಕ್ಕೂ ಉಳಿದವುಗಳಲ್ಲಿ ಒಂದು, ಎರಡು ಅಥವಾ ಮೂರು ಇಲ್ಲವಾದರೆ ವಾಙ್ಮಯತಪಸ್ತ್ವವಿಲ್ಲ. (ಹಾಗಾದರೆ) ಆ ತಪಸ್ಸಾದರೂ ಯಾವದು? ಎಂದರೆ ಯಾವದು ಸತ್ಯವೂ ಅನುದ್ವೇಗಕರವೂ ಪ್ರಿಯವೂ ಹಿತವೂ ಆಗಿರುವದೋ ಅದು ವಾಙ್ಮಯತಪಸ್ಸು. ಉದಾಹರಣೆಗೆ "ಮಗು, ಶಾಂತನಾಗಿರು, ಸ್ವಾಧ್ಯಾಯವನ್ನೂ ಯೋಗವನ್ನೂ ಅನುಷ್ಠಾನಮಾಡು; ಹಾಗಾದರೆ ನಿನಗೆ ಶ್ರೇಯಸ್ಸಾಗುವದು" (ಇಂಥ ವಾಕ್ಯವನ್ನಾಡುವದು ವಾಙ್ಮಯತಪಸ್ಸಾಗುವದು). ವಿಧಿಯಂತೆ ಸ್ವ(ಶಾಖೆಯ ವೇದದ)ಅಧ್ಯಯನವನ್ನು ಅಭ್ಯಾಸಮಾಡುವದು ವಾಙ್ಮಯತಪಸ್ಸೆನಿಸುವದು.

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ ॥ ೧೬ ॥**

೧೬. ಮನಃಪ್ರಸನ್ನತೆ, ಸೌಮ್ಯತ್ವ, ಮೌನ, ಆತ್ಮವಿನಿಗ್ರಹ, ಭಾವಸಂಶುದ್ಧಿ ಎಂಬಿದು ತಪಸ್ಸೆನಿಸುವದು.

(ಭಾಷ್ಯ)

೪೩೮. ಮನಃಪ್ರಸಾದಃ ಮನಸಃ ಪ್ರಶಾನ್ತಿಃ, ಸ್ವಚ್ಛತಾಪಾದನಂ ಪ್ರಸಾದಃ। ಸೌಮ್ಯತ್ವಂ ಯತ್ ಸೌಮನಸ್ಯಮ್ ಆಹುಃ । ಮುಖಾದಿಪ್ರಸಾದಾದಿಕಾರ್ಯೋನ್ನೇಯಾ[2] ಅನ್ತಃಕರಣಸ್ಯ ವೃತ್ತಿಃ, ಮೌನಂ ವಾಕ್ಸಂಯಮೋಽಪಿ[3] ಮನಃಸಂಯಮಪೂರ್ವಕೋ ಭವತಿ ಇತಿ ಕಾರ್ಯೇಣ ಕಾರಣಮ್ ಉಚ್ಯತೇ ಮನಃಸಂಯಮೋ ಮೌನಮ್ ಇತಿ । ಆತ್ಮವಿನಿಗ್ರಹಃ ಮನೋನಿರೋಧಃ । ಸರ್ವತಃ ಸಾಮಾನ್ಯರೂಪಃ ಆತ್ಮವಿನಿಗ್ರಹಃ, ವಾಗ್ವಿಷಯಸ್ಯೈವ ಮನಸಃ ಸಂಯಮಃ ಮೌನಮ್ ಇತಿ ವಿಶೇಷಃ । ಭಾವಸಂಶುದ್ಧಿಃ ಪರೈಃ ವ್ಯವಹಾರಕಾಲೇ ಅಮಾಯಿತ್ವಂ ಭಾವಸಂಶುದ್ಧಿಃ । ಇತ್ಯೇತತ್ ತಪಃ ಮಾನಸಮ್ ಉಚ್ಯತೇ ॥

---

1. ಗುರುವನ್ನು ಶುಶ್ರೂಷೆಮಾಡುತ್ತಾ ಬ್ರಹ್ಮಚರ್ಯಾದಿನಿಯಮಗಳಿಂದೊಡಗೂಡಿ ಅಧ್ಯಯನಮಾಡುವದು ವಿಧಿವತ್ತಾಗಿ ಮಾಡುವ ತಪಸ್ಸು
2. 'ಪ್ರಸಾದಕಾರ್ಯ' ನಿ॥; 'ಪ್ರಸಾದಕಾರ್ಯೋನ್ನೇಯಾ' ಮ॥ ವ್ಯೆ॥
3. 'ವಾಙ್ನಿಯಮೋಽಪಿ' ವ್ಯೆ॥ ವಾ॥

(ಭಾಷ್ಯಾರ್ಥ)

ಮನಃಪ್ರಸಾದವು : ಮನಸ್ಸಿನಲ್ಲಿ ಹೆಚ್ಚಿನ ಶಾಂತಿಯಿರುವದು. (ಮನಸ್ಸನ್ನು) ಸ್ವಚ್ಛವಾಗಿಸಿಕೊಳ್ಳುವದೇ ಪ್ರಸಾದವು. ಸೌಮ್ಯತ್ವ : ಇದನ್ನು ಸೌಮನಸ್ಯವೆಂದು ಕರೆಯುತ್ತಾರೆ ; (ಇದು) ಮುಖವೇ ಮುಂತಾದವು ಪ್ರಸನ್ನವಾಗಿರುವದೇ ಮುಂತಾದ ಗುರುತಿನಿಂದ ಊಹಿಸಬೇಕಾಗಿರುವ ಅಂತಃಕರಣದ ವೃತ್ತಿಯು. ಮೌನ ; (ಇದು) ಮಾತನ್ನೇ ತಡೆಗಟ್ಟುವದಾದರೂ ಮನಸ್ಸನ್ನು ಬಿಗಿಹಿಡಿಯುವದರ ಮೂಲಕವೇ ಆಗತಕ್ಕದ್ದಾದ್ದರಿಂದ ಕಾರ್ಯವಾದ (ಮೌನದಿಂದ) ಕಾರಣವಾದ ಮನಃಸಂಯಮವನ್ನು ಮೌನವೆಂದು ಕರೆದಿದೆ. ಆತ್ಮವಿನಿಗ್ರಹ : ಮನಸ್ಸನ್ನು ಸಾಮಾನ್ಯರೂಪವಾಗಿ ಎಲ್ಲದರಿಂದಲೂ-ತಡೆಯುವದು ಆತ್ಮವಿನಿಗ್ರಹವು, ಬರಿಯ ವಾಕ್ಕಿನ ವಿಷಯವಾದ ಮನಸ್ಸನ್ನು ತಡೆದುಕೊಳ್ಳುವದು ಮೌನವು-ಹೀಗೆ (ಇವೆರಡಕ್ಕೂ) ಹೆಚ್ಚುಕಡಿಮೆ ಇರುತ್ತದೆ. ಭಾವಸಂಶುದ್ಧಿ : ಮತ್ತೊಬ್ಬರೊಡನೆ ವ್ಯವಹಾರಮಾಡುವಾಗ ಕಾಪಟ್ಯವಿಲ್ಲದಿರುವದು ಭಾವಸಂಶುದ್ಧಿ. ಇಂತಿದು ಮಾನಸ ತಪಸ್ಸು ಎನಿಸುತ್ತದೆ.

(ಭಾಷ್ಯ)

೪೪೦. ಯಥೋಕ್ತಂ ಕಾಯಿಕಂ ವಾಚಿಕಂ ಮಾನಸಂ ಚ ತಪಃ ತಪ್ತಂ ನರೈಃ ಸತ್ತ್ವಾದಿಭೇದೇನ[1] ಕಥಂ ತ್ರಿವಿಧಂ ಭವತಿ ಇತಿ ? ಉಚ್ಯತೇ—

(ಭಾಷ್ಯಾರ್ಥ)

ಮೇಲೆ ಹೇಳಿದ ಕಾಯಿಕವಾಚಿಕಮಾನಸತಪಸ್ಸನ್ನು ಜನರು ಮಾಡುವಾಗ ಸತ್ತ್ವಾದಿ (ಗುಣಗಳ) ಭೇದದಿಂದ ಹೇಗೆ ಮೂರು ಬಗೆಯಾಗುವದೆಂಬುದನ್ನು (ಈಗ) ಹೇಳುತ್ತಾನೆ :—

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಙ್ಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ ೧೭ ॥**

೧೭. ಆ ಮೂರು ವಿಧವಾದ ತಪಸ್ಸೂ ಪರಮ ಶ್ರದ್ಧೆಯಿಂದ ಫಲಾಕಾಂಕ್ಷೆಯಿಲ್ಲದೆ ಯುಕ್ತರಾದ ಜನರಿಂದ ಆಚರಿಸಲ್ಪಟ್ಟರೆ (ಅದನ್ನು) ಸಾತ್ತ್ವಿಕವೆಂದು ಕರೆಯುತ್ತಾರೆ.

---

1. ‘ಸಾತ್ತ್ವಿಕಾದಿಭೇದೇನ’ ಶ॥; ‘ಸಾತ್ತ್ವಿಕತ್ವಾದಿಬೇದೇನ’ ಮ॥; ‘ಸತ್ತ್ವಾದಿ ಗುಣಭೇದೇನ’ ಮೈ॥ ವಾ॥

(ಭಾಷ್ಯ)

೪೪೧. ಶ್ರದ್ಧಯಾ ಆಸ್ತಿಕ್ಯಬುದ್ಧ್ಯಾ ಪರಯಾ ಪ್ರಕೃಷ್ಟಯಾ ತಪ್ತಮ್ ಅನುಷ್ಠಿತಂ ತಪಃ ತತ್ ಪ್ರಕೃತಂ ತ್ರಿವಿಧಂ ತ್ರಿಪ್ರಕಾರಂ ತ್ರ್ಯಧಿಷ್ಠಾನಂ ನರೈಃ ಅನುಷ್ಠಾತೃಭಿಃ ಅಫಲಾಕಾಙ್ಕ್ಷಿಭಿಃ ಫಲಾಕಾಙ್ಕ್ಷಾರಹಿತೈಃ ಯುಕ್ತೈಃ ಸಮಾಹಿತೈಃ ಯತ್ ಈದೃಶಂ ತಪಃ ತತ್ ಸಾತ್ತ್ವಿಕಂ ಸತ್ತ್ವನಿರ್ವೃತ್ತಂ ಪರಿಚಕ್ಷತೇ ಕಥಯನ್ತಿ ಶಿಷ್ಟಾಃ॥

(ಭಾಷ್ಯಾರ್ಥ)

ಪರಮ ಶ್ರದ್ಧೆಯಿಂದ ಹೆಚ್ಚಿನ ಆಸ್ತಿಕ್ಯಬುದ್ಧಿಯಿಂದ ಆ ಪ್ರಕೃತವಾದ ಮೂರು ಬಗೆಯ ಮೂರು ಪ್ರಕಾರವಾದ ಮೂರು ಆಶ್ರಯವುಳ್ಳ ತಪಸ್ಸು ಜನರಿಂದ (ತಪಸ್ಸನ್ನು) ಮಾಡುವವರಿಂದ ಫಲಾಕಾಂಕ್ಷೆಯಿಲ್ಲದೆ (ಯಾವ) ಫಲದ ಬಯಕೆಯೂ ಇಲ್ಲದೆ, ಯುಕ್ತರಾಗಿ ಸಮಾಧಾನಚಿತ್ತದಿಂದ (ಆಚರಿಸುವ) ಇಂಥ ತಪಸ್ಸಿದೆಯಲ್ಲ, ಆದು ಸಾತ್ತ್ವಿಕವು ಸತ್ತ್ವದಿಂದಾದದ್ದು ಎಂದು ಶಿಷ್ಟರು ಕರೆಯುತ್ತಾರೆ, ಹೇಳುತ್ತಾರೆ.

**ಸತ್ಕಾರಮಾನಪೂಜಾರ್ಥಂ ತಪೋ ದಮ್ಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮ ॥**

೧೮. ಸತ್ಕಾರಮಾನಪೂಜಾರ್ಥವಾಗಿ ಯಾವ ತಪಸ್ಸು ದಂಭದಿಂದ ಮಾಡಲ್ಪಡುವದೋ ಚಲವಾದ ಅಧ್ರುವವಾದ ಅದು ಇಲ್ಲಿ ರಾಜಸವೆಂದು ಕರೆಯಲ್ಪಡುತ್ತದೆ.

(ಭಾಷ್ಯ)

೪೪೨. ಸತ್ಕಾರಃ ಸಾಧುಕಾರಃ, ಸಾಧುರಯಂ ತಪಸ್ವೀ ಬ್ರಾಹ್ಮಣಃ ಇತ್ಯೇವಮರ್ಥಮ್ । ಮಾನಃ ಮಾನನಂ ಪ್ರತ್ಯುತ್ಥಾನಾಭಿವಾದನಾದಿಃ । ತದರ್ಥಮ್ । ಪೂಜಾ ಪಾದಪ್ರಕ್ಷಾಲನಾರ್ಚನಾಶಯಿತೃತ್ವಾದಿಃ[1] । ತದರ್ಥಂ ಚ । ತಪಃ ಸತ್ಕಾರಮಾನಪೂಜಾರ್ಥಮ್ । ದಮ್ಭೇನ ಚೈವ ಯತ್ ಕ್ರಿಯತೇ ತಪಃ ತತ್ ಇಹ ಪ್ರೋಕ್ತಂ ಕಥಿತಂ ರಾಜಸಂ ಚಲಂ ಕಾದಾಚಿತ್ಕಫಲತ್ವೇನ ಅಧ್ರುವಮ್[1]॥

(ಭಾಷ್ಯಾರ್ಥ)

ಸತ್ಕಾರವೆಂದರೆ "ಈತನು ಸಾಧು ತಪಸ್ವಿಯು, ಬ್ರಾಹ್ಮಣನು" ಎಂದು ಮೆಚ್ಚುವದು; ಅದಕ್ಕಾಗಿ. ಮಾನವೆಂದರೆ ಗೌರವಿಸುವದು; ಎದ್ದುನಿಲ್ಲುವದು, ನಮಸ್ಕರಿಸು

1. 'ಅತಿಶಯಿತೃತ್ವಾದಿಃ' ಸ॥

ವದು ಮುಂತಾದದ್ದು; ಅದಕ್ಕಾಗಿ. ಪೂಜೆ ಎಂದರೆ ಕಾಲು ತೊಳೆಯುವದು, ಪೂಜಿಸುವದು, ಅನ್ನವನ್ನು ಕೊಡುವದು [2]–ಮುಂತಾದದ್ದು ; ಅದಕ್ಕಾಗಿಯೂ, (ಮಾಡುವ) ತಪಸ್ಸು ಸತ್ಕಾರಮಾನಪೂಜಾರ್ಥವು. ಮತ್ತೆ ಯಾವ ತಪಸ್ಸು ದಂಭದಿಂದ ಮಾಡಲ್ಪಡುವದೋ ಅದನ್ನು ಇಲ್ಲಿ ರಾಜಸವು ಯಾವಾಗಲೋ ಒಂದು ಸಲ ಫಲವನ್ನು ಕೊಡುವದರಿಂದ ಚಂಚಲವು, ಅಶಾಶ್ವತವಾದದ್ದು [3] ಎನ್ನುವರು, ಎಂದು ಹೇಳುವರು.

**ಮೂಢಗ್ರಾಹೇಣಾತ್ಮನೋ ಯತ್ ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ ತಾಮಸಮುದಾಹೃತಮ್ ॥ ೧೯॥**

೧೯. ಮೂಢವಿಶ್ವಾಸದಿಂದ ತನಗೆ ತೊಂದರೆಯನ್ನು ಮಾಡಿಕೊಂಡು, ಅಥವಾ ಮತ್ತೊಬ್ಬರನ್ನು ಹಾಳು ಮಾಡುವದಕ್ಕಾಗಿ ಯಾವದು ಮಾಡಲ್ಪಡುವದೋ ಅದು ತಾಮಸವೆನಿಸುತ್ತಿದೆ.

(ಭಾಷ್ಯ)

೪೪೩. ಮೂಢಗ್ರಾಹೇಣ ಅವಿವೇಕನಿಶ್ಚಯೇನ ಆತ್ಮನಃ ಪೀಡಯಾ ಯತ್ ಕ್ರಿಯತೇ ತಪಃ ಪರಸ್ಯ ಉತ್ಸಾದನಾರ್ಥಂ ವಿನಾಶಾರ್ಥಂ ವಾ ತತ್ ತಾಮಸಂ ತಪಃ ಉದಾಹೃತಮ್ ॥

(ಭಾಷ್ಯಾರ್ಥ)

ಮೂಢಗ್ರಾಹದಿಂದ ಅವಿವೇಕದಿಂದ ಮಾಡಿಕೊಂಡ ನಿಶ್ಚಯದಿಂದ ತನಗೆ ತೊಂದರೆಯನ್ನು ಮಾಡಿಕೊಂಡಾಗಲಿ ಮತ್ತೊಬ್ಬನ ಉತ್ಸಾದನೆಗಾಗಿ (ಅವನು) ಹಾಳಾಗಲೆಂದಾಗಲಿ ಯಾವ ತಪಸ್ಸನ್ನು ಮಾಡುತ್ತಾನೋ ಅದು ತಾಮಸವೆನಿಸುವದು.

---

1. “ಚಲಮಧ್ರುವಂ ಕಾದಾಚಿತ್ಕಫಲಮಧ್ರುವಮ್” ಎಂಬ ಮು|| ಪಾಠದಲ್ಲಿ ಮೊದಲನೆಯ ‘ಅಧ್ರುವಂ’ ಎಂಬ ಮಾತು ಹೆಚ್ಚು.

2. ‘ಆಶಯಿತೃತ್ವ’ ಎಂಬ ಭಾಷ್ಯವು ಮೂಲತಃ ಹೇಗೆ ಇತ್ತೆಂಬುದು ತಿಳಿಯದು ; ಬರೆದವರು ಏನೋ ಬದಲಾಯಿಸಿರಬಹುದೆಂದು ತೋರುತ್ತದೆ.

3. ಐಹಿಕಫಲವನ್ನು ಮುಂದುಮಾಡಿಕೊಂಡಿರುವದರಿಂದ ಅದಕ್ಕೆ ಪಾರತ್ರಿಕಫಲವು ಆಗಿಯೇ ತೀರುವದೆಂದು ಹೇಳುವದಕ್ಕಿಲ್ಲ.

# ದಾನದಲ್ಲಿ ಸಾತ್ತ್ವಿಕಾದಿಭೇದ

(ಭಾಷ್ಯ)

೪೪೪. ಇದಾನೀಂ ದಾನತ್ರೈವಿಧ್ಯಮ್ ಉಚ್ಯತೇ—

(ಭಾಷ್ಯಾರ್ಥ)

ಈಗ ದಾನದಲ್ಲಿ ಮೂರು ಬಗೆಯನ್ನು ಹೇಳುತ್ತಾನೆ.—

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥**

೨೦. ದಾನಮಾಡತಕ್ಕದ್ದೆಂದು ಯಾವ ದಾನವನ್ನು ಅನುಪಕಾರಿಯಾದವನಿಗೆ ದೇಶದಲ್ಲಿಯೂ ಕಾಲದಲ್ಲಿಯೂ ಪಾತ್ರದಲ್ಲಿಯೂ ಕೊಡುವರೋ ಆ ದಾನವು ಸಾತ್ತ್ವಿಕವೆನಿಸುತ್ತದೆ.

(ಭಾಷ್ಯ)

೪೪೫. ದಾತವ್ಯಮ್ ಇತ್ಯೇವಂ ಮನಃ ಕೃತ್ವಾ ಯತ್ ದಾನಂ ದೀಯತೇ ಅನುಪಕಾರಿಣೇ ಪ್ರತ್ಯುಪಕಾರಾಸಮರ್ಥಾಯ । ಸಮರ್ಥಾಯಾಪಿ ನಿರಪೇಕ್ಷಂ ದೀಯತೇ । ದೇಶೇ ಪುಣ್ಯೇ ಕುರುಕ್ಷೇತ್ರಾದೌ । ಕಾಲೇ ಸಙ್ಕ್ರಾನ್ತ್ಯಾದೌ । ಪಾತ್ರೇ ಚ ಷಡಙ್ಗವಿತ್ ವೇದಪಾರಗಃ[2] ಇತ್ಯಾದೌ । ತತ್ ದಾನಂ ಸಾತ್ತ್ವಿಕಂ ಸ್ಮೃತಮ್ ॥

(ಭಾಷ್ಯಾರ್ಥ)

ದಾನಮಾಡತಕ್ಕದ್ದು ಎಂದೀ ಪರಿಯಲ್ಲಿ ಮನಸ್ಸುಮಾಡಿಕೊಂಡು ಅನುಪಕಾರಿಗೆ, ಪ್ರತಿಯಾಗಿ ಉಪಕಾರವನ್ನು ಮಾಡಲು ಶಕ್ತನಲ್ಲದವನಿಗೆ, ಶಕ್ತನಾಗಿದ್ದರೂ (ಅವನಿಂದ) ಯಾವ ಅಪೇಕ್ಷೆಯೂ ಇಲ್ಲದೆ, ದೇಶದಲ್ಲಿ ಕುರುಕ್ಷೇತ್ರವೇ ಮುಂತಾದ ಪುಣ್ಯ (ಸ್ಥಲ)ದಲ್ಲಿ ಕಾಲದಲ್ಲಿ, ಸಂಕ್ರಾಂತಿಯೇ ಮುಂತಾದ (ಉಕ್ತಕಾಲದಲ್ಲಿ), ಪಾತ್ರನಲ್ಲಿ ಆರು ಅಂಗಗಳನ್ನು ಬಲ್ಲವನು, ವೇದದ ಪಾರವನ್ನು ಮುಟ್ಟಿದವನು ಮುಂತಾದ (ಯೋಗ್ಯ)ನಲ್ಲಿ ಯಾವ ದಾನವನ್ನು ಕೊಡುವರೋ ಆ ದಾನವು ಸಾತ್ತ್ವಿಕವೆನಿಸುತ್ತದೆ.

---

1. ‘ ದಾನಭೇದಃ ’ ಶಿ॥
2. ಷಡಙ್ಗವಿದ್ವೇದಪಾರಗಬಹುವಿದಾದೌ ’ ಮು॥

**ಯತ್ ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ ೨೧ ॥**

೨೧. ಆದರೆ ಯಾವದು ಪ್ರತ್ಯುಪಕಾರಾರ್ಥವಾಗಿ ಅಥವಾ ಫಲವನ್ನು ಉದ್ದೇಶಿಸಿಯಾದರೂ ಪರಿಕ್ಲೇಶದಿಂದ ಕೊಡಲ್ಪಡುವದೋ ಆ ದಾನವು ರಾಜಸವೆನಿಸುತ್ತದೆ.

(ಭಾಷ್ಯ)

೪೪೬. ಯತ್ ತು ದಾನಂ ಪ್ರತ್ಯುಪಕಾರಾರ್ಥಂ ಕಾಲೇ ತು ಅಯಂ ಮಾಂ ಪ್ರತ್ಯುಪಕರಿಷ್ಯತಿ ಇತ್ಯೇವಮರ್ಥಮ್ । ಫಲಂ ವಾ ಅಸ್ಯ ದಾನಸ್ಯ ಮೇ ಭವಿಷ್ಯತಿ ಅದೃಷ್ಟಮ್ ಇತಿ ತತ್ ಉದ್ದಿಶ್ಯ (ವಾ) [1] ಪುನಃ ದೀಯತೇ ಚ ಪರಿಕ್ಲಿಷ್ಟಂ ಖೇದಸಂಯುಕ್ತಂ ತತ್ ದಾನಂ ರಾಜಸಂ ಸ್ಮೃತಮ್ ॥

(ಭಾಷ್ಯಾರ್ಥ)

ಆದರೆ ಯಾವ ದಾನವನ್ನು ಪ್ರತ್ಯುಪಕಾರಕ್ಕಾಗಿ ಸಮಯಬಂದಾಗಲಾದರೆ ಇವನು ನನಗೆ ಪ್ರತ್ಯುಪಕಾರಮಾಡಿಯಾನು ಎಂಬೀ ಕಾರಣದಿಂದಲಾಗಲಿ, ಈ ದಾನಕ್ಕೆ ನನಗೆ ಅದೃಷ್ಟವಾದ ಫಲವಾದೀತು ಎಂದು ಅದನ್ನು ಮನಸ್ಸಿನಲ್ಲಿಟ್ಟಾಗಲಿ, ಪರಿಕ್ಲೇಶದಿಂದ ಆಯಾಸದಿಂದೊಡಗೂಡಿ ಕೊಡುತ್ತಾರೋ ಆ ದಾನವು ರಾಜಸವೆನಿಸುತ್ತದೆ.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ ತಾಮಸಮುದಾಹೃತಮ್ ॥ ೨೨ ॥**

೨೨. ಯಾವ ದಾನವು ಅದೇಶಕಾಲದಲ್ಲಿ ಅಪಾತ್ರರಿಗೂ ಕೊಡಲ್ಪಡುವದೋ ಅಸತ್ಕೃತವಾಗಿ ಅವಜ್ಞಾತವಾಗಿ (ಕೊಡಲ್ಪಡುವದೋ) ಅದು ತಾಮಸವೆನಿಸುವದು.

(ಭಾಷ್ಯ)

೪೪೭. ಅದೇಶಕಾಲೇ ಅದೇಶೇ ಅಪುಣ್ಯೇ ದೇಶೇ [2] ಮ್ಲೇಚ್ಛಾಶುಚ್ಯಾದಿ

---

1. " ತದ್ವಾ ಉದ್ದಿಶ್ಯ " ಮ॥
2. ' ಅಪುಣ್ಯದೇಶೇ ' ಮ॥ ಮೈ॥

ಸಜ್ಕೀರ್ಣೇ ಅಕಾಲೇ ಪುಣ್ಯಹೇತುತ್ವೇನ ಅಪ್ರಖ್ಯಾತೇ[1] ಸಙ್ಕ್ರಾನ್ತ್ಯಾದಿವಿಶೇಷ ರಹಿತೇ, ಅಪಾತ್ರೇಭ್ಯಶ್ಚ ಮೂರ್ಖತಸ್ಕರಾದಿಭ್ಯಃ । ದೇಶಾದಿಸಮ್ಪತ್ತೌ ವಾ ಅಸತ್ಕೃತಂ ಪ್ರಿಯವಚನಪಾದಪ್ರಕ್ಷಾಲನಪೂಜಾದಿರಹಿತಮ್ ಅವಜ್ಞಾತಂ ಪಾತ್ರ ಪರಿಭವಯುಕ್ತಂ ಚ ಯತ್ ದಾನಂ[2] ತತ್ ತಾಮಸಮ್ ಉದಾಹೃತಮ್ ||

(ಭಾಷ್ಯಾರ್ಥ)

ಅದೇಶಕಾಲದಲ್ಲಿ-ಅದೇಶದಲ್ಲಿ ಎಂದರೆ ಪುಣ್ಯ(ದೇಶ)ವಲ್ಲದೆ ಮ್ಲೇಚ್ಛರೂ ಅಶುಚಿ (ಪದಾರ್ಥಗಳೂ) ತುಂಬಿರುವ ದೇಶದಲ್ಲಿ, ಅಕಾಲದಲ್ಲಿ ಎಂದರೆ ಪುಣ್ಯಕ್ಕೆ ಕಾರಣವೆಂದು ಪ್ರಸಿದ್ಧವಲ್ಲದ ಸಂಕ್ರಾಂತಿಯೇ ಮುಂತಾದ ವಿಶೇಷಗಳಿಲ್ಲದ (ಕಾಲ ದಲ್ಲಿ), ಅಪಾತ್ರರಿಗೆ ಮೂರ್ಖರು, ಕಳ್ಳರು-ಮುಂತಾದವರಿಗೆ; ಅಥವಾ (ಸರಿ ಯಾದ) ದೇಶವೇ ಮುಂತಾದವುಗಳು ಒದಗಿದ್ದರೂ ಅಸತ್ಕೃತವಾಗಿ ಪ್ರಿಯವಾದ ಮಾತು, ಪಾದಪ್ರಕ್ಷಾಲನೆ, ಪೂಜೆ-ಮುಂತಾದ(ದ್ದೊಂದೂ) ಇಲ್ಲದೆ ಅವಜ್ಞಾತವಾಗಿ ಪಾತ್ರರಾದವರನ್ನು ಧಿಕ್ಕಾರಮಾಡುವದರೊಡನೆ ಯಾವ ದಾನವನ್ನು ಕೊಡುವರೋ ಅದು ತಾಮಸವೆನಿಸುವದು.

## ಪರಮಾತ್ಮನ ನಾಮಸ್ಮರಣೆಯಿಂದ ಕರ್ಮಸಾದ್ಗುಣ್ಯ

(ಭಾಷ್ಯ)

೪೪೮. ಯಜ್ಞದಾನತಪಃಪ್ರಭೃತೀನಾಂ ಸಾದ್ಗುಣ್ಯಕರಣಾಯ ಅಯಮ್ ಉಪದೇಶಃ ಉಚ್ಯತೇ—

(ಭಾಷ್ಯಾರ್ಥ)

ಯಜ್ಞ, ದಾನ, ತಪಸ್ಸು-ಮುಂತಾದವುಗಳಿಗೆ[3] ಸಾದ್ಗುಣ್ಯವನ್ನುಂಟುಮಾಡು ದಕ್ಕೆ ಈ ಉಪದೇಶವನ್ನು ಹೇಳಿರುತ್ತದೆ :—

---

1. 'ಅನಾಖ್ಯಾತೇ ಅಪ್ರಖ್ಯಾತೇ' ಮ||

2. 'ದೀಯತೇ' ಎಂಬುದು ಬಿಟ್ಟುಹೋಗಿದೆಯೋ, ಅದರರ್ಥವನ್ನೇ 'ದಾನಮ್' ಎಂಬದರಲ್ಲಿ ಅಡಕಮಾಡಿದೆಯೋ ತಿಳಿಯದು.

3. ಮುಂದೆ ಹೇಳಿರುವದು ಯಜ್ಞ, ದಾನ, ತಪಸ್ಸು-ಈ ಮೂರನ್ನೇ ಆದರೆ ವೇದೋಕ್ತ ವಾದ ಕರ್ಮಸಾಮಾನ್ಯವನ್ನು ಮುಂತಾದ 'ಎಂಬ ಮಾತಿನಿಂದ ಹೇಳಿದೆ ಎಂದು ಕಲ್ಪಿಸಬೇಕು. ಅಥವಾ ಯಜ್ಞಾದಿಗಳಂತೆ ಆಹಾರವನ್ನು ತ್ರಿವಿಧವಾಗಿ ಹೇಳಿತ್ತು; ಅದಕ್ಕೂ ಶಾಸ್ತ್ರದಲ್ಲಿ ಹೇಳಿದಂತೆ ಭಕ್ಷ್ಯಾಭಕ್ಷ್ಯವಿಭಾಗವನ್ನು ಅನುಸರಿಸುವದರಿಂದ ಅದೃಷ್ಟಫಲವಿದೆ ಎಂದು ಕಲ್ಪಿಸಬೇಕು.

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥**

೨೩. ಓಂ ತತ್ ಸತ್ ಎಂದು ಬ್ರಹ್ಮಕ್ಕೆ ಮೂರು ವಿಧವಾದ ನಿರ್ದೇಶವು ಹೇಳಲ್ಪಟ್ಟಿರುವದು. ಅದರಿಂದ ಹಿಂದೆ ಬ್ರಾಹ್ಮಣರೂ ಯಜ್ಞಗಳು ವೇದಗಳೂ ಮಾಡಲ್ಪಟ್ಟಿರುತ್ತಿವೆ.

(ಭಾಷ್ಯ)

೪೪೯. ಓಂ ತತ್ಸತ್ ಇತಿ ಏವಂ ನಿರ್ದೇಶಃ ನಿರ್ದಿಶ್ಯತೇ ಅನೇನ ಇತಿ ನಿರ್ದೇಶಃ ತ್ರಿವಿಧಃ ನಾಮನಿರ್ದೇಶಃ ಬ್ರಹ್ಮಣಃ ಸ್ಮೃತಃ ಚಿನ್ತಿತಃ ವೇದಾನ್ತೇಷು ಬ್ರಹ್ಮವಿದ್ಭಿಃ । ಬ್ರಾಹ್ಮಣಾಃ ತೇನ ನಿರ್ದೇಶೇನ ತ್ರಿವಿಧೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ನಿರ್ಮಿತಾಃ ಪುರಾ ಪೂರ್ವಮ್ ಇತಿ ನಿರ್ದೇಶಸ್ತುತ್ಯರ್ಥಮ್ ಉಚ್ಯತೇ ॥

(ಭಾಷ್ಯಾರ್ಥ)

ಓಂ ತತ್ ಸತ್ ಎಂದು ಬ್ರಹ್ಮಕ್ಕೆ ಮೂರು ಬಗೆಯ ನಿರ್ದೇಶವು. ಯಾವದರಿಂದ ತಿಳಿಸುವರೋ ಅದಕ್ಕೆ ನಿರ್ದೇಶವೆಂದು ಹೆಸರು. (ಬ್ರಹ್ಮಕ್ಕೆ ಮೂರು ಬಗೆಯ) ಹೆಸರಿನ ನಿರ್ದೇಶವು ಸ್ಮೃತವಾಗಿದೆ, ಬ್ರಹ್ಮಜ್ಞಾನಿಗಳು ಉಪನಿಷತ್ತುಗಳಲ್ಲಿ ವಿಚಾರ ಮಾಡಿ (ಹೇಳಿ)ರುತ್ತಾರೆ. ಮೂರು ವಿಧವಾದ ಆ ನಿರ್ದೇಶದಿಂದ ಬ್ರಾಹ್ಮಣರೂ ವೇದಗಳೂ ಯಜ್ಞಗಳೂ ಹಿಂದಕ್ಕೆ ವಿಹಿತವಾಗಿವೆ, ಮಾಡಲ್ಪಟ್ಟಿರುತ್ತವೆ–ಎಂದು ನಿರ್ದೇಶವನ್ನು ಹೊಗಳುವದಕ್ಕೆ[1] ಹೇಳಿರುತ್ತದೆ.

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತನ್ತೇ ವಿಧಾನೋಕ್ತಾಸ್ಸತತಂ ಬ್ರಹ್ಮವಾದಿನಾಮ್ ॥ ೨೪ ॥**

೨೪. ಆದ್ದರಿಂದ ಬ್ರಹ್ಮವಾದಿಗಳ ವಿಧಾನೋಕ್ತವಾದ ಯಜ್ಞದಾನತಪಃಕ್ರಿಯೆಗಳು ಯಾವಾಗಲೂ ಓಂ ಎಂದು ಹೇಳಿದ ಬಳಿಕವೇ ಪ್ರಾರಂಭವಾಗುತ್ತವೆ.

---

1- ಪವಿತ್ರವಾದ ಸೃಷ್ಟಿಯು ಈ ನಿರ್ದೇಶಪೂರ್ವಕವಾಗಿ ಆಗಿದೆ ಎಂದು ಸ್ತುತಿ.

(ಭಾಷ್ಯ)

೪೫೦. ತಸ್ಮಾತ್ ಓಮ್ ಇತಿ ಉದಾಹೃತ್ಯ ಉಚ್ಚಾರ್ಯ ಯಜ್ಞದಾನತಪಃ ಕ್ರಿಯಾಃ ಯಜ್ಞಾದಿಸ್ವರೂಪಾಃ ಕ್ರಿಯಾಃ [1] ಪ್ರವರ್ತನ್ತೇ ವಿಧಾನೋಕ್ತಾಃ ಶಾಸ್ತ್ರ ಚೋದಿತಾಃ ಸತತಂ ಸರ್ವದಾ ಬ್ರಹ್ಮವಾದಿನಾಂ ಬ್ರಹ್ಮವದನಶೀಲಾನಾಮ್ ||

(ಭಾಷ್ಯಾರ್ಥ)

ಆದ್ದರಿಂದ ಬ್ರಹ್ಮವಾದಿಗಳು ಬ್ರಹ್ಮವನ್ನು ಹೇಳುವ ಸ್ವಭಾವದವರು (ಮಾಡುವ) ವಿಧಾನೋಕ್ತವಾದ ಶಾಸ್ತ್ರಚೋದಿತವಾದ ಯಜ್ಞದಾನತಪಃಕ್ರಿಯೆಗಳು, ಯಜ್ಞವೇ ಮುಂತಾದ ರೂಪದ ಕರ್ಮಗಳು ಯಾವಾಗಲೂ ಓಂ ಎಂದು ಹೇಳಿದ ಉಚ್ಚರಿಸಿದ ಬಳಿಕವೇ ಪ್ರಾರಂಭವಾಗುತ್ತವೆ [2].

**ತದಿತ್ಯನಭಿಸನ್ಧಾಯ ಫಲಂ ಯಜ್ಞತಪಃಕ್ರಿಯಾಃ |**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯನ್ತೇ ಮೋಕ್ಷಕಾಙ್ಕ್ಷಿಭಿಃ || ೨೫ ||**

೨೫. ತತ್ ಎಂದು ಫಲವನ್ನು ಮನಸ್ಸಿನಲ್ಲಿಟ್ಟುಕೊಳ್ಳದೆ ಯಜ್ಞ ತಪಃಕ್ರಿಯೆಗಳೂ ವಿವಿಧವಾದ ದಾನಕ್ರಿಯೆಗಳೂ ಮೋಕ್ಷಕಾಂಕ್ಷಿಗಳಿಂದ ಮಾಡಲ್ಪಡುತ್ತವೆ.

(ಭಾಷ್ಯ)

೪೫೧. ತತ್ ಇತಿ ಅನಭಿಸನ್ಧಾಯ ತತ್ ಇತಿ ಬ್ರಹ್ಮಾಭಿಧಾನಮ್ ಸಮುಚ್ಚಾರ್ಯ ಅನಭಿಸನ್ಧಾಯ ಚ ಯಜ್ಞಾದಿಕರ್ಮಣಃ ಫಲಮ್ ಯಜ್ಞತಪಃಕ್ರಿಯಾಃ ಯಜ್ಞಕ್ರಿಯಾಶ್ಚ ತಪಃಕ್ರಿಯಾಶ್ಚ ಯಜ್ಞತಪಃಕ್ರಿಯಾಃ ದಾನಕ್ರಿಯಾಶ್ಚ ವಿವಿಧಾಃ ಕ್ಷೇತ್ರಹಿರಣ್ಯಪ್ರದಾನಾದಿಲಕ್ಷಣಾಃ ಕ್ರಿಯನ್ತೇ ನಿರ್ವರ್ತ್ಯನ್ತೇ ಮೋಕ್ಷಕಾಙ್ಕ್ಷಿಭಿಃ ಮೋಕ್ಷಾರ್ಥಿಭಿಃ ಮುಮುಕ್ಷುಭಿಃ ||

(ಭಾಷ್ಯಾರ್ಥ)

'ತತ್ ಎಂದು ಅಭಿಸಂಧಾನಮಾಡದೆ,' ತತ್ ಎಂಬ ಬ್ರಹ್ಮದ ನಾಮವನ್ನು

---

1. ಯಜ್ಞಕ್ರಿಯಾಃ ದಾನಕ್ರಿಯಾಃ ತಪಃಕ್ರಿಯಾಶ್ಚ ಯಜ್ಞದಾನತಪಃಕ್ರಿಯಾಃ | ಯಜ್ಞಾದಿಸ್ವರೂಪಾಃ ಕ್ರಿಯಾಃ ' ಮ||

2. ಉಚ್ಚರಿಸುವದರಿಂದ ಕರ್ಮವು ನಿರ್ವಿಘ್ನವಾಗಿ ಸಮಾಪ್ತವಾಗುತ್ತವೆ.

ಉಚ್ಚರಿಸಿ ಯಜ್ಞವೇ ಮುಂತಾದ ಕರ್ಮದ ಫಲವನ್ನು ಮನಸ್ಸಿಗೆ ತಂದುಕೊಳ್ಳದೆ ಯಜ್ಞತಪಃಕ್ರಿಯೆಗಳನ್ನು–ಯಜ್ಞಕ್ರಿಯೆಗಳನ್ನೂ ತಪಃಕ್ರಿಯೆಗಳನ್ನೂ (ಎಂಬರ್ಥದಲ್ಲಿ) ಯಜ್ಞತಪಃಕ್ರಿಯಾಃ (ಎಂದಿದೆ)–ವಿವಿಧವಾದ ದಾನಕ್ರಿಯೆಗಳನ್ನೂ ಹೊಲ, ಚಿನ್ನ–ಇವುಗಳನ್ನು ಕೊಡುವದೇ ಮುಂತಾದ (ದಾನಕ್ರಿಯೆಗಳನ್ನೂ) ಮೋಕ್ಷಕಾಂಕ್ಷಿಗಳು, ಮೋಕ್ಷವನ್ನು ಬಯಸುವ ಮುಮುಕ್ಷುಗಳು ಮಾಡುತ್ತಾರೆ, ನೆರವೇರಿಸುತ್ತಾರೆ.[1]

(ಭಾಷ್ಯ)

೪೫೨. ಓಂತಚ್ಛಬ್ದಯೋಃ ವಿನಿಯೋಗಃ ಉಕ್ತಃ । ಅಥ ಇದಾನೀಂ ತಚ್ಛಬ್ದಸ್ಯ ವಿನಿಯೋಗಃ ಕಥ್ಯತೇ—

(ಭಾಷ್ಯಾರ್ಥ)

ಓಂ, ತತ್–ಎಂಬ ಶಬ್ದಗಳಿಗೆ ವಿನಿಯೋಗವನ್ನು ಹೇಳಿದ್ದಾಯಿತು. ಇನ್ನು ಈಗ ಸತ್ ಎಂಬ ಶಬ್ದಕ್ಕೆ ವಿನಿಯೋಗವನ್ನು ಹೇಳುತ್ತಾನೆ:—

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥**

೨೬. ಎಲೈ ಪಾರ್ಥನೆ, ಸದ್ಭಾವದಲ್ಲಿಯೂ ಸಾಧುಭಾವದಲ್ಲಿಯೂ ಸತ್ ಎಂಬಿದು ಪ್ರಯೋಗವಾಗುತ್ತದೆ. ಮತ್ತು ಪ್ರಶಸ್ತವಾದ ಕರ್ಮದಲ್ಲಿ ಸತ್ ಎಂಬ ಶಬ್ದವು ಪ್ರಯೋಗವಾಗುತ್ತದೆ.

(ಭಾಷ್ಯ)

೪೫೩. ಸದ್ಭಾವೇ ಅಸತಃ ಸದ್ಭಾವೇ ಯಥಾ ಅವಿದ್ಯಮಾನಸ್ಯ ಪುತ್ರಸ್ಯ ಜನ್ಮನಿ । ತಥಾ ಸಾಧುಭಾವೇ ಚ ಅಸದ್ವೃತ್ತಸ್ಯ ಅಸಾಧೋಃ ಸದ್ವೃತ್ತತಾ ಸಾಧುಭಾವಃ । ತಸ್ಮಿನ್ ಸಾಧುಭಾವೇ ಚ ಸತ್ ಇತ್ಯೇತತ್ ಅಭಿಧಾನಂ ಬ್ರಹ್ಮಣಃ ಪ್ರಯುಜ್ಯತೇ[2] ಅಭಿಧೀಯತೇ । ಪ್ರಶಸ್ತೇ ಕರ್ಮಣಿ ವಿವಾಹಾದೌ ಚ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ಪ್ರಯುಜ್ಯತೇ ಇತ್ಯೇತತ್ ॥

---

1. ಇದರಿಂದ ಅವರ ಕರ್ಮಗಳಿಗೆ ಸಾದ್ಗುಣ್ಯವು ಬರುತ್ತವೆ
2. 'ತತ್ರ ಉಚ್ಯತೇ' ಎಂದು ಹೆಚ್ಚಾಗಿ ನಿ॥

(ಭಾಷ್ಯಾರ್ಥ)

ಸದ್ಭಾವದಲ್ಲಿ, ಇಲ್ಲದ್ದು ಉಂಟಾಗುವ(ದೆಂಬಂರ್ಥದ)ಲ್ಲಿ, ಉದಾಹರಣೆಗೆ ಇಲ್ಲದಿರುವ ಮಗನು ಹುಟ್ಟಿದನು ಎಂಬಲ್ಲಿ; ಹಾಗೂ ಸಾಧುಭಾವ(ವೆಂಬರ್ಥ)ದಲ್ಲಿ, ಕೆಟ್ಟ ನಡತೆಯವನಾದ ಅಸಾಧುವು ಒಳ್ಳೆಯ ನಡತೆಯವನಾಗುವದು ಸಾಧುಭಾವವು; ಆ ಸಾಧುಭಾವದಲ್ಲಿಯೂ ಸತ್ ಎಂಬೀ ಬ್ರಹ್ಮದ ಹೆಸರು ಪ್ರಯುಕ್ತವಾಗುತ್ತದೆ, ಹೇಳಲ್ಪಡುತ್ತದೆ. ಪ್ರಶಸ್ತವಾದ ವಿವಾಹವೇ ಮುಂತಾದ ಕರ್ಮದಲ್ಲಿಯೂ ಸತ್ ಎಂಬ ಶಬ್ದವು, ಎಲೈ ಪಾರ್ಥನೆ, ಯುಕ್ತವಾಗುತ್ತದೆ, ಪ್ರಯುಕ್ತವಾಗುತ್ತದೆ[1] ಎಂದರ್ಥ.

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥**

೨೭. ಯಜ್ಞದಲ್ಲಿಯೂ ತಪಸ್ಸಿನಲ್ಲಿಯೂ ದಾನದಲ್ಲಿಯೂ ನಿಂತಿರುವದು ಸತ್ ಎನಿಸುತ್ತದೆ. ಅದಕ್ಕಾಗಿ (ಮಾಡುವ) ಕರ್ಮವೂ ಸತ್ತೆಂದೇ ಹೇಳಲ್ಪಡುತ್ತದೆ.

(ಭಾಷ್ಯ)

೨೫೪. ಯಜ್ಞೇ ಯಜ್ಞಕರ್ಮಣಿ ಯಾ ಸ್ಥಿತಿಃ, ತಪಸಿ ಚ ಯಾ ಸ್ಥಿತಿಃ ದಾನೇ ಚ ಯಾ ಸ್ಥಿತಿಃ ಸಾ ಚ ಸತ್ ಇತಿ[2] ಉಚ್ಯತೇ ವಿದ್ವದ್ಭಿಃ । ಕರ್ಮ ಚೈವ ತದರ್ಥೀಯಂ ಯಜ್ಞದಾನತಪೋಽರ್ಥೀಯಮ್ । ಅಥವಾ ಯಸ್ಯ ಅಭಿಧಾನತ್ರಯಂ ಪ್ರಕೃತಂ ತದರ್ಥೀಯಮ್[3] । ಈಶ್ವರಾರ್ಥೀಯಮ್ ಇತ್ಯೇತತ್ । ಸತ್ ಇತ್ಯೇವ ಅಭಿಧೀಯತೇ ॥

(ಭಾಷ್ಯಾರ್ಥ)

ಯಜ್ಞದಲ್ಲಿ ಯಜ್ಞಕರ್ಮದಲ್ಲಿ ನಿಂತಿರುವದಿದೆಯಲ್ಲ (ಅದು), ತಪಸ್ಸಿನಲ್ಲಿ ನಿಂತಿರುವದಿದೆಯಲ್ಲ (ಅದೂ), ಮತ್ತು ದಾನದಲ್ಲಿ ನಿಂತಿರುವದಿದೆಯಲ್ಲ[4], ಅದೂ

---

1. ಹೊಸದಾಗಿ ಉಂಟಾಗಿ ಇರವನ್ನು ಪಡೆಯುವ ವಸ್ತು, ಕೆಟ್ಟವನು ಒಳ್ಳೆಯವನಾಗುವದು, ಒಳ್ಳೆಯ ಕರ್ಮ–ಇವಕ್ಕೆಲ್ಲ ಸತ್ ಎಂಬ ಬ್ರಹ್ಮದ ಹೆಸರನ್ನು ಉಪಯೋಗಿಸುತ್ತಾರೆ. ಆದ್ದರಿಂದ ಕರ್ಮಸಾದ್ಗುಣ್ಯಕ್ಕೆ ಬ್ರಹ್ಮದ ಸತ್ತೆಂಬ ಹೆಸರನ್ನುಪಯೋಗಿಸುವದು ಸಾಧನ.

2. ' ಇತಿ ಚ ' ಮು॥ ಮೈ॥ ಗು॥ ವಾ॥

3. ' ಯಜ್ಞದಾನತದರ್ಥೀಯಂ ' ಎಂದು ಇದರ ಮುಂದೆ ಇರುವ ಪಾಠವು ತಪ್ಪು.

4. ಅದನ್ನೇ ತಾತ್ಪರ್ಯದಿಂದ ಮಾಡುವದು.

ಸತ್ ಎಂದು ಬಲ್ಲವರಿಂದ ಹೇಳಲ್ಪಡುತ್ತದೆ. ಮತ್ತು ಅದಕ್ಕಾಗಿ ಯಜ್ಞದಾನ ತಪಸ್ಸುಗಳಿಗಾಗಿ, ಅಥವಾ ಯಾವ (ಬ್ರಹ್ಮದ) ನಾಮತ್ರಯವು ಇಲ್ಲಿ ಪ್ರಕೃತವಾಗಿರುವದೋ ಅದಕ್ಕಾಗಿ, ಈಶ್ವರನಿಗಾಗಿ ಎಂದರ್ಥ ; (ಅದಕ್ಕಾಗಿ ಮಾಡುವ) ಕರ್ಮವೂ ಸತ್ ಎಂದೇ ಕರೆಯಲ್ಪಡುತ್ತದೆ[1].

## ಅಶ್ರದ್ಧೆಯಿಂದ ಮಾಡಿದ ಕರ್ಮವು ನಿಷ್ಫಲ

(ಭಾಷ್ಯ)

೪೫೫. ತದೇತತ್ ಯಜ್ಞದಾನತಪಆದಿ ಕರ್ಮ ಅಸಾತ್ತ್ವಿಕಂ ವಿಗುಣಮಪಿ ಶ್ರದ್ಧಾಪೂರ್ವಕಂ ಬ್ರಹ್ಮಣೋಽಭಿಧಾನತ್ರಯಪ್ರಯೋಗೇಣ ಸಗುಣಂ ಸಾತ್ತ್ವಿಕಂ ಸಮ್ಪಾದಿತಂ ಭವತಿ[2] । ತತ್ರ ಚ ಸರ್ವತ್ರ ಶ್ರದ್ಧಾಪ್ರಧಾನತಯಾ ಸರ್ವಂ ಸಮ್ಪಾದ್ಯತೇ ಯಸ್ಮಾತ್, ತಸ್ಮಾತ್--

(ಭಾಷ್ಯಾರ್ಥ)

ಆ ಈ ಯಜ್ಞ, ದಾನ, ತಪಸ್ಸು ಮುಂತಾದ[3] ಕರ್ಮವು ಸಾತ್ತ್ವಿಕವಲ್ಲದೆ ವಿಗುಣವಾಗಿದ್ದರೂ ಶ್ರದ್ಧಾಪೂರ್ವಕವಾಗಿ ಬ್ರಹ್ಮದ ಮೂರು ಹೆಸರುಗಳನ್ನು ಉಚ್ಚರಿಸುವದರಿಂದ ಸಗುಣವೂ ಸಾತ್ತ್ವಿಕವೂ ಆಗಿ ಮಾಡಲ್ಪಡುತ್ತದೆ. ಅದರಲ್ಲಿಯೂ (ಈ) ಎಲ್ಲಾ ಕಡೆಯಲ್ಲಿಯೂ ಶ್ರದ್ಧಾಪ್ರಧಾನವಾಗಿ (ಮಾಡಿದ್ದ)ರಿಂದಲೇ ಎಲ್ಲವನ್ನೂ ಮಾಡಿದಂತೆ ಆಗುತ್ತದೆಯಲ್ಲವೆ[4], ಆದ್ದರಿಂದ—

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ ಪ್ರೇತ್ಯ ನೋ ಇಹ ॥ ೨೮ ॥**

೨೮. ಪಾರ್ಥನೆ, ಅಶ್ರದ್ಧೆಯಿಂದ ಹುತವಾದದ್ದೂ ದಾನಮಾಡಿದ್ದೂ ಆಚರಿಸಿದ ತಪಸ್ಸೂ, ಮಾಡಿದ ಕರ್ಮವೂ ಇರುವದಲ್ಲ, ಅದು ಅಸತ್ತೆನಿಸುತ್ತದೆ. ಅದು ಸತ್ತಮೇಲೂ ಇಲ್ಲ, ಇಲ್ಲಿಯೂ ಇಲ್ಲ,

---

1. ಇದೂ ಪ್ರಶಸ್ತ ಕರ್ಮವೇ.

2. ಈ ವಾಕ್ಯವು ಹಿಂದಿನ ಶ್ಲೋಕದ ಕೊನೆಯಲ್ಲಿಯೇ ಅಚ್ಚಾಗಿದೆಯಾದರೂ ಇಲ್ಲಿಯೇ ಇರಬೇಕೆಂಬುದು ಸ್ಪಷ್ಟ.

3. ಯಜ್ಞ, ದಾನ, ತಪಸ್ಸು, ಅವುಗಳಿಗಾಗಿ ಮಾಡುವ ಕರ್ಮ ಇವು.

4. ಸಾದ್ಗುಣ್ಯವು ಶ್ರದ್ಧೆಯಿಂದಲೇ ಬರುತ್ತದೆ.

(ಭಾಷ್ಯ)

೪೫೬. ಅಶ್ರದ್ಧಯಾ ಹುತಂ ಹವನಂ ಕೃತಮ್, ಅಶ್ರದ್ಧಯಾ ದತ್ತಂ ಚ ಬ್ರಾಹ್ಮಣೇಭ್ಯಃ। ಅಶ್ರದ್ಧಯಾ ತಪಃ ತಪ್ತಮ್ ಅನುಷ್ಠಿತಮ್। ತಥಾ ಅಶ್ರದ್ಧಯೈವ ಕೃತಂ ಚ ಯತ್ ಸ್ತುತಿನಮಸ್ಕಾರಾದಿ। ತತ್ ಸರ್ವಮ್ ಅಸತ್ ಇತಿ ಉಚ್ಯತೇ। ಮತ್ಪ್ರಾಪ್ತಿಸಾಧನಮಾರ್ಗಬಾಹ್ಯತ್ವಾತ್। ಪಾರ್ಥ। ನ ಚ ತತ್ ಬಹ್ವಾಯಾಸಮಪಿ[1] ಪ್ರೇತ್ಯ ಫಲಾಯ। ನೋ ಅಪಿ ಇಹಾರ್ಥಮ್ ಸಾಧುಭಿಃ ನಿನ್ದಿತತ್ವಾತ್ ಇತಿ ॥

(ಭಾಷ್ಯಾರ್ಥ)

ಅಶ್ರದ್ಧೆಯಿಂದ ಹುತವಾದದ್ದು, ಹವನಮಾಡಿದ್ದು; ಮತ್ತು ಅಶ್ರದ್ಧೆಯಿಂದ ಬ್ರಾಹ್ಮಣರಿಗೆ ಕೊಟ್ಟದ್ದು; ಅಶ್ರದ್ಧೆಯಿಂದ ಆಚರಿಸಿದ ಅನುಷ್ಠಾನಮಾಡಿದ ತಪಸ್ಸು; ಹಾಗೂ ಅಶ್ರದ್ಧೆಯಿಂದಲೇ ಮಾಡುವರಲ್ಲ, (ಆ) ಸ್ತುತಿ, ನಮಸ್ಕಾರ-ಮುಂತಾದದ್ದು. ಅದೆಲ್ಲವೂ ಅಸತ್ ಎಂದೆನಿಸುತ್ತದೆ; ಏಕೆಂದರೆ (ಅದು) ನನ್ನನ್ನು ಪಡೆಯುವದಕ್ಕೆ (ಬೇಕಾದ) ಸಾಧನಮಾರ್ಗಕ್ಕೆ ಹೊರಚ್ಚಾಗಿರುತ್ತದೆ[2]. ಎಲೈ ಪಾರ್ಥನೆ, ಅದು ಬಹಳ ಆಯಾಸದಿಂದ (ಮಾಡಿದ್ದಾದರೂ) ಸತ್ತಮೇಲೆ (ಪರಲೋಕದಲ್ಲಿ) ಫಲಕ್ಕೆ (ಕಾರಣವಾಗುವ)ದಿಲ್ಲ; ಇಹ(ಲೋಕದ ಸುಖ)ಕ್ಕೂ ಆಗುವದಿಲ್ಲ, ಏಕೆಂದರೆ ಸತ್ಪುರುಷರು (ಅದನ್ನು) ನಿಂದಿಸುತ್ತಾರೆ.

ಇತಿ ಶ್ರೀಮದ್ಭಗವದ್ಗೀತಾಭಾಷ್ಯೇ ಶ್ರದ್ಧಾತ್ರಯವಿಭಾಗೋ ನಾಮ ಸಪ್ತದಶೋಽಧ್ಯಾಯಃ



1. 'ಬಹುಲಾಯಾಸಮಪಿ'.
2. ಅಶ್ರದ್ಧೆಯು ಎಂದಿಗೂ ಸದ್ಗತಿಯನ್ನು ಕೊಡಲಾರದು.

# ಹದಿನೇಳನೆಯ ಅಧ್ಯಾಯದ ಸಾರ

೧-೬. ಶಾಸ್ತ್ರವಿಧಾನವನ್ನು ಅನುಸರಿಸಿ ಕರ್ಮವನ್ನು ಮಾಡಬೇಕೆಂದು ಭಗವಂತನು ಹೇಳಿದ್ದನ್ನು ಕೇಳಿ ಅರ್ಜುನನಿಂತೆಂದನು : "ಭಗವಂತನೆ, ಯಾರು ಶಾಸ್ತ್ರವಿಧಿಯ ಅರಿವಿಲ್ಲದೆ ಶ್ರದ್ಧೆಯಿಂದ ಶಿಷ್ಟಾಚಾರವನ್ನನುಸರಿಸಿ ಕರ್ಮವನ್ನು ಮಾಡುವರೋ ಅವರ ಕರ್ಮವು ಸಾತ್ತ್ವಿಕವೊ, ರಾಜಸವೊ, ತಾಮಸವೊ ?" ಇದಕ್ಕೆ ಶ್ರೀಕೃಷ್ಣಭಗವಂತನು ಹೇಳಿದ ಉತ್ತರವೇನೆಂದರೆ "ಜನರಿಗೆ ಉಂಟಾಗುವ ಶ್ರದ್ಧೆಯು ಅವರವರ ಸ್ವಭಾವಕ್ಕನುಸರಿಸಿ ಈ ಮೂರು ವಿಧವಾಗಿಯೂ ಆಗಬಹುದು ; ಆದ್ದರಿಂದ ಅವರವರ ಶ್ರದ್ಧೆಗನುಗುಣವಾಗಿ ಅವರವರ ಸ್ವಭಾವವನ್ನು ಗೊತ್ತುಪಡಿಸಬೇಕು. ಹೇಗೆಂದರೆ ಸಾತ್ತ್ವಿಕರು ದೇವತೆಗಳನ್ನೂ ರಾಜಸರು ಯಕ್ಷರಾಕ್ಷಸರನ್ನೂ ತಾಮಸರು ಭೂತಪ್ರೇತಗಳನ್ನೂ ಪೂಜಿಸುತ್ತಿರುತ್ತಾರೆ. ಶಾಸ್ತ್ರವು ಹೇಳಿದ ರೀತಿಯನ್ನು ಲೆಕ್ಕಿಸದೆ ದಂಭಾಹಂಕಾರಗಳಿಂದ ಕೂಡಿ ಕಾಮರಾಗಬಲದಿಂದಲೇ ಶರೀರವನ್ನು ದಂಡಿಸುತ್ತಾ ಘೋರವಾದ ತಪಸ್ಸನ್ನು ಮಾಡುವವರು ಅಸುರನಿಶ್ಚಯದವರೆಂದು ತಿಳಿಯಬೇಕು.

೭-೨೨. "ಆಹಾರ, ಯಜ್ಞ, ತಪಸ್ಸು, ದಾನ-ಇವೆಲ್ಲವೂ ಅವರವರ ಅಂತಸ್ಥಿಗೆ ತಕ್ಕಂತೆ ಮೂರು ಬಗೆಯಾಗಿರುತ್ತವೆ. ಹೇಗೆಂದರೆ ಸಾತ್ತ್ವಿಕರು ಆಯುಸ್ಸನ್ನೂ ಸತ್ತ್ವವನ್ನೂ ಬಲವನ್ನೂ ಆರೋಗ್ಯವನ್ನೂ ಸುಖವನ್ನೂ ಪ್ರೀತಿಯನ್ನೂ ಹೆಚ್ಚಿಸುವ ರಸವತ್ತಾದ ಜಿಡ್ಡಾದ ಗಟ್ಟಿಯಾದ ಹೃದಯಂಗಮವಾದ ಆಹಾರವನ್ನು ಮೆಚ್ಚುವರು ; ರಾಜಸರು ಬಹಳವಾಗಿ ಕಹಿ, ಹುಳಿ, ಉಪ್ಪು, ಬಿಸಿ, ಕಾರ, ಒಣಕಲು, ನಾಲಗೆಯುರಿಯುವದು-ಇಂಥ ದುಃಖಪ್ರದವಾದ ಆಹಾರವನ್ನು ಮೆಚ್ಚುವರು, ತಾಮಸರು ಎಂಜಲು, ತಂಗಳು, ಹಳಸಿದ್ದು, ಕೊಳೆತದ್ದು-ಮುಂತಾದ ಕೆಟ್ಟ ಆಹಾರವನ್ನೇ ಮೆಚ್ಚುವರು. ಇದರಂತೆ ಫಲಾಕಾಂಕ್ಷೆಯಿಲ್ಲದೆ ಶಾಸ್ತ್ರದಲ್ಲಿ ವಿಧಿಸಿದೆಯೆಂಬ ಕಾರಣದಿಂದ ಸಾತ್ತ್ವಿಕರು ಯಜ್ಞವನ್ನು ಮಾಡುವರು; ಫಲದಾಸೆಯಿಂದ ದಂಭದಿಂದ ರಾಜಸರು ಮಾಡುವರು. ಶ್ರದ್ಧೆಯಿಲ್ಲದೆ, ಶಾಸ್ತ್ರವನ್ನು ಲೆಕ್ಕಿಸದೆ, ಅಂಗವೈಕಲ್ಯವುಳ್ಳ ಯಜ್ಞವನ್ನು ತಾಮಸರು ಬಯಸುವರು. ತಪಸ್ಸೆಂಬುದು ಕಾಯಿಕ, ವಾಚಿಕ, ಮಾನಸಿಕ-ಎಂದು ಮೂರು ಬಗೆಯಾಗಿರುತ್ತದೆ ಈ ಮೂರು ವಿಧವಾದ ತಪಸ್ಸನ್ನೂ ಹೆಚ್ಚಿನ ಶ್ರದ್ಧೆಯಿಂದ ಫಲಾಪೇಕ್ಷೆಯಿಲ್ಲದೆ ಮಾಡುವವರು ಸಾತ್ತ್ವಿಕರು ; ತಮಗೆ ಸತ್ಕಾರವೂ ಮಾನವೂ ಪೂಜೆಯೂ ಸಿಕ್ಕಲೆಂದು ದಂಭದಿಂದ ಮಾಡುವವರು ರಾಜಸರು ; ತತ್ತ್ವವನ್ನರಿಯದೆ ತಮ್ಮ ಸಂಕಟವನ್ನು ಲೆಕ್ಕಿಸದೆ ಅಥವಾ ಮತ್ತೊಬ್ಬರಿಗೆ ತೊಂದರೆಯಾಗಲೆಂಬ ಉದ್ದೇಶದಿಂದ ಮಾಡುವವರು ತಾಮಸರು. ದೇಶಕಾಲಪಾತ್ರವರಿತು ದಾನಮಾಡತಕ್ಕದ್ದೆಂಬ ಒಂದೇ ಕಾರಣದಿಂದ ಪ್ರತ್ಯುಪಕಾರವನ್ನು ಬಯಸದೆ ದಾನ ಮಾಡುವವರು ಸಾತ್ತ್ವಿಕರು ; ಪ್ರತ್ಯುಪಕಾರವನ್ನು ಬಯಸಿ ಅಥವಾ ಯಾವದಾದರೊಂದು ಫಲದ ಆಕಾಂಕ್ಷೆಯಿಂದ ಸಂಕಟಪಟ್ಟುಕೊಂಡು ದಾನಮಾಡುವವರು ರಾಜಸರು ; ದೇಶಕಾಲಪಾತ್ರಗಳನ್ನು ಲೆಕ್ಕಿಸದೆ ಅನಾದರದಿಂದ ಹೀಯಾಳಿಸಿ ದಾನಮಾಡುವವರು ತಾಮಸರು.

೨೩-೨೮. ಯಜ್ಞದಾನತಪಸ್ಸುಗಳನ್ನು ಓಂ ತತ್ ಸತ್ ಎಂಬ ಬ್ರಹ್ಮದ ಮೂರು ನಾಮೋಚ್ಚಾರಣೆಯ ಪೂರ್ವಕವಾಗಿ ಮಾಡುವದರಿಂದ ಅವು ಅಂಗವಿಗುಣವಾಗಿದ್ದರೂ ನಾಮೋಚ್ಚಾರಣೆಯ ಮಹಿಮೆಯಿಂದ ಸಗುಣವಾಗಿ ಮಾರ್ಪಡುವವು. ಆದರೆ ಇದಕ್ಕೆ ಮುಖ್ಯವಾಗಿ ಶ್ರದ್ಧೆಯು ಬೇಕು. ಶ್ರದ್ಧೆಯಿಲ್ಲದೆ ಮಾಡಿದ ಯಜ್ಞದಾನತಪಸ್ಸುಗಳು ಅಸತ್ತೆನಿಸುತ್ತವೆ; ಏಕೆಂದರೆ ಅವುಗಳಿಗೆ ಇಹದಲ್ಲಾಗಲಿ ಪರದಲ್ಲಾಗಲಿ ಯಾವ ಫಲವೂ ಆಗುವದಿಲ್ಲ.



# ಹದಿನೆಂಟನೆಯ ಅಧ್ಯಾಯ

(ಉ ಪ ಸ ಂ ಹಾ ರ)

(ಭಾಷ್ಯ)

೪೫೭. ಸರ್ವಸ್ಯೈವ ಗೀತಾಶಾಸ್ತ್ರಸ್ಯ ಅರ್ಥಃ ಅಸ್ಮಿನ್ ಅಧ್ಯಾಯೇ ಉಪಸಂಹೃತ್ಯ ಸರ್ವಶ್ಚ ವೇದಾರ್ಥಃ ವಕ್ತವ್ಯಃ ಇತ್ಯೇವಮರ್ಥಃ ಅಯಮ್ ಅಧ್ಯಾಯಃ ಆರಭ್ಯತೇ । ಸರ್ವೋ[1] ಹಿ ಅತೀತೇಷು ಅಧ್ಯಾಯೇಷು ಉಕ್ತಃ[2] ಅರ್ಥಃ ಅಸ್ಮಿನ್ ಅಧ್ಯಾಯೇ ಅವಗಮ್ಯತೇ । ಅರ್ಜುನಸ್ತು ಸಂನ್ಯಾಸತ್ಯಾಗಶಬ್ದಾರ್ಥಯೋರೇವ ವಿಶೇಷಂ ಬುಭುತ್ಸುಃ ಉವಾಚ—

(ಭಾಷ್ಯಾರ್ಥ)

**ಗೀತಾಶಾಸ್ತ್ರದ ಅರ್ಥವೆಲ್ಲವನ್ನೂ ಈ ಅಧ್ಯಾಯದಲ್ಲಿ ಉಪಸಂಹಾರ ಮಾಡಿ ವೇದಾರ್ಥವೆಲ್ಲವನ್ನೂ ಹೇಳಬೇಕು ಎಂದು ಈ ಅಧ್ಯಾಯವನ್ನು ಪ್ರಾರಂಭಿಸಿರುತ್ತದೆ.** ಏಕೆಂದರೆ ಹಿಂದಿನ ಅಧ್ಯಾಯಗಳಲ್ಲಿ ಹೇಳಿದ ಅರ್ಥವೆಲ್ಲ ಈ ಅಧ್ಯಾಯದಲ್ಲಿ(ರುವದು) ಕಂಡುಬರುತ್ತದೆ. ಅರ್ಜುನನೇನೋ (ಸಂನ್ಯಾಸತ್ಯಾಗ ಶಬ್ದಾರ್ಥಗಳಿಗಿರುವ ವಿಶೇಷವನ್ನು ತಿಳಿದುಕೊಳ್ಳಬೇಕೆಂದೇ ಹೀಗೆಂದನು :—

## ಸಂನ್ಯಾಸತ್ಯಾಗಶಬ್ದಗಳ ಅರ್ಥ

**ಅರ್ಜುನ ಉವಾಚ—**

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧ ॥**

೧. ಅರ್ಜುನನಿಂತೆಂದನು :—ಮಹಾಬಾಹುವೆ, ಹೃಷೀಕೇಶನೆ, ಕೇಶಿನಿಷೂದನನೆ, ಸಂನ್ಯಾಸದ ಮತ್ತು ತ್ಯಾಗದ ತತ್ತ್ವವನ್ನು ಬೇರೆಬೇರೆಯಾಗಿ ತಿಳಿಯಬೇಕೆಂದು ಇಚ್ಛಿಸುತ್ತೇನೆ.

---

1. ' ಸರ್ವೇಷು ' ಎಂದು ಮ|| ಹೊರತು ಉಳಿದವುಗಳ ಪಾಠ.
2. ' ಪೂರ್ವೋಕ್ತಂ ' ನಿ|| ವಾ||

(ಭಾಷ್ಯ)

೪೫೮. ಸಂನ್ಯಾಸಸ್ಯ ಸಂನ್ಯಾಸಶಬ್ದಾರ್ಥಸ್ಯ ಇತ್ಯೇತತ್ । ಹೇ ಮಹಾಬಾಹೋ । ತತ್ತ್ವಂ[1] ತಸ್ಯ ಭಾವಃ । ತತ್ತ್ವಂ ಯಾಥಾತ್ಮ್ಯಮ್ ಇತ್ಯೇತತ್ । ಇಚ್ಛಾಮಿವೇದಿತುಂ ಜ್ಞಾತುಮ್ । ತ್ಯಾಗಸ್ಯ ಚ ತ್ಯಾಗಶಬ್ದಾರ್ಥಸ್ಯ ಇತ್ಯೇತತ್ । ಹೃಷೀಕೇಶ । ಪೃಥಕ್ ಇತರೇತರವಿಭಾಗತಃ । ಕೇಶಿನಿಷೂದನ । ಕೇಶಿನಾಮಾ ಹಯಚ್ಛದ್ಮಾ[2] ಕಶ್ಚಿತ್[3] ಅಸುರಃ । ತಂ ನಿಷೂದಿತವಾನ್ ಭಗವಾನ್ ವಾಸುದೇವಃ। ತೇನ ತನ್ನಾಮ್ನಾ ಸಂಬೋಧ್ಯತೇ ಅರ್ಜುನೇನ ॥

(ಭಾಷ್ಯಾರ್ಥ)

ಸಂನ್ಯಾಸದ : ಸಂನ್ಯಾಸವೆಂಬ ಶಬ್ದದ ಅರ್ಥದ ಎಂದು ಅಭಿಪ್ರಾಯ. ಎಲೈ ಮಹಾಬಾಹುವೆ, (ಅದರ ತತ್ತ್ವವನ್ನು) : ತತ್ತ್ವವೆಂದರೆ ಅದರ ಭಾವವು ; ತತ್ತ್ವವನ್ನು ಎಂದರೆ ಯಾಥಾತ್ಮ್ಯವನ್ನು ಎಂದು ಅಭಿಪ್ರಾಯ. ತಿಳಿಯಬೇಕೆಂದು ಅರಿಯಬೇಕೆಂದು ಇಚ್ಛಿಸುತ್ತೇನೆ. ಮತ್ತು ತ್ಯಾಗದ : ತ್ಯಾಗವೆಂಬ ಶಬ್ದದ ಅರ್ಥದ ಎಂದು ಅಭಿಪ್ರಾಯ. ಹೃಷೀಕೇಶನೆ, ಪೃಥಕ್ಕಾಗಿ, ಒಂದರಿಂದೊಂದನ್ನು ವಿಂಗಡಿಸಿ (ತಿಳಿಯಲಿಚ್ಛಿಸುತ್ತೇನೆ) ಕೇಶಿನಿಷೂದನನೆ : ಕೇಶಿ ಎಂಬವನು ಕುದುರೆಯ ವೇಷದಲ್ಲಿದ್ದ ಒಬ್ಬಾನೊಬ್ಬ ಅಸುರನು ; ಅವನನ್ನು ಭಗವಂತನಾದ ವಾಸುದೇವನು ಕೊಂದನು. ಆದ್ದರಿಂದ ಆ (ಕೇಶಿನಿಷೂದನ ಎಂಬ) ಹೆಸರಿನಿಂದ ಅರ್ಜುನನು (ಭಗವಂತನನ್ನು) ಕರೆದಿರುತ್ತಾನೆ.

(ಭಾಷ್ಯ)

೪೫೯. ಸಂನ್ಯಾಸತ್ಯಾಗಶಬ್ದೌ ತತ್ರ ತತ್ರ ನಿರ್ದಿಷ್ಟೌ ನ ನಿರ್ಲುಠಿತಾರ್ಥೌ[4] ಪೂರ್ವೇಷು ಅಧ್ಯಾಯೇಷು । ಅತಃ ಅರ್ಜುನಾಯ ಪೃಷ್ಟವತೇ ತನ್ನಿರ್ಣಯಾಯ ಭಗವಾನ್ ಉವಾಚ—

---

1. ಸಿ॥ದಲ್ಲಿಲ್ಲ.
2. ವ್ಯೆ॥ದಲ್ಲಿಲ್ಲ.
3. ಮ॥ದಲ್ಲಿಲ್ಲ.
4. “ತತ್ರ ತತ್ರ ನಿರ್ದಿಷ್ಟೌ ಸಂನ್ಯಾಸತ್ಯಾಗಶಬ್ದೌ ನ ನಿರ್ಣೀತಾರ್ಥೌ” ಸಿ॥; “ಸಂನ್ಯಾಸತ್ಯಾಗಶಬ್ದೌ ತತ್ರ ತತ್ರ ನಿರ್ದಿಷ್ಟಾವಪಿ ಅನಿರ್ಣೀತಾರ್ಥೌ” ಮ॥

(ಭಾಷ್ಯಾರ್ಥ)

' ಸಂನ್ಯಾಸ,' ' ತ್ಯಾಗ '-ಎಂಬ (ಎರಡು) ಶಬ್ದಗಳನ್ನು (ಹಿಂದಿನ ಅಧ್ಯಾಯಗಳಲ್ಲಿ ಅಲ್ಲಲ್ಲಿ ಬಳಸಿರುತ್ತದೆ(ಯಾದರೂ), (ಅವುಗಳ) ಅರ್ಥವನ್ನು ಬಿಡಿಸಿಹೇಳಿರುವದಿಲ್ಲ. ಆದ್ದರಿಂದ (ಪ್ರಶ್ನೆಯನ್ನು) ಕೇಳಿದ ಅರ್ಜುನನಿಗೆ ಅದನ್ನು ಗೊತ್ತುಪಡಿಸಿ (ಹೇಳುವದಕ್ಕಾಗಿ) ಶ್ರೀ ಭಗವಂತನಿಂತೆಂದನು .—

**ಶ್ರೀ ಭಗವಾನ್ ಉವಾಚ—**

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥**

೨. ಶ್ರೀ ಭಗವಂತನಿಂತೆಂದನು :—ಕಾಮ್ಯಕರ್ಮಗಳನ್ನು ಬಿಡುವದನ್ನು ಕವಿಗಳು ಸಂನ್ಯಾಸವೆಂದು ತಿಳಿಯುತ್ತಾರೆ; ಸರ್ವಕರ್ಮಗಳ ಫಲವನ್ನು ಬಿಡುವದನ್ನು ವಿಚಕ್ಷಣರು ತ್ಯಾಗವೆಂದು ಕರೆಯುತ್ತಾರೆ.

(ಭಾಷ್ಯ)

೪೬೦. ಕಾಮ್ಯಾನಾಮ್ ಅಶ್ವಮೇಧಾದೀನಾಂ ಕರ್ಮಣಾಂ ನ್ಯಾಸಂ ಪರಿತ್ಯಾಗಂ ಸಂನ್ಯಾಸಂ ಸಂನ್ಯಾಸಶಬ್ದಾರ್ಥಮ್ ಅನುಷ್ಠೇಯತ್ವೇನ ಪ್ರಾಪ್ತಸ್ಯ ಅನನುಷ್ಠಾನಂ ಕವಯಃ ಪಣ್ಡಿತಾಃ ಕೇಚಿತ್ ವಿದುಃ ವಿಜಾನನ್ತಿ । ನಿತ್ಯನೈಮಿತ್ತಿಕಾನಾಮ್ ಅನುಷ್ಠೀಯಮಾನಾನಾಂ ಸರ್ವಕರ್ಮಣಾಮ್ ಆತ್ಮಸಂಬದ್ಧತಯಾ ಪ್ರಾಪ್ತಸ್ಯ ಫಲಸ್ಯ ಪರಿತ್ಯಾಗಃ ಸರ್ವಕರ್ಮಫಲತ್ಯಾಗಃ ಸರ್ವಕರ್ಮಫಲತ್ಯಾಗಃ ತಂ ಪ್ರಾಹುಃ ಕಥಯನ್ತಿ ತ್ಯಾಗಂ ತ್ಯಾಗಶಬ್ದಾರ್ಥಂ ವಿಚಕ್ಷಣಾಃ ಪಣ್ಡಿತಾಃ। ಯದಿ ಕಾಮ್ಯಕರ್ಮಪರಿತ್ಯಾಗಃ ಫಲಪರಿತ್ಯಾಗೋ ವಾ ಅರ್ಥೋ ವಕ್ತವ್ಯಃ । ಸರ್ವಥಾ ಪರಿತ್ಯಾಗಮಾತ್ರಂ ಸಂನ್ಯಾಸತ್ಯಾಗಶಬ್ದಯೋಃ ಏಕೋಽರ್ಥಃ ಸ್ಯಾತ್ । ನ ಘಟಪಟಶಬ್ದಾವಿವ ಜಾತ್ಯನ್ತರಭೂತಾರ್ಥೌ ॥

(ಭಾಷ್ಯಾರ್ಥ)

**ಅಶ್ವಮೇಧವೇ** ಮುಂತಾದ ಕಾಮ್ಯಕರ್ಮಗಳ ನ್ಯಾಸವನ್ನು, ಪರಿತ್ಯಾಗವನ್ನು ಮಾಡಬೇಕಾಗಿ ಬಂದದ್ದನ್ನು ಮಾಡದೆ ಇರುವದನ್ನು ಸಂನ್ಯಾಸವೆಂದು ಸಂನ್ಯಾಸ ಶಬ್ದಾರ್ಥವೆಂದು ಕವಿಗಳು, ಕೆಲವರು ಪಂಡಿತರು ತಿಳಿಯುವರು, (ಹೀಗೆಂದು) ಅರಿತಿರುವರು. ಆಚರಿಸುವ ನಿತ್ಯನೈಮಿತ್ತಿಕರೂಪವಾದ ಸರ್ವಕರ್ಮಗಳಿಗೂ ತನಗೆ

ಸಂಬಂಧಪಟ್ಟು ಬಂದೊದಗಿದ ಫಲವನ್ನು ಬಿಡುವದೇ ಸರ್ವಕರ್ಮಫಲತ್ಯಾಗವು; ಅದನ್ನು ವಿಚಕ್ಷಣರು ಪಂಡಿತರು ತ್ಯಾಗವೆಂದು ತ್ಯಾಗಶಬ್ದಾರ್ಥವೆಂದು ಕರೆಯುತ್ತಾರೆ, ಹೇಳುತ್ತಾರೆ. ಕಾಮ್ಯಕರ್ಮಪರಿತ್ಯಾಗವೆಂದು (ಅರ್ಥವನ್ನು ಹೇಳಿದರೂ) ಫಲಪರಿತ್ಯಾಗವೆಂದು ಅರ್ಥವನ್ನು ಹೇಳಿದರೂ ಹೇಗೂ ಸಂನ್ಯಾಸ, ತ್ಯಾಗ–ಎಂಬ ಮಾತುಗಳಿಗೆ ಬಿಡುವದೆಂಬುದೊಂದೇ ಅರ್ಥವಾಗುವದೇ (ಹೊರತು ಇವು) ಘಟ ಪಟಶಬ್ದಗಳಂತೆ ಬೇರೆಬೇರೆಯ ಅರ್ಥಗಳುಳ್ಳ (ಶಬ್ದ)ಗಳಲ್ಲ.

(ಭಾಷ್ಯ)

೪೬೧. ನನು ನಿತ್ಯನೈಮಿತ್ತಿಕಾನಾಂ ಕರ್ಮಣಾಂ ಫಲಮೇವ ನಾಸ್ತಿ ಇತ್ಯಾಹುಃ । ಕಥಮ್ ಉಚ್ಯತೇ ತೇಷಾಂ ಫಲತ್ಯಾಗಃ, ಯಥಾ ವನ್ಧ್ಯಾಯಾಃ ಪುತ್ರ ತ್ಯಾಗಃ ? ನೈಷ ದೋಷಃ । ನಿತ್ಯಾನಾಮಪಿ ಕರ್ಮಣಾಂ ಭಗವತಃ[1] ಫಲವತ್ತ್ವಸ್ಯ ಇಷ್ಟತ್ವಾತ್ । ವಕ್ಷ್ಯತಿ ಹಿ ಭಗವಾನ್ "ಅನಿಷ್ಟಮಿಷ್ಟಂ ಮಿಶ್ರಂ ಚ (೧೮-೧೨) ಇತಿ । "ನ ತು ಸಂನ್ಯಾಸಿನಾಮ್" (೧೮-೧೨) ಇತಿ ಚ ಸಂನ್ಯಾಸಿನಾಮೇವ ಹಿ ಕೇವಲಂ ಕರ್ಮಫಲಾಸಮ್ಬನ್ಧಂ ದರ್ಶಯನ್ ಅಸಂನ್ಯಾಸಿನಾಂ ನಿತ್ಯಕರ್ಮಫಲ ಪ್ರಾಪ್ತಿಂ "ಭವತ್ಯತ್ಯಾಗಿನಾಂ ಪ್ರೇತ್ಯ" (೧೮-೧೨) ಇತಿ ದರ್ಶಯತಿ ॥

(ಭಾಷ್ಯಾರ್ಥ)

(ಆಕ್ಷೇಪ) :—ನಿತ್ಯನೈಮಿತ್ತಿಕಕರ್ಮಗಳಿಗೆ ಫಲವೇ ಇಲ್ಲವೆಂದು ಹೇಳುತ್ತಾರಲ್ಲ[2]! ಅವುಗಳ ಫಲತ್ಯಾಗವೆಂಬುದು ಹೇಳಿದ್ದು ಹೇಗೆ? (ಇದು) ಬಂಜೆಯು ಪುತ್ರತ್ಯಾಗ(ವನ್ನು ಮಾಡಬೇಕೆಂದು ಹೇಳಿ)ದಂತೆ (ಆಗುವದಿಲ್ಲವೆ)?

(ಪರಿಹಾರ) :—ಇದರಲ್ಲೇನೂ ದೋಷವಿಲ್ಲ. ಏಕೆಂದರೆ **ನಿತ್ಯಕರ್ಮಗಳಿಗೂ ಫಲವುಂಟೆಂದು ಭಗವಂತನ ಅಭಿಪ್ರಾಯವಾಗಿರುತ್ತದೆ.** ಹೇಗೆಂದರೆ ಭಗವಂತನು "ಅನಿಷ್ಟವೂ ಇಷ್ಟವೂ ಮಿಶ್ರವೂ (ಆದ ಕರ್ಮಫಲವು ಅತ್ಯಾಗಿಗಳಿಗೆ ಆಗುತ್ತದೆ)" (೧೮-೧೨) ಎಂದು ಮುಂದೆ ಹೇಳಿರುತ್ತಾನೆ[3]. ಮತ್ತು "ಆದರೆ

1. 'ಭಗವತಾ' ಅ॥ನಿ॥ವ್ಯಾ॥ವಾ॥

2. ಮೀಮಾಂಸಕರೂ ಅವರನ್ನನುಸರಿಸುವ ವೇದಾಂತಿಗಳೂ ಹೀಗೆಂದು ಹೇಳುತ್ತಾರೆ.

3. ಕರ್ಮಗಳಿಗೆ ಮೂರರಲ್ಲಿ ಒಂದು ಬಗೆಯ ಫಲವಿದ್ದೇ ಇರುವದೆಂದು ಹೇಳಿದಂತೆ ಆಯಿತು.

ಸಂನ್ಯಾಸಿಗಳಿಗೆ (ಯಾವ ಫಲವೂ ಆಗುವದಿಲ್ಲ) " ಎಂದು ಸಂನ್ಯಾಸಿಗಳಿಗೆ ಮಾತ್ರ ಕರ್ಮಫಲದ ಸಂಬಂಧವಿಲ್ಲವೆಂದು ಹೇಳಿ ಸಂನ್ಯಾಸಿಗಳಲ್ಲದವರಿಗೆ ನಿತ್ಯಕರ್ಮದ ಫಲವು ಆಗುವದೆಂದು " ಅತ್ಯಾಗಿಗಳಿಗೆ ಸತ್ತ್ವಬಳಿಕ ಆಗುವದು " (೧೮;೧೨) ಎಂದೂ ತಿಳಿಸಿರುತ್ತಾನೆ [1].

## ಅಜ್ಞರ ಕರ್ಮತ್ಯಾಗದ ವಿಷಯದಲ್ಲಿ ವಿಕಲ್ಪಗಳು

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥**

೩. ಕರ್ಮವನ್ನು ದೋಷದಂತೆ ಬಿಡಬೇಕು ಎಂದು ಕೆಲವರು ಮನೀಷಿಗಳು ಹೇಳುತ್ತಾರೆ. ಯಜ್ಞದಾನತಪಃಕರ್ಮವು ಬಿಡತಕ್ಕದ್ದಲ್ಲ ಎಂದು ಮತ್ತೆ ಕೆಲವರು ಹೇಳುತ್ತಾರೆ.

(ಭಾಷ್ಯ)

೪೬೨ ತ್ಯಾಜ್ಯಂ ತ್ಯಕ್ತವ್ಯಮ್ । ದೋಷವತ್ ದೋಷಃ ಅಸ್ಯಾಸ್ತೀತಿ। ದೋಷವತ್। ಕಿಂ ತತ್ ? ಕರ್ಮ । ಬನ್ಧಹೇತುತ್ವಾತ್ ಸರ್ವಮೇವ। ಅಥವಾ ದೋಷಃ ಯಥಾ ರಾಗಾದಿಃ [2] ತ್ಯಜ್ಯತೇ ತಥಾ ತ್ಯಾಜ್ಯಮ್ ಇತಿ ಏಕೇ ಕರ್ಮ ಪ್ರಾಹುಃ ಮನೀಷಿಣಃ ಪಣ್ಡಿತಾಃ ಸಾಙ್ಖ್ಯದಿದೃಷ್ಟಿಮ್ ಆಶ್ರಿತಾಃ [3] ಅಧಿಕೃತಾನಾಂ ಕರ್ಮಿಣಾಮಪಿ ಇತಿ । ತತ್ರೈವ ಯಜ್ಞದಾನತಪಃಕರ್ಮ ನ ತ್ಯಾಜ್ಯಮ್ ಇತಿ ಚ ಅಪರೇ ॥

(ಭಾಷ್ಯಾರ್ಥ)

ತ್ಯಾಜ್ಯವು ಬಿಡತಕ್ಕದ್ದು. ದೋಷವತ್ತಾದ-ದೋಷವು ಇದಕ್ಕೆ ಇರುವದರಿಂದ ದೋಷವತ್ತಾದ. ಅದು ಯಾವದು ? ಎಂದರೆ-ಕರ್ಮವೆಲ್ಲವೂ ಬಂಧಹೇತುವಾ

---

1. ಸಂನ್ಯಾಸಿಗಳಿಗೆ ಆಗುವದಿಲ್ಲ, ಮಿಕ್ಕವರಿಗೆ ಆಗುತ್ತದೆ-ಎಂಬ ವಚನವು ನಿತ್ಯಕರ್ಮಗಳಿಗೆ ಫಲವಿಲ್ಲದಿದ್ದರೆ ಬರಿಯ ನಿತ್ಯನೈಮಿತ್ತಿಕ ಕರ್ಮವನ್ನು ಮಾಡುವವರಿಗೆ ಹೊಂದುತ್ತಿರಲಿಲ್ಲ.

2. ' ಧನರಾಗಾದಿಃ ' ಮು॥

3. ' ಸಾಂಖ್ಯಾಃ ಆತ್ಮದೃಷ್ಟಿಮ್ ಆಶ್ರಿತಾಃ ' ಮು॥ ' ಇಲ್ಲಿ ಸಾಂಖ್ಯದೃಷ್ಟಿಮ್ ಆಶ್ರಿತಾಃ ' ಎಂದಿಷ್ಟೇ ಇದ್ದರೂ ಸಾಕೆಂದು ತೋರುತ್ತದೆ.

ಗಿರುವದರಿಂದ (ತ್ಯಾಜ್ಯವು). ಅಥವಾ (ದೋಷವತ್ ಎಂದರೆ) ಹೇಗೆ ರಾಗವೇ ಮುಂತಾದ ದೋಷವನ್ನು ಬಿಡುತ್ತಾರೋ ಹಾಗೆ (ಕರ್ಮವು) ಬಿಡತಕ್ಕದ್ದು ಎಂದು ಕೆಲವರು ಮನೀಷಿಗಳು ಪಂಡಿತರು ಸಾಂಖ್ಯರೇ ಮೊದಲಾದವರ[1] ದೃಷ್ಟಿಯನ್ನು ಆಶ್ರಯಿಸಿದವರು ಹೇಳುತ್ತಾರೆ. ಅಧಿಕಾರಿಗಳಾದ ಕರ್ಮಿಗಳುಕೂಡ (ಬಿಡಬೇಕು ಎಂದು ಹೇಳುತ್ತಾರೆ). (ಕರ್ಮಿಗಳ ವಿಷಯ)ದಲ್ಲಿಯೇ ಯಜ್ಞದಾನತಪಃಕರ್ಮವು ಬಿಡತಕ್ಕದ್ದಲ್ಲ ಎಂದೂ ಮತ್ತೆ ಕೆಲವರು (ಹೇಳುತ್ತಾರೆ).

(ಭಾಷ್ಯ)

೪೬೩. ಕರ್ಮಿಣ ಏವ ಅಧಿಕೃತಾಃ। ತಾನ್ ಅಪೇಕ್ಷ್ಯ ಏತೇ ವಿಕಲ್ಪಾಃ। ನ ತು ಜ್ಞಾನನಿಷ್ಠಾನ್ ವ್ಯುತ್ಥಾಯಿನಃ ಸಂನ್ಯಾಸಿನಃ ಅಪೇಕ್ಷ್ಯ। "ಜ್ಞಾನಯೋಗೇನ ಸಾಙ್ಖ್ಯಾನಾಂ ನಿಷ್ಠಾ ಮಯಾ ಪುರಾ ಪ್ರೋಕ್ತಾ" (೩-೩) ಇತಿ ಕರ್ಮಾಧಿಕಾರಾತ್ ಅಪೋದ್ಧೃತಾ ಯೇ ನ ತಾನ್ ಪ್ರತಿ ಚಿನ್ತಾ। ನನು "ಕರ್ಮಯೋಗೇನ ಯೋಗಿನಾಮ್" (೩-೩) ಇತ್ಯಧಿಕೃತಾಃ ಪೂರ್ವಂ ವಿಭಕ್ತನಿಷ್ಠಾ ಅಪಿ ಇಹ ಸರ್ವಶಾಸ್ತ್ರಾರ್ಥೋಪಸಂಹಾರಪ್ರಕರಣೇ[2] ಯಥಾ ವಿಚಾರ್ಯನ್ತೇ ತಥಾ ಸಾಙ್ಖ್ಯಾ ಅಪಿ ಜ್ಞಾನನಿಷ್ಠಾ ವಿಚಾರ್ಯನ್ತಾಮ್ ಇತಿ। ನ। ತೇಷಾಂ ಮೋಹಾದ್ದುಃಖನಿಮಿತ್ತ[3] ತ್ಯಾಗಾನುಪಪತ್ತೇಃ। ನ ಕಾಯಕ್ಲೇಶನಿಮಿತ್ತಂ ದುಃಖಂ[4] ಸಾಙ್ಖ್ಯಾ ಆತ್ಮನಿ ಪಶ್ಯನ್ತಿ। ಇಚ್ಛಾದೀನಾಂ ಕ್ಷೇತ್ರಧರ್ಮತ್ವೇನೈವ ದರ್ಶಿತತ್ವಾತ್। ಅತಃ ತೇ ನ ಕಾಯಕ್ಲೇಶದುಃಖಭಯಾತ್ ಕರ್ಮ ಪರಿತ್ಯಜನ್ತಿ। ನಾಪಿ ತೇ ಕರ್ಮಾಣಿ ಆತ್ಮನಿ ಪಶ್ಯನ್ತಿ ಯೇನ ನಿಯತಂ ಕರ್ಮ ಮೋಹಾತ್ ಪರಿತ್ಯಜೇಯುಃ। 'ಗುಣಾನಾಂ ಕರ್ಮ[5] (೩-೨೭) 'ನೈವ ಕಿಂಚಿತ್ ಕರೋಮಿ' (೫-೮) ಇತಿ ಹಿ ತೇ ಸಂನ್ಯಸ್ಯನ್ತಿ। "ಸರ್ವಕರ್ಮಾಣಿ ಮನಸಾ ಸಂನ್ಯಸ್ಯ" (೫-೧೩) ಇತ್ಯಾದಿ

---

1, 'ಸಾಂಖ್ಯದೃಷ್ಟಿಪರ್' ಎಂದೇ ಪಾಠವನ್ನು ಕಲ್ಪಿಸಿ ಸಾಂಖ್ಯರ ದೃಷ್ಟಿಯನ್ನು ಎಂದು ಅರ್ಥಮಾಡಿದರೆ ಸಾಕೆಂದು ತೋರುತ್ತದೆ. ಯಜ್ಞಾದಿಗಳೂ ದುಷ್ಟವೆಂದು ಸಾಂಖ್ಯರೆನ್ನುತ್ತಾರೆ.

2. 'ಶಾಸ್ತ್ರೋಪಸಂಹಾರ....' ಆ||ನಿ||ಗು.

3. 'ಮೋಹದುಃಖ' ಎಂಬ ಪಾಠವು ಸರಿಯಲ್ಲ; ಮೋಹಕ್ಲೇಶದುಃಖನಿಮಿತ್ತ ನಿ||

4. 'ನಿಮಿತ್ತಾನಿ ದುಃಖಾನಿ' ಆ||ನಿ||ಗು||

5. ಇದು ಶ್ಲೋಕದ ಅರ್ಥಮಾತ್ರ.

ಭಿರ್ಹಿ[1] ತತ್ತ್ವವಿದಃ ಸಂನ್ಯಾಸಪ್ರಕಾರಃ ಉಕ್ತಃ। ತಸ್ಮಾತ್ ಯೇ ಅನ್ಯೇ ಅಧಿಕೃತಾಃ ಕರ್ಮಣಿ ಅನಾತ್ಮವಿದಃ, ಯೇಷಾಂ ಚ ಮೋಹಾತ್ ತ್ಯಾಗಃ[2] ಸಮ್ಭವತಿ ಕಾಯಕ್ಲೇಶಭಯಾಚ್ಚ ತೇ ಏವ ತಾಮಸಾಃ ತ್ಯಾಗಿನಃ ರಾಜಸಾಶ್ಚ ಇತಿ ನಿನ್ದ್ಯನ್ತೇ ಕರ್ಮಿಣಾಮ್ ಅನಾತ್ಮಜ್ಞಾನಾಂ ಕರ್ಮಫಲತ್ಯಾಗಸ್ತುತ್ಯರ್ಥಮ್। ಸರ್ವಾರಮ್ಭಪರಿತ್ಯಾಗೀ" (೧೨-೧೬), 'ಮೌನೀ ಸನ್ತುಷ್ಟೋ ಯೇನ ಕೇನಚಿತ್। ಅನಿಕೇತಃ ಸ್ಥಿರಮತಿಃ" (೧೨-೧೯) ಇತಿ ಗುಣಾತೀತಲಕ್ಷಣೇ ಚ ಪರಮಾರ್ಥಸಂನ್ಯಾಸಿನೋ ವಿಶೇಷಣತ್ವಾತ್। ವಕ್ಷ್ಯತಿ ಚ "ನಿಷ್ಠಾ ಜ್ಞಾನಸ್ಯ ಯಾ ಪರಾ[3]" (೧೮-೫೦) ಇತಿ। ತಸ್ಮಾತ್ ಜ್ಞಾನನಿಷ್ಠಾಃ ಸಂನ್ಯಾಸಿನಃ ನೇಹ ವಿವಕ್ಷಿತಾಃ। ಕರ್ಮಫಲತ್ಯಾಗ ಏವ ಸಾತ್ತ್ವಿಕತ್ವೇನ ಗುಣೇನ ತಾಮಸತ್ವಾದ್ಯಪೇಕ್ಷಯಾ ಸಂನ್ಯಾಸ ಉಚ್ಯತೇ ನ ಮುಖ್ಯಃ ಸರ್ವಕರ್ಮಸಂನ್ಯಾಸಃ ॥

(ಭಾಷ್ಯಾರ್ಥ)

(ಇಲ್ಲಿ) ಕರ್ಮಿಗಳನ್ನು (ಕುರಿತು ಹೇಳುವದಕ್ಕೆ) ಆರಂಭಿಸಿರುತ್ತದೆ. ಅವರನ್ನಿಟ್ಟುಕೊಂಡೇ ಈ ವಿಕಲ್ಪಗಳನ್ನು (ಹೇಳಿರುತ್ತದೆಯೇ ಹೊರತು) ಜ್ಞಾನನಿಷ್ಠರಾಗಿ (ಏಷಣಾತ್ರಯವನ್ನು) ಬಿಟ್ಟಿದ್ದ ಸಂನ್ಯಾಸಿಗಳನ್ನಿಟ್ಟುಕೊಂಡಲ್ಲ. "ಜ್ಞಾನಯೋಗದಿಂದಿರುವ ನಿಷ್ಠೆಯನ್ನು ಸಾಂಖ್ಯರಿಗೆ ನಾನು ಹಿಂದೆ ಹೇಳಿರುತ್ತೇನೆ" (೩-೩) ಎಂದು ಕರ್ಮದ ಅಧಿಕಾರದಿಂದ ಎತ್ತಿಹಾಕಿರುವ (ಸಾಂಖ್ಯರಿದಾ)ರಲ್ಲ, ಅವರ ವಿಷಯಕ್ಕೆ ಇಲ್ಲಿ ವಿಚಾರವನ್ನು (ಮಾಡುತ್ತಲಿಲ್ಲ).

(ಆಕ್ಷೇಪ): --ಕರ್ಮಯೋಗದಿಂದ ಯೋಗಿಗಳಿಗೆ (ನಿಷ್ಠೆಯನ್ನು ಹೇಳಿದೆನು ೩-೩) ಎಂದು (ಕರ್ಮದಲ್ಲಿ) ಅಧಿಕೃತರಾದವರಿಗೆ ಹಿಂದೆ ಬೇರೆಯಾಗಿ ನಿಷ್ಠೆಯನ್ನು ಹೇಳಿದ್ದರೂ ಈ ಸರ್ವಶಾಸ್ತ್ರಾರ್ಥದ ಉಪಸಂಹಾರವನ್ನು ಮಾಡುವ ಪ್ರಕರಣದಲ್ಲಿ (ಅವರನ್ನು) ಹೇಗೆ (ಮತ್ತೆ) ವಿಚಾರಮಾಡಿರುತ್ತದೆಯೋ ಹಾಗೆಯೇ ಜ್ಞಾನನಿಷ್ಠರಾದ ಸಾಂಖ್ಯರನ್ನೂ (ಕುರಿತು) ವಿಚಾರಮಾಡಬಹುದಲ್ಲ!

(ಪರಿಹಾರ): --ಆಗದು. ಏಕೆಂದರೆ ಅವರು ಮೋಹದಿಂದ ದುಃಖನಿಮಿತ್ತ

1. ಮ॥ಮ್ಯೊ॥ಗಳಲ್ಲಿಲ್ಲ.

2. 'ಮೋಹನಿಮಿತ್ತಸ್ತ್ಯಾಗಃ' ಮ॥ಮ್ಯೊ॥ವಾ॥

3. "ಜ್ಞಾನಸ್ಯ ಯಾ ಪರಾ ನಿಷ್ಠಾ" ಎಂಬ ಆ॥ಸ॥ ಮುಂತಾದ ಪಾಠದಲ್ಲಿ ಶ್ಲೋಕಾರ್ಥದ ಅನುವಾದವನ್ನು ಮಾತ್ರ ಮಾಡಿದೆ ಎಂದು ತಿಳಿಯಬೇಕು.

ವಾಗಿ [1] (ಕರ್ಮ) ತ್ಯಾಗವನ್ನು (ಮಾಡುವರೆಂಬುದು) ಹೊಂದುವದಿಲ್ಲ. (ಹೇಗೆಂದರೆ) ಕಾಯಕ್ಲೇಶನಿಮಿತ್ತವಾದ ದುಃಖವು ತಮ್ಮಲ್ಲಿರುವದೆಂದು ಸಾಂಖ್ಯರಿಗೆ ತೋರುವದಿಲ್ಲ; ಏಕೆಂದರೆ ಇಚ್ಛೆಯೇ ಮುಂತಾದವು ಕ್ಷೇತ್ರದ ಧರ್ಮಗಳೇ ಎಂದು (ಹಿಂದೆ ೧೩-೬ರಲ್ಲಿ) ತೋರಿಸಿಕೊಟ್ಟಿರುತ್ತದೆ [2]. ಆದ್ದರಿಂದ ಅವರು ಕಾಯಕ್ಲೇಶದ ದುಃಖದ ಭಯದಿಂದ ಕರ್ಮವನ್ನು ಬಿಡುವದಿಲ್ಲ. ಕರ್ಮಗಳು ತಮ್ಮಲ್ಲಿ ಇವೆಯೆಂದೂ ಅವರಿಗೆ ತೋರುವದಿಲ್ಲ; ಹಾಗೆ (ತೋರುತ್ತಿದ್ದರೆ) ನಿತ್ಯಕರ್ಮವನ್ನು ಮೋಹದಿಂದ (ಅವರು) ಬಿಡಬಹುದಾಗಿತ್ತು [3]. " ಗುಣಗಳಿಗೇ ಕರ್ಮವು "( ಸೇರಿರುತ್ತದೆ ೩-೨೭), " ನಾನು ಏನೂ ಮಾಡುವದಿಲ್ಲ" (೬-೮)–ಎಂದಲ್ಲವೆ, ಅವರು (ಕರ್ಮವನ್ನು) ಸಂನ್ಯಾಸಮಾಡುತ್ತಾರೆ ? " ಸರ್ವಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ" (೫-೧೩) ಮುಂತಾದ (ಶ್ಲೋಕಗಳಲ್ಲಿ) ತತ್ತ್ವಜ್ಞಾನಿಯು ಸಂನ್ಯಾಸಮಾಡುವ ಬಗೆಯನ್ನು ಹೇಳಿರುತ್ತದೆಯಲ್ಲವೆ ? [4] ಆದ್ದರಿಂದ ಯಾರು (ಜ್ಞಾನಿಗಳಿಗಿಂತ) ಬೇರೆಯುವರಾಗಿ ಕರ್ಮಕ್ಕೆ ಅಧಿಕಾರಿಗಳಾದ ಆತ್ಮಜ್ಞಾನಿಗಳಲ್ಲದವರಾಗಿರುವರೋ ಮತ್ತು ಯಾರಿಗೆ ಮೋಹದಿಂದಲೂ ಕಾಯಕ್ಲೇಶಭಯದಿಂದಲೂ (ಕರ್ಮ)ವನ್ನು ತ್ಯಾಗಮಾಡುವದೆಂಬುದು ಹೊಂದುತ್ತದೆಯೋ ಆ ತ್ಯಾಗಿಗಳನ್ನೇ ಆತ್ಮಜ್ಞರಲ್ಲದ ಕರ್ಮಿಗಳು ಮಾಡುವ ಕರ್ಮಫಲತ್ಯಾಗವನ್ನು ಹೊಗಳುವದಕ್ಕಾಗಿ, ತಾಮಸರು, ರಾಜಸರು ಎಂದು (ಇಲ್ಲಿ) ನಿಂದಿಸಿರುತ್ತದೆ (ಎಂದು ಹೇಳಬೇಕಾಗಿದೆ). ಏಕೆಂದರೆ "ಎಲ್ಲಾ ಕರ್ಮಗಳನ್ನೂ ಪರಿತ್ಯಾಗಮಾಡುವ" (೧೨-೧೬), ಎಂದೂ " ಮೌನಿಯು ಏನು (ಸಿಕ್ಕರೂ ಅಷ್ಟ)ರಿಂದಲೇ ತೃಪ್ತನಾಗಿ, ಅನಿಕೇತನಾಗಿ ಸ್ಥಿರಮತಿಯಾಗಿ" (೧೨.೧೯) ಎಂದೂ **ಪರಮಾರ್ಥಸಂನ್ಯಾಸಿಗೆ** ವಿಶೇಷಣವನ್ನು ಕೊಟ್ಟಿರುತ್ತದೆ. ಗುಣಾತೀತಲಕ್ಷಣ

---

1. 'ಮೋಹದುಃಖ' ಎಂದೇ ಅಚ್ಚಿನ ಪುಸ್ತಕಗಳಲ್ಲಿದ್ದರೂ ಸಂದರ್ಭಕ್ಕೆ ಹೊಂದುವಂತೆ 'ಮೋಹಾದ್ದುಃಖ' ಎಂದು ತಿದ್ದಿಕೊಂಡಿರುತ್ತದೆ. ಮುಂದಿನ ೭-೮ನೆಯ ಶ್ಲೋಕಗಳನ್ನು ನೋಡಿ. 'ಮೋಹಕ್ಲೇಶದುಃಖನಿಮಿತ್ತ' ಎಂಬ ನಿ|| ಪಾಠದಲ್ಲಿ ಎರಡು ಶ್ಲೋಕಗಳ ಸೂಚನೆಯೂ ಇದೆ.

2. ಇಚ್ಛಾದುಃಖಾದಿಗಳೆಲ್ಲವೂ ಕ್ಷೇತ್ರಧರ್ಮವೆಂದು ಅರಿತಿರುವವರಿಗೆ ಮೋಹದಿಂದ ದುಃಖವು ಆಗಲಾರದು_ಎಂದು ಭಾವ.

3. ಕರ್ಮಕ್ಕೂ ತಮಗೂ ಸಂಬಂಧವೇ ಇಲ್ಲವೆಂಬ ಅರಿವು ಇರುವವರು ಕರ್ಮವನ್ನು ಮಾಡುವದಾದರೂ ಬಿಡುವದಾದರೂ ಹೇಗೆ ?

4. ತನಗೆ ಯಾವ ಕರ್ಮದ ಸಂಬಂಧವೂ ಇಲ್ಲವೆಂಬ ಜ್ಞಾನವನ್ನು ಅನುಭವಪೂರ್ವಕವಾಗಿ ಪಡೆದುಕೊಳ್ಳುವದೇ ಈ ಸಂನ್ಯಾಸದ ಪ್ರಕಾರವು.

ದಲ್ಲಿಯೂ (೧೪ನೆಯ ಅಧ್ಯಾಯದಲ್ಲಿ ಪರಮಾರ್ಥಸಂನ್ಯಾಸಿಯನ್ನು ಸವಿಶೇಷಣ ವಾಗಿ ತಿಳಿಸಿದೆ)[1]. ಮುಂದೆಯೂ (೧೮-೫೦) "ಜ್ಞಾನದ ಹೆಚ್ಚಿನ ನಿಷ್ಠೆಯನ್ನು (ಹೇಳುತ್ತೇನೆ ಕೇಳು)" ಎಂದು (ಜ್ಞಾನಿಯನ್ನು ಬೇರ್ಪಡಿಸಿ ತಿಳಿಸಿರುತ್ತದೆ)[2]. ಆದ್ದರಿಂದ ಜ್ಞಾನನಿಷ್ಠರಾದ ಸಂನ್ಯಾಸಿಗಳನ್ನು ಈ (ಪ್ರಕರಣದಲ್ಲಿ) ಹೇಳಬೇಕೆಂದು ಹೊರಟಿಲ್ಲ. (ಬರಿಯ) ಕರ್ಮಫಲತ್ಯಾಗವನ್ನೇ ತಾಮಸವೇ ಮುಂತಾದದ್ದಕ್ಕೆ ಹೋಲಿಸಿ ಸಾತ್ತ್ವಿಕವಾಗಿರುವದೆಂಬ (ಕಾರಣ)ದಿಂದ ಸಂನ್ಯಾಸವೆಂದು ಗೌಣ(ವೃತ್ತಿ ಯಿಂದ) ಕರೆದಿದೆಯೇ ಹೊರತು ಮುಖ್ಯವಾದ ಸರ್ವಕರ್ಮಸಂನ್ಯಾಸವನ್ನಲ್ಲ.

(ಭಾಷ್ಯ)

೪೯೪. ಸರ್ವಕರ್ಮಸಂನ್ಯಾಸಾಸಮ್ಭವೇ ಚ "ನ ಹಿ ದೇಹಭೃತಾ" (೧೮-೧೧) ಇತಿ ಹೇತುವಚನಾತ್ ಮುಖ್ಯ ಏವ ಇತಿ ಚೇತ್ । ನ । ಹೇತುವಚನಸ್ಯ ಸ್ತುತ್ಯರ್ಥತ್ವಾತ್ । ಯಥಾ "ತ್ಯಾಗಾಚ್ಛಾನ್ತಿರನನ್ತರಮ್" (೧೨-೧೨) ಇತಿ ಕರ್ಮ ಫಲತ್ಯಾಗಸ್ತುತಿರೇವ ಯಥೋಕ್ತಾನೇಕಪಕ್ಷಾನುಷ್ಠಾನಾಶಕ್ತಿಮನ್ತಮ್ ಅರ್ಜುನ ಮಜ್ಞಂ ಪ್ರತಿ ವಿಧಾನಾತ್ । ತಥಾ ಇದಮಪಿ ನ ಹಿ ದೇಹಭೃತಾ ಶಕ್ಯಮ್ (೧೮-೧೧) ಇತಿ ಕರ್ಮಫಲತ್ಯಾಗಸ್ತುತ್ಯರ್ಥಂ ವಚನಮ್[3] । ನ ಸರ್ವಕರ್ಮಾಣಿ ಮನಸಾ ಸಂನ್ಯಸ್ಯ . . . ನೈವ ಕುರ್ವನ್ನ ಕಾರಯನ್ ಆಸ್ತೇ" (೫-೧೩) ಇತ್ಯಸ್ಯ ಪಕ್ಷಸ್ಯ ಅಪವಾದಃ ಕೇನಚಿತ್ ದರ್ಶಯಿತುಂ ಶಕ್ಯಃ । ತಸ್ಮಾತ್ ಕರ್ಮಣ್ಯಧಿಕೃತಾನ್ ಪ್ರತ್ಯೇವ ಏಷ ಸಂನ್ಯಾಸತ್ಯಾಗವಿಕಲ್ಪಃ । ಯೇ ತು ಪರಮಾರ್ಥದರ್ಶಿನಃ ಸಾಙ್ಖ್ಯಾಃ ತೇಷಾಂ ಜ್ಞಾನನಿಷ್ಠಾಯಾಮೇವ ಸರ್ವಕರ್ಮಸಂನ್ಯಾಸಲಕ್ಷಣಾಯಾಮ್ ಅಧಿಕಾರಃ ನಾನ್ಯತ್ರ ಇತಿ ನ ತೇ ವಿಕಲ್ಪಾರ್ಹಾಃ । ತಚ್ಚ[4] ಉಪಪಾದಿತಮ್ ಅಸ್ಮಾಭಿಃ "ವೇದಾ ವಿನಾಶಿನಮ್" (೨-೨೧) ಇತ್ಯಸ್ಮಿನ್ ಪ್ರದೇಶೇ, ತೃತೀಯಾದೌ ಚ ॥

---

1. ಇಲ್ಲಿ ಕೊಟ್ಟಿರುವ ವಿಶೇಷಣಗಳಿಂದ ಜ್ಞಾನಿಗಳಿಗೆ ಯಾವ ಕರ್ಮವೂ ಇಲ್ಲವೆಂದು ಸುಸ್ಪಷ್ಟವಾಗುತ್ತದೆ; ಹೀಗಿರುವಲ್ಲಿ ಅವರು ಕರ್ಮವನ್ನು ಮಾಡಿ ಫಲತ್ಯಾಗವನ್ನು ಮಾಡ ಬೇಕೆಂದು ಇಲ್ಲಿ ಹೇಳಿದೆ ಎಂದು ಕಲ್ಪಿಸುವದು ಗೀತಾಚಾರ್ಯನಿಗೆ ವ್ಯಾಹತಿದೋಷವನ್ನು ಅಂಟಿಸಿದಂತೆ ಆಗುತ್ತದೆ—ಎಂದು ಭಾವ.

2 ಕರ್ಮಫಲವನ್ನು ಈಶ್ವರಾರ್ಪಣಮಾಡಿ ಸಿದ್ಧಿಯನ್ನು ಪಡೆದವನಿಗೆ ಮುಂದೆ ಜ್ಞಾನದ ನಿಷ್ಠೆಯು ದೊರಕುವದೆಂದು ಹೇಳಿರುವದರಿಂದ ಕರ್ಮಫಲತ್ಯಾಗವು ಜ್ಞಾನಿಯ ವಿಷಯವಲ್ಲವೆಂದು ಏರ್ಪಡುತ್ತದೆ ಎಂದು ಭಾವ.

3. ಮ॥ಮೈ॥ವಾ॥ ಗಳಲ್ಲಿ 'ವಚನಮ್' ಎಂಬ ಮಾತಿಲ್ಲ.

4. 'ತಥಾ' ಸಿ॥ಗ॥

(ಭಾಷ್ಯಾರ್ಥ)

(ಆಕ್ಷೇಪ) : —ಸರ್ವಕರ್ಮಗಳನ್ನೂ ಸಂನ್ಯಾಸಮಾಡುವದು ಆಗುವ ಹಾಗಿಲ್ಲ ಎಂಬುದಕ್ಕೆ "ದೇಹಧಾರಿಯಾದವನು (ಕರ್ಮಗಳನ್ನೆಲ್ಲ ಬಿಡುವದು) ಆಗಲಾರದಲ್ಲವೆ ?" (೧೮-೧೧) ಎಂದು ಹೇತುವನ್ನು ಹೇಳಿರುವದರಿಂದ (ಇಲ್ಲಿ ಸಂನ್ಯಾಸವೆಂದು ಕರೆದಿರುವದು) ಮುಖ್ಯ (ಸಂನ್ಯಾಸವನ್ನೇ ಎನ್ನಬೇಕಲ್ಲವೆ) ?

(ಪರಿಹಾರ) : -- ಕೂಡದು. ಏಕೆಂದರೆ (ಈ) ಹೇತುವಚನವು ಹೊಗಳುವದಕ್ಕಾಗಿ (ಬಂದಿದೆ). ಹೇಗೆ "ತ್ಯಾಗದ ಅನಂತರವೇ ಶಾಂತಿಯು" (೧೨-೧೨) ಎಂಬುದು ಹಿಂದೆ ಹೇಳಿರುವ ಅನೇಕ ಪಕ್ಷಗಳನ್ನು ಆಚರಿಸುವದಕ್ಕೆ ಅಸಮರ್ಥನಾದ ಅಜ್ಞನಾದ ಅರ್ಜುನನಿಗೆ ಉಪದೇಶಿಸಿದ್ದಾದ್ದರಿಂದ ಕರ್ಮಫಲವನ್ನು ತ್ಯಾಗಮಾಡುವದನ್ನು ಹೊಗಳುವದಕ್ಕೆ ಬಂದಿರುತ್ತದೆ (ಎಂದು ನಿಶ್ಚಯವಾಗುವದೋ)[1] ಹಾಗೆಯೇ ಈ "ದೇಹಧಾರಿಯಾದವನು (ಕರ್ಮಗಳನ್ನೆಲ್ಲ) ಬಿಡುವದಕ್ಕಾಗುವದಿಲ್ಲ" (೧೫-೧೧) ಎಂಬ ವಚನವೂ ಕರ್ಮಫಲತ್ಯಾಗವನ್ನು ಹೊಗಳುವದಕ್ಕಾಗಿ (ಬಂದದ್ದೆಂದು ನಿಶ್ಚಯವಾಗುತ್ತದೆ)[2] ಯೇ ಹೊರತು "ಸರ್ವಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ (ವಶಿಯಾದವನು ಏನನ್ನೂ) ಮಾಡದೆ ಮಾಡಿಸದೆ ಇರುತ್ತಾನೆ" (೫-೧೩) ಎಂಬೀ ಪಕ್ಷಕ್ಕೆ ಅಪವಾದವನ್ನು ತೋರಿಸುವದು ಯಾರಿಂದಲೂ ಆಗಲಾರದು[3]. ಆದ್ದರಿಂದ ಕರ್ಮಕ್ಕೆ ಅಧಿಕಾರಿಗಳಾದವರ ವಿಷಯಕ್ಕೇ ಈ ಸಂನ್ಯಾಸತ್ಯಾಗಗಳ ವಿಕಲ್ಪವು ಆದರೆ ಪರಮಾರ್ಥದರ್ಶಿಗಳಾದ ಸಾಂಖ್ಯರಿರುವರಲ್ಲ, ಅವರಿಗೆ ಸರ್ವಕರ್ಮಸಂನ್ಯಾಸರೂಪವಾದ ಜ್ಞಾನನಿಷ್ಠೆಯಲ್ಲಿಯೇ ಅಧಿಕಾರವೇ ಹೊರತು ಮತ್ತೊಂದರಲ್ಲಿಲ್ಲವಾಗಿ ಅವರು (ಈ) ವಿಕಲ್ಪಕ್ಕೆ ತಕ್ಕವರಲ್ಲ[4]. ಮತ್ತು ಇದನ್ನು ನಾವು "(ಈತನು) ಅವಿನಾಶಿಯೆಂದು (ಯಾವನು) ತಿಳಿಯು

---

1. ಈ ಶ್ಲೋಕದ ಭಾಷ್ಯದಲ್ಲಿ ಜ್ಞಾನಿಗಳ ತ್ಯಾಗಕ್ಕೂ ಅಜ್ಞರ ಕರ್ಮಫಲತ್ಯಾಗಕ್ಕೂ ಹೋಲಿಕೆಯಿರುವದರಿಂದ ಕರ್ಮಫಲತ್ಯಾಗವನ್ನು ಹೊಗಳಿದೆ ಎಂದು ತಿಳಿಸಿದೆ.

2. ಏಕೆಂದರೆ ಫಲವನ್ನು ತ್ಯಾಗಮಾಡಿ ಕರ್ಮವನ್ನು ಮಾಡಬೇಕು_ಎಂಬುದನ್ನು ವಿಧಿಸುವದಕ್ಕೇ ಈ ಪ್ರಕರಣವು ಬಂದ್ದಿದೆ.

3. ಏಕೆಂದರೆ ಜ್ಞಾನಿಗೆ ಕರ್ಮವಿಲ್ಲವೆಂಬುದನ್ನು ತಿಳಿಸುವದಕ್ಕೇ ಆ ಶ್ಲೋಕವು ಬಂದಿರುತ್ತದೆ.

4. ಏಕೆಂದರೆ ಯಾವ ಕರ್ಮವೂ ಇಲ್ಲದ ಜ್ಞಾನಿಯು ಯಜ್ಞಾದಿಗಳನ್ನು ಮಾಡಬೇಕೊ, ಬಿಡಬೇಕೊ_ಎಂಬ ಪ್ರಶ್ನೆಯೇ ಏಳುವದಿಲ್ಲ.

ತ್ಯಾನೋ" (೨-೨೧) ಎಂಬ ಪ್ರದೇಶದಲ್ಲಿಯೂ ಮೂರನೆಯ ಅಧ್ಯಾಯದ ಮೊದಲಿನಲ್ಲಿಯೂ (ಯುಕ್ತಿಯಿಂದ) ತೋರಿಸಿಕೊಟ್ಟಿರುತ್ತೇವೆ.

## ಕರ್ಮಫಲತ್ಯಾಗವೇ ಸಾತ್ತ್ವಿಕತ್ಯಾಗ

(ಭಾಷ್ಯ)

೪೬೫. ತತ್ರ ಏತೇಷು ವಿಕಲ್ಪಭೇದೇಷು—

(ಭಾಷ್ಯಾರ್ಥ)

ಇಲ್ಲಿ ಈ ಬೇರೆಬೇರೆಯ ವಿಕಲ್ಪಗಳ ವಿಷಯ(ದಲ್ಲಿ) [1]—

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥**

೪. ಭರತಸತ್ತಮನೆ, ಈ ತ್ಯಾಗದಲ್ಲಿ ನಿಶ್ಚಯ(ವೇನೆಂಬು)ದನ್ನು ನನ್ನಿಂದ ಕೇಳಿ (ತಿಳಿದುಕೊ.) ಏಕೆಂದರೆ, ಪುರುಷವ್ಯಾಘ್ರನೆ, ತ್ಯಾಗವು ತ್ರಿವಿಧವೆಂದು ಸಂಪ್ರಕೀರ್ತಿತವಾಗಿದೆ.

(ಭಾಷ್ಯ)

೪೬೬. ನಿಶ್ಚಯಂ ಶೃಣು ಅವಧಾರಯ ಮೇ ಮಮ ವಚನಾತ್ । ತತ್ರ **ತ್ಯಾಗೇ** ತ್ಯಾಗಸಂನ್ಯಾಸವಿಕಲ್ಪೇ ಯಥಾದರ್ಶಿತೇ **ಭರತಸತ್ತಮ** ಭರತಾನಾಂ ಸಾಧುತಮ । **ತ್ಯಾಗೋ ಹಿ** ತ್ಯಾಗಸಂನ್ಯಾಸಶಬ್ದವಾಚ್ಯೋ ಹಿ ಯಃ ಅರ್ಥಃ ಸಃ ಏಕ ಏವ ಇತಿ ಅಭಿಪ್ರೇತ್ಯ ಆಹ 'ತ್ಯಾಗೋ ಹಿ' ಇತಿ । **ಪುರುಷವ್ಯಾಘ್ರ ತ್ರಿವಿಧಃ** ತ್ರಿಪ್ರಕಾರಃ ತಾಮಸಾದಿಪ್ರಕಾರೈಃ **ಸಂಪ್ರಕೀರ್ತಿತಃ** ಶಾಸ್ತ್ರೇಷು ಸಮ್ಯಕ್ ಕಥಿತಃ । ಯಸ್ಮಾತ್ ತಾಮಸಾದಿಭೇದೇನ ತ್ಯಾಗಸಂನ್ಯಾಸಶಬ್ದವಾಚ್ಯಃ ಅರ್ಥಃ ಅಧಿಕೃತಸ್ಯ ಕರ್ಮಿಣಃ ಅನಾತ್ಮಜ್ಞಸ್ಯ ತ್ರಿವಿಧಃ ಸಮ್ಭವತಿ ನ ಪರಮಾರ್ಥದರ್ಶಿನಃ–ಇತ್ಯಯಮ್ ಅರ್ಥಃ ದುರ್ಜ್ಞಾನಃ ತಸ್ಮಾತ್ ಅತ್ರ ತತ್ತ್ವಂ ನಾನ್ಯಃ ವಕ್ತುಂ ಸಮರ್ಥಃ । ತಸ್ಮಾತ್ ನಿಶ್ಚಯಂ ಪರಮಾರ್ಥಶಾಸ್ತ್ರಾರ್ಥವಿಷಯಮ್ ಅಧ್ಯವಸಾಯಮ್ ಐಶ್ವರಂ [2] ಮೇ ಮತ್ತಃ [3] ಶೃಣು ॥

---

1. ಇಲ್ಲಿ ಕರ್ಮವನ್ನು ಬಿಡಬೇಕು, ಮಾಡಬೇಕು—ಎಂಬ ಎರಡು ವಿಕಲ್ಪಗಳೇ ರುವಲ್ಲಿ ಬಹುವಚನವನ್ನುಪಯೋಗಿಸಿರುವದೇಕೆಂಬುದು ತಿಳಿಯುವಹಾಗಿಲ್ಲ.
2. 'ಐಶ್ವರಮ್ ಅಧ್ಯವಸಾಯಮ್' ಮ॥
3. 'ಮೇ ಮತ್ತಃ' ಮ॥ಮೈ॥ಗಳಲ್ಲಿ ಮಾತ್ರ ಇದೆ.

(ಭಾಷ್ಯಾರ್ಥ)

ಆದರಲ್ಲಿ ತ್ಯಾಗದಲ್ಲಿ, ತ್ಯಾಗಸಂನ್ಯಾಸಗಳ (ವಿಷಯಕ್ಕೆ) ಮೇಲೆ ತಿಳಿಸಿರುವ ವಿಕಲ್ಪದಲ್ಲಿ, ಎಲೈ ಭರತಸತ್ತಮನೆ, ಭರತದಲ್ಲಿ ಶ್ರೇಷ್ಠನಾದವನೆ, ನಿಶ್ಚಯವನ್ನು ನನ್ನಿಂದ ನನ್ನ ಮಾತಿನಿಂದ ಕೇಳಿ ಗೊತ್ತುಪಡಿಸಿಕೊ. ಏಕೆಂದರೆ **ತ್ಯಾಗವು-ತ್ಯಾಗ ಸಂನ್ಯಾಸ ಎಂಬ ಶಬ್ದಗಳಿಗೆ ವಾಚ್ಯವಾಗಿರುವ ಅರ್ಥವಿದೆಯಲ್ಲ, ಅದು ಒಂದೇ ಎಂಬ ಅಭಿಪ್ರಾಯದಿಂದ (ಇಲ್ಲಿ) 'ತ್ಯಾಗೋ ಹಿ' ಎಂದು (ತ್ಯಾಗಶಬ್ದವೊಂದನ್ನೇ) ಉಪಯೋಗಿಸಿರುತ್ತಾನೆ**— ಎಲೈ ಪುರುಷವ್ಯಾಘ್ರನೆ, ತ್ರಿವಿಧವು, ತಾಮಸವೇ ಮುಂತಾದ ಪ್ರಕಾರಗಳಿಂದ ಮೂರು ಪ್ರಕಾರವಾಗಿರುತ್ತದೆ ಎಂದು ಸಂಪ್ರಕೀರ್ತಿತವಾಗಿದೆ, ಶಾಸ್ತ್ರಗಳಲ್ಲಿ ಚೆನ್ನಾಗಿ ಹೇಳಲ್ಪಟ್ಟಿರುತ್ತದೆ. ತ್ಯಾಗ, ಸಂನ್ಯಾಸ-ಎಂಬ ಮಾತುಗಳಿಗೆ ವಾಚ್ಯವಾಗಿರುವ ವಿಷಯವು, ಅನಾತ್ಮಜ್ಞನಾದ ಅಧಿಕಾರಿಯಾದ [1] ಕರ್ಮಿಗೆ ತಾಮಸವೇ ಮುಂತಾದ ಭೇದಗಳಿಂದ ಮೂರು ವಿಧವಾಗಿ ಆಗಬಹುದು, ಪರಮಾರ್ಥದರ್ಶಿಗೆ (ಸಂಭವಿಸ)ಲಾರದು-ಎಂಬೀ ವಿಷಯವನ್ನು ತಿಳಿದುಕೊಳ್ಳುವದು ಕಷ್ಟವಾಗಿರುವದಲ್ಲವೆ, ಆದ್ದರಿಂದ ಈ (ವಿಷಯದಲ್ಲಿ) ತತ್ತ್ವವನ್ನು ಮತ್ತೊಬ್ಬನು ಹೇಳುವದಕ್ಕೆ ಶಕ್ತನಲ್ಲ; ಆದಕಾರಣ ಪರಮಾರ್ಥವಾಗಿ ಶಾಸ್ತ್ರದ ಅರ್ಥವೇನೆಂಬ ಬಗ್ಗೆ ನಿಶ್ಚಯದನ್ನು ಈಶ್ವರನಾದ (ನನ್ನ) ನಿರ್ಣಯವನ್ನು (ಮೇ = ಮತ್ತಃ) ನನ್ನಿಂದ ಕೇಳಿ (ತಿಳಿಯುವನಾಗು).

(ಭಾಷ್ಯ

೪೬೭. ಕಃ ಪುನರಸೌ ನಿಶ್ಚಯಃ ಇತಿ? ಅತ ಆಹ—

(ಭಾಷ್ಯಾರ್ಥ)

ಹಾಗಾದರೆ ಆ ನಿಶ್ಚಯವು ಯಾವದು? ಎಂದರೆ ಆದಕ್ಕೆ ಹೇಳುತ್ತಾನೆ. —

**ಯಜ್ಞೋ ದಾನಂ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ ೫ ॥**

೫. ಯಜ್ಞವು, ದಾನವು, ತಪಸ್ಸು-ಎಂಬ ಕರ್ಮವು ಬಿಡತಕ್ಕದ್ದಲ್ಲ, ಅದು ಕಾರ್ಯವೇ. ಯಜ್ಞವೂ ದಾನವೂ ತಪಸ್ಸೂ ತಿಳಿದವರಿಗೆ ಪಾವನಗಳಾಗಿರುತ್ತವೆ.

---

1. 'ಪ್ರಕೃತನಾದ' ಎಂದೂ ಅರ್ಥವನ್ನು ಮಾಡಬಹುದು.

(ಭಾಷ್ಯ)

೪೧೮. ಯಜ್ಞಃ, ದಾನಂ, ತಪಃ–ಇತ್ಯೇತತ್ ತ್ರಿವಿಧಂ ಕರ್ಮ ನ ತ್ಯಾಜ್ಯಮ್ ನ ತ್ಯಕ್ತವ್ಯಮ್ ಕಾರ್ಯಂ ಕರಣೀಯಮೇವ ತತ್ । ಕಸ್ಮಾತ್ ? ಯಜ್ಞಃ ದಾನಂ ತಪಶ್ಚೈವ ಪಾವನಾನಿ ವಿಶುದ್ಧಿಕರಾಣಿ ಮನೀಷಿಣಾಂ ಫಲಾನಭಿಸನ್ಧೀನಾಮ್ ಇತ್ಯೇತತ್ ||

(ಭಾಷ್ಯಾರ್ಥ)

ಯಜ್ಞ, ದಾನ, ತಪಸ್ಸು–ಎಂಬೀ ಮೂರು ಬಗೆಯ ಕರ್ಮವು ತ್ಯಾಜ್ಯವಲ್ಲ. ಬಿಡತಕ್ಕದ್ದಲ್ಲ; ಕಾರ್ಯವೇ, ಮಾಡತಕ್ಕದ್ದೇ. ಏಕೆಂದರೆ ಯಜ್ಞವೂ ದಾನವೂ ತಪಸ್ಸೂ ತಿಳಿದವರಿಗೆ ಫಲವನ್ನು ಕೋರದವರಿಗೆ ಎಂದರ್ಥ; (ಅಂಥವರಿಗೆ) ಪಾವನಗಳಾಗಿರುತ್ತವೆ. ವಿಶುದ್ಧಿಯನ್ನುಂಟುಮಾಡುವವಾಗಿರುತ್ತವೆ.

**ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ || ೬ ||**

೬. ಆದರೆ ಪಾರ್ಥನೆ, ಈ ಕರ್ಮಗಳನ್ನೂ, ಸಂಗವನ್ನೂ ಫಲಗಳನ್ನೂ ಬಿಟ್ಟು, ಮಾಡಬೇಕು ಎಂಬುದು ನನ್ನ ನಿಶ್ಚಿತವಾದ ಉತ್ತಮ ಮತವು.

(ಭಾಷ್ಯ)

೪೬೯. ಏತಾನ್ಯಪಿ ತು ಕರ್ಮಾಣಿ ಯಜ್ಞದಾನತಪಾಂಸಿ ಪಾವನಾನಿ ಉಕ್ತಾನಿ ಸಙ್ಗಮ್ ಆಸಕ್ತಿಂ ತೇಷು ತ್ಯಕ್ತ್ವಾ[1] ಫಲಾನಿ ಚ ತೇಷಾಂ ಪರಿತ್ಯಜ್ಯ[2] ಕರ್ತವ್ಯಾನಿ ಇತಿ ಅನುಷ್ಠೇಯಾನಿ ಇತಿ ಮೇ ಮಮ ಪಾರ್ಥ[3] ನಿಶ್ಚಿತಂ ಮತಮ್ ಉತ್ತಮಮ್ ||

(ಭಾಷ್ಯಾರ್ಥ)

ಆದರೆ ಈ ಯಜ್ಞದಾನತಪಸ್ಸುಗಳೆಂಬ ಕರ್ಮಗಳನ್ನು ಕೂಡ–ಪಾವನಗಳೆಂದು ಹೇಳಿದ (ಇವುಗಳನ್ನು ಕೂಡ)–ಅವುಗಳಲ್ಲಿ ಸಂಗವನ್ನೂ ಆಸಕ್ತಿಯನ್ನೂ

---

1. “ ಸಙ್ಗಂ ತ್ಯಕ್ತ್ವಾ ಸಙ್ಗಃ ಆಸಕ್ತಿಃ । ತಂ ತ್ಯಕ್ತ್ವಾ ತೇಷು ” ಮ||
2. ‘ ತ್ಯಕ್ತ್ವಾ ಪರಿತ್ಯಜ್ಯ ’ ಶಿ||ಗು||
3. ಮ||ದಲ್ಲಿ ಮಾತ್ರ ಈ ಮಾತು ಇದೆ; ಇರಬೇಕು.

ಬಿಟ್ಟು, ಅವುಗಳ ಫಲವನ್ನೂ ಬಿಟ್ಟು, ಮಾಡಬೇಕು, ಆಚರಿಸಬೇಕು ಎಂದು ಎಲೈ ಪಾರ್ಥನೆ, ನನ್ನ ನಿಶ್ಚಿತವಾದ ಉತ್ತಮ ಮತವು

## ಈ ಶ್ಲೋಕದಲ್ಲಿ ಏತಾನ್ಯಪಿ ಎಂಬುದರ ಅರ್ಥ

(ಭಾಷ್ಯ)

೪೭೦. "ನಿಶ್ಚಯಂ ಶೃಣು ಮೇ ತತ್ರ" (೧೮-೪) ಇತಿ ಪ್ರತಿಜ್ಞಾಯ ಪಾವನತ್ವಂ ಚ ಹೇತುಮ್[1] ಉಕ್ತ್ವಾ ಏತಾನ್ಯಪಿ ತು ಕರ್ಮಾಣಿ ಕರ್ತವ್ಯಾನಿ ಇತ್ಯೇತತ್ ನಿಶ್ಚಿತಂ ಮತಮುತ್ತಮಮ್-ಇತಿ ಪ್ರತಿಜ್ಞಾತಾರ್ಥೋಪಸಂಹಾರ ಏವ ನಾಪೂರ್ವಾರ್ಥಂ ವಚನಮ್[2]। 'ಏತಾನ್ಯಪಿ' ಇತಿ ಪ್ರಕೃತಸಂನಿಕೃಷ್ಟಾರ್ಥತ್ವೋಪಪತ್ತೇಃ। ಸಾಸಙ್ಗಸ್ಯ ಫಲಾರ್ಥಿನಃ ಬನ್ಧಹೇತವಃ ಏತಾನ್ಯಪಿ ಕರ್ಮಾಣಿ ಮುಮುಕ್ಷೋಃ ಕರ್ತವ್ಯಾನಿ ಇತಿ ಅಪಿಶಬ್ದಸ್ಯ ಅರ್ಥಃ ನ ತು ಅನ್ಯಾನಿ ಕರ್ಮಾಣಿ ಅಪೇಕ್ಷ್ಯ 'ಏತಾನ್ಯಪಿ' ಇತ್ಯುಚ್ಯತೇ ॥

(ಭಾಷ್ಯಾರ್ಥ)

"ಆ (ವಿಷಯದಲ್ಲಿ) ನನ್ನ ನಿಶ್ಚಯವನ್ನು ಕೇಳು" (೧೮-೪) ಎಂದು ಪ್ರತಿಜ್ಞೆ ಮಾಡಿ (ಅವುಗಳು) ಪಾವನವಾಗಿವೆ ಎಂಬುದನ್ನು (ಅವುಗಳನ್ನು ಮಾಡಬೇಕೆಂಬುದಕ್ಕೆ) ಹೇತುವಾಗಿ ಹೇಳಿ "ಈ ಕರ್ಮಗಳನ್ನು ಕೂಡ ಮಾಡಬೇಕು ಎಂಬಿದು (ನನ್ನ) ನಿಶ್ಚಿತವಾದ ಮತವು" ಎಂದು ಹೇಳಿರುವದು ಮೊದಲು (ಹೇಳುತ್ತೇನೆಂದು) ಪ್ರತಿಜ್ಞೆಮಾಡಿದ್ದದ್ದರ ಉಪಸಂಹಾರವೇ ಹೊರತು (ಈ) ಮಾತಿಗೆ ಹೊಸ ಅರ್ಥವೇನೂ ಇರುವದಿಲ್ಲ. ಏಕೆಂದರೆ 'ಇವುಗಳನ್ನು ಕೂಡ' ಎಂದು (ಸರ್ವನಾಮವನ್ನುಪಯೋಗಿಸಿರುವದರಿಂದ) ಪ್ರಕೃತವಾಗಿರುವ ಹತ್ತಿರದಲ್ಲಿ (ಹೇಳಿದ) ವಿಷಯವನ್ನೇ (ಸೂಚಿಸಿದೆ) ಎಂಬುದು ಯುಕ್ತವಾಗಿರುತ್ತದೆ. ಆಸಕ್ತಿಯಿಂದೊಡಗೂಡಿ ಫಲಾರ್ಥಿಯಾಗಿ ಮಾಡುವವನಿಗೆ ಬಂಧಕ್ಕೆ ಕಾರಣವಾಗಿದ್ದರೂ ಈ ಕರ್ಮಗಳನ್ನು ಮುಮುಕ್ಷುವು ಮಾಡಬೇಕು ಎಂಬುದು 'ಅಪಿ' (ಕೂಡ) ಎಂಬ ಶಬ್ದದ ಅರ್ಥವಾಗಿರುತ್ತದೆಯೇ[3] ಹೊರತು ಬೇರೆ ಕರ್ಮಗಳನ್ನು ಮನಸ್ಸಿನಲ್ಲಿಟ್ಟುಕೊಂಡು 'ಏತಾ

---

1. 'ಸಹೇತುಕಮ್' ಪಾ॥
2. 'ನಾಪೂರ್ವಾರ್ಥವಚನಮ್' ಪಾ॥
3. ಇಂಥ ಕರ್ಮಗಳನ್ನು ಕೂಡ ಮಾಡಲೇಬೇಕು ಎಂದರ್ಥ; ಫಲದಲ್ಲಿ ಆಸಕ್ತಿಯಿಲ್ಲದೆ ಮಾಡುವದರಿಂದ ಬಂಧಕವಾಗುವದಿಲ್ಲ_ಎಂಬುದು ಹೇಗೆ ಮಾಡಬೇಕೆಂಬುದನ್ನು ತಿಳಿಸುವದಕ್ಕೆ. ಅಜ್ಞನಾದ ಮುಮುಕ್ಷುವು ಕರ್ಮವನ್ನು ಮಾಡುವದೇ ಒಳ್ಳೆಯದು ಎಂಬ ಗೀತಾರ್ಥವನ್ನೇ ಇಲ್ಲಿ ಉಪಸಂಹಾರಮಾಡಿದಂತಾಯಿತು.

ನ್ಯಪಿ ' (ಇವುಗಳನ್ನುಕೂಡ [1]) ಎಂದು ಹೇಳಿರುವದಿಲ್ಲ.

(ಭಾಷ್ಯ)

೪೭೧. ಅನ್ಯೇ ತು ವರ್ಣಯನ್ತಿ–" ನಿತ್ಯಾನಾಂ ಕರ್ಮಣಾಂ ಫಲಾಭಾವಾತ್ ಸಙ್ಗಂ ತ್ಯಕ್ತ್ವಾ ಫಲಾನಿ ಚ " ಇತಿ ನೋಪಪದ್ಯತೇ । ಅತಃ [2] ' ಏತಾನ್ಯಪಿ ' ಇತಿ ಯಾನಿ ಕಾಮ್ಯಾನಿ ಕರ್ಮಾಣಿ ನಿತ್ಯೇಭ್ಯಃ ಅನ್ಯಾನಿ, ಏತಾನ್ಯಪಿ ಕರ್ತವ್ಯಾನಿ ಕಿಮುತ ಯಜ್ಞದಾನತಪಾಂಸಿ ನಿತ್ಯಾನಿ [3] ಇತಿ । ತತ್ ಅಸತ್ । ನಿತ್ಯಾನಾಮಪಿ [4] ಕರ್ಮಣಾಮ್ ಇಹ ಫಲವತ್ತ್ವಸ್ಯ ಉಪಪಾದಿತತ್ವಾತ್ " ಯಜ್ಞೋ ದಾನಂ ತಪಶ್ಚೈವ ಪಾವನಾನಿ " (೧೮।೫) ಇತ್ಯಾದಿವಚನೇನ [5] । ನಿತ್ಯಾನ್ಯಪಿ ಕರ್ಮಾಣಿ ಬನ್ಧಹೇತುತ್ವಾಶಙ್ಕಯಾ ಜಿಹಾಸೋಃ ಮುಮುಕ್ಷೋಃ ಕುತಃ ಕಾಮ್ಯೇಷು ಪ್ರಸಙ್ಗಃ? " ದೂರೇಣ ಹ್ಯವರಂ ಕರ್ಮ " (೨-೪೯) ಇತಿ ಚ ನಿನ್ದಿತತ್ವಾತ್ । " ಯಜ್ಞಾರ್ಥಾತ್ ಕರ್ಮಣೋಽನ್ಯತ್ರ " (೩-೯) ಇತಿ ಚ ಕಾಮ್ಯಕರ್ಮಣಾಂ ಬನ್ಧಹೇತುತ್ವಸ್ಯ ನಿಶ್ಚಿತತ್ವಾತ್ । " ತ್ರೈಗುಣ್ಯವಿಷಯಾ ವೇದಾಃ " (೨-೪೫) " ತ್ರೈವಿದ್ಯಾ ಮಾಂ ಸೋಮಪಾಃ " (೯-೨೦), " ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ " (೯-೨೧) ಇತಿ ಚ । ದೂರವ್ಯವಹಿತತ್ವಾಚ್ಚ ನ ಕಾಮ್ಯೇಷು ' ಏತಾನ್ಯಪಿ ' ಇತಿ ವ್ಯಪದೇಶಃ ॥

(ಭಾಷ್ಯಾರ್ಥ)

**ಮತ್ತೆ ಕೆಲವರಾದರೋ** [6] **(ಈ ವಾಕ್ಯದರ್ಥವನ್ನು ಹೀಗೆ) ವರ್ಣಿಸುತ್ತಾರೆ :** ನಿತ್ಯಕರ್ಮಗಳಿಗೆ ಫಲವಿಲ್ಲದಿರುವದರಿಂದ (ಅವುಗಳ) ಸಂಗವನ್ನೂ ಫಲವನ್ನೂ ಬಿಟ್ಟು (ಮಾಡಬೇಕು)–ಎಂಬುದು (ಅವಕ್ಕೆ) ಹೊಂದುವದಿಲ್ಲ. ಆದ್ದರಿಂದ ' ಏತಾನ್ಯಪಿ ' (ಇವುಗಳನ್ನುಕೂಡ) ಎಂದರೆ ನಿತ್ಯಕರ್ಮಗಳಿಂದ ಬೇರೆಯಾದ

---

1. ಬೇರೆಯ ಕರ್ಮಗಳನ್ನೂ ಮಾಡಬೇಕು, ನಿತ್ಯಕರ್ಮಗಳನ್ನೂ ಮಾಡಬೇಕು.
2. ನಿ|| ಪಾಠದಲ್ಲಿಲ್ಲ.
3. ಮು||ಮೈ||ಗಳಲ್ಲಿಲ್ಲ.
4. ' ಅಸ್ಮಾಭಿಃ ನಿತ್ಯಾನಾಮಪಿ ' ಎಂಬ ಮು||ದಲ್ಲಿ ' ಅಸ್ಮಾಭಿಃ ' ಬೇಕಿಲ್ಲ.
5. ' ಇತ್ಯಾದಿನಾ ವಚನೇನ ' ಮು||ಮೈ||
6. ಮೀಮಾಂಸಕರ ಅಭಿಪ್ರಾಯವನ್ನೇ ಇಟ್ಟುಕೊಂಡಿರುವ ವೃತ್ತಿಕಾರರು. ೪–೧೮ ರ ಭಾಷ್ಯವನ್ನು ನೋಡಿ.

ಕಾಮ್ಯಕರ್ಮಗಳಿವೆಯಲ್ಲ, 'ಇವುಗಳನ್ನು ಕೂಡ ಮಾಡಬೇಕು; (ಹೀಗಿರುವಲ್ಲಿ) ಯಜ್ಞದಾನತಪಸ್ಸುಗಳೆಂಬ ನಿತ್ಯ (ಕರ್ಮಗಳನ್ನು ಮಾಡಬೇಕೆಂದು ಹೇಳುವ) ದೇನು ? (ಎಂದರ್ಥವಂತೆ). ಆ (ಅಭಿಪ್ರಾಯವು) ಸರಿಯಲ್ಲ. ಏಕೆಂದರೆ "ಯಜ್ಞವೂ ದಾನವೂ ತಪಸ್ಸೂ ಪಾವನಗಳು" (೧೮-೫) ಮುಂತಾದ ವಚನದಿಂದ ನಿತ್ಯಕರ್ಮಗಳಿಗೂ ಫಲವುಂಟೆಂದು ಇಲ್ಲಿ ತೋರಿಸಿಕೊಟ್ಟಿರುತ್ತದೆ. ನಿತ್ಯಕರ್ಮಗಳನ್ನುಕೂಡ ಬಂಧಕ್ಕೆ ಕಾರಣವೆಂಬ ಶಂಕೆಯಿಂದ ಬಿಡಲೆಳಸುವ ಮುಮುಕ್ಷುವಿಗೆ ಕಾಮ್ಯಕರ್ಮಗಳಲ್ಲಿ ಪ್ರಸಕ್ತಿ ಎಲ್ಲಿಯದು ? ಏಕೆಂದರೆ "ಕೀಳಾದ ಕರ್ಮವು (ಬುದ್ಧಿಯೋಗಕರ್ಮಕ್ಕಿಂತಲೂ) ದೂರ" (೨-೪೯), ಎಂದು (ಕಾಮ್ಯಕರ್ಮವನ್ನು) ನಿಂದಿಸಿರುತ್ತದೆ; "ಯಜ್ಞಾರ್ಥವಾಗಿರುವ ಕರ್ಮಗಳನ್ನು ಬಿಟ್ಟರೆ (ಮಿಕ್ಕ ಕರ್ಮವು ಜನಕ್ಕೆ ಬಂಧಕವು)" ಎಂದೂ "ವೇದಗಳು ತ್ರೈಗುಣ್ಯವಿಷಯವಾಗಿರುತ್ತವೆ" (೨-೪೫), "ತ್ರೈವಿದ್ಯರು ಸೋಮವನ್ನು ಕುಡಿದು ನನ್ನನ್ನು . . . ಪುಣ್ಯವು ಕ್ಷೀಣವಾಗಲು ಮರ್ತ್ಯಲೋಕವನ್ನು ಹೊಗುವರು" (೯-೨೦, ೨೧) ಎಂದೂ ಕಾಮ್ಯಕರ್ಮಗಳು ಬಂಧಕ್ಕೆ ಕಾರಣವೆಂದು ನಿಶ್ಚಯಿಸಲಾಗಿದೆ. ಇದಲ್ಲದೆ (ಕಾಮ್ಯಕರ್ಮವೆಂಬ ಮಾತು) ದೂರದಲ್ಲಿದ್ದು ನಡುವೆ (ಬೇರೆಯ ವಿಷಯವು) ಬಂದಿರುವದರಿಂದಲೂ "ಕರ್ಮಗಳನ್ನು ಹೇಳಿದೆ (ಎನ್ನುವದಕ್ಕಾಗುವ) ದಿಲ್ಲ[1].

## ಅಧಿಕಾರಿಯು ನಿತ್ಯಕರ್ಮವನ್ನು ಬಿಡಬಾರದು

(ಭಾಷ್ಯ)

೪೭೨. ತಸ್ಮಾತ್ ಅಜ್ಞಸ್ಯ ಅಧಿಕೃತಸ್ಯ ಮುಮುಕ್ಷೋಃ—

(ಭಾಷ್ಯಾರ್ಥ)

ಆದ್ದರಿಂದ ಅಜ್ಞನಾದ ಅಧಿಕೃತನಾದ ಮುಮುಕ್ಷುವಿಗೆ—

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ ೭ ॥**

೭. ನಿಯತವಾದ ಕರ್ಮದ ಸಂನ್ಯಾಸವಾದರೋ ಯುಕ್ತವಲ್ಲ; ಮೋಹದಿಂದ ಅದನ್ನು ಪರಿತ್ಯಜಿಸುವದು ತಾಮಸವೆಂದು ಹೇಳಲ್ಪಡುವದು.

---

1. ಕಾಮ್ಯಕರ್ಮದ ವಿಚಾರವಿರುವದು ೨ನೆಯ ಶ್ಲೋಕದಲ್ಲಿ; ಯಜ್ಞದಾನಾದಿಗಳ ವಿಚಾರವು ಬಂದಿರುವದು ಹಿಂದಿನ ಶ್ಲೋಕದಲ್ಲಿ. ಆದ್ದರಿಂದ ಏತಾನಿ ಎಂಬ ಸರ್ವನಾಮವು ಸಮೀಪತರವಾದ ಯಜ್ಞಾದಿಗಳನ್ನು ಪರಾಮರ್ಶಿಸುತ್ತದೆ ಎಂಬುದೇ ಯುಕ್ತ—ಎಂದು ಭಾವ.

(ಭಾಷ್ಯ)

೪೭೩. ನಿಯತಸ್ಯ ತು ನಿತ್ಯಸ್ಯ ಸಂನ್ಯಾಸಃ ಪರಿತ್ಯಾಗಃ ಕರ್ಮಣಃ ನ ಉಪಪದ್ಯತೇ । ಅಜ್ಞಸ್ಯ ಪಾವನತ್ವಸ್ಯ ಇಷ್ಟತ್ವಾತ್ । ಮೋಹಾತ್ ಅಜ್ಞಾನಾತ್ ತಸ್ಯ ನಿಯತಸ್ಯ ಪರಿತ್ಯಾಗಃ–ನಿಯತಂ ಚ ಅವಶ್ಯಂ ಕರ್ತವ್ಯಮ್ ತ್ಯಜ್ಯತೇ ಚ ಇತಿ ವಿಪ್ರತಿಷಿದ್ಧಮ್ । ಅತಃ ಮೋಹನಿಮಿತ್ತಃ ಪರಿತ್ಯಾಗಃ–ತಾಮಸಃ ಪರಿಕೀರ್ತಿತಃ । ಮೋಹಶ್ಚ ತಮಃ[1] ಇತಿ ॥

(ಭಾಷ್ಯಾರ್ಥ)

ಆದರೆ ನಿಯತವಾದ ನಿತ್ಯವಾದ, ಕರ್ಮದ ಸಂನ್ಯಾಸವು (ಅದನ್ನು) ಬಿಡುವದು, ಯುಕ್ತವಲ್ಲ; ಏಕೆಂದರೆ ಅಜ್ಞನಾದವನಿಗೆ (ಅದು) ಶುದ್ಧಿಕರವೆಂಬುದು ಒಪ್ಪಾಗಿರುತ್ತದೆ. ಮೋಹದಿಂದ ಅಜ್ಞಾನದಿಂದ ಆ ನಿಯತ (ಕರ್ಮವನ್ನು) ಬಿಡುವದು–ನಿಯತವೂ ಅವಶ್ಯವಾಗಿ ಮಾಡತಕ್ಕದ್ದೂ ಆಗಿದೆ, (ಆದರೂ ಅದನ್ನು) ಬಿಡಬಹುದು ಎಂಬುದು ವಿರುದ್ಧವು. ಆದ್ದರಿಂದ ಮೋಹನಿಮಿತ್ತವಾದ ತ್ಯಾಗವು–ತಾಮಸವು (ಎಂದು) ಹೇಳಲ್ಪಡುತ್ತದೆ. (ಏಕೆಂದರೆ) ಮೋಹವು ತಮಸ್ಸೇ[2].

**ದುಃಖಮಿತ್ಯೇವ ಯತ್ ಕರ್ಮ ಕಾಯಕ್ಲೇಶಭಯಾತ್ ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥**

೮. ಯಾವನು ದುಃಖವೆಂದೇ ಕರ್ಮವನ್ನು ಕಾಯಕ್ಲೇಶಭಯದಿಂದ ತ್ಯಜಿಸುವನೋ ಅವನು ರಾಜಸ ತ್ಯಾಗವನ್ನು ಮಾಡುವದರಿಂದ ತ್ಯಾಗಫಲವನ್ನು ಹೊಂದುವದೇ ಇಲ್ಲ.

(ಭಾಷ್ಯ)

೪೭೪. ಕಿಂಚ ದುಃಖಮ್ ಇತ್ಯೇವ ಯತ್[3] ಕರ್ಮ ಕಾಯಕ್ಲೇಶಭಯಾತ್ ಶರೀರದುಃಖಭಯಾತ್ ಪರಿತ್ಯಜೇತ್ ಸ ಕೃತ್ವಾ ರಾಜಸಂ ರಜೋನಿರ್ವರ್ತ್ಯಂ ತ್ಯಾಗಂ ನೈವ ತ್ಯಾಗಫಲಂ ಜ್ಞಾನಪೂರ್ವಕಸ್ಯ ಸರ್ವಕರ್ಮತ್ಯಾಗಸ್ಯ ಫಲಂ ಮೋಕ್ಷಾಖ್ಯಂ ನ ಲಭೇತ್ ನೈವ ಲಭೇತ ॥

---

1. ' ತಾಮಸಃ ' ಮ॥ಮೈ॥
2. ತಮಸ್ಸಿನಿಂದ ಆಗಿರುವದೇ ಎಂದರ್ಥ.
3. ' ಯಃ ' ಎಂದಿರಬೇಕಾಗಿತ್ತು; ಅನುವಾದದ ಟಿಪ್ಪಣಿಯನ್ನು ನೋಡಿ.

(ಭಾಷ್ಯಾರ್ಥ)

ಮತ್ತು ಯಾವನು[1] ದುಃಖವು ಎಂದೇ ಕಾಯಕ್ಲೇಶಭಯದಿಂದ ಶರೀರಕ್ಕೆ ದುಃಖ(ವಾಗುವದೆಂಬ) ಅಂಜಿಕೆಯಿಂದ ಕರ್ಮವನ್ನು ತ್ಯಜಿಸುವನೋ ಬಿಡುವನೋ ಅವನು ರಾಜಸವಾದ ರಜೋ (ಗುಣ)ದಿಂದಾಗುವ ತ್ಯಾಗವನ್ನು ಮಾಡುವನಾದ್ದರಿಂದ ತ್ಯಾಗಫಲವನ್ನು (ಹೊಂದುವದೇ) ಇಲ್ಲ ; ಜ್ಞಾನಪೂರ್ವಕವಾಗಿ (ಮಾಡುವ) ಸರ್ವ ಕರ್ಮತ್ಯಾಗದ ಫಲವನ್ನು ಮೋಕ್ಷವೆಂಬ (ಫಲವನ್ನು)[2] ಹೊಂದುವದಿಲ್ಲ, ಪಡೆಯಲೇ ಆರನು.

(ಭಾಷ್ಯ)

೪೭೫. ಕಃ ಪುನಃ ಸಾತ್ತ್ವಿಕಸ್ತ್ಯಾಗಃ ಇತಿ ? ಆಹ—

(ಭಾಷ್ಯಾರ್ಥ)

(ಹಾಗಾದರೆ) ಸಾತ್ತ್ವಿಕತ್ಯಾಗವೆಂಬುದಾದರೂ ಯಾವದು ? ಎಂದರೆ ಹೇಳುತ್ತಾನೆ :—

**ಕಾರ್ಯಮಿತ್ಯೇವ ಯತ್ ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಙ್ಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯ ॥**

೯. ಅರ್ಜುನನೆ, ಯಾವ ನಿತ್ಯಕರ್ಮವು ಕಾರ್ಯವು ಎಂದೇ ಸಂಗವನ್ನೂ ಫಲವನ್ನೂ ಬಿಟ್ಟು ಮಾಡಲ್ಪಡುತ್ತದೆಯೋ ಆ ತ್ಯಾಗವು ಸಾತ್ತ್ವಿಕವೆನಿಸುವದು.

(ಭಾಷ್ಯ)

೪೭೬. ಕಾರ್ಯಂ ಕರ್ತವ್ಯಮ್ ಇತ್ಯೇವ ಯತ್ ಕರ್ಮ ನಿಯತಂ ನಿತ್ಯಂ ಕ್ರಿಯತೇ ನಿರ್ವರ್ತ್ಯತೇ ಹೇ ಅರ್ಜುನ । ಸಙ್ಗಂ ತ್ಯಕ್ತ್ವಾ ಫಲಂ ಚೈವ । ಏತತ್ ನಿತ್ಯಾನಾಂ ಕರ್ಮಣಾಂ ಫಲವತ್ತ್ವೇ ಭಗವದ್ವಚನಂ ಪ್ರಮಾಣಮ್ ಇತಿ[3] ಅವ್ರೋ

---

1. ಮೂಲದಲ್ಲಿರುವ 'ಯತ್' ಎಂಬುದು 'ಯಃ' ಎಂದೇ ಇರಬೇಕಿತ್ತು. ಯಾರು ?–ಎಂಬರ್ಥದಲ್ಲಿ ಸಾಮಾನ್ಯವಾಚಿಯಾದ ನಪುಂಸಕವನ್ನುಪಯೋಗಿಸಿದೆ ಎಂದು ಕೆಲವರು ಅಭಿಪ್ರಾಯಪಟ್ಟಿರುತ್ತಾರೆ.

2. ತ್ಯಾಗಫಲವಾದ ಮುಕ್ತಿಯು ದೊರಕುವವನಿಗೆ ದುಃಖಪರಿಹಾರವೆಂಬ ಫಲದಾಸೆ ಇರಬಾರದು ; ಆದ್ದರಿಂದ ಈ ತ್ಯಾಗಕ್ಕೆ ಮುಕ್ತಿಯು ದೊರೆಯಲಾರದು–ಎಂದು ಭಾವ.

3. ಮ॥ದಲ್ಲಿ ಮಾತ್ರ ಇದೆ.

ಚಾಮ । ಅಥವಾ ಯದ್ಯಪಿ ಫಲಂ ನ ಶ್ರೂಯತೇ ನಿತ್ಯಸ್ಯ ಕರ್ಮಣಃ, ತಥಾಪಿ ನಿತ್ಯಂ ಕರ್ಮ ಕೃತಮ್ ಆತ್ಮಸಂಸ್ಕಾರಂ ಪ್ರತ್ಯವಾಯಪರಿಹಾರಂ ವಾ ಫಲಂ ಕರೋತಿ ಆತ್ಮನಃ ಇತಿ ಕಲ್ಪಯಿತ್ಯೇವ ಅಜ್ಞಃ। ತತ್ರ ತಾಮಪಿ ಕಲ್ಪನಾಂ ನಿವಾರಯತಿ "ಫಲಂ ತ್ಯಕ್ತ್ವಾ" ಇತ್ಯನೇನ। ಅತಃ ಸಾಧೂಕ್ತಂ "ಸಙ್ಗಂ ತ್ಯಕ್ತ್ವಾ ಫಲಂ ಚ" ಇತಿ । ಸ ತ್ಯಾಗಃ ನಿತ್ಯಕರ್ಮಸು ಸಙ್ಗಫಲಪರಿತ್ಯಾಗಃ ಸಾತ್ತ್ವಿಕಃ ಸತ್ತ್ವನಿರ್ವೃತ್ತಃ [1] ಮತಃ ಅಭಿಪ್ರೇತಃ ॥

(ಭಾಷ್ಯಾರ್ಥ)

ಕಾರ್ಯವು ಮಾಡತಕ್ಕದ್ದು ಎಂದೇ ಯಾವ ನಿಯತವಾದ ನಿತ್ಯವಾದ ಕರ್ಮವನ್ನು ಮಾಡುವರೋ ಆಚರಿಸುವರೋ, ಎಲೈ ಅರ್ಜುನನೆ, ಸಂಗವನ್ನೂ ಫಲವನ್ನೂ ಬಿಟ್ಟು (ಮಾಡುವರೋ ಎಂದರ್ಥ). **ನಿತ್ಯಕರ್ಮಗಳಿಗೆ ಫಲವುಂಟೆಂಬುದಕ್ಕೆ ಈ ಭಗವದ್ವಚನವು ಪ್ರಮಾಣವು ಎಂದು (ಹಿಂದೆ)[2] ಹೇಳಿರುತ್ತೇವೆ. ಅಥವಾ ನಿತ್ಯಕರ್ಮಕ್ಕೆ ಫಲವನ್ನು (ಶಾಸ್ತ್ರದಲ್ಲಿ) ಹೇಳದಿದ್ದರೂ[3] ನಿತ್ಯಕರ್ಮವನ್ನು ಮಾಡುವದರಿಂದ ಅಂತಃಕರಣಸಂಸ್ಕಾರವೋ, ಪ್ರತ್ಯವಾಯಪರಿಹಾರವೋ (ಯಾವದಾದರೊಂದು) ಫಲವನ್ನು ತನಗೆ ಮಾಡಿಕೊಡುವದು ಎಂದು ಅಜ್ಞನು ಕಲ್ಪಿಸಿಯೇ ಕಲ್ಪಿಸುತ್ತಾನೆ. ಇಲ್ಲಿ ಆ ಕಲ್ಪನೆಯನ್ನು ಕೂಡ 'ಫಲವನ್ನು ಬಿಟ್ಟು' ಎಂಬ (ಮಾತಿ)ನಿಂದ (ಭಗವಂತನು) ನಿವಾರಣೆ ಮಾಡಿರುತ್ತಾನೆ[4].** ಆದ್ದರಿಂದ 'ಸಂಗವನ್ನೂ ಫಲವನ್ನೂ ಬಿಟ್ಟು' ಎಂದು ಹೇಳಿದ್ದೂ ಸರಿಯೇ. ಆ ತ್ಯಾಗವು ನಿತ್ಯಕರ್ಮಗಳಲ್ಲಿ ಸಂಗಫಲಗಳನ್ನು ಬಿಟ್ಟುಬಿಡುವದು ಸಾತ್ತ್ವಿಕವು, ಸತ್ತ್ವದಿಂದಾದದ್ದು ಎಂದು ಮತವು (ನನ್ನ) ಅಭಿಪ್ರಾಯವು.

---

1. 'ಸತ್ತ್ವಗುಣನಿರ್ವೃತ್ತಃ' ಮ॥

2. ೧೮-೬ರಲ್ಲಿ. ಸಂಗವನ್ನೂ ಫಲವನ್ನೂ ಬಿಡಬೇಕು ಎಂದದ್ದರಿಂದ ಇವುಗಳಿಗೆ ಫಲವುಂಟೆಂಬುದು ಭಗವಂತನ ಅಭಿಪ್ರಾಯವಾಗಿರಬೇಕೆಂದು ಏರ್ಪಡುತ್ತದೆ.

3. ಇದು ಪ್ರೌಢಿವಾದದಿಂದ ಆಡಿದ ಮಾತು; ಏಕೆಂದರೆ ನಿತ್ಯಕರ್ಮಕ್ಕೂ ಫಲವುಂಟೆಂಬ ಶಾತಪಥಶ್ರುತಿಯನ್ನು ಬೃ. ಭಾ. ೪-೪-೨೨ರಲ್ಲಿ ಹೇಳಿದೆ. ಇಲ್ಲಿ ಫಲವುಂಟೆಂಬುದಕ್ಕೆ ಗಮಕವಾದ ವಾಕ್ಯಗಳನ್ನು ಉದಾಹರಿಸಿದೆ.

4. ಅಜ್ಞನು ಕಲ್ಪಿಸುತ್ತಾನೆ ಎಂದದ್ದರಿಂದ ಆವನಿಗೆ ಆ ಫಲವಾಗುವದಿಲ್ಲವೆಂದೇನೂ ಅಭಿಪ್ರಾಯವಲ್ಲ. ವ್ಯವಹಾರದೃಷ್ಟಿಯಿಂದ ಏನಾದರೊಂದು ಪ್ರಯೋಜನವು ಇರಲೇಬೇಕಷ್ಟೆ; ಆ ಪ್ರಯೋಜನವನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ ಕರ್ಮವನ್ನು ಮಾಡಬೇಕು ಎಂಬುದೇ ವಿವಕ್ಷಿತ.

(ಭಾಷ್ಯ)

೪೭೭. ನನು ಕರ್ಮಪರಿತ್ಯಾಗಃ ತ್ರಿವಿಧಃ ಸಂನ್ಯಾಸಃ ಇತಿ ಚ ಪ್ರಕೃತಮ್[1]। ತತ್ರ ತಾಮಸಃ ರಾಜಸಶ್ಚ ಉಕ್ತಃ ತ್ಯಾಗಃ। ಕಥಮಿಹ ಸಙ್ಗಫಲತ್ಯಾಗಃ ತೃತೀಯತ್ವೇನ ಉಚ್ಯತೇ। ಯಥಾ ತ್ರಯೋ ಬ್ರಾಹ್ಮಣಾ ಆಗತಾಃ, ತತ್ರ ಷಡಙ್ಗವಿದೌ ದ್ವೌ, ಕ್ಷತ್ರಿಯಸ್ತೃತೀಯಃ ಇತಿ, ತದ್ವತ್। ನೈಷ ದೋಷಃ। ತ್ಯಾಗಸಾಮಾನ್ಯೇನ ಸ್ತುತ್ಯರ್ಥತ್ವಾತ್। ಅಸ್ತಿ ಹಿ ಕರ್ಮಸಂನ್ಯಾಸಸ್ಯ ಫಲಾಭಿಸನ್ಧಿತ್ಯಾಗಸ್ಯ ಚ ತ್ಯಾಗತ್ವಸಾಮಾನ್ಯಮ್। ತತ್ರ ರಾಜಸತಾಮಸತ್ವೇನ ಕರ್ಮತ್ಯಾಗನಿನ್ದಯಾ ಕರ್ಮಫಲಾಭಿಸನ್ಧಿತ್ಯಾಗಃ ಸಾತ್ತ್ವಿಕತ್ವೇನ ಸ್ತೂಯತೇ "ಸ ತ್ಯಾಗಃ ಸಾತ್ತ್ವಿಕೋ ಮತಃ" ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :—ಕರ್ಮಪರಿತ್ಯಾಗವು ಮೂರು ವಿಧವಾದ ಸಂನ್ಯಾಸವು ಎಂಬುದು ಇಲ್ಲಿ ಪ್ರಕೃತ. ಇವುಗಳಲ್ಲಿ ತಾಮಸವಾದ ಮತ್ತು ರಾಜಸವಾದ ತ್ಯಾಗವನ್ನು ಹೇಳಲಾಯಿತು. ಇಲ್ಲಿ ಸಂಗಫಲತ್ಯಾಗವು ಮೂರನೆಯದೆಂದು ಹೇಳಿದೆಯಲ್ಲ, (ಇದು) ಹೇಗೆ (ಸರಿ)? "ಮೂರು (ಜನ) ಬ್ರಾಹ್ಮಣರು ಬಂದರು; ಅವರಲ್ಲಿ ಆರು ಅಂಗಗಳನ್ನು ಬಲ್ಲವರು ಇಬ್ಬರು, ಕ್ಷತ್ರಿಯನು ಮೂರನೆಯವನು" ಎಂದಂತೆ (ಆಗಲಿಲ್ಲವೆ, ಇದು)?

(ಪರಿಹಾರ) :—ಇದೇನೂ ತಪ್ಪಲ್ಲ. ಏಕೆಂದರೆ ತ್ಯಾಗವೆಂಬ ಸಾಮಾನ್ಯ (ಹೋಲಿಕೆಯಿಂದ) ಹೊಗಳುವದಕ್ಕೆ (ಹೀಗೆಂದಿದೆ). ಕರ್ಮಸಂನ್ಯಾಸಕ್ಕೂ ಫಲಾಭಿಸಂಧಿಯ ತ್ಯಾಗಕ್ಕೂ ತ್ಯಾಗತ್ವವೆಂಬುದು ಸಮಾನವಾಗಿರುತ್ತದೆ. ಇವುಗಳಲ್ಲಿ ಕರ್ಮತ್ಯಾಗವನ್ನು[2] ರಾಜಸವೆಂದೂ ತಾಮಸವೆಂದೂ ನಿಂದಿಸಿ ಕರ್ಮಫಲದ ಅಭಿಲಾಷೆಯನ್ನು ಬಿಡುವದು ಸಾತ್ತ್ವಿಕವೆಂದು "ಆ ತ್ಯಾಗವು ಸಾತ್ತ್ವಿಕವೆಂದು ಮತವು" ಎಂಬ (ವಚನದಿಂದ) ಹೊಗಳಿರುತ್ತದೆ.

## ಸಾತ್ತ್ವಿಕತ್ಯಾಗದ ಫಲ

(ಭಾಷ್ಯ)

೪೭೮. ಯಸ್ತು ಅಧಿಕೃತಃ ಸಙ್ಗಂ ತ್ಯಕ್ತ್ವಾ ಫಲಾಭಿಸನ್ಧಿಂ ಚ ನಿತ್ಯಂ ಕರ್ಮ ಕರೋತಿ ತಸ್ಯ ಫಲರಾಗಾದಿನಾ ಅಕಲುಷೀಕ್ರಿಯಮಾಣಮನ್ತಃಕರಣಂ ನಿತ್ಯೈಶ್ಚ

1. "ಪ್ರಕೃತಃ" ಎಂಬ ಅ|| ನಿ|| ಗು|| ವಾ|| ಪಾಠಕ್ಕಿಂತ ಈ ಮ|| ಮೈ|| ಮೇಲು.
2. ಅಜ್ಞರು ಮಾಡುವ ಕರ್ಮತ್ಯಾಗವನ್ನು, ಸರ್ವಕರ್ಮಸಂನ್ಯಾಸವನ್ನಲ್ಲ.

ಕರ್ಮಭಿಃ ಸಂಸ್ಕ್ರಿಯಮಾಣಂ ವಿಶುಧ್ಯತಿ । ತತ್ [1] ವಿಶುದ್ಧಂ ಪ್ರಸನ್ನಮ್ ಆತ್ಮಾಲೋಚನಕ್ಷಮಂ ಭವತಿ । ತಸ್ಯೈವ ನಿತ್ಯಕರ್ಮಾನುಷ್ಠಾನೇನ ವಿಶುದ್ಧಾನ್ತಃಕರಣಸ್ಯ ಆತ್ಮಜ್ಞಾನಾಭಿಮುಖಸ್ಯ ಕ್ರಮೇಣ ಯಥಾ ತನ್ನಿಷ್ಠಾ ಸ್ಯಾತ್ ತತ್ ವಕ್ತವ್ಯಮ್ ಇತ್ಯಾಹ—

(ಭಾಷ್ಯಾರ್ಥ)

ಆದರೆ ಯಾವನು (ಕರ್ಮಕ್ಕೆ) ಅಧಿಕಾರಿಯಾಗಿದ್ದು ಸಂಗವನ್ನೂ ಫಲದಾಸೆಯನ್ನು ಬಿಟ್ಟು ನಿತ್ಯಕರ್ಮವನ್ನು ಮಾಡುತ್ತಾನೋ ಅವನಿಗೆ ಫಲದ ರಾಗವೇ ಮುಂತಾದದ್ದರಿಂದ ಕಲ್ಮಷವಾಗದೆ ಅಂತಃಕರಣವು ನಿತ್ಯಕರ್ಮಗಳಿಂದ ಸಂಸ್ಕಾರವನ್ನೂ ಹೊಂದಿ ವಿಶುದ್ಧವಾಗುತ್ತದೆ. ಅದು (ಹಾಗೆ) ವಿಶುದ್ಧವಾಗಿ ತಿಳಿಯಾಗಿ ಆತ್ಮನನ್ನು ಅರಿಯುವ ಸಾಮರ್ಥ್ಯವುಳ್ಳದ್ದಾಗುತ್ತದೆ. ಆತನಿಗೇ ನಿತ್ಯ ಕರ್ಮಗಳನ್ನು ಮಾಡಿದ್ದರಿಂದ ಅಂತಃಕರಣವು ವಿಶುದ್ಧವಾಗಲು ಆತ್ಮಜ್ಞಾನದ ಕಡೆಗೆ ತಿರುಗಿದಾಗ ಕ್ರಮದಿಂದ ಹೇಗೆ (ಜ್ಞಾನದಲ್ಲಿ) ನಿಷ್ಠೆಯಾಗುವದೋ ಅದನ್ನು ಹೇಳಬೇಕು–ಎಂದು (ಭಗವಂತನು ಹೀಗೆಂದು) ಹೇಳುತ್ತಿದಾನೆ :—

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥**

೧೦. ಸತ್ತ್ವಸಮಾವಿಷ್ಟನಾದ ತ್ಯಾಗಿಯು ಮೇಧಾವಿಯೂ ಛಿನ್ನಸಂಶಯನೂ ಆಗಿ ಅಕುಶಲಕರ್ಮವನ್ನು ಹಗೆಮಾಡದೆ ಇರುತ್ತಾನೆ, ಕುಶಲ (ಕರ್ಮ)ದಲ್ಲಿ ಅನುಷಕ್ತನಾಗದೆ ಇರುತ್ತಾನೆ.

(ಭಾಷ್ಯ)

೪೭೯. ನ ದ್ವೇಷ್ಟಿ ಅಕುಶಲಮ್ ಅಶೋಭನಂ ಕಾಮ್ಯಂ ಕರ್ಮ । ಶರೀರಾರಮ್ಭದ್ವಾರೇಣ ಸಂಸಾರಕಾರಣಂ ಕಿಮನೇನ ?– ಇತ್ಯೇವಮ್ । ಕುಶಲೇ ಶೋಭನೇ ನಿತ್ಯೇ ಕರ್ಮಣಿ ಸತ್ತ್ವಶುದ್ಧಿಜ್ಞಾನೋತ್ಪತ್ತಿತನ್ನಿಷ್ಠಾಹೇತುತ್ವೇನ ಮೋಕ್ಷಕಾರಣಮ್ ಇದಮ್ ಇತ್ಯೇವಂ ನ ಅನುಷಜ್ಜತೇ ಅನುಷಙ್ಗಂ [2] ಪ್ರೀತಿಂ ನ ಕರೋತಿ ಇತ್ಯೇತತ್ । ಕಃ ಪುನರಸೌ ? ತ್ಯಾಗೀ ಪೂರ್ವೋಕ್ತೇನ ಸಙ್ಗಫಲತ್ಯಾಗೇನ [3] ತದ್ವಾನ್

---

1. ಮ|| ಮೈ|| ವಾ||ಗಳಲ್ಲಿ ಮಾತ್ರ ಇದೆ.
2. "ತತ್ರಾಪಿ ಪ್ರಯೋಜನಮ್ ಅಪಶ್ಯನ್ ಅನುಷಙ್ಗಂ" ಆ||
3. 'ಪರಿತ್ಯಾಗೇನ' ಮ|| ಗು||

ತ್ಯಾಗೀ, ಯಃ ಕರ್ಮಣಿ ಸಙ್ಗಂ ತ್ಯಕ್ತ್ವಾ ತತ್ಫಲಂ ಚ ನಿತ್ಯಕರ್ಮಾನುಷ್ಠಾಯೀ ಸ ತ್ಯಾಗೀ। ಕದಾ ಪುನರಸೌ ಅಕುಶಲಂ ಕರ್ಮ ನ ದ್ವೇಷ್ಟಿ ಕುಶಲೇ ಚ ನ ಅನುಷಜ್ಜತೇ ಇತಿ? ಉಚ್ಯತೇ। ಸತ್ತ್ವಸಮಾವಿಷ್ಟಃ। ಯದಾ ಸತ್ತ್ವೇನ ಆತ್ಮಾನಾತ್ಮವಿವೇಕವಿಜ್ಞಾನಹೇತುನಾ ಸಮಾವಿಷ್ಟಃ। ಸಂವ್ಯಾಪ್ತಃ। ಸಂಯುಕ್ತಃ[1] ಇತ್ಯೇತತ್। ಅತ ಏವ ಚ ಮೇಧಾವೀ ಮೇಧಯಾ ಆತ್ಮಜ್ಞಾನಲಕ್ಷಣಯಾ ಪ್ರಜ್ಞಯಾ ಸಂಯುಕ್ತಃ ತದ್ವಾನ್ ಮೇಧಾವೀ। ಮೇಧಾವಿತ್ವಾದೇವ ಛಿನ್ನಸಂಶಯಃ ಛಿನ್ನಃ ಅವಿದ್ಯಾಕೃತಃ ಸಂಶಯಃ ಯಸ್ಯ ಆತ್ಮಸ್ವರೂಪಾವಸ್ಥಾನಮೇವ ಪರಂ ನಿಃಶ್ರೇಯಸಸಾಧನಂ ನಾನ್ಯತ್ ಕಿಂಚಿತ್ ಇತ್ಯೇವಂ ನಿಶ್ಚಯೇನ ಸಃ[2] ಛಿನ್ನಸಂಶಯಃ ॥

(ಭಾಷ್ಯಾರ್ಥ)

ಅಕುಶಲವಾದ ಒಳ್ಳೆಯದಲ್ಲದ ಕಾಮ್ಯಕರ್ಮವನ್ನು "ಇದು ಶರೀರವನ್ನುಂಟುಮಾಡುವದರ ಮೂಲಕ ಸಂಸಾರಕ್ಕೆ ಕಾರಣವು; ಇದರಿಂದೇನು?" ಎಂದು ಹಗೆಮಾಡುವದಿಲ್ಲ. ಕುಶಲವಾದ ಒಳ್ಳೆಯ, ನಿತ್ಯಕರ್ಮದಲ್ಲಿ "ಇದು ಸತ್ತ್ವಶುದ್ಧಿಯನ್ನೂ ಜ್ಞಾನೋತ್ಪತ್ತಿಯನ್ನೂ ಆ (ಜ್ಞಾನದಲ್ಲಿ) ನಿಷ್ಠೆಯನ್ನೂ ಉಂಟುಮಾಡುವದರಿಂದ ಮೋಕ್ಷಕ್ಕೆ ಕಾರಣವು" ಎಂದಿಂತು ಅನುಷಕ್ತಿಯನ್ನು ಮಾಡದೆ ಇರುವನೋ, ಅನುಷಂಗವನ್ನು ಪ್ರೀತಿಯನ್ನೂ ಮಾಡದೆ ಇರುವನೋ ಎಂದು ಅಭಿಪ್ರಾಯ. ಅಂಥವನಾದರೂ ಯಾರು? ಎಂದರೆ, ತ್ಯಾಗಿಯು; ಹಿಂದೆ ಹೇಳಿರುವ ಸಂಗಫಲತ್ಯಾಗದಿಂದ ಆ (ತ್ಯಾಗ)ವುಳ್ಳವನು ತ್ಯಾಗಿಯು; ಯಾವನು ಕರ್ಮದಲ್ಲಿ ಸಂಗವನ್ನೂ ಅದರ ಫಲವನ್ನೂ ಬಿಟ್ಟು ನಿತ್ಯಕರ್ಮದ ಅನುಷ್ಠಾನವನ್ನು ಮಾಡುತ್ತಿರುವನೋ ಅವನೇ ತ್ಯಾಗಿಯು. ಇವನು ಅಕುಶಲ ಕರ್ಮವನ್ನು ಹಗೆಮಾಡದೆಯೂ ಕುಶಲ ಕರ್ಮದಲ್ಲಿ ಆಸಕ್ತಿಯನ್ನು ತೋರಿಸದೆಯೂ ಇರುವದಾದರೂ ಯಾವಾಗ? ಎಂದರೆ ಹೇಳುತ್ತಾನೆ:-ಸತ್ತ್ವಸಮಾವಿಷ್ಟನಾಗಿ, ಯಾವಾಗ ಆತ್ಮ, ಅನಾತ್ಮ-ಇವುಗಳನ್ನು ವಿಂಗಡಿಸಿ ಅರಿತುಕೊಳ್ಳುವದಕ್ಕೆ ಕಾರಣವಾಗಿರುವ ಸತ್ತ್ವದಿಂದ[3] ಸಮಾವಿಷ್ಟನಾಗುವನೋ ತುಂಬಿಕೊಳ್ಳುವನೋ ಆದರಿಂದೊಡಗೂಡುವನೋ (ಆಗ) ಎಂದು ಅಭಿಪ್ರಾಯ.

---

1. 'ಸತ್ತ್ವಸಂಯುಕ್ತಃ' ಮು॥

2. ಅಚ್ಚಿನ ಪುಸ್ತಕಗಳಲ್ಲಿಲ್ಲದಿದ್ದರೂ ಇದು ಇಲ್ಲಿಗೆ ಬೇಕೆಂದು ತೋರುತ್ತದೆ.

3. ಆತ್ಮಾನಾತ್ಮವಿವೇಕವೆಂದರೆ ಆತ್ಮಜ್ಞಾನವೇ; ಅದಕ್ಕೆ ಕಾರಣವಾಗಿರುವ ಶುದ್ಧಸತ್ತ್ವದಿಂದ ಕೂಡಿ ಎಂದರ್ಥ.

ಆದ್ದರಿಂದಲೇ (ಅವನು) ಆಗ ; ಮೇಧಾವಿ(ಯಾಗಿರುತ್ತಾನೆ), ಮೇಧೆಯಿಂದ, ಆತ್ಮಜ್ಞಾನವೆಂಬ ಪ್ರಜ್ಞೆಯಿಂದ ಕೂಡಿರುತ್ತಾನೆ, ಆ (ಅರಿ)ವುಳ್ಳ ಮೇಧಾವಿಯಾಗಿರುತ್ತಾನೆ[1]. (ಹೀಗೆ) ಮೇಧಾವಿಯಾಗಿರುವದರಿಂದಲೇ ಛಿನ್ನಸಂಶಯನಾಗಿರುತ್ತಾನೆ; ಅವಿದ್ಯೆಯಿಂದಾಗಿದ್ದ ಸಂಶಯವು, "ಆತ್ಮಸ್ವರೂಪದಿಂದ ನಿಲ್ಲುವದೇ ಹೆಚ್ಚಿನ ಮುಕ್ತಿಸಾಧನವು, ಮತ್ತೊಂದಲ್ಲ' ಎಂಬ ನಿಶ್ಚಯದಿಂದ ಯಾವನಿಗೆ ಕತ್ತರಿಸಿಹೋಗಿರುವದೋ ಅವನು ಛಿನ್ನಸಂಶಯನು[2].

(ಭಾಷ್ಯ)

೪೮೮. ಯಃ ಅಧಿಕೃತಃ ಪುರುಷಃ ಪೂರ್ವೋಕ್ತೇನ ಪ್ರಕಾರೇಣ ಕರ್ಮಯೋಗಾನುಷ್ಠಾನೇನ ಕ್ರಮೇಣ ಸಂಸ್ಕೃತಾತ್ಮಾ ಸನ್ ಜನ್ಮಾದಿವಿಕ್ರಿಯಾರಹಿತತ್ವೇನ ನಿಷ್ಕ್ರಿಯಮ್ ಆತ್ಮಾನಮ್ ಆತ್ಮತ್ವೇನ ಸಮ್ಬುದ್ಧಃ ಸ ಸರ್ವಕರ್ಮಾಣಿ ಮನಸಾ ಸಂನ್ಯಸ್ಯ ನೈವ ಕುರ್ವನ್ ನ ಕಾರಯನ್ ಆಸೀನಃ ನೈಷ್ಕರ್ಮ್ಯಲಕ್ಷಣಾಂ ಜ್ಞಾನನಿಷ್ಠಾಮ್ ಅಶ್ನುತೇ ಇತ್ಯೇತತ್ ಪೂರ್ವೋಕ್ತಸ್ಯ ಕರ್ಮಯೋಗಸ್ಯ ಪ್ರಯೋಜನಮ್ ಅನೇನ ಶ್ಲೋಕೇನ ಉಕ್ತಮ್ ||

(ಭಾಷ್ಯಾರ್ಥ)

**ಯಾವ ಅಧಿಕಾರಿಯಾದ ಪುರುಷನು ಹಿಂದೆ ಹೇಳಿದ ಪ್ರಕಾರದಿಂದ ಕರ್ಮಯೋಗವನ್ನು ಅನುಷ್ಠಾನಮಾಡುವದರಿಂದ ಕ್ರಮಕ್ರಮವಾಗಿ ಅಂತಃಕರಣಸಂಸ್ಕಾರವನ್ನು ಹೊಂದಿ ಹುಟ್ಟುವದೇ ಮುಂತಾದ (ಯಾವ) ವಿಕಾರವೂ ಇಲ್ಲದ್ದರಿಂದ ನಿಷ್ಕ್ರಿಯನಾದ ಆತ್ಮನೇ ತಾನು ಎಂದು ಚೆನ್ನಾಗಿ ಅರಿತುಕೊಳ್ಳುವನೋ ಅವನು ಸರ್ವಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ ಯಾವ (ಕರ್ಮವನ್ನೂ) ಮಾಡದೆ, ಮಾಡಿಸದೆ ಇರುವವನಾಗಿ ನೈಷ್ಕರ್ಮ್ಯವೆಂಬ ಜ್ಞಾನನಿಷ್ಠೆಯನ್ನು ಪಡೆದುಕೊಳ್ಳುತ್ತಾನೆ-ಎಂದ ಹಿಂದೆ ಹೇಳಿದ ಕರ್ಮಯೋಗದ ಪ್ರಯೋಜನವನ್ನು ಈ ಶ್ಲೋಕದಲ್ಲಿ ಹೇಳಿರುತ್ತದೆ[3].**

---

1. ಮೇಧೆ ಎಂದರೆ ಬರಿಯ ಗ್ರಂಥಧಾರಣಾಶಕ್ತಿಯಲ್ಲ.

2. ಮುಂ. ೨-೨-ಅನ್ನು ನೋಡಿ.

3. ಫಲತ್ಯಾಗಮಾಡಿದರೆ ಈ ಫಲವು ನೇರಾಗಿ ಆಗುವದಿಲ್ಲ, ಚಿತ್ತಶುದ್ಧಿಯೇ ಮುಂತಾದವುಗಳ ಮೂಲಕವಾಗಿ ಈ ಫಲವಾಗುತ್ತದೆ ಎಂದು ಭಾವ.

# ಅನಾತ್ಮಜ್ಞನು ಕರ್ಮತ್ಯಾಗವನ್ನು ಮಾಡಲಾರನು

(ಭಾಷ್ಯ)

೪೮೧. ಯಃ ಪುನಃ ಅಧಿಕೃತಃ ಸನ್ ದೇಹಾತ್ಮಾಭಿಮಾನಿತ್ವೇನ ದೇಹಭೃತ್ ಅಜ್ಞಃ ಅಬಾಧಿತಾತ್ಮಕರ್ತೃತ್ವವಿಜ್ಞಾನತಯಾ ಅಹಂ ಕರ್ತಾ ಇತಿ ನಿಶ್ಚಿತಬುದ್ಧಿಃ, ತಸ್ಯ ಅಶೇಷಕರ್ಮಪರಿತ್ಯಾಗಸ್ಯ ಅಶಕ್ಯತ್ವಾತ್ ಕರ್ಮಫಲತ್ಯಾಗೇನ ಚೋದಿತ ಕರ್ಮಾನುಷ್ಠಾನೇ ಏವ ಅಧಿಕಾರಃ ನ ತತ್ತ್ಯಾಗೇ ಇತ್ಯೇತಮ್ ಅರ್ಥಂ ದರ್ಶಯಿತುಮ್ ಆಹ—

(ಭಾಷ್ಯಾರ್ಥ)

**ಆದರೆ ಯಾವನು ಅಧಿಕಾರಿಯಾಗಿದ್ದು ದೇಹವೇ ತಾನೆಂಬ ಅಭಿಮಾನದಿಂದ ದೇಹಧಾರಿಯಾಗಿ ಅಜ್ಞನಾಗಿರುವನೋ ತಾನು ಕರ್ತೃವೆಂಬ ತಿಳಿವು ಬಾಧಿತವಾಗದೆ ಇರುವದರಿಂದ 'ನಾನು ಕರ್ತೃವೇ' ಎಂದು ನಿಶ್ಚಯಿಸಿರುವ ಬುದ್ಧಿಯುಳ್ಳವನಾಗಿರುವನೋ ಅವನಿಗೆ ಕರ್ಮಗಳೆಲ್ಲವನ್ನೂ ತ್ಯಾಗ ಮಾಡುವದು ಅಶಕ್ಯವಾಗಿರುವದರಿಂದ (ಶಾಸ್ತ್ರದಲ್ಲಿ) ವಿಧಿಸಿರುವ ಕರ್ಮವನ್ನು ಕರ್ಮಫಲತ್ಯಾಗಪೂರ್ವಕವಾಗಿ ಮಾಡುವದರಲ್ಲಿಯೇ ಅಧಿಕಾರವು, ಅದನ್ನು ಬಿಡುವದರಲ್ಲಲ್ಲ-ಎಂಬೀ ವಿಷಯವನ್ನು ತಿಳಿಸುವದಕ್ಕೆ (ಭಗವಂತನು ಹೀಗೆಂದು) ಹೇಳುತ್ತಾನೆ :—**

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**

೧೧. ದೇಹಧಾರಿಯಾದವನಿಂದ ಕರ್ಮಗಳನ್ನು ಅಶೇಷವಾಗಿ ತ್ಯಜಿಸುವದಕ್ಕೆ ಆಗುವದೇ ಇಲ್ಲ. ಯಾವನು ಕರ್ಮಫಲತ್ಯಾಗಿಯೋ ಅವನೇ ತ್ಯಾಗಿಯೆನಿಸುವನು.

(ಭಾಷ್ಯ)

೪೮೨. ನ ಹಿ ಯಸ್ಮಾತ್ ದೇಹಭೃತಾ । ದೇಹಂ ಬಿಭರ್ತಿ ಇತಿ ದೇಹಭೃತ್ ।

ದೇಹಾತ್ಮಾಭಿಮಾನವಾನ್ ದೇಹಭೃತ್ ಉಚ್ಯತೇ[1] । ನ[2] ವಿವೇಕೀ । ಸ ಹಿ "ವೇದಾವಿನಾಶಿನಮ್" (೨-೨೧) ಇತ್ಯಾದಿನಾ ಕರ್ತೃತ್ವಾಧಿಕಾರಾತ್ ನಿವರ್ತಿತಃ । ಅತಃ ತೇನ ದೇಹಭೃತಾ ಅಜ್ಞೇನ[3] ನ ಶಕ್ಯಃ ತ್ಯಕ್ತುಂ ಸಂನ್ಯಸಿತುಂ ಕರ್ಮಾಣಿ ಅಶೇಷತಃ ನಿಃಶೇಷೇಣ । ತಸ್ಮಾತ್ ಯಸ್ತು ಅಜ್ಞಃ ಅಧಿಕೃತಃ ನಿತ್ಯಾನಿ ಕರ್ಮಾಣಿ ಕುರ್ವನ್ ಕರ್ಮಫಲತ್ಯಾಗೀ ಕರ್ಮಫಲಾಭಿಸನ್ಧಿಮಾತ್ರಸಂನ್ಯಾಸೀ ಸ ತ್ಯಾಗೀ ಇತಿ ಅಭಿಧೀಯತೇ ಕರ್ಮ್ಯಪಿ ಸನ್ ಇತಿ ಸ್ತುತ್ಯಭಿಪ್ರಾಯೇಣ । ತಸ್ಮಾತ್ ಪರಮಾರ್ಥ ದರ್ಶಿನೈವ[4] ಅದೇಹಭೃತಾ[5] ದೇಹಾತ್ಮಭಾವರಹಿತೇನ ಅಶೇಷಕರ್ಮಸಂನ್ಯಾಸಃ ಶಕ್ಯತೇ ಕರ್ತುಮ್ ॥

(ಭಾಷ್ಯಾರ್ಥ)

ಹಿ ಏಕೆಂದರೆ ದೇಹಧಾರಿಯಾದವನಿಂದ–ದೇಹವನ್ನು ಧರಿಸುವದರಿಂದ ದೇಹ ಧಾರಿಯು. **ದೇಹವೇ ತಾನೆಂದು ಅಭಿಮಾನವುಳ್ಳವನನ್ನೇ ದೇಹಧಾರಿಯೆಂದಿರುತ್ತದೆ,**[6] **ವಿವೇಕಿಯನ್ನಲ್ಲ.** ಏಕೆಂದರೆ "(ಯಾವನು ಇವನು) ಅವಿನಾಶಿಯೆಂದು ಅರಿತಿರುವನೋ" "(ಅವನು ಯಾರನ್ನು ಹೇಗೆ ಕೊಲ್ಲುವನು ?)" (೨-೨೧) ಎಂದು ಮುಂತಾದ (ಗೀತಾಭಾಗದಲ್ಲಿ) ಆ (ವಿವೇಕಿಯನ್ನು) ಕರ್ತೃತ್ವಾಧಿಕಾರದಿಂದ ತೆಗೆದುಹಾಕಿರುತ್ತದೆ. ಆದ್ದರಿಂದ ಆ ಅಜ್ಞನಾಗಿ ದೇಹಧಾರಿಯಾದವನಿಂದ–ಕರ್ಮಗಳನ್ನು ಅಶೇಷವಾಗಿ ಒಂದೂ ಉಳಿಯದಂತೆ ಬಿಡುವದು ಸಂನ್ಯಾಸಮಾಡುವದು ಆಗಲಾರದು. ಆದ್ದರಿಂದ ಯಾವನಾದರೆ ಅಜ್ಞನಾಗಿ (ಕರ್ಮಕ್ಕೆ) ಅಧಿಕಾರಿಯಾಗಿ ನಿತ್ಯಕರ್ಮಗಳನ್ನು ಮಾಡುತ್ತಾ ಕರ್ಮಫಲವನ್ನು ತ್ಯಾಗಮಾಡುವನೋ ಕರ್ಮಫಲದ ಆಸೆಯನ್ನು ಮಾತ್ರ ಸಂನ್ಯಾಸಮಾಡುವನೋ (ಅವನು) ಕರ್ಮಿಯಾದರೂ ತ್ಯಾಗಿಯೆನಿಸುವನು ಎಂದು ಹೊಗಳುವ ಉದ್ದೇಶದಿಂದ ಹೇಳಿರುತ್ತದೆ. **ಆದ್ದರಿಂದ ಪರಮಾರ್ಥವನ್ನು ಕಂಡುಕೊಂಡಿರುವವನು ಮಾತ್ರವೇ ದೇಹಧಾರಿಯಲ್ಲದ್ದ**

1. 'ಇತ್ಯುಚ್ಯತೇ' ಮು॥

2. 'ನ ಹಿ' ಎಂಬ ಆ॥ ನಿ॥ ಪಾಠದಲ್ಲಿ ಹಿ ಹೆಚ್ಚು.

3. ಮು॥ ದಲ್ಲಿಲ್ಲ.

4. 'ಪರಮಾರ್ಥದರ್ಶಿತ್ವೇನೈವ' ಎಂಬ ಮು॥ ವೆಂ॥ ಗು॥ ಗಳಿಗಿಂತ ಇದು ಮೇಲು.

5. 'ದೇಹಭೃತಾ' ಎಂಬ ಆ॥ ಪಾಠವು ಅಚ್ಚಿನ ತಪ್ಪಿನಿಂದಾದದ್ದು.

6. ದೇಹಿಯು ತಾನೆಂಬ ಮಿಥ್ಯಾಭಿಮಾನವೇ ಸಶರೀರತ್ವವು ಸೂ. ಭಾ. ೧-೧-೪.

ರಿಂದ ದೇಹವೇ ತಾನೆಂಬ ಅಭಿಮಾನವಿಲ್ಲದ್ದರಿಂದ ಒಂದಿಷ್ಟೂ ಉಳಿಯದಂತೆ ಕರ್ಮಗಳನ್ನು ಸಂನ್ಯಾಸಮಾಡಲಾಪನು.

## ಸಂನ್ಯಾಸಿಗಳಿಗೆ ಕರ್ಮದ ಅಂಟಿಲ್ಲ

(ಭಾಷ್ಯ)

೪೮೩. ಕಿಂ ಪುನಸ್ತತ್ ಪ್ರಯೋಜನಂ ಯತ್ ಸರ್ವಕರ್ಮಸಂನ್ಯಾಸಾತ್[1] ಸ್ಯಾತ್ ಇತಿ ? ಉಚ್ಯತೇ—

(ಭಾಷ್ಯಾರ್ಥ)

ಸರ್ವಕರ್ಮಸಂನ್ಯಾಸದಿಂದ ಆಗುವದೆಂಬ ಆ ಪ್ರಯೋಜನವಾದರೂ ಯಾವದು ?–ಎಂದರೆ (ಭಗವಂತನು) ಹೇಳುತ್ತಾನೆ—

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨ ॥**

೧೨. ಅನಿಷ್ಟ, ಇಷ್ಟ, ಮಿಶ್ರ–ಎಂಬ ಮೂರು ವಿಧವಾದ ಕರ್ಮದ ಫಲವೂ ಅತ್ಯಾಗಿಗಳಿಗೆ (ಇಲ್ಲಿಂದ) ಹೊರಟುಹೋದಮೇಲೆ ಆಗುವದು, ಆದರೆ ಸಂನ್ಯಾಸಿಗಳಿಗೆ ಎಂದಿಗೂ (ಆಗುವ)ದಿಲ್ಲ.

(ಭಾಷ್ಯ)

೪೮೪. ಅನಿಷ್ಟಂ ನರಕತಿರ್ಯಗಾದಿಲಕ್ಷಣಮ್, ಮಿಶ್ರಮ್ ಇಷ್ಟಾನಿಷ್ಟಸಂಯುಕ್ತಂ ಮನುಷ್ಯಲಕ್ಷಣಂ ಚ । ಏವಂ[2] ತ್ರಿವಿಧಂ ತ್ರಿಪ್ರಕಾರಂ ಕರ್ಮಣಃ ಧರ್ಮಾಧರ್ಮಲಕ್ಷಣಸ್ಯ[3] ಫಲಮ್ । ಬಾಹ್ಯಾನೇಕಕಾರಕವ್ಯಾಪಾರನಿಷ್ಪನ್ನಂ ಸತ್ ಅವಿದ್ಯಾಕೃತಮ್ ಇನ್ದ್ರಜಾಲಮಾಯೋಪಮಂ ಮಹಾಮೋಹಕರಂ ಪ್ರತ್ಯಗಾತ್ಮೋಪಸರ್ಪೀವ[4] ಫಲ್ಗುತಯಾ ಲಯಮ್ ಅದರ್ಶನಂ ಗಚ್ಛತಿ ಇತಿ ಫಲನಿರ್ವಚನಮ್ । ತದೇತತ್ ಏವಂಲಕ್ಷಣಂ ಫಲಂ ಭವತಿ ಅತ್ಯಾಗಿನಾಮ್ ಅಜ್ಞಾನಾಂ

---

1. ' ಸರ್ವಕರ್ಮಪರಿತ್ಯಾಗಾತ್ ' ಸಿ॥ ಗು॥
2. ' ಏತತ್ ' ಮ॥ ಮೈ॥ ವಾ॥
3. ' ಧರ್ಮಾಧರ್ಮಾದಿಲಕ್ಷಣಸ್ಯ ' ಮ॥
4. ' ಪ್ರತ್ಯಗಾತ್ಮೋಪಸರ್ಪೀಹ '–ಎಂಬ ಆಚ್ಚಿನ ಪಾಠಕ್ಕಿಂತ ಇದೇ ಮೇಲು.

**ಕರ್ಮಿಣಾಮ್ ಅಪರಮಾರ್ಥಸಂನ್ಯಾಸಿನಾಂ ಪ್ರೇತ್ಯ ಶರೀರಪಾತಾತ್ ಊರ್ಧ್ವಮ್ ।** ನ ತು ಸಂನ್ಯಾಸಿನಾಂ[1] ಪರಮಾರ್ಥಸಂನ್ಯಾಸಿನಾಂ ಪರಮಹಂಸಪರಿವ್ರಾಜಕಾನಾಂ **ಕೇವಲಜ್ಞಾನನಿಷ್ಠಾನಾಂ ಕ್ವಚಿತ್** । ನ ಹಿ ಕೇವಲಸಮ್ಯಗ್ದರ್ಶನನಿಷ್ಠಾ ಅವಿದ್ಯಾದಿ ಸಂಸಾರಬೀಜಂ ನ ಉನ್ಮೂಲಯತಿ ಕದಾಚಿತ್ ಇತ್ಯರ್ಥಃ । ಅತಃ ಪರಮಾರ್ಥದರ್ಶಿನ ಏವ ಅಶೇಷಕರ್ಮಸಂನ್ಯಾಸಿತ್ವಂ[2] ಸಂಭವತಿ । ಅವಿದ್ಯಾಧ್ಯಾರೋಪಿತತ್ವಾತ್ ಆತ್ಮನಿ ಕ್ರಿಯಾಕಾರಕಫಲಾನಾಮ್ । ನ ತು ಅಜ್ಞಸ್ಯ ಅಧಿಷ್ಠಾನಾದೀನಿ ಕ್ರಿಯಾಕರ್ತೃ **ಕಾರಕಾಣಿ ಆತ್ಮತ್ವೇನೈವ**[3] ಪಶ್ಯತಃ ಅಶೇಷಕರ್ಮಸಂನ್ಯಾಸಃ ಸಂಭವತಿ ॥

(ಭಾಷ್ಯಾರ್ಥ)

ಅನಿಷ್ಟ ಎಂದರೆ ನರಕ, ತಿರ್ಯಗ್ಜಂತುಗಳ (ಜನ್ಮವೇ) ಮುಂತಾದ ರೂಪವಾದದ್ದು; ಇಷ್ಟ, ದೇವತೆಗಳ (ಜನ್ಮವೇ) ಮುಂತಾದ ರೂಪವಾದದ್ದು; ಮತ್ತು ಮಿಶ್ರ, ಇಷ್ಟಾನಿಷ್ಟಗಳ ಸೇರುವೆಯಿಂದಾದ ಮನುಷ್ಯ (ಜನ್ಮ) ರೂಪವಾದದ್ದು–ಹೀಗೆ ಮೂರು ವಿಧವಾದ ಮೂರು ಬಗೆಯು, ಧರ್ಮಾಧರ್ಮರೂಪವಾದ ಕರ್ಮದ ಫಲವು–ಹೊರಗಿನ ಅನೇಕ ಕಾರಕಗಳ ವ್ಯಾಪಾರದಿಂದ ಉಂಟಾಗಿ ಅವಿದ್ಯಾಕೃತವಾಗಿ, ಇಂದ್ರಜಾಲಮಾಯೆಯಂತೆ ಹೆಚ್ಚಿನ ಮೋಹವನ್ನುಂಟುಮಾಡುವದಾಗಿ ಪ್ರತ್ಯಗಾತ್ಮನ ಬಳಿಗೆ ಬಂದು ಸೇರುವಂತೆ ಫಲ್ಗುವಾಗಿ[4] ಲಯವನ್ನು ಅದರ್ಶನವನ್ನು ಹೊಂದುತ್ತದೆ ಎಂಬುದು ಫಲದ ನಿರ್ವಚನವು. ಇಂಥ ರೂಪವಾದ ಆ ಈ ಫಲವು–ಅತ್ಯಾಗಿಗಳಿಗೆ ಪರಮಾರ್ಥಸಂನ್ಯಾಸಿಗಳಲ್ಲದ[5] ಅಜ್ಞರಾದ ಕರ್ಮಿಗಳಿಗೆ (ಇಲ್ಲಿಂದ) ಹೊರಟು ಹೋದ ಬಳಿಕ, ಶರೀರವು ಬಿದ್ದುಹೋದಮೇಲೆ ಆಗುತ್ತದೆ. ಆದರೆ **ಸಂನ್ಯಾಸಿಗಳಿಗೆ ಪರಮಾರ್ಥಸಂನ್ಯಾಸಿಗಳಾದ ಪರಮಹಂಸಪರಿವ್ರಾಜಕರಾದ ಕೇವಲ ಜ್ಞಾನನಿಷ್ಠರಿಗೆ,–ಎಂದಿಗೂ (ಆ ಫಲವು) ಆಗುವದಿಲ್ಲ. ಏಕೆಂದರೆ ಬರಿಯ ಸಮ್ಯ**

---

1. ನಿ॥ದಲ್ಲಿಲ್ಲ.
2. ' ಸಂನ್ಯಾಸಃ ' ಮಾ॥ ಗು॥
3. ' ಆತ್ಮತ್ವೇನ ' ಮು॥ ಮೈ॥
4. ಬಹು ಅಲ್ಪವಾದದ್ದಾಗಿ.
5. ಅತ್ಯಾಗಿಗಳಿಗೆ ಎಂದರೆ ಹಿಂದಿನ ಶ್ಲೋಕದಲ್ಲಿ ಹೇಳಿರುವ ಕರ್ಮಫಲತ್ಯಾಗಿಗಳಲ್ಲದವರಿಗೆ ಎಂದರ್ಥವಲ್ಲ; ಏಕೆಂದರೆ ಅವರಿಗೆ ಆಯಾ ಕರ್ಮಫಲವು ಆಗುವದಿಲ್ಲವಾದರೂ ಚಿತ್ತಶುದ್ಧಿಯ ಮೂಲಕವಾಗಿ ಜ್ಞಾನವೆಂಬ ಫಲವುಂಟಾಗುತ್ತದೆ. ಪರಮಾರ್ಥಸಂನ್ಯಾಸಿಗಳಿಗೆ ಫಲವೆಂಬುದೇ ಅಪರಮಾರ್ಥವೆಂಬ ಅರಿವು ಉಂಟಾಗುತ್ತದೆ.

**ಗ್ದರ್ಶನದಲ್ಲಿಯೇ ನೆಲೆನಿಂತಿರುವದು ಅವಿದ್ಯೆಯೇ ಮುಂತಾದ ಸಂಸಾರ ಬೀಜವನ್ನು[1] ನಾಶಮಾಡುವದಿಲ್ಲವೆಂಬುದು ಎಂದಿಗೂ ಇಲ್ಲವೇ ಇಲ್ಲ ಎಂದರ್ಥ.**

ಆದ್ದರಿಂದ ಪರಮಾರ್ಥದರ್ಶಿಯಾದವನಿಗೇ ಎಲ್ಲಾ ಕರ್ಮಗಳನ್ನೂ ಬಿಡುವ ದೆಂಬುದು ಆಗುತ್ತದೆ; ಏಕೆಂದರೆ ಆತ್ಮನಲ್ಲಿ ಕ್ರಿಯಾಕಾರಕಫಲಗಳು ಅವಿದ್ಯೆಯಿಂದ ಆರೋಪಿತವಾಗಿರುತ್ತವೆ. ಆದರೆ ಅಧಿಷ್ಠಾನವೇ ಮುಂತಾದ[2] ಕ್ರಿಯೆ, ಕರ್ತೃ, ಕಾರಕ–ಇವುಗಳನ್ನು ಆತ್ಮನೆಂದೇ ಕಾಣುತ್ತಿರುವ ಅಜ್ಞನಿಗೆ ಎಲ್ಲಾ ಕರ್ಮಗಳನ್ನೂ ಸಂನ್ಯಾಸಮಾಡುವದು ಆಗಲಾರದು.

## ಆತ್ಮನು ಕರ್ತೃವಲ್ಲವೆಂದು ತಿಳಿಯುವದೇ ಜ್ಞಾನ

(ಭಾಷ್ಯ)

೪೮೫. ತದೇತತ್ ಉತ್ತರೈಃ ಶ್ಲೋಕೈಃ ದರ್ಶಯತಿ—

(ಭಾಷ್ಯಾರ್ಥ)

ಆ ಈ (ವಿಷಯವನ್ನು) ಮುಂದಿನ ಶ್ಲೋಕಗಳಿಂದ ತೋರಿಸಿಕೊಡುತ್ತಾನೆ—

**ಪಞ್ಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಙ್ಖ್ಯೇ ಕೃತಾನ್ತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥**

೧೩. ಮಹಾಬಾಹುವೆ, ಸರ್ವಕರ್ಮಗಳ ಸಿದ್ಧಿಗೆ ಈ ಐದೂ ಕಾರಣಗಳೆಂದು ಸಾಂಖ್ಯಕೃತಾಂತದಲ್ಲಿ ಹೇಳಲ್ಪಟ್ಟಿವೆ. (ಅವನ್ನು) ನನ್ನಿಂದ ತಿಳಿದುಕೊ.

(ಭಾಷ್ಯ)

೪೮೬. ಪಞ್ಚ ಏತಾನಿ ವಕ್ಷ್ಯಮಾಣಾನಿ ಹೇ ಮಹಾಬಾಹೋ ಕಾರಣಾನಿ ನಿರ್ವರ್ತಕಾನಿ । ನಿಬೋಧ ಮೇ ಮಮ[3] ಇತಿ ಉತ್ತರತ್ರ ಚೇತಃಸಮಾಧಾನಾ

---

1. ಅವಿದ್ಯೆ, ಕಾಮ, ಕರ್ಮ—ಎಂಬಿವು ಸಂಸಾರಬೀಜಗಳು; ಇವನ್ನು ಜ್ಞಾನವು ಅವಶ್ಯವಾಗಿ ನಾಶಮಾಡಿಬಿಡುತ್ತದೆ. ಅವಿದ್ಯಾದಿಗಳಿಲ್ಲದವರಿಗೆ ಕರ್ಮಫಲವು ಆಗುವದಕ್ಕೆ ಅವ ಕಾಶವಿರುವದಿಲ್ಲ.

2. ಮುಂದೆ ೧೪ನೆಯ ಶ್ಲೋಕದಲ್ಲಿ ಹೇಳಿರುವ.

3. ಮ॥ ಮೈ॥ಗಳಲ್ಲಿಲ್ಲ; ಇಲ್ಲದಿದ್ದರೂ ಸಾಗುತ್ತದೆ.

ರ್ಥಮ್, ವಸ್ತುವೈಷಮ್ಯಪ್ರದರ್ಶನಾರ್ಥಂ ಚ । ತಾನಿ ಚ ಕಾರಣಾನಿ ಜ್ಞಾತವ್ಯತಯಾ ಸ್ತೌತಿ–ಸಾಙ್ಖ್ಯೇ । ಜ್ಞಾತವ್ಯಾಃ ಪದಾರ್ಥಾಃ ಸಙ್ಖ್ಯಾಯನ್ತೇ ಯಸ್ಮಿನ್ ಶಾಸ್ತ್ರೇ ತತ್ ಸಾಙ್ಖ್ಯಂ ವೇದಾನ್ತಃ । ಕೃತಾನ್ತೇ ಇತಿ ತಸ್ಯೈವ ವಿಶೇಷಣಮ್ । ಕೃತಮ್ ಇತಿ ಕರ್ಮ ಉಚ್ಯತೇ । ತಸ್ಯ ಅನ್ತಃ ಪರಿಸಮಾಪ್ತಿಃ ಯತ್ರ ಸಃ ಕೃತಾನ್ತಃ। ಕರ್ಮಾನ್ತಃ ಇತ್ಯೇತತ್ । "ಯಾವಾನರ್ಥ ಉದಪಾನೇ" (೨-೪೬) "ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ" (೪-೩೩) ಇತಿ ಆತ್ಮಜ್ಞಾನೇ ಸಞ್ಜಾತೇ ಸರ್ವಕರ್ಮಣಾಂ ನಿವೃತ್ತಿಂ ದರ್ಶಯತಿ । ಅತಃ ತಸ್ಮಿನ್ ಆತ್ಮಜ್ಞಾನಾರ್ಥೇ ಸಾಙ್ಖ್ಯೇ ಕೃತಾನ್ತೇ ವೇದಾನ್ತೇ ಪ್ರೋಕ್ತಾನಿ ಕಥಿತಾನಿ ಸಿದ್ಧಯೇ ನಿಷ್ಪತ್ತ್ಯರ್ಥಂ ಸರ್ವಕರ್ಮಣಾಮ್ ॥

(ಭಾಷ್ಯಾರ್ಥ)

ಈ ಮುಂದೆ ಹೇಳುವ ಐದೂ, ಎಲೈ ಮಹಾಬಾಹುವೆ, ಕಾರಣಗಳು ಎಂದರೆ ಉಂಟುಮಾಡತಕ್ಕವು; (ಇವನ್ನು) ನನ್ನಿಂದ ನನ್ನ (ವಚನದಿಂದ) ತಿಳಿದುಕೊ ಎಂದು ಮುಂದಿನ ವಿಷಯದಲ್ಲಿ ಚಿತ್ತವನ್ನು ಇರಿಸುವದಕ್ಕಾಗಿಯೂ ವಿಷಯವು (ತಿಳಿಯುವದಕ್ಕೆ) ಕಷ್ಟವಾದದ್ದೆಂದು ತಿಳಿಸುವದಕ್ಕಾಗಿಯೂ[1] (ಹೇಳಿರುತ್ತಾನೆ). ಮತ್ತು ಆ ಕಾರಣಗಳಿನ್ನು ತಿಳಿದುಕೊಳ್ಳಬೇಕಾಗಿರುವದರಿಂದ (ಹೀಗೆಂದು) ಹೊಗಳುತ್ತಾನೆ: **ಸಾಂಖ್ಯದಲ್ಲಿ**–ಅರಿತುಕೊಳ್ಳಬೇಕಾದ ಪದಾರ್ಥಗಳನ್ನು ಯಾವ ಶಾಸ್ತ್ರದಲ್ಲಿ ಹೇಳಿರುತ್ತದೆಯೋ ಅದು ಸಾಂಖ್ಯವು, ವೇದಾಂತವು[2]. (ಅದರಲ್ಲಿ)–ಕೃತಾನ್ತೇ ಎಂಬುದು ಆ (ಸಾಂಖ್ಯಕ್ಕೇ) ವಿಶೇಷಣವು. ಕೃತವೆಂಬ ಮಾತಿನಿಂದ ಕರ್ಮವನ್ನು ಹೇಳಿದೆ. ಆ (ಕೃತದ) ಅಂತವು, ಕೊನೆಯು ಯಾವದರಲ್ಲಿ (ಆಗುವದೋ) ಅದೇ ಕೃತಾಂತವು; ಕರ್ಮದ ಕೊನೆಯು ಎಂದರ್ಥ. "(ಸಣ್ಣ) ಜಲಾಶಯದಲ್ಲಿ ಎಷ್ಟು ಪ್ರಯೋಜನವೋ" (೨-೪೬) "ಪಾರ್ಥನೆ, ಎಲ್ಲಾ ಕರ್ಮವೂ ಅಖಿಲವಾಗಿ ಜ್ಞಾನದಲ್ಲಿ ಮುಗಿಯುತ್ತದೆ" (೪-೩೩) ಎಂದು ಆತ್ಮಜ್ಞಾನವುಂಟಾದರೆ ಎಲ್ಲಾ ಕರ್ಮಗಳೂ ತೊಲಗುವವೆಂದು

---

1. ಆತ್ಮನು ಕರ್ತೃವಲ್ಲ, ಅಧಿಷ್ಠಾನಾದಿಗಳೇ ಕರ್ಮಕ್ಕೆ ಕಾರಣ–ಎಂಬುವನ್ನು ತಿಳಿದುಕೊಳ್ಳುವದು ಬಲು ಕಷ್ಟ.

2. ತಿಳಿದುಕೊಳ್ಳಬೇಕಾದ ಪದಾರ್ಥಗಳೆಂದು ಇಪ್ಪತ್ತೈದನ್ನು ಸಾಂಖ್ಯದಲ್ಲಿ ಹೇಳಿದೆ. ಆದರೆ ಆತ್ಮ, ಅನಾತ್ಮ–ಎಂಬ ಎರಡರ ತತ್ತ್ವವನ್ನು ಅರಿತರೆ ಆಯಿತೆಂದು ವೇದಾಂತದಲ್ಲಿ ಹೇಳಿದೆ.

(ಈ ಶಾಸ್ತ್ರದಲ್ಲಿ) ತಿಳಿಸಿರುತ್ತದೆ. ಆದ್ದರಿಂದ ಆತ್ಮಜ್ಞಾನವೆಂಬ ಪ್ರಯೋಜನವುಳ್ಳ ಆ ಸಾಂಖ್ಯ ಕೃತಾಂತದಲ್ಲಿ, ವೇದಾಂತದಲ್ಲಿ ಸರ್ವಕರ್ಮಗಳೂ ಸಿದ್ಧಿಯಾಗುವದಕ್ಕೆ ಉಂಟಾಗುವದಕ್ಕೆ (ಇವು ಕಾರಣವೆಂದು) ಹೇಳಲ್ಪಟ್ಟಿವೆ, ತಿಳಿಸಲ್ಪಟ್ಟಿರುತ್ತವೆ.

(ಭಾಷ್ಯ)

೪೮೭. ಕಾನಿ ತಾನಿ ಇತಿ ? ಉಚ್ಯತೇ —

(ಭಾಷ್ಯಾರ್ಥ)

ಅವು ಯಾವವು ? ಎಂದರೆ ಹೇಳುತ್ತಾನೆ :—

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಞ್ಚಮಮ್ ॥ ೧೪ ॥**

೧೪. ಅಧಿಷ್ಠಾನ, ಮತ್ತು ಕರ್ತೃ, ಬೇರೆಬೇರೆಯ ಬಗೆಯ ಕರಣ, ಮತ್ತು ವಿವಿಧವಾದ ಬೇರೆಬೇರೆಯ ಚೇಷ್ಟೆಗಳು. ಮತ್ತು ಇಲ್ಲಿ ದೈವವು ಐದನೆಯದು.

(ಭಾಷ್ಯ)

೪೮೮. ಅಧಿಷ್ಠಾನಮ್ ಇಚ್ಛಾದ್ವೇಷಸುಖದುಃಖಜ್ಞಾನಾದಿನಾಮ್ ಅಭಿವ್ಯಕ್ತೇಃ ಆಶ್ರಯಃ ಅಧಿಷ್ಠಾನಂ ಶರೀರಮ್ । ತಥಾ ಕರ್ತಾ ಉಪಾಧಿಲಕ್ಷಣಃ ಭೋಕ್ತಾ । ಕರಣಂ ಚ ಶ್ರೋತ್ರಾದಿಕಂ ಶಬ್ದಾದ್ಯುಪಲಬ್ಧಯೇ ಪೃಥಗ್ವಿಧಂ ನಾನಾಪ್ರಕಾರಮ್ । ತತ್ ದ್ವಾದಶಸಙ್ಖ್ಯಮ್ । ವಿವಿಧಾಶ್ಚ ಪೃಥಕ್ಚೇಷ್ಟಾಃ[1] ವಾಯವೀಯಾಃ ಪ್ರಾಣಾಪಾನಾದ್ಯಾಃ । ದೈವಂ ಚೈವ ದೈವಮೇವ ಚ[2] ಅತ್ರ ಏತೇಷು ಚತುರ್ಷು ಪಞ್ಚಮಂ ಪಞ್ಚಾನಾಂ ಪೂರಣಮ್ ಆದಿತ್ಯಾದಿಚಕ್ಷುರಾದ್ಯನುಗ್ರಾಹಕಮ್ ॥

---

1. 'ವಿವಿಧಾ ಚ ಪೃಥಕ್ಚೇಷ್ಟಾ' ಎಂಬ (ಮೈ॥) ಪಾಠವು ರಾಮಾನುಜಾನುಸಾರಿಯೆಂದು ತೋರುತ್ತದೆ.

2. ಮ॥ ಮೈ॥ಗಳಲ್ಲಿಲ್ಲ.

(ಭಾಷ್ಯಾರ್ಥ)

**ಅಧಿಷ್ಠಾನವು :** ಇಚ್ಛೆ, ದ್ವೇಷ, ಸುಖ, ದುಃಖ, ಜ್ಞಾನ–ಮುಂತಾದವುಗಳು ಹೊರತೋರಿಕೊಳ್ಳುವದಕ್ಕೆ ಆಶ್ರಯವಾಗಿರುವದು ಅಧಿಷ್ಠಾನವು, ಶರೀರವು. ಮತ್ತು ಕರ್ತನು : ಉಪಾಧಿಯಿಂದ ಕಂಡುಬರುವ[1] ಭೋಕ್ತನು ಮತ್ತು ಶಬ್ದಾದಿಗಳನ್ನು ಅರಿಯುವದಕ್ಕೆ ಪೃಥಗ್ವಿಧವಾಗಿರುವ ಬೇರೆಬೇರೆಯ ಬಗೆಯಾಗಿರುವ ಶ್ರೋತ್ರವೇ ಮುಂತಾದ **ಕರಣವು**. ಅದು ಸಂಖ್ಯೆಯಲ್ಲಿ ಹನ್ನೆರಡು[2] ಮತ್ತು ವಿವಿಧವಾದ ಬೇರೆ ಬೇರೆಯ ವಾಯುವಿನ ಸಂಬಂಧವಾದ ಪ್ರಾಣ, ಅಪಾನ–ಮುಂತಾದ ವ್ಯಾಪಾರಗಳು. ಇಲ್ಲಿ ಈ ನಾಲ್ಕರಲ್ಲಿ ಐದನೆಯದು, ಐದನ್ನು ಪೂರ್ಣಮಾಡತಕ್ಕದ್ದು ದೈವವು, ಚಕ್ಷು ರಾದಿಗಳಿಗೆ ಅನುಗ್ರಹವನ್ನು ಮಾಡತಕ್ಕ ಆದಿತ್ಯನೇ ಮುಂತಾದದ್ದು.

**ಶರೀರವಾಙ್ಮನೋಭಿರ್ಯತ್ ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಞ್ಚೈತೇ ತಸ್ಯ ಹೇತವಃ ॥ ೧೫ ॥**

೧೫. ಶರೀರವಾಙ್ಮನಸ್ಸುಗಳಿಂದ ನರನು ನ್ಯಾಯವಾದ ಅಥವಾ (ಅದಕ್ಕೆ) ವಿರುದ್ಧವಾದ ಯಾವ ಕರ್ಮವನ್ನು ಪ್ರಾರಂಭಿಸುತ್ತಾನೋ, ಅದಕ್ಕೆ ಈ ಐದು ಹೇತುಗಳು.

(ಭಾಷ್ಯ)

೪೮೯. ಶರೀರವಾಙ್ಮನೋಭಿಃ ಯತ್ ಕರ್ಮ ತ್ರಿಭಿರೇತೈಃ ಪ್ರಾರಭತೇ ನಿರ್ವರ್ತಯತಿ ನರಃ ನ್ಯಾಯ್ಯಂ ವಾ ಧರ್ಮ್ಯಂ ಶಾಸ್ತ್ರೀಯಮ್ ವಿಪರೀತಂ ವಾ ಅಶಾಸ್ತ್ರೀಯಮ್ ಅಧರ್ಮ್ಯಮ್ । ಯಚ್ಚಾಪಿ ನಿಮಿಷಿತಚೇಷ್ಟಿತಾದಿ[3] ಜೀವನಹೇತುಃ ತದಪಿ ಪೂರ್ವಕೃತಧರ್ಮಾಧರ್ಮಯೋರೇವ ಕಾರ್ಯಮ್ ಇತಿ ನ್ಯಾಯ್ಯವಿಪರೀತ ಯೋರೇವ ಗ್ರಹಣೇನ ಗೃಹೀತಮ್ । ಪಞ್ಚ ಏತೇ ಯಥೋಕ್ತಾಃ ತಸ್ಯ ಸರ್ವ ಸ್ಯೈವ ಕರ್ಮಣಃ ಹೇತವಃ ಕಾರಣಾನಿ ॥

(ಭಾಷ್ಯಾರ್ಥ)

ಮನುಷ್ಯನು ಶರೀರವಾಙ್ಮನಸ್ಸುಗಳಿಂದ ಯಾವ ಕರ್ಮವನ್ನು ಈ ಮೂರ

---

1. ಕರ್ತೃತ್ವಭೋಕ್ತೃತ್ವವು ಅಂತಃಕರಣವೆಂಬ ಉಪಾಧಿಯಿಂದಲೇ ತೋರತಕ್ಕದ್ದು ಕ. ಭಾ. ೧೩-೩೪.
2. ದಶೇಂದ್ರಿಯಗಳು ಮನಸ್ಸು, ಬುದ್ಧಿ.
3. ' ನಿಮಿಷಿತಚೇಷ್ಟಾದಿ ' ನಿ|| ಗು|| ವಾ|| ;' ನಿಮೇಷಾದಿಕಂ ಚೇಷ್ಟಿತಾದಿ ' ಮ||

ರಿಂದ ಪ್ರಾರಂಭಿಸುತ್ತಾನೋ ಮಾಡುತ್ತಾನೋ (ಅದು) ನ್ಯಾಯವಾಗಲಿ ಧರ್ಮಕ್ಕೆ ಹೊಂದುವ ಶಾಸ್ತ್ರೀಯ (ಕರ್ಮ)ವಾಗಲಿ, ಅಥವಾ ಅದಕ್ಕೆ ವಿರುದ್ಧವಾಗಿ ಧರ್ಮಕ್ಕೆ ಹೊಂದದ ಅಶಾಸ್ತ್ರೀಯ (ಕರ್ಮ)ವೇ ಆಗಲಿ, ಅದಕ್ಕೆ-ಕಣ್ಣುರೆಪ್ಪೆಯನ್ನು ಹೊಡೆಯುವದೇ ಮುಂತಾದ ಜೀವನ ನಿಮಿತ್ತವಾದ (ಕರ್ಮವು) ಇರುವದಲ್ಲ, ಅದನ್ನೂ ಹಿಂದೆ ಮಾಡಿದ ಧರ್ಮಾಧರ್ಮಗಳದ್ದೇ ಕಾರ್ಯವಾದ್ದರಿಂದ ನ್ಯಾಯವಾದದ್ದು (ಅದಕ್ಕೆ) ವಿರುದ್ಧವಾದದ್ದು-(ಎಂಬ)ವುಗಳನ್ನು ಹಿಡಿದದ್ದರಿಂದಲೇ ಹಿಡಿದಂತಾಗಿರುತ್ತದೆ. ಆ ಕರ್ಮಕ್ಕೆಲ್ಲ ಈ ಮೇಲೆ ಹೇಳಿದ ಐದು ಹೇತುಗಳು, ಕಾರಣಗಳು.

(ಭಾಷ್ಯ)

೪೯೦. ನನು ಏತಾನಿ[1] ಅಧಿಷ್ಠಾನಾದೀನಿ ಸರ್ವಕರ್ಮಣಾಂ ನಿರ್ವರ್ತಕಾನಿ। ಕಥಮ್ ಉಚ್ಯತೇ "ಶರೀರವಾಙ್ಮನೋಭಿಃ ಕರ್ಮ ಪ್ರಾರಭತೇ" ಇತಿ? ನೈಷ ದೋಷಃ। ವಿಧಿಪ್ರತಿಷೇಧಲಕ್ಷಣಂ ಸರ್ವಂ ಕರ್ಮ ಶರೀರಾದಿತ್ರಯಪ್ರಧಾನಮ್। ತದಙ್ಗತಯಾ ದರ್ಶನಶ್ರವಣಾದಿ ಚ ಆರಭತೇ[2] ಇತಿ। ಫಲಕಾಲೇಽಪಿ ತತ್ಪ್ರಧಾನೈಃ ಸಾಧನೈಃ ಭುಜ್ಯತೇ ಇತಿ ಪಞ್ಚಾನಾಮೇವ ಹೇತುತ್ವಂ ನ ವಿರುಧ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ) :—ಈ ಅಧಿಷ್ಠಾನವೇ ಮುಂತಾದವು ಎಲ್ಲಾ ಕರ್ಮಗಳನ್ನೂ ಉಂಟುಮಾಡುವವಾಗಿವೆ. (ಹೀಗಿರುವಲ್ಲಿ) "ಶರೀರವಾಙ್ಮನಸ್ಸುಗಳಿಂದ ಕರ್ಮವನ್ನು ಮಾಡುತ್ತಾನೆ" ಎಂದು ಹೇಳಿರುತ್ತದೆಯಲ್ಲ, (ಇದು) ಹೇಗೆ (ಸರಿ)?

(ಪರಿಹಾರ) :—ಇದೇನೂ ತಪ್ಪಲ್ಲ. (ಏಕೆಂದರೆ) ವಿಧಿಪ್ರತಿಷೇಧಪ್ರಮಾಣ(ದಿಂದ ಮಾಡುವ) ಕರ್ಮವೆಲ್ಲವೂ ಶರೀರವೇ ಮುಂತಾದ ಮೂರನ್ನು ಮುಖ್ಯವಾಗಿಟ್ಟುಕೊಂಡಿರುತ್ತದೆ. ಜೀವನನಿಮಿತ್ತವಾದ ನೋಡುವದು, ಕೇಳುವದು-ಮುಂತಾದದ್ದೂ ಅದರ ಅಂಗವಾಗಿರುತ್ತದೆ. (ಆದ್ದರಿಂದ ಇದೆಲ್ಲವನ್ನೂ) ಮೂರೇ ರಾಶಿಯಾಗಿ ಮಾಡಿ (ಇವುಗಳನ್ನು) 'ಶರೀರಾದಿಗಳಿಂದ ಮಾಡುತ್ತಾನೆ' ಎಂದಿರುತ್ತದೆ. ಫಲಕಾಲದಲ್ಲಿಯೂ ಅವುಗಳನ್ನು ಮುಖ್ಯವಾಗಿಟ್ಟುಕೊಂಡಿರುವ ಸಾಧನಗಳಿಂದಲೇ ಭೋಗಿ

---

1. ನಿ॥ ಪಾಠದಲ್ಲಿಲ್ಲ.

2. 'ಆರಭ್ಯತೇ' ಎಂಬ ಅಚ್ಚಿನ ಪಾಠವನ್ನು ಗೀತಾಮೂಲಕ್ಕೆ ತಕ್ಕಂತೆ ಹೀಗೆ ತಿದ್ದಿಕೊಂಡಿದೆ. "ಶರೀರಾದಿಭಿರಧಿಷ್ಠಾನಾದಿಭಿರಾರಭತೇ" ಎಂದು ನಿ॥ ವಾ॥

ಸುತ್ತಾರಾದ್ದರಿಂದ (ಅಧಿಷ್ಠಾನವೇ ಮುಂತಾದ) ಐದೇ (ಕರ್ಮಕ್ಕೆ) ಹೇತುವೆಂದು ಹೇಳಿದ್ದಕ್ಕೆ (ಇದು) ವಿರುದ್ಧವಲ್ಲ.

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬ ॥**

೧೬. ಆದರೆ ಇಲ್ಲಿ ಹೀಗಿರುವಲ್ಲಿ ಕೇವಲನಾದ ಆತ್ಮನನ್ನು ಯಾವನು ಅಕೃತಬುದ್ಧಿಯಾಗಿರುವದರಿಂದ ಕರ್ತೃವೆಂದು ತಿಳಿದುಕೊಳ್ಳುತ್ತಾನೋ ಆ ದುರ್ಮತಿಯು ತಿಳಿಯನು.

(ಭಾಷ್ಯ)

೪೯೧. 'ತತ್ರ' ಇತಿ ಪ್ರಕೃತೇನ ಸಮ್ಬಧ್ಯತೇ। ಏವಂ ಸತಿ ಏವಂ ಯಥೋಕ್ತೈಃ ಪಞ್ಚಭಿಃ ಹೇತುಭಿಃ ನಿರ್ವರ್ತ್ಯೇ ಸತಿ ಕರ್ಮಣಿ। 'ತತ್ರ ಏವಂ ಸತಿ' ಇತಿ ದುರ್ಮತಿತ್ವಸ್ಯ ಹೇತುತ್ವೇನ ಸಮ್ಬಧ್ಯತೇ। ತತ್ರ ಏತೈಃ[1] ಆತ್ಮಾನನ್ಯತ್ವೇನ ಅವಿದ್ಯಯಾ ಪರಿಕಲ್ಪಿತೈಃ ಕ್ರಿಯಮಾಣಸ್ಯ ಕರ್ಮಣಃ ಅಹಮೇವ ಕರ್ತಾ ಇತಿ ಕರ್ತಾರಮ್ ಆತ್ಮಾನಂ ಕೇವಲಂ ಶುದ್ಧಂ ತು ಯಃ ಪಶ್ಯತಿ ಅವಿದ್ವಾನ್। ಕಸ್ಮಾತ್? ವೇದಾನ್ತಾಚಾರ್ಯೋಪದೇಶನ್ಯಾಯೈಃ ಅಕೃತಬುದ್ಧಿತ್ವಾತ್ ಅಸಂಸ್ಕೃತಬುದ್ಧಿತ್ವಾತ್। ಯೋಽಪಿ ದೇಹಾದಿವ್ಯತಿರಿಕ್ತಾತ್ಮವಾದೀ ಆತ್ಮಾನಮೇವ ಕೇವಲಂ ಕರ್ತಾರಂ ಪಶ್ಯತಿ ಅಸಾವಪಿ ಅಕೃತಬುದ್ಧಿಃ। ಅತಃ ಅಕೃತಬುದ್ಧಿತ್ವಾತ್। ನ ಸ ಪಶ್ಯತಿ ಆತ್ಮನಃ ತತ್ತ್ವಂ ಕರ್ಮಣೋ ವಾ ಇತ್ಯರ್ಥಃ। ಅತಃ ದುರ್ಮತಿಃ ಕುತ್ಸಿತಾ ವಿಪರೀತಾ ದುಷ್ಟಾ ಅಜಸ್ರಂ ಜನನಮರಣಪ್ರತಿಪತ್ತಿಹೇತುಭೂತಾ ಮತಿಃ ಅಸ್ಯ ಇತಿ ದುರ್ಮತಿಃ। ಸಃ ಪಶ್ಯನ್ನಪಿ ನ ಪಶ್ಯತಿ। ಯಥಾ ತೈಮಿರಿಕಃ ಅನೇಕಂ ಚನ್ದ್ರಮ್। ಯಥಾ ವಾ ಅಭ್ರೇಷು ಧಾವತ್ಸು ಚನ್ದ್ರಂ ಧಾವನ್ತಮ್। ಯಥಾ ವಾ ವಾಹನೇ ಉಪವಿಷ್ಟಃ ಅನ್ಯೇಷು ಧಾವತ್ಸು ಆತ್ಮಾನಂ ಧಾವನ್ತಮ್।

(ಭಾಷ್ಯಾರ್ಥ)

ಇಲ್ಲಿ ಎಂಬುದು ಪ್ರಕೃತ (ವಿಷಯ)ಕ್ಕೆ ಸಂಬಂಧಪಡುತ್ತದೆ. ಹೀಗಿರುವಲ್ಲಿ ಹೀಗೆ ಮೇಲೆ ಹೇಳಿರುವ ಐದು ಹೇತುಗಳಿಂದ ಕರ್ಮವು ಆಗುತ್ತಿರುವಲ್ಲಿ "ಇಲ್ಲಿ

---

1. 'ಏತೇಷು' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಹೀಗಿರುವಲ್ಲಿ" ಎಂಬುದನ್ನು ದುರ್ಮತಿ ಎಂಬುದಕ್ಕೆ ಹೇತುವಾಗಿ ಅನ್ವಯಿಸಿಕೊಂಡಿರುತ್ತದೆ. **ಇಲ್ಲಿ ತನಗಿಂತ ಬೇರೆಯಲ್ಲವೆಂದು ಅವಿದ್ಯೆಯಿಂದ ಕಲ್ಪಿತವಾಗಿರುವ ಈ ಐದರಿಂದ ಮಾಡಲ್ಪಡುತ್ತಿರುವ ಕರ್ಮಕ್ಕೆ 'ನಾನೇ ಕರ್ತನು' ಎಂದು ಕೇವಲನಾದ ಶುದ್ಧನಾದ ಆತ್ಮನನ್ನು ಕರ್ತನೆಂದು ಯಾವ ಅಜ್ಞನು ತಿಳಿದು ಕೊಂಡಿರುವನೋ**[1].–ಅದೇಕೆ (ಹಾಗೆ ತಿಳಿದುಕೊಳ್ಳುವನು? ಎಂದರೆ) **ಅಕೃತ ಬುದ್ಧಿಯಾಗಿರುವದರಿಂದ**; ಉಪನಿಷತ್ತು, ಆಚಾರ್ಯ–ಇವರ ಉಪದೇಶದಿಂದಲೂ ಯುಕ್ತಿಯಿಂದಲೂ ಸಂಸ್ಕಾರವನ್ನು ಹೊಂದದೆ ಇರುವ ಬುದ್ಧಿಯುಳ್ಳವನಾದ್ದರಿಂದ. (ಇನ್ನು) ಯಾವನು ದೇಹಾದಿಗಳಿಗಿಂತ ಆತ್ಮನು ಬೇರೆಯೆಂದು (ತಿಳಿದುಕೊಂಡಿರುವ) ವಾದಿಯಾದರೂ ಕೇವಲನಾದ ಆತ್ಮನನ್ನೇ ಕರ್ತೃವೆಂದು ತಿಳಿದುಕೊಂಡಿರುವನೋ ಅವನೂ[2] ಅಕೃತಬುದ್ಧಿಯೇ. ಆದ್ದರಿಂದ ಹೀಗೆ ಅಕೃತಬುದ್ಧಿಯಾಗಿರುವದರಿಂದ (ಯಾವನು ಆತ್ಮನನ್ನು ಕರ್ತೃವೆಂದು ತಿಳಿದುಕೊಂಡಿರುವನೋ)–ಅವನು ಆತ್ಮನ ತತ್ತ್ವವನ್ನಾಗಲಿ ಕರ್ಮದ ತತ್ತ್ವವನ್ನಾಗಲಿ ತಿಳಿದುಕೊಂಡಿರುವದಿಲ್ಲ[3] ಎಂದರ್ಥ. ಆದ್ದರಿಂದ ಅವನು **ದುರ್ಮತಿಯು**. ಕುತ್ಸಿತವಾದ, ವಿರುದ್ಧವಾದ, ದುಷ್ಟವಾದ, ಯಾವಾಗಲೂ ಹುಟ್ಟುವದು, ಸಾಯುವದು, ಇವುಗಳನ್ನೇ ಪಡೆಯುವದಕ್ಕೆ ಕಾರಣವಾಗಿರುವ ಮತಿಯು ಇವನಿಗೆ ಇರುವದರಿಂದ (ಇವನು) ದುರ್ಮತಿಯು; ಅವನು ತಿಳಿದಿದ್ದರೂ ತಿಳಿಯನು. ಕಣ್ಣು ಪರೆಯಿರುವವನು ಅನೇಕ ಚಂದ್ರರನ್ನು (ಕಂಡರೂ) ಅಥವಾ ಮೋಡಗಳು ಓಡುತ್ತಿರುವಲ್ಲಿ ಚಂದ್ರನು ಓಡುತ್ತಿರುವನೆಂದು (ತಿಳಿಯದವನು ಎಣಿಸಿದರೂ) ಅಥವಾ ವಾಹನದ ಮೇಲೆ ಕುಳಿತವನು ಮಿಕ್ಕವರು ಓಡುತ್ತಿರುವಲ್ಲಿ ತಾನೇ ಓಡುತ್ತಿರುವೆನೆಂದು (ಅರಿತರೂ) ಹೇಗೆ (ನಿಜವನ್ನು ಅರಿಯದೆ ಇರುವನೋ) ಹಾಗೆಯೇ (ಇವನೂ ನಿಜವನ್ನರಿಯನು).

(ಭಾಷ್ಯ)

೪೯೨. ಕಃ ಪುನಃ ಸುಮತಿಃ, ಯಃ ಸಮ್ಯಕ್ ಪಶ್ಯತೀತಿ? **ಉಚ್ಯತೇ**—

---

1. ಆತ್ಮನು ಅದ್ವಿತೀಯನಾಗಿದ್ದರೂ ಅಕರ್ತೃವಾಗಿದ್ದರೂ ಸಂಘಾತವೇ ತಾನೆಂದೂ ತಾನು ಕರ್ತೃವೆಂದೂ ತಿಳಿಯುವವನನ್ನು ಇಲ್ಲಿ ಹೇಳಿದೆ. ಇದು ಚಾರ್ವಾಕದರ್ಶನವು.

2. ಇದು ಲಿಂಗಶರೀರದಿಂದ ಆತ್ಮನನ್ನು ವಿಂಗಡಿಸಿ ಅರಿಯದ ಮೀಮಾಂಸಕರ ಮತ್ತು ತಾರ್ಕಿಕರ ದರ್ಶನವು.

3. ಆತ್ಮನು ಅಕರ್ತೃವೆಂಬ ತತ್ತ್ವವನ್ನಾಗಲಿ ಕರ್ಮವು ಅವಿದ್ಯಕವಾದ ಅಧಿಷ್ಠಾನಾದಿಗಳಿಂದ ಆಗುವದೆಂಬುದನ್ನಾಗಲಿ ಅರಿಯನು–ಎಂದು ಭಾವ.

(ಭಾಷ್ಯಾರ್ಥ)

(ಹಾಗಾದರೆ) ಸರಿಯಾಗಿ ತಿಳಿದುಕೊಂಡಿರುವನೆಂಬ (ಆ) ಸುಮತಿಯಾದರೂ ಯಾರು? ಎಂದರೆ ಹೇಳುತ್ತಾನೆ :—

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ।**
**ಹತ್ವಾಪಿ ಸ ಇಮಾಲ್ಲೋಕಾನ್ನ ಹನ್ತಿ ನ ನಿಬಧ್ಯತೇ ॥ ೧೭ ॥**

೧೭. ಯಾವನಿಗೆ ಅಹಂಕೃತ್ತಿನ ಭಾವವಿರುವದಿಲ್ಲವೋ ಯಾವನ ಬುದ್ಧಿಯು ಲಿಪ್ತವಾಗದಿರುವದೋ ಅವನು ಈ ಲೋಕಗಳನ್ನು ಕೊಂದರೂ ಕೊಲ್ಲುವದಿಲ್ಲ, ನಿಬದ್ಧನಾಗುವದಿಲ್ಲ.

(ಭಾಷ್ಯ)

೪೯೩. ಯಸ್ಯ ಶಾಸ್ತ್ರಾಚಾರ್ಯೋಪದೇಶನ್ಯಾಯಸಂಸ್ಕೃತಾತ್ಮನಃ[1] ನ ಭವತಿ ಅಹಂಕೃತಃ ಅಹಂ ಕರ್ತಾ ಇತ್ಯೇವಂಲಕ್ಷಣಃ ಭಾವಃ ಭಾವನಾ ಪ್ರತ್ಯಯಃ। "ಏತೇ ಏವ ಪಞ್ಚ ಅಧಿಷ್ಠಾನಾದಯಃ ಅವಿದ್ಯಯಾ ಆತ್ಮನಿ ಕಲ್ಪಿತಾಃ ಸರ್ವಕರ್ಮಣಾಂ ಕರ್ತಾರಃ ನಾಹಮ್। ಅಹಂ ತು ತದ್ವ್ಯಾಪಾರಾಣಾಂ ಸಾಕ್ಷಿಭೂತಃ। 'ಅಪ್ರಾಣೋ ಹ್ಯಮನಾಃ ಶುಭ್ರೋಽಕ್ಷರಾತ್ ಪರತಃ ಪರಃ' (ಮುಂ. ೨-೧-೨) ಕೇವಲಃ, ಅವಿಕ್ರಿಯಃ" ಇತ್ಯೇವಂ ಪಶ್ಯತಿ ಇತ್ಯೇತತ್। ಬುದ್ಧಿಃ ಅನ್ತಃಕರಣಂ ಯಸ್ಯ ಆತ್ಮನಃ ಉಪಾಧಿಭೂತಾ ನ ಲಿಪ್ಯತೇ ನ ಅನುಶಯಿನೀ ಭವತಿ "ಇದಮ್ ಅಹಮ್ ಅಕಾರ್ಷಮ್ ತೇನ ಅಹಂ ನರಕಂ ಗಮಿಷ್ಯಾಮಿ" ಇತ್ಯೇವಂ ಯಸ್ಯ ಬುದ್ಧಿಃ ನ ಲಿಪ್ಯತೇ। ಸ ಸುಮತಿಃ ಸ ಪಶ್ಯತಿ। ಹತ್ವಾಪಿ ಸ ಇಮಾನ್ ಲೋಕಾನ್ ಸರ್ವಾನ್। ಇಮಾನ್ ಇತ್ಯರ್ಥಃ। ನ ಹನ್ತಿ ಹನನಕ್ರಿಯಾಂ ನ ಕರೋತಿ ನ ನಿಬಧ್ಯತೇ ನಾಪಿ ತತ್ಕಾರ್ಯೇಣ ಅಧರ್ಮಫಲೇನ ಸಂಬಧ್ಯತೇ ॥

(ಭಾಷ್ಯಾರ್ಥ)

**ಶಾಸ್ತ್ರದ ಮತ್ತು ಆಚಾರ್ಯರ ಉಪದೇಶ, ನ್ಯಾಯ-(ಇವುಗಳಿಂದ) ಸಂಸ್ಕಾರವಾಗಿರುವ ಅಂತಃಕರಣವುಳ್ಳ, ಯಾವನಿಗೆ ಅಹಂಕೃತ್ತಿನ, ನಾನು**

---

1. 'ನ್ಯಾಯೇನ' ಪ್ಪೈ॥; 'ನ್ಯಾಯೈಃ' ಮ॥

**ಕರ್ತನು ಎಂಬೀ ರೂಪದ ಭಾವವು, ಭಾವನೆಯೂ, ತಿಳಿವಳಿಕೆಯು**[1] ಇರುವ ದಿಲ್ಲವೋ; "ಅವಿದ್ಯೆಯಿಂದ ಆತ್ಮನಲ್ಲಿ ಕಲ್ಪಿತವಾಗಿರುವ ಅಧಿಷ್ಠಾನವೇ ಮುಂತಾದ ಈ ಐದೇ ಎಲ್ಲಾ ಕರ್ಮಗಳಿಗೂ ಕರ್ತೃಗಳೇ ಹೊರತು ನಾನಲ್ಲ. ನಾನಾದರೋ ಇವು ಗಳ ವ್ಯಾಪಾರಗಳಿಗೆ ಸಾಕ್ಷಿಯಾಗಿರುವವನು[2], 'ಅಪ್ರಾಣನು, ಅಮನನು, ಶುಭ್ರನು, ಹೆಚ್ಚಿನ ಅಕ್ಷರಕ್ಕಿಂತಲೂ ಹೆಚ್ಚಿನವನು' (ಮುಂ. ೨-೧-೨), ಕೇವಲನು, ವಿಕಾರ ರಹಿತನು" ಎಂದೀ ಪರಿಯಲ್ಲಿ ಅರಿತಿರುವನೋ ಎಂದು ಅಭಿಪ್ರಾಯ. ಯಾವನಿಗೆ ತನ್ನ ಉಪಾಧಿಯಾಗಿರುವ ಬುದ್ಧಿಯು ಅಂತಃಕರಣವು ಲಿಪ್ತವಾಗುವದಿಲ್ಲವೋ ಅನು ಶಯವುಳ್ಳದ್ದಾಗಿರುವದಿಲ್ಲವೋ[3] ಇದನ್ನು ನಾನು ಮಾಡಿರುವೆನು, ಅದರಿಂದ ನಾನು ನರಕಕ್ಕೆ ಹೋಗುವೆನು ಎಂದಿಂತು ಯಾವನ ಬುದ್ಧಿಯು ಲಿಪ್ತವಾಗುವದಿಲ್ಲವೋ ಅವನು ಸುಮತಿಯು, ಅವನು (ನಿಜವನ್ನು) ಅರಿತಿರುವನು. ಅವನು ಈ ಲೋಕ ಗಳನ್ನೆಲ್ಲ, ಈ ಪ್ರಾಣಿಗಳನ್ನು ಎಂದರ್ಥ; (ಪ್ರಾಣಿಗಳನ್ನೆಲ್ಲ) ಕೊಂದರೂ ಕೊಲ್ಲು ವದಿಲ್ಲ. ಕೊಲ್ಲುವಿಕೆ ಎಂಬ ಕ್ರಿಯೆಯನ್ನು ಮಾಡಿದವನಾಗುವದಿಲ್ಲ; ನಿಬದ್ಧನೂ ಆಗುವದಿಲ್ಲ, ಆ (ಕೊಲ್ಲುವಿಕೆಯ) ಕಾರ್ಯವಾದ ಅಧರ್ಮ(ರೂಪವಾದ) ಫಲದ ಸಂಬಂಧವುಳ್ಳವನಾಗುವದೂ ಇಲ್ಲ.

## ಆತ್ಮನಲ್ಲಿ ದೃಷ್ಟಿಭೇದದಿಂದ ಕರ್ತೃತ್ವಾಕರ್ತೃತ್ವಗಳು

(ಭಾಷ್ಯ)

೪೯೪. ನನು ಹತ್ವಾಪಿ ನ ಹನ್ತಿ ಇತಿ ವಿಪ್ರತಿಷಿದ್ಧಮ್ ಉಚ್ಯತೇ । ಯದ್ಯಪಿ ಸ್ತುತಿಃ[4] । ನೈಷ ದೋಷಃ । ಲೌಕಿಕಪಾರಮಾರ್ಥಿಕದೃಷ್ಟ್ಯಪೇಕ್ಷಯಾ ತದುಪಪತ್ತೇಃ । ದೇಹಾದ್ಯಾತ್ಮಬುದ್ಧ್ಯಾ ಹನ್ತಾಹಮ್ ಇತಿ ಲೌಕಿಕೀಂ ದೃಷ್ಟಿಮ್ ಆಶ್ರಿತ್ಯ 'ಹತ್ವಾಪಿ'

---

1, 'ಅಹಂಕೃತ್' ಎಂದರೆ ಅಹಂಕಾರವು; ಅಹಂಕಾರದ ಭಾವವೆಂದರೆ ಕರ್ತೃ ತ್ವವು. ಅಹಂಕೃತಃ–ಅಹಂಕಾರದಿಂದ ಆದ, ಭಾವಃ–ಅಭಿಮಾನವು ಎಂದೂ ಕನ್ನಡಿಸ ಬಹುದು. ಅಹಂಪ್ರತ್ಯಯರೂಪವಾದ ಅಂತಃಕರಣವನ್ನೇ ತಾನೆಂಬ ತಪ್ಪುತಿಳಿವಳಿಕೆಯೇ ಸರ್ವಾನರ್ಥಕ್ಕೆ ಮೂಲವಾದ ಅವಿದ್ಯೆ.

2. ಅಹಂಕಾರಾಧ್ಯಾಸಯುಕ್ತವಾದ ರೂಪಕ್ಕಿಂತ ಬೇರೆಯಾದ ಸಾಕ್ಷಿಚೈತನ್ಯವೇ ಆತ್ಮನೆಂಬುದನ್ನು ತಿಳಿಸುವದೇ ವೇದಾಂತದ ಗುರಿಯು. ಸೂ. ಭಾ. ೧-೧-೪.

3. ಕರ್ಮದ ಸಂಸ್ಕಾರದಿಂದಾದ ಕ್ಲೇಶವೇ ಇಲ್ಲಿ ಅನುಶಯವು.

4. ಮೈ॥ದಲ್ಲಿಲ್ಲ. ಇರುವದು ಒಳ್ಳೆಯದು.

ಇತ್ಯಾಹ । ಯಥಾದರ್ಶಿತಾಂ ಪಾರಮಾರ್ಥಿಕೀಂ ದೃಷ್ಟಿಮ್[1] ಆಶ್ರಿತ್ಯ 'ನ ಹನ್ತಿ ನ ನಿಬಧ್ಯತೇ' ಇತಿ । (ಇತಿ)[2] ಏತದುಭಯಮ್[3] ಉಪಪದ್ಯತೇ ಏವ ॥

(ಭಾಷ್ಯಾರ್ಥ)

(ಆಕ್ಷೇಪ) – ಇದು ಸ್ತುತಿಯಾದರೂ[5] 'ಕೊಂದರೂ ಕೊಲ್ಲುವದಿಲ್ಲ' ಎಂದು ಹೇಳಿರುವದು ವಿರುದ್ಧವಲ್ಲವೆ ?

(ಪರಿಹಾರ) :—ಇದೇನೂ ತಪ್ಪಲ್ಲ. ಏಕೆಂದರೆ ಲೌಕಿಕ, ಪಾರಮಾರ್ಥಿಕ (ಎಂಬ ಬೇರೆಬೇರೆಯ) ದೃಷ್ಟಿಗಳ ಅಪೇಕ್ಷೆಯಿಂದ ಅದು ಸರಿಯಾಗುತ್ತದೆ. ದೇಹಾದಿಗಳೇ ಆತ್ಮನೆಂಬ ಬುದ್ಧಿಯಿಂದ ನಾನು ಕೊಲ್ಲುವವನು ಎಂದು (ತಿಳಿಯುವ) **ಲೌಕಿಕ ದೃಷ್ಟಿ**ಯನ್ನು ಆಶ್ರಯಿಸಿ 'ಕೊಂದರೂ' ಎಂದಿರುತ್ತಾನೆ ; ಮೇಲೆ ತಿಳಿಸಿರುವ **ಪಾರಮಾರ್ಥಿಕದೃಷ್ಟಿ**ಯನ್ನು ಅವಲಂಬಿಸಿ 'ಕೊಲ್ಲುವದೂ ಇಲ್ಲ, ಬದ್ಧನಾಗುವದೂ ಇಲ್ಲ' ಎಂದು (ಹೇಳಿರುತ್ತಾನೆ). ಹೀಗೆ ಇವೆರಡೂ ಹೊಂದಿಯೇ ಹೊಂದುತ್ತದೆ.

(ಭಾಷ್ಯ)

೪೯೫. ನನು ಅಧಿಷ್ಠಾನಾದಿಭಿಃ ಸಮ್ಭೂಯ ಕರೋತ್ಯೇವ ಆತ್ಮಾ । "ಕರ್ತಾರಮಾತ್ಮಾನಂ ಕೇವಲಂ ತು ಯಃ" (೧೮-೧೬) ಇತಿ ಕೇವಲಶಬ್ದಪ್ರಯೋಗಾತ್ । ನೈಷ ದೋಷಃ । ಆತ್ಮನಃ ಅವಿಕ್ರಿಯಸ್ವಭಾವತ್ವೇ ಅಧಿಷ್ಠಾನಾದಿಭಿಃ ಸಂಹತತ್ವಾನುಪಪತ್ತೇಃ । ವಿಕ್ರಿಯಾವತೋ ಹಿ ಅನ್ಯೈಃ ಸಂಹನನಂ ಸಮ್ಭವತಿ, ಸಂಹತ್ಯ ವಾ ಕರ್ತೃತ್ವಂ ಸ್ಯಾತ್ । ನ ತು ಅವಿಕ್ರಿಯಸ್ಯ ಆತ್ಮನಃ ಕೇನಚಿತ್ ಸಂಹನನಮ್ ಅಸ್ತಿ ಇತಿ ನ ಸಮ್ಭೂಯಕರ್ತೃತ್ವಮ್ ಉಪಪದ್ಯತೇ । ಅತಃ ಕೇವಲತ್ವಮ್ ಆತ್ಮನಃ ಸ್ವಾಭಾವಿಕಮ್ ಇತಿ ಕೇವಲಶಬ್ದಃ ಅನುವಾದಮಾತ್ರಮ್ । ಅವಿಕ್ರಿಯತ್ವಂ ಚ ಆತ್ಮನಃ ಶ್ರುತಿಸ್ಮೃತಿನ್ಯಾಯಪ್ರಸಿದ್ಧಮ್ । "ಅವಿಕಾರ್ಯೋಽಯಮುಚ್ಯತೇ"

---

1. 'ಪಾರಮಾರ್ಥಿಕದೃಷ್ಟಿಮ್' ಮ॥ ಮೈ॥

2. ಇಲ್ಲಿ ಒಂದು 'ಇತಿ' ಇರಬೇಕೆಂದು ತೋರುತ್ತದೆ.

3. 'ತದುಭಯಮ್' ಸಿ॥ ಗು॥

4. ಇದು ಜ್ಞಾನವನ್ನು ಹೊಗಳುವ ಅರ್ಥವಾದವಾದರೂ ವಿರುದ್ಧವಾಗಿರುವದಕ್ಕೆ ಕಾರಣವಿಲ್ಲ ಎಂದು ಭಾವ.

5. 'ಇತ್ಯಾದಿ' ಎಂದು ಹೆಚ್ಚಾಗಿ ಮ॥ ಮೈ॥

(೨-೨೫), "ಗುಣೈರೇವ ಕರ್ಮಾಣಿ ಕ್ರಿಯನ್ತೇ[1]" [2](೩-೨೭), 'ಶರೀರಸ್ಥೋಽಪಿ. . . ನ ಕರೋತಿ '[2] (೧೩-೩೧) ಇತ್ಯಾದಿ ಅಸಕೃದುಪಪಾದಿತಂ ಗೀತಾಸ್ವೇವ ತಾವತ್ । ಶ್ರುತಿಷು ಚ "ಧ್ಯಾಯತೀವ ಲೇಲಾಯತೀವ" (ಬೃ. ೪-೩-೭) ಇತ್ಯೇವಮಾದ್ಯಾಸು। ನ್ಯಾಯತಶ್ಚ ನಿರವಯವಮ್ ಅಪರತನ್ತ್ರಮ್ ಅವಿಕ್ರಿಯಮ್ ಆತ್ಮತತ್ತ್ವಮ್ ಇತಿ ರಾಜಮಾರ್ಗಃ। ವಿಕ್ರಿಯಾವತ್ತ್ವಾಭ್ಯುಪಗಮೇಽಪಿ ಆತ್ಮನಃ ಸ್ವಕೀಯೈವ ವಿಕ್ರಿಯಾ ಸ್ವಸ್ಯ ಭವಿತುಮರ್ಹತಿ ನಾಧಿಷ್ಠಾನಾದೀನಾಂ ಕರ್ಮಾಣಿ ಆತ್ಮಕರ್ತೃಕಾಣಿ ಸ್ಯುಃ। ನ ಹಿ ಪರಸ್ಯ ಕರ್ಮ ಪರೇಣ ಅಕೃತಮ್ ಆಗನ್ತುಮರ್ಹತಿ। ಯತ್ ತು ಅವಿದ್ಯಯಾ ಗಮಿತಮ್ ನ ತತ್ ತಸ್ಯ। ಯಥಾ ರಜತತ್ವಂ ನ ಶುಕ್ತಿಕಾಯಾಃ, ಯಥಾ ವಾ ತಲಮಲಿನತ್ವಂ[3] ಬಾಲೈಃ ಗಮಿತಮ್ ಅವಿದ್ಯಯಾ ನಾಕಾಶಸ್ಯ। ತಥಾ ಅಧಿಷ್ಠಾನಾದಿವಿಕ್ರಿಯಾಪಿ ತೇಷಾಮೇವ ನಾತ್ಮನಃ। ತಸ್ಮಾತ್ ಯುಕ್ತಮುಕ್ತಮ್ ಅಹಂಕೃತತ್ವಬುದ್ಧಿಲೇಪಾಭಾವಾತ್[4] ವಿದ್ವಾನ್ 'ನ ಹನ್ತಿ ನ ನಿಬಧ್ಯತೇ' ಇತಿ ॥

(ಭಾಷ್ಯಾರ್ಥ)

"ಆತ್ಮಾನಂ ಕೇವಲಂ ತು ಯಃ" (ಆತ್ಮನೊಬ್ಬನೇ ಕರ್ತೃವೆಂದು ಯಾವನು ತಿಳಿಯುತ್ತಾನೋ ಅವನು ಅರಿಯನು ೧೮-೧೪) ಎಂದು 'ಕೇವಲ' ಶಬ್ದವನ್ನು ಪ್ರಯೋಗಮಾಡಿರುವದರಿಂದ ಅಧಿಷ್ಠಾನಾದಿಗಳೊಡನೆ ಸೇರಿಕೊಂಡು ಆತ್ಮನು (ಕರ್ಮವನ್ನು) ಮಾಡುತ್ತಾನೆಂದೇ (ಆಯಿತಲ್ಲ)!

(ಸಮಾಧಾನ) :—ಇದೇನೂ ತಪ್ಪಲ್ಲ, ಏಕೆಂದರೆ ಆತ್ಮನು ವಿಕಾರವಿಲ್ಲದ ಸ್ವಭಾವದವನಾಗಿರುವದರಿಂದ ಅಧಿಷ್ಠಾನಾದಿಗಳೊಡನೆ (ಅವನು) ಕೂಡಿಕೊಂಡಿರುವನೆಂಬುದೇ ಹೊಂದುವದಿಲ್ಲ. ವಿಕಾರವುಳ್ಳವನಿಗೇ ಅಲ್ಲವೆ, ಮಿಕ್ಕ ವಸ್ತುಗಳೊಡನೆ ಕೂಡಿಕೊಳ್ಳುತ್ತಾನೆಂಬುದು ಹೊಂದುತ್ತದೆ, (ಅವುಗಳೊಡನೆ) ಕೂಡಿಕೊಂಡು ಕರ್ತೃವಾಗುತ್ತಾನೆಂಬುದೂ ಹೊಂದುತ್ತದೆ? ಆದರೆ (ಯಾವ) ವಿಕಾರವೂ ಇಲ್ಲದ ಆತ್ಮನಿಗೆ ಯಾವದರೊಡನೆಯೂ ಕೂಡಿಕೊಳ್ಳುವದು (ಆಗುವಂ)ತಿಲ್ಲವಾದ್ದರಿಂದ ಒಟ್ಟು

1. ಇದು ಶ್ಲೋಕದ ಅರ್ಥ ಮಾತ್ರ
2. 'ಶರೀರಸ್ಥೋಽಪಿ ಕೌನ್ತೇಯ' ಮ॥ ಮೈ॥
3. 'ತಲಮಲವತ್ತ್ವಮ್' ನಿ॥
4. 'ಲೇಪಾಭಾವೇನ' ಮ॥ ಮೈ॥ ಗು॥ ವಾ॥

ಗೂಡಿ (ಕರ್ಮವನ್ನು ಮಾಡುವ) ಕರ್ತೃತ್ವವು (ಅವನಿಗೆ) ಹೊಂದುವದಿಲ್ಲ.[1] ಆದ್ದರಿಂದ ಆತ್ಮನಿಗೆ ಕೇವಲನಾಗಿರುವದು ಸ್ವಭಾವವೇ ಆಗಿರುವದರಿಂದ (ಇಲ್ಲಿರುವ). ಕೇವಲ ಎಂಬ ಶಬ್ದವು ಬರಿಯ ಅನುವಾದವಾಗಿರುತ್ತದೆ[2]. ಆತ್ಮನು ವಿಕಾರವಿಲ್ಲದವನೆಂಬುದು ಶ್ರುತಿಯಿಂದಲೂ ಸ್ಮೃತಿಯಿಂದಲೂ ನ್ಯಾಯದಿಂದಲೂ ಪ್ರಸಿದ್ಧವಾಗಿರುತ್ತದೆ. ಮೊದಲನೆಯದಾಗಿ ಗೀತೆಗಳಲ್ಲಿಯೇ "ಈತನು ಅವಿಕಾರ್ಯನೆನಿಸಿರುವನು" (೨-೨೫) "ಗುಣಗಳಿಂದಲೇ ಕರ್ಮಗಳು ಮಾಡಲ್ಪಡುತ್ತಿರುವವು" (೩-೨೭) "ಶರೀರದಲ್ಲಿದ್ದರೂ ಮಾಡುವದಿಲ್ಲ" (೧೩-೩೧)–ಎಂದು ಮುಂತಾಗಿ ಮತ್ತೆ ಮತ್ತೆ ತೋರಿಸಿಕೊಟ್ಟಿರುತ್ತದೆ. "ಧ್ಯಾನಮಾಡುವಂತಿರುತ್ತಾನೆ, ಸಂಚರಿಸುವಂತಿರುತ್ತಾನೆ" (ಬೃ. ೪-೩-೭) ಎಂಬಿದೇ ಮುಂತಾದ ಶ್ರುತಿಗಳಲ್ಲಿಯೂ (ತೋರಿಸಿಕೊಟ್ಟಿರುತ್ತದೆ). ಯುಕ್ತಿಯಿಂದ ನೋಡಿದರೂ ಆತ್ಮತತ್ತ್ವವು ಅವಯವಗಳಿಲ್ಲದ್ದಾದ್ದರಿಂದ ಮತ್ತೊಂದರ ಅಧೀನವಾದದ್ದಲ್ಲ, (ಆದ್ದರಿಂದ) ವಿಕಾರವಿಲ್ಲದ್ದು–ಎಂಬುದು ರಾಜಮಾರ್ಗವಾಗಿರುತ್ತದೆ. (ಆತ್ಮನಲ್ಲಿ) ವಿಕಾರವುಂಟೆಂದು ಒಪ್ಪಿದರೂ ತನ್ನದೇ (ಆಗಿರುವ) ವಿಕಾರವು ತನಗೆ ಆಗಬೇಕೇ ಹೊರತು ಅಧಿಷ್ಠಾನವೇ ಮುಂತಾದವುಗಳ ಕರ್ಮಗಳು ಆತ್ಮನು ಮಾಡಿದವೆಂದು ಆಗಲಾರದು[3]; ಏಕೆಂದರೆ ಒಬ್ಬನು ಮಾಡಿದ ಕರ್ಮವು (ಅದನ್ನು) ಮಾಡದೆ ಇರುವ ಮತ್ತೊಬ್ಬನಿಗೆ ಬಂದು ಸೇರಿಕೊಳ್ಳಲಾರದು. ಯಾವದಾದರೆ ಅವಿದ್ಯೆಯಿಂದ ಸೇರಿಸಿದ್ದೋ ಅದು ಅವನದಲ್ಲ. ಹೇಗೆ ಬೆಳ್ಳಿಯು ಧರ್ಮವು ಕಪ್ಪೆಯ ಚಿಪ್ಪಿನದಲ್ಲವೋ, ಹೇಗೆ ಹುಡುಗರು ತಪ್ಪುತಿಳಿವಳಿಕೆಯಿಂದ ಸೇರಿಸಿದ ತಲವು ಮಲಿನವಾಗಿರುವದೆಂಬ (ದೋಷವು) ಆಕಾಶದ್ದಲ್ಲವೋ ಹಾಗೆಯೇ ಅಧಿಷ್ಠಾನಾದಿಗಳ ವಿಕಾರವೂ ಅವುಗಳದ್ದೇ (ಆದೀತೇ ಹೊರತು) ಆತ್ಮನ(ದಾಗ)ಲಾರದು. ಆದ್ದರಿಂದ ನಾನು ಮಾಡಿದ್ದೆಂಬ ಭಾವವೂ ಬುದ್ಧಿಗೆ ಲೇಪವೂ ಇಲ್ಲದ್ದರಿಂದ ಜ್ಞಾನಿಯು (ನಿಜವಾಗಿ) ಕೊಲ್ಲುವದಿಲ್ಲ, ಬದ್ಧನಾಗುವದೂ ಇಲ್ಲ–ಎಂದು ಹೇಳಿದ್ದು ಸರಿಯೇ.

---

1. ಏಕೆಂದರೆ ಆಗ ಆತ್ಮನು ಸ್ವತಂತ್ರನಲ್ಲವೆಂದೂ ಮತ್ತೊಬ್ಬರ ಪ್ರಯೋಜನಕ್ಕಾಗಿ ಕೆಲಸಮಾಡುವವನೆಂದೂ ಆಗುತ್ತದೆ. ಉ. ಸಾ. ಗದ್ಯ ೨ನೆಯ ಪ್ರಕರಣವನ್ನು ನೋಡಿ.

2. ಒಂಟಿಯಾದ ಎಂಬರ್ಥವುಳ್ಳದ್ದಲ್ಲ; ಏಕೆಂದರೆ ಆತ್ಮನು ಯಾವಾಗಲೂ ಕೇವಲನು, ಅದ್ವಿತೀಯನು.

3. ಅದರೆ ಅಧಿಷ್ಠಾನವೇ ಮುಂತಾದವುಗಳ ವ್ಯಾಪಾರವನ್ನು ಬಿಟ್ಟರೆ ಆತ್ಮನಲ್ಲಿ ಬೇರೆಯ ವಿಕಾರವನ್ನು ತೋರಿಸುವದಕ್ಕೆ ಆಗುವಂತಿಲ್ಲ.

(ಭಾಷ್ಯ)

೪೯೬. "ನಾಯಂ ಹನ್ತಿ ನ ಹನ್ಯತೇ" (೨-೧೯) ಇತಿ ಪ್ರತಿಜ್ಞಾಯ "ನ ಜಾಯತೇ" (೨-೨೦) ಇತ್ಯಾದಿ ಹೇತುವಚನೇನ ಅವಿಕ್ರಿಯತ್ವಮಾತ್ಮನ ಉಕ್ತ್ವಾ "ವೇದಾವಿನಾಶಿನಮ್" (೨-೨೧) ಇತಿ ವಿದುಷಃ ಕರ್ಮಾಧಿಕಾರನಿವೃತ್ತಿಂ ಶಾಸ್ತ್ರಾದೌ ಸಙ್ಕ್ಷೇಪತಃ ಉಕ್ತ್ವಾ ಮಧ್ಯೇ ಪ್ರಸಾರಿತಾಂ[1] ಚ ತತ್ರ ತತ್ರ ಪ್ರಸಙ್ಗಂ ಕೃತ್ವಾ ಇಹ ಉಪಸಂಹರತಿ ಶಾಸ್ತ್ರಾರ್ಥಪಿಣ್ಡೀಕರಣಾಯ ವಿದ್ವಾನ್ "ನ ಹನ್ತಿ ನ ನಿಬಧ್ಯತೇ" ಇತಿ । ಏವಂ ಚ ಸತಿ ದೇಹಭೃತ್ತ್ವಾಭಿಮಾನಾನುಪಪತ್ತೌ ಅವಿದ್ಯಾಕೃತಾಶೇಷಕರ್ಮಸಂನ್ಯಾಸೋಪಪತ್ತೇಃ ಸಂನ್ಯಾಸಿನಾಮ್ ಅನಿಷ್ಟಾದಿ ತ್ರಿವಿಧಂ ಕರ್ಮಣಃ ಫಲಂ ನ ಭವತಿ ಇತಿ ಉಪಪನ್ನಮ್ । ತದ್ವಿಪರ್ಯಯಾಚ್ಚ[2] ಇತರೇಷಾಂ ಭವತಿ ಇತ್ಯೇತಚ್ಚ ಅಪರಿಹಾರ್ಯಮ್ ಇತ್ಯೇಷ ಗೀತಾಶಾಸ್ತ್ರಾರ್ಥಃ ಉಪಸಂಹೃತಃ । ಸ ಏಷ ಸರ್ವವೇದಾರ್ಥಸಾರಃ ನಿಪುಣಮತಿಭಿಃ ಪಣ್ಡಿತೈಃ ವಿಚಾರ್ಯಪ್ರತಿಪತ್ತವ್ಯಃ ಇತಿ ತತ್ರ ತತ್ರ ಪ್ರಕರಣವಿಭಾಗೇನ ದರ್ಶಿತೋಽಸ್ಮಾಭಿಃ ಶಾಸ್ತ್ರನ್ಯಾಯಾನುಸಾರೇಣ ॥

(ಭಾಷ್ಯಾರ್ಥ)

"ಇವನು ಕೊಲ್ಲುವದೂ ಇಲ್ಲ, ಕೊಲ್ಲಲ್ಪಡುವದೂ ಇಲ್ಲ" (೨-೧೯) ಎಂದು ಪ್ರತಿಜ್ಞೆಮಾಡಿ, "ಹುಟ್ಟುವದಿಲ್ಲ" (೨-೨೦) ಮುಂತಾದ ಹೇತುವಚನದಿಂದ ಆತ್ಮನು ವಿಕಾರರಹಿತವೆಂಬುದನ್ನು ಹೇಳಿ "(ಯಾವನು ಇವನು) ಅವಿನಾಶಿಯೆಂದು ತಿಳಿದಿರುವನೋ . . ." (೨-೨೧) ಎಂದು ಜ್ಞಾನಿಗೆ ಕರ್ಮದಲ್ಲಿ ಅಧಿಕಾರವಿಲ್ಲವೆಂಬುದನ್ನು (ಈ) ಶಾಸ್ತ್ರದ ಆದಿಯಲ್ಲಿಯೇ ಸಂಕ್ಷೇಪದಿಂದ ಹೇಳಿ, ನಡುವೆ ಅಲ್ಲಲ್ಲಿ ಪ್ರಸಕ್ತಿಯನ್ನು ಮಾಡಿ ವಿಸ್ತಾರವಾಗಿ ಹೇಳಿರುವದನ್ನು, ಇಲ್ಲಿ (ಮತ್ತೆ) ಶಾಸ್ತ್ರಾರ್ಥವನ್ನು ಒಟ್ಟುಗೂಡಿಸಿ (ತಿಳಿಸು)ವದಕ್ಕಾಗಿ ಜ್ಞಾನಿಯು "ಕೊಲ್ಲುವದೂ ಇಲ್ಲ, ಬದ್ಧನಾಗುವದೂ ಇಲ್ಲ" ಎಂದು (ಭಗವಂತನು) ಉಪಸಂಹಾರಮಾಡಿರುತ್ತಾನೆ[3]. **ಹೀಗಿರುವದರಿಂದ (ತಾನು) ದೇಹಧಾರಿಯೆಂಬ ಅಭಿಮಾನವು ಹೊಂದದೆ ಹೋಗುವದರಿಂದ ಅವಿದ್ಯೆಯಿಂದಾದ ಕರ್ಮಗಳೆಲ್ಲವನ್ನೂ ಸಂನ್ಯಾಸಮಾಡ**

---

1. 'ಪ್ರಸಾರಿತಂ' ಮ॥ ಮೈ॥.

2. 'ತದ್ವಿಪರ್ಯಯಶ್ಚ' ಮ॥ ಮೈ॥

3. ಇಲ್ಲಿ ಸರ್ವಕರ್ಮಸಂನ್ಯಾಸದ ವಿಚಾರಕ್ಕೆ ಗೀತೆಯಲ್ಲಿ ಉಪಕ್ರಮಾದಿಗಳನ್ನು ತೋರಿಸಿಕೊಟ್ಟಿರುತ್ತದೆ.

**ಬಹುದಾದ್ದರಿಂದ ಸಂನ್ಯಾಸಿಗಳಿಗೆ ಅನಿಷ್ಟವಾದದ್ದೇ ಮುಂತಾದ ಮೂರು ಬಗೆಯ ಕರ್ಮದ ಫಲವು ಆಗುವದಿಲ್ಲವೆಂಬುದು ಯುಕ್ತವಾಯಿತು. ಇದಕ್ಕೆ ವಿರುದ್ಧವಾಗಿರುವದರಿಂದ ಮಿಕ್ಕವರಿಗೆ (ಫಲವು) ಆಗುತ್ತದೆ ಎಂಬಿದನ್ನೂ ತಪ್ಪಿಸಿಕೊಳ್ಳುವದಕ್ಕೆ ಆಗುವಹಾಗಿಲ್ಲ-ಎಂಬೀ ಗೀತಾಶಾಸ್ತ್ರಾರ್ಥವನ್ನು ಉಪಸಂಹಾರಮಾಡಿದಂತೆ ಆಯಿತು. ಆ ಇದೇ ಸರ್ವವೇದಗಳ ಅರ್ಥದ ಸಾರವು**[1], (ಇದನ್ನು) ನಿಪುಣಮತಿಗಳಾದ ಪಂಡಿತರು ವಿಚಾರ ಮಾಡಿಯೇ ತಿಳಿದುಕೊಳ್ಳಬೇಕಾಗಿರುವದರಿಂದ ಅಲ್ಲಲ್ಲಿ ಪ್ರಕರಣವನ್ನು ವಿಂಗಡಿಸಿಕೊಂಡು ನಾವು ಶಾಸ್ತ್ರನ್ಯಾಯಾನುಸಾರವಾಗಿ ತೋರಿಸಿಕೊಟ್ಟಿರುತ್ತೇವೆ.

## ಕರ್ಮಗಳಿಗೆ ಪ್ರವರ್ತಕವಾದದ್ದು ಯಾವದು ?

(ಭಾಷ್ಯ)

೪೯೭. ಅಥ ಇದಾನೀಂ ಕರ್ಮಣಾಂ[2] ಪ್ರವರ್ತಕಮ್ ಉಚ್ಯತೇ

(ಭಾಷ್ಯಾರ್ಥ)

ಇನ್ನು ಈಗ ಕರ್ಮಗಳಿಗೆ ಪ್ರವರ್ತಕವು (ಯಾವದೆಂಬುದನ್ನು) ಹೇಳುತ್ತಾನೆ —

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಙ್ಗ್ರಹಃ ॥೧೮॥**

೧೮. ಜ್ಞಾನ, ಜ್ಞೇಯ, ಪರಿಜ್ಞಾತೃ-ಎಂದು ಕರ್ಮಬೋಧನೆಯು ಮೂರು ವಿಧ; ಕರಣ, ಕರ್ಮ, ಕರ್ತ-ಎಂದು ಕರ್ಮಸಂಗ್ರಹವು ಮೂರು ವಿಧ.

---

1. ದೇಹಾದಿಗಳು ಅಸತ್ಯವು, ನಾನು ಅಶರೀರನು-ಎಂಬ ತಿಳಿವಳಿಕೆಯುಳ್ಳವನಿಗೆ ಯಾವ ಕರ್ಮವೂ ಇಲ್ಲ, ಮಿಕ್ಕವರಿಗೆ ಕರ್ಮಫಲವು ತಪ್ಪಿದ್ದಲ್ಲ-ಎಂಬುದು ಗೀತಾಶಾಸ್ತ್ರಾರ್ಥ, ಸರ್ವವೇದಾರ್ಥಸಾರ.

2. ' ತೇಷಾಂ ಕರ್ಮಣಾಂ ' ನಿ॥ ಗು॥

(ಭಾಷ್ಯ)

೪೯೮. ಜ್ಞಾನಂ ಜ್ಞಾಯತೇ ಅನೇನ ಇತಿ ಸರ್ವವಿಷಯಂ ಜ್ಞಾನಮ್[1] ಅವಿಶೇಷೇಣ ಉಚ್ಯತೇ। ತಥಾ ಜ್ಞೇಯಂ ಜ್ಞಾತವ್ಯಮ್। ತದಪಿ ಸಾಮಾನ್ಯೇನೈವ ಸರ್ವಮ್ ಉಚ್ಯತೇ। ತಥಾ ಪರಿಜ್ಞಾತಾ ಉಪಾಧಿಲಕ್ಷಣಃ ಅವಿದ್ಯಾಕಲ್ಪಿತೋ ಭೋಕ್ತಾ ಇತ್ಯೇತತ್ ತ್ರಯಮ್ ಅವಿಶೇಷೇಣ ಸರ್ವಕರ್ಮಣಾಂ ಪ್ರವರ್ತಿಕಾ ತ್ರಿವಿಧಾ ತ್ರಿಪ್ರಕಾರಾ ಕರ್ಮಚೋದನಾ। ಜ್ಞಾನಾದೀನಾಂ ಹಿ ತ್ರಯಾಣಾಂ ಸನ್ನಿಪಾತೇ ಹಾನೋಪಾದಾನಾದಿಪ್ರಯೋಜನಃ[2] ಕರ್ಮಾರಮ್ಭಃ[3] ಸ್ಯಾತ್। ತತಃ ಪಞ್ಚಭಿಃ ಅಧಿಷ್ಠಾನಾದಿಭಿಃ ಆರಬ್ಧಂ ವಾಙ್ಮನಃಕಾಯಾಶ್ರಯಭೇದೇನ ತ್ರಿಧಾ ರಾಶೀಭೂತಂ ತ್ರಿಷು ಕರಣಾದಿಷು ಸಙ್ಗೃಹ್ಯತೇ ಇತ್ಯೇತತ್ ಉಚ್ಯತೇ—ಕರಣಂ ಕ್ರಿಯತೇ ಅನೇನ ಇತಿ ಬಾಹ್ಯಂ ಶ್ರೋತ್ರಾದಿ ಅನ್ತಃಸ್ಥಂ ಬುದ್ಧ್ಯಾದಿ ಚ[4]। ಕರ್ಮ ಈಪ್ಸಿತತಮಂ ಕರ್ತುಃ ಕ್ರಿಯಯಾ ವ್ಯಾಪ್ಯಮಾನಮ್[5]। ಕರ್ತಾ ಕರಣಾನಾಂ ವ್ಯಾಪಾರಯಿತಾ ಉಪಾಧಿಲಕ್ಷಣಃ। ಇತಿ ತ್ರಿವಿಧಃ ತ್ರಿಪ್ರಕಾರಃ ಕರ್ಮಸಙ್ಗ್ರಹಃ। ಸಙ್ಗೃಹ್ಯತೇ ಅಸ್ಮಿನ್ ಇತಿ ಸಙ್ಗ್ರಹಃ। ಕರ್ಮಣಃ ಸಙ್ಗ್ರಹಃ ಕರ್ಮಸಙ್ಗ್ರಹಃ। ಕರ್ಮ ಏಷು ಹಿ ತ್ರಿಷು ಸಮವೈತಿ। ತೇನ ಅಯಂ ತ್ರಿವಿಧಃ ಕರ್ಮಸಙ್ಗ್ರಹಃ ॥

(ಭಾಷ್ಯಾರ್ಥ)

ಜ್ಞಾನವು : ಯಾವದರಿಂದ ಅರಿಯುತ್ತಾರೋ ಅದು (ಜ್ಞಾನವು) ಎಂದು ಸರ್ವವಿಷಯಕವಾದ ಅರಿವನ್ನು (ಇಲ್ಲಿ) ಸಾಮಾನ್ಯವಾಗಿ[6] (ಜ್ಞಾನವೆಂದು) ಕರೆದಿರುತ್ತದೆ. ಇದರಂತೆ ಜ್ಞೇಯವು, ಅರಿಯಲ್ಪಡತಕ್ಕದ್ದು. ಇದನ್ನೂ ಸಾಮಾನ್ಯವಾಗಿಯೇ (ಉಪಯೋಗಿಸಿರುತ್ತದೆ) ; ಎಲ್ಲವನ್ನೂ (ಜ್ಞೇಯವೆಂದು) ಕರೆದಿರುತ್ತದೆ

1. ಮ॥ದಲ್ಲಿ ಮಾತ್ರ ಇದೆ.

2. " ಹಾನೋಪಾದಾನೋಪೇಕ್ಷಾಪ್ರಯೋಜನಃ " ಮ॥

3. ಮ॥ ಮೈ॥ಗಳನ್ನು ಬಿಟ್ಟರೆ ಉಳಿದ ಪುಸ್ತಕಗಳಲ್ಲಿ ' ಸರ್ವಕರ್ಮಾರಮ್ಭಃ ' ಎಂದಿದೆ.

4. ಮ॥ದಲ್ಲಿ ಮಾತ್ರ ಇದೆ ; ಇದ್ದರೆ ಒಳ್ಳೆಯದು.

5. ' ಪ್ರಾಪ್ಯಮಾಣಂ ' ಮ॥

6. ಘಟಜ್ಞಾನ, ಪಟಜ್ಞಾನ_ಎಂಬ ಇಂಥದ್ದೊಂದು ವಿಶೇಷಜ್ಞಾನವನ್ನು ಮನಸ್ಸಿನಲ್ಲಿಟ್ಟುಕೊಳ್ಳದೆ.

ಹೀಗೆಯೇ ಪರಿಜ್ಞಾತೃ, ಉಪಾಧಿಯಿಂದ ತಿಳಿದುಬರುವ [1] ಅವಿದ್ಯಾಕಲ್ಪಿತನಾದ [2] ಭೋಕ್ತೃ(ವನ್ನು ಹೀಗೆಂದು ಕರೆದಿದೆ). ಹೀಗೆ ಈ ಮೂರೂ ಸಾಮಾನ್ಯವಾಗಿ ಎಲ್ಲಾ ಕರ್ಮಗಳಿಗೂ ಪ್ರವರ್ತಕವಾಗಿರುವ ಮೂರು ವಿಧವಾದ ಮೂರು ಬಗೆಯಾದ ಕರ್ಮಚೋದನೆಯು. ಜ್ಞಾನವೇ ಮುಂತಾದ ಮೂರೂ ಸೇರಿದರೇ ಅಲ್ಲವೆ, ಬಿಡುವದು, ತೆಗೆದುಕೊಳ್ಳುವದು–ಮುಂತಾದ [3] ಪ್ರಯೋಜನವುಳ್ಳ (ಯಾವ) ಕರ್ಮವನ್ನಾದರೂ ಮಾಡುವದು ? [4] ಆದರಿಂದ (ಪ್ರೇರಿತನಾಗಿ) ಅಧಿಷ್ಠಾನವೇ ಮುಂತಾದ ಐದರಿಂದ ಮಾಡುವ ವಾಕ್ಕು, ಮನಸ್ಸು, ಕಾಯ–ಎಂಬ ಬೇರೆಬೇರೆಯ ಆಶ್ರಯಗಳಿಂದ ಮೂರು ಬಗೆಯಾಗಿರುವ (ಕರ್ಮವನ್ನು) ಕರಣವೇ ಮುಂತಾದ ಮೂರರಲ್ಲಿ ಸಂಗ್ರಹಿಸ(ಬಹುದಾಗಿದೆ) ಎಂದು ಇದನ್ನು ಹೇಳುತ್ತಾನೆ: ಕರಣವು: ಇದರಿಂದ (ಕ್ರಿಯೆಯನ್ನು) ಮಾಡುತ್ತಾರಾದ್ದರಿಂದ (ಇದು ಕರಣವು); ಹೊರಗಿನ ಶ್ರೋತ್ರವೇ ಮುಂತಾದದ್ದು ಮತ್ತು ಒಳಗಿನ ಬುದ್ಧಿಯೇ ಮುಂತಾದದ್ದು [5]. ಕರ್ಮ: ಕರ್ತೃವಿಗೆ ಈಪ್ಸಿತತಮವಾದದ್ದು, ಕ್ರಿಯೆಯಿಂದ ವ್ಯಾಪ್ಯವಾದದ್ದು [6]. ಕರ್ತೃ: ಕರಣಗಳನ್ನು ಕೆಲಸಮಾಡಿಸುವ ಉಪಾಧಿಲಕ್ಷಣನಾದ ಜೀವನು. ಹೀಗೆಂದು ಕರ್ಮಸಂಗ್ರಹವು ಮೂರು ವಿಧ, ಮೂರು ಬಗೆ. ಇದರಲ್ಲಿ ಸೇರಿಕೊಂಡಿರುತ್ತದೆಯಾದ್ದರಿಂದ ಸಂಗ್ರಹವು; ಕರ್ಮದ ಸಂಗ್ರಹವು ಕರ್ಮಸಂಗ್ರಹವು. ಈ ಮೂರರಲ್ಲಿಯೇ ಅಲ್ಲವೆ, ಕರ್ಮವು ಸಂಬದ್ಧವಾಗಿರುತ್ತದೆ [7] ? ಆದ್ದರಿಂದ ಈ ಮೂರು ಬಗೆಯಾಗಿರುವದು ಕರ್ಮಸಂಗ್ರಹವು.

---

1. ೧೮-೧೪ರಲ್ಲಿ ಕರ್ತಾ ಎಂಬುದರ ಭಾಷ್ಯವನ್ನೂ ಅದರ ಮೇಲಿನ ಟಿಪ್ಪಣಿಯನ್ನೂ ನೋಡಿರಿ.

2. ಉಪಾಧಿಯೂ ಭೋಕ್ತೃತ್ವವೂ ಅವಿದ್ಯೆಯಿಂದ ಕಲ್ಪಿತವಾಗಿರುತ್ತವೆ.

3. ಉಪೇಕ್ಷೆಯನ್ನೂ ಇಲ್ಲಿ ಸೇರಿಸಬೇಕು; ಮ|| ಪಾಠದಲ್ಲಿ ಅದೂ ಇದೆ.

4. ಜ್ಞಾತೃವು ಜ್ಞೇಯವನ್ನು ಅರಿತಮೇಲೆಯೇ ಅದನ್ನು ತೆಗೆದುಕೊಳ್ಳುವದಕ್ಕಾಗಲಿ ಬಿಡುವದಕ್ಕಾಗಲಿ ಉಪೇಕ್ಷಿಸುವದಕ್ಕಾಗಲಿ ಇಚ್ಛಿಸುತ್ತಾನೆ ಎಂದು ಅರ್ಥ.

5. ಮುಂತಾದದ್ದು ಎಂದರೆ ಮನಸ್ಸು. ೧೪ನೆಯ ಶ್ಲೋಕ ಭಾಷ್ಯದಲ್ಲಿ (ಪು. ೯೯೦) ಕರಣಗಳನ್ನು ವಿವರಿಸಿರುವ ಟಿಪ್ಪಣಿಯನ್ನು ನೋಡಿ.

6. ಕರ್ತೃವು ಕ್ರಿಯೆಯಿಂದ ಮುಖ್ಯವಾಗಿ ಯಾವದನ್ನು ಹೊಂದಬೇಕೆಂದು ಇಚ್ಛಿಸುತ್ತಾನೋ ಅದು ಕರ್ಮವು ಎಂದು ವ್ಯಾಕರಣದ ಪರಿಭಾಷೆ. ಪಾ. ಸೂ. ೧-೪-೪೯.

7. ಮುಖ್ಯವಾಗಿ ಇವುಗಳಿಂದಲೇ ಕ್ರಿಯೆಯು ಉಂಟಾಗುತ್ತದೆ.

## ಕ್ರಿಯಾಕಾರಕಫಲವೆಲ್ಲ ತ್ರಿಗುಣಾತ್ಮಕವಾಗಿದೆ

(ಭಾಷ್ಯ)

೪೯೯. ಅಥ ಇದಾನೀಂ ಕ್ರಿಯಾಕಾರಕಫಲಾನಾಂ ಸರ್ವೇಷಾಂ ಗುಣಾತ್ಮಕತ್ವಾತ್ ಸತ್ತ್ವರಜಸ್ತಮೋಗುಣಭೇದತಃ ತ್ರಿವಿಧೋ ಭೇದೋ ವಕ್ತವ್ಯಃ ಇತಿ ಆರಭ್ಯತೇ—

(ಭಾಷ್ಯಾರ್ಥ)

ಇನ್ನು ಈಗ ಕ್ರಿಯಾಕಾರಕಫಲಗಳೆಲ್ಲವೂ ಗುಣಗಳಿಂದಾಗಿರುವದರಿಂದ (ಅವುಗಳಲ್ಲಿ) ಸತ್ತ್ವ, ರಜ, ತಮ–ಎಂಬ ಬೇರೆಬೇರೆಯ ಗುಣಗಳಿಂದಾದ ಮೂರು ಮೂರು ಭೇದವನ್ನು ಹೇಳಬೇಕೆಂದು (ಇದನ್ನು) ಪ್ರಾರಂಭಿಸುತ್ತಾನೆ:—

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಙ್ಖ್ಯಾನೇ ಯಥಾವಚ್ಛೃಣು ತಾನ್ಯಪಿ ॥೧೯॥**

೧೯. ಜ್ಞಾನವೂ ಕರ್ಮವೂ ಕರ್ತೃವೂ ಗುಣಭೇದದಿಂದ ಮೂರು ಬಗೆಯೇ ಎಂದು ಗುಣಸಂಖ್ಯಾನದಲ್ಲಿ ಹೇಳಲ್ಪಟ್ಟಿರುತ್ತದೆ. ಅವುಗಳನ್ನು ಯಥಾವತ್ತಾಗಿ (ಹೇಳುತ್ತೇನೆ), ಕೇಳು.

(ಭಾಷ್ಯ)

೫೦೦. ಜ್ಞಾನಂ ಕರ್ಮ ಚ [1]। ಕರ್ಮ ಕ್ರಿಯಾ ನ ಕಾರಕಂ ಪಾರಿಭಾಷಿಕಮ್ ಈಪ್ಸಿತತಮಂ ಕರ್ಮ। ಕರ್ತಾ ಚ ನಿರ್ವರ್ತಕಃ ಕ್ರಿಯಾಣಾಂ ತ್ರಿಧೈವ। ಅವಧಾರಣಂ ಗುಣವ್ಯತಿರಿಕ್ತಜಾತ್ಯನ್ತರಾಭಾವಪ್ರದರ್ಶನಾರ್ಥಮ್। ಗುಣಭೇದತಃ। ಸತ್ತ್ವಾದಿಭೇದೇನ ಇತ್ಯರ್ಥಃ। ಪ್ರೋಚ್ಯತೇ ಕಥ್ಯತೇ ಗುಣಸಙ್ಖ್ಯಾನೇ ಕಾಪಿಲೇ ಶಾಸ್ತ್ರೇ। ತದಪಿ [2] ಗುಣಸಙ್ಖ್ಯಾನಂ ಶಾಸ್ತ್ರಂ ಗುಣಭೋಕ್ತೃವಿಷಯೇ ಪ್ರಮಾಣಮೇವ। ಪರಮಾರ್ಥಬ್ರಹ್ಮೈಕತ್ವವಿಷಯೇ ಯದ್ಯಪಿ ವಿರುಧ್ಯತೇ,

---

1. ‘ಕರ್ಮ ಚ ಇತಿ’ ಶಾ॥ ಗು॥
2. ‘ತದಪಿ ಕಾಪಿಲಂ’ ಮ॥; ‘ತದಪಿ ಕಾಪಿಲಮಪಿ’ ವ್ಯೈ॥

ತಥಾಪಿ[1]। ತೇ ಹಿ ಕಾಪಿಲಾಃ ಗುಣಗೌಣವ್ಯಾಪಾರನಿರೂಪಣೇ ಅಭಿಯುಕ್ತಾಃ ಇತಿ ತಚ್ಛಾಸ್ತ್ರಮಪಿ ವಕ್ಷ್ಯಮಾಣಸ್ತುತ್ಯರ್ಥತ್ವೇನ ಉಪಾದೀಯತೇ ಇತಿ ನ ವಿರೋಧಃ! ಯಥಾವತ್ ಯಥಾನ್ಯಾಯಂ[2] ಯಥಾಶಾಸ್ತ್ರಂ ಶೃಣು ತಾನ್ಯಪಿ। ಜ್ಞಾನಾದೀನಿ ತದ್ಭೇದಜಾತಾನಿ ಗುಣಭೇದಕೃತಾನಿ ಶೃಣು। ವಕ್ಷ್ಯಮಾಣೇ ಅರ್ಥೇ ಮನಃ ಸಮಾಧಿಂ[3] ಕುರು ಇತ್ಯರ್ಥಃ ||

(ಭಾಷ್ಯಾರ್ಥ)

ಜ್ಞಾನವೂ ಕರ್ಮವೂ-ಕರ್ಮವೆಂದರೆ (ಇಲ್ಲಿ) ಕ್ರಿಯೆಯು, (ಕರ್ತೃವಿಗೆ) ಈಪ್ಸಿತತಮವಾದದ್ದು ಎಂಬ ಪಾರಿಭಾಷಿಕವಾದ ಕಾರಕವಲ್ಲ-ಕರ್ತೃವೂ ಕ್ರಿಯೆಗಳನ್ನು ಮಾಡುವವನೂ ಮೂರೇ ಬಗೆ. (ಇಲ್ಲಿ ಮೂರೇ ಎಂದು) ಒತ್ತಿಹೇಳಿರುವದು ಗುಣಗಳಿಗಿಂತ ಬೇರೆಯಾಗಿ ಯಾವ ಜಾತಿಯೂ[4] ಇಲ್ಲ ಎಂದು ತಿಳಿಸುವದಕ್ಕೆ. ಗುಣಭೇದದಿಂದ (ಮೂರು ಬಗೆ) ಎಂದರೆ ಸತ್ತ್ವವೇ ಮುಂತಾದ (ಗುಣಗಳ) ಭೇದದಿಂದ ಎಂದರ್ಥ. (ಅವು ಮೂರೇ ಬಗೆಯೆಂದು) ಗುಣಸಂಖ್ಯಾನದಲ್ಲಿ ಕಾಪಿಲಶಾಸ್ತ್ರದಲ್ಲಿ ಹೇಳಿರುತ್ತದೆ. ಆ **ಗುಣಸಂಖ್ಯಾನಶಾಸ್ತ್ರವೂ ಗುಣಗಳ ಮತ್ತು ಭೋಕ್ತೃವಿನ ವಿಷಯದಲ್ಲಿ ಪ್ರಮಾಣವೇ; ಪರಮಾರ್ಥವಾದ ಬ್ರಹ್ಮವು ಒಂದೇ[5] ಎಂಬ ವಿಷಯದಲ್ಲೇನೋ ವಿರುದ್ಧವಾಗಿದ್ದರೂ (ಈ ವಿಷಯದಲ್ಲಿ ಪ್ರಮಾಣವೇ). ಕಾಪಿಲರು, ಗುಣ, ಗುಣಗಳ ಕಾರ್ಯ-ಇವುಗಳ ವ್ಯಾಪಾರವನ್ನು ನಿರೂಪಿಸುವದರಲ್ಲಿ ಕುಶಲರಾದ್ದರಿಂದ ಅವರ ಶಾಸ್ತ್ರವನ್ನು ಕೂಡ[6] ಮುಂದೆ ಹೇಳುವದನ್ನು[7] ಹೊಗಳುವದಕ್ಕಾಗಿ ತೆಗೆದುಕೊಂಡಿದೆಯಾದದರಿಂದ (ಇಲ್ಲಿ) ತನ್ನ ಸಿದ್ಧಾಂತಕ್ಕೆ ವಿರೋಧವಿಲ್ಲ.** ಯಥಾವತ್ತಾಗಿ ಯುಕ್ತಿಗನು

---

1. ಮು||ದಲ್ಲಿಲ್ಲ.
2. ಮು||ದಲ್ಲಿಲ್ಲ.
3. ‘ಸಮಾಧಿಂ’ ಎಂದಿಷ್ಟೇ ಮು|| ವ್ಯಾ||
4. ಬೇರೆ ವಿಧವಾದ ಯಾವ ವಸ್ತುವೂ.
5 ಅದ್ವಿತೀಯವು.
6. ಯಾವ ವಿಷಯವಲ್ಲಿ ಮಿಕ್ಕವರ ಮತವು ಸಿದ್ಧಾಂತಕ್ಕೆ ವಿರುದ್ಧವಲ್ಲವೋ ಅದನ್ನು ಯುಕ್ತವಾಗಿದ್ದ ಕಡೆಯಲ್ಲಿ ತಾನೂ ಒಪ್ಪುವದರಿಂದ ಸಿದ್ಧಾಂತಕ್ಕೆ ಯಾವ ಹಾನಿಯೂ ಇಲ್ಲ ಎಂದು ಭಾವ;
7. ಜ್ಞಾನಾದಿಗಳು ಮೂರು ಮೂರು ಬಗೆಯೆಂಬ ತಿಳಿವಳಿಕೆಯನ್ನು ಹೊಗಳುವದಕ್ಕಾಗಿ ಗುಣವಿಚಾರದಲ್ಲಿ ನಿಪುಣರಾದ ಸಾಂಖ್ಯರೂ ಹೇಳುತ್ತಾರೆ ಎಂದಿದೆ ಎಂದಭಿಪ್ರಾಯ.

ಸಾರವಾಗಿಯೂ ಶಾಸ್ತ್ರಕ್ಕನುಸಾರವಾಗಿಯೂ (ಹೇಳುತ್ತೇನೆ). ಅವುಗಳನ್ನೂ ಜ್ಞಾನಾದಿಗಳನ್ನೂ ಗುಣಭೇದದಿಂದಾಗಿರುವ ಅವುಗಳ ಭೇದಗಳನ್ನೂ ಕೇಳು, ಮುಂದೆ ಹೇಳುವ ವಿಷಯದಲ್ಲಿ ಮನಸ್ಸನ್ನಿಡು[1] ಎಂದರ್ಥ.

## ಜ್ಞಾನದಲ್ಲಿ ಗುಣಭೇದದಿಂದ ಮೂರು ಬಗೆ

(ಭಾಷ್ಯ)

೫೦೧. ಜ್ಞಾನಸ್ಯ ತು ತಾವತ್ ತ್ರಿವಿಧತ್ವಮ್ ಉಚ್ಯತೇ : –

(ಭಾಷ್ಯಾರ್ಥ)

ಮೊದಲು ಜ್ಞಾನಕ್ಕೆ ಮೂರು ಬಗೆಯನ್ನು ಹೇಳುತ್ತಾನೆ :—

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥೨೦॥**

೨೦. ಸರ್ವಭೂತಗಳಲ್ಲಿಯೂ ಅವ್ಯಯವಾದ ಒಂದೇ ಭಾವವನ್ನು–ವಿಭಕ್ತವಾಗಿರುವ (ಅವುಗಳಲ್ಲಿ) ಅವಿಭಕ್ತವಾಗಿರುವ (ಒಂದೇ ಭಾವವನ್ನು)–ಯಾವದರಿಂದ ಕಾಣುತ್ತಾನೋ ಆ ಜ್ಞಾನವನ್ನು ಸಾತ್ತ್ವಿಕವೆಂದು ತಿಳಿ.

(ಭಾಷ್ಯ)

೫೦೨. ಸರ್ವಭೂತೇಷು ಅವ್ಯಕ್ತಾದಿಸ್ಥಾವರಾನ್ತೇಷು ಭೂತೇಷು ಯೇನ ಜ್ಞಾನೇನ ಏಕಂ ಭಾವಂ ವಸ್ತು । ಭಾವಶಬ್ದಃ ವಸ್ತುವಾಚೀ । ಏಕಮ್ ಆತ್ಮವಸ್ತು ಇತ್ಯರ್ಥಃ । ಅವ್ಯಯಂ ನ ವ್ಯೇತಿ ಸ್ವಾತ್ಮನಾ ; ಸ್ವಧರ್ಮೇಣ[2] ವಾ । ಕೂಟಸ್ಥಮ್ ಇತ್ಯರ್ಥಃ । ಈಕ್ಷತೇ ಪಶ್ಯತಿ ಯೇನ ಜ್ಞಾನೇನ । ತಂ ಚ ಭಾವಮ್ ಅವಿಭಕ್ತಂ ಪ್ರತಿದೇಹಂ ವಿಭಕ್ತೇಷು ದೇಹಭೇದೇಷು ನ ವಿಭಕ್ತಂ ತತ್ ಆತ್ಮವಸ್ತು ।

---

1. ಕೇಳು ಎಂಬ ಮಾತಿಗೆ ಈ ಅರ್ಥವೆಂದು ಭಾವ.
2. 'ಧರ್ಮೈರ್ವಾ' ನಿ॥ ಗು॥

ವ್ಯೋಮವತ್ ನಿರನ್ತರಮ್ ಇತ್ಯರ್ಥಃ। ತತ್ ಜ್ಞಾನಂ ಸಾಕ್ಷಾತ್ ಸಮ್ಯಗ್ದರ್ಶನಮ್ ಅದ್ವೈತಾತ್ಮವಿಷಯಂ[1] ಸಾತ್ತ್ವಿಕಂ ವಿದ್ಧಿ ಇತಿ ॥

(ಭಾಷ್ಯಾರ್ಥ)

ಸರ್ವಭೂತಗಳಲ್ಲಿಯೂ ಅವ್ಯಕ್ತವೇ ಮುಂತಾಗಿ[2] ಸ್ಥಾವರದವರೆಗಿನ (ಎಲ್ಲಾ) ಭೂತಗಳಲ್ಲಿಯೂ ಯಾವ ಜ್ಞಾನದಿಂದ ಒಂದೇ ಭಾವವನ್ನು ಎಂದರೆ ವಸ್ತುವನ್ನು–(ಇಲ್ಲಿ) ಭಾವ ಎಂಬ ಮಾತು ವಸ್ತುವನ್ನು ಹೇಳುತ್ತದೆ–ಒಂದೇ ಆತ್ಮವಸ್ತುವನ್ನು ಎಂದರ್ಥ. ಅವ್ಯಯವಾದ ತನ್ನಿಂದಲಾಗಲಿ ತನ್ನ ಧರ್ಮದ ಮೂಲಕವಾಗಲಿ ಸವೆಯದ, ಕೂಟಸ್ಥವಾದ ಎಂದರ್ಥ. (ಅದನ್ನು) ಯಾವ ಜ್ಞಾನದಿಂದ (ಈಕ್ಷತೇ) ನೋಡುತ್ತಾನೋ, ಮತ್ತು ಆ ಭಾವವು ಅವಿಭಕ್ತವೆಂದು ಬೇರೆಬೇರೆಯ ದೇಹಕ್ಕೂ ವಿಂಗಡವಾಗಿಲ್ಲದೆ, ಬೇರೆಬೇರೆಯ ದೇಹಗಳು ವಿಂಗಡವಾಗಿರುತ್ತಿದ್ದರೂ ಆ ಆತ್ಮವಸ್ತುವು ವಿಭಕ್ತವಾಗಿಲ್ಲವೆಂದು, ಆಕಾಶದಂತೆ ನಿರಂತರವಾಗಿರುವದೆಂದು[3] ಎಂದರ್ಥ. (ಹೀಗೆಂದು ಯಾವ ಜ್ಞಾನದಿಂದ ಕಾಣುತ್ತಾನೋ) ಆ ಜ್ಞಾನವನ್ನು, ಅದ್ವೈತಾತ್ಮವಿಷಯವಾಗಿರುವ ಸಾಕ್ಷಾತ್ತಾಗಿ ಸಮ್ಯಗ್ದರ್ಶನವೇ ಆಗಿರುವ (ಜ್ಞಾನವನ್ನು), ಸಾತ್ತ್ವಿಕವು ಎಂದು ತಿಳಿ ಎಂದು (ಅರ್ಥ).

(ಭಾಷ್ಯ)

೫೦೩. ಯಾನಿ ದ್ವೈತದರ್ಶನಾನಿ ತಾನಿ ಅಸಮ್ಯಗ್ಭೂತಾನಿ ರಾಜಸಾನಿ ತಾಮಸಾನಿ ಚ ಇತಿ ನ ಸಾಕ್ಷಾತ್ ಸಂಸಾರೋಚ್ಛಿತ್ತಯೇ ಭವನ್ತಿ—

(ಭಾಷ್ಯಾರ್ಥ)

(ಇನ್ನು) ದ್ವೈತದರ್ಶನಗಳಿರುವವಲ್ಲ, ಅವು ಸರಿಯಾದ (ಜ್ಞಾನ)ಗಳಲ್ಲದೆ ರಾಜಸವೂ ತಾಮಸವೂ ಆಗಿರುವದರಿಂದ ನೇರಾಗಿ ಸಂಸಾರನಾಶಕ್ಕೆ (ಕಾರಣ)ವಾಗಿರುವದಿಲ್ಲ (ಎಂದು ಹೇಳುತ್ತಾನೆ):—

---

1. "ತಜ್ಜ್ಞಾನಮ್ ಅದ್ವೈತಾತ್ಮದರ್ಶನಂ ಸಾತ್ತ್ವಿಕಂ ಸಮ್ಯಗ್ದರ್ಶನಂ ವಿದ್ಧಿ" ನಿ॥

2. ಅವ್ಯಾಕೃತದಿಂದ ಹಿಡಿದು, ಕಾರಣಬ್ರಹ್ಮದಿಂದ ಮೊದಲಾಗಿ ಎಂದರ್ಥ. 'ಬ್ರಹ್ಮಾದಿ ಸ್ಥಾವರಾನ್ತ' ಎಂಬುದು ಭಾಷ್ಯದಲ್ಲಿ ಇದಕ್ಕಿಂತ ಹೆಚ್ಚು ಪ್ರಚುರ

3. ಕಡಿವಡೆಯದೆ, ಒಂದೇ ರೀತಿಯಾಗಿ ಹರಡಿರುವದೆಂದು ಎಂದರ್ಥ

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥೨೧॥**

೨೧. ಯಾವ ಜ್ಞಾನವು ಸರ್ವಭೂತಗಳಲ್ಲಿಯೂ ಪೃಥಗ್ವಿಧವಾದ ನಾನಾ ಭಾವಗಳನ್ನು ಪೃಥಕ್ಕಾಗಿಯೇ ತಿಳಿಯುತ್ತದೆಯೋ ಆ ಜ್ಞಾನವನ್ನು ರಾಜಸವೆಂದು ತಿಳಿ.

(ಭಾಷ್ಯ)

೫೦೪. ಪೃಥಕ್ತ್ವೇನ ತು ಭೇದೇನ ಪ್ರತಿಶರೀರಮ್ ಅನ್ಯತ್ವೇನ ಯತ್ ಜ್ಞಾನಂ ನಾನಾಭಾವಾನ್ ಭಿನ್ನಾನ್ ಆತ್ಮನಃ ಪೃಥಗ್ವಿಧಾನ್ ಪೃಥಕ್ಪ್ರಕಾರಾನ್ ಭಿನ್ನಲಕ್ಷಣಾನ್ ಇತ್ಯರ್ಥಃ । ವೇತ್ತಿ ವಿಜಾನಾತಿ ಯತ್ ಜ್ಞಾನಂ ಸರ್ವೇಷು ಭೂತೇಷು । ಜ್ಞಾನಸ್ಯ ಕರ್ತೃತ್ವಾಸಮ್ಭವಾತ್ ಯೇನ ಜ್ಞಾನೇನ ವೇತ್ತಿ ಇತ್ಯರ್ಥಃ । ತತ್ ಜ್ಞಾನಂ ವಿದ್ಧಿ ರಾಜಸಂ ರಜೋಗುಣನಿರ್ವೃತ್ತಮ್ ॥

(ಭಾಷ್ಯಾರ್ಥ)

ಪೃಥಕ್ಕಾಗಿಯೇ ಒಂದೊಂದು ಶರೀರಕ್ಕೂ ಬೇರೆಯಾಗಿ ಮತ್ತೊಂದೆಂದು ಯಾವ ಜ್ಞಾನವು ನಾನಾಭಾವರುಗಳನ್ನು ಭಿನ್ನರಾದ ಆತ್ಮರನ್ನು ಪೃಥಗ್ವಿಧರಾಗಿರುವರೆಂದು ಬೇರೆಬೇರೆಯ ಪ್ರಕಾರವಾಗಿರುವರೆಂದು ಬೇರೆಬೇರೆಯ ಸ್ವರೂಪದವರೆಂದು,[1], ಯಾವ ಜ್ಞಾನವು ಎಲ್ಲಾ ಭೂತಗಳಲ್ಲಿಯೂ (ಬೇರೆಬೇರೆಯೆಂದು) ತಿಳಯುವದೋ ಅರಿಯುತ್ತಿರುವದೋ–ಜ್ಞಾನವು ಕರ್ತೃವೆಂಬುದು ಆಗುವಹಾಗಿಲ್ಲವಾದ್ದರಿಂದ[2] ಯಾವ ಜ್ಞಾನದಿಂದ (ಆತ್ಮರು ಬೇರೆಬೇರೆಯೆಂದು) ಅರಿಯುತ್ತಾನೋ ಎಂದರ್ಥ.—ಆ ಜ್ಞಾನವನ್ನು ರಾಜಸವೆಂದು ರಜೋಗುಣದಿಂದ ಆದದ್ದು ಎಂದು ತಿಳಿ.

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥೨೨॥**

---

1. ಶರೀರ, ಮನಸ್ಸು—ಮುಂತಾದ ಉಪಾಧಿಗಳನ್ನೂ ಆತ್ಮಸ್ವರೂಪಕ್ಕೆ ಬೆರೆಯಿಸಿಕೊಂಡು ಆತ್ಮರು ಬೇರೆಬೇರೆಯ ಸ್ವರೂಪದವರೆಂದು ತಿಳಿಯುವ ಜ್ಞಾನವು ಎಂದರ್ಥ.

2. ವಿಜ್ಞಾನವು ಕರಣವು, ಕರ್ತೃವಲ್ಲ.

೨೨. ಆದರೆ ಯಾವದು ಒಂದು ಕಾರ್ಯದಲ್ಲಿ ಕೃತ್ಸ್ನವೆಂಬಂತೆ ಸಕ್ತವಾಗಿರುವದೋ ಅಹೈತುಕವಾಗಿ ಅತತ್ತ್ವಾರ್ಥವತ್ತಾಗಿ ಅಲ್ಪವಾಗಿರುವದೋ ಅದು ತಾಮಸವೆನಿಸುವದು.

(ಭಾಷ್ಯ)

೫೦೫. ಯತ್ ತು ಜ್ಞಾನಂ ಕೃತ್ಸ್ನವತ್ ಸಮಸ್ತವತ್ ಸರ್ವವಿಷಯಮಿವ[1] ಏಕಸ್ಮಿನ್ ಕಾರ್ಯೇ ದೇಹೇ ಬಹಿರ್ವಾ ಪ್ರತಿಮಾದೌ ಸಕ್ತಂ "ಏತಾವಾನೇವ ಆತ್ಮಾ ಈಶ್ವರೋ ವಾ ನ ಅತಃಪರಮ್ ಅಸ್ತಿ ಇತಿ। ಯಥಾ ನಗ್ನಕ್ಷಪಣಕಾದೀನಾಂ[2] ಶರೀರಾನ್ತರ್ವರ್ತೀ ದೇಹಪರಿಮಾಣಃ ಜೀವಃ ಈಶ್ವರೋ ವಾ ಪಾಷಾಣದಾರ್ವಾದಿಮಾತ್ರಮ್ ಇತ್ಯೇವಮ್ ಏಕಸ್ಮಿನ್ ಕಾರ್ಯೇ ಸಕ್ತಮ್। ಅಹೈತುಕಂ ಹೇತುವರ್ಜಿತಮ್, ನಿರ್ಯುಕ್ತಿಕಮ್। ಅತತ್ತ್ವಾರ್ಥವತ್ ಅಯಥಾಭೂತಾರ್ಥವತ್। ಯಥಾಭೂತಃ ಅರ್ಥಃ ತತ್ತ್ವಾರ್ಥಃ। ಸಃ ಅಸ್ಯ ಜ್ಞೇಯಭೂತಃ ಅಸ್ತಿ ಇತಿ ತತ್ತ್ವಾರ್ಥವತ್! ನ ತತ್ತ್ವಾರ್ಥವತ್ ಅತತ್ತ್ವಾರ್ಥವತ್। ಅಹೈತುಕತ್ವಾದೇವ। ಅಲ್ಪಂ ಚ ಅಲ್ಪವಿಷಯತ್ವಾತ್ ಅಲ್ಪಫಲತ್ವಾದ್ವಾ। ತತ್ ತಾಮಸಮ್ ಉದಾಹೃತಮ್। ತಾಮಸಾನಾಂ ಹಿ ಪ್ರಾಣಿನಾಮ್ ಅವಿವೇಕಿನಾಮ್ ಈದೃಶಂ ಜ್ಞಾನಂ ದೃಶ್ಯತೇ॥

(ಭಾಷ್ಯಾರ್ಥ)

ಆದರೆ ಯಾವ ಜ್ಞಾನವು ಕೃತ್ಸ್ನವೆಂಬಂತೆ, ಎಲ್ಲವೂ (ಅದೇ) ಎಂಬಂತೆ ಎಲ್ಲವನ್ನೂ ವಿಷಯ(ಮಾಡಿಕೊಂಡಿರು)ವಂತೆ, ಒಂದೇ ಕಾರ್ಯದಲ್ಲಿ (ಒಂದೇ) **ದೇಹದಲ್ಲಿ ಅಥವಾ ಹೊರಗಿರುವ ಪ್ರತಿಮೆಯೇ ಮುಂತಾದದ್ದರಲ್ಲಿ "ಆತ್ಮನು ಅಥವಾ ಈಶ್ವರನು ಇಷ್ಟುಮಾತ್ರವೇ, ಇದಕ್ಕಿಂತ ಹೆಚ್ಚಾಗಿಲ್ಲ" ಎಂದು ಸಕ್ತವಾಗಿರುವದೋ, ಹೇಗೆ ನಗ್ನಕ್ಷಪಣಕರೇ[3] ಮುಂತಾದವರು ಶರೀರದೊಳಗಿರುವ ಜೀವನು ದೇಹಪರಿಮಾಣದವನೆಂದು[4] ಅಥವಾ ಈಶ್ವರನು ಕಲ್ಲು, ಮರ-ಮುಂತಾದದ್ದರ ಪರಿಮಾಣದವನೆಂದೀ ಪರಿಯಲ್ಲಿ[5]**

---

1. 'ಸರ್ವವಿಷಯಮೇವ' ಮು॥ ಮೈ॥
2. 'ನಗ್ನಶ್ರಮಣಕಾದೀನಾಂ' ಮು॥
3. ದಿಗಂಬರ ಯತಿಗಳು.
4. ಸೂ. ಭಾ. ೨-೨.೩೫ರಲ್ಲಿ ಈ ವಾದವನ್ನು ಖಂಡಿಸಿದೆ.
5. ಆಚಾರ್ಯರ ಕಾಲಕ್ಕೆ ಶಿಲೆ, ಮರ—ಮುಂತಾದದ್ದರಲ್ಲಿ ದೇವತಾಪ್ರತಿಮೆಗಳನ್ನು ಮಾಡುತ್ತಿದ್ದರೆಂಬುದಕ್ಕೆ ಒಂದು ಸೂಚನೆಯಿದು.

**(ತಿಳಿಯುವರೋ) ಹಾಗೆ ಒಂದೇ ಕಾರ್ಯದಲ್ಲಿ ಸಕ್ತವಾಗಿರುವದೋ.** (ಯಾವದು) ಅಹೈತುಕವೋ, ಹೇತುವಿಲ್ಲದ್ದೋ, (ಯಾವ) ಯುಕ್ತಿಯೂ ಇಲ್ಲದ್ದೋ; ಅತತ್ತ್ವಾರ್ಥವತ್ತಾಗಿರುವದೋ ಯಥಾಭೂತವಾದ ಅರ್ಥವಿಲ್ಲದ್ದೋ ಇದ್ದಂತೆ ಇರುವ ವಿಷಯವು, ತತ್ತ್ವಾರ್ಥವು; ಅದು ಈ (ಜ್ಞಾನಕ್ಕೆ) ಜ್ಞೇಯವಾಗಿರುವದರಿಂದ (ಜ್ಞಾನವು) ತತ್ತ್ವಾರ್ಥವತ್ತು. ತತ್ತ್ವಾರ್ಥವತ್ತಲ್ಲದ್ದು ಅತತ್ತ್ವಾರ್ಥವತ್ತು. (ಅಂಥದ್ದೋ ಎಂದರ್ಥ) ಮತ್ತು ಅಹೈತುಕವಾಗಿರುವದರಿಂದಲೇ ಅಲ್ಪವಾಗಿರುವದೋ, ಅಲ್ಪವಿಷಯವುಳ್ಳದ್ದಾದ್ದರಿಂದ ಅಥವಾ ಅಲ್ಪವಾದ ಫಲವುಳ್ಳದ್ದಾದ್ದರಿಂದ (ಅಲ್ಪವೂ ಆಗಿರುವದೋ) ಆ (ಜ್ಞಾನವು) ತಾಮಸವೆನಿಸುತ್ತದೆ. ತಾಮಸರಾದ ಅವಿವೇಕಿಜೀವರಿಗೇ ಅಲ್ಲವೆ, ಇಂಥ ಜ್ಞಾನ[1] (ವಿರುವದು) ಕಂಡುಬರುತ್ತದೆ?

## ಕರ್ಮದಲ್ಲಿ ಗುಣಭೇದದಿಂದ ಮೂರು ಬಗೆ

(ಭಾಷ್ಯ)

೫೦೬. ಅಥ ಇದಾನೀಂ ಕರ್ಮಣಃ ತ್ರೈವಿಧ್ಯಮ್ ಉಚ್ಯತೇ—

(ಭಾಷ್ಯಾರ್ಥ)

ಇನ್ನು ಈಗ ಕರ್ಮದ ಮೂರು ಬಗೆಯನ್ನು ಹೇಳುತ್ತಾನೆ:—

**ನಿಯತಂ ಸಙ್ಗರಹಿತಮರಾಗದ್ವೇಷತಃಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ ತತ್ ಸಾತ್ತ್ವಿಕಮುಚ್ಯತೇ ॥೨೩॥**

೨೩. ನಿಯತವಾಗಿ ಸಂಗರಹಿತವಾಗಿ ರಾಗದ್ವೇಷಗಳಿಲ್ಲದೆ ಫಲವನ್ನು ಪಡೆಯಬೇಕೆಂಬ ಇಚ್ಛೆಯಿಲ್ಲದವನು ಮಾಡಿದ ಕರ್ಮವಿದೆಯಲ್ಲ, ಅದು ಸಾತ್ತ್ವಿಕವೆನಿಸುತ್ತದೆ.

(ಭಾಷ್ಯ)

೫೦೭. ನಿಯತಂ ನಿತ್ಯಮ್ । ಸಙ್ಗರಹಿತಮ್ ಆಸಕ್ತಿವರ್ಜಿತಮ್ । ಅರಾಗದ್ವೇಷತಃಕೃತಮ್ । ರಾಗಪ್ರಯುಕ್ತೇನ ದ್ವೇಷಪ್ರಯುಕ್ತೇನ ಚ ಕೃತಂ ರಾಗದ್ವೇಷತಃಕೃತಮ್ । ತದ್ವಿಪರೀತಮ್ ಅರಾಗದ್ವೇಷತಃಕೃತಮ್ । ಅಫಲ

---

1. ಸ್ವಲ್ಪವಾದದ್ದನ್ನೇ ಇಲ್ಲವೆಂಬ ಭ್ರಾಂತಿಯು.

ಪ್ರೇಪ್ಸುನಾ ಫಲಂ ಪ್ರೇಪ್ಸತಿ ಇತಿ ಫಲಪ್ರೇಪ್ಸುಃ ಫಲತೃಷ್ಣಃ। ತದ್ವಿಪರೀತೇನ ಅಫಲ ಪ್ರೇಪ್ಸುನಾ ಕರ್ತ್ರಾ ಕೃತಂ ಕರ್ಮ ಯತ್ ತತ್ ಸಾತ್ತ್ವಿಕಮ್ ಉಚ್ಯತೇ ॥

(ಭಾಷ್ಯಾರ್ಥ)

ನಿಯತವಾದದ್ದು, ನಿತ್ಯವಾದದ್ದು. ಸಂಗರಹಿತವು, ಆಸಕ್ತಿಯಿಲ್ಲದೆ ಮಾಡಿದ್ದು[1]. ಅರಾಗದ್ವೇಷತಃಕೃತ : ರಾಗದಿಂದ ಪ್ರೇರಿತನೂ ದ್ವೇಷದಿಂದ ಪ್ರೇರಿತನೂ ಮಾಡಿದ್ದು ರಾಗದ್ವೇಷತಃಕೃತವು ; ಅದಕ್ಕೆ ವಿರುದ್ಧವಾದದ್ದು ಅರಾಗ ದ್ವೇಷತಃಕೃತ. ಅಫಲಪ್ರೇಪ್ಸುವಾದವನಿಂದ : ಫಲವನ್ನು ಪಡೆಯಬೇಕೆಂದು ಇಚ್ಛಿಸುವವನು ಫಲಪ್ರೇಪ್ಸು ; ಫಲದ ಬಯಕೆಯುಳ್ಳವನು (ಎಂದರ್ಥ) ; ಅದಕ್ಕೆ ವಿರುದ್ಧವಾಗಿರುವ ಅಫಲಪ್ರೇಪ್ಸುವಾದ ಕರ್ತೃವಿನಿಂದ ಮಾಡಲ್ಪಟ್ಟದ್ದು. (ಈ ಬಗೆಯ) ಕರ್ಮವಿರುವದಲ್ಲ, ಅದು ಸಾತ್ತ್ವಿಕವೆನಿಸುತ್ತದೆ.

**ಯತ್ ತು ಕಾಮೇಪ್ಸುನಾ ಕರ್ಮ ಸಾಹಙ್ಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥೨೪॥**

೨೪. ಆದರೆ ಯಾವ ಕರ್ಮವು ಕಾಮೇಪ್ಸುವಿನಿಂದ ಅಥವಾ ಅಹಂ ಕಾರವುಳ್ಳವನಿಂದ ಬಹಳ ಆಯಾಸದಿಂದ ಮಾಡಲ್ಪಡುವದೋ ಅದು ರಾಜಸವೆನಿಸುತ್ತದೆ.

(ಭಾಷ್ಯ)

೫೦೮. ಯತ್ ತು ಕಾಮೇಪ್ಸುನಾ ಕರ್ಮಫಲಪ್ರೇಪ್ಸುನಾ ಇತ್ಯರ್ಥಃ। ಕರ್ಮ ಸಾಹಙ್ಕಾರೇಣ ವಾ। ಸಾಹಙ್ಕಾರೇಣ ಇತಿ ನ ತತ್ತ್ವಜ್ಞಾನಾಪೇಕ್ಷಯಾ, ಕಿಂ ತರ್ಹಿ ಲೌಕಿಕಶ್ರೋತ್ರಿಯನಿರಹಙ್ಕಾರಾಪೇಕ್ಷಯಾ। ಯೋ ಹಿ ಪರಮಾರ್ಥ ನಿರಹಙ್ಕಾರಃ ಆತ್ಮವಿತ್ ನ ತಸ್ಯ ಕಾಮೇಪ್ಸುತ್ವಬಹುಲಾಯಾಸಕರ್ತೃತ್ವಪ್ರಾಪ್ತಿ ರಸ್ತಿ। ಸಾತ್ತ್ವಿಕಸ್ಯಾಪಿ ಕರ್ಮಣಃ ನಾತ್ಮವಿತ್[2] ಸಾಹಙ್ಕಾರಃ ಕರ್ತಾ, ಕಿಮುತ ರಾಜಸತಾಮಸಯೋಃ। ಲೋಕೇ[3] ಅನಾತ್ಮವಿದಪಿ ಶ್ರೋತ್ರಿಯಃ ನಿರಹಙ್ಕಾರ

---

1. ನಾನು ಮಾಡುತ್ತೇನೆಂಬ ಆಸಕ್ತಿಯಿಲ್ಲದೆ ಜ್ಞಾನಿಯು ಅಕರ್ತೃತ್ವಬುದ್ಧಿಯಿಂದಲೂ ಕರ್ಮಯೋಗಿಯು ಈಶ್ವರಾರ್ಥವಾಗಿ ಆತನ ಭೃತ್ಯನಂತೆ ಮಾಡುತ್ತದೇನೆಂಬ ಬುದ್ಧಿ ಯಿಂದಲೂ ಮಾಡುವ ಕರ್ಮವು ಇಂಥದ್ದು. ಜ್ಞಾನಿಯ ಕರ್ಮವು ಅಕರ್ಮವೇ ಆದ್ದರಿಂದ ಇಲ್ಲಿ ಕರ್ಮಯೋಗಿಯ ಕರ್ಮವನ್ನೇ ಇಟ್ಟುಕೊಳ್ಳಬಹುದು.

2. ಮುದ್ರಿತಪಾಠದಲ್ಲಿರುವ ಅನಾತ್ಮವಿತ್ ಎಂಬುದನ್ನು ಹೀಗೆ ತಿದ್ದಿಕೊಂಡಿದೆ. ಇದರ ಅನುವಾದದ ಟಿಪ್ಪಣಿಯನ್ನು ನೋಡಿ.

3. ' ಲೌಕಿಕೈಃ ' ಮ॥ವಾ॥

ಉಚ್ಯತೇ । 'ನಿರಹಙ್ಕಾರೋಽಯಂ ಬ್ರಾಹ್ಮಣಃ' ಇತಿ । ತಸ್ಮಾತ್ ತದಪೇಕ್ಷ ಯೈವ 'ಸಾಹಙ್ಕಾರೇಣ ವಾ' ಇತ್ಯುಕ್ತಮ್ । ಪುನಃಶಬ್ದಃ ಪಾದಪೂರಣಾರ್ಥಃ । ಕ್ರಿಯತೇ ಬಹುಲಾಯಾಸಂ ಕರ್ತ್ರಾ ಮಹತಾ ಆಯಾಸೇನ ನಿರ್ವರ್ತ್ಯತೇ ತತ್ ಕರ್ಮ ರಾಜಸಮ್ ಉದಾಹೃತಮ್ ॥

(ಭಾಷ್ಯಾರ್ಥ)

ಆದರೆ ಯಾವ ಕರ್ಮವು ಕಾಮೇಪ್ಸುವಿನಿಂದ: ಕರ್ಮಫಲವನ್ನು ಪಡೆಯ ಬೇಕೆಂಬ ಇಚ್ಛೆಯುಳ್ಳವನಿಂದ ಎಂದರ್ಥ. ಅಥವಾ ಅಹಂಕಾರವುಳ್ಳವನಿಂದ–(ಇಲ್ಲಿ) ಅಹಂಕಾರವುಳ್ಳವನಿಂದ ಎಂದಿರುವದು ತತ್ತ್ವಜ್ಞಾನಕ್ಕೆ ಹೋಲಿಸಿ (ಹೇಳಿ)ದ್ದಲ್ಲ, ಮತ್ತೇನೆಂದರೆ ಲೋಕದಲ್ಲಿ ಶ್ರೋತ್ರಿಯನ ನಿರಹಂಕಾರಕ್ಕೆ ಹೋಲಿಸಿ (ಹೇಳಿದ್ದು).[1] ಏಕೆಂದರೆ ನಿಜವಾಗಿಯೂ ನಿರಹಂಕಾರನಾದ ಆತ್ಮಜ್ಞಾನಿಯಿರುವನಲ್ಲ, ಅವನಿಗೆ ಕಾಮೇಪ್ಸುತ್ವ(ವಾಗಲಿ) ಬಹುಲಾಯಾಸದಿಂದ (ಕರ್ಮವನ್ನು) ಮಾಡುವದೆಂಬು ದಾಗಲಿ ಬರುವಹಾಗೆಯೇ ಇಲ್ಲ[2]. **ಸಾತ್ತ್ವಿಕಕರ್ಮವನ್ನು ಕೂಡ ಆತ್ಮ ಜ್ಞಾನಿಯು ಅಹಂಕಾರದಿಂದ ಮಾಡುವಂತಿಲ್ಲ; ಇನ್ನು ರಾಜಸತಾಮಸ ಕರ್ಮಗಳನ್ನು (ಅವನು) ಮಾಡಲಾರನೆಂದು ಹೇಳುವದೇನಿದೆ[3]?** ಲೋಕ ದಲ್ಲಿ 'ಈ ಬ್ರಾಹ್ಮಣನು ನಿರಹಂಕಾರಿ' ಎಂದು ಹೇಳುವಾಗ ಅನಾತ್ಮಜ್ಞನಾದ ಶ್ರೋತ್ರಿಯನನ್ನು ಕೂಡ ಅಹಂಕಾರರಹಿತನೆಂದು[4] ಕರೆಯುವದುಂಟು. ಆದ್ದರಿಂದ

---

1. ತತ್ತ್ವಜ್ಞಾನಿಯು ನಿರಹಂಕಾರಿಯು, ರಾಜಸಕರ್ಮಿಯು ಸಾಹಂಕಾರಿಯು ಎಂದು ಹೇಳುವದಕ್ಕೆ ಬಂದದ್ದಲ್ಲ, ಸಾತ್ತ್ವಿಕಕರ್ಮಿಯು ನಿರಹಂಕಾರಿಯು, ರಾಜಸಕರ್ಮಿಯು ಸಾಹಂ ಕಾರಿಯು ಎಂದು ಹೇಳುವದಕ್ಕೆ ಬಂದದ್ದು.

2. ಏಕೆಂದರೆ ಅವನಿಗೆ ಕರ್ತೃತ್ವಬುದ್ಧಿಯೇ ಇರುವದಿಲ್ಲ.

3. ಅನಾತ್ಮವಿತ್ ಎಂದು ವ್ಯಾಖ್ಯಾನಾನುಸಾರಿಯಾದ ಪಾಠ. ಆಗ ಅನಾತ್ಮಜ್ಞನು ಸಾತ್ತ್ವಿಕಕರ್ಮವನ್ನುಕೂಡ ಅಹಂಕಾರದಿಂದಲೇ ಮಾಡುತ್ತಾನೆ ಎಂದು ಅರ್ಥವಾಗುತ್ತದೆ. ಜ್ಞಾನಿಗೆ ಅಹಂಕಾರದ ಪ್ರಸಕ್ತಿಯೇ ಇಲ್ಲ, ಅವನು ಯಾವ ಕರ್ಮಕ್ಕೂ ಕರ್ತೃವೇ ಅಲ್ಲ; ಆದ್ದರಿಂದ ಅವನಿಗೆ ಹೋಲಿಸುವದು ಆಗುವದಿಲ್ಲ ಎಂದು ೧೭ನೆಯ ಶ್ಲೋಕದ ಆಧಾರದಿಂದ ನಾವು ಅರ್ಥವನ್ನು ಮಾಡಿರುತ್ತೇವೆ.

4. ಗರ್ವವಿಲ್ಲದವನು ಎಂಬರ್ಥದಲ್ಲಿ ಜನರು ನಿರಹಂಕಾರಿ ಎಂದು ಪ್ರಯೋಗಿಸು ತ್ತಾರೆ. ಇಂಥ ಕರ್ಮವನ್ನು ಮಾಡುತ್ತೇನೆಂಬ ಗರ್ವದಿಂದ ಮಾಡಿದ್ದು ರಾಜಸಕರ್ಮವೆಂಬ ಅಭಿಪ್ರಾಯವು ಪ್ರಕೃತಶ್ಲೋಕದಿಂದ ಹೊರಡುತ್ತದೆ. ಗರ್ವವಿಲ್ಲದೆ ಮಾಡಿದ ಸಾತ್ತ್ವಿಕ ಕರ್ಮವನ್ನುಕೂಡ ಅಹಂಭಾವವುಳ್ಳ (ಕರ್ತೃತ್ವಬುದ್ಧಿಯುಳ್ಳ)ವನೇ ಮಾಡುತ್ತಾನೆಂಬುದು ಸ್ಪಷ್ಟ.

ಅವನಿಗೆ ಹೋಲಿಸಿಯೇ 'ಅಹಂಕಾರದಿಂದಲಾಗಲಿ' ಎಂದು ಹೇಳಿರುತ್ತದೆ (ಎಂದು ನಿಶ್ಚಯಿಸಬೇಕು ಇಲ್ಲಿ) ಪುನಃ ಎಂಬ ಶಬ್ದವನ್ನು ಶ್ಲೋಕದ ಪಾಠವನ್ನು ಪೂರ್ತಿ ಮಾಡುವದಕ್ಕೆ ಉಪಯೋಗಿಸಿರುತ್ತದೆ[1]. (ಯಾವ ಇಂಥ ಕರ್ಮವು) ಬಹಳ ಆಯಾಸದಿಂದ ಹೆಚ್ಚಿನ ಶ್ರಮದಿಂದ ಕರ್ತೃವಿನಿಂದ ಮಾಡಲ್ಪಡುತ್ತದೆಯೋ ಆ ಕರ್ಮವು ರಾಜಸವೆನಿಸುತ್ತದೆ.

**ಅನುಬನ್ಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ತತ್ತಾಮಸಮುದಾಹೃತಮ್ ॥೨೫॥**

೨೫. ಅನುಬಂಧವನ್ನೂ ಕ್ಷಯವನ್ನೂ ಹಿಂಸೆಯನ್ನೂ ಪೌರುಷವನ್ನೂ ಲೆಕ್ಕಿಸದೆ ಯಾವ ಕರ್ಮವನ್ನು ಮೋಹದಿಂದ ಮಾಡುವರೋ ಅದು ತಾಮಸವೆನ್ನಿಸುತ್ತದೆ.

(ಭಾಷ್ಯ)

೫೧೯. ಅನುಬನ್ಧಮ್ । ಪಶ್ಚಾದ್ಭಾವಿ ಯತ್ ವಸ್ತು ಸಃ ಅನುಬನ್ಧಃ ಉಚ್ಯತೇ । ತಂ ಚ ಅನುಬನ್ಧಮ್ । ಕ್ಷಯಮ್ । ಯಸ್ಮಿನ್ ಕರ್ಮಣಿ ಕ್ರಿಯಮಾಣೇ ಶಕ್ತಿಕ್ಷಯಃ ಅರ್ಥಕ್ಷಯೋ ವಾ ಸ್ಯಾತ್ ತಂ ಕ್ಷಯಮ್ । ಹಿಂಸಾಂ ಪ್ರಾಣಿಪೀಡಾಂ ಚ । ಅನಪೇಕ್ಷ್ಯ ಚ ಪೌರುಷಂ ಪುರುಷಕಾರಮ್, 'ಶಕ್ನೋಮಿ ಇದಂ ಕರ್ಮ ಸಮಾಪಯಿತುಮ್' ಇತ್ಯೇವಮ್ ಆತ್ಮಸಾಮರ್ಥ್ಯಮ್ । ಇತ್ಯೇತಾನಿ ಅನುಬನ್ಧಾದೀನಿ ಅನಪೇಕ್ಷ್ಯ ಪೌರುಷಾನ್ತಾನಿ ಮೋಹಾತ್ ಅವಿವೇಕತಃ ಆರಭ್ಯತೇ ಕರ್ಮ ಯತ್ ತತ್ ತಾಮಸಂ ತಮೋನಿರ್ವೃತ್ತಮ್ ಉಚ್ಯತೇ

(ಭಾಷ್ಯಾರ್ಥ)

ಅನುಬಂಧವನ್ನೂ--ಕಡೆಗೆ ಆಗುವ (ಪರಿಣಾಮ) ವಸ್ತು ಯಾವದೋ ಅದು ಅನುಬಂಧವೆನಿಸುತ್ತದೆ ಆ ಅನುಬಂಧವನ್ನೂ ; ಕ್ಷಯವನ್ನೂ ; ಯಾವ ಕರ್ಮವನ್ನು ಮಾಡಿದರೆ ಶಕ್ತಿಯ ಕ್ಷಯವಾಗಲಿ ಹಣದ ಕ್ಷಯವಾಗಲಿ ಆಗುವದೋ ಆ ಕ್ಷಯವನ್ನೂ ; ಹಿಂಸೆಯನ್ನೂ ಪ್ರಾಣಿಗಳಿಗೆ (ಆಗುವ) ಪೀಡೆಯನ್ನೂ ; ಪೌರುಷವನ್ನೂ ಅಪೇಕ್ಷಿಸದೆ. ಪುರುಷಕಾರವನ್ನೂ ಈ ಕರ್ಮವನ್ನು ಮುಗಿಸಲಾಪೆನು ಎಂಬೀ ತನ್ನ ಸಾಮರ್ಥ್ಯವನ್ನೂ--ಹೀಗೆ ಅನುಬಂಧವೇ ಮುಂತಾಗಿ ಪೌರುಷದವರೆಗಿನ ಇವುಗಳನ್ನು--ಲೆಕ್ಕಿಸದೆ ಮೋಹದಿಂದ ಅವಿವೇಕದಿಂದ ಯಾವ ಕರ್ಮವನ್ನು ಮಾಡುವರೋ ಅದು ತಾಮಸವು, ತಮಸ್ಸಿನಿಂದಾದದ್ದು ಎನಿಸುತ್ತದೆ.

---

1. ಅದಕ್ಕೆ ಮತ್ತೂ ಎಂಬರ್ಥವೇನೂ ಇಲ್ಲವೆಂದು ಭಾವ.

# ಕರ್ತೃವಿನಲ್ಲಿ ಗುಣಭೇದದಿಂದ ಮೂರು ಬಗೆ

(ಭಾಷ್ಯ)

೫೧೦. ಇದಾನೀಂ ಕರ್ತೃಭೇದಃ ಉಚ್ಯತೇ[2] –

(ಭಾಷ್ಯಾರ್ಥ)

ಈಗ ಕರ್ತೃವಿನ ಭೇದವನ್ನು ಹೇಳುತ್ತಾನೆ :—

**ಮುಕ್ತಸಙ್ಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬ ॥**

೨೬. ಮುಕ್ತಸಂಗನು, ಅನಹಂವಾದಿಯು, ಧೃತ್ಯುತ್ಸಾಹಸಮನ್ವಿತನು, ಸಿದ್ಧಿ, ಅಸಿದ್ಧಿ–ಇವುಗಳ (ವಿಷಯದಲ್ಲಿ) ನಿರ್ವಿಕಾರನು–(ಇಂಥ) ಕರ್ತೃವು ಸಾತ್ತ್ವಿಕನೆನಿಸುತ್ತಾನೆ.

(ಭಾಷ್ಯ)

೫೧೧. ಮುಕ್ತಸಙ್ಗಃ । ಮುಕ್ತಃ ಪರಿತ್ಯಕ್ತಃ ಸಙ್ಗಃ ಯೇನ ಸಃ ಮುಕ್ತಸಙ್ಗಃ । ಅನಹಂವಾದೀ । ನಾಹಂವದನಶೀಲಃ । ಧೃತ್ಯುತ್ಸಾಹಸಮನ್ವಿತಃ । ಧೃತಿಃ ಧಾರಣಮ್ ಉತ್ಸಾಹಃ ಉದ್ಯಮಃ । ತಾಭ್ಯಾಂ ಸಮನ್ವಿತಃ ಸಂಯುಕ್ತಃ ಧೃತ್ಯುತ್ಸಾಹಸಮನ್ವಿತಃ । ಸಿದ್ಧ್ಯಸಿದ್ಧ್ಯೋಃ ಕ್ರಿಯಮಾಣಸ್ಯ ಕರ್ಮಣಃ ಫಲಸಿದ್ಧೌ ಅಸಿದ್ಧೌ ಚ ಸಿದ್ಧ್ಯಸಿದ್ಧ್ಯೋಃ ನಿರ್ವಿಕಾರಃ । ಕೇವಲಂ ಶಾಸ್ತ್ರಪ್ರಮಾಣೇನ ಪ್ರಯುಕ್ತಃ ನ ಫಲರಾಗಾದಿನಾ ಯಃ ಸ ನಿರ್ವಿಕಾರಃ ಉಚ್ಯತೇ । ಏವಂಭೂತಃ ಕರ್ತಾ ಯಃ ಸ ಸಾತ್ತ್ವಿಕಃ ಉಚ್ಯತೇ ॥

(ಭಾಷ್ಯಾರ್ಥ)

ಮುಕ್ತಸಂಗನು : ಯಾವನಿಂದ ಸಂಗವು ಮುಕ್ತವಾಗಿರುತ್ತದೆಯೋ ಬಿಡಲ್ಪಟ್ಟಿರುವದೋ ಅವನು ಮುಕ್ತಸಂಗನು. ಅನಹಂವಾದಿ : ನಾನು ಎಂದು ಹೇಳಿಕೊಳ್ಳುವ ಸ್ವಭಾವವಿಲ್ಲದವನು. ಧೃತ್ಯುತ್ಸಾಹಸಮನ್ವಿತನು. ಧೃತಿ ಎಂದರೆ ಹಿಡಿದೆತ್ತಿಕೊಳ್ಳುವದು ; ಉತ್ಸಾಹವೆಂದರೆ ಉದ್ಯೋಗ (ಶೀಲತೆ). ಆ (ಧೃತ್ಯುತ್ಸಾಹಗಳಿಂದ) ಸಮನ್ವಿತನು, ಒಡಗೂಡಿರುವವನು ಧೃತ್ಯುತ್ಸಾಹಸಮನ್ವಿತನು. ಸಿದ್ಧ್ಯಸಿದ್ಧಿಗಳಲ್ಲಿ–ಮಾಡುವ ಕರ್ಮದ ಫಲವು ಕೈಗೂಡಲಿ ಕೈಗೂಡದಿರಲಿ, (ಆ) ಸಿದ್ಧಿ

---

1. ನಿ॥ ದಲ್ಲಿ ಈ ವಾಕ್ಯವಿಲ್ಲ.

ಮತ್ತು ಅಸಿದ್ಧಿ(ಯ ವಿಷಯದಲ್ಲಿ) ನಿರ್ವಿಕಾರನಾಗಿರುವನೋ (ಎಂದರ್ಥ). ಬರಿಯ ಶಾಸ್ತ್ರಪ್ರಮಾಣದಿಂದ ಪ್ರೇರಿತನಾಗಿರುವನೇ ಹೊರತು ಫಲದ ಆಸೆಯೇ ಮುಂತಾದವುಗಳಿಂದ[1] ಯಾವನು (ಪ್ರೇರಿತ)ನಾಗಿರುವದಿಲ್ಲವೋ ಆವನು ನಿರ್ವಿಕಾರನೆನಿಸುವನು. ಇಂಥ ಕರ್ತೃವಿರುವನಲ್ಲ, ಅವನು ಸಾತ್ತ್ವಿಕನೆನಿಸುತ್ತಾನೆ.

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭ ॥**

೨೭. ರಾಗಿಯೂ ಕರ್ಮಲಪ್ರೇಪ್ಸುವೂ ಲುಬ್ಧನೂ ಹಿಂಸಾತ್ಮಕನೂ ಅಶುಚಿಯೂ ಹರ್ಷಶೋಕಾನ್ವಿತನೂ ಆದ ಕರ್ತನು ರಾಜಸನೆನಿಸಿರುತ್ತಾನೆ.

(ಭಾಷ್ಯ)

೫೧೨. ರಾಗೀ । ರಾಗಃ ಅಸ್ಯ ಅಸ್ತಿ ಇತಿ ರಾಗೀ । ಕರ್ಮಫಲಪ್ರೇಪ್ಸುಃ ಕರ್ಮಫಲಾರ್ಥೀ । ಲುಬ್ಧಃ ಪರದ್ರವ್ಯೇಷು ಸಞ್ಜಾತತೃಷ್ಣಃ । ತೀರ್ಥಾದೌ ಸ್ವದ್ರವ್ಯಪರಿತ್ಯಾಗೀ ವಾ । ಹಿಂಸಾತ್ಮಕಃ ಪರಪೀಡಾಕರಸ್ವಭಾವಃ । ಅಶುಚಿಃ ಬಾಹ್ಯಾನ್ತಃಶೌಚವರ್ಜಿತಃ । ಹರ್ಷಶೋಕಾನ್ವಿತಃ । ಇಷ್ಟಪ್ರಾಪ್ತೌ ಹರ್ಷಃ ಅನಿಷ್ಟಪ್ರಾಪ್ತೌ ಇಷ್ಟವಿಯೋಗೇ ಚ ಶೋಕಃ ತಾಭ್ಯಾಂ ಹರ್ಷಶೋಕಾಭ್ಯಾಮ್ ಅನ್ವಿತಃ ಸಂಯುಕ್ತಃ । ತಸ್ಯೈವ ಚ ಕರ್ಮಣಃ ಸಮ್ಪತ್ತಿವಿಪತ್ತಿಭ್ಯಾಂ[2] ಹರ್ಷಶೋಕೌ ಸ್ಯಾತಾಮ್ । ತಾಭ್ಯಾಂ ಸಂಯುಕ್ತಃ । ಯಃ ಕರ್ತಾ ಸಃ ರಾಜಸಃ ಪರಿಕೀರ್ತಿತಃ ॥

(ಭಾಷ್ಯಾರ್ಥ)

ರಾಗಿಯು ಎಂದರೆ ರಾಗವುಳ್ಳವನು[3]; ಕರ್ಮಫಲಪ್ರೇಪ್ಸು, ಕರ್ಮಫಲವನ್ನು ಬಯಸುವವನು; ಲುಬ್ಧನು, ಮತ್ತೊಬ್ಬರ ವಸ್ತುಗಳಲ್ಲಿ ಬಯಕೆಯುಂಟಾಗಿರುವವನು, ಅಥವಾ ತೀರ್ಥಾದಿಗಳಲ್ಲಿ ತನ್ನ ದ್ರವ್ಯವನ್ನು ದಾನಮಾಡದವನು; ಹಿಂಸಾತ್ಮಕನು, ಮತ್ತೊಬ್ಬರಿಗೆ ತೊಂದರೆಯನ್ನು ಮಾಡುವ ಸ್ವಭಾವದವನು; ಅಶುಚಿಯು, ಹೊರಗಿನ ಮತ್ತು ಒಳಗಿನ ಶುಚಿತ್ವವಿಲ್ಲದವನು; ಹರ್ಷಶೋಕಾನ್ವಿತನು: ಬೇಕಾದದ್ದು ದೊರೆತರೆ ಹರ್ಷವೂ, ಬೇಡವಾದದ್ದು ಬಂದೊದಗಿದರೂ

---

1. ಫಲದಿಂದಾಗುವ ಸುಖದ ಆಸೆ ಮುಂತಾದದ್ದರಿಂದ.
2. " ಸಂಪತ್ತಿವಿಪತ್ತ್ಯೋಃ " ನಿ||ಗು||
3. ವಿಷಯಗಳ ರಾಗದಿಂದ ಕದಡಿದ ಚಿತ್ತವುಳ್ಳವನು.

ಬೇಕಾದದ್ದು (ತನ್ನನ್ನು ಬಿಟ್ಟು) ಅಗಲಿದರೂ ಶೋಕವೂ (ಆಗುವವಲ್ಲ), ಆ ಹರ್ಷಶೋಕಗಳಿಂದ ಅನ್ವಿತನಾದವನು, ಒಡಗೂಡಿದವನು. ಅದೇ ಕರ್ಮವು ನೆರವೇರಿದರೂ ಕೆಟ್ಟರೂ ಹರ್ಷಶೋಕಗಳು ಆಗಬಹುದು ; ಆ (ಹರ್ಷಶೋಕ) ಗಳಿಂದ ಒಡಗೂಡಿದವನು (ಹರ್ಷಶೋಕಾನ್ವಿತನು). ಯಾವ ಕರ್ತನು(ಇಂಥವನೋ) ಅವನು ರಾಜಸನೆನಿಸಿರುತ್ತಾನೆ.

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥**

೨೮. ಅಯುಕ್ತನೂ ಪ್ರಾಕೃತನೂ ಶಠನೂ ನೈಕೃತಿಕನೂ ಅಲಸನೂ ವಿಷಾದಿಯೂ ದೀರ್ಘಸೂತ್ರಿಯೂ (ಆದ) ಕರ್ತನು ತಾಮಸನೆನಿಸುತ್ತಾನೆ.

(ಭಾಷ್ಯ)

೫೧೩. ಅಯುಕ್ತಃ ಅಸಮಾಹಿತಃ[1] । ಪ್ರಾಕೃತಃ ಅತ್ಯನ್ತಾಸಂಸ್ಕೃತಬುದ್ಧಿಃ ಬಾಲಸಮಃ । ಸ್ತಬ್ಧಃ ದಣ್ಡವತ್ ನ ನಮತಿ ಕಸ್ಮೈಚಿತ್ । ಶಠಃ ಮಾಯಾವೀ ಶಕ್ತಿಗೂಹನಕಾರೀ । ನೈಕೃತಿಕಃ ಪರವೃತ್ತಿಚ್ಛೇದನಪರಃ[2] । ಅಲಸಃ ಅಪ್ರವೃತ್ತಿಶೀಲಃ ಕರ್ತವ್ಯೇಷ್ವಪಿ । ವಿಷಾದೀ[3] ಸರ್ವದಾ ಅವಸನ್ನಸ್ವಭಾವಃ । ದೀರ್ಘಸೂತ್ರೀ ಚ ಕರ್ತವ್ಯಾನಾಂ ದೀರ್ಘಪ್ರಸಾರಣಃ ಸರ್ವದಾ ಮನ್ದಸ್ವಭಾವಃ[4] । ಯತ್ ಅದ್ಯ ಶ್ವೋ ವಾ ಕರ್ತವ್ಯಂ ತತ್ ಮಾಸೇನಾಪಿ ನ ಕರೋತಿ । ಯಶ್ಚ ಏವಂಭೂತಃ ಸ ಕರ್ತಾ ತಾಮಸ ಉಚ್ಯತೇ ॥

(ಭಾಷ್ಯಾರ್ಥ)

ಅಯುಕ್ತನು, (ಚಿತ್ತ)ಸಮಾಧಾನವಿಲ್ಲದವನು ; ಪ್ರಾಕೃತನು ಸ್ವಲ್ಪವೂ ಸಂಸ್ಕಾರವಿಲ್ಲದ ಬುದ್ಧಿಯವನು, ಹುಡುಗರಂತೆ ಇರುವವನು; ಸ್ತಬ್ಧನು, ಯಾರಿಗೂ ದಂಡವತ್ಪ್ರಣಾಮವನ್ನು ಮಾಡದವನು; ಶಠನು, ಮಾಯಾವಿಯು ಶಕ್ತಿಯನ್ನು ಮುಚ್ಚಿಕೊಳ್ಳುವವನು ; ನೈಕೃತಿಕನು, ಮತ್ತೊಬ್ಬರ ವೃತ್ತಿಯನ್ನು ಹಾಳುಮಾಡುವವನು ; ಅಲಸನು, ಮಾಡಬೇಕಾದ (ಕೆಲಸ)ಗಳಲ್ಲಿಯೂ ತೊಡಗದೆ ಇರುವವನು;

---

1. " ಅಯುಕ್ತಃ ನ ಯುಕ್ತಃ ಅಸಮಾಹಿತಃ " ಮ॥ವ್ಯಾ॥
2. " ಪರವಿಭೇದನಪರಃ " ಮ॥ವ್ಯಾ॥; "ನೈಷ್ಕೃತಿಕಃ ಪರವೃತ್ತಿಚ್ಛೇದನಪರಃ " ನಿ॥
3. " ವಿಷಾದೀ ವಿಷಾದವಾನ್ ಸರ್ವದಾ " ನಿ॥
4. " ಸರ್ವದಾ ಮನ್ದಸ್ವಭಾವಃ '' ಎಂಬುದು ನಿ॥ದಲ್ಲಿಲ್ಲ.

ವಿಷಾದಿಯು, ಯಾವಾಗಲೂ (ಮನಸ್ಸು) ಕುಸಿಯುದ ಸ್ವಭಾವದವನು; ದೀರ್ಘಸೂತ್ರಿ, ಮಾಡಬೇಕಾದ (ಕೆಲಸ)ಗಳನ್ನು ಬಹುಕಾಲ ಮುಂದೆ ಹಾಕುವವನು, ಯಾವಾಗಲೂ ನಿಧಾನವಾದ ಸ್ವಭಾವದವನು, ಇಂದೋ ನಾಳೆಯೋ ಮಾಡಬೇಕಾದದ್ದನ್ನು ತಿಂಗಳಾದರೂ ಮಾಡದೆ ಇರುವವನು. ಯಾವನು ಈ ರೀತಿಯಾಗಿರುವ ಕರ್ತೃವೋ ಅವನು ತಾಮಸನೆನಿಸುತ್ತಾನೆ.

## ಬುದ್ಧಿಧೃತಿಗಳಲ್ಲಿ ಗುಣಭೇದದಿಂದ ಮೂರು ಬಗೆ

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಞ್ಜಯ ॥ ೨೯ ॥**

೨೯. ಧನಂಜಯನೆ, ಬುದ್ಧಿಯ ಮತ್ತು ಧೃತಿಯ ಭೇದವು ಗುಣದಿಂದ ಮೂರು ಬಗೆಯಾಗಿರುವದನ್ನು ಅಶೇಷವಾಗಿ ಬೇರೆಬೇರೆಯಾಗಿ ಹೇಳುವದನ್ನು ಕೇಳು.

(ಭಾಷ್ಯ)

೫೧೪. ಬುದ್ಧೇಃ ಭೇದಂ ಧೃತೇಶ್ಚೈವ ಭೇದಂ ಗುಣತಃ ಸತ್ತ್ವಾದಿಗುಣತಃ ತ್ರಿವಿಧಂ ಶೃಣು ಇತಿ ಸೂತ್ರೋಪನ್ಯಾಸಃ। ಪ್ರೋಚ್ಯಮಾನಂ ಕಥ್ಯಮಾನಮ್ ಅಶೇಷೇಣ ನಿರವಶೇಷತಃ ಯಥಾವತ್ ಪೃಥಕ್ತ್ವೇನ ವಿವೇಕತಃ ಧನಞ್ಜಯ। ದಿಗ್ವಿಜಯೇ ಮಾನುಷಂ ದೈವಂ ಚ ಪ್ರಭೂತಂ ಧನಂ ಜಿತವಾನ್, ತೇನ ಅಸೌ ಧನಞ್ಜಯಃ ಅರ್ಜುನಃ ॥

(ಭಾಷ್ಯಾರ್ಥ)

ಬುದ್ಧಿಯ ಭೇದವನ್ನೂ ಧೃತಿಯ ಭೇದವನ್ನೂ ಗುಣದಿಂದ ಸತ್ತ್ವವೇ ಮುಂತಾದ ಗುಣದಿಂದ ಮೂರು ಬಗೆಯಾಗಿರುವದನ್ನು (ಹೇಳುವೆನು) ಕೇಳು-ಎಂದು (ಹೇಳಿರುವದು) ಸೂತ್ರರೂಪವಾಗಿ ಹೇಳಿದ್ದು[1]. ಅಶೇಷವಾಗಿ ಸ್ವಲ್ಪವೂ ಉಳಿಯದಂತೆ ಇದ್ದದ್ದು ಇದ್ದಹಾಗೆ ಬೇರೆಬೇರೆಯಾಗಿ ವಿಂಗಡಿಸಿ ಹೇಳುವದನ್ನು ತಿಳಿಸುವದನ್ನು ಕೇಳಯ್ಯ, ಧನಂಜಯ. ದಿಗ್ವಿಜಯದಲ್ಲಿ[2] ಹೇರಳವಾಗಿ ಮಾನುಷ(ಧನವನ್ನೂ) ದೈವ[3] ಧನವನ್ನೂ ಗೆದ್ದುಕೊಂಡು ಬಂದನು: ಅದರಿಂದ ಈ ಅರ್ಜುನನಿಗೆ ಧನಂಜಯನೆಂದು ಹೆಸರು.

---

1. ಮುಂದೆ ವಿಸ್ತರಿಸಿ ಹೇಳುತ್ತೇನೆಂದು ತಿಳಿಸುವ ಸಂಗ್ರಹವಾದ ಪ್ರತಿಜ್ಞಾವಾಕ್ಯವು.
2. ರಾಜಸೂಯಯಾಗದ ಕಾಲಕ್ಕೆ.
3. ಮನುಷ್ಯನಿಗೆ ಸೇರದೆ ಯಾರ ಸ್ವತ್ತೂ ಅಲ್ಲದಿದ್ದ ಧನ.

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬನ್ಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥೩೦॥**

೩೦. ಪಾರ್ಥನೆ, ಪ್ರವೃತ್ತಿಯನ್ನೂ ನಿವೃತ್ತಿಯನ್ನೂ ಕಾರ್ಯಾಕಾರ್ಯಗಳನ್ನೂ ಭಯಾಭಯಗಳನ್ನೂ ಬಂಧವನ್ನೂ ಮೋಕ್ಷವನ್ನೂ ಯಾವದು ತಿಳಿಯುವದೋ ಆ ಬುದ್ಧಿಯು ಸಾತ್ತ್ವಿಕವು.

(ಭಾಷ್ಯ)

೫೧೫. ಪ್ರವೃತ್ತಿಂ ಚ । ಪ್ರವೃತ್ತಿಃ ಪ್ರವರ್ತನಂ ಬನ್ಧಹೇತುಃ ಕರ್ಮಮಾರ್ಗಃ ಶಾಸ್ತ್ರವಿಹಿತವಿಷಯಃ[1] । ನಿವೃತ್ತಿಂ ಚ । ನಿವೃತ್ತಿಃ ಮೋಕ್ಷಹೇತುಃ ಸಂನ್ಯಾಸಮಾರ್ಗಃ । ಬನ್ಧಮೋಕ್ಷಸಮಾನವಾಕ್ಯತ್ವಾತ್ ಪ್ರವೃತ್ತಿನಿವೃತ್ತೀ ಕರ್ಮಸಂನ್ಯಾಸಮಾರ್ಗೌ ಇತಿ ಅವಗಮ್ಯತೇ । ಕಾರ್ಯಾಕಾರ್ಯೇ ವಿಹಿತಪ್ರತಿಷಿದ್ಧೇ[2] ಲೌಕಿಕೇ ವೈದಿಕೇ ವಾ[3] ಶಾಸ್ತ್ರಬುದ್ಧೇಃ ಕರ್ತವ್ಯಾಕರ್ತವ್ಯೇ । ಕರಣಾಕರಣೇ ಇತ್ಯೇತತ್ । ಕಸ್ಯ? ದೇಶಕಾಲಾದ್ಯಪೇಕ್ಷಯಾ ದೃಷ್ಟಾದೃಷ್ಟಾರ್ಥಾನಾಂ ಕರ್ಮಣಾಮ್ । ಭಯಾಭಯೇ । ಬಿಭೇತಿ ಅಸ್ಮಾತ್ ಇತಿ ಭಯಮ್ । ನ ಭಯಮ್ ಅಭಯಮ್ । ಭಯಂ ಚ ಅಭಯಂ ಚ ಭಯಾಭಯೇ । ದೃಷ್ಟಾದೃಷ್ಟವಿಷಯಯೋಃ[4] ಭಯಾಭಯಯೋಃ ಕಾರಣೇ ಇತ್ಯರ್ಥಃ । ಬನ್ಧಂ ಸಹೇತುಕಂ ಮೋಕ್ಷಂ ಚ ಸಹೇತುಕಂ ಯಾ ವೇತ್ತಿ ವಿಜಾನಾತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ । ತತ್ರ ಜ್ಞಾನಂ ಬುದ್ಧೇಃ ವೃತ್ತಿಃ, ಬುದ್ಧಿಸ್ತು ವೃತ್ತಿಮತೀ । ಧೃತಿರಪಿ ವೃತ್ತಿವಿಶೇಷ ಏವ ಬುದ್ಧೇಃ ॥

(ಭಾಷ್ಯಾರ್ಥ)

ಪ್ರವೃತ್ತಿಯನ್ನೂ–ಪ್ರವೃತ್ತಿ ಎಂದರೆ ತೊಡಗುವದು, ಬಂಧಕ್ಕೆ ಕಾರಣವಾಗಿರುವ ಕರ್ಮಮಾರ್ಗವು; (ಇದು) ಶಾಸ್ತ್ರದಲ್ಲಿ (ವಿಧಿಸಿರುವ) ಕರ್ಮಗಳ ವಿಷಯವು. (ಇದನ್ನೂ) ನಿವೃತ್ತಿಯನ್ನೂ–ನಿವೃತ್ತಿ ಎಂದರೆ ಮೋಕ್ಷಕ್ಕೆ ಕಾರಣವಾಗಿರುವ ಸಂನ್ಯಾಸಮಾರ್ಗವು. ಬಂಧ**ಮೋಕ್ಷಗಳನ್ನು** (ಹೇಳುವ) **ವಾಕ್ಯದಲ್ಲಿಯೇ** (ಇರುವ)**ದರಿಂದ ಪ್ರವೃತ್ತಿನಿವೃತ್ತಿಗಳೆಂದರೆ ಕರ್ಮಮಾರ್ಗಸಂನ್ಯಾಸಮಾರ್ಗಗಳೆಂದು**

---

1. ಸಿ॥ ದಲ್ಲಿಲ್ಲ.
2. ಮ॥ ದಲ್ಲಿಲ್ಲ.
3. ಸಿ॥ ದಲ್ಲಿಲ್ಲ.
4. 'ದೃಷ್ಟಾದೃಷ್ಟಯೋರೇವ' ಮ॥ 'ದೃಷ್ಟಾದೃಷ್ಟಯೋಃ' ಮೈ॥

**ಗೊತ್ತಾಗುತ್ತದೆ.** ಕಾರ್ಯಾಕಾರ್ಯಗಳನ್ನೂ ಶಾಸ್ತ್ರಬುದ್ಧಿಯವನು[1] ಮಾಡಬೇಕಾದ ಅಥವಾ ಮಾಡಬಾರದ ಲೌಕಿಕವಾದ[2] ಅಥವಾ ವೈದಿಕವಾದ ಕರ್ತವ್ಯಾಕರ್ತವ್ಯಗಳು; ಮಾಡುವದು, ಮಾಡದೆಬಿಡುವದು ಎಂದರ್ಥ. ಯಾವದನ್ನು (ಮಾಡುವದು ಅಥವಾ ಬಿಡುವದು)? ಎಂದರೆ ದೇಶ, ಕಾಲ ಮುಂತಾದವುಗಳಿಗೆ ತಕ್ಕಂತೆ ಈ ಲೋಕದ ಪ್ರಯೋಜನಕ್ಕಾಗಿಯೂ ಪರಲೋಕದ ಪ್ರಯೋಜನಕ್ಕಾಗಿಯೂ ಕರ್ಮಗಳನ್ನು (ಮಾಡುವದು, ಅಥವಾ ಬಿಡುವದು). ಭಯಾಭಯಗಳನ್ನೂ: ಭಯವೆಂದರೆ ಯಾವದಕ್ಕೆ ಅಂಜುತ್ತಾರೋ ಅದು; ಭಯವಲ್ಲದ್ದು ಅಭಯವು. ಭಯವೂ ಅಭಯವೂ ಭಯಾಭಯಗಳು; ಕಂಡ (ಈ ಲೋಕದ), ಕಾಣದ (ಪರಲೋಕದ) ವಿಷಯದ ಭಯಾಭಯಗಳಿಗೆ ಕಾರಣಗಳನ್ನೂ ಎಂದರ್ಥ. ಬಂಧವನ್ನೂ ಕಾರಣಸಹಿತವಾದ (ಬಂಧವನ್ನೂ) ಮೋಕ್ಷವನ್ನೂ ಕಾರಣಸಹಿತವಾದ[3] ಮೋಕ್ಷವನ್ನೂ (ಎಂದರ್ಥ. ಇವುಗಳನ್ನೂ) ಯಾವ ಬುದ್ಧಿಯು ಅರಿತುಕೊಳ್ಳುವದೋ ಅದು, ಎಲೈ ಪಾರ್ಥನೆ, ಸಾತ್ತ್ವಿಕವಾದದ್ದು.

ಇಲ್ಲಿ (೨೦-೨೧ನೆಯ ಶ್ಲೋಕಗಳಲ್ಲಿ ಹೇಳಿದ) ಜ್ಞಾನವು ಬುದ್ಧಿಯ ವೃತ್ತಿಯು; (ಇಲ್ಲಿ ಹೇಳಿರುವ) ಬುದ್ಧಿಯಾದರೋ ವೃತ್ತಿಯುಳ್ಳದ್ದು. (ಮುಂದೆ ಹೇಳುವ) ಧೃತಿಯೂ ಬುದ್ಧಿಯ ಒಂದು ಬಗೆಯ ವೃತ್ತಿಯೇ.

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ।**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧ ॥**

೩೧. ಪಾರ್ಥನೆ, ಯಾವದರಿಂದ ಧರ್ಮವನ್ನೂ ಅಧರ್ಮವನ್ನೂ ಕಾರ್ಯವನ್ನೂ ಅಕಾರ್ಯವನ್ನೂ ಅಯಥಾವತ್ತಾಗಿ ಅರಿಯುವನೋ ಆ ಬುದ್ಧಿಯು ರಾಜಸವು.

(ಭಾಷ್ಯ)

೫೧೬. ಯಯಾ ಧರ್ಮಂ ಶಾಸ್ತ್ರಚೋದಿತಮ್। ಅಧರ್ಮಂ ಚ ತತ್ಪ್ರತಿಷಿದ್ಧಮ್। ಕಾರ್ಯಂ ಚ ಅಕಾರ್ಯಮೇವ ಚ ಪೂರ್ವೋಕ್ತೇ ಏವ ಕಾರ್ಯಾಕಾರ್ಯೇ। ಅಯಥಾವತ್ ನ ಯಥಾವತ್ ಸರ್ವತಃ ನಿರ್ಣಯೇನ ನ ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥

---

1. ಶಾಸ್ತ್ರದಲ್ಲಿ ಹೇಳಿರುವದರಲ್ಲಿ ಶ್ರದ್ಧೆಯುಳ್ಳವನು.
2. ಸ್ಮೃತಿಗಳಲ್ಲಿ ಹೇಳಿರುವ, ಮತ್ತು ಸಾಮಾನ್ಯಬುದ್ಧಿಗೆ ಹೊಳೆಯುವ.
3. ಬಂಧಕ್ಕೆ ಕಾರಣ ಅವಿದ್ಯೆ, ಮೋಕ್ಷಕ್ಕೆ ಕಾರಣ ವಿದ್ಯೆ.

(ಭಾಷ್ಯಾರ್ಥ)

ಯಾವ (ಬುದ್ಧಿಯಿಂದ) ಧರ್ಮವನ್ನೂ ಶಾಸ್ತ್ರದಲ್ಲಿ ವಿಧಿಸಿರುವದನ್ನೂ ಅಧರ್ಮವನ್ನೂ ಅದರಲ್ಲಿ ಮಾಡಕೂಡದೆಂದಿರುವದನ್ನೂ ; ಕಾರ್ಯವನ್ನೂ ಅಕಾರ್ಯವನ್ನೂ–ಇಲ್ಲಿ ಹಿಂದೆ ಹೇಳಿರುವವುಗಳೇ ಕಾರ್ಯಾಕಾರ್ಯಗಳು [1]. (ಇವುಗಳನ್ನು) ಅಯಥಾವತ್ತಾಗಿ ತಿಳಿಯುತ್ತಾನೋ, ಇದ್ದದ್ದು ಇದ್ದಂತೆ ಎಲ್ಲಾ (ಬಗೆಯಿಂದ)ಲೂ ಗೊತ್ತುಪಡಿಸಿ (ತಿಳಿಯುವ)ದಿಲ್ಲವೋ, ಆ ಬುದ್ಧಿಯು, ಎಲೈ ಪಾರ್ಥನೆ, ರಾಜಸವು.

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥೩೨॥**

೩೨. ಪಾರ್ಥನೆ, ಅಧರ್ಮವನ್ನು ಧರ್ಮವೆಂದು, ತಮಸ್ಸಿನಿಂದ ಆವೃತವಾಗಿ ಯಾವದು ತಿಳಿಯುವದೋ, ಸರ್ವಾರ್ಥಗಳನ್ನೂ ವಿಪರೀತವಾಗಿಯೂ ಅರಿತುಕೊಳ್ಳುತ್ತಿರುವದೋ, ಆ ಬುದ್ಧಿಯು ತಾಮಸವು.

(ಭಾಷ್ಯ)

೫೧೭. ಅಧರ್ಮಂ ಪ್ರತಿಷಿದ್ಧಂ ಧರ್ಮಂ ವಿಹಿತಮಿತಿ ಯಾ ಮನ್ಯತೇ ಜಾನಾತಿ ತಮಸಾ ಆವೃತಾ ಸತೀ। ಸರ್ವಾರ್ಥಾನ್ ಸರ್ವಾನೇವ ಜ್ಞೇಯಪದಾರ್ಥಾನ್ ವಿಪರೀತಾಂಶ್ಚ ವಿಪರೀತಾನೇವ ವಿಜಾನಾತಿ ಬುದ್ಧಿಃ ಸಾ ಪಾರ್ಥ **ತಾಮಸೀ ॥**

(ಭಾಷ್ಯಾರ್ಥ)

ಯಾವ (ಬುದ್ಧಿಯು) ತಮಸ್ಸು (ತನ್ನನ್ನು) ಮುಸುಕಿರುವದರಿಂದ ಅಧರ್ಮವನ್ನು (ಶಾಸ್ತ್ರದಲ್ಲಿ) ಮಾಡಕೂಡದೆಂದಿರುವದನ್ನು ಧರ್ಮವು (ಶಾಸ್ತ್ರ)ವಿಹಿತವಾದದ್ದು –ಎಂದು ತಿಳಿಯುವದೋ (ಹಾಗೆಂದು) ಅರಿಯುವದೋ, ಸರ್ವಾರ್ಥಗಳನ್ನೂ ಜ್ಞೇಯಪದಾರ್ಥಗಳೆಲ್ಲವನ್ನೂ ವಿರುದ್ಧವಾಗಿಯೇ ತಿಳಿದುಕೊಳ್ಳುತ್ತಿರುವದೋ ಆ ಬುದ್ಧಿಯು, ಎಲೈ ಪಾರ್ಥನೆ, ತಾಮಸವು.

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇನ್ದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩ ॥**

---

1. ಲೌಕಿಕವೈದಿಕಕರ್ಮಗಳು ಎಂದರ್ಥ.

೩೩. ಯಾವ ಅವ್ಯಭಿಚಾರಿಯಾದ ಧೃತಿಯಿಂದ ಮನಃಪ್ರಾಣೇಂದ್ರಿಯಕ್ರಿಯೆಗಳನ್ನು ಯೋಗದಿಂದ ಧರಿಸಿರುತ್ತಾನೋ, ಎಲೈ ಪಾರ್ಥನೆ, ಆ ಧೃತಿಯು ಸಾತ್ತ್ವಿಕವು.

(ಭಾಷ್ಯ)

೫೧೮. ಧೃತ್ಯಾ ಯಯಾ ಅವ್ಯಭಿಚಾರಿಣ್ಯಾ ಇತಿ ವ್ಯವಹಿತೇನ ಸಂಬನ್ಧಃ ಧಾರಯತೇ। ಕಿಮ್? ಮನಃಪ್ರಾಣೇನ್ದ್ರಿಯಕ್ರಿಯಾಃ। ಮನಶ್ಚ ಪ್ರಾಣಾಶ್ಚ ಇನ್ದ್ರಿಯಾಣಿ ಚ ಮನಃಪ್ರಾಣೇನ್ದ್ರಿಯಾಣಿ। ತೇಷಾಂ ಕ್ರಿಯಾಃ ಚೇಷ್ಟಾಃ। ತಾಃ ಉಚ್ಛಾಸ್ತ್ರಮಾರ್ಗಪ್ರವೃತ್ತೇಃ ಧಾರಯತೇ ಧಾರಯತಿ। ಧೃತ್ಯಾ ಹಿ ಧಾರ್ಯಮಾಣಾಃ ಉಚ್ಛಾಸ್ತ್ರಮಾರ್ಗವಿಷಯಾಃ ನ ಭವನ್ತಿ। ಯೋಗೇನ ಸಮಾಧಿನಾ। ಅವ್ಯಭಿಚಾರಿಣ್ಯಾ ನಿತ್ಯಸಮಾಧ್ಯನುಗತಯಾ ಇತ್ಯರ್ಥಃ। ಏತತ್ ಉಕ್ತಂ ಭವತಿ–ಅವ್ಯಭಿಚಾರಿಣ್ಯಾ ಧೃತ್ಯಾ ಮನಃಪ್ರಾಣೇನ್ದ್ರಿಯಕ್ರಿಯಾಃ ಧಾರ್ಯಮಾಣಾಃ ಯೋಗೇನ ಧಾರಯತಿ ಇತಿ। ಯಾ ಏವಂಲಕ್ಷಣಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥

(ಭಾಷ್ಯಾರ್ಥ)

ಯಾವ ಧೃತಿಯಿಂದ 'ಅವ್ಯಭಿಚಾರಿಣ್ಯಾ' ಅವ್ಯಭಿಚಾರಿಯಾದ (ಯಾವ ಧೃತಿಯಿಂದ) ಎಂದು ದೂರದಲ್ಲಿರುವ (ವಿಶೇಷಣಕ್ಕೆ) ಇದನ್ನು ಸಂಬಂಧಿಸಿಕೊಳ್ಳಬೇಕು. (ಯಾವ ತಪ್ಪದೆ ಇರುವ ಧೃತಿಯಿಂದ) ಧರಿಸಿರುವನೋ. ಏನನ್ನು ? ಎಂದರೆ ಮನಃಪ್ರಾಣೇಂದ್ರಿಯಕ್ರಿಯೆಗಳನ್ನು : ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳು–(ಇವು) ಮನಃಪ್ರಾಣೇಂದ್ರಿಯಗಳು ; ಇವುಗಳ ಕ್ರಿಯೆಗಳನ್ನು ವ್ಯಾಪಾರಗಳನ್ನು ಶಾಸ್ತ್ರವನ್ನು ಮೀರಿದ (ತಪ್ಪು) ಹಾದಿಯಲ್ಲಿ ಮುನ್ನುಗ್ಗದಂತೆ (ಧಾರಯತೇ = ಧಾರಯತಿ) ಹಿಡಿದಿಟ್ಟುಕೊಂಡಿರುವನೋ. ಧೃತಿಯಿಂದ ಹಿಡಿದುಕೊಂಡರೇ ಅಲ್ಲವೆ, (ಇವು) ಶಾಸ್ತ್ರವನ್ನು ಮೀರಿದ ಹಾದಿಯನ್ನು ವಿಷಯವಾಗಿಸಿಕೊಳ್ಳದೆ ಇರುವವು? ಯೋಗದಿಂವ ಸಮಾಧಿಯಿಂದೊಡಗೂಡಿರುವ[1] (ಧೃತಿಯಿಂದ ಸಮಾಧಿಯಿಂದ. ಅವ್ಯಭಿಚಾರಿಯಾದ ಧೃತಿಯಿಂದ ಯಾವಾಗಲೂ ಹಿಡಿದುಕೊಂಡಿರುವನ ) ಎಂದರ್ಥ. "ತಪ್ಪದೆ ಇರುವ ಧೃತಿಯಿಂದ ಮನಃಪ್ರಾಣೇಂದ್ರಿಯಕ್ರಿಯೆಗಳನ್ನು ಹಿಡಿಯುವಾಗ ಯೋಗದಿಂವ (ಅವನ್ನು) ಹಿಡಿದಿರುತ್ತಾನೋ" ಎಂದು ಇಷ್ಟನ್ನು (ಇಲ್ಲಿ) ಹೇಳಿದಂತೆ

---

1. ಧೃತಿಯು ಎಂಥದ್ದಾದರೂ ಮನಸ್ಸೇ ಮುಂತಾದವುಗಳನ್ನು ಹಿಡಿದಿಟ್ಟುಕೊಂಡಿರುತ್ತದೆ; ಮನಸ್ಸಿನಲ್ಲಿ ಏರುಪೇರಿಲ್ಲದ ಸಮಾಧಿಯಿಂದ ಹಿಡಿದಿಟ್ಟುಕೊಂಡಿರುವ ಧೃತಿಯು ಸಾತ್ತ್ವಿಕವು ಎಂದರ್ಥ.

ಆಯಿತು[1]. ಯಾವದು ಇಂಥ ಸ್ವಭಾವದ ಧೃತಿಯೋ ಅದು, ಎಲೈ ಪಾರ್ಥನೆ, ಸಾತ್ತ್ವಿಕವು.

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಙ್ಗೇನ ಫಲಾಕಾಙ್ಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ ३४ ॥**

೩೪. ಆದರೆ, ಅರ್ಜುನನೆ, ಯಾವ ಧೃತಿಯಿಂದ ಧರ್ಮಕಾಮಾರ್ಥಗಳನ್ನು ಪ್ರಸಂಗದಿಂದ ಫಲಾಕಾಂಕ್ಷಿಯಾಗಿ ಧರಿಸಿಕೊಂಡಿರುವನೋ ಆ ಧೃತಿಯು, ಎಲೈ ಪಾರ್ಥನೆ, ರಾಜಸವು.

(ಭಾಷ್ಯ)

೫೧೯. ಯಯಾ ತು ಧರ್ಮಕಾಮಾರ್ಥಾನ್ ಧರ್ಮಶ್ಚ ಕಾಮಶ್ಚ ಅರ್ಥಶ್ಚ ಧರ್ಮಕಾಮಾರ್ಥಾಃ[2] । ತಾನ್ ಧರ್ಮಕಾಮಾರ್ಥಾನ್ । ಧೃತ್ಯಾ ಯಯಾ ಧಾರಯತೇ ಮನಸಿ ನಿತ್ಯಕರ್ತವ್ಯರೂಪಾನ್[3] ಅವಧಾರಯತಿ। ಹೇ ಅರ್ಜುನ। ಪ್ರಸಙ್ಗೇನ ಯಸ್ಯ ಯಸ್ಯ ಧರ್ಮಾದೇಃ ಧಾರಣಪ್ರಸಙ್ಗಃ ತೇನ ತೇನ ಪ್ರಸಙ್ಗೇನ ಫಲಾಕಾಙ್ಕ್ಷೀ ಚ ಭವತಿ ಯಃ ಪುರುಷಃ ತಸ್ಯ ಧೃತಿಃ ಯಾ ಸಾ ಪಾರ್ಥ ರಾಜಸೀ ॥

(ಭಾಷ್ಯಾರ್ಥ)

ಆದರೆ, ಎಲೈ ಅರ್ಜುನನೆ, ಯಾವದರಿಂದ ಧರ್ಮಕಾಮಾರ್ಥಗಳನ್ನು: ಧರ್ಮವೂ ಕಾಮವೂ ಅರ್ಥವೂ ಧರ್ಮಕಾಮಾರ್ಥಗಳು; ಆ ಧರ್ಮಕಾಮಾರ್ಥಗಳನ್ನು ಯಾವ ಧೃತಿಯಿಂದ ಧರಿಸಿಕೊಂಡಿರುವನೋ, ಅವಶ್ಯವಾಗಿ (ಸಂಪಾದನೆ) ಮಾಡತಕ್ಕವೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿರುವನೋ; ಯಾವ ಪುರುಷನು ಪ್ರಸಂಗದಿಂದ: ಧರ್ಮವೇ ಮುಂತಾಗಿ ಯಾವ ಯಾವದನ್ನು ಧರಿಸುವ ಪ್ರಸಂಗವು (ಬರುತ್ತದೆಯೋ) ಆಯಾ ಪ್ರಸಂಗದಿಂದ ಫಲವನ್ನು ಬೇಡುವವನೂ ಆಗಿರುತ್ತಾನೋ, ಅವನ ಧೃತಿಯಿರುವದಲ್ಲ ಅದು, ಎಲೈ ಪಾರ್ಥನೆ, ರಾಜಸವು.

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಞ್ಚತಿ ದುರ್ಮೇಧಾ ಧೃತಿಃ ಸಾ ತಾಮಸೀ ಮತಾ ॥ ३५ ॥**

---

1. ಶ್ಲೋಕದ ಪದಗಳಿಗೆ ಅನ್ವಯವನ್ನು ತೋರಿಸಿ ತಾತ್ಪರ್ಯವನ್ನು ತಿಳಿಸಿರುತ್ತದೆ.
2. ಮು॥ಡಲ್ಲಿಲ್ಲ.
3. "ನಿತ್ಯಮೇವ ಕರ್ತವ್ಯರೂಪಾನ್" ಮು॥ಮೈ॥ಗು॥ವಾ॥

೩೫. ಯಾವದರಿಂದ ಸ್ವಪ್ನವನ್ನೂ ಭಯವನ್ನೂ ಶೋಕವನ್ನೂ ವಿಷಾದವನ್ನೂ ಮದವನ್ನೂ ದುರ್ಮೇಧನಾಗಿ ಬಿಡದೆ ಇರುವನೋ ಆ ಧೃತಿಯು ತಾಮಸವೆನಿಸುತ್ತದೆ.

(ಭಾಷ್ಯ)

೫೨೦. ಯಯಾ ಸ್ವಪ್ನಂ ನಿದ್ರಾಂ ಭಯಂ ತ್ರಾಸಂ ಶೋಕಂ ವಿಷಾದಂ[1] ವಿಷಣ್ಣತಾಮ್। ಮದಮ್। ವಿಷಯಸೇವಾಮ್ ಆತ್ಮನಃ ಬಹುಮನ್ಯಮಾನಃ ಮತ್ತ ಇವ ಮದಮೇವ ಚ ಮನಸಿ ನಿತ್ಯಮೇವ ಕರ್ತವ್ಯರೂಪತಯಾ ಕುರ್ವನ್ ನ ವಿಮುಞ್ಚತಿ ಧಾರಯತ್ಯೇವ ದುರ್ಮೇಧಾಃ ಕುತ್ಸಿತಮೇಧಾಃ ಪುರುಷೋ ಯಃ, ತಸ್ಯ ಧೃತಿಃ ಯಾ ಸಾ ತಾಮಸೀ ಮತಾ ||

(ಭಾಷ್ಯಾರ್ಥ)

ಯಾವದರಿಂದ ಸ್ವಪ್ನವನ್ನೂ ನಿದ್ರೆಯನ್ನೂ, ಭಯವನ್ನೂ ಅಂಜಿಕೆಯನ್ನೂ ಶೋಕವನ್ನೂ ವಿಷಾದವನ್ನೂ (ಮನಸ್ಸಿನಲ್ಲಿ) ಕುಗ್ಗುವದನ್ನೂ, ಮದವನ್ನೂ; ವಿಷಯಸೇವೆಯೇ ತನಗೆ ಹೆಚ್ಚಿನದೆಂದುಕೊಂಡು ಮತ್ತನಾದವನಂತೆ (ಇದ್ದುಕೊಂಡಿರುವ) ಮದವನ್ನೂ-(ಇವನ್ನು) ನಿತ್ಯವೂ ತನಗೆ ಕರ್ತವ್ಯವಾಗಿರುವದೆಂದು ಮನಸ್ಸಿನಲ್ಲಿ ಮಾಡಿಕೊಂಡು, ಬಿಡದೆ ಇರುವನೋ (ಇವನ್ನು) ಧರಿಸಿಕೊಂಡೇ ಇರುವ ದುರ್ಮೇಧನಾದ ಕೆಟ್ಟಬುದ್ಧಿಯ ಪುರುಷನು ಯಾವನೋ ಅವನ ಧೃತಿಯಿರುವದಲ್ಲ, ಅದು ತಾಮಸವೆನಿಸುತ್ತದೆ.

## ಸುಖದಲ್ಲಿ ಗುಣಭೇದದಿಂದ ಮೂರು ಬಗೆ

(ಭಾಷ್ಯ)

೫೨೧. ಗುಣಭೇದೇನ ಕ್ರಿಯಾಣಾಂ ಕಾರಕಾಣಾಂ ಚ ತ್ರಿವಿಧಃ[1] ಭೇದಃ ಉಕ್ತಃ। ಅಥ ಇದಾನೀಂ ಫಲಸ್ಯ ಸುಖಸ್ಯ ತ್ರಿವಿಧಃ[2] ಭೇದಃ ಉಚ್ಯತೇ—

(ಭಾಷ್ಯಾರ್ಥ)

ಗುಣಗಳ ಭೇದದಿಂದ ಕ್ರಿಯೆಗಳಿಗೂ ಕಾರಕಗಳಿಗೂ (ಮೂರು) ಮೂರು ವಿಧ

---

1. 'ವಿಷಾದಮ್ ಅವಸಾದಮ್' ಮ॥ ಮೈ॥ ಸ॥
2. "ತ್ರಿಧಾ" ಸ॥

ವಾದ ಭೇದವನ್ನು ಹೇಳಿದ್ದಾಯಿತು. ಇನ್ನು ಈಗ ಫಲವಾದ ಸುಖಕ್ಕೆ[1] ಮೂರು ಬಗೆಯ ಭೇದವನ್ನು ಹೇಳುತ್ತಾನೆ :—

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ ದುಃಖಾನ್ತಂ ಚ ನಿಗಚ್ಛತಿ ॥ ೩೬ ॥**
**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ ೩೭ ॥**

೩೬-೩೭. ಭರತರ್ಷಭನೆ, ಈಗ ಮೂರು ವಿಧವಾದ ಸುಖವನ್ನು ನನ್ನಿಂದ ಕೇಳಿ (ತಿಳಿದುಕೊ). ಯಾವದರಲ್ಲಿ ಅಭ್ಯಾಸದಿಂದ ರತನಾಗುವನೋ ದುಃಖಾಂತವನ್ನೂ ಹೊಂದುವನೋ, ಯಾವದು ಮೊದಲು ವಿಷದಂತೆ, ಪರಿಣಾಮದಲ್ಲಿ ಅಮೃತೋಪಮವಾಗಿ ಇರುವದೋ ಆತ್ಮಬುದ್ಧಿಪ್ರಸಾದಜವಾದ ಆ ಸುಖವು ಸಾತ್ತ್ವಿಕವೆನ್ನಲ್ಪಡುತ್ತದೆ.

(ಭಾಷ್ಯ)

೫೨೨, ಸುಖಂ ತು ಇದಾನೀಂ ತ್ರಿವಿಧಂ ಶೃಣು । ಸಮಾಧಾನಂ ಕುರು ಇತ್ಯೇತತ್ । ಮೇ ಮಮ । ಭರತರ್ಷಭ । ಅಭ್ಯಾಸಾತ್ ಪರಿಚಯಾತ್ ಆವೃತ್ತೇಃ ರಮತೇ ರತಿಂ ಪ್ರತಿಪದ್ಯತೇ ಯತ್ರ ಯಸ್ಮಿನ್ ಸುಖಾನುಭವೇ ದುಃಖಾನ್ತಂ ಚ ದುಃಖಾವಸಾನಂ ದುಃಖೋಪಶಮಂ ಚ ನಿಗಚ್ಛತಿ ನಿಶ್ಚಯೇನ ಪ್ರಾಪ್ನೋತಿ ॥

(ಭಾಷ್ಯಾರ್ಥ)

ಈಗ ಮೂರು ಬಗೆಯ ಸುಖವನ್ನು (ಮೇ = ಮಮ) ನನ್ನ (ವಚನದಿಂದ) ಕೇಳು ; (ಮನಸ್ಸನ್ನು) ಸಮಾಧಾನಪಡಿಸಿಕೊ(ಂಡು ಕೇಳು) ಎಂದರ್ಥ. ಎಲೈ ಭರತಶ್ರೇಷ್ಠನೆ, ಅಭ್ಯಾಸದಿಂದ ಮತ್ತೆಮತ್ತೆ ಪಡೆಯುವ ಆವೃತ್ತಿಯಿಂದ ಯಾವ ಸುಖಾನುಭವದಲ್ಲಿ ರಮಿಸುವನೋ ರತಿಯನ್ನು ಹೊಂದುವನೋ, ದುಃಖಾಂತವನ್ನೂ ದುಃಖದ ಕೊನೆಯನ್ನೂ ದುಃಖದ ನಾಶವನ್ನೂ (ನಿಗಚ್ಛತಿ) ನಿಶ್ಚಯವಾಗಿ ಹೊಂದುವನೋ—

(ಭಾಷ್ಯ)

೫೨೩. ಯತ ತತ್ ಸುಖಮ್ ಅಗ್ರೇ ಪೂರ್ವಂ ಪ್ರಥಮಸನ್ನಿಪಾತೇ ಜ್ಞಾನವೈರಾಗ್ಯಧ್ಯಾನಸಮಾಧ್ಯಾರಮ್ಭೇ ಅತ್ಯನ್ತಾಯಾಸಪೂರ್ವಕತ್ವಾತ್ ವಿಷಮಿವ

1. ೧೮-೧೯ರಲ್ಲಿ ಇಲ್ಲಿಯವರೆಗೆ ಕ್ರಿಯಾಕಾರಕಗಳ ತ್ರಿವಿಧತ್ವವನ್ನು ಹೇಳಿದ್ದಾಯಿತು, ಭಾಷ್ಯಕಾರರು ಪ್ರತಿಜ್ಞೆಮಾಡಿದ್ದರಲ್ಲಿ ಫಲವುಮಾತ್ರ ಉಳಿದಿದೆ.

ದುಃಖಾತ್ಮಕಂ ಭವತಿ । ಪರಿಣಾಮೇ ಜ್ಞಾನವೈರಾಗ್ಯಾದಿಪರಿಪಾಕಜಂ ಸುಖಮ್ ಅಮೃತೋಪಮಮ್ । ತತ್ ಸುಖಂ[1] ಪ್ರೋಕ್ತಂ ವಿದ್ವದ್ಭಿಃ । (ಆತ್ಮಬುದ್ಧಿ ಪ್ರಸಾದಜಮ್)[2] ಆತ್ಮನಃ ಬುದ್ಧಿಃ ಆತ್ಮಬುದ್ಧಿಃ। ಆತ್ಮಬುದ್ಧೇಃ ಪ್ರಸಾದಃ ನೈರ್ಮಲ್ಯಂ ಸಲಿಲಸ್ಯೇವ ಸ್ವಚ್ಛತಾ । ತತಃ ಜಾತಮ್ ಆತ್ಮಬುದ್ಧಿಪ್ರಸಾದಜಮ್। ಆತ್ಮವಿಷಯಾ ವಾ ಆತ್ಮಾವಲಮ್ಬನಾ ವಾ[3] ಬುದ್ಧಿಃ ಆತ್ಮಬುದ್ಧಿಃ । ತತ್ಪ್ರಸಾದಪ್ರಕರ್ಷಾದ್ವಾ ಜಾತಮ್ ಇತ್ಯೇತತ್ । ತಸ್ಮಾತ್ ಸಾತ್ತ್ವಿಕಂ ತತ್ ॥

(ಭಾಷ್ಯಾರ್ಥ)

ಯಾವದು, ಆ ಸುಖವು, ಮೊದಲು ಮುಂಚೆ, ಮೊದಲನೆಯ ಸಲಕ್ಕೆ ಬರುವಾಗ, ಜ್ಞಾನವೈರಾಗ್ಯಧ್ಯಾನಸಮಾಧಿಗಳ ಆರಂಭದಲ್ಲಿ ಬಹಳ ಆಯಾಸಪೂರ್ವಕವಾಗಿ ಪಡೆದುಕೊಳ್ಳಬೇಕಾಗಿರುವದರಿಂದ ವಿಷದಂತೆ ದುಃಖರೂಪವಾಗಿರುವದೋ, ಪರಿಣಾಮದಲ್ಲಿ ಜ್ಞಾನವೈರಾಗ್ಯಾದಿಗಳ ಪರಿಪಾಕದಿಂದ ಆಗುವ(ದರಿಂದ) ಅಮೃತದಂತೆ ಸುಖವಾಗಿರುವದೋ ಆ ಸುಖವನ್ನು ಬಲ್ಲವರು ಸಾತ್ತ್ವಿಕವೆನ್ನುವರು. (ಆತ್ಮಬುದ್ಧಿಪ್ರಸಾದಜವಾದದ್ದು) : ಆತ್ಮಬುದ್ಧಿ ಎಂದರೆ ತನ್ನ ಬುದ್ಧಿಯು ; ಆತ್ಮಬುದ್ಧಿಯ ಪ್ರಸಾದವು, ನೈರ್ಮಲ್ಯವು, ನೀರಿನಂತೆ ಸ್ವಚ್ಛವಾಗಿರುವದು (ಆತ್ಮಬುದ್ಧಿಪ್ರಸಾದವು); ಅದರಿಂದ ಉಂಟಾದದ್ದು ಆತ್ಮಬುದ್ಧಿಪ್ರಸಾದಜವು ಅಥವಾ ಆತ್ಮವಿಷಯವಾದ ಆತ್ಮನನ್ನೇ ಅವಲಂಬನವಾಗಿಟ್ಟುಕೊಂಡಿರುವ ಬುದ್ಧಿಯು ; ಆ (ಬುದ್ಧಿಯು) ಪ್ರಸಾದದ ಹೆಚ್ಚಿಗೆಯಿಂದ ಉಂಟಾದ (ಸುಖವು) ಎಂದಾದರೂ (ಆತ್ಮಬುದ್ಧಿಪ್ರಸಾದಜಂ ಎಂಬ ವಿಶೇಷಣಕ್ಕೆ ಅರ್ಥವನ್ನು ಮಾಡಬಹುದು.) ಆದ್ದರಿಂದ[4] ಅದು ಸಾತ್ತ್ವಿಕವು.

ವಿಷಯೇನ್ದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥೩೮॥

---

1. 'ಯತ್ ಸುಖಂ ತತ್ ಸುಖಮ್' ಮ॥

2. ಈ ಮಾತು ಅಚ್ಚಿನ ಪುಸ್ತಕದಲ್ಲಿ ಬಿಟ್ಟುಹೋಗಿದೆ ಎಂದು ತೋರುತ್ತದೆ.

3. 'ಆತ್ಮವಿಷಯಾ ವಾ ಆತ್ಮಾಲಮ್ಬನಾ', 'ಆತ್ಮವಿಷಯಾ ಆತ್ಮಾವಲಮ್ಬನಾ ವಾ' ಎಂದು ಒಂದೇ 'ವಾ' ಇದ್ದರೆ ಸಾಕಾಗಿರುತ್ತದೆ.

4. ಅಂತಃಕರಣಶುದ್ಧಿಯಿಂದಾದದ್ದಾದಕಾರಣ, ಅಥವಾ ಆತ್ಮಜ್ಞಾನದಿಂದಾದದ್ದಾದ ಕಾರಣ.

೩೮. ವಿಷಯೇಂದ್ರಿಯಗಳ ಸಂಯೋಗದಿಂದ ಯಾವ ಆ (ಸುಖವು) ಮೊದಲು ಅಮೃತೋಪಮವಾಗಿರುವದೋ ಪರಿಣಾಮದಲ್ಲಿ ವಿಷದಂತೆ (ಇರುವದೋ) ಆ ಸುಖವು ರಾಜಸವೆನಿಸುವದು.

(ಭಾಷ್ಯ)

೩೮. ವಿಷಯೇನ್ದ್ರಿಯಸಂಯೋಗಾತ್ ಜಾಯತೇ ಯತ್ ಸುಖಂ ತತ್ ಸುಖಮ್[1] ಅಗ್ರೇ ಪ್ರಥಮಕ್ಷಣೇ ಅಮೃತೋಪಮಮ್ ಅಮೃತಸಮಮ್ ಪರಿಣಾಮೇ ವಿಷಮಿವ ಬಲವೀರ್ಯರೂಪಪ್ರಜ್ಞಾಮೇಧಾಧನೋತ್ಸಾಹಹಾನಿಹೇತುತ್ವಾತ್ ಅಧರ್ಮತಜ್ಜನಿತ[2]ನರಕಾದಿಹೇತುತ್ವಾಚ್ಚ ಪರಿಣಾಮೇ ತದುಪಭೋಗಪರಿಣಾಮಾನ್ತೇ ವಿಷಮಿವ ತತ್ ಸುಖಂ ರಾಜಸಂ ಸ್ಮೃತಮ್ ||

(ಭಾಷ್ಯಾರ್ಥ)

ವಿಷಯೇಂದ್ರಿಯಗಳ ಸೇರುವೆಯಿಂದ ಉಂಟಾಗುವದಲ್ಲ, ಅಂಥ ಯಾವ ಸುಖವು ಮೊದಲು ಮೊದಲನೆಯ ಕ್ಷಣದಲ್ಲಿ ಅಮೃತೋಪಮವಾಗಿ ಅಮೃತಕ್ಕೆ ಸಮವಾಗಿ, ಪರಿಣಾಮದಲ್ಲಿ ವಿಷದಂತೆ ಇರುವದೋ, **ಬಲ, ವೀರ್ಯ, ರೂಪ, ಪ್ರಜ್ಞೆ, ಮೇಧಾಶಕ್ತಿ,** ಧನ, **ಉತ್ಸಾಹ**-ಇವುಗಳೆಲ್ಲವೂ ಹಾಳಾಗುವದಕ್ಕೆ ಕಾರಣವಾಗಿರುವದರಿಂದಲೂ,[3] **ಅಧರ್ಮಕ್ಕೂ ಅದರಿಂದುಂಟಾಗುವ ನರಕಕ್ಕೂ** ಕಾರಣವಾಗಿರುವದರಿಂದಲೂ, ಪರಿಣಾಮದಲ್ಲಿ ಅದನ್ನುಪಭೋಗಿಸಿದ ಪರಿಣಾಮದ ಕೊನೆಯಲ್ಲಿ ವಿಷದಂತಿರುವದೋ, **ಆ ಸುಖವು ರಾಜಸವೆನಿಸುವದು.**

**ಯದಗ್ರೇ ಚಾನುಬನ್ಧೇ ಚ ಸುಖಂ ಮೋಹನಮಾತ್ಮನಃ |**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ||೩೯||**

೩೯. ಯಾವ ಸುಖವು ಮೊದಲೂ ಅನುಬಂಧದಲ್ಲಿಯೂ ತನಗೆ ಮೋಹಕವಾಗಿರುವದೋ, ನಿದ್ರೆ, ಆಲಸ್ಯ, ಪ್ರಮಾದ-ಇವುಗಳಿಂದುಂಟಾಗುವ ಆ (ಸುಖವು) ತಾಮಸವೆನಿಸುವದು.

---

1. 'ಅಮೃತೋಪಮಂ ತತ್ಸುಖಮ್' ಎಂಬೀ ಅ|| ಮು|| ಗಳನ್ನು ಬಿಟ್ಟು ಮುಕ್ಕ ಪುಸ್ತಕಗಳ ಪಾಠ; 'ಯತ್ ತತ್ಸುಖಂ' ಎಂದಿದ್ದರೆ ಇನ್ನೂ ಚೆನ್ನ.

2. 'ಅಧರ್ಮಜನಿತ' ಮು||ಮೈ||

3. ಕ. ಭಾ. ೧-೧-೨೬, ಛಾಂ. ಭಾ. ೮-೧೪-೧ ಇವುಗಳಲ್ಲಿ-ವಿಷಯಸುಖವನ್ನು ವರ್ಣಿಸಿರುವ ಬಗೆಯನ್ನು ಇದಕ್ಕೆ ಹೋಲಿಸಿರಿ.

(ಭಾಷ್ಯ)

೩೨೫. ಯತ್ ಅಗ್ರೇ ಚ ಅನುಬನ್ಧೇ ಚ ಅವಸಾನೋತ್ತರಕಾಲೇ[1] ಸುಖಂ ಮೋಹನಂ ಮೋಹಕರಮ್ ಆತ್ಮನಃ ನಿದ್ರಾಲಸ್ಯಪ್ರಮಾದೋತ್ಥಂ ನಿದ್ರಾ ಚ ಆಲಸ್ಯಂ ಚ ಪ್ರಮಾದಶ್ಚ ತೇಭ್ಯಃ ಸಮುತ್ತಿಷ್ಠತಿ ಇತಿ ನಿದ್ರಾಲಸ್ಯಪ್ರಮಾದೋತ್ಥಮ್, ತತ್ ತಾಮಸಮ್ ಉದಾಹೃತಮ್ ||

(ಭಾಷ್ಯಾರ್ಥ)

ಯಾವ ಸುಖವು ಮೊದಲೂ ಅನುಬಂಧದಲ್ಲಿಯೂ ಮುಗಿದಮೇಲಿನ ಕಾಲದಲ್ಲಿಯೂ ತನಗೆ ಮೋಹನವಾಗಿ ಮೋಹವನ್ನುಂಟುಮಾಡುವದಾಗಿ(ರುವದೋ), ನಿದ್ರಾಲಸ್ಯಪ್ರಮಾದೋತ್ಥವಾದ ನಿದ್ರೆ, ಅಲಸಿಕೆ, ಎಚ್ಚರಿಕೆಯಿಲ್ಲದಿರುವದು–ಇವುಗಳಿಂದುಂಟಾದ್ದರಿಂದ ನಿದ್ರಾಲಸ್ಯಪ್ರಮಾದೋತ್ಥ (ವೆನಿಸಿರುವ) ಆ (ಸುಖವು) ತಾಮಸವೆನಿಸುವದು.

## ತ್ರಿಗುಣರಹಿತವಾದದ್ದು ಯಾವದೊಂದೂ ಇಲ್ಲ

(ಭಾಷ್ಯ)

೩೨೬. ಅಥ ಇದಾನೀಂ ಪ್ರಕರಣೋಪಸಂಹಾರಾರ್ಥಃ ಶ್ಲೋಕಃ ಆರಭ್ಯತೇ—

(ಭಾಷ್ಯಾರ್ಥ)

ಇನ್ನು ಈಗ (ಈ) ಪ್ರಕರಣವನ್ನು ಉಪಸಂಹಾರಮಾಡುವದಕ್ಕಾಗಿ (ಈ) ಶ್ಲೋಕವನ್ನು (ಹೇಳುವದಕ್ಕೆ) ಮೊದಲು ಮಾಡಿರುತ್ತದೆ :—

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ ತ್ರಿಭಿರ್ಗುಣೈಃ ॥**

೪೦. ಪೃಥಿವಿಯಲ್ಲಾಗಲಿ ಅಂತರಿಕ್ಷದಲ್ಲಾಗಲಿ ದೇವತೆಗಳಲ್ಲಾಗಲಿ ಪ್ರಕೃತಿಜವಾದ ಈ ಮೂರು ಗುಣಗಳಿಂದ ಮುಕ್ತವಾದ ಸತ್ತ್ವವು ಯಾವದೂ ಇರುವದಿಲ್ಲ.

(ಭಾಷ್ಯ)

೩೨೭. ನ ತತ್ ಅಸ್ತಿ ತತ್ ನಾಸ್ತಿ ಪೃಥಿವ್ಯಾಂ ವಾ ಮನುಷ್ಯಾದಿಷು[2] ಸತ್ತ್ವಂ

---

1. ' ಅವಸಾನೇ ಉತ್ತರಕಾಲೇ ' ಮ||
2. ' ಮನುಷ್ಯಾದಿ ' ಎಂದಿಷ್ಟೇ ಸಿ|| ವಾ||

ಪ್ರಾಣಿಜಾತಮ್ ಅನ್ಯತ್ ವಾ ಅಪ್ರಾಣಿ । ದಿವಿ ದೇವೇಷು ವಾ ಪುನಃ ಸತ್ತ್ವಂ ಪ್ರಕೃತಿಜೈಃ ಪ್ರಕೃತಿತಃ ಜಾತೈಃ ಏಭಿಃ ತ್ರಿಭಿಃ ಗುಣೈಃ ಸತ್ತ್ವಾದಿಭಿಃ ಮುಕ್ತಂ ಪರಿತ್ಯಕ್ತಂ ಯತ್ ಸ್ಯಾತ್ ನ ತದಸ್ತಿ ಇತಿ ಪೂರ್ವೇಣ ಸಮ್ಬನ್ಧಃ ॥

(ಭಾಷ್ಯಾರ್ಥ)

(ನ ತತ್ ಅಸ್ತಿ= ತತ್ ನಾಸ್ತಿ) ಅದು ಇಲ್ಲವೇ ಅಲ್ಲ. ಪೃಥಿವಿಯಲ್ಲಾಗಲಿ ಮನುಷ್ಯರೇ ಮುಂತಾದವರಲ್ಲಾಗಲಿ, ಅಂತರಿಕ್ಷದಲ್ಲಾಗಲಿ, ದೇವತೆಗಳಲ್ಲಾಗಲಿ ಪ್ರಕೃತಿಜವಾದ ಪ್ರಕೃತಿಯಿಂದ ಹುಟ್ಟಿರುವ ಈ ಸತ್ತ್ವವೇ ಮುಂತಾದ ಮೂರು ಗುಣಗಳಿಂದ ಮುಕ್ತವಾದ ಬಿಡಲ್ಪಟ್ಟದ್ದಾಗಿ ಯಾವದಿರುವದೋ (ಅಂಥ) ಸತ್ತ್ವವು ಪ್ರಾಣಿಜಾತವು ಅಥವಾ (ಅದಕ್ಕಿಂತ) ಬೇರೆಯಾದ ಅಪ್ರಾಣಿಯು (ಗುಣಗಳಿಂದ ಮುಕ್ತವಾದದ್ದು) 'ನ ತದಸ್ತಿ' (ಅದು ಇಲ್ಲವೇ ಇಲ್ಲ) ಎಂದು ಮೊದಲು ಇರುವ (ವಾಕ್ಯಕ್ಕೆ) ಸಂಬಂಧಿಸಿಕೊಳ್ಳಬೇಕು.

## ಗೀತಾರ್ಥೋಪಸಂಹಾರ : ಚಾತುರ್ವರ್ಣ್ಯಕರ್ಮವಿಭಾಗ

(ಭಾಷ್ಯ)

೫೨೮. ಸರ್ವಃ ಸಂಸಾರಃ ಕ್ರಿಯಾಕಾರಕಫಲಲಕ್ಷಣಃ ಸತ್ತ್ವರಜಸ್ತಮೋಗುಣಾತ್ಮಕಃ ಅವಿದ್ಯಾಪರಿಕಲ್ಪಿತಃ ಸಮೂಲಃ ಅನರ್ಥ ಉಕ್ತಃ । ವೃಕ್ಷರೂಪಕಕಲ್ಪನಯಾ ಚ 'ಊರ್ಧ್ವಮೂಲಮ್' (೧೫-೩೪) ಇತ್ಯಾದಿನಾ । ತಂ ಚ "ಅಸಙ್ಗಶಸ್ತ್ರೇಣ ದೃಢೇನ ಛಿತ್ತ್ವಾ ತತಃ ಪದಂ ತತ್ ಪರಿಮಾರ್ಗಿತವ್ಯಮ್" (೧೬-೩, ೪) ಇತಿ ಚ ಉಕ್ತಮ್ । ತತ್ರ ಚ ಸರ್ವಸ್ಯ ತ್ರಿಗುಣಾತ್ಮಕತ್ವಾತ್ ಸಂಸಾರಕಾರಣನಿವೃತ್ತ್ಯನುಪಪತ್ತೌ ಪ್ರಾಪ್ತಾಯಾಮ್, ಯಥಾ ತನ್ನಿವೃತ್ತಿಃ ಸ್ಯಾತ್ ತಥಾ ವಕ್ತವ್ಯಮ್ । ಸರ್ವಶ್ಚ ಗೀತಾಶಾಸ್ತ್ರಾರ್ಥಃ ಉಪಸಂಹರ್ತವ್ಯಃ ಏತಾವಾನೇವ ಚ ಸರ್ವವೇದಸ್ಮೃತ್ಯರ್ಥಃ ಪುರುಷಾರ್ಥಮ್ ಇಚ್ಛದ್ಭಿಃ ಅನುಷ್ಠೇಯಃ ಇತಿ । ಏವಮರ್ಥಂ 'ಬ್ರಾಹ್ಮಣಕ್ಷತ್ರಿಯವಿಶಾಮ್' ಇತ್ಯಾದಿಃ ಆರಭ್ಯತೇ—

(ಭಾಷ್ಯಾರ್ಥ)

ಕ್ರಿಯೆ, ಕಾರಕ, ಫಲ–ಇವುಗಳ ಸ್ವರೂಪವಾಗಿರುವ ಸತ್ತ್ವ, ರಜಸ್ಸು, ತಮಸ್ಸು–ಎಂಬ ಗುಣಗಳ ಕಾರ್ಯವಾಗಿದ್ದು[1] ಅವಿದ್ಯೆಯಿಂದ ಕಲ್ಪಿತವಾಗಿರುವ

---

1. ವಿಗ್ರಹವು ರಜತಾತ್ಮಕವೆಂದು ಹೇಳುವಂತೆ ಗುಣಗಳ ಕಾರ್ಯ ಎಂಬರ್ಥದಲ್ಲಿ ಗುಣಾತ್ಮಕವೆಂಬ ಮಾತನ್ನು ಪ್ರಯೋಗಿಸಿರುತ್ತಾರೆ.

ಒಟ್ಟು ಸಂಸಾರವೆಂಬ ಅನರ್ಥವನ್ನು ಸಮೂಲವಾಗಿ ತಿಳಿಸಿದ್ದಾಯಿತು. ವೃಕ್ಷದ ರೂಪ ಕವನ್ನು ಕಲ್ಪಿಸಿ (ಹಿಂದೆ) 'ಊರ್ಧ್ವಮೂಲಮ್' ಮುಂತಾದ ಶ್ಲೋಕಗಳಿಂದ (೧೫-೧) ಲೂ (ಇದನ್ನು ಹೇಳಿದ್ದಾಗಿದೆ). ಅದನ್ನು "ದೃಢವಾದ ಅಸಂಗಶಸ್ತ್ರದಿಂದ ಕತ್ತರಿಸಿದ ಬಳಿಕ ಆ ಪದವನ್ನು ಹುಡುಕಬೇಕು" (೧೫-೩೪) ಎಂದೂ (ಅಲ್ಲಿ) ಹೇಳಿರುತ್ತದೆ. ಅದರಲ್ಲಿಯೂ ಎಲ್ಲವೂ ಮೂರು ಗುಣಗಳಿಂದಲೇ ಆಗಿರುವದ ರಿಂದ ಸಂಸಾರಕಾರಣ (ವಾದ ಬಂಧವು) ನಿವೃತ್ತಿಯಾಗುವದೇ ಹೊಂದುವ ದಿಲ್ಲವೆಂದಾಗುತ್ತದೆಯಾಗಿ, ಅದರ ನಿವೃತ್ತಿಯು ಹೇಗೆ ಆಗುವದೋ ಅದನ್ನು ಹೇಳಬೇಕಾಗಿದೆ. ಮತ್ತು ಸಕಲ ವೇದಗಳಲ್ಲಿಯೂ ಮತ್ತು ಸ್ಮೃತಿ ಗಳಲ್ಲಿಯೂ (ಹೇಳಿರುವ) ವಿಷಯವು, ಪುರುಷಾರ್ಥವನ್ನು ಬಯಸುವವರು ಮಾಡಬೇಕಾದದ್ದು ಇಷ್ಟೇ[1] ಎಂದು ಒಟ್ಟು ಗೀತಾಶಾಸ್ತ್ರದ ಅರ್ಥವನ್ನೂ ಉಪಸಂಹಾರಮಾಡಬೇಕಾಗಿರುತ್ತದೆ. ಇದಕ್ಕಾಗಿ "ಬ್ರಾಹ್ಮಣಕ್ಷತ್ರಿಯ ವಿಶಾಮ್" ಮುಂತಾದ ಗ್ರಂಥವನ್ನು ಪ್ರಾರಂಭಿಸಿರುತ್ತದೆ :—

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥೪೧॥**

೪೧. ಪರಂತಪನೆ, ಬ್ರಾಹ್ಮಣಕ್ಷತ್ರಿಯವೈಶ್ಯರಿಗೂ ಶೂದ್ರರಿಗೂ ಸ್ವಭಾವಪ್ರಭವವಾದ ಗುಣಗಳಿಂದ ಕರ್ಮಗಳು ವಿಂಗಡಿಸಲ್ಪಟ್ಟಿರುತ್ತವೆ.

(ಭಾಷ್ಯ)

೫೨೯. ಬ್ರಾಹ್ಮಣಾಶ್ಚ ಕ್ಷತ್ರಿಯಾಶ್ಚ ವಿಶಶ್ಚ ಬ್ರಾಹ್ಮಣಕ್ಷತ್ರಿಯವಿಶಃ। ತೇಷಾಂ ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ। ಶೂದ್ರಾಣಾಮ್ ಅಸಮಾಸಕರಣಮ್ ಏಕಜಾತಿತ್ವೇ ಸತಿ ವೇದಾನಧಿಕಾರಾತ್ । ಹೇ ಪರಂತಪ । ಕರ್ಮಾಣಿ ಪ್ರವಿಭಕ್ತಾನಿ ಇತರೇತರವಿಭಾಗೇನ ವ್ಯವಸ್ಥಾಪಿತಾನಿ । ಕೇನ? ಸ್ವಭಾವಪ್ರಭವೈಃ ಗುಣೈಃ । ಸ್ವಭಾವಃ ಈಶ್ವರಸ್ಯ ಪ್ರಕೃತಿಃ ತ್ರಿಗುಣಾತ್ಮಿಕಾ ಮಾಯಾ[2] । ಸಾ ಪ್ರಭವಃ ಯೇಷಾಂ ಗುಣಾನಾಂ ತೇ ಸ್ವಭಾವಪ್ರಭವಾಃ । ತೈಃ ಶಮಾದೀನಿ ಕರ್ಮಾಣಿ ಪ್ರವಿಭಕ್ತಾನಿ ಬ್ರಾಹ್ಮಣಾದೀನಾಮ್ । ಅಥವಾ ಬ್ರಾಹ್ಮಣಸ್ವಭಾವಸ್ಯ ಸತ್ತ್ವಗುಣಃ ಪ್ರಭವಃ ಕಾರಣಮ್ । ತಥಾ ಕ್ಷತ್ರಿಯಸ್ವಭಾವಸ್ಯ ಸತ್ತ್ವೋಪಸರ್ಜನಂ ರಜಃ ಪ್ರಭವಃ ।

---

1. ೧೧-೫೫, ೧೮-೬೫.
2. ಮು॥ ಮೈ॥ ಗಳಲ್ಲಿಲ್ಲ.

ವೈಶ್ಯಸ್ವಭಾವಸ್ಯ ತಮಉಪಸರ್ಜನಂ ರಜಃ ಪ್ರಭವಃ । ಶೂದ್ರಸ್ವಭಾವಸ್ಯ ರಜಉಪಸರ್ಜನಂ ತಮಃ ಪ್ರಭವಃ । ಪ್ರಶಾನ್ತ್ಯೈಶ್ವರ್ಯೇಹಾಮೂಢತಾ[1]ಸ್ವಭಾವದರ್ಶನಾತ್ ಚತುರ್ಣಾಮ್। ಅಥವಾ ಜನ್ಮಾನ್ತರಕೃತಸಂಸ್ಕಾರಃ ಪ್ರಾಣಿನಾಂ ವರ್ತಮಾನಜನ್ಮನಿ ಸ್ವಕಾರ್ಯಾಭಿಮುಖತ್ವೇನ ಅಭಿವ್ಯಕ್ತಃ ಸ್ವಭಾವಃ । ಸ ಪ್ರಭವಃ ಯೇಷಾಂ ಗುಣಾನಾಂ ತೇ ಸ್ವಭಾವಪ್ರಭವಾಃ ಗುಣಾಃ [2] । ಗುಣಪ್ರಾದುರ್ಭಾವಸ್ಯ ನಿಷ್ಕಾರಣತ್ವಾನುಪಪತ್ತೇಃ ಸ್ವಭಾವಃ ಕಾರಣಮ್ ಇತಿ ಚ ಕಾರಣವಿಶೇಷೋಪಾದಾನಮ್ । ಏವಂ ಸ್ವಭಾವಪ್ರಭವೈಃ ಪ್ರಕೃತಿಪ್ರಭವೈಃ[3] ಸತ್ತ್ವರಜಸ್ತಮೋಭಿಃ ಗುಣೈಃ ಸ್ವಕಾರ್ಯಾನುರೂಪೇಣ [4] ಶಮಾದೀನಿ ಕರ್ಮಾಣಿ ಪ್ರವಿಭಕ್ತಾನಿ ॥

(ಭಾಷ್ಯಾರ್ಥ)

ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಬ್ರಾಹ್ಮಣಕ್ಷತ್ರಿಯವೈಶ್ಯರುಗಳು ; ಆ ಬ್ರಾಹ್ಮಣಕ್ಷತ್ರಿಯ ವೈಶ್ಯರಿಗೂ ಶೂದ್ರರಿಗೂ ; (ಇಲ್ಲಿ) ಶೂದ್ರರನ್ನು ಸಮಾಸದಲ್ಲಿ ಸೇರಿಸದೆ ಇರುವದು ಅವರು ಏಕಜಾತಿಗಳಾದ್ದರಿಂದಲೂ [5] ವೇದಕ್ಕೆ ಅಧಿಕಾರಿಗಳಲ್ಲದ್ದರಿಂದಲೂ [6] (ಎಂದು ತಿಳಿಯಬೇಕು). ಎಲೈ ಪರಂತಪನೆ, (ಇವರಿಗೆಲ್ಲ) ಕರ್ಮಗಳು ವಿಂಗಡಿಸಲ್ಪಟ್ಟಿವೆ, ಒಂದರಿಂದೊಂದನ್ನು ವಿಂಗಡಿಸಿ ಗೊತ್ತುಮಾಡಲ್ಪಟ್ಟಿರುತ್ತವೆ. ಏತರಿಂದ (ವಿಂಗಡಿಸಲ್ಪಟ್ಟಿರುತ್ತವೆ ? ಎಂದರೆ) ಸ್ವಭಾವಪ್ರಭವಗಳಾದ ಗುಣಗಳಿಂದ **ಸ್ವಭಾವವೆಂದರೆ** ಈಶ್ವರನ ಪ್ರಕೃತಿಯಾದ ತ್ರಿಗುಣಾತ್ಮಕವಾದ ಮಾಯೆ [7] ; ಅದು ಯಾವ ಗುಣಗಳಿಗೆ ಪ್ರಭವವೋ (ಕಾರಣವೋ) [8] ಅವು ಸ್ವಭಾವಪ್ರಭವಗಳು. ಅವು

---

1. ' ಮೂಢ ' ಮ|| ಮೈ||
2. ಮ|| ದಲ್ಲಿಲ್ಲ.
3. ಮ|| ದಲ್ಲಿಲ್ಲ ; ' ಪ್ರಕೃತಿಭವೈಃ ' ಅ||
4. ' ಸ್ವಕಾರಣಾನುರೂಪೇಣ ' ಮ||
5. ಗೌ. ಧ. ೨-೧-೫೧ ರ ಸೂಚನೆ ; ಶೂದ್ರರಿಗೆ ಉಪನಯನವಿಲ್ಲದ್ದರಿಂದ ಅವರು ದ್ವಿಜರಲ್ಲ ಎಂದರ್ಥ.
6. ಗೌ. ಧ. ೨-೩-೪. ಜೈಮಿನೀಯ ಸೂತ್ರ ಅಪಶೂದ್ರಾಧಿಕರಣದಲ್ಲಿ ಈ ವಿಚಾರವನ್ನು ಮಾಡಿದೆ. ವೇದೋಕ್ತಕರ್ಮಕ್ಕೆ ಅಧಿಕಾರವಿಲ್ಲದಿದ್ದರೂ ಶೂದ್ರರೂ ಸ್ವಧರ್ಮಾನುಷ್ಠಾನದಿಂದ ಚಿತ್ತಶುದ್ಧಿಯನ್ನು ಹೊಂದಿ ಜ್ಞಾನವನ್ನು ಪಡೆಯಬಹುದೆಂಬುದಕ್ಕೆ ಸೂ. ಭಾ. ೧-೩-೩೮ ನೋಡಿ.
7. ೫-೧೪ ರ ಭಾಷ್ಯವನ್ನು ನೋಡಿ.
8. ಗುಣಗಳು ತೋರಿಕೊಳ್ಳುವದಕ್ಕೆ ಕಾರಣವೋ ಎಂದರ್ಥ.

ಗಳಿಂದ ಬ್ರಾಹ್ಮಣರೇ ಮೊದಲಾದವರಿಗೆ ಶಮವೇ ಮುಂತಾದ ಕರ್ಮಗಳು ವಿಂಗಡಿಸಲ್ಪಟ್ಟಿರುತ್ತವೆ.

ಅಥವಾ ಬ್ರಾಹ್ಮಣಸ್ವಭಾವಕ್ಕೆ ಸತ್ತ್ವಗುಣವು ಪ್ರಭವವು, ಕಾರಣವು; ಇದರಂತೆ ಕ್ಷತ್ರಿಯಸ್ವಭಾವಕ್ಕೆ ಸತ್ತ್ವವನ್ನು ಕಡಿಮೆಯಾಗುಳ್ಳ ರಜಸ್ಸು ಪ್ರಭವವು; ವೈಶ್ಯಸ್ವಭಾವಕ್ಕೆ ತಮಸ್ಸನ್ನು ಕಡಿಮೆಯಾಗಿ (ಬೆರಕೆಯಲ್ಲಿ)ಟ್ಟುಕೊಂಡಿರುವ ರಜಸ್ಸು ಪ್ರಭವವು; ಶೂದ್ರಸ್ವಭಾವಕ್ಕೆ ರಜಸ್ಸನ್ನು ಕಡಿಮೆಯಾಗಿ (ಬೆರಕೆಯಲ್ಲಿ)ಟ್ಟುಕೊಂಡಿರುವ ತಮಸ್ಸು ಪ್ರಭವವು (ಎಂದು ಸ್ವಭಾವಪ್ರಭವೈಃ ಗುಣೈಃ ಎಂಬ ಮಾತಿನ ಅರ್ಥವನ್ನು ತಿಳಿಯಬೇಕು). ಏಕೆಂದರೆ ಶಮ, ಈಶ್ವರಭಾವ, ಉದ್ಯೋಗ, ಮೂಢತನ-ಇವು ನಾಲ್ಕು (ವರ್ಣದವರಲ್ಲಿಯೂ) ಕಂಡುಬರುತ್ತವೆ.[1]

ಅಥವಾ (ಹಿಂದೆ) ಬೇರೊಂದು ಜನ್ಮದಲ್ಲಿ ಮಾಡಿದ್ದ ಕರ್ಮದ ಸಂಸ್ಕಾರವು ಜೀವರುಗಳ (ಈಗ) ಇರುವ ಜನ್ಮದಲ್ಲಿ ತನ್ನ ಕಾರ್ಯದ ಕಡೆಗೆ ತಿರುಗಿ[2] ಹೊರತೋರಿಕೊಂಡರೆ ಸ್ವಭಾವವೆನಿಸುತ್ತದೆ. ಆ ಸ್ವಭಾವವು ಯಾವ ಗುಣಗಳಿಗೆ ಪ್ರಭವವೋ ಅವು ಸ್ವಭಾವಪ್ರಭವವಾದ ಗುಣಗಳು (ಎಂದು ಸ್ವಭಾವಪ್ರಭವೈರ್ಗುಣೈಃ ಎಂಬುದನ್ನು ವಿವರಿಸಬೇಕು).[3] ಗುಣಗಳು ಕಾರಣವಿಲ್ಲದೆ ತೋರಿಕೊಳ್ಳುವದೆಂಬುದು ಹೊಂದುವದಿಲ್ಲವಾದ್ದರಿಂದ ಸ್ವಭಾವವೇ ಕಾರಣವೆಂದು ವಿಶೇಷಕಾರಣವನ್ನು ತೆಗೆದುಕೊಂಡು (ಸ್ವಭಾವಪ್ರಭವೈಃ ಎಂದು ತಿಳಿಸಿದೆ ಎಂದಾದರೂ ಹೇಳಬಹುದು[4]).

ಈ ರೀತಿಯಲ್ಲಿ ಸ್ವಭಾವಪ್ರಭವಗಳಾದ ಪ್ರಕೃತಿಯಿಂದುಂಟಾಗಿರುವ ಸತ್ತ್ವ

---

1. ಒಬ್ಬೊಬ್ಬರಿಗೆ ಒಂದೊಂದು ಸ್ವಭಾವವೆಂದು ಹಂಚಿಕೊಂಡಿಲ್ಲ.

2. ಕಾರ್ಯವನ್ನುಂಟುಮಾಡುವದಕ್ಕೆ ಹೊರಟು.

3. 'ಸ್ವಭಾವಪ್ರಭವೈಃ' ಎಂಬುದಕ್ಕೆ ಕೊಟ್ಟಿರುವ ಮೂರು ಅರ್ಥಗಳನ್ನು ಲಕ್ಷ್ಯದಲ್ಲಿಡಬೇಕು. (೧) ಸ್ವಭಾವದಿಂದ ಅಥವಾ ಪ್ರಕೃತಿಯಿಂದ, ಹೊರಟುಬರುವ, ಹೊರತೋರಿಕೊಳ್ಳುವ ಗುಣಗಳಿಂದ ಶಮಾದಿಗಳು ವಿಭಕ್ತವಾಗಿವೆ; (೨) ಸ್ವಭಾವಕ್ಕೆ, ಬ್ರಾಹ್ಮಣತ್ವವೇ ಮುಂತಾದದ್ದಕ್ಕೆ, ಕಾರಣವಾದ ಗುಣಗಳಿಂದ, ಅವು ವಿಭಕ್ತವಾಗಿವೆ; (೩) ಸ್ವಭಾವದಿಂದ, ಹಿಂದಿನ ಜನ್ಮದ ಕರ್ಮದ ಸಂಸ್ಕಾರದಿಂದ, ಹೊರತೋರಿಕೊಳ್ಳುವ ಗುಣಗಳಿಂದ, ಅವು ವಿಭಕ್ತವಾಗಿವೆ. ಮೂರನೆಯ ಅರ್ಥವು ೩-೩೩ ರಲ್ಲಿರುವ ಪ್ರಕೃತಿಶಬ್ದದ ಭಾಷ್ಯಕ್ಕೆ ಅನುಗುಣವಾಗಿದೆ. ೧೭-೨ ರಲ್ಲಿ ಸ್ವಭಾವಜಾ ಎಂಬುದರ ಭಾಷ್ಯವನ್ನು ನೋಡಿ.

4. ಸಂಸ್ಕಾರವು ಎದ್ದುಕೊಳ್ಳುವದರಿಂದ ಆಯಾ ಗುಣಗಳು ತೋರಿಕೊಳ್ಳುವವೆಂದು ಹೇಳಿದಂತೆ ಆಯಿತು.

ರಜಸ್ತಮೋಗುಣಗಳಿಂದ ತಮ್ಮ ತಮ್ಮ ಕಾರ್ಯಕ್ಕೆ ತಕ್ಕಂತೆ ಶಮವೇ ಮುಂತಾದ ಕರ್ಮಗಳು (ಬ್ರಾಹ್ಮಣಾದಿಗಳಿಗೆ) ವಿಂಗಡಿಸಲ್ಪಟ್ಟಿರುತ್ತವೆ.

(ಭಾಷ್ಯ)

೫೩೦. ನನು ಶಾಸ್ತ್ರಪ್ರವಿಭಕ್ತಾನಿ ಶಾಸ್ತ್ರೇಣ ವಿಹಿತಾನಿ[1] ಬ್ರಾಹ್ಮಣಾದೀನಾಂ ಶಮಾದೀನಿ ಕರ್ಮಾಣಿ । ಕಥಮ್ ಉಚ್ಯತೇ ಸತ್ತ್ವಾದಿಗುಣಪ್ರವಿಭಕ್ತಾನಿ ಇತಿ ? ನೈಷ ದೋಷಃ । ಶಾಸ್ತ್ರೇಣಾಪಿ ಬ್ರಾಹ್ಮಣಾದೀನಾಂ ಸತ್ತ್ವಾದಿಗುಣವಿಶೇಷಾಪೇಕ್ಷಯೈವ ಶಮಾದೀನಿ ಕರ್ಮಾಣಿ ಪ್ರವಿಭಕ್ತಾನಿ ನ ಗುಣಾನಪೇಕ್ಷಯಾ । ಇತಿ ಶಾಸ್ತ್ರಪ್ರವಿಭಕ್ತಾನ್ಯಪಿ ಕರ್ಮಾಣಿ ಗುಣಪ್ರವಿಭಕ್ತಾನಿ ಇತಿ ಉಚ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ) :—ಬ್ರಾಹ್ಮಣರೇ ಮುಂತಾದವರಿಗೆ ಶಮಾದಿಕರ್ಮಗಳು ಶಾಸ್ತ್ರದಿಂದ ವಿಂಗಡಿಸಲ್ಪಟ್ಟಿರುತ್ತವೆ, ಶಾಸ್ತ್ರದಿಂದ(ಲೇ ಅವು) ವಿಹಿತವಾಗಿರುತ್ತವೆ. (ಹೀಗಿರುವಲ್ಲಿ) ಸತ್ತ್ವಾದಿಗುಣಗಳಿಂದ (ಅವು) ವಿಂಗಡಿಸಲ್ಪಟ್ಟಿರುತ್ತವೆ ಎಂದು ಹೇಳಿದ್ದು ಹೇಗೆ (ಸರಿ) ?

(ಪರಿಹಾರ) :—ಇದೇನೂ ತಪ್ಪಲ್ಲ. ಶಾಸ್ತ್ರದಲ್ಲಿಯೂ **ಸತ್ತ್ವವೇ ಮುಂತಾದ ಆಯಾ ಗುಣಗಳನ್ನು ಅವಲಂಬಿಸಿಯೇ ಬ್ರಾಹ್ಮಣಾದಿಗಳಿಗೆ ಶಮಾದಿ ಕರ್ಮಗಳನ್ನು ವಿಂಗಡಿಸಿರುತ್ತದೆಯೇ ಹೊರತು ಗುಣಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ವಿಂಗಡಿಸಿಲ್ಲ.** ಆದ್ದರಿಂದ ಶಾಸ್ತ್ರದಲ್ಲಿ ಇವನ್ನು ವಿಂಗಡಿಸಿದ್ದರೂ ಇವು ಗುಣಗಳಿಂದ ವಿಂಗಡಿಸಲ್ಪಟ್ಟಿವೆ ಎಂದು ಹೇಳಿದ್ದು ಸರಿಯೇ.

(ಭಾಷ್ಯ)

೫೩೧. ಕಾನಿ ಪುನಸ್ತಾನಿ ಕರ್ಮಾಣೀತಿ ? ಉಚ್ಯತೇ –

(ಭಾಷ್ಯಾರ್ಥ)

ಆ ಕರ್ಮಗಳಾದರೂ ಯಾವವು ? ಎಂದರೆ ಹೇಳುತ್ತಾನೆ :—

**ಶಮೋ ದಮಸ್ತಪಃ ಶೌಚಂ ಕ್ಷಾನ್ತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥೪೨॥**

1. ಈ ಎರಡು ಮಾತುಗಳು ಮ॥ ಮೆ ॥ ಗಳಲ್ಲಿಲ್ಲ.

೪೨. ಶಮ, ದಮ, ತಪಸ್ಸು, ಶೌಚ, ಕ್ಷಾಂತಿ, ಮತ್ತು ಆರ್ಜವವು ಜ್ಞಾನ, ವಿಜ್ಞಾನ, ಆಸ್ತಿಕ್ಯ-(ಇವು) ಸ್ವಭಾವಜವಾದ ಬ್ರಹ್ಮಕರ್ಮವು.

(ಭಾಷ್ಯ)

೫೩೨. **ಶಮಃ ದಮಶ್ಚ ಯಥಾವ್ಯಾಖ್ಯಾತಾರ್ಥೌ । ತಪಃ ಯಥೋಕ್ತಂ ಶರೀರಾದಿ । ಶೌಚಂ ವ್ಯಾಖ್ಯಾತಮ್ । ಕ್ಷಾನ್ತಿಃ ಕ್ಷಮಾ । ಆರ್ಜವಮ್ ಋಜುತ್ವೈವ ಚ । ಜ್ಞಾನಮ್ । ವಿಜ್ಞಾನಮ್ । ಆಸ್ತಿಕ್ಯಮ್ ಆಸ್ತಿಕಭಾವಃ**[1] **ಶ್ರದ್ಧಧಾನತಾ ಆಗಮಾರ್ಥೇಷು । ಬ್ರಹ್ಮಕರ್ಮ ಬ್ರಾಹ್ಮಣಜಾತೇಃ ಕರ್ಮ**[2] **ಸ್ವಭಾವಜಮ್ । ಯದುಕ್ತಂ "ಸ್ವಭಾವಪ್ರಭವೈಃ ಪ್ರವಿಭಕ್ತಾನಿ" (೧೮-೪೧) ಇತಿ ತದೇವ ಉಕ್ತಂ "ಸ್ವಭಾವಜಮ್" ಇತಿ ॥**

(ಭಾಷ್ಯಾರ್ಥ)

ಶಮ ಮತ್ತು ದಮ-ಇವುಗಳು ಹಿಂದೆ (೧೬-೧, ೨ ರ ಭಾಷ್ಯದಲ್ಲಿ) ವಿವರಿಸಿದ ಅರ್ಥವುಳ್ಳವು. ತಪಸ್ಸು, ಹಿಂದೆ (೧೭-೧೪, ೧೫, ೧೬ ರಲ್ಲಿ) ಹೇಳಿರುವ ಶಾರೀರವೇ ಮುಂತಾದ (ತಪಸ್ಸು). ಶೌಚವನ್ನು (ಹಿಂದೆ ೧೩-೭ ರ ಭಾಷ್ಯದಲ್ಲಿ) ವಿವರಿಸಿದೆ. ಕ್ಷಾಂತಿ, ಕ್ಷಮೆ.[3] ಮತ್ತು ಆರ್ಜವವು, ಸರಳತನವು.[4] ಜ್ಞಾನವು ; ವಿಜ್ಞಾನವು.[5] ಆಸ್ತಿಕ್ಯ, ಆಸ್ತಿಕಭಾವವು, ಶಾಸ್ತ್ರದಲ್ಲಿ (ಹೇಳಿರುವ) ವಿಷಯಗಳಲ್ಲಿ ಶ್ರದ್ಧೆಯಿಡುವದು. (ಇದಿಷ್ಟೂ) ಸ್ವಭಾವಜವಾದ ಬ್ರಹ್ಮಕರ್ಮವು, ಬ್ರಾಹ್ಮಣಜಾತಿಯ ಕರ್ಮವು. "ಸ್ವಭಾವಪ್ರಭವವಾದ ಗುಣಗಳಿಂದ (ಕರ್ಮಗಳು) ಪ್ರವಿಭಕ್ತವಾಗಿರುತ್ತವೆ" (೧೮-೪೧) ಎಂದು ಹೇಳಿತ್ತಷ್ಟೆ, ಅದನ್ನೇ (ಇಲ್ಲಿ) ಸ್ವಭಾವಜ (ಕರ್ಮವು) ಎಂದಿದೆ.

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥೪೩॥**

೪೩. ಶೌರ್ಯ, ತೇಜಸ್ಸು, ಧೃತಿ, ದಾಕ್ಷ್ಯ, ಮತ್ತು ಯುದ್ಧದಲ್ಲಿ ಓಡಿಹೋಗದಿರುವದು ; ದಾನವು, ಮತ್ತು ಈಶ್ವರಭಾವವು-(ಇದು) ಸ್ವಭಾವಜವಾದ ಕ್ಷಾತ್ರ ಕರ್ಮವು.

---

1. 'ಅಸ್ತಿಭಾವಃ' ಮ॥
2. 'ಬ್ರಾಹ್ಮಂ ಕರ್ಮ ಬ್ರಾಹ್ಮಣಜಾತೇಃ ಕರ್ಮ ಬ್ರಾಹ್ಮಕರ್ಮ' ಮ॥ ಮೈ॥
3. ೧೬-೩ ರ ಭಾಷ್ಯದಲ್ಲಿ ವಿವರಿಸಿದೆ.
4. ವಕ್ರಸ್ವಭಾವವಿಲ್ಲದಿರುವದು ೧೩-೭.
5. ೭-೨ ರ ಭಾಷ್ಯವನ್ನು ನೋಡಿ.

(ಭಾಷ್ಯ)

೫೩೩. ಶೌರ್ಯಂ ಶೂರಸ್ಯ ಭಾವಃ । ತೇಜಃ ಪ್ರಾಗಲ್ಭ್ಯಮ್ । ಧೃತಿಃ ಧಾರಣಮ್ ಸರ್ವಾವಸ್ಥಾಸು ಅನವಸಾದೋ ಭವತಿ ಯಯಾ ಧೃತ್ಯಾ ಉತ್ತಮ್ಭಿತಸ್ಯ । ದಾಕ್ಷ್ಯಂ ದಕ್ಷಸ್ಯ ಭಾವಃ, ಸಹಸಾ ಪ್ರತ್ಯುತ್ಪನ್ನೇಷು ಕಾರ್ಯೇಷು ಅವ್ಯಾಮೋಹೇನ ಪ್ರವೃತ್ತಿಃ । ಯುದ್ಧೇ ಚ ಅಪಿ ಅಪಲಾಯನಮ್, ಅಪರಾಙ್ಮುಖೀಭಾವಃ ಶತ್ರುಭ್ಯಃ । ದಾನಂ ದೇಯೇಷು[1] ಮುಕ್ತಹಸ್ತತಾ । ಈಶ್ವರಭಾವಶ್ಚ ಈಶ್ವರಸ್ಯ ಭಾವಃ[2] ಪ್ರಭುಶಕ್ತಿಪ್ರಕಟೀಕರಣಮ್ ಈಶಿತವ್ಯಾನ್ ಪ್ರತಿ । ಕ್ಷಾತ್ರಂ ಕರ್ಮ ಕ್ಷತ್ರಿಯಜಾತೇಃ[3] ವಿಹಿತಂ ಕರ್ಮ ಕ್ಷಾತ್ರಂ ಕರ್ಮ ಸ್ವಭಾವಜಮ್ ॥

(ಭಾಷ್ಯಾರ್ಥ)

ಶೌರ್ಯವು, ಶೂರನ ಭಾವವು ; ತೇಜಸ್ಸು; ದಿಟ್ಟತನವು ; ಧೃತಿ, ಧರಿಸುವದು ; ಈ ಧೃತಿಯಿಂದ ಹಿಡಿದೆತ್ತಲ್ಪಟ್ಟವನು ಯಾವ ಅವಸ್ಥೆಗಳಲ್ಲಿಯೂ ಕುಸಿಯದೆ ಇರುತ್ತಾನೆ. ದಾಕ್ಷ್ಯವು, ದಕ್ಷನ ಭಾವವು, ತಟ್ಟನೆ ಬಂದೊದಗಿರುವ ಕಾರ್ಯಗಳಲ್ಲಿ ಮೋಹವಿಲ್ಲದೆ ತೊಡಗುವದು. ಮತ್ತು ಯುದ್ಧದಲ್ಲಿ ಓಡಿಹೋಗದಿರುವದು, ಶತ್ರುಗಳಿಗೆ ಬೆನ್ನುತೋರಿಸದೆ ಇರುವದು. ದಾನವು, ಕೊಡತಕ್ಕ (ವಸ್ತುಗಳಲ್ಲಿ) ಧಾರಾಳವಾದ (ಕೊಡು)ಗೈಯಿರುವದು. ಮತ್ತು ಈಶ್ವರಭಾವವು ಈಶ್ವರನ ಭಾವವು, ಆಳಲ್ಪಡತಕ್ಕವರಲ್ಲಿ (ತನ್ನ) ಪ್ರಭುಶಕ್ತಿಯನ್ನು ತೋರಿಸಿಕೊಳ್ಳುವದು. (ಇದು) ಸ್ವಭಾವಜವಾದ ಕ್ಷಾತ್ರಕರ್ಮವು, ಕ್ಷತ್ರಿಯಜಾತಿಗೆ ವಿಹಿತವಾದ ಕ್ಷಾತ್ರಕರ್ಮವು.

**ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥೪೪॥**

೪೪. ಕೃಷಿ, ಗೌರಕ್ಷ್ಯ, ವಾಣಿಜ್ಯ-(ಇದು) ಸ್ವಭಾವಜವಾದ ವೈಶ್ಯಕರ್ಮವು. ಪರಿಚರ್ಯಾತ್ಮಕವಾದ ಕರ್ಮವು ಶೂದ್ರನಿಗೂ ಸ್ವಭಾವಜವಾದದ್ದು.

(ಭಾಷ್ಯ)

೫೩೪. ಕೃಷಿಗೌರಕ್ಷ್ಯವಾಣಿಜ್ಯಂ ಕೃಷಿಶ್ಚ ಗೌರಕ್ಷ್ಯಂ ಚ ವಾಣಿಜ್ಯಂ ಚ ಕೃಷಿಗೌರಕ್ಷ್ಯವಾಣಿಜ್ಯಮ್ । ಕೃಷಿಃ ಭೂಮೇಃ ವಿಲೇಖನಮ್ । ಗೌರಕ್ಷ್ಯಂ ಗಾಃ

---

1. ‘ದೇಯದ್ರವ್ಯೇಷು’ ನಿ॥ ಗು॥ ವಾ॥ ; ‘ದ್ರವ್ಯೇಷು’ ಮ॥ ಮೈ॥
2. ‘ಈಶ್ವರಸ್ಯಭಾವಃ’ ಎಂಬುದು ಮ॥ ಮೈ॥ ಗಳಲ್ಲಿಲ್ಲ.
3. ‘ಕ್ಷತ್ರಜಾತೇಃ’ ಮ॥

ರಕ್ಷತಿ ಇತಿ ಗೋರಕ್ಷಃ । ತದ್ಭಾವಃ ಗೌರಕ್ಷ್ಯಮ್ । ಪಾಶುಪಾಲ್ಯಮ್[1] ಇತ್ಯರ್ಥಃ । ವಾಣಿಜ್ಯಂ ವಣಿಕ್ಕರ್ಮ[2] ಕ್ರಯವಿಕ್ರಯಾದಿಲಕ್ಷಣಮ್ । ವೈಶ್ಯಕರ್ಮ ವೈಶ್ಯ ಜಾತೇಃ ಕರ್ಮ ವೈಶ್ಯಕರ್ಮ ಸ್ವಭಾವಜಮ್ । ಪರಿಚರ್ಯಾತ್ಮಕಂ ಶುಶ್ರೂಷಾ ಸ್ವಭಾವಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥

(ಭಾಷ್ಯಾರ್ಥ)

ಕೃಷಿಗೌರಕ್ಷ್ಯವಾಣಿಜ್ಯವು: ಕೃಷಿಯೂ ಗೌರಕ್ಷ್ಯವೂ ವಾಣಿಜ್ಯವೂ ಕೃಷಿ ಗೌರಕ್ಷ್ಯವಾಣಿಜ್ಯವು. ಕೃಷಿ ಎಂದರೆ ನೆಲವನ್ನು ಉಳುವದು; ಗೌರಕ್ಷ್ಯವು (ಎಂಬಲ್ಲಿ) ಗೋವುಗಳನ್ನು ರಕ್ಷಿಸುವವನು ಗೋರಕ್ಷನು; ಅವನ ಭಾವವು. ಗೌರಕ್ಷ್ಯವು. ಪಶುಗಳನ್ನು ಸಾಕುವ (ವೃತ್ತಿ) ಎಂದರ್ಥ. ವಾಣಿಜ್ಯ: ವಣಿಜನ ಕರ್ಮವು; ಮಾರುವದು, ಕೊಳ್ಳುವದು ಮುಂತಾದದ್ದು. (ಇದು) ಸ್ವಭಾವಜವಾದ ವೈಶ್ಯಕರ್ಮವು, ವೈಶ್ಯಜಾತಿಯ ಕರ್ಮವು. ಪರಿಚರ್ಯಾತ್ಮಕವಾದ ಸೇವೆಯನ್ನು ಮಾಡುವ ಸ್ವಭಾವದ ಕರ್ಮವು ಶೂದ್ರನಿಗೂ ಸ್ವಭಾವಜವಾದದ್ದು.

## ಸ್ವಧರ್ಮಕ್ಕೆ ಆಗುವ ವಿಶಿಷ್ಟಫಲ

(ಭಾಷ್ಯ)

೫೩೫. ಏತೇಷಾಂ ಜಾತಿವಿಹಿತಾನಾಂ ಕರ್ಮಣಾಂ ಸಮ್ಯಗನುಷ್ಠಿತಾನಾಂ ಸ್ವರ್ಗಪ್ರಾಪ್ತಿಃ ಫಲಂ ಸ್ವಭಾವತಃ । "ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಕರ್ಮಫಲಮನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲ ಧರ್ಮಾಯುಃಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿಪದ್ಯಂತೇ"[3] (ಗೌ. ಧ. ೨-೨-೨೯, ಮೈ. ಗೌ. ಧ. ೧೧-೩೧) ಇತ್ಯಾದಿಸ್ಮೃತಿಭ್ಯಃ) । ಪುರಾಣೇ ಚ

1. 'ಪಶುಪಾಲನಮ್ ಇತ್ಯರ್ಥಃ' ಮು॥ ಮೈ॥

2. 'ವಣಿಜಃ ಕರ್ಮ' ಮು॥

3. ಬೊಂಬಾಯಿ ಪಾಠದ ಗೌತಮಧರ್ಮಸೂತ್ರವು ಹೀಗಿದೆ: ವರ್ಣಾಶ್ರಮಾಃ ಸ್ವಸ್ವಧರ್ಮನಿಷ್ಠಾಃ ಪ್ರೇತ್ಯ ಕರ್ಮಫಲಮನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲ ರೂಪಾಯುಃಶ್ರುತವೃತ್ತಸುಖಮೇಧಿನೋ ಜನ್ಮ ಪ್ರತಿಪದ್ಯಂತೇ" ಮೈಸೂರಿನ ಸೂತ್ರದಲ್ಲಿ ಭಾಷ್ಯದಂತೆಯೇ ಪಾಠವಿದೆ; ಆದರೆ ಅದರಲ್ಲಿಯೂ 'ಕುಲಧರ್ಮ' ಎಂಬುದರ ಬದಲು 'ಕುಲರೂಪ' ಎಂದೇ ಇದೆ.

ವರ್ಣಿನಾಮ್ ಆಶ್ರಮಿಣಾಂ ಚ ಲೋಕಫಲಭೇದವಿಶೇಷಸ್ಮರಣಾತ್ । **ಕಾರಣಾ ನ್ತರಾತ್ತು ಇದಂ ವಕ್ಷ್ಯಮಾಣಂ ಫಲಮ್**—

(ಭಾಷ್ಯಾರ್ಥ)

(ಬೇರೆ ಬೇರೆಯ) ಜಾತಿಗಳಿಗೆ ವಿಹಿತವಾಗಿರುವ ಈ ಕರ್ಮಗಳನ್ನು ಸರಿಯಾಗಿ ಮಾಡಿದ್ದರಿಂದ ಸ್ವಭಾವದಿಂದಲೇ ಸ್ವರ್ಗಪ್ರಾಪ್ತಿ[1] ಯೆಂಬ ಫಲವು (ಆಗುತ್ತದೆ). "ವರ್ಣದವರೂ ಆಶ್ರಮದವರೂ ಸ್ವಕರ್ಮನಿಷ್ಠರಾಗಿದ್ದವರು ಸತ್ತಬಳಿಕ ಕರ್ಮಫಲವನ್ನು ಅನುಭವಿಸಿ ಆಮೇಲೆ ಉಳಿದ ಕರ್ಮದ ಫಲವಾಗಿ ಆಯಾ, ದೇಶ, ಜಾತಿ, ಕುಲ, ಧರ್ಮ, ಆಯುಸ್ಸು, ಶಾಸ್ತ್ರಜ್ಞಾನ, ನಡತೆ, ಧನ, ಸುಖ, ಮೇಧಾಶಕ್ತಿ ಇವುಗಳಿಂದೊಡಗೂಡಿ ಜನ್ಮವನ್ನು ಹೊಂದುತ್ತಾರೆ" (ಗೌ. ಧ. ೨-೨-೨೯) ಮುಂತಾದ[2] **ಸ್ಮೃತಿಗಳು** ಇದಕ್ಕೆ ಪ್ರಮಾಣವು. **ಪುರಾಣದಲ್ಲಿಯೂ**[3] ಆಯಾ ವರ್ಣದವರೂ ಆಶ್ರಮದವರೂ ಬೇರೆಬೇರೆಯ ಲೋಕವೆಂಬ ಫಲವನ್ನು ಹೊಂದುವರೆಂಬ ವಿಶೇಷವನ್ನು ಹೇಳಿರುವದರಿಂದಲೂ (ಹೀಗೆಂದು ತಿಳಿಯಬೇಕು). ಆದರೆ **ಮತ್ತೊಂದು ಕಾರಣದಿಂದ ಈ ಮುಂದೆ ಹೇಳುವ ಫಲವು**[4] (ವರ್ಣಾಶ್ರಮ **ಧರ್ಮಕ್ಕೆ** ಆಗುತ್ತದೆ) :—

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿನ್ದತಿ ತಚ್ಛೃಣು ॥೪೫॥**

೪೫. ತನ್ನ ತನ್ನ ಕರ್ಮದಲ್ಲಿ ಅಭಿರತನಾದ ನರನು ಸಂಸಿದ್ಧಿಯನ್ನು ಹೊಂದುತ್ತಾನೆ. ಸ್ವಕರ್ಮನಿರತನು ಹೇಗೆ ಸಿದ್ಧಿಯನ್ನು ಹೊಂದುತ್ತಾನೋ ಅದನ್ನು (ಹೇಳುವೆನು) ಕೇಳು.

(ಭಾಷ್ಯ

೫೩೬. ಸ್ವೇ ಸ್ವೇ ಯಥೋಕ್ತಲಕ್ಷಣಭೇದೇ ಕರ್ಮಣಿ ಅಭಿರತಃ

---

1. ಆಯಾ ಲೋಕಪ್ರಾಪ್ತಿ ಎಂದರ್ಥ.
2. ಆಪಸ್ತಂಬ (೨-೨-೨೩) ಮುಂತಾದ.
3. ವಿ. ಪು. ೩-೯ ಮುಂತಾದದ್ದರಲ್ಲಿ.
4. ಜ್ಞಾನನಿಷ್ಠಾಯೋಗ್ಯತೆ ಎಂಬ ಫಲವು_ಎಂದರ್ಥ. ಕರ್ಮಗಳಿಗೆ ಲೋಕಾಂತರ ರೂಪವಾದ ಫಲವನ್ನು ಇಲ್ಲಿ ತಿರಸ್ಕರಿಸಿಲ್ಲ; ಜ್ಞಾನಪ್ರಕರಣವಾದ್ದರಿಂದ ಇಲ್ಲಿ ವಿಧಾನಮಾಡಿರುವ ಕರ್ಮಕ್ಕೆ ಈಶ್ವರಾರ್ಪಣದಿಂದ ಈ ಫಲವೆಂದು ಹೇಳಿದೆ.

ತತ್ಪರಃ ಸಂಸಿದ್ಧಿಮ್ ಸ್ವಕರ್ಮಾನುಷ್ಠಾನಾತ್ ಅಶುದ್ಧಿಕ್ಷಯೇ ಸತಿ ಕಾಯೇನ್ದ್ರಿಯಾಣಾಂ ಜ್ಞಾನನಿಷ್ಠಾಯೋಗ್ಯತಾಲಕ್ಷಣಾಂ ಸಂಸಿದ್ಧಿಂ ಲಭತೇ ಪ್ರಾಪ್ನೋತಿ ನರಃ ಅಧಿಕೃತಃ ಪುರುಷಃ । ಕಿಂ ಸ್ವಕರ್ಮಾನುಷ್ಠಾನತ ಏವ ಸಾಕ್ಷಾತ್ ಸಂಸಿದ್ಧಿಃ ? ನ । ಕಥಂ ತರ್ಹಿ ? ಸ್ವಕರ್ಮನಿರತಃ ಸಿದ್ಧಿಂ ಯಥಾ ಯೇನ ಪ್ರಕಾರೇಣ ವಿನ್ದತಿ ತತ್ ಶೃಣು ॥

(ಭಾಷ್ಯಾರ್ಥ)

ಮೇಲೆ ಹೇಳಿದಂತೆ ಬೇರೆಬೇರೆಯಾಗಿರುವ ಸ್ವರೂಪದ ತನ್ನ ತನ್ನ ಕರ್ಮದಲ್ಲಿ ಅಭಿರತನಾದ ತತ್ಪರನಾದ ನರನು ಅಧಿಕಾರಿಯಾದ ಪುರುಷನು-ಸಂಸಿದ್ಧಿಯನ್ನು-**ತನ್ನ ಕರ್ಮವನ್ನು ಮಾಡುವದರಿಂದ ಅಶುದ್ಧಿಯು ಸವೆಯಲು ಶರೀರೇಂದ್ರಿಯಗಳು ಜ್ಞಾನನಿಷ್ಠೆಗೆ ತಕ್ಕವುಗಳಾಗುವದೆಂಬ ಸಂಸಿದ್ಧಿಯನ್ನು**-ಹೊಂದುವನು, ಪಡೆದುಕೊಳ್ಳುವನು. ತನ್ನ ಕರ್ಮವನ್ನು ಮಾಡಿದ ಮಾತ್ರದಿಂದಲೇ ನೇರಾಗಿ ಸಂಸಿದ್ಧಿ(ಯಾಗುವ)ದೇನು ? ಎಂದರೆ ಹಾಗಲ್ಲ.[1] ಮತ್ತೆ ಹೇಗೆಂದರೆ ಸ್ವಕರ್ಮನಿರತನಾಗಿದ್ದರೆ ಸಿದ್ಧಿಯನ್ನು ಹೇಗೆ ಯಾವ ಪ್ರಕಾರದಿಂದ ಹೊಂದುವನೋ ಅದನ್ನು (ಹೇಳುವೆನು) ಕೇಳು.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥೪೬॥**

೪೬. ಯಾವಾತನಿಂದ ಭೂತಗಳ ಪ್ರವೃತ್ತಿಯೋ, ಯಾವಾತನಿಂದ ಇದೆಲ್ಲವೂ ತತವಾಗಿರುವದೋ ಸ್ವಕರ್ಮದಿಂದ ಆತನನ್ನು ಅಭ್ಯರ್ಚನೆ ಮಾಡಿದರೆ ಮಾನವನು ಸಿದ್ಧಿಯನ್ನು ಹೊಂದುತ್ತಾನೆ.

(ಭಾಷ್ಯ)

೫೩೭. ಯತಃ ಯಸ್ಮಾತ್ ಪ್ರವೃತ್ತಿಃ ಉತ್ಪತ್ತಿಃ ಚೇಷ್ಟಾ ವಾ ಯಸ್ಮಾತ್ ಅನ್ತರ್ಯಾಮಿಣಃ ಈಶ್ವರಾತ್ ಭೂತಾನಾಂ ಪ್ರಾಣಿನಾಂ ಸ್ಯಾತ್ । ಯೇನ ಈಶ್ವರೇಣ ಸರ್ವಮ್ ಇದಂ ಜಗತ್ ತತಂ ವ್ಯಾಪ್ತಮ್, ಸ್ವಕರ್ಮಣಾ ಪೂರ್ವೋಕ್ತೇನ ಪ್ರತಿವರ್ಣಂ ತಮ್ ಈಶ್ವರಮ್ ಅಭ್ಯರ್ಚ್ಯ ಪೂಜಯಿತ್ವಾ ಆರಾಧ್ಯ ಕೇವಲಂ ಜ್ಞಾನನಿಷ್ಠಾಯೋಗ್ಯತಾಲಕ್ಷಣಾಂ ಸಿದ್ಧಿಂ ವಿನ್ದತಿ ಮಾನವಃ ಮನುಷ್ಯಃ [2] ॥

---

1. ಬರಿಯ ಕರ್ಮದಿಂದಲ್ಲ; ಈಶ್ವರಾರ್ಪಣರೂಪವಾದ ಕರ್ಮದಿಂದ.
2. ಸ॥ ಮೈ॥ ಗಳಲ್ಲಿಲ್ಲ.

(ಭಾಷ್ಯಾರ್ಥ)

(ಯತಃ = ಯಸ್ಮಾತ್) ಯಾವಾತನಿಂದ ಪ್ರವೃತ್ತಿಯು, ಉತ್ಪತ್ತಿಯು ಅಥವಾ ವ್ಯಾಪಾರವು; ಯಾವ ಅಂತರ್ಯಾಮಿಯಾದ ಈಶ್ವರನಿಂದ ಭೂತಗಳ ಪ್ರಾಣಿಗಳ (ಪ್ರವೃತ್ತಿಯು) ಉಂಟಾಗುವದೋ, ಯಾವ ಈಶ್ವರನಿಂದ ಈ ಜಗತ್ತೆಲ್ಲವೂ ತತವೋ ವ್ಯಾಪ್ತ(ವಾಗಿರು)ವದೋ, ಹಿಂದೆ ಪ್ರತಿವರ್ಣಕ್ಕೂ ಹೇಳಿರುವ **ಸ್ವಕರ್ಮದಿಂದ ಆ ಈಶ್ವರನನ್ನು ಅಭ್ಯರ್ಚನೆಮಾಡಿದರೆ, ಪೂಜಿಸಿದರೆ ಆರಾಧನೆಮಾಡಿದರೆ ಮಾತ್ರ**[1] ಮಾನವನು ಮನುಷ್ಯನು ಜ್ಞಾನನಿಷ್ಠೆಗೆ ಯೋಗ್ಯತೆಯೆಂಬ ಸಿದ್ಧಿಯನ್ನು ಹೊಂದುತ್ತಾನೆ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್** ॥೪೭॥

೪೭. ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ವಿಗುಣವಾದ ತನ್ನ ಧರ್ಮವೇ ಮೇಲು. ಸ್ವಭಾವನಿಯತವಾದ ಕರ್ಮವನ್ನು ಮಾಡುವವನು ಕಿಲ್ಬಿಷವನ್ನು ಹೊಂದುವನು.

(ಭಾಷ್ಯ)

೫೩೮. ಯತ ಏವಮ್ ಅತಃ ಶ್ರೇಯಾನ್ ಪ್ರಶಸ್ಯತರಃ ಸ್ವೋ ಧರ್ಮಃ ವಿಗುಣೋಽಪಿ ಇತಿ ಅಪಿಶಬ್ದಃ ದ್ರಷ್ಟವ್ಯಃ ಪರಧರ್ಮಾತ್ ಸ್ವನುಷ್ಠಿತಾತ್ । ಸ್ವಭಾವನಿಯತಂ ಸ್ವಭಾವೇನ ನಿಯತಮ್ । ಯದುಕ್ತಂ ಸ್ವಭಾವಜಮ್[2] ಇತಿ ತದೇವೋಕ್ತಂ 'ಸ್ವಭಾವನಿಯತಮ್' ಇತಿ । ಯಥಾ ವಿಷಜಾತಸ್ಯ ಕೃಮೇಃ ವಿಷಂ ನ ದೋಷಕರಮ್ ತಥಾ ಸ್ವಭಾವನಿಯತಂ ಕರ್ಮ ಕುರ್ವನ್ ನಾಪ್ನೋತಿ ಕಿಲ್ಬಿಷಂ ಪಾಪಮ್ ॥

(ಭಾಷ್ಯಾರ್ಥ)

ಹೀಗಿದೆಯಷ್ಟೆ, ಆದ್ದರಿಂದ ಸ್ವಧರ್ಮವು ತನ್ನ ಧರ್ಮವು ವಿಗುಣವಾದರೂ-

---

1. 'ಕೇವಲಂ' ಎಂಬುದು ಕ್ರಿಯಾವಿಶೇಷಣವು; ಬರಿಯ ಕರ್ಮದಿಂದ ಜ್ಞಾನನಿಷ್ಠಾಯೋಗ್ಯತೆ ಎಂಬ ಫಲವು ದೊರಕಲಾರದು, ಅದನ್ನು ಈಶ್ವರಾರಾಧನವಾಗಿ ಮಾಡಿದರೆ ಮಾತ್ರ ಈ ಫಲವು ದೊರಕುವದು_ಎಂಬ ಅರ್ಥವು ಇದರಿಂದ ಹೊರಡುತ್ತದೆ. ಬರಿಯ ಜ್ಞಾನನಿಷ್ಠಾಯೋಗ್ಯತೆ ಎಂಬ ಫಲವು ದೊರಕುತ್ತದೆ ಎಂಬ ವ್ಯಾಖ್ಯಾನವು ಭಾಷ್ಯಕ್ಕೆ ಹೊಂದುವದಿಲ್ಲ.

2. ಇದರ ಮುಂದೆ 'ಸಹಜಮ್' ನಿ॥ ವ್ಯೈ॥ ವಾ॥

(ಮೂಲದಲ್ಲಿ) ವಿಗುಣೋಽಪಿ ಎಂದು ಅಪಿಶಬ್ದವನ್ನು ಅಧ್ಯಾಹಾರಮಾಡಿಕೊಳ್ಳ ಬೇಕು–ಚೆನ್ನಾಗಿ ಮಾಡಿದ ಪರಧರ್ಮಕ್ಕಿಂತಲೂ ಶ್ರೇಯಸ್ಸು, (ಹೆಚ್ಚು) ಮೇಲ್ಪ ರದ್ದು. ಸ್ವಭಾವನಿಯತವಾದ ಸ್ವಭಾವದಿಂದ ಗೊತ್ತಾಗಿರುವ–(ಹಿಂದಿನ ಶ್ಲೋಕ ಗಳಲ್ಲಿ) 'ಸ್ವಭಾವಜಮ್' ಎಂದು ಹೇಳಿದೆಯಲ್ಲ, ಅದನ್ನೇ (ಇಲ್ಲಿ) 'ಸ್ವಭಾವ ನಿಯತಮ್' ಎಂದು ಹೇಳಿದೆ–ಹೇಗೆ ವಿಷದಲ್ಲಿ ಹುಟ್ಟಿದ ಕ್ರಿಮಿಗೆ ವಿಷವು ದೋಷ ವನ್ನುಂಟುಮಾಡುವದಿಲ್ಲವೋ ಹಾಗೆ ಸ್ವಭಾವನಿಯತವಾದ ಕರ್ಮವನ್ನು ಮಾಡು ವವನು ಕಿಲ್ಬಿಷವನ್ನು ಪಾಪವನ್ನು ಹೊಂದುವದಿಲ್ಲ.

(ಭಾಷ್ಯ)

೫೩೯. ಸ್ವಭಾವನಿಯತಂ ಕರ್ಮ ಕುರ್ವಾಣಃ ವಿಷಜ ಇವ ಕ್ರಿಮಿಃ ಕಿಲ್ಬಿಷಂ ನಾಪ್ನೋತಿ ಇತ್ಯುಕ್ತಮ್ । ಪರಧರ್ಮಶ್ಚ ಭಯಾವಹಃ (೩-೩೫) ಇತಿ । ಅನಾತ್ಮ ಜ್ಞಶ್ಚ "ನ ಹಿ ಕಶ್ಚಿತ್ ಕ್ಷಣಮಪ್ಯಕರ್ಮಕೃತ್ತಿಷ್ಠತಿ' (೩-೫) ಇತಿ । ಅತಃ—

(ಭಾಷ್ಯಾರ್ಥ)

ಸ್ವಭಾವನಿಯತವಾದ ಕರ್ಮವನ್ನು ಮಾಡುತ್ತಿರುವವನು ವಿಷದಲ್ಲಿ ಹುಟ್ಟಿದ ಕ್ರಿಮಿಯಂತೆ ಕಿಲ್ಬಿಷವನ್ನು ಹೊಂದುವದಿಲ್ಲ ಎಂದು ಹೇಳಿದ್ದಾಯಿತು. ಮತ್ತೊಬ್ಬರ ಧರ್ಮವು ಭಯವನ್ನುಂಟುಮಾಡತಕ್ಕದ್ದೆಂದೂ (೩-೩೫) ಆತ್ಮಜ್ಞನಲ್ಲದ ಯಾವನೂ ಒಂದು ಕ್ಷಣವೂ ಕರ್ಮವನ್ನು ಮಾಡದೆ ಇರಲಾರನೆಂದೂ (೩-೫) ಹೇಳಿದ್ದಾಗಿದೆ. ಆದ್ದರಿಂದ—

**ಸಹಜಂ ಕರ್ಮ ಕೌನ್ತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಮ್ಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥೪೮॥**

೪೮. ಕೌಂತೇಯನೆ, ಸಹಜವಾದ ಕರ್ಮವು ಸದೋಷವಾದರೂ (ಅದನ್ನು) ಬಿಡತಕ್ಕದ್ದಲ್ಲ. ಏಕೆಂದರೆ ಧೂಮದಿಂದ ಅಗ್ನಿಯ ಹಾಗೆ ಎಲ್ಲಾ ಆರಂಭಗಳೂ ದೋಷದಿಂದ ಆವೃತವಾಗಿರುತ್ತವೆ.

(ಭಾಷ್ಯ)

೫೪೦. ಸಹಜಂ ಸಹ ಜನ್ಮನೈವ ಉತ್ಪನ್ನಮ್ । ಕಿಂ ತತ್ ? ಕರ್ಮ[1] । ಕೌನ್ತೇಯ, ಸದೋಷಮಪಿ ತ್ರಿಗುಣಾತ್ಮಕತ್ವಾತ್ ನ ತ್ಯಜೇತ್ । ಸರ್ವಾರಮ್ಭಾಃ ।

1. 'ಕಿಂ ಕರ್ಮ ಕುರ್ವನ್' ಮ॥

**ಆರಭ್ಯನ್ತೇ ಇತಿ ಆರಮ್ಭಾಃ । ಸರ್ವಕರ್ಮಾಣಿ ಇತ್ಯೇತತ್ । ಪ್ರಕರಣಾತ್ । ಯೇ ಕೇಚಿತ್ ಆರಮ್ಭಾಃ ಸ್ವಧರ್ಮಾಃ ಪರಧರ್ಮಾಶ್ಚ ತೇ ಸರ್ವೇ ಹಿ ಯಸ್ಮಾತ್ । ತ್ರಿಗುಣಾತ್ಮಕತ್ವಮ್ ಅತ್ರ ಹೇತುಃ । ತ್ರಿಗುಣಾತ್ಮಕತ್ವಾತ್ ದೋಷೇಣ ಧೂಮೇನ ಸಹಜೇನ ಅಗ್ನಿರಿವ ಆವೃತಾಃ ! ಸಹಜಸ್ಯ ಕರ್ಮಣಃ ಸ್ವಧರ್ಮಾಖ್ಯಸ್ಯ ಪರಿತ್ಯಾಗೇನ ಪರಧರ್ಮಾನುಷ್ಠಾನೇಽಪಿ ದೋಷಾತ್ ನೈವ ಮುಚ್ಯತೇ । ಭಯಾವಹಶ್ಚ ಪರಧರ್ಮಃ । ನ ಚ ಶಕ್ಯತೇ ಅಶೇಷತಃ ತ್ಯಕ್ತುಮ್ ಅಜ್ಞೇನ ಕರ್ಮ ಯತಃ, ತಸ್ಮಾತ್ ನ ತ್ಯಜೇತ್ ಇತ್ಯರ್ಥಃ ||**

(ಭಾಷ್ಯಾರ್ಥ)

ಸಹಜವಾದ ಹುಟ್ಟಿದಾಗಿನಿಂದಲೇ ಉಂಟಾಗಿರುವ–ಅದು ಯಾವದು? ಎಂದರೆ ಕರ್ಮವು, ಎಲೈ ಕೌಂತೇಯನೆ, ತ್ರಿಗುಣಾತ್ಮಕವಾಗಿರುವದರಿಂದ ದೋಷವುಳ್ಳದ್ದೇ ಆದರೂ (ಅದನ್ನು) ಬಿಡತಕ್ಕದ್ದಲ್ಲ. ಏಕೆಂದರೆ ಸರ್ವಾರಂಭಗಳೂ–ಆರಂಭಿಸಲ್ಪಡುವದರಿಂದ (ಕರ್ಮಗಳು) ಆರಂಭಗಳು–ಎಲ್ಲಾ ಕರ್ಮಗಳೂ ಎಂದರ್ಥ; ಏಕೆಂದರೆ (ಇದು ಕರ್ಮದ) ಪ್ರಕರಣವಾಗಿರುತ್ತದೆ. **ಯಾವ ಆರಂಭಗಳೇ ಆಗಲಿ, (ಅವು) ತನ್ನ ಧರ್ಮಗಳಾಗಿರಲಿ, ಮತ್ತೊಬ್ಬರ ಧರ್ಮಗಳಾಗಿರಲಿ, ಅವೆಲ್ಲವೂ (ದೋಷದಿಂದ ಆವೃತವಾಗಿರುತ್ತವೆ).** ಇದಕ್ಕೆ ಮೂರು ಗುಣಗಳಿಂದಾಗಿರುವದೆಂಬುದೇ ಹೇತು. (ಅವುಗಳೆಲ್ಲವೂ) ತ್ರಿಗುಣಾತ್ಮಕವಾಗಿರುವದರಿಂದ (ತನ್ನ) ಜೊತೆಯಲ್ಲಿ ಹುಟ್ಟಿದ ಹೊಗೆಯಿಂದ ಬೆಂಕಿಯು (ಮುಸುಕಲ್ಪಟ್ಟಿರುವಂತೆ), ದೋಷದಿಂದ ಮುಸುಕಲ್ಪಟ್ಟಿರುವವು. ಸ್ವಧರ್ಮವೆಂಬ ಸಹಜವಾದ ಕರ್ಮವನ್ನು ಬಿಟ್ಟು ಮತ್ತೊಬ್ಬರ ಧರ್ಮವನ್ನು ಅನುಷ್ಠಾನಮಾಡಿದರೂ ದೋಷದಿಂದ ಬಿಡುಗಡೆಯಾಗುವದೇ ಇಲ್ಲವಾದ್ದರಿಂದಲೂ ಪರಧರ್ಮವು ಹೆದರಿಕೆಗೆ ಕಾರಣವಾಗಿರುವದರಿಂದಲೂ[1] ಅಜ್ಞನು ಸ್ವಲ್ಪವೂ ಉಳಿಯದಂತೆ ಎಲ್ಲಾ ಕರ್ಮಗಳನ್ನೂ ಬಿಡುವದು ಆಗುವಹಾಗಿಲ್ಲವಾದ್ದರಿಂದಲೂ, ಈ ಕಾರಣದಿಂದ (ಸ್ವಕರ್ಮವನ್ನು) ಬಿಡಬಾರದು ಎಂದರ್ಥ.

## ಕರ್ಮತ್ಯಾಗವು ಶಕ್ಯವೆ, ಶಕ್ಯವಲ್ಲವೆ ?

(ಭಾಷ್ಯ)

೫೪೧. **ಕಿಮ್ ಅಶೇಷತಃ ತ್ಯಕ್ತುಮ್ ಅಶಕ್ಯಂ ಕರ್ಮ ಇತಿ ನ ತ್ಯಜೇತ್, ಕಿಂವಾ ಸಹಜಸ್ಯ ಕರ್ಮಣಃ ತ್ಯಾಗೇ ದೋಷೋ ಭವತಿ ಇತಿ ? ಕಿಂಚ ಅತಃ ? ಯದಿ**

---

1. ೩-೩೫.

ತಾವತ್ ಅಶೇಷತಃ ತ್ಯಕ್ತುಮ್ ಅಶಕ್ಯಮ್ ಇತಿ ನ ತ್ಯಾಜ್ಯಂ ಸಹಜಂ ಕರ್ಮ, ಏವಂ ತರ್ಹಿ ಅಶೇಷತಃ ತ್ಯಾಗೇ ಗುಣ ಏವ ಸ್ಯಾತ್ ಇತಿ ಸಿದ್ಧಂ ಭವತಿ ||

(ಭಾಷ್ಯಾರ್ಥ)

(ಸಂಶಯ):—ಕರ್ಮವನ್ನು ಸಂಪೂರ್ಣವಾಗಿ ಬಿಡುವದಕ್ಕೆ ಆಗುವದಿಲ್ಲವಾದ್ದರಿಂದ ಬಿಡಬಾರದೊ, ಸಹಜವಾದ ಕರ್ಮವನ್ನು ಬಿಟ್ಟರೆ ದೋಷವುಂಟಾಗುವದೆಂಬ ಕಾರಣದಿಂದ ಬಿಡಬಾರದೊ ?

(ಪ್ರಶ್ನೆ):—ಹೇಗಾದರೇನು ?

(ಉತ್ತರ):—ಸಂಪೂರ್ಣವಾಗಿ ಬಿಡುವದಕ್ಕೆ ಆಗುವದಿಲ್ಲವಾದ್ದರಿಂದ ಸಹಜವಾದ ಕರ್ಮವನ್ನು ಬಿಡಬಾರದು ಎಂದಾದರೆ ಆ ಪಕ್ಷದಲ್ಲಿ ಸಂಪೂರ್ಣವಾಗಿ ಬಿಟ್ಟರೆ ಗುಣವೇ ಆದೀತೆಂದು ಸಿದ್ಧವಾಗುತ್ತದೆ.

## ಕರ್ಮತ್ಯಾಗವು ಶಕ್ಯವಲ್ಲವೆಂಬ ಪೂರ್ವಪಕ್ಷ

(ಭಾಷ್ಯ)

೫೪೨. ಸತ್ಯಮ್ ಏವಮ್ । ಅಶೇಷತಸ್ತ್ಯಾಗ ಏವ ನೋಪಪದ್ಯತೇ ಇತಿ ಚೇತ್ । ಕಿಂ ನಿತ್ಯಪ್ರಚಲಿತಾತ್ಮಕಃ ಪುರುಷಃ, ಯಥಾ ಸಾಙ್ಖ್ಯಾನಾಂ ಗುಣಾಃ ? ಕಿಂವಾ ಕ್ರಿಯೈವ ಕಾರಕಮ್, ಯಥಾ ಬೌದ್ಧಾನಾಂ ಸ್ಕನ್ಧಾಃ [1] ಕ್ಷಣಪ್ರಧ್ವಂಸಿನಃ ? ಉಭಯಥಾಪಿ ಕರ್ಮಣಃ ಅಶೇಷತಸ್ತ್ಯಾಗೋ ನ ಸಮ್ಭವತಿ ||

(ಭಾಷ್ಯಾರ್ಥ)

(ಆಕ್ಷೇಪ):—ಹೌದು, ಹೀಗಾದರೆ (ಸಿದ್ಧವಾಗುತ್ತದೆ). ಆದರೆ ಸ್ವಲ್ಪವೂ ಉಳಿಯದಂತೆ ಬಿಡುವದೇ ಆಗುವ ಹಾಗಿಲ್ಲವಲ್ಲ! (ಹೇಗೆಂದರೆ): ಪುರುಷನೇನು **ಸಾಂಖ್ಯರ ಗುಣಗಳಂತೆ**[2] ಯಾವಾಗಲೂ ಮಾರ್ಪಡುತ್ತಿರುವ ಸ್ವಭಾವದವನೆನ್ನುವಿರೊ, ಅಥವಾ ಬೌದ್ಧರು ಹೇಳುವ ಕ್ಷಣಕ್ಕೆ ನಾಶವಾಗುವ **ಸ್ಕಂಧಗಳಂತೆ**[3] ಕ್ರಿಯೆ

---

1. ‘ಪಞ್ಚಸ್ಕನ್ಧಾಃ’ ಪಾ||
2. ಗುಣಗಳು ಒಂದು ಕ್ಷಣವೂ ಇದ್ದಂತೆ ಇರುವದಿಲ್ಲವೆಂದು ಸಾಂಖ್ಯರೆನ್ನುತ್ತಾರೆ.
3. ರೂಪ, ವಿಜ್ಞಾನ, ವೇದನಾ, ಸಂಸ್ಕಾರ, ಸಂಜ್ಞಾ—ಎಂಬ ಐದು ಸ್ಕಂಧಗಳು ಕ್ಷಣಿಕವಾಗಿದ್ದು ನಾಶವಾಗುತ್ತಿರುತ್ತವೆ—ಎಂದು ಬೌದ್ಧರೆನ್ನುವರು.

ಯೇ ಕಾರಕವೆನ್ನುವಿರೊ ? ಈ ಎರಡು ಪಕ್ಷಗಳಗಳಲ್ಲಿಯೂ ಕರ್ಮವನ್ನು ಸ್ವಲ್ಪವೂ ಉಳಿಯದಂತೆ ಬಿಡುವದು ಆಗುವದಿಲ್ಲ.[1]

## ವೈಶೇಷಿಕಮತದಂತೆ ಕರ್ಮತ್ಯಾಗದ ಉಪಪತ್ತಿ

(ಭಾಷ್ಯ)

೫೪೩. ಅಥ ತೃತೀಯೋऽಪಿ ಪಕ್ಷಃ । ಯದಾ ಕರೋತಿ ತದಾ ಸಕ್ರಿಯಂ ವಸ್ತು । ಯದಾ ನ ಕರೋತಿ ತದಾ ನಿಷ್ಕ್ರಿಯಂ ವಸ್ತು[2] ತದೇವ । ತತ್ರ ಏವಂ ಸತಿ ಶಕ್ಯಂ ಕರ್ಮ ಅಶೇಷತಸ್ತ್ಯಕ್ತುಮ್ । ಅಯಂ ತು ಅಸ್ಮಿನ್ ತೃತೀಯೇ ಪಕ್ಷೇ ವಿಶೇಷಃ–ನ ನಿತ್ಯಪ್ರಚಲಿತಂ ವಸ್ತು, ನಾಪಿ ಕ್ರಿಯೈವ ಕಾರಕಮ್ । ಕಿಂ ತರ್ಹಿ ? ವ್ಯವಸ್ಥಿತೇ ದ್ರವ್ಯೇ ಅವಿದ್ಯಮಾನಾ ಕ್ರಿಯಾ ಉತ್ಪದ್ಯತೇ ವಿದ್ಯಮಾನಾ ಚ ವಿನಶ್ಯತಿ । ಶುದ್ಧಂ ತತ್ ದ್ರವ್ಯಂ ಶಕ್ತಿಮತ್ ಅವತಿಷ್ಠತೇ ಇತ್ಯೇವಮ್ ಆಹುಃ ಕಾಣಾದಾಃ ತದೇವ ಚ ಕಾರಕಮಿತಿ । ಅಸ್ಮಿನ್ ಪಕ್ಷೇ ಕೋ ದೋಷಃ ಇತಿ ?

(ಭಾಷ್ಯಾರ್ಥ)

(ವೈಶೇಷಿಕ):—ಅಥವಾ ಮೂರನೆಯದಾದ (ಮತ್ತೊಂದು) ಪಕ್ಷವೂ (ಇರುತ್ತದೆ). ಯಾವಾಗ ಕರ್ಮವನ್ನು ಮಾಡುತ್ತಾನೋ ಆಗ (ಆತ್ಮತತ್ತ್ವವು) ಸಕ್ರಿಯವಾದ ವಸ್ತು ; ಯಾವಾಗ ಮಾಡುವದಿಲ್ಲವೋ ಆಗ ಅದೇ ನಿಷ್ಕ್ರಿಯವಾದ ವಸ್ತು. ಇದು ಹೀಗಾದರೆ ಕರ್ಮವನ್ನು ನಿಶ್ಶೇಷವಾಗಿ ಬಿಡುವದಕ್ಕೆ ಆಗುತ್ತದೆ. ಈ ಮೂರನೆಯ ಪಕ್ಷದಲ್ಲಾದರೆ ಇದೊಂದು ವಿಶೇಷವಿರುತ್ತದೆ : (ಆತ್ಮ) ವಸ್ತು ನಿತ್ಯವಾಗಿ ಮಾರ್ಪಡುವ ಸ್ವಭಾವದ್ದೂ ಅಲ್ಲ, ಕ್ರಿಯೆಯೇ ಕಾರಕವೆಂಬುದೂ ಇಲ್ಲ. ಮತ್ತೇನೆಂದರೆ ಇದ್ದಹಾಗೆಯೇ ಇರುವ ವಸ್ತುವಿನಲ್ಲಿ, ಇಲ್ಲದಿದ್ದ ಕ್ರಿಯೆಯು (ಹೊಸದಾಗಿ) ಉಂಟಾಗುತ್ತದೆ, ಮತ್ತು (ಸ್ವಲ್ಪಕಾಲ) ಇದ್ದು ನಾಶವಾಗುತ್ತದೆ. ಶುದ್ಧವಾಗಿರುವ ದ್ರವ್ಯವು ಮಾತ್ರ (ಕ್ರಿಯಾ)ಶಕ್ತಿಯುಳ್ಳದ್ದಾಗಿ ಇದ್ದುಕೊಂಡಿರುತ್ತದೆ, ಮತ್ತು ಅದೇ ಕಾರಕವೂ (ಆಗಿರುತ್ತದೆ). ಹೀಗೆಂದು ಕಾಣಾದರು ಹೇಳುತ್ತಾರೆ. ಈ ಪಕ್ಷದಲ್ಲಿ ದೋಷವೇನು ?

1. ಎರಡು ಪಕ್ಷಗಳಲ್ಲಿಯೂ ಆತ್ಮನಿರುವವರೆಗೆ ಕ್ರಿಯೆ ಹೋಗುವಂತಿಲ್ಲ. ಬೌದ್ಧರ ಪಕ್ಷದಲ್ಲಿ ಕ್ರಿಯಾರೂಪನೇ ಆಗಿರುತ್ತಾನೆ.

2. ಮ|| ಮೈ|| ಗಳಲ್ಲಿಲ್ಲ.

# ವೈಶೇಷಿಕಮತದ ಖಂಡನೆ

(ಭಾಷ್ಯ)

೫೪೪. ಅಯಮೇವ ತು ದೋಷಃ । ಯತಸ್ತ್ವಭಾಗವತಂ ಮತಮಿದಮ್ । ಕಥಂ ಜ್ಞಾಯತೇ ? ಯತ ಆಹ ಭಗವಾನ್ "ನಾಸತೋ ವಿದ್ಯತೇ ಭಾವಃ" (೨-೧೬) ಇತ್ಯಾದಿ । ಕಾಣಾದಾನಾಂ ಹಿ ಅಸತೋ ಭಾವಃ, ಸತಶ್ಚ ಅಭಾವಃ ಇತೀದಂ ಮತಮ್[1] । ಅಭಾಗವತತ್ವೇಽಪಿ ನ್ಯಾಯವಚ್ಚೇತ್ ಕೋ ದೋಷಃ ಇತಿ ಚೇತ್ ? ಉಚ್ಯತೇ । ದೋಷವತ್ತು ಇದಮ್ । ಸರ್ವಪ್ರಮಾಣವಿರೋಧಾತ್ । ಕಥಮ್ ? ಯದಿ ತಾವತ್ ದ್ವ್ಯಣುಕಾದಿ ದ್ರವ್ಯಂ ಪ್ರಾಗುತ್ಪತ್ತೇಃ ಅತ್ಯನ್ತಮೇವ ಅಸತ್ ಉತ್ಪನ್ನಂ ಚ ಸ್ಥಿತಂ ಕಂಚಿತ್ ಕಾಲಂ ಪುನಃ ಅತ್ಯನ್ತಮೇವ ಅಸತ್ತ್ವಮ್ ಆಪದ್ಯತೇ । ತಥಾ ಚ ಸತಿ ಅಸದೇವ ಸತ್ ಜಾಯತೇ ಸದೇವ ಅಸತ್ತ್ವಮ್ ಆಪದ್ಯತೇ । ಅಭಾವೋ ಭಾವೋ ಭವತಿ ಭಾವಶ್ಚ ಅಭಾವೋ ಭವತಿ । ತತ್ರ ಅಭಾವಃ ಜಾಯಮಾನಃ ಪ್ರಾಕ್ ಉತ್ಪತ್ತೇಃ ಶಶವಿಷಾಣಕಲ್ಪಃ ಸಮವಾಯ್ಯಸಮವಾಯಿನಿಮಿತ್ತಾಖ್ಯಂ ಕಾರಣಮ್ ಅಪೇಕ್ಷ್ಯ ಜಾಯತೇ ಇತಿ । ನ ಚ ಏವಮಭಾವಃ ಉತ್ಪದ್ಯತೇ ಕಾರಣಂ ಚ ಅಪೇಕ್ಷತೇ ಇತಿ ಶಕ್ಯಂ ವಕ್ತುಮ್ । ಅಸತಾಂ ಶಶವಿಷಾಣಾದೀನಾಮ್ ಅದರ್ಶನಾತ್ । ಭಾವಾತ್ಮಕಾಶ್ಚೇತ್ ಘಟಾದಯಃ ಉತ್ಪದ್ಯಮಾನಾಃ ಕಿಂಚಿತ್ ಅಭಿವ್ಯಕ್ತಿಮಾತ್ರೇ ಕಾರಣಮ್ ಅಪೇಕ್ಷ್ಯ ಉತ್ಪದ್ಯನ್ತೇ ಇತಿ ಶಕ್ಯಂ ಪ್ರತಿಪತ್ತುಮ್[2] । ಕಿಂ ಚ ಅಸತಶ್ಚ ಸದ್ಭಾವೇ ಸತಶ್ಚ ಅಸದ್ಭಾವೇ ನ ಕ್ವಚಿತ್ ಪ್ರಮಾಣಪ್ರಮೇಯವ್ಯವಹಾರೇಷು ವಿಶ್ವಾಸಃ ಕಸ್ಯಚಿತ್ ಸ್ಯಾತ್ । ಸತ್ ಸದೇವ, ಅಸತ್ ಅಸದೇವ ಇತಿ ನಿಶ್ಚಯಾನುಪಪತ್ತೇಃ ॥

(ಭಾಷ್ಯಾರ್ಥ)

(ಸಿದ್ಧಾಂತಿ):— ಇದೊಂದೇ ದೋಷವು. ಯಾವದೆಂದರೆ ಇದು ಭಗವಂತನ (ಮತಕ್ಕೆ) ವಿರುದ್ಧವಾದ ಮತವು.

(ವೈಶೇಷಿಕ):—(ಇದು) ಹೇಗೆ ಗೊತ್ತಾಯಿತು ?

(ಸಿದ್ಧಾಂತಿ):—ಏಕೆಂದರೆ ಭಗವಂತನು "ಅಸತ್ತಿಗೆ ಉತ್ಪತ್ತಿಯಿಲ್ಲ" (೨-೧೬) ಎಂದು ಮುಂತಾಗಿ ಹೇಳಿರುತ್ತಾನೆ. ಕಾಣಾದರ ಮತವು 'ಇಲ್ಲದ್ದು ಉಂಟಾಗುವದು, ಇದ್ದದ್ದು ಇಲ್ಲವಾಗುವದು' ಎಂಬಿದೇ ಅಲ್ಲವೆ ?

---

1. 'ಅಭಾಗವತಮ್' ಎಂದು ಹೆಚ್ಚಾಗಿ ಮ॥ ವಾ॥
2. 'ವಕ್ತುಮ್' ಮ॥ಮೈ॥

(ಪೂರ್ವಪಕ್ಷಿ):—**ಭಗವಂತನ ಮತಕ್ಕೆ ವಿರುದ್ಧವಾಗಿದ್ದರೂ ಯುಕ್ತಿಯುಕ್ತವಾಗಿದ್ದರೆ ದೋಷವೇನು**[1] **?**

(ಸಿದ್ಧಾಂತಿ):—ಹೇಳುತ್ತೇವೆ, (ಕೇಳಿ). ಈ ಮತದಲ್ಲಂತೂ ದೋಷವಿದೆ. ಏಕೆಂದರೆ (ಇದು) ಎಲ್ಲಾ ಪ್ರಮಾಣಗಳಿಗೂ ವಿರುದ್ಧವಾಗಿರುತ್ತದೆ. ಹೇಗೆಂದರೆ, ಮೊದಲನೆಯದಾಗಿ ದ್ವ್ಯಣುಕವೇ[2] ಮುಂತಾದ ದ್ರವ್ಯವು (ತಾನು) ಹುಟ್ಟುವದಕ್ಕೆ ಮುಂಚೆ ಅತ್ಯಂತವಾಗಿ, ಇಲ್ಲದೆ ಇದ್ದು ಹುಟ್ಟಿದ ಮೇಲೆ ಸ್ವಲ್ಪಕಾಲವಿದ್ದು ಮತ್ತೆ ಅತ್ಯಂತವಾಗಿಯೇ ಅಸತ್ತ್ವವನ್ನು ಹೊಂದುತ್ತದೆ. ಹಾಗಾದರೆ ಅಸತ್ತೇ ಸತ್ತಾಗುತ್ತದೆ, ಸತ್ತೇ ಅಸತ್ತ್ವವನ್ನು ಪಡೆಯುತ್ತದೆ; ಅಭಾವವು ಭಾವವಾಗುತ್ತದೆ, ಮತ್ತು ಭಾವವು ಅಭಾವವಾಗುತ್ತದೆ. ಆದರಲ್ಲಿ(ಯೂ) ಅಭಾವವು (ತಾನು) ಹುಟ್ಟುವದಕ್ಕೆ ಮೊದಲು ಮೊಲದ ಕೊಂಬಿನಂತಿದ್ದು, ಹುಟ್ಟುವಾಗ **ಸಮವಾಯಿ, ಅಸಮವಾಯಿ, ನಿಮಿತ್ತ**[3]–ಎಂಬ (ಮೂರು ಬಗೆಯ) ಕಾರಣವನ್ನಿಟ್ಟುಕೊಂಡು ಹುಟ್ಟುತ್ತದೆ (ಎಂದು ಹೇಳಿದಂತಾಯಿತು). ಆದರೆ ಹೀಗೆ ಅಭಾವವು ಹುಟ್ಟುತ್ತದೆಯೆಂದೂ, ಕಾರಣವನ್ನು ಬಯಸುತ್ತದೆ ಎಂದೂ ಹೇಳುವದಕ್ಕೆ ಆಗುವದಿಲ್ಲ; ಏಕೆಂದರೆ ಇಲ್ಲದಿರುವ ಮೊಲದಕೊಂಬೇ ಮುಂತಾದವುಗಳು (ಹುಟ್ಟುವದೂ ಕಾರಣವನ್ನು ಬಯಸುವದೂ) ಕಂಡುಬಂದಿಲ್ಲ.[4] ಗಡಿಗೆಯೇ ಮುಂತಾದವುಗಳು ಭಾವರೂಪವೆಂದು (ಒಪ್ಪಿ)ದರೆ, (ಅವು) ಹುಟ್ಟುವಾಗ ತಮ್ಮ ತೋರಿಕೆಗೆ ಮಾತ್ರ ಕಾರಣ

---

1. ವಚನಪ್ರಮಾಣಕ್ಕಿಂತಲೂ ತರ್ಕಕ್ಕೆ ಹೊಂದುಗೆಯಾಗಿದ್ದರೆ ಏತಕ್ಕೆ ಒಪ್ಪಬಾರದು ?–ಎಂಬ ಪೂರ್ವಪಕ್ಷವನ್ನು ತೆಗೆದಿರುವದು ವೈಶೇಷಿಕರ ಮತವು ಯುಕ್ತಿವಿರುದ್ಧವೂ ಆಗಿದೆ ಎಂದು ತಿಳಿಸುವದಕ್ಕೆ

2. ಎರಡು ಪರಮಾಣುಗಳು ಸೇರಿ ಆಗಿರುವ ದ್ರವ್ಯವು ದ್ವ್ಯಣುಕವು.

3. ಯಾವದರೊಡನೆ ತೀರ ಕೂಡಿಕೊಂಡೇ ಕಾರ್ಯವು ಹುಟ್ಟುವದೋ ಅದು ಸಮವಾಯಿಕಾರಣವು; ಉದಾಹರಣೆಗೆ ಮಣ್ಣು ಮಡಕೆಗೆ ಸಮವಾಯಿಕಾರಣ. ಕಾರ್ಯದೊಡನಾಗಲಿ ಕಾರಣದೊಡನಾಗಲಿ ಒಂದೇ ಪದಾರ್ಥದಲ್ಲಿ ತೀರ ಸೇರಿಕೊಂಡು ಕಾರಣವಾಗಿರುವದು ಅಸಮವಾಯಿಕಾರಣವು; ಉದಾಹರಣೆಗೆ ಮಣ್ಣಿನ ರೂಪವು ಗಡಿಗೆಯ ರೂಪಕ್ಕೆ ಅಸಮವಾಯಿಕಾರಣವು. ಈ ಎರಡೂ ಅಲ್ಲದ ಕಾರಣವು ನಿಮಿತ್ತಕಾರಣವು; ಉದಾಹರಣೆಗೆ ದಂಡಚಕ್ರಾದಿಗಳು ಗಡಿಗೆಗೆ ನಿಮಿತ್ತಕಾರಣವು–ಎಂದು ವೈಶೇಷಿಕರು ಹೇಳುತ್ತಾರೆ. ಸಮವಾಯಿಕಾರಣವನ್ನು ಉಪಾದಾನಕಾರಣವೆಂದೂ ಮಿಕ್ಕದ್ದೆಲ್ಲವನ್ನೂ ನಿಮಿತ್ತಕಾರಣವೆಂದೂ ವೇದಾಂತಿಗಳು ಕರೆಯುತ್ತಾರೆ.

4. ದ್ವ್ಯಣುಕಾದಿಗಳು ಮೊದಲು ಅಭಾವ, ಎಂದರೆ ಅತ್ಯಂತವಾಗಿ ಇರುವದಿಲ್ಲ. ಆದ್ದರಿಂದ ಅವಕ್ಕೆ ಉತ್ಪತ್ತಿಯಾಗಲಿ ಆ ಉತ್ಪತ್ತಿಗಾಗಿ ಕಾರಣಾಪೇಕ್ಷೆಯಾಗಲಿ ಇರುವದಕ್ಕೆ ಅವಕಾಶವಿಲ್ಲ. ಹಾಗಿದ್ದರೆ ಮೊಲದಕೊಂಬಿಗೂ ಹೀಗೆ ಉತ್ಪತ್ತಿಯಾಗಬೇಕಾದೀತು.

ವನ್ನು ಬಯಸಿ ಹುಟ್ಟುತ್ತವೆ ಎಂದು ತಿಳಿಯುವದು ಶಕ್ಯವಾಗಿರುತ್ತದೆ.[1] ಇದಲ್ಲದೆ ಅಸತ್ತು ಸತ್ತಾದರೆ, ಮತ್ತು ಸತ್ತು ಅಸತ್ತಾದರೆ ಪ್ರಮಾಣಪ್ರಮೇಯವ್ಯವಹಾರಗಳಲ್ಲಿ (ಹೀಗೆಯೇ ಇದು ಎಂಬ) ನಂಬಿಕೆಯೂ ಯಾವದರಲ್ಲಿಯೂ ಯಾರಿಗೂ ಉಂಟಾಗದೆ ಹೋದೀತು ; ಏಕೆಂದರೆ (ಆ ಸಂದರ್ಭದಲ್ಲಿ) ಇರುವದು ಇದ್ದೇ ಇರುತ್ತದೆ, ಇಲ್ಲದ್ದು ಇರುವದೇ ಇಲ್ಲ–ಎಂಬ ನಿಶ್ಚಯವೇ ಆಗದೆಹೋಗುತ್ತದೆ.[2]

(ಭಾಷ್ಯ)

೫೪೫. ಕಿಂಚ ಉತ್ಪದ್ಯತೇ ಇತಿ ದ್ವ್ಯಣುಕಾದೇರ್ದ್ರವ್ಯಸ್ಯ ಸ್ವಕಾರಣಸತ್ತಾಸಮ್ಬನ್ಧಮ್ ಆಹುಃ । ಪ್ರಾಗುತ್ಪತ್ತೇಶ್ಚ ಅಸತ್ ಪಶ್ಚಾತ್ ಕಾರಣವ್ಯಾಪಾರಮ್[3] ಅಪೇಕ್ಷ್ಯ ಸ್ವಕಾರಣೈಃ ಪರಮಾಣುಭಿಃ ಸತ್ತಯಾ ಚ ಸಮವಾಯಲಕ್ಷಣೇನ ಸಮ್ಬನ್ಧೇನ ಸಂಬಧ್ಯತೇ। ಸಮ್ಬದ್ಧಂ ಸತ್ ಕಾರಣಸಮವೇತಂ ಸತ್ ಭವತಿ ಇತಿ[4] । ತತ್ರ ವಕ್ತವ್ಯಂ ಕಥಮ್ ಅಸತಃ ಸ್ವಂ ಕಾರಣಂ ಭವೇತ್, ಸಮ್ಬನ್ಧೋ ವಾ ಕೇನಚಿತ್ ಸ್ಯಾತ್। ನ ಹಿ ವನ್ಧ್ಯಾಪುತ್ರಸ್ಯ ಸ್ವಂ ಕಾರಣಂ ಸಮ್ಬನ್ಧೋ ವಾ[5] ಕೇನಚಿತ್ ಪ್ರಮಾಣತಃ ಕಲ್ಪಯಿತುಂ ಶಕ್ಯತೇ ॥

(ಭಾಷ್ಯಾರ್ಥ)

ಇದಲ್ಲದೆ ದ್ವ್ಯಣುಕವೇ ಮುಂತಾದ (ಕಾರ್ಯ)ದ್ರವ್ಯವು ಹುಟ್ಟುತ್ತದೆ ಎಂದರೆ ತನ್ನ ಕಾರಣಕ್ಕೂ ಸತ್ತೆಗೂ ಸಂಬದ್ಧವಾಗುವದು ಎಂದು (ವೈಶೇಷಿಕರು) ಹೇಳುತ್ತಾರೆ. (ಇದರ ವಿವರ): ಹುಟ್ಟುವದಕ್ಕೆ ಮೊದಲು (ಕಾರ್ಯವು) ಅಸತ್ತಾಗಿದ್ದು, ಆಮೇಲೆ ಕಾರಣವ್ಯಾಪಾರವನ್ನು ಬಯಸಿ, ತನ್ನ ಕಾರಣವಾದ ಪರಮಾಣು

---

1. ಇದು ಸಾಂಖ್ಯಮತವಲ್ಲ ; ವ್ಯವಹಾರದೃಷ್ಟಿಯಿಂದ ಮೊದಲು ಕಾರಣರೂಪದಿಂದ ಇದ್ದುಕೊಂಡೇ ಇರುವ ವಸ್ತುಗಳೇ ಅಭಿವ್ಯಕ್ತವಾಗಿ ಕಾರ್ಯವೆಂಬ ಹೆಸರನ್ನು ಪಡೆಯುತ್ತವೆ ಎಂಬ ವೇದಾಂತಿಯ ಸತ್ಕಾರ್ಯವಾದವಿದು. ಕಾರ್ಯಾಕಾರಕ್ಕೆ ತಿರುಗುವದಕ್ಕೆ ಕಾರಣವುಬೇಕು, ಕಾರ್ಯಾಕಾರವೂ ಕಾರಣಸ್ವರೂಪವಾಗಿಯೇ ಇರುತ್ತದೆ ಎಂದು ಭಾವ. ಸೂ.ಭಾ. ೨-೧-೧೮.

2. ಆಗ ಯಾವ ವಸ್ತು ಯಾವ ರೂಪವನ್ನಾದರೂ ತಳೆಯಬಹುದಾಗಿರುವದರಿಂದ ಪ್ರಮಾಣವು ಯಾವದೊಂದನ್ನೂ ನಿಶ್ಚಯಿಸಲಾರದು.

3. ‘ ಸ್ವಕಾರಣವ್ಯಾಪಾರಮ್ ’ ನಿ|| ; ‘ ಕಾರಣಮ್ ’ ಮ||

4. ಮು||ದಲ್ಲಿ ಮಾತ್ರ ಇದೆ ; ಇದ್ದರೆ ಒಳ್ಳೆಯದು.

5. “ ಸತಾ ಸಮ್ಬನ್ಧಃ ಕಾರಣಂ ವಾ ” ನಿ|| ; ಹಿಂದೆಯೂ ‘ ಸ್ವಂ ಕಾರಣಂ ’ ಎಂಬಲ್ಲಿ ‘ ಸತ್ ಕಾರಣಂ ’ ಎಂದು ನಿ||. ಈಗ ನಾವು ಕೊಟ್ಟಿರುವ ಪಾಠವೇ ಮೇಲು.

ಗಳೊಡನೆಯೂ ಸತ್ತೆಯೊಡನೆಯೂ[1] ಸಮವಾಯವೆಂಬ ಸಂಬಂಧದಿಂದ ಸಂಬದ್ಧವಾಗುತ್ತದೆ. (ಹಾಗೆ ಸಂಬದ್ಧವಾಗಿ ಕಾರಣಸಮವೇತವಾಗಿ ಸತ್ತಾಗುತ್ತದೆ (ಎಂಬುದು ವೈಶೇಷಿಕರ ಮತವು). ಇಲ್ಲಿ ಅಸತ್ತಾದದ್ದಕ್ಕೆ ತನ್ನದಾದ ಕಾರಣವು ಹೇಗೆ ಇರಬೇಕು, ಏತರೊಡನೆಯಾದರೂ ಸಂಬಂಧವಾದರೂ (ಹೇಗೆ) ಆಗಬೇಕು ?—ಎಂಬುದನ್ನು (ಅವರು) ತಿಳಿಸಿಕೊಡಬೇಕು. ಬಂಜೆಯ ಮಗನಿಗೆ ತನ್ನದಾದ ಕಾರಣವಾಗಲಿ ಏತರೊಡನೆಯಾದರೂ ಸಂಬಂಧವಾಗಲಿ (ಇರುವದೆಂದು) ಯಾರಿಂದಲೂ ಪ್ರಮಾಣದ (ಆಧಾರ)ದಿಂದ ಕಲ್ಪಿಸುವದು ಆಗಲಾರದಷ್ಟೆ.[2]

(ಭಾಷ್ಯ)

೫೭೬. ನನು ನೈವಂ ವೈಶೇಷಿಕೈಃ ಅಭಾವಸ್ಯ ಸಮ್ಬನ್ಧಃ ಕಲ್ಪ್ಯತೇ । ದ್ವ್ಯಣುಕಾದೀನಾಂ ಹಿ ದ್ರವ್ಯಾಣಾಂ ಸ್ವಕಾರಣೇನ ಸಮವಾಯಲಕ್ಷಣಃ ಸಮ್ಬನ್ಧಃ ಸತಾಮೇವ ಉಚ್ಯತೇ ಇತಿ । ನ । ಸಮ್ಬನ್ಧಾತ್ ಪ್ರಾಕ್ ಸತ್ತ್ವಾನಭ್ಯುಪಗಮಾತ್ । ನ ಹಿ ವೈಶೇಷಿಕೈಃ ಕುಲಾಲದಣ್ಡಚಕ್ರಾದಿವ್ಯಾಪಾರಾತ್ ಪ್ರಾಕ್ ಘಟಾದೀನಾಮ್ ಅಸ್ತಿತ್ವಮ್ ಇಷ್ಯತೇ । ನ ಚ ಮೃದ ಏವ ಘಟಾದ್ಯಾಕಾರಪ್ರಾಪ್ತಿಮ್ ಇಚ್ಛನ್ತಿ । ತತಶ್ಚ ಅಸತ ಏವ ಸಮ್ಬನ್ಧಃ ಪಾರಿಶೇಷ್ಯಾತ್ ಇಷ್ಟೋ ಭವತಿ ॥

(ಭಾಷ್ಯಾರ್ಥ)

(ವೈಶೇಷಿಕ):—ವೈಶೇಷಿಕರು ಹೀಗೆ ಅಭಾವಕ್ಕೆ ಸಂಬಂಧವನ್ನು ಕಲ್ಪಿಸುವದೇ ಇಲ್ಲ. ದ್ವ್ಯಣುಕವೇ ಮುಂತಾದ ದ್ರವ್ಯಗಳಿಗೇ ಅಲ್ಲವೆ, ತಮ್ಮ ಕಾರಣದೊಡನೆ ಸಮವಾಯವೆಂಬ ಸಂಬಂಧ(ವಿರುವದೆಂದು ಅವರು) ಹೇಳುತ್ತಾರೆ ?

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಸಂಬಂಧ(ವಾಗುವ)ದಕ್ಕಿಂತ ಮುಂಚೆ (ಕಾರ್ಯವು) ಇರುವದೆಂದು (ಅವರು) ಒಪ್ಪುವದಿಲ್ಲ. ಕುಂಬಾರ, ದಂಡ, ಚಕ್ರ–ಮುಂತಾದವುಗಳು ಕೆಲಸಮಾಡುವದಕ್ಕೆ ಮುಂಚೆ–ಗಡಿಗೆಯೇ ಮುಂತಾದವುಗಳು ಇರುವವೆಂದೇನೂ ವೈಶೇಷಿಕರು ಒಪ್ಪಿರುವದಿಲ್ಲ ; ಮಣ್ಣೇ ಗಡಿಗೆ ಮುಂತಾದವುಗಳ ಆಕಾರವನ್ನು ಪಡೆಯುವದೆಂದೂ ಅವರು ಹೇಳುವದಿಲ್ಲ.[3] ಆದ್ದರಿಂದ (ಇವೆರಡೂ

---

1. ಸತ್ತೆಯೆಂಬುದು ಎಲ್ಲಕ್ಕೂ ಹೆಚ್ಚಿನ ಸಾಮಾನ್ಯವು, ಸತ್ತೆಯ ಸಂಬಂಧದಿಂದಲೇ ವಸ್ತುಗಳು ಇವೆ ಎನಿಸಿಕೊಳ್ಳುತ್ತವೆ ಎಂಬುದು ವೈಶೇಷಿಕರ ಪ್ರಕ್ರಿಯೆ.

2. ವೈಶೇಷಿಕಮತವನ್ನು ಸೂ.ಭಾ. ೨-೨-೧೨ ರಿಂದ ೧೭ರಲ್ಲಿಯೂ ಖಂಡಿಸಿದೆ.

3. ಕಾರ್ಯವು ಕಾರಣರೂಪದಿಂದ ಮೊದಲೇ ಇರುವದೆಂಬ ವೇದಾಂತಿಗಳ ಮತವನ್ನಾಗಲಿ ಕಾರಣವು ಕಾರ್ಯದ ಆಕಾರವನ್ನು ಹೊಸದಾಗಿ ತಳೆಯುವದೆಂಬ ಸಾಂಖ್ಯರ ಮತವನ್ನಾಗಲಿ ವೈಶೇಷಿಕರು ಒಪ್ಪುವದಿಲ್ಲ.

ಹೋದರೆ) ಉಳಿಯುವದೇನೆಂದರೆ ಅಸತ್ತಾದ (ಕಾರ್ಯಕ್ಕೇ) ಸಂಬಂಧವನ್ನು (ಅವರು) ಒಪ್ಪಿದಾರೆಂದು ಆಗುತ್ತದೆ.

(ಭಾಷ್ಯ)

೫೪೭. ನನು ಅಸತೋಽಪಿ ಸಮವಾಯಲಕ್ಷಣಃ ಸಂಬನ್ಧಃ ನ ವಿರುದ್ಧಃ[1] । ನ । ವನ್ಧ್ಯಾಪುತ್ರಾದೀನಾಮ್ ಅದರ್ಶನಾತ್ । ಘಟಾದೇರೇವ ಪ್ರಾಗಭಾವಸ್ಯ ಸ್ವಕಾರಣಸಮ್ಬನ್ಧೋ ಭವತಿ ನ ವನ್ಧ್ಯಾಪುತ್ರಾದೇಃ ಅಭಾವಸ್ಯ ತುಲ್ಯತ್ವೇಽಪಿ ಇತಿ ವಿಶೇಷಃ ಅಭಾವಸ್ಯ ವಕ್ತವ್ಯಃ । ಏಕಸ್ಯಾಭಾವಃ, ದ್ವಯೋರಭಾವಃ, ಸರ್ವಸ್ಯಾಭಾವಃ, ಪ್ರಾಗಭಾವಃ, ಪ್ರಧ್ವಂಸಾಭಾವಃ, ಇತರೇತರಾಭಾವಃ, ಅತ್ಯನ್ತಾಭಾವಃ ಇತಿ ಲಕ್ಷಣತಃ ನ ಕೇನಚಿತ್ ವಿಶೇಷಃ ದರ್ಶಯಿತುಂ ಶಕ್ಯಃ । ಅಸತಿ ಚ ವಿಶೇಷೇ ಘಟಸ್ಯ ಪ್ರಾಗಭಾವ ಏವ ಕುಲಾಲಾದಿಭಿಃ ಘಟಭಾವಮ್ ಆಪದ್ಯತೇ[2], ಸಮ್ಬಧ್ಯತೇ ಚ ಭಾವೇನ ಕಪಾಲಾಖ್ಯೇನ, ಸಮ್ಬದ್ಧಶ್ಚ ಸರ್ವವ್ಯವಹಾರಯೋಗ್ಯಶ್ಚ ಭವತಿ। ನ ತು ಘಟಸ್ಯೈವ ಪ್ರಧ್ವಂಸಾಭಾವಃ ಅಭಾವತ್ವೇ ಸತ್ಯಪಿ ಇತಿ ಪ್ರಧ್ವಂಸಾದ್ಯಭಾವಾನಾಂ[3] ನ ಕ್ವಚಿತ್ ವ್ಯವಹಾರಯೋಗ್ಯತ್ವಮ್ ಪ್ರಾಗಭಾವಸ್ಯೈವ ದ್ವ್ಯಣುಕಾದಿದ್ರವ್ಯಾಖ್ಯಸ್ಯ ಉತ್ಪತ್ತ್ಯಾದಿವ್ಯವಹಾರಾರ್ಹತ್ವಮ್ ಇತ್ಯೇತತ್ ಅಸಮಞ್ಜಸಮ್ । ಅಭಾವತ್ವಾವಿಶೇಷಾತ್ ಅತ್ಯನ್ತಪ್ರಧ್ವಂಸಾಭಾವಯೋರಿವ[4] ॥

(ಭಾಷ್ಯಾರ್ಥ)

(ವೈಶೇಷಿಕ) :—ಅಸತ್ತಾಗಿರುವ (ವಸ್ತುವಿಗೂ) **ಸಮವಾಯರೂಪವಾದ ಸಂಬಂಧ**(ವಿರುವದು) ವಿರುದ್ಧವಲ್ಲವಲ್ಲ ?

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಬಂಜೆಯ ಮಗನೇ ಮುಂತಾದ (ಅಸತ್ಪದಾರ್ಥಗಳಿಗೆ ಈ ಸಂಬಂಧವಿರುವದು) ಕಂಡುಬಂದಿಲ್ಲ. ಅಭಾವತ್ವವು ಸಮಾನವಾದರೂ ಗಡಿಗೆಯೇ ಮುಂತಾದವುಗಳ ಪ್ರಾಗಭಾವಕ್ಕೆ ಸ್ವಕಾರಣಸಂಬಂಧವಾಗುವದೇ ಹೊರತು ಬಂಜೆಯ ಮಗನೇ ಮುಂತಾದದ್ದಕ್ಕೆ ಆಗುವದಿಲ್ಲ ಎಂದು (ನೀವು) ಅಭಾವದಲ್ಲಿ ವಿಶೇಷವನ್ನು ಹೇಳಬೇಕಾಗುತ್ತದೆ. **ಒಂದರ ಅಭಾವ, ಎರಡರ ಅಭಾವ, ಎಲ್ಲದರ ಅಭಾವ, ಪ್ರಾಗಭಾವ, ಪ್ರಧ್ವಂಸಾಭಾವ, ಇತರೇತರಾ**

---

1. ‘ ವಿರುಧ್ಯತೇ ’ ಮ॥
2. ‘ ಆಪಾದ್ಯತೇ ’ ಎಂದಿದ್ದರೆ ಚೆನ್ನಾಗಿತ್ತೆಂದು ತೋರುವದು.
3. ‘ ಪ್ರಧ್ವಂಸಾಭಾವಸ್ಯ’ ಮ॥
4. ‘ ಅತ್ಯನ್ತಾಭಾವಪ್ರಧ್ವಂಸಾಭಾವಯೋರಿವ ’ ಮ॥ ಮೈ॥

**ಭಾವ, ಅತ್ಯಂತಾಭಾವ–ಎಂದು (ಅಭಾವಗಳಿಗೆ) ಲಕ್ಷಣದಿಂದ ವಿಶೇಷವನ್ನು ತೋರಿಸುವದಕ್ಕೆ ಯಾರಿಂದಲೂ ಆಗಲಾರದು.**[1] ಅವುಗಳಲ್ಲಿ (ಯಾವ ವಿಶೇಷವೂ ಇಲ್ಲದಿದ್ದರೂ ಗಡಿಗೆಯ ಪ್ರಾಗಭಾವವೇ ಕುಂಬಾರನೇ ಮುಂತಾದ(ಕಾರಣ ಗಳಿಂದ) ಗಡಿಗೆಯ ರೂಪವನ್ನು ಪಡೆಯುವಂತೆ (ಮಾಡಲ್ಪಡು)ತ್ತದೆ, ಕಪಾಲವೆಂಬ ಭಾವರೂಪ(ಕಾರಣ)ದೊಡನೆ ಸಂಬದ್ಧವಾಗುತ್ತದೆ, ಮತ್ತು ಹಾಗೆ ಸಂಬದ್ಧವಾದ (ಬಳಿಕ) ಸಕಲವ್ಯವಹಾರಕ್ಕೂ ತಕ್ಕದ್ದಾಗುತ್ತದೆ; ಎಂದೂ ಆದರೆ ಅದೇ ಗಡಿಗೆಯ ಪ್ರಧ್ವಂಸಾಭಾವವು (ತನ್ನಲ್ಲಿ) ಅಭಾವತ್ವವಿದ್ದರೂ (ಹಾಗಾಗುವ)ದಿಲ್ಲವಾಗಿ ಪ್ರಧ್ವಂಸಾಭಾವವೇ ಮುಂತಾದ (ಅಭಾವಗಳು) ಮೇಲೆ ಹೇಳಿದಂತೆ, ಎಲ್ಲಿಯೂ ವ್ಯವಹಾರ ಯೋಗ್ಯವಾಗುವದಿಲ್ಲವೆಂದೂ ದ್ವ್ಯಣುಕವೇ ಮುಂತಾದ ದ್ರವ್ಯವೆಂಬುದರ ಪ್ರಾಗಭಾವವು ಮಾತ್ರ ಉತ್ಪತ್ತಿಯೇ ಮುಂತಾದ ವ್ಯವಹಾರಕ್ಕೆ ತಕ್ಕದ್ದೆಂದೂ (ಹೇಳುವ) ಈ (ವಾದವು) ಅಸಮಂಜಸವು. ಏಕೆಂದರೆ (ಪ್ರಾಗಭಾವವೂ) ಅತ್ಯಂತಾಭಾವ, ಪ್ರಧ್ವಂಸಾಭಾವಗಳಂತೆ[2] ಅಭಾವವೇ ಹೊರತು (ಅದರಲ್ಲಿ ಯಾವ) ವಿಶೇಷವೂ ಇರುವದಿಲ್ಲ.

## ಸಾಂಖ್ಯಮತಖಂಡನೆ

### (ಭಾಷ್ಯ)

೫೪೮. ನನು ನೈವ ಅಸ್ಮಾಭಿಃ ಪ್ರಾಗಭಾವಸ್ಯ ಭಾವಾಪತ್ತಿಃ ಉಚ್ಯತೇ। ಭಾವಸ್ಯೈವ[3] ತರ್ಹಿ ಭಾವಾಪತ್ತಿಃ। ಯಥಾ ಘಟಸ್ಯ ಘಟಾಪತ್ತಿಃ ಪಟಸ್ಯ ವಾ ಪಟಾಪತ್ತಿಃ[4]। ಏತದಪಿ ಅಭಾವಸ್ಯ ಭಾವಾಪತ್ತಿವದೇವ ಪ್ರಮಾಣವಿರುದ್ಧಮ್। ಸಾಙ್ಖ್ಯಸ್ಯಾಪಿ ಯಃ ಪರಿಣಾಮಪಕ್ಷಃ ಸೋಽಪಿ ಅಪೂರ್ವಧರ್ಮೋತ್ಪತ್ತಿವಿನಾಶಾಙ್ಗೀಕರಣಾತ್ ವೈಶೇಷಿಕಪಕ್ಷಾತ್ ನ ವಿಶಿಷ್ಯತೇ। ಅಭಿವ್ಯಕ್ತಿತಿರೋಭಾವಾಙ್ಗೀಕರಣೇಽಪಿ

---

1. ಅಭಾವದಲ್ಲಿ ಯಾವ ವಿಶೇಶವೂ ಇಲ್ಲವೆಂಬುದನ್ನು ತೈ.ಭಾ.ಭಾ. ೯ ರಲ್ಲಿ ನೋಡಿ.

2. ಪ್ರಾಗಭಾವ (ಹಿಂದಿಲ್ಲದ್ದು), ಪ್ರಧ್ವಂಸಾಭಾವ (ಹಾಳಾದಮೇಲೆ ಇಲ್ಲದಿರುವದು), ಇತರೇತರಾಭಾವ (ಒಂದರಲ್ಲೊಂದು ಇಲ್ಲದಿರುವದು), ಅತ್ಯಂತಾಭಾವ (ತೀರ ಇಲ್ಲದ್ದು) ಎಂಬಿವಕ್ಕೆ ಪ್ರತಿಯೋಗಿಯ ದೃಷ್ಟಿಯಿಂದ ಲಕ್ಷಣಭೇದವನ್ನು ವೈಶೇಷಿಕರು ಹೇಳುವರಾದರೂ ಸ್ವರೂಪದಿಂದ ಯಾವ ವಿಶೇಷವನ್ನೂ ಅವರು ತೋರಿಸಲಾರರು ಎಂದು ಭಾವ.

3. 'ಹಿ' ಎಂದು ಹೆಚ್ಚಾಗಿ ಅ||ನಿ||

4. 'ಪಟಸ್ಯ ವಾ ಪಟಾಪತ್ತಿಃ' ಇಷ್ಟು ಮು||ದಲ್ಲಿಲ್ಲ.

ಅಭಿವ್ಯಕ್ತಿತಿರೋಭಾವಯೋಃ ವಿದ್ಯಮಾನತ್ವಾವಿದ್ಯಮಾನತ್ವನಿರೂಪಣೇ ಪೂರ್ವವದೇವ ಪ್ರಮಾಣವಿರೋಧಃ । ಏತೇನ ಕಾರಣಸ್ಯೈವ ಸಂಸ್ಥಾನಮ್ ಉತ್ಪತ್ತ್ಯಾದಿ ಇತ್ಯೇತದಪಿ ಪ್ರತ್ಯುಕ್ತಮ್ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :—ಪ್ರಾಗಭಾವವು ಭಾವರೂಪವಾಗುವದೆಂದು ನಾವು ಹೇಳಲೇ ಇಲ್ಲವಲ್ಲ !

(ಸಿದ್ಧಾಂತಿ): - ಹಾಗಾದರೆ ಭಾವವೇ ಭಾವವಾಗುವದೆಂದು ಹೇಳಿದಂತೆ ಆಯಿತು ; ಗಡಿಗೆಯು ಗಡಿಗೆಯಾಗುವದು ಅಥವಾ ಬಟ್ಟೆಯು ಬಟ್ಟೆಯಾಗುವದು ಹೇಗೋ (ಹಾಗೆಯೇ ಇದು). ಅಭಾವವು ಭಾವವಾಗುವದೆಂಬ (ವಾದ)ದಂತೆ ಇದೂ ಪ್ರಮಾಣವಿರುದ್ಧವಾಗುತ್ತದೆ.[1] ಸಾಂಖ್ಯನು (ಒಪ್ಪಿರುವ) **ಪರಿಣಾಮಪಕ್ಷ**ವುಂಟಲ್ಲ, (ಅದರಲ್ಲಿ) ಮೊದಲಿಲ್ಲದ ಧರ್ಮದ ಉತ್ಪತ್ತಿಯನ್ನೂ (ಬಳಿಕ ಅದರ) ನಾಶವನ್ನೂ ಒಪ್ಪಿರುವದರಿಂದ, ಅದೂ ವೈಶೇಷಿಕಪಕ್ಷಕ್ಕಿಂತ ಬೇರೆಯಾಗಿರುವದಿಲ್ಲ.[2] (ಕಾರ್ಯವು) ತೋರುವದು, ಮರೆಯಾಗುವದು-(ಇವುಗಳನ್ನು ಮಾತ್ರ ಸಾಂಖ್ಯರು) ಒಪ್ಪಿದರೂ ಆ ಅಭಿವ್ಯಕ್ತಿತಿರೋಭಾವಗಳು (ಮೊದಲು) ಇರುವವೋ ಇಲ್ಲವೋ ಎಂದು ವಿಚಾರಮಾಡಿದರೆ ಮೊದಲಿನಂತೆಯೇ ಪ್ರಮಾಣಕ್ಕೆ ವಿರೋಧವಾಗುತ್ತದೆ.[3] ಈ (ಖಂಡನೆಯಿಂದ) ಉತ್ಪತ್ತಿಯೇ ಮುಂತಾದದ್ದು ಕಾರಣದ್ದೇ (ಒಂದು) ಆಕಾರವು ಎಂಬೀ (ವಾದವನ್ನೂ) ತಳ್ಳಿಹಾಕಿದಂತೆ ಆಯಿತು.[4]

---

1. ದ್ವ್ಯಣುಕದ ಅಭಾವವು ಸಮವಾಯಿಕಾರಣವಲ್ಲ, ಎರಡು ಪರಮಾಣುಗಳೇ ದ್ವ್ಯಣುಕವಾಗುವವು—ಎಂದು ವೈಶೇಷಿಕನ ಅಭಿಪ್ರಾಯವಾದರೂ ಮೊದಲು ದ್ವ್ಯಣುಕವಿರಲಿಲ್ಲವೆಂದರೆ ಅಭಾವವು ಭಾವವಾಯಿತೆಂದು ಒಪ್ಪಬೇಕಾಗುವದು ; ಇದ್ದಿತೆಂದರೆ ಭಾವವೇ ಭಾವವಾಗುತ್ತದೆ ಎಂದಂತಾಗುತ್ತದೆ, ಅಪಸಿದ್ಧಾಂತವೂ ಪ್ರಮಾಣವಿರೋಧವೂ ಆಗುತ್ತದೆ.

2. ಇಲ್ಲದಿದ್ದ ಮಹತ್ತು ಪ್ರಧಾನದಿಂದ ಉಂಟಾಗುವದೆಂದರೆ ಅಸತ್ಕಾರ್ಯವಾದವನ್ನು ಒಪ್ಪಿದಂತಾಗಿ ಅಪಸಿದ್ಧಾಂತವಾಗುವದು ; ಮೊದಲೇ ಇದ್ದದ್ದು ಉಂಟಾಯಿತೆಂದರೆ ಪ್ರಮಾಣ ವಿರೋಧವಾಗುವದು—ಎಂದು ಭಾವ. ಸತ್ತಿಗೂ ಉತ್ಪತ್ತಿಯಿಲ್ಲವೆಂಬುದನ್ನು ಮಾ. ಕಾ. ಭಾ. ೪-೪ರಲ್ಲಿ ಕಾಣಬಹುದು.

3. ಅಭಿವ್ಯಕ್ತಿಯೂ ತಿರೋಭಾವವೂ ಮೊದಲು ಇಲ್ಲದೆ ಉಂಟಾದರೆ ಅಸತ್ಕಾರ್ಯವಾದ ; ಇದ್ದು ಉಂಟಾದರೆ ಪ್ರಮಾಣವಿರೋಧ.

4. ಆಕಾರವೂ ಮೊದಲಿಲ್ಲದೆ ಉಂಟಾಗುತ್ತದೆಯಾದ್ದರಿಂದ ಈ ಪಕ್ಷದಲ್ಲಿಯೂ ಅಸತ್ಕಾರ್ಯವಾದವನ್ನು ಒಪ್ಪಿದಂತಾಗುತ್ತದೆ.

(ಭಾಷ್ಯ)

೫೪೯. ಪಾರಿಶೇಷ್ಯಾತ್ ಸದೇಕಮೇವ ವಸ್ತು ಅವಿದ್ಯಯಾ ಉತ್ಪತ್ತಿ ವಿನಾಶಾದಿಧರ್ಮೈಃ ನಟವತ್ ಅನೇಕಧಾ ವಿಕಲ್ಪ್ಯತೇ ಇತೀದಂ ಭಾಗವತಂ ಮತಮ್ ಉಕ್ತಮ್ "ನಾಸತೋ ವಿದ್ಯತೇ ಭಾವಃ" (೨-೧೬) ಇತ್ಯಸ್ಮಿನ್ ಶ್ಲೋಕೇ। ಸತ್ಪ್ರತ್ಯಯಸ್ಯ ಅವ್ಯಭಿಚಾರಾತ್ ವ್ಯಭಿಚಾರಾಚ್ಚ ಇತರೇಷಾಮ್ ಇತಿ ॥

(ಭಾಷ್ಯಾರ್ಥ)

(ಈ ಮೂರು ಪಕ್ಷವೂ ಸರಿಯಲ್ಲವಾದ್ದರಿಂದ) ಉಳಿದ (ಪಕ್ಷವು ಯಾವ ಪೆಂದರೆ: **ಸತ್ತೆಂಬ ಒಂದೇ ವಸ್ತು ಅವಿದ್ಯೆಯಿಂದ ಉತ್ಪತ್ತಿ, ನಾಶ ಮುಂತಾದ ಧರ್ಮಗಳಿಂದ (ಕೂಡಿರುವಂತೆ) ನಟನ ಹಾಗೆ ಅನೇಕ ಪ್ರಕಾರ ಗಳಿಂದ ವಿಕಲ್ಪಿತವಾಗುತ್ತಿರುವದು.** ಹೀಗೆಂಬ ಈ **ಭಾಗವತಮತವನ್ನು**[1] "ನಾಸತೋ ವಿದ್ಯತೇ ಭಾವಃ" (೨-೧೬) ಎಂಬೀ ಶ್ಲೋಕದಲ್ಲಿ ಸತ್ಪ್ರತ್ಯಯವು (ಇದೆ ಎಂಬ ಅರಿವು) ಬೇರ್ಪಡದೆ ಇರುವದರಿಂದಲೂ ಉಳಿದ (ಅರಿವು)ಗಳು ಬೇರ್ಪಡುವದರಿಂದಲೂ (ಸತ್ತೊಂದೇ ನಿಜವಾದದ್ದು ಎಂದು) ಹೇಳಿರುತ್ತದೆ.

## ಅಜ್ಞಾನಿಗೆ ಕರ್ಮತ್ಯಾಗವು ಅಶಕ್ಯ, ಜ್ಞಾನಿಗೆ ಶಕ್ಯ

(ಭಾಷ್ಯ)

೫೫೦. ಕಥಂ ತರ್ಹಿ ಆತ್ಮನಃ ಅವಿಕ್ರಿಯತ್ವೇ ಅಶೇಷತಃ ಕರ್ಮಣಃ ತ್ಯಾಗಃ ನೋಪಪದ್ಯತೇ ಇತಿ ? ಯದಿ ವಸ್ತುಭೂತಾ ಗುಣಾಃ, ಯದಿ ವಾ ಅವಿದ್ಯಾಕಲ್ಪಿತಾಃ ತದ್ಧರ್ಮಃ ಕರ್ಮ। ತತ್ ಆತ್ಮನಿ ಅವಿದ್ಯಾಧ್ಯಾರೋಪಿತಮೇವ ಇತಿ ಅವಿದ್ವಾನ್ ನ ಹಿ ಕಶ್ಚಿತ್ ಕ್ಷಣಮಪ್ಯಶೇಷತಸ್ತ್ಯಕ್ತುಂ ಶಕ್ನೋತಿ (೩-೫) ಇತಿ ಉಕ್ತಮ್। ವಿದ್ವಾಂಸ್ತು ಪುನಃ ವಿದ್ಯಯಾ ಅವಿದ್ಯಾಯಾಂ ನಿವೃತ್ತಾಯಾಂ ಶಕ್ನೋತ್ಯೇವ ಅಶೇಷ ತಃ ಕರ್ಮ ಪರಿತ್ಯಕ್ತುಮ್ ಅವಿದ್ಯಾಧ್ಯಾರೋಪಿತಸ್ಯ ಶೇಷಾನುಪಪತ್ತೇಃ[2]। ನ ಹಿ ತೈಮಿರಿಕದೃಷ್ಟ್ಯಾ ಅಧ್ಯಾರೋಪಿತಸ್ಯ ದ್ವಿಚನ್ದ್ರಾದೇಃ ತಿಮಿರಾಪಗಮೇ ಶೇಷಃ ಅವ ತಿಷ್ಠತೇ। ಏವಂ ಚ ಸತಿ ಇದಂ ವಚನಮ್ ಉಪಪನ್ನಮ್ "ಸರ್ವಕರ್ಮಾಣಿಮನಸಾ" (೫-೧೩)ಇತ್ಯಾದಿ। "ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ"(೧೮-೪೫) "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ" (೧೮೪೬) ಇತಿ ಚ ॥

---

1. ಭಗವಂತನ ಮತವು ಭಗವಂತನ ಮತವೆಂಬ ಕಾರಣದಿಂದ ಮಾತ್ರವೇ ಮಾನ್ಯ ವಾಗಿಲ್ಲ, ಅದು ಯುಕ್ತಿಯುಕ್ತವೂ ಆಗಿದೆ—ಎಂದು ಹೇಳಿದಂತೆ ಆಯಿತು.

2. 'ಅವಶೇಷಾನುಪಪತ್ತೇಃ' ಮ॥

(ಭಾಷ್ಯಾರ್ಥ)

(ಆಕ್ಷೇಪ):—ಹಾಗಾದರೆ ಆತ್ಮನು ಅವಿಕ್ರಿಯನಾಗಿರುವಲ್ಲಿ ಕರ್ಮವನ್ನು ನಿಶ್ಶೇಷವಾಗಿ ಬಿಡುವದಕ್ಕೆ ಆಗುವದಿಲ್ಲ ಎಂಬುದು ಹೇಗೆ?

(ಪರಿಹಾರ):—**ಗುಣಗಳು ನಿಜವಾಗಿರಲಿ**[1], **ಅವಿದ್ಯಾಕಲ್ಪಿತವಾಗಿಯೇ ಇರಲಿ**[2], **ಕರ್ಮವು ಅವುಗಳ ಧರ್ಮವು**; ಆ (**ಧರ್ಮವು**) **ಆತ್ಮನಲ್ಲಿ ಅವಿದ್ಯೆಯಿಂದ ಆರೋಪಿತವೆಂದು** (ಆಗುತ್ತದೆ)**ಯಾದ್ದರಿಂದ ಅಜ್ಞನಾದವನು ಯಾವನೊಬ್ಬನೂ ಒಂದು ಕ್ಷಣವೂ** (**ಅದನ್ನು**) **ನಿಶ್ಶೇಷವಾಗಿ ಬಿಡಲಾರನು** (೩-೫) **ಎಂದು ಹೇಳಿರುತ್ತದೆ. ಆದರೆ ಜ್ಞಾನಿಯು ವಿದ್ಯೆಯಿಂದ ಅವಿದ್ಯೆಯು ತೊಲಗಲಾಗಿ ನಿಶ್ಶೇಷವಾಗಿ ಕರ್ಮವನ್ನು ಬಿಡುವದಕ್ಕೆ ಶಕ್ತನೇ ಆಗಿರುತ್ತಾನೆ; ಏಕೆಂದರೆ ಅವಿದ್ಯೆಯಿಂದ ಹುಟ್ಟುಗಟ್ಟಿದ್ದು** (**ವಿದ್ಯಾವಸ್ಥೆಯಲ್ಲಿ**) **ಉಳಿದುಕೊಳ್ಳುವದೆಂಬುದು ಹೊಂದುವದಿಲ್ಲ. ಕಣ್ಣು ಪರೆಯಿರುವವನ ದೃಷ್ಟಿಯಿಂದ ಹುಟ್ಟುಗಟ್ಟಿದ ಎರಡನೆಯ ಚಂದ್ರನೇ ಮುಂತಾದದ್ದರ ಶೇಷವು ಪರೆಯು ಹೋದಮೇಲೆ ಉಳಿದುಕೊಳ್ಳಲಾರದಷ್ಟೆ.**[3] ಹೀಗಾದ (ಪಕ್ಷದಲ್ಲಿ) "ಮನಸ್ಸಿನಿಂದ ಎಲ್ಲಾ ಕರ್ಮಗಳನ್ನೂ (ಸಂನ್ಯಾಸಮಾಡಿ)" (೫-೧೩) ಎಂದು ಮುಂತಾಗಿರುವ ಈ ವಚನವೂ ಮತ್ತು "ತನ್ನ ತನ್ನ ಕರ್ಮದಲ್ಲಿ ಅಭಿರತನಾದ ನರನು ಸಂಸಿದ್ಧಿಯನ್ನು ಹೊಂದುತ್ತಾನೆ" (೧೮-೪೫), "ತನ್ನ ಕರ್ಮದಿಂದ ಆತನನ್ನು ಅರ್ಚನೆಮಾಡಿದರೆ ಮಾನವನು ಸಿದ್ಧಿಯನ್ನು ಹೊಂದುತ್ತಾನೆ" (೧೮-೪೬) ಎಂಬುದೂ ಹೊಂದುಗಡೆಯಾಗುತ್ತದೆ.[4]

## ಕರ್ಮಸಿದ್ಧಿಯಾದ ಬಳಿಕ ನೈಷ್ಕರ್ಮ್ಯಸಿದ್ಧಿಯು ದೊರೆಯುವ ಬಗೆ

(ಭಾಷ್ಯ)

೫೫೧. ಯಾ [5] **ಕರ್ಮಜಾ ಸಿದ್ಧಿಃ ಉಕ್ತಾ ಜ್ಞಾನನಿಷ್ಠಾಯೋಗ್ಯತಾಲಕ್ಷಣಾ**

---

1. **ಸಾಂಖ್ಯರ** ಮತವಿದು.

2. ವೇದಾಂತಿಗಳ ಮತವಿದು.

3 ಜ್ಞಾನಿಗೂ ಒಂದಿಷ್ಟು ಅವಿದ್ಯೆಯು ಉಳಿದುಕೊಂಡಿರುವದೆಂಬ ಕೆಲವರು ವೇದಾಂತಿಗಳ ವಾದವು ಆಚಾರ್ಯರಿಗೆ ಒಪ್ಪಿಲ್ಲ.

4. 'ತನ್ನ ಕರ್ಮ' ಎಂಬುದು ಅವಿದ್ಯೆಯ ದೃಷ್ಟಿಯಿಂದ, ಗುಣಗಳ ಧರ್ಮವಾದ ಕರ್ಮವನ್ನು ಆತ್ಮನಲ್ಲಿ ಆರೋಪಿಸುವ ಅವಿದ್ಯಾದೃಷ್ಟಿಯಿಂದ, ಆಡಿದ ಮಾತು; 'ಎಲ್ಲಾ ಕರ್ಮಗಳನ್ನೂ ಸಂನ್ಯಾಸಮಾಡಿ' ಎಂಬುದು ಆತ್ಮನಲ್ಲಿ ಯಾವ ಕರ್ಮವೂ ಇಲ್ಲವೆಂದು ನಿಶ್ಚಯಿಸುವ ವಿದ್ಯಾದೃಷ್ಟಿಯಿಂದ ಹೇಳಿದ್ದು ಎಂದು ಭಾವ.

5. ಇದರ ಮುಂದೆ 'ಚ' ಎಂದಿರುವ ಪಾಠಕ್ಕಿಂತ ಈ ಮ||ಮೈ|| ಪಾಠವೇ ಮೇಲು.

ತಸ್ಯಾಃ ಫಲಭೂತಾ ನೈಷ್ಕರ್ಮ್ಯಸಿದ್ಧಿಃ ಜ್ಞಾನನಿಷ್ಠಾಲಕ್ಷಣಾ ಚ ವಕ್ತವ್ಯಾ ಇತಿ ಶ್ಲೋಕಃ ಆರಭ್ಯತೇ—

(ಭಾಷ್ಯಾರ್ಥ)

**ಜ್ಞಾನನಿಷ್ಠಾಯೋಗ್ಯತೆ ಎಂಬ ಕರ್ಮದಿಂದಾಗುವ[1] ಸಿದ್ಧಿಯನ್ನು ಹೇಳಿದ್ದಾಯಿತಷ್ಟೆ; ಆ (ಸಿದ್ಧಿ)ಗೆ ಫಲವಾಗಿರುವ ಜ್ಞಾನನಿಷ್ಠೆ ಎಂಬ ನೈಷ್ಕರ್ಮ್ಯಸಿದ್ಧಿಯನ್ನೂ ಹೇಳಬೇಕೆಂದು (ಈ) ಶ್ಲೋಕವನ್ನು ಆರಂಭಿಸಿದೆ :—**

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥೪೯॥**

೪೯. ಎಲ್ಲೆಲ್ಲಿಯೂ ಅಸಕ್ತಬುದ್ಧಿಯಾದವನು ಜಿತಾತ್ಮನೂ ವಿಗತಸ್ಪೃಹನೂ ಆಗಿ ಪರಮನೈಷ್ಕರ್ಮ್ಯಸಿದ್ಧಿಯನ್ನು ಸಂನ್ಯಾಸದಿಂದ ಪಡೆದುಕೊಳ್ಳುತ್ತಾನೆ.

(ಭಾಷ್ಯ)

೫೫೨. ಅಸಕ್ತಬುದ್ಧಿಃ ಅಸಕ್ತಾ ಸಙ್ಗರಹಿತಾ ಬುದ್ಧಿಃ ಅನ್ತಃಕರಣಂ ಯಸ್ಯ ಸಃ ಅಸಕ್ತಬುದ್ಧಿಃ । ಸರ್ವತ್ರ ಪುತ್ರದಾರಾದಿಷು ಆಸಕ್ತಿನಿಮಿತ್ತೇಷು ಜಿತಾತ್ಮಾ ಜಿತಃ ವಶೀಕೃತಃ ಆತ್ಮಾ ಅನ್ತಃಕರಣಂ ಯಸ್ಯ ಸ ಜಿತಾತ್ಮಾ ದೇಹಜೀವಿತಭೋಗೇಷು ಯಸ್ಮಾತ್ ಸಃ ವಿಗತಸ್ಪೃಹಃ । ಯ ಏವಂಭೂತಃ ಆತ್ಮಜ್ಞಃ ಸಃ । ನೈಷ್ಕರ್ಮ್ಯಸಿದ್ಧಿಮ್ । ನಿರ್ಗತಾನಿ ಕರ್ಮಾಣಿ ಯಸ್ಮಾತ್ ನಿಷ್ಕ್ರಿಯಬ್ರಹ್ಮಾತ್ಮಸಮ್ಬೋಧಾತ್ ಸ ನಿಷ್ಕರ್ಮಾ । ತಸ್ಯ ಭಾವಃ ನೈಷ್ಕರ್ಮ್ಯಮ್ । ನೈಷ್ಕರ್ಮ್ಯಂ ಚ ತತ್ ಸಿದ್ಧಿಶ್ಚ ಸಾ ನೈಷ್ಕರ್ಮ್ಯಸಿದ್ಧಿಃ । ನೈಷ್ಕರ್ಮ್ಯಸ್ಯ ವಾ ನಿಷ್ಕ್ರಿಯಾತ್ಮರೂಪಾವಸ್ಥಾನಲಕ್ಷಣಸ್ಯ ಸಿದ್ಧಿಃ ನಿಷ್ಪತ್ತಿಃ । ತಾಂ ನೈಷ್ಕರ್ಮ್ಯಸಿದ್ಧಿಂ ಪರಮಾಂ ಪ್ರಕೃಷ್ಟಾಂ ಕರ್ಮಜಸಿದ್ಧಿವಿಲಕ್ಷಣಾಂ ಸದ್ಯೋಮುಕ್ತ್ಯವಸ್ಥಾನರೂಪಾಮ್ । ಸಂನ್ಯಾಸೇನ ಸಮ್ಯಗ್ದರ್ಶನೇನ ತತ್ಪೂರ್ವಕೇಣ ವಾ ಸರ್ವಕರ್ಮಸಂನ್ಯಾಸೇನ । ಅಧಿಗಚ್ಛತಿ ಪ್ರಾಪ್ನೋತಿ । ತಥಾ ಚ ಉಕ್ತಮ್ " ಸರ್ವಕರ್ಮಾಣಿ ಮನಸಾ ಸಂನ್ಯಸ್ಯ ನೈವ ಕುರ್ವನ್ ನ ಕಾರಯನ್ ಆಸ್ತೇ " (೫-೧೩) ಇತಿ ॥

---

1. ಈಶ್ವರಾರ್ಪಿತಕರ್ಮದಿಂದಾಗುವದು ಎಂದರ್ಥ. ಬರಿಯ ಕರ್ಮದಿಂದ ಆಯಾ ಲೋಕಗಳು ಮಾತ್ರ ಆಗುತ್ತವೆ. ೧೮-೪

(ಭಾಷ್ಯಾರ್ಥ)

ಅಸಕ್ತಬುದ್ಧಿಯಾದವನು : ಅಸಕ್ತವಾದ ಸಂಗವಿಲ್ಲದ, ಬುದ್ಧಿಯು ಅಂತಃಕರಣವು ಯಾವನಿಗೆ ಇರುವದೋ ಅವನು ಅಸಕ್ತಬುದ್ಧಿಯು. ಎಲ್ಲೆಲ್ಲಿಯೂ ಆಸಕ್ತಿಗೆ ಕಾರಣರಾದ ಮಕ್ಕಳು, ಹೆಂಡತಿ, ಮುಂತಾದವುಗಳಲ್ಲಿ[1] (ಅಸಕ್ತ)ಬುದ್ಧಿಯಾದವನು ಜಿತಾತ್ಮನಾಗಿ: ಆತ್ಮವನ್ನು ಅಂತಃಕರಣವನ್ನು ಗೆದ್ದು ವಶಕ್ಕೆ ತಂದುಕೊಂಡವನು. ವಿಗತಸ್ಪೃಹನಾಗಿ: ದೇಹ, ಬದುಕಿರುವದು, ಭೋಗ–ಇವುಗಳಲ್ಲಿ ಯಾವನಿಗೆ ಸ್ಪೃಹೆಯು ಬಯಕೆಯು ತೊಲಗಿರುವದೋ ಅವನು ವಿಗತಸ್ಪೃಹನು. ಯಾವನು ಇಂಥ ಆತ್ಮಜ್ಞನೋ ಅವನು ನೈಷ್ಕರ್ಮ್ಯಸಿದ್ಧಿಯನ್ನು ನಿಷ್ಕ್ರಿಯನಾದ ಬ್ರಹ್ಮಾತ್ಮನನ್ನು ಅರಿತುಕೊಂಡದ್ದರಿಂದ ಕರ್ಮಗಳು ಯಾವನನ್ನು ಬಿಟ್ಟು ತೊಲಗಿರುವವೋ ಅವನು ನಿಷ್ಕರ್ಮನು ; ಅವನ ಭಾವವು ನೈಷ್ಕರ್ಮ್ಯವು. ನೈಷ್ಕರ್ಮ್ಯಸಿದ್ಧಿಯು ಅಥವಾ ನಿಷ್ಕ್ರಿಯವಾದ ಆತ್ಮಸ್ವರೂಪದಿಂದ ನೆಲೆನಿಲ್ಲುವದೆಂಬ ನೈಷ್ಕರ್ಮ್ಯದ ಸಿದ್ಧಿಯು ಉಂಟಾಗುವಿಕೆಯು (ನೈಷ್ಕರ್ಮ್ಯಸಿದ್ಧಿಯು ಎಂದೂ ಅರ್ಥಮಾಡಬಹುದು). ಅಂಥ ನೈಷ್ಕರ್ಮ್ಯಸಿದ್ಧಿಯನ್ನು–(ಅದು) ಪರಮವಾದದ್ದು, ಕರ್ಮಜಸಿದ್ಧಿಗಿಂತ ಬೇರೆಯು ತೆರನಾದದ್ದು, ಈಗಲೇ ಮುಕ್ತಿಯನ್ನು (ಪಡೆದು) ನಿಲ್ಲುವ ರೂಪವಾದದ್ದು. (ಇದನ್ನು) ಸಂನ್ಯಾಸದಿಂದ ಸಮ್ಯಗ್ದರ್ಶನದಿಂದ ಅಥವಾ ಆ (ದರ್ಶನ)ಪೂರ್ವಕವಾದ ಸರ್ವಕರ್ಮಸಂನ್ಯಾಸದಿಂದ ಪಡೆದುಕೊಳ್ಳುತ್ತಾನೆ, ದೊರಕಿಸಿಕೊಳ್ಳುತ್ತಾನೆ.[2] ಆದ್ದರಿಂದಲೇ (ಹಿಂದೆ) "ಸರ್ವಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ (ಏನೂ) ಮಾಡದೆಯೇ, ಮಾಡಿಸದೆಯೇ ಕುಳಿತಿರುತ್ತಾನೆ" (೫–೧೩) ಎಂದು ಹೇಳಿರುತ್ತದೆ.

(ಭಾಷ್ಯ)

೫೫೩. ಪೂರ್ವೋಕ್ತೇನ ಸ್ವಕರ್ಮಾನುಷ್ಠಾನೇನ ಈಶ್ವರಾಭ್ಯರ್ಚನರೂಪೇಣ ಜನಿತಾಂ ಪ್ರಾಗುಕ್ತಲಕ್ಷಣಾಂ ಸಿದ್ಧಿಂ ಪ್ರಾಪ್ತಸ್ಯ ಉತ್ಪನ್ನಾತ್ಮವಿವೇಕಜ್ಞಾನಸ್ಯ ಕೇವಲಾತ್ಮಜ್ಞಾನನಿಷ್ಠಾರೂಪಾ ನೈಷ್ಕರ್ಮ್ಯಲಕ್ಷಣಾ ಸಿದ್ಧಿಃ ಯೇನ ಕ್ರಮೇಣ ಭವತಿ ತತ್ ವಕ್ತವ್ಯಮ್ ಇತಿ ಆಹ—

---

1. ೧೩-೯

2. ಜ್ಞಾನಿಯು ಮಾತ್ರವೇ ಸರ್ವಕರ್ಮಗಳನ್ನೂ ತ್ಯಾಗಮಾಡಬಲ್ಲನೆಂದು ಚರ್ಚಾಪೂರ್ವಕವಾಗಿ ಹಿಂದಿನ ಶ್ಲೋಕದ ಭಾಷ್ಯಾರ್ಥದಲ್ಲಿ ನಿರ್ಣಯಿಸಿದ್ದು ಈ ನೈಷ್ಕರ್ಮ್ಯಸಿದ್ಧಿಯ ಸಂನ್ಯಾಸವನ್ನು ವರ್ಣಿಸುವದಕ್ಕೇ.

(ಭಾಷ್ಯಾರ್ಥ)

ಹಿಂದೆ ಹೇಳಿರುವ (೪೮-೪೦) ಈಶ್ವರನನ್ನು ಅಭ್ಯರ್ಚನೆಮಾಡುವ ರೂಪದ ಸ್ವಕರ್ಮಾನುಷ್ಠಾನದಿಂದ ಉಂಟಾದ ಹಿಂದೆ ತಿಳಿಸಿದಂಥ[1] ಸಿದ್ಧಿಯನ್ನು ಹೊಂದಿದವನಿಗೆ ಆತ್ಮವಿವೇಕಜ್ಞಾನವುಂಟಾಗಲು ಕೇವಲಾತ್ಮಜ್ಞಾನನಿಷ್ಠಾರೂಪವಾದ[2] ನೈಷ್ಕರ್ಮ್ಯವೆಂಬ ಸಿದ್ಧಿಯು ಯಾವ ಕ್ರಮದಿಂದ ಆಗುವದೋ ಅದನ್ನು ಹೇಳಬೇಕೆಂದು (ಭಗವಂತನು) ಹೇಳುತ್ತಿದಾನೆ :—

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌನ್ತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥೫೦॥**

೫೦. ಕೌಂತೇಯನೆ, ಸಿದ್ಧಿಯನ್ನು ಪಡೆದುಕೊಂಡವನು ಬ್ರಹ್ಮವನ್ನು ಹೇಗೆ ಹೊಂದುವನೋ ಅದನ್ನು ಸಮಾಸದಿಂದ ನನ್ನಿಂದ ತಿಳಿದುಕೊ. ಅದು ಜ್ಞಾನದ ಪರನಿಷ್ಠೆಯು.

(ಭಾಷ್ಯ)

೫೧೪. ಸಿದ್ಧಿಂ ಪ್ರಾಪ್ತಃ ಸ್ವಕರ್ಮಣಾ ಈಶ್ವರಂ ಸಮಭ್ಯರ್ಚ್ಯ ತತ್ಪ್ರಸಾದಜಾಂ ಕಾಯೇನ್ದ್ರಿಯಾಣಾಂ ಜ್ಞಾನನಿಷ್ಠಾಯೋಗ್ಯತಾಲಕ್ಷಣಾಂ ಸಿದ್ಧಿಂ ಪ್ರಾಪ್ತಃ । 'ಸಿದ್ಧಿಂ ಪ್ರಾಪ್ತಃ' ಇತಿ ತದನುವಾದಃ ಉತ್ತರಾರ್ಥಃ । ಕಿಂ ತದುತ್ತರಂ ಯದರ್ಥಃ ಅನುವಾದಃ ಇತಿ ? ಉಚ್ಯತೇ । ಯಥಾ ಯೇನ ಪ್ರಕಾರೇಣ ಜ್ಞಾನನಿಷ್ಠಾರೂಪೇಣ ಬ್ರಹ್ಮ ಪರಮಾತ್ಮಾನಮ್ ಆಪ್ನೋತಿ ತಥಾ ತಂ ಪ್ರಕಾರಂ ಜ್ಞಾನನಿಷ್ಠಾಪ್ರಾಪ್ತಿಕ್ರಮಂ ಮೇ ಮಮ ವಚನಾತ್ ನಿಬೋಧ ತ್ವಂ ನಿಶ್ಚಯೇನ ಅವಧಾರಯ ಇತ್ಯೇತತ್ । ಕಿಂ ವಿಸ್ತರೇಣ ? ನ ಇತ್ಯಾಹ । ಸಮಾಸೇನೈವ ಸಙ್ಕ್ಷೇಪೇಣೈವ । ಹೇ ಕೌನ್ತೇಯ, 'ಯಥಾ ಬ್ರಹ್ಮ ಪ್ರಾಪ್ನೋತಿ ತಥಾ ನಿಬೋಧ' ಇತ್ಯನೇನ ಯಾ ಪ್ರತಿಜ್ಞಾತಾ ಬ್ರಹ್ಮಪ್ರಾಪ್ತಿಃ ತಾಮ್ ಇದಂತಯಾ ದರ್ಶಯಿತುಮ್ ಆಹ ನಿಷ್ಠಾ ಜ್ಞಾನಸ್ಯ ಯಾ ಪರಾ ಇತಿ । ನಿಷ್ಠಾ ಪರ್ಯವಸಾನಮ್ । ಪರಿಸಮಾಪ್ತಿಃ ಇತ್ಯೇತತ್ । ಕಸ್ಯ?[3] ಬ್ರಹ್ಮಜ್ಞಾನಸ್ಯ ಯಾ ಪರಾ । ಕೀದೃಶೀ ಸಾ ? ಯಾದೃಶಮ್

---

1. ಜ್ಞಾನನಿಷ್ಠಾಯೋಗ್ಯತೆ ಎಂಬ.
2. ಅಕರ್ತೃವಾದ ಅದ್ವಿತೀಯಾತ್ಮನಲ್ಲಿಯೇ ನೆಲೆನಿಲ್ಲುವ.
3. 'ಜ್ಞಾನಸ್ಯ' ಎಂದು ಹೆಚ್ಚಾಗಿರುವ ಮ॥ ಸರಿಯಲ್ಲ.

ಆತ್ಮಜ್ಞಾನಮ್ । ಕೀದೃಕ್ ತತ್[1] ? ಯಾದೃಶ ಆತ್ಮಾ । ಕೀದೃಶೋಽಸೌ ? ಯಾದೃಶಃ ಭಗವತಾ ಉಕ್ತಃ । ಉಪನಿಷದ್ವಾಕ್ಯೈಶ್ಚ ನ್ಯಾಯತಶ್ಚ ||

(ಭಾಷ್ಯಾರ್ಥ)

**ಸಿದ್ಧಿಯನ್ನು ಹೊಂದಿದವನು; ಸ್ವಕರ್ಮದಿಂದ ಈಶ್ವರನ ಸಮಭ್ಯರ್ಚನೆಯನ್ನು ಮಾಡಿ ಆತನ ಪ್ರಸಾದದಿಂದುಂಟಾದ, ಕಾಯೇಂದ್ರಿಯಗಳು ಜ್ಞಾನನಿಷ್ಠೆಗೆ ತಕ್ಕವುಗಳಾಗುವದೆಂಬ ಸಿದ್ಧಿಯನ್ನು ಹೊಂದಿದವನು (ಎಂದರ್ಥ).** ಸಿದ್ಧಿಯನ್ನು ಹೊಂದಿದವನು ಎಂದು (ಇಲ್ಲಿ) ಅನುವಾದಮಾಡಿಕೊಂಡಿರುವದ ಮುಂದಿನ (ವಿಷಯವನ್ನು ತಿಳಿಸು)ವದಕ್ಕಾಗಿ. ಯಾವದಕ್ಕಾಗಿ (ಇದನ್ನು) ಅನುವಾದ ಮಾಡಿಕೊಂಡಿದೆಯೋ ಆ ಮುಂದೆ (ತಿಳಿಸಬೇಕಾದದ್ದು) ಯಾವದು? ಎಂದರೆ ಹೇಳುತ್ತಾನೆ. ಹೇಗೆ ಜ್ಞಾನನಿಷ್ಠೆಯ ರೂಪವಾದ ಯಾವ ಪ್ರಕಾರದಿಂದ, ಬ್ರಹ್ಮವನ್ನು ಪರಮಾತ್ಮನನ್ನು, ಪಡೆದುಕೊಳ್ಳುತ್ತಾನೋ ಅದನ್ನು ಆ ಪ್ರಕಾರವನ್ನು ಜ್ಞಾನನಿಷ್ಠೆಯನ್ನು ಪಡೆದುಕೊಳ್ಳುವ ಕ್ರಮವನ್ನು, ನನ್ನಿಂದ ನನ್ನ ವಚನದಿಂದ, ತಿಳಿದುಕೊ, ನೀನು ನಿಶ್ಚಯದಿಂದ ಗೊತ್ತುಮಾಡಿಕೊ ಎಂದರ್ಥ. ವಿಸ್ತಾರವಾಗಿ ಯೇನು ? ಎಂದರೆ ಅಲ್ಲವೆಂದು ಹೇಳುತ್ತಾನೆ. ಸಮಾಸದಿಂದಲೇ, ಸಂಕ್ಷೇಪವಾಗಿಯೇ ಎಲೈ ಕೌಂತೇಯನೆ, (ತಿಳಿದುಕೊ). “ಹೇಗೆ ಬ್ರಹ್ಮವನ್ನು ಪಡೆದುಕೊಳ್ಳುತ್ತಾನೋ ಅದನ್ನು ತಿಳಿದುಕೊ” ಎಂಬೀ (ವಾಕ್ಯ)ದಿಂದ ಬ್ರಹ್ಮಪ್ರಾಪ್ತಿಯನ್ನು ತಿಳಿಸಿದ್ದನಲ್ಲ, ಅದನ್ನು ಇದೇ (ಅದು) ಎಂದು ತಿಳಿಸುವದಕ್ಕಾಗಿ “ಅದು ಜ್ಞಾನದ ಪರನಿಷ್ಠೆ” ಎಂದು ಹೇಳಿರುತ್ತಾನೆ, ನಿಷ್ಠೆ ಎಂದರೆ ಪರ್ಯವಸಾನವು, ಕೊನೆಗಾಣುವಿಕೆಯು ಎಂದರ್ಥ. ಯಾವದರ (ನಿಷ್ಠೆ)? ಎಂದರೆ ಬ್ರಹ್ಮಜ್ಞಾನದ ಹೆಚ್ಚಿನ (ನಿಷ್ಠೆ).

(ಪ್ರಶ್ನೆ):—ಅದು ಹೇಗೆ (ಇರುವದು)?

(ಉತ್ತರ):—ಆತ್ಮಜ್ಞಾನವು ಹೇಗಿರುವದೋ (ಹಾಗಿರುವದು).

(ಪ್ರಶ್ನೆ):—ಅದು ಹೇಗಿರುವದು ?

(ಉತ್ತರ):—ಆತ್ಮನು ಹೇಗಿರುತ್ತಾನೋ (ಹಾಗೆ).

(ಪ್ರಶ್ನೆ):—ಅವನು ಹೇಗಿರುತ್ತಾನೆ ?

(ಉತ್ತರ):—ಭಗವಂತನು ಹೇಗೆ ಹೇಳಿರುತ್ತಾನೋ, ಉಪನಿಷದ್ವಾಕ್ಯಗಳು

---

1. “ಸಾ ಕೀದೃಶೀ ? ಯಾದೃಶಂ ಪರಮಾತ್ಮಜ್ಞಾನಮ್ । ಕೀದೃಶಮ್ ಆತ್ಮಜ್ಞಾನಮ್ ?” ಮ||

(ಹೇಗೆ ಹೇಳಿರುವವೋ) ನ್ಯಾಯಗಳಿಂದಲೂ (ಹೇಗೆ ನಿಶ್ಚಿತವಾಗಿರುವನೋ ಹಾಗೆ).[1]

## ಜ್ಞಾನನಿಷ್ಠೆಯನ್ನು ಪಡೆದುಕೊಳ್ಳುವದು ಸಾಧ್ಯವೆ ?

(ಭಾಷ್ಯ)

೫೫೫. ನನು ವಿಷಯಾಕಾರಂ ಜ್ಞಾನಮ್ । ನ ವಿಷಯಃ[2] ನಾಪಿ ಆಕಾರವಾನ್ ಆತ್ಮಾ ಇಷ್ಯತೇ ಕ್ವಚಿತ್ । ನನು "ಆದಿತ್ಯವರ್ಣಮ್" (ಶ್ವೇ. ೩-೮) "ಭಾರೂಪಃ" (ಛಾಂ. ೩-೧೪-೨), "ಸ್ವಯಂಜ್ಯೋತಿಃ" (ಬೃ. ೪-೩-೯) ಇತಿ ಆಕಾರವತ್ತ್ವಮ್ ಆತ್ಮನಃ ಶ್ರೂಯತೇ । ನ । ತಮೋರೂಪತ್ವಪ್ರತಿಷೇಧಾರ್ಥತ್ವಾತ್ ತೇಷಾಂ ವಾಕ್ಯಾನಾಮ್ । ದ್ರವ್ಯಗುಣಾದ್ಯಾಕಾರಪ್ರತಿಷೇಧೇ ಆತ್ಮನಸ್ತಮೋರೂಪತ್ವೇ ಪ್ರಾಪ್ತೇ ತತ್ಪ್ರತಿಷೇಧಾರ್ಥಾನಿ "ಆದಿತ್ಯವರ್ಣಮ್" (ಶ್ವೇ. ೩-೮) ಇತ್ಯಾದಿವಾಕ್ಯಾನಿ । "ಅರೂಪಮ್" (ಕ. ೧-೩-೧೫) ಇತಿ ಚ ವಿಶೇಷತೋ ರೂಪಪ್ರತಿಷೇಧಾತ್ । ಅವಿಷಯತ್ವಾಚ್ಚ । "ನ ಸನ್ದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್" (ಶ್ವೇ. ೪-೨೦), "ಅಶಬ್ದಮಸ್ಪರ್ಶಮ್" (ಕ.೧-೩-೧೫) ಇತ್ಯಾದ್ಯೈಃ । ತಸ್ಮಾತ್ ಆತ್ಮಾಕಾರಂ ಜ್ಞಾನಮ್ ಇತಿ ಅನುಪಪನ್ನಮ್ ||

(ಭಾಷ್ಯಾರ್ಥ)

(ಆಕ್ಷೇಪ):—ಜ್ಞಾನವು ವಿಷಯದ ಆಕಾರವಾಗಿರುತ್ತದೆ (ಎಂಬುದು ಪ್ರಸಿದ್ಧವು). ಆದರೆ ಆತ್ಮನು ವಿಷಯನೆಂದು ಎಲ್ಲಿಯೂ ಒಪ್ಪಿಲ್ಲ, ಆಕಾರವುಳ್ಳವನೆಂದೂ (ಒಪ್ಪಿರುವದಿಲ್ಲ)ವಲ್ಲ!

(ಏಕದೇಶಿಯ ಉತ್ತರ):—"ಆದಿತ್ಯವರ್ಣನು" (ಶ್ವೇ. ೩-೮) "ಪ್ರಕಾಶರೂಪನು" (ಛಾಂ. ೩-೧೪-೨), "ಸ್ವಯಂಜ್ಯೋತಿಯು" (ಬೃ. ೪-೩-೯) ಎಂದು ಆತ್ಮನಿಗೆ ಆಕಾರವುಂಟೆಂದೂ ಶ್ರುತಿಯಲ್ಲಿ ಹೇಳಿದೆಯುಲ್ಲ!

(ಆಕ್ಷೇಪ):—ಹಾಗಲ್ಲ. ಏಕೆಂದರೆ ಆ ವಾಕ್ಯಗಳು (ಆತ್ಮನು) ತಮೋರೂಪನಲ್ಲವೆಂದು ಹೇಳುವದಕ್ಕೆ (ಬಂದಿವೆ). ಆತ್ಮನಿಗೆ ದ್ರವ್ಯ, ಗುಣ—ಮುಂತಾದ (ಯಾವದರ) ಆಕಾರವೂ ಇಲ್ಲವೆಂದು ಹೇಳಲಾಗಿ (ಹಾಗಾದರೆ) ಅವನು ತಮೋರೂಪನಾಗಿರಬೇಕು

1. ಆತ್ಮನು ಸತ್ತಲ್ಲ, ಅಸತ್ತಲ್ಲ—ಎಂದು ಭಗವಂತನು ತಿಳಿಸಿರುತ್ತಾನೆ, ಉಪನಿಷತ್ತಿನಲ್ಲಿ 'ಇದಲ್ಲ' 'ಇದಲ್ಲ'—ಎಂದು ವರ್ಣಿಸಿರುತ್ತದೆ; ಹೀಗೆ ಹಾಗೆ ಎಂದು ವರ್ಣಿಸುವದಕ್ಕೆ ಯೋಗ್ಯವಾದದ್ದು ವಿಷಯವಾದ್ದರಿಂದ ಆತ್ಮನಲ್ಲ ಎಂದು ಯುಕ್ತಿಯಿಂದಲೂ ನಿಶ್ಚಯಿಸಬಹುದು.

2. 'ನ ಜ್ಞಾನವಿಷಯಃ' ಮ||ಮೈ||ವಾ||

ಎಂದಾಗುತ್ತದೆ. ಅದನ್ನು ಅಲ್ಲಗಳೆಯುವದಕ್ಕಾಗಿ "ಆದಿತ್ಯವರ್ಣನು" ಮುಂತಾದ ವಾಕ್ಯಗಳು (ಬಂದಿರುತ್ತವೆ ಎಂದು ತಿಳಿಯಬೇಕು). ಏಕೆಂದರೆ "ರೂಪವಿಲ್ಲದವನು" (ಕ. ೧-೩-೧೫) ಎಂದು ವಿಶೇಷವಾಗಿ ಆಕಾರವನ್ನೇ (ಶ್ರುತಿಯಲ್ಲಿ ಸ್ಪಷ್ಟವಾಗಿ) ಅಲ್ಲ ಗಳೆದಿರುತ್ತದೆ. (ಆತ್ಮನು) ವಿಷಯನಲ್ಲವಾದ್ದರಿಂದ (ಆತ್ಮಜ್ಞಾನವು ಆಗಲಾರದು). "ಆತನನ್ನು ನೋಡುವದಕ್ಕೆ ರೂಪವೇ ಇರುವದಿಲ್ಲ ; ಯಾರೊಬ್ಬರೂ ಈತನನ್ನು ಕಣ್ಣಿಂದ ನೋಡಲಾರರು" (ಶ್ವೇ. ೪-೨೦), "ಶಬ್ದವಿಲ್ಲದ್ದು, ಸ್ಪರ್ಶವಿಲ್ಲದ್ದು" (ಕ. ೧-೩-೧೫) ಎಂದು ಮುಂತಾದ (ವಚನಗಳಿಂದ ಹೀಗೆಂದು ಸಿದ್ಧವಾಗಿರುತ್ತದೆ). ಆದ್ದರಿಂದ ಜ್ಞಾನವು ಆತ್ಮಾಕಾರವಾಗಿ (ಆಗುವ)ದೆಂಬುದು ಯುಕ್ತವಲ್ಲ.

(ಭಾಷ್ಯ)

೫೫೬. ಕಥಂ ತರ್ಹಿ ಆತ್ಮನೋ ಜ್ಞಾನಮ್ ? ಸರ್ವಂ ಹಿ ಯದ್ವಿಷಯಂ ಯತ್ ಜ್ಞಾನಮ್, ತತ್ ತದಾಕಾರಂ ಭವತಿ । ನಿರಾಕಾರಶ್ಚ ಆತ್ಮಾ ಇತ್ಯುಕ್ತಮ್ । ಜ್ಞಾನಾತ್ಮನೋಶ್ಚ ಉಭಯೋರ್ನಿರಾಕಾರತ್ವೇ ಕಥಂ ತದ್ಭಾವನಾ ನಿಷ್ಠಾ ಇತಿ ? ನ । ಅತ್ಯನ್ತನಿರ್ಮಲತ್ವಾತಿಸ್ವಚ್ಛತ್ವಾತಿಸೂಕ್ಷ್ಮತ್ವೋಪಪತ್ತೇರಾತ್ಮನಃ [1] । ಬುದ್ಧೇಶ್ಚ ಆತ್ಮಸಮನೈರ್ಮಲ್ಯಾದ್ಯುಪಪತ್ತೇಃ [2] ಆತ್ಮಚೈತನ್ಯಾಕಾರಾಭಾಸತ್ವೋಪಪತ್ತಿಃ । ಬುದ್ಧ್ಯಾಭಾಸಂ ಮನಃ, ತದಾಭಾಸಾನಿ ಇನ್ದ್ರಿಯಾಣಿ । ಇನ್ದ್ರಿಯಾಭಾಸಶ್ಚ ದೇಹಃ । ಅತಃ ಲೌಕಿಕೈಃ ದೇಹಮಾತ್ರೇ ಏವ ಆತ್ಮದೃಷ್ಟಿಃ ಕ್ರಿಯತೇ । ದೇಹ ಚೈತನ್ಯವಾದಿನಶ್ಚ ಲೋಕಾಯತಿಕಾಃ "ಚೈತನ್ಯವಿಶಿಷ್ಟಃ ಕಾಯಃ ಪುರುಷಃ" ಇತ್ಯಾಹುಃ । ತಥಾ ಅನ್ಯೇ ಬುದ್ಧಿಚೈತನ್ಯವಾದಿನಃ । ಅನ್ಯೇ ಮನಶ್ಚೈತನ್ಯವಾದಿನಃ । ಅನ್ಯೇ ಬುದ್ಧಿಚೈತನ್ಯವಾದಿನಃ । ತತೋಽಪಿ ಆನ್ತರಮ್ ಅವ್ಯಕ್ತಮ್ [3] ಅವಾ ಕೃತಾಖ್ಯಮ್ ಅವಿದ್ಯಾವಸ್ಥಮ್ ಆತ್ಮತ್ವೇನ ಪ್ರತಿಪನ್ನಾಃ ಕೇಚಿತ್ । ಸರ್ವತ್ರ ಹಿ ಬುದ್ಧ್ಯಾದಿದೇಹಾನ್ತೇ ಆತ್ಮಚೈತನ್ಯಾಭಾಸತಾ ಆತ್ಮಭ್ರಾನ್ತಿಕಾರಣಮ್ ಇತಿ । ಅತಶ್ಚ ಆತ್ಮವಿಷಯಂ ಜ್ಞಾನಂ ನ ವಿಧಾತವ್ಯಮ್ । ಕಿಂ ತರ್ಹಿ ನಾಮರೂಪಾದ್ಯ ನಾತ್ಮಾಧ್ಯಾರೋಪಣನಿವೃತ್ತಿರೇವ ಕಾರ್ಯಾ । ನಾತ್ಮಚೈತನ್ಯವಿಜ್ಞಾನಂ ಕಾರ್ಯಮ್ [4] । ಅವಿದ್ಯಾಧ್ಯಾರೋಪಿತಸರ್ವಪದಾರ್ಥಾಕಾರೈಃ ಅವಿಶಿಷ್ಟತಯಾ [5] ದೃಶ್ಯ

---

1. 'ಅತಿ' ಎಂಬ ಮಾತು ಶಾ|| ಮು|| ನ್ಯಾ|| ಗು|| ಗಳಲ್ಲಿಲ್ಲ. ಇಲ್ಲಿ 'ಉಪಪತ್ತೇಃ' ಎಂಬ ಮಾತು ಬೇಕಿಲ್ಲವೆಂದು ಕಾಣುತ್ತತೆ.
2. 'ಆತ್ಮವತ್ ನೈರ್ಮಲ್ಯಾದ್ಯುಪಪತ್ತೇಃ' ಮು|| ನ್ಯಾ|| ವಾ||
3. "ಅನ್ತರವ್ಯಕ್ತಮ್" ಶಾ||
4. ಶಾ|| ಗು|| ಗಳಲ್ಲಿಲ್ಲ.
5. 'ವಿಶಿಷ್ಟತಯಾ' ಎಂಬ ಶಾ|| ಗು|| ಪಾಠವು ಸರಿಯಲ್ಲ.

ಮಾನತ್ವಾತ್ ಇತಿ । ಅತ ಏವ ಹಿ ವಿಜ್ಞಾನವಾದಿನೋ ಬೌದ್ಧಾಃ ವಿಜ್ಞಾನವ್ಯತಿರೇಕೇಣ ವಸ್ತ್ವೇವ ನಾಸ್ತಿ ಇತಿ ಪ್ರತಿಪನ್ನಾಃ ಪ್ರಮಾಣಾನ್ತರನಿರಪೇಕ್ಷತಾಂ ಚ ಸ್ವಸಂವಿದಿತತ್ವಾಭ್ಯುಪಗಮೇನ । ತಸ್ಮಾತ್ ಅವಿದ್ಯಾಧ್ಯಾರೋಪಿತನಿರಾಕರಣಮಾತ್ರಂ ಬ್ರಹ್ಮಣಿ ಕರ್ತವ್ಯಮ್ । ನ ತು ಬ್ರಹ್ಮವಿಜ್ಞಾನೇ ಯತ್ನಃ । ಅತ್ಯನ್ತಪ್ರಸಿದ್ಧತ್ವಾತ್ । ಅವಿದ್ಯಾಕಲ್ಪಿತನಾಮರೂಪವಿಶೇಷಾಕಾರಾಪಹೃತಬುದ್ಧೀನಾಮ್[3] ಅತ್ಯನ್ತಪ್ರಸಿದ್ಧಂ ಸುವಿಜ್ಞೇಯಮ್ ಆಸನ್ನತರಮ್ ಆತ್ಮಭೂತಮಪಿ ಅಪ್ರಸಿದ್ಧಂ ದುರ್ವಿಜ್ಞೇಯಮ್ ಅತಿದೂರಮ್ ಅನ್ಯದಿವ ಚ ಪ್ರತಿಭಾತಿ ಅವಿವೇಕಿನಾಮ್ । ಬಾಹ್ಯಾಕಾರನಿವೃತ್ತಬುದ್ಧೀನಾಂ ತು ಲಬ್ಧಗುರ್ವಾತ್ಮಪ್ರಸಾದಾನಾಂ[4] ನಾತಃ ಪರಂ ಸುಖಂ ಸುಪ್ರಸಿದ್ಧಂ ಸುವಿಜ್ಞೇಯಂ ಸ್ವಾಸನ್ನತರಮ್[5] ಅಸ್ತಿ । ತಥಾ ಚ ಉಕ್ತಮ್ "ಪ್ರತ್ಯಕ್ಷಾವಗಮಂ ಧರ್ಮ್ಯಮ್" (೯-೨) ಇತ್ಯಾದಿ.

(ಭಾಷ್ಯಾರ್ಥ)

(ಪ್ರಶ್ನೆ):—ಹಾಗಾದಮೇಲೆ ಆತ್ಮನ ಜ್ಞಾನವು (ಆಗುವದು) ಹೇಗೆ ? ಯಾವ ಜ್ಞಾನವೇ ಆಗಲಿ (ತಾನು) ಯಾವ ವಿಷಯದ (ಜ್ಞಾನವೋ), ಅದೆಲ್ಲ ಅದರ ಆಕಾರವುಳ್ಳದ್ದಾಗಿರುತ್ತದೆ. ಆದರೆ ಆತ್ಮನು ನಿರಾಕಾರನು ಎಂದು ಹೇಳಿದ್ದೀರಿ. ಜ್ಞಾನ, ಆತ್ಮ (ಎರಡೂ) ನಿರಾಕಾರವಾದರೆ ಆ (ಆತ್ಮನನ್ನು) ಭಾವಿಸುವದೆಂಬ ನಿಷ್ಠೆ ಹೇಗೆ (ಆಗಬೇಕು) ?

(ಉತ್ತರ):—ಹಾಗಲ್ಲ, ಏಕೆಂದರೆ ಆತ್ಮನು **ಅತ್ಯಂತನಿರ್ಮಲನಾಗಿ ಅತಿಸ್ವಚ್ಛನಾಗಿ, ಅತಿಸೂಕ್ಷ್ಮನಾಗಿ ಇರುತ್ತಾನೆ.**[4] **ಬುದ್ಧಿಯುಕೂಡ ಆತ್ಮನಂತೆ ನಿರ್ಮಲವಾಗಿರುವದೇ ಮುಂತಾದದ್ದು ಹೊಂದುತ್ತದೆಯಾದ್ದರಿಂದ ಅದು ಆತ್ಮಚೈತನ್ಯಾಕಾರವಾಗಿ ತೋರಿಕೊಳ್ಳಬಹುದಾಗಿರುತ್ತದೆ.**[5] ಮನಸ್ಸು ಬುದ್ಧಿಯ ಆಭಾಸವಾಗಿದೆ, ಇಂದ್ರಿಯಗಳು ಆ (ಮನಸ್ಸಿನ) ಆಭಾಸವಾಗಿವೆ, ದೇಹವು

---

1. 'ಬುದ್ಧಿತ್ವಾತ್' ಸಿ||ಗು||

2. 'ಪ್ರಸಾದಾದೀನಾಂ' ಮ||

3. 'ಸ್ವಾಸನ್ನಮ್' ಸಿ||ಗು||

4. 'ಸೂಕ್ಷ್ಮತ್ವೋಪಪತ್ತೇಃ' ಎಂಬಲ್ಲಿ ಸೂಕ್ಷ್ಮತ್ವಾತ್ ಎಂದಿದ್ದಂತೆ ಇಟ್ಟುಕೊಂಡು ಕನ್ನಡಿಸಿದೆ.

5. ಹೀಗೆ ತೋರಿಕೊಳ್ಳುವದೇ ಆತ್ಮಾಕಾರವಾದ ಜ್ಞಾನವು; ಆತ್ಮನನ್ನು ವಿಷಯೀಕರಿಸುವದೇನೂ ಅವಶ್ಯವಿಲ್ಲ ಎಂದು ಭಾವ.

ಇಂದ್ರಿಯಗಳ ಆಭಾಸವಾಗಿದೆ.[1] ಆದ್ದರಿಂದ ಲೋಕದ ಜನರು ಬರಿಯ ದೇಹದಲ್ಲಿಯೇ ಆತ್ಮಬುದ್ಧಿಯನ್ನು ಮಾಡುತ್ತಿದ್ದಾರೆ. ದೇಹವೇ ಚೈತನ್ಯವೆಂದು ಹೇಳುವ ಲೋಕಾಯತಿಕರು "ಚೈತನ್ಯವಿಶಿಷ್ಟವಾದ ಶರೀರವೇ ಪುರುಷನು"[2] ಅನ್ನುತ್ತಿದಾರೆ. ಇದರಂತೆ ಇಂದ್ರಿಯವೇ ಚೈತನ್ಯವೆನ್ನುವವರು ಕೆಲವರು, ಮನಸ್ಸನ್ನು ಚೈತನ್ಯವೆನ್ನುವವರು ಕೆಲವರು, ಬುದ್ಧಿಯು ಚೈತನ್ಯವೆನ್ನುವವರು ಕೆಲವರು; ಅದಕ್ಕೂ ಒಳಗಿರುವ **ಅವ್ಯಾಕೃತವೆಂಬ ಅವಿದ್ಯಾವಸ್ಥೆಯು ಅವ್ಯಕ್ತವನ್ನು** ಆತ್ಮನೆಂದು ಕೆಲವರು ತಿಳಿದುಕೊಂಡಿರುತ್ತಾರೆ. ಬುದ್ಧಿಯು ಮೊದಲಾಗಿ ದೇಹದವರೆಗಿನ [3]ಎಲ್ಲವುಗಳಲ್ಲಿಯೂ ಆತ್ಮಚೈತನ್ಯದ ತೋರಿಕೆಯೇ ಅವು ಆತ್ಮನೆಂಬ ಭ್ರಾಂತಿಗೆ ಕಾರಣವಾಗಿರುತ್ತದೆ. **ಆದ್ದರಿಂದಲೂ ಆತ್ಮವಿಷಯವಾದ ಜ್ಞಾನವನ್ನು ವಿಧಿಸಬೇಕಾಗಿಲ್ಲ, ಮತ್ತೇನೆಂದರೆ ನಾಮರೂಪವೇ ಮುಂತಾದ ಅನಾತ್ಮದ ಅಧ್ಯಾರೋಪಣವನ್ನು ತೊಲಗಿಸುವದೊಂದನ್ನೇ ಮಾಡತಕ್ಕದ್ದು**[4]. **ಆತ್ಮಚೈತನ್ಯದ ಅರಿವನ್ನುಂಟುಮಾಡಬೇಕಾದದ್ದೇನೂ ಇರುವದಿಲ್ಲ; ಏಕೆಂದರೆ ಅವಿದ್ಯೆಯಿಂದ ಅಧ್ಯಾರೋಪಿತವಾಗಿರುವ ಸಮಸ್ತಪದಾರ್ಥಗಳ ಆಕಾರಗಳೊಡನೆ ಸಾಮಾನ್ಯವಾಗಿ ಕಂಡುಬರುತ್ತದೆ.**[5] ಆದ್ದರಿಂದಲೇ ಅಲ್ಲವೆ,[6] ವಿಜ್ಞಾನವಾದಿಗಳಾದ ಬೌದ್ಧರು ವಿಜ್ಞಾನಕ್ಕಿಂತ ಬೇರೆಯಾಗಿ ವಸ್ತುವೇ ಇಲ್ಲವೆಂದು ತಿಳಿದುಕೊಂಡಿರುತ್ತಾರೆ; (ಅದು)ತನ್ನಿಂದತಾನೇ ಜ್ಞಾತವಾಗುವದೆಂದು ಅಂಗೀಕರಿಸುವದರಿಂದ (ಅದು) ಮತ್ತೊಂದು ಪ್ರಮಾಣವನ್ನು ಬಯಸುವದಿಲ್ಲವೆಂದೂ (ತಿಳಿದುಕೊಂಡಿರುತ್ತಾರೆ).?[7]

---

1. ಕಬ್ಬಿಣವು ಬೆಂಕಿಯಿಂದ ಕೆಂಪಗೆ ಕಾದಿರುವಾಗ ಬೆಂಕಿಯಂತೆ ಕಾಣುವ ಹಾಗೆ ಬುದ್ಧ್ಯಾದಿಗಳು ಚೈತನ್ಯದಿಂದ ಕೂಡಿಯೇ ಕಾಣುತ್ತಿರುವವು.

2. ಇದು ಚಾರ್ವಾಕದರ್ಶನಕಾರನಾದ ಬೃಹಸ್ಪತಿಯ ಮತವೆಂದು ರೂಢಿ.

3. ಈ ವಾಕ್ಯವನ್ನು ಪರಿಶೀಲಿಸಿದರೆ ಇದರ ಹಿಂದೆ ಅವ್ಯಾಕೃತಾತ್ಮವಾದವನ್ನು ಹೇಳುವ ವಾಕ್ಯವು ಮೊದಲು ಭಾಷ್ಯದಲ್ಲಿ ಇತ್ತೋ ಇಲ್ಲವೋ ಹೇಳುವದಕ್ಕೆ ಬರುವದಿಲ್ಲ.

4. ದೇಹಾದಿಗಳಲ್ಲಿಯೂ ಆತ್ಮಾಭಾಸವಿರುವದರಿಂದ ಕಲ್ಪಿತವಾಗಿರುವ ಆ ನಾಮರೂಪಕರ್ಮಗಳು ಆತ್ಮನಲ್ಲವೆಂದು ಮಾತ್ರ ತಿಳಿಯಪಡಿಸತಕ್ಕದ್ದು ಅವಶ್ಯವು.

5. ಬ್ರಹ್ಮವು ಸರ್ವಪ್ರತ್ಯಯವೇದ್ಯವಾಗಿರುವದರಿಂದ ಶಾಸ್ತ್ರವು ಪ್ರಪಂಚಪ್ರವಿಲಯವನ್ನು ಮಾತ್ರ ತಿಳಿಸುತ್ತದೆ ಎಂಬ ಬ್ರಹ್ಮಸಿದ್ಧಿಕಾರನ ಅಭಿಪ್ರಾಯವು ಇಲ್ಲಿದೆ.

6. ವಿಜ್ಞಾನವೂ ಚೈತನ್ಯಾಕಾರವಾಗಿ ಕಾಣುವದರಿಂದಲೇ.

7. ತನ್ನನ್ನು ತಾನೇ ಬೆಳಗುವದರಿಂದ ವಿಜ್ಞಾನವು ಸ್ವಯಂಪ್ರಕಾಶವು ಅದನ್ನು ಬೆಳಗುವದಕ್ಕೆ ಆತ್ಮಚೈತನ್ಯವೇನೂ ಬೇಕಿಲ್ಲ—ಎಂದು ವಿಜ್ಞಾನವಾದಿಗಳ ಮತವು.

ಆದ್ದರಿಂದ ಅವಿದ್ಯೆಯಿಂದ ಆರೋಪಿತವಾಗಿರುವದನ್ನು ಅಲ್ಲಗಳೆಯುವದೊಂದೇ ಬ್ರಹ್ಮನ (ವಿಷಯ)ದಲ್ಲಿ ಮಾಡತಕ್ಕದ್ದೇ ಹೊರತು ಬ್ರಹ್ಮದ ವಿಜ್ಞಾನಕ್ಕಾಗಿ ಪ್ರಯತ್ನ ವನ್ನು (ಮಾಡಬೇಕಾದದ್ದಿರುವ)ದಿಲ್ಲ. ಏಕೆಂದರೆ (ಬ್ರಹ್ಮವು) ಅತ್ಯಂತಪ್ರಸಿದ್ಧವಾಗಿ ರುತ್ತದೆ.[1] **ಅವಿದ್ಯೆಯಿಂದ ಕಲ್ಪಿತವಾಗಿರುವ ನಾಮರೂಪಗಳ ಆಯಾ ಆಕಾರದಿಂದ ಬುದ್ಧಿಯನ್ನು ಕಳೆದುಕೊಂಡಿರುವವರಿಗೆ**[2] **ಅತ್ಯಂತ ಪ್ರಸಿದ್ಧವೂ ಸುಲಭವಾಗಿ ತಿಳಿಯಬರತಕ್ಕದ್ದೂ ಅತಿಸಮೀಪದಲ್ಲಿರುವ (ತಮ್ಮ) ಆತ್ಮನೇ ಆಗಿರುವದೂ ಆದರೂ ಅಪ್ರಸಿದ್ಧವಾಗಿಯೂ ತಿಳಿಯುವದಕ್ಕೆ ಕಷ್ಟ ವಾದದ್ದಾಗಿಯೂ ಅತಿದೂರದಲ್ಲಿರತಕ್ಕದ್ದಾಗಿಯೂ (ತಮಗಿಂತ) ಬೇರೆ ಯಾದದ್ದೂ ಆಗಿರುವಂತೆ ತೋರುತ್ತದೆ. ಆದರೆ ಹೊರಗಿನ (ವಿಷಯಗಳ) ಆಕಾರಗಳಿಂದ ಹಿಂತಿರುಗಿದ ಬುದ್ಧಿಯವರೂ ಗುರುವಿನ ಮತ್ತು ಪರಮಾತ್ಮನ ಪ್ರಸಾದವನ್ನು ಪಡೆದುಕೊಂಡವರೂ ಆಗಿರುವವರಿಗೆ ಇದಕ್ಕಿಂತ ಸುಖವಾದದ್ದೂ ಸುಪ್ರಸಿದ್ಧವಾದದ್ದೂ ಸುಲಭವಾಗಿ ತಿಳಿಯತಕ್ಕದ್ದೂ ತೀರ ಹತ್ತಿರ ವಿರತಕ್ಕದ್ದೂ (ಮತ್ತೆ ಯಾವದೂ) ಇರುವದಿಲ್ಲ. ಆದ್ದರಿಂದಲೇ "ಪ್ರತ್ಯಕ್ಷ ವಾಗಿ ತಿಳಿಯಬರತಕ್ಕದ್ದು, ಧರ್ಮಕ್ಕೆ ಹೊಂದುವಂಥದ್ದು" (೯-೨) ಎಂದು ಮುಂತಾಗಿ ಹಿಂದೆ ಹೇಳಿರುತ್ತದೆ.**

(ಭಾಷ್ಯ

೫೫೭. ಕೇಚಿತ್ ತು ಪಣ್ಡಿತಂಮನ್ಯಾಃ ನಿರಾಕಾರತ್ವಾತ್ ಆತ್ಮವಸ್ತು ನೋಪೈತಿ ಬುದ್ಧಿಃ । ಅತೋ ದುಃಸಾಧ್ಯಾ ಸಮ್ಯಗ್ಜ್ಞಾನನಿಷ್ಠಾ ಇತ್ಯಾಹುಃ । ಸತ್ಯಮ್ ಏವಮ್ ಗುರುಸಮ್ಪ್ರದಾಯರಹಿತಾನಾಮ್ ಅಶ್ರುತವೇದಾನ್ತಾಮ್ ಅತ್ಯನ್ತಬಹಿರ್ವಿಷಯಾಸಕ್ತಬುದ್ಧೀನಾಂ ಸಮ್ಯಕ್ಪ್ರಮಾಣೇಷು ಅಕೃತಶ್ರಮಾಣಾಮ್। ತದ್ವಿಪರೀತಾನಾಂ ತು ಲೌಕಿಕಗ್ರಾಹ್ಯಗ್ರಾಹಕದ್ವೈತವಸ್ತುನಿ[3] ಸದ್ಬುದ್ಧಿಃ ನಿತರಾಂ ದುಃಸಮ್ಪಾದಾ । ಆತ್ಮಚೈತನ್ಯವ್ಯತಿರೇಕೇಣ ವಸ್ತ್ವನ್ತರಸ್ಯ ಅನುಪಲಬ್ಧೇಃ । ಯಥಾ ಚ ಏತತ್ ಏವಮೇವ ನಾನ್ಯಥಾ ಇತ್ಯವೋಚಾಮ । ಉಕ್ತಂ ಚ ಭಗವತಾ "ಯಸ್ಯಾಂ

---

1. ಪ್ರಸಿದ್ಧವಾಗಿದ್ದರೂ ದೇಹಾದಿಗಳು ಆತ್ಮನೊ ಅಥವಾ ಬೇರೊಂದೊ ಎಂಬ ಸಂಶಯವಿರುವದರಿಂದ ಅದರ ವಿಚಾರವೂ ಅವಶ್ಯ. ಸೂ. ಭಾ. ೧-೧-೧ ರಲ್ಲಿ ಬ್ರಹ್ಮವು ಪ್ರಸಿದ್ಧವೊ, ಅಪ್ರಸಿದ್ಧವೊ ?_ಎಂಬ ವಿಚಾರವನ್ನು ನೋಡಿ.

2. ವಿಷಯಗಳನ್ನೇ ಪರಿಶೀಲಿಸುತ್ತಿರುವ ಅಂತರ್ಮುಖರಲ್ಲದ ಜನರಿಗೆ.

3. 'ವಸ್ತುಷು' ವ||

**ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ" (೨-೬೯) ಇತಿ । ತಸ್ಮಾತ್ ಬಾಹ್ಯಾಕಾರಭೇದಬುದ್ಧಿನಿವೃತ್ತಿರೇವ ಆತ್ಮಸ್ವರೂಪಾವಲಮ್ಬನಕಾರಣಮ್ । ನ ಹಿ ಆತ್ಮಾ ನಾಮ ಕಸ್ಯಚಿತ್ ಕದಾಚಿತ್ ಅಪ್ರಸಿದ್ಧಃ ಪ್ರಾಪ್ಯಃ ಹೇಯಃ ಉಪಾದೇಯೋ ವಾ । ಅಪ್ರಸಿದ್ಧೇ ಹಿ ತಸ್ಮಿನ್ ಆತ್ಮನಿ ಸ್ವಾರ್ಥಾಃ[1] ಸರ್ವಾಃ ಪ್ರವೃತ್ತಯಃ ವ್ಯರ್ಥಾಃ ಪ್ರಸಜ್ಯೇರನ್ । ನ ಚ ದೇಹಾದ್ಯಚೇತನಾರ್ಥತ್ವಂ ಶಕ್ಯಂ ಕಲ್ಪಯಿತುಮ್ । ನ ಚ ಸುಖಾರ್ಥಂ ಸುಖಮ್, ದುಃಖಾರ್ಥಂ ವಾ ದುಃಖಮ್ । ಆತ್ಮಾವಗತ್ಯವಸಾನಾರ್ಥತ್ವಾಚ್ಚ ಸರ್ವವ್ಯವಹಾರಸ್ಯ । ತಸ್ಮಾತ್ ಯಥಾ ಸ್ವದೇಹಸ್ಯ ಪರಿಚ್ಛೇದಾಯ ನ ಪ್ರಮಾಣಾನ್ತರಾಪೇಕ್ಷಾ, ತತೋಽಪಿ ಆತ್ಮನೋಽನ್ತರತಮತ್ವಾತ್ ತದವಗತಿಂ ಪ್ರತಿ ನ ಪ್ರಮಾಣಾನ್ತರಾಪೇಕ್ಷಾ ಇತಿ ಆತ್ಮಜ್ಞಾನನಿಷ್ಠಾ ವಿವೇಕಿನಾಂ ಸುಪ್ರಸಿದ್ಧಾ ಇತಿ ಸಿದ್ಧಮ್ ॥**

(ಭಾಷ್ಯಾರ್ಥ)

ಆದರೆ **ಪಂಡಿತರೆಂದು ಹೇಳಿಕೊಳ್ಳುವ ಕೆಲವರು** ಆತ್ಮವಸ್ತು ನಿರಾಕಾರವಾಗಿರುವದರಿಂದ (ಅದನ್ನು) ಬುದ್ಧಿಯು ಹಿಡಿಯಲಾರದು. ಆದ್ದರಿಂದ **ಸರಿಯಾದ ಜ್ಞಾನದ ನಿಷ್ಠೆಯೆಂಬುದು ಸಾಧ್ಯವಿಲ್ಲ ಎನ್ನುವದು. ನಿಜ, ಗುರುಸಂಪ್ರದಾಯವಿಲ್ಲದೆ ವೇದಾಂತಶ್ರವಣವನ್ನು ಮಾಡದೆ ಅತ್ಯಂತವಾಗಿ ಹೊರಗಿನ ವಿಷಯಗಳಲ್ಲಿಯೇ ಆಸಕ್ತವಾದ ಬುದ್ಧಿಯುಳ್ಳವರೂ ಪ್ರಮಾಣಗಳಲ್ಲಿ ಸರಿಯಾಗಿ ಪರಿಶ್ರಮವನ್ನು ಮಾಡಿಕೊಳ್ಳದವರೂ ಆದವರಿಗೆ ಹೀಗೇ (ಸರಿ), ಆದರೆ ಇದಕ್ಕೆ ವಿರುದ್ಧವಾಗಿರುವವರಿಗೆ ಲೋಕದ ಗ್ರಾಹ್ಯಗ್ರಾಹಕ(ರೂಪವಾದ) ದ್ವೈತವಸ್ತುವಿನಲ್ಲಿ (ಅದು) ಇರುವದೆಂಬ ಬುದ್ಧಿಯು ಅತ್ಯಂತವಾಗಿ ದುರ್ಲಭಯುಕ್ತವಾಗಿರುತ್ತದೆ.** ಏಕೆಂದರೆ (ಅವರಿಗೆ) ಆತ್ಮಚೈತನ್ಯಕ್ಕಿಂತ ಬೇರೆಯಾಗಿ ಮತ್ತೊಂದು ವಸ್ತುವೇ ಕಾಣಿಸುವದಿಲ್ಲ.[2] ಇದು ಹೀಗೆಯೇ ಬೇರೆಯಲ್ಲ ಎಂಬುದನ್ನು ನಾವು ತಿಳಿಸಿಕೊಟ್ಟಿರುತ್ತೇವೆ. "ಯಾವದರಲ್ಲಿ ಭೂತಗಳು ಎಚ್ಚರವಾಗಿರುವವೋ ಅದು ನೋಡುತ್ತಿರುವ ಮುನಿಗೆ ರಾತ್ರಿಯು" (೨-೬೯) ಎಂದು ಭಗವಂತನೂ ಹೇಳಿರುತ್ತಾನೆ.

ಆದ್ದರಿಂದ ಹೊರಗಿನ (ವಿಷಯಗಳ) ಆಕಾರದ ಭೇದಬುದ್ಧಿಯನ್ನು ತೊಲಗಿಸುವದೇ ಆತ್ಮಸ್ವರೂಪವನ್ನು (ಅದು) ಆಶ್ರಯಿಸುವದಕ್ಕೆ ಕಾರಣ(ವಾಗುತ್ತದೆ). ಏಕೆಂದರೆ **ಆತ್ಮನೆಂಬುವನು ಯಾವನಿಗೂ ಎಂದಿಗೂ ಅಪ್ರಸಿದ್ಧನಾಗಿರುವದಿಲ್ಲ,**

---

1. 'ಅಸ್ವಾರ್ಥಾಃ' ಎಂಬ ಆ॥ಗಿ॥ ಪಾಠವು ಸರಿಯಲ್ಲ.
2. ಮಾಂ. ಕಾ. ಭಾ. ೪-೮೯, ೯೦.

ಪಡೆದುಕೊಳ್ಳಬೇಕಾದವನು, ಬಿಡತಕ್ಕವನು, ಅಥವಾ ತೆಗೆದುಕೊಳ್ಳತಕ್ಕವನು ಆಗಿರುವದಿಲ್ಲ.[1] **ಅವನು ಸುಪ್ರಸಿದ್ಧನಾಗಿದ್ದರೆ ತನಗಾಗಿ (ಮಾಡುವ) ಸರ್ವ ಪ್ರವೃತ್ತಿಗಳೂ ವ್ಯರ್ಥವಾಗುತ್ತಿದ್ದವು.**[2] (ಆ ಪ್ರವೃತ್ತಿಗಳು) ದೇಹವೇ ಮುಂತಾದ ಅನಾತ್ಮಕ್ಕಾಗಿ ಎಂದು ಕಲ್ಪಿಸುವದಕ್ಕೂ ಆಗುತ್ತಿರಲಿಲ್ಲ. ಸುಖವು ಸುಖಕ್ಕಾಗಿ, ದುಃಖವು ದುಃಖಕ್ಕಾಗಿ ಎಂದೂ (ಹೇಳುವದಕ್ಕೂ ಆಗುವ)ದಿಲ್ಲ.[3] **ಸರ್ವವ್ಯವಹಾರವೂ ಆತ್ಮನ ಅರಿವಿನಲ್ಲಿ ಕೊನೆಗಾಣುವದರಿಂದಲೂ** (ಹೀಗೆಂದು ತಿಳಿಯಬೇಕಾಗಿದೆ).[4] ಆದ್ದರಿಂದ ತನ್ನ ದೇಹವನ್ನು ಹೀಗೆಂದು ಗೊತ್ತುಪಡಿಸಿಕೊಳ್ಳುವದಕ್ಕೆ ಮತ್ತೊಂದು ಪ್ರಮಾಣವು ಹೇಗೆ ಬೇಕಿಲ್ಲವೋ, ಅದಕ್ಕಿಂತಲೂ ಆತ್ಮನು ಇನ್ನೂ ಒಳಗಿರುವದರಿಂದ ಅವನನ್ನು ಅರಿತುಕೊಳ್ಳುವದಕ್ಕೆ ಮತ್ತೊಂದು ಪ್ರಮಾಣವು ಬೇಕಿರುವದಿಲ್ಲ.[5] ಆದ್ದರಿಂದ ಆತ್ಮಜ್ಞಾನನಿಷ್ಠೆಯು ವಿವೇಕಿಗಳಿಗೆ ಅತ್ಯಂತ ಪ್ರಸಿದ್ಧ(ವಾಗಿರುವ)ದೆಂದು ಸಿದ್ಧವಾಯಿತು.

(ಭಾಷ್ಯ)

೫೫೮. ಯೇಷಾಮುಪಿ ನಿರಾಕಾರಂ ಜ್ಞಾನಮ್ ಅಪ್ರತ್ಯಕ್ಷಮ್ ತೇಷಾಮುಪಿ ಜ್ಞಾನವಶ್ಯೈವ ಜ್ಞೇಯಾವಗತಿಃ ಇತಿ ಜ್ಞಾನಮ್ ಅತ್ಯನ್ತಂ ಪ್ರಸಿದ್ಧಂ ಸುಖಾದಿವದೇವ ಇತಿ ಅಭ್ಯುಪಗನ್ತವ್ಯಮ್ । ಜಿಜ್ಞಾಸಾನುಪಪತ್ತೇಶ್ಚ । ಅಪ್ರಸಿದ್ಧಂ ಚೇತ್ ಜ್ಞಾನಂ ಜ್ಞೇಯುವತ್ ಜಿಜ್ಞಾಸ್ಯೇತ। ಯಥಾ ಜ್ಞೇಯಂ ಘಟಾದಿಲಕ್ಷಣಂ ಜ್ಞಾನೇನ

---

1 ಪ್ರಮೇಯಗಳು ಅಪ್ರಸಿದ್ಧವಾಗಿರುವದರಿಂದ ಅವಕ್ಕೆ ಪ್ರಮಾಣದ ಅಪೇಕ್ಷೆಯಿರಬಹುದು, ಆತ್ಮನಿಗೆ ಅದು ಬೇಕಿಲ್ಲ. ೨-೧೮ರ ಭಾಷ್ಯವನ್ನು ನೋಡಿ; ಸೂ. ಭಾ. ೧-೧-೪, ೨-೩-೭ ಇವುಗಳಲ್ಲಿ ಆತ್ಮನು ಅಪ್ರತ್ಯಾಖ್ಯೇಯನೆಂಬುದನ್ನು ತಿಳಿಸಿದೆ.

2. ಏಕೆಂದರೆ ತನಗಾಗಿಯೇ ಸರ್ವವೂ ಬೇಕಾಗಿದೆ.

3. ಉ. ಸಾ. ಗ. ೧.

4. ೯-೧೦ರ ಭಾಷ್ಯದಲ್ಲಿ ಭಾ. ಭಾ. ೧೭ "ದೃಶಿಕರ್ಮತ್ವಾಪತ್ತಿನಿಮಿತ್ತಾ ಹಿ ಅವಗತ್ಯಸಾನ್ನೈವ" ಎಂಬ ವಾಕ್ಯವನ್ನು ನೋಡಿರಿ.

5. ತನಗೆ ದೇಹವಿರುವದೆಂಬುದು ಅನುಭವಸಿದ್ಧವಾಗಿರುವದರಿಂದ ಹೇಗೆ ಅದನ್ನು ಸಿದ್ಧಪಡಿಸುವದಕ್ಕೆ ಮತ್ತೊಂದು ಪ್ರಮಾಣವು ಬೇಕಿಲ್ಲವೋ ಹಾಗೆ ಆತ್ಮನಿಗೂ ಬೇಕಿಲ್ಲ ಎಂಬಂಶದಲ್ಲಿ ಹೋಲಿಕೆ. ದೇಹವುಕೂಡ ಪ್ರಮಾಣಸಿದ್ಧವೇ, ಆತ್ಮನು ಸ್ವತಃಸಿದ್ಧನಾಗಿರುವಂತೆ ಅದು ತಾನೇ ಸಿದ್ಧವಾಗಿರುವದಿಲ್ಲ ಎಂಬುದನ್ನು ಮರೆಯಬಾರದು.

ಜ್ಞಾತಾ ವ್ಯಾಪ್ತುಮ್[1] ಇಚ್ಛತಿ ತಥಾ ಜ್ಞಾನಮಪಿ ಜ್ಞಾನಾನ್ತರೇಣ[2] ಆಪ್ತುಮ್ ಇಚ್ಛೇತ್ । ನ ಚೈತದಸ್ತಿ । ಅತಃ ಅತ್ಯನ್ತಪ್ರಸಿದ್ಧಂ ಜ್ಞಾನಮ್ । ಜ್ಞಾತಾಪಿ ಅತ ಏವ ಪ್ರಸಿದ್ಧಃ ಇತಿ । ತಸ್ಮಾತ್ ಜ್ಞಾನೇ[3] ಯತ್ನೋ ನ ಕರ್ತವ್ಯಃ, ಕಿಂ ತು ಅನಾತ್ಮನಿ ಆತ್ಮಬುದ್ಧಿನಿವೃತ್ತಾವೇವ । ತಸ್ಮಾತ್ ಜ್ಞಾನನಿಷ್ಠಾ ಸುಸಂಪಾದ್ಯಾ ॥

(ಭಾಷ್ಯಾರ್ಥ)

(ಇನ್ನು) ಯಾರ (ಪಕ್ಷದಲ್ಲಿ) ಜ್ಞಾನವು ನಿರಾಕಾರವೂ[3] ಅಪ್ರತ್ಯಕ್ಷವೂ ಆಗಿರುವದೋ, ಅವರ (ಪಕ್ಷದಲ್ಲಿ)ಯೂ ಜ್ಞೇಯವನ್ನು ಅರಿತುಕೊಳ್ಳುವದು ಜ್ಞಾನದ ಅಧೀನವಾಗಿಯೇ (ಇರುವ)ದರಿಂದ ಜ್ಞಾನವು ಸುಖಾದಿಗಳಂತೆಯೇ ಅತ್ಯಂತ ಪ್ರಸಿದ್ಧ ವಾಗಿರುತ್ತದೆ,[4] ಎಂದು ಒಪ್ಪಿಕೊಳ್ಳಬೇಕಾಗುತ್ತದೆ. (ಅದನ್ನು) ಅರಿತುಕೊಳ್ಳುವದ ಕ್ಕಾಗಿ) ವಿಚಾರವು ಹೊಂದುವದಿಲ್ಲವಾದ್ದರಿಂದಲೂ, (ಅದು ಪ್ರಸಿದ್ಧವೆಂದು ಅವರು ಒಪ್ಪಬೇಕು). ಜ್ಞಾನವು ಅಪ್ರಸಿದ್ಧವಾಗಿದ್ದರೆ ಜ್ಞೇಯದಂತೆಯೇ ಅದನ್ನು ಅರಿಯು ವದಕ್ಕೆ (ಜನರು) ಪ್ರಯತ್ನಿಸಬೇಕಾಗಿತ್ತು. ಹೇಗೆ ಗಡಿಗೆಯೇ ಮುಂತಾದ ರೂಪದ ಜ್ಞೇಯವನ್ನು ಜ್ಞಾತೃವಾದವನು ಜ್ಞಾನದಿಂದ ಪಡೆಯುವದಕ್ಕೆ ಇಚ್ಛಿಸು ತ್ತಾನೋ ಅದರಂತೆ ಜ್ಞಾನವನ್ನು ಕೂಡ ಮತ್ತೊಂದು ಜ್ಞಾನದಿಂದ ಪಡೆಯುವದಕ್ಕೆ ಇಚ್ಛಿಸಬೇಕಾಗಿತ್ತು; ಆದರೆ ಹಾಗಿಲ್ಲ. ಆದ್ದರಿಂದ ಜ್ಞಾನವು ಅತ್ಯಂತ ಪ್ರಸಿದ್ಧವಾಗಿರು ತ್ತದೆ.[5] ಆದ್ದರಿಂದಲೇ[6] ಜ್ಞಾತೃವೂ ಪ್ರಸಿದ್ಧನಾಗಿರುತ್ತಾನೆ (ಎಂದು ತಿಳಿಯಬೇಕು).

---

1. 'ಜ್ಞಾತವ್ಯಮ್ ಆಪ್ತುಮ್' ಮು॥ವ್ಯಾ॥

2. ಇಲ್ಲಿ "ಜ್ಞಾತವ್ಯಮ್" ಆ॥ಗು॥ ಇಲ್ಲದಿದ್ದರೂ ಆಗುತ್ತದೆಯೆಂದು ತೋರು ವದು.

3. ಜ್ಞಾನವೇ ನಿರಾಕಾರವಾದರೆ ಆತ್ಮಾಕಾರವಾದ ಜ್ಞಾನವೆಂಬುದೂ ಅಪ್ರಸಿದ್ಧವಾಗು ತ್ತದೆ. ಆದ್ದರಿಂದ ಜ್ಞಾನವು ನಿರಾಕಾರ, ಅಪ್ರತ್ಯಕ್ಷ—ಎಂಬ ಮೀಮಾಂಸಕರ ಮತವನ್ನು ಇಲ್ಲಿ ಖಂಡಿಸಿದೆ.

4. ಸುಖ, ದುಃಖ—ಮುಂತಾದವು ಹೇಗೆ ನಮಗೆ ಅನುಭವದಲ್ಲಿರುತ್ತವೆಯೋ ಹಾಗೆಯೇ ಜ್ಞಾನವೂ ಇದೆ ; ಜ್ಞಾನವುಂಟಾಗಿದೆ, ಇಲ್ಲ—ಎಂದು ಗೊತ್ತಾಗುವದಕ್ಕೆ ಪ್ರಮಾಣ ವನ್ನೇನೂ ನಾವು ಬಯಸುವದಿಲ್ಲ—ಎಂದು ಭಾವ.

5. ಜ್ಞಾನವು ಸಾಕ್ಷಿಪ್ರತ್ಯಕ್ಷಸಿದ್ಧವೆಂದು ಇಲ್ಲಿ ಹೇಳಿದಂತಾಯಿತು.

6. ಜ್ಞಾತೃವನ್ನು ಅರಿಯುವದಕ್ಕೆ ಯಾರೊಬ್ಬರೂ ಇಚ್ಛಿಸುವದಿಲ್ಲವೆಂಬ ಕಾರಣ ದಿಂದಲೇ.

ಆದ್ದರಿಂದ ಜ್ಞಾನಕ್ಕಾಗಿ ಯತ್ನವನ್ನು ಮಾಡಬೇಕಾದದ್ದಿಲ್ಲ ; ಅನಾತ್ಮ(ದಲ್ಲಿರುವ) ಆತ್ಮಬುದ್ಧಿಯನ್ನು ತೊಲಗಿಸಿಕೊಳ್ಳುವದಕ್ಕಾಗಿಯೇ (ಪ್ರಯತ್ನವನ್ನು ಮಾಡ ಬೇಕಾಗಿರುತ್ತದೆ). ಆದ್ದರಿಂದ ಜ್ಞಾನನಿಷ್ಠೆಯನ್ನು ಸುಲಭವಾಗಿ ಪಡೆದುಕೊಳ್ಳಬಹುದು.

## ಜ್ಞಾನನಿಷ್ಠೆಯನ್ನು ಪಡೆಯುವ ಮಾರ್ಗ

(ಭಾಷ್ಯ)

೫೫೯. ಸೇಯಂ ಜ್ಞಾನಸ್ಯ ಪರಾ ನಿಷ್ಠಾ ಉಚ್ಯತೇ ಕಥಂ ಕಾರ್ಯಾ ಇತಿ—

(ಭಾಷ್ಯಾರ್ಥ)

ಆ ಈ ಜ್ಞಾನದ ಹೆಚ್ಚಿನ ನಿಷ್ಠೆಯನ್ನು ಹೇಗೆ ಮಾಡಿಕೊಳ್ಳಬೇಕೆಂಬುದನ್ನು (ಈಗ) ಹೇಳಲಾಗುತ್ತದೆ:—

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥೫೧॥**
**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥**
**ಅಹಙ್ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ॥೫೩॥**

೫೧-೫೩. ವಿಶುದ್ಧವಾದ ಬುದ್ಧಿಯಿಂದ ಯುಕ್ತನಾಗಿ, ಧೃತಿಯಿಂದ ತನ್ನನ್ನು ನಿಯಮದಲ್ಲಿಟ್ಟುಕೊಂಡು, ಶಬ್ದವೇ ಮುಂತಾದ ವಿಷಯಗಳನ್ನು ಬಿಟ್ಟು ರಾಗದ್ವೇಷಗಳನ್ನು ತಿರಸ್ಕರಿಸಿ ; ವಿವಿಕ್ತಸೇವಿಯೂ ಲಘ್ವಾಶಿಯೂ ಯತವಾಕ್ಕಾಯಮಾನಸನೂ ಆಗಿ; ಯಾವಾಗಲೂ ಧ್ಯಾನಯೋಗಪರನಾಗಿ ವೈರಾಗ್ಯವನ್ನು ಆಶ್ರಯಿಸಿ ; ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ, ಪರಿಗ್ರಹ-ಇವನ್ನು ಬಿಟ್ಟು ನಿರ್ಮಮನೂ ಶಾಂತನೂ ಆಗಿರುವವನು ಬ್ರಹ್ಮಭೂಯಕ್ಕೆ ತಕ್ಕವನಾಗುತ್ತಾನೆ.

(ಭಾಷ್ಯ)

೫೬೦. ಬುದ್ಧ್ಯಾ ಅಧ್ಯವಸಾಯಾತ್ಮಿಕಯಾ[1] ವಿಶುದ್ಧಯಾ ಮಾಯಾ

---

1. 'ಅಧ್ಯವಸಾಯಲಕ್ಷಣಯಾ' ಮು॥ಮೈ॥ವಾ॥

ರಹಿತಯಾ ಯುಕ್ತಃ ಸಂಪನ್ನಃ । ಧೃತ್ಯಾ ಧೈರ್ಯೇಣ ಆತ್ಮಾನಂ ಕಾರ್ಯಕರಣ ಸಙ್ಘಾತಂ ನಿಯಮ್ಯ ಚ ನಿಯಮನಂ ಕೃತ್ವಾ ವಶೀಕೃತ್ಯ । ಶಬ್ದಾದೀನ್ । ಶಬ್ದಃ ಆದಿಃ ಯೇಷಾಂ ತೇ ಶಬ್ದಾದಯಃ ತಾನ್ ವಿಷಯಾನ್ ತ್ಯಕ್ತ್ವಾ। ಸಾಮರ್ಥ್ಯಾತ್ ಶರೀರಸ್ಥಿತಿಮಾತ್ರಹೇತುಭೂತಾನ್ ಕೇವಲಾನ್ ಮುಕ್ತ್ವಾ ತತೋಽಧಿಕಾನ್ ಸುಖಾರ್ಥಾನ್ ತ್ಯಕ್ತ್ವಾ ಇತ್ಯರ್ಥಃ । ಶರೀರಸ್ಥಿತ್ಯರ್ಥತ್ವೇನ ಪ್ರಾಪ್ತೇಷು [1] ರಾಗ ದ್ವೇಷೌ ವ್ಯುದಸ್ಯ ಚ ಪರಿತ್ಯಜ್ಯ ಚ—

(ಭಾಷ್ಯಾರ್ಥ)

ವಿಶುದ್ಧವಾದ, ಮಾಯೆಯಿಲ್ಲದ ಬುದ್ಧಿಯಿಂದ ನಿಶ್ಚಯರೂಪವಾದ (ಅಂತಃ ಕರಣದಿಂದ) ಯುಕ್ತನಾಗಿ ಒಡಗೂಡಿದವನಾಗಿ; ಧೃತಿಯಿಂದ ಧೈರ್ಯದಿಂದ ತನ್ನನ್ನು (ತನ್ನ) ಕಾರ್ಯಕರಣಗಳ ಸಂಘಾತವನ್ನು ನಿಯಮಿಸಿಕೊಂಡು ನಿಯಮನ ಮಾಡಿಕೊಂಡು,ಅಳವಡಿಸಿಕೊಂಡು; ಶಬ್ದಾದಿಗಳಾದ-ಶಬ್ದವು ಯಾವದಕ್ಕೆ ಆದಿಯೋ ಅವು ಶಬ್ದಾದಿಗಳು ; ಆ (ಶಬ್ದವೇ ಮುಂತಾದ)-ವಿಷಯಗಳನ್ನು ಬಿಟ್ಟು. (ಶಬ್ದಾದಿ ಗಳನ್ನು ಬಿಟ್ಟು ಎಂದರೆ) ಅರ್ಥವಶದಿಂದ ಶರೀರವು ಇರುವದಕ್ಕೆ ಕಾರಣವಾಗಿರುವ (ಶಬ್ದಾದಿಗಳನ್ನು) ಮಾತ್ರ ಬಿಟ್ಟು ಅದಕ್ಕಿಂತ ಹೆಚ್ಚಾಗಿರುವ ಸುಖಕ್ಕಾಗಿ (ಬೇಕಾ ಗಿರುವ ಶಬ್ದಾದಿಗಳನ್ನು) ಬಿಟ್ಟು ಎಂದು ಅರ್ಥ(ವನ್ನು ಮಾಡಬೇಕು). ಮತ್ತು ಶರೀರವು ಇರುವದಕ್ಕಾಗಿ (ಬೇಕಾಗಿ) ಒದಗಿದ (ವಿಷಯಗಳಲ್ಲಿ) ರಾಗದ್ವೇಷಗಳನ್ನು ತಿರಸ್ಕರಿಸಿ, ಬಿಟ್ಟು—

(ಭಾಷ್ಯ)

೫೨. ತತಃ ವಿವಿಕ್ತಸೇವೀ ಅರಣ್ಯನದೀಪುಲಿನಗಿರಿಗುಹಾದೀನ್ ವಿವಿಕ್ತಾನ್ ದೇಶಾನ್ ಸೇವಿತುಂ ಶೀಲಮ್ ಅಸ್ಯ ಇತಿ ವಿವಿಕ್ತಸೇವೀ । ಲಘ್ವಾಶೀ ಲಘ್ವಶನಶೀಲಃ । ವಿವಿಕ್ತಸೇವಾಲಘ್ವಶನಯೋಃ ನಿದ್ರಾದಿದೋಷನಿವರ್ತಕತ್ವೇನ ಚಿತ್ತಪ್ರಸಾದ ಹೇತುತ್ವಾತ್ ಗ್ರಹಣಮ್। ಯತವಾಕ್ಕಾಯಮಾನಸಃ । ವಾಕ್ಚ ಕಾಯಶ್ಚ ಮಾನಸಂ ಚ ಯತಾನಿ ಸಂಯತಾನಿ ಯಸ್ಯ ಜ್ಞಾನನಿಷ್ಠಸ್ಯ ಸಃ ಜ್ಞಾನನಿಷ್ಠೋ ಯತಿಃ ಯತವಾಕ್ಕಾಯಮಾನಸಃ ಸ್ಯಾತ್ । ಯ ಏವಮ್ ಉಪರತಸರ್ವಕರಣಃ ಸನ್ ಧ್ಯಾನಯೋಗಪರಃ। ಧ್ಯಾನಮ್ ಆತ್ಮಸ್ವರೂಪಚಿನ್ತನಮ್ । ಯೋಗಃ ಆತ್ಮವಿಷಯೇ ಏವ ಏಕಾಗ್ರೀಕರಣಮ್ । ತೌ ಧ್ಯಾನಯೋಗೌ ಪರತ್ವೇನ ಕರ್ತವ್ಯೌ ಯಸ್ಯ ಸಃ

---

1. ‘ಅನುಪ್ರಾಪ್ತೇಷು’ ಮ॥

ಧ್ಯಾನಯೋಗಪರಃ । ನಿತ್ಯಮ್ । ನಿತ್ಯಗ್ರಹಣಂ ಮನ್ತ್ರಜಪಾದ್ಯನ್ಯಕರ್ತವ್ಯಾಭಾವ ಪ್ರದರ್ಶನಾರ್ಥಮ್ । ವೈರಾಗ್ಯಂ ವಿರಾಗಭಾವಃ ದೃಷ್ಟಾದೃಷ್ಟೇಷು ವಿಷಯೇಷು ವೈತೃಷ್ಣ್ಯಮ್ [1] । ಸಮುಪಾಶ್ರಿತಃ ಸಮ್ಯಕ್ ಉಪಾಶ್ರಿತಃ ನಿತ್ಯಮೇವ ಇತ್ಯರ್ಥಃ ॥

(ಭಾಷ್ಯಾರ್ಥ)

ಬಳಿಕ ವಿವಿಕ್ತಸೇವಿಯೂ ಅರಣ್ಯ, ನದಿ, ಮಳಲೊಟ್ಟಿಲು, ಬೆಟ್ಟದ ಗವಿ- ಮುಂತಾದ ಏಕಾಂತಸ್ಥಲಗಳನ್ನು [2] ಸೇವಿಸುವ ಸ್ವಭಾವವು ಇವನದಾದ್ದರಿಂದ (ಇವನು)ವಿವಿಕ್ತಸೇವಿಯು ; (ಅಂಥವನೂ) ಲಘ್ವಾಶಿಯೂ ಅಲ್ಪವಾಗಿ ಆಹಾರವನ್ನು ತೆಗೆದುಕೊಳ್ಳುವ ಸ್ವಭಾವದವನೂ-ವಿವಿಕ್ತಸೇವಿತ್ವ, ಲಘ್ವಶನ, ಇವುಗಳು ನಿದ್ರೆಯೇ ಮುಂತಾದ ದೋಷವನ್ನು ತೊಲಗಿಸುವದರಿಂದ ಚಿತ್ತವು ತಿಳಿಯಾಗುವದಕ್ಕೆ ಕಾರಣ ವಾಗಿರುವದರಿಂದ (ಅವನ್ನು ಇಲ್ಲಿ) ಹೇಳಿದೆ— ಯತವಾಕ್ಕಾಯಮಾನಸನು: ವಾಕ್ಕು, ಕಾಯ, ಮನಸ್ಸು-ಇವು ಯಾವ ಜ್ಞಾನನಿಷ್ಠನಿಗೆ ಯತವಾಗಿರುವವೋ ಬಿಗಿಹಿಡಿಯ ಲ್ಪಟ್ಟಿರುವವೋ ಆ ಜ್ಞಾನನಿಷ್ಠನಾದ ಯತಿಯು ಯತವಾಕ್ಕಾಯಮಾನಸನಾಗುವನು. ಹೀಗೆ ಎಲ್ಲಾ ಕರಣಗಳೂ ಸುಮ್ಮನಾದವನಾಗಿ ಧ್ಯಾನಯೋಗಪರನು : **ಧ್ಯಾನ**ವೆಂದರೆ ಆತ್ಮಸ್ವರೂಪವನ್ನು ಕುರಿತು ಚಿಂತಿಸುವದು, **ಯೋಗ**ವೆಂದರೆ ಆತ್ಮವಿಷಯದಲ್ಲಿಯೇ ಚಿತ್ತವನ್ನು ಏಕಾಗ್ರವಾಗಿ ಮಾಡಿಕೊಳ್ಳುವದು ; ಈ ಧ್ಯಾನಯೋಗಗಳೇ ಎಲ್ಲಕ್ಕೂ ಹೆಚ್ಚೆಂದು ಮಾಡುತ್ತಿರುವದು ಯಾವನಿಗೋ ಅವನು ಧ್ಯಾನಯೋಗಪರನು. ನಿತ್ಯವೂ (ಧ್ಯಾನಯೋಗಪರನಾಗಿ) ಎಂದು **ನಿತ್ಯವೆಂಬ (ಮಾತನ್ನು) ಉಪಯೋಗಿಸಿರುವದು ಮಂತ್ರಜಪವೇ ಮುಂತಾದ ಮತ್ತೇನನ್ನೂ ಮಾಡಬೇಕಾದದ್ದಿಲ್ಲವೆಂಬುದನ್ನು ತಿಳಿಸುವದಕ್ಕೆ**. ವೈರಾಗ್ಯವೆಂದರೆ ವಿರಾಗದ ಭಾವವು, ಕಂಡ (ಈ ಲೋಕದ) ಕಾಣದ (ಪರಲೋಕದ) ವಿಷಯಗಳಲ್ಲಿ ಬಯಕೆಯಿಲ್ಲದಿರುವದು. (ಅದನ್ನು) ಸಮುಪಾಶ್ರಯಿಸಿ, ಚೆನ್ನಾಗಿ ಯಾವಾಗಲೂ ಆಶ್ರಯಿಸಿದವನಾಗಿ ಎಂದರ್ಥ.

(ಭಾಷ್ಯ)

೫೬೨. ಕಿಂಚ ಅಹಙ್ಕಾರಮ್ । ಅಹಂಕರಣಮ್ ಅಹಙ್ಕಾರಃ ದೇಹೇನ್ದ್ರಿಯಾದಿಷು ;[3] ತಮ್ । ಬಲಂ ಸಾಮರ್ಥ್ಯಂ ಕಾಮರಾಗಾದಿಯುಕ್ತಮ್,[4] ನೇತರತ್

1. ಇದಾದಮೇಲೆ 'ವೈರಾಗ್ಯಂ' ಎಂದು ಮತ್ತೆ ಇರಬೇಕೆಂದು ತೋರುತ್ತದೆ.
2. ಶ್ವೇ. ೨-೧೦.
3. 'ದೇಹಾದಿಷು' ಮ॥
4. 'ಕಾಮರಾಗಸಂಯುಕ್ತಮ್' ಮ॥ ಮೈ॥

ಶರೀರಾದಿಸಾಮರ್ಥ್ಯಂ ಸ್ವಾಭಾವಿಕತ್ವೇನ ತತ್ತ್ಯಾಗಸ್ಯ ಅಶಕ್ಯತ್ವಾತ್ । ದರ್ಪಂ ದರ್ಪೋ ನಾಮ ಹರ್ಷಾನನ್ತರಭಾವೀ ಧರ್ಮಾತಿಕ್ರಮಹೇತುಃ।" ಹೃಷ್ಟೋ ದೃಪ್ಯತಿ, ದೃಪ್ತೋ ಧರ್ಮಮ್ ಅತಿಕ್ರಾಮತಿ'' (ಆ. ಧ. ಸೂ. ೧-೧೩-೪) ಇತಿ ಸ್ಮರಣಾತ್। ತಂ ಚ । ಕಾಮಮ್ ಇಚ್ಛಾಮ್ । ಕ್ರೋಧಂ ದ್ವೇಷಮ್ । ಪರಿಗ್ರಹಮ್ ಇನ್ದ್ರಿಯ ಮನೋಗತದೋಷಪರಿತ್ಯಾಗೇಽಪಿ ಶರೀರಧಾರಣಪ್ರಸಙ್ಗೇನ ಧರ್ಮಾನುಷ್ಠಾನನಿಮಿತ್ತೇನ ವಾ ಬಾಹ್ಯಃ ಪರಿಗ್ರಹಃ ಪ್ರಾಪ್ತಃ । ತಂ ಚ । ವಿಮುಚ್ಯ ಪರಿತ್ಯಜ್ಯ ಪರಮಹಂಸಪರಿವ್ರಾಜಕೋ ಭೂತ್ವಾ । ದೇಹಜೀವನಮಾತ್ರೇಽಪಿ ನಿರ್ಗತಮಮಭಾವಃ ನಿರ್ಮಮಃ। ಅತ ಏವ ಶಾನ್ತಃ ಉಪರತಃ । ಯಃ ಸಂಹೃತಹರ್ಷಾಯಾಸೋ[1] ಯತಿಃ ಜ್ಞಾನನಿಷ್ಠಃ ಬ್ರಹ್ಮಭೂಯಾಯ ಬ್ರಹ್ಮಭವನಾಯ ಕಲ್ಪತೇ ಸಮರ್ಥೋ ಭವತಿ ॥

(ಭಾಷ್ಯಾರ್ಥ)

ಮತ್ತು **ಅಹಂಕಾರವನ್ನು :** ದೇಹ, ಇನ್ದ್ರಿಯ—ಮುಂತಾದವುಗಳಲ್ಲಿ ನಾನೆಂದು (ಅಭಿಮಾನವನ್ನು) ಮಾಡುವದು ಅಹಂಕಾರವು, ಅದನ್ನು. **ಬಲವನ್ನು :** ಕಾಮರಾಗಾದಿಗಳಿಂದೊಡಗೂಡಿದ[2] ಸಾಮರ್ಥ್ಯವನ್ನು ; ಶರೀರವೇ ಮುಂತಾದದ್ದರ ಸಾಮರ್ಥ್ಯವನ್ನಲ್ಲ, ಏಕೆಂದರೆ ಅದು ಸ್ವಾಭಾವಿಕವಾಗಿರುವದರಿಂದ ಅದನ್ನು ಬಿಡುವದು ಆಗಲಾರದು. **ದರ್ಪವನ್ನು :** ದರ್ಪವೆಂದರೆ ಹರ್ಷವುಂಟಾದಮೇಲೆ ಧರ್ಮವನ್ನು ಮೀರುವದಕ್ಕೆ ಕಾರಣವಾದ (ಸೊಕ್ಕು). "ಹೃಷ್ಟನಾದವನು ದೃಪ್ತನಾಗುತ್ತಾನೆ, ದೃಪ್ತನಾದವನು ಧರ್ಮವನ್ನು ಮೀರುತ್ತಾನೆ" (ಆ. ಧ. ಸೂ. ೧-೧೩-೪) ಎಂಬ ಸ್ಮೃತಿಯು ಇದಕ್ಕೆ ಪ್ರಮಾಣವು. ಅದನ್ನೂ. **ಕಾಮವನ್ನು,** ಇಚ್ಛೆಯನ್ನು. **ಕ್ರೋಧವನ್ನು** ಹಗೆತನವನ್ನು. **ಪರಿಗ್ರಹವನ್ನು :** ಇಂದ್ರಿಯಗಳಲ್ಲಿಯೂ ಮನಸ್ಸಿನಲ್ಲಿಯೂ ಇರುವ ದೋಷಗಳನ್ನು ಕೈಬಿಟ್ಟರೂ ಶರೀರಧಾರಣೆಯ ಕಾರಣದಿಂದಲೋ ಧರ್ಮವನ್ನು ಮಾಡುವ ನಿಮಿತ್ತದಿಂದಲೋ ಹೊರಗಿನ (ವಸ್ತುವನ್ನು) ಇಟ್ಟುಕೊಳ್ಳಬೇಕಾಗುತ್ತದೆ ; ಅದನ್ನೂ ಬಿಟ್ಟು ಪರಿತ್ಯಾಗಮಾಡಿ. **ಪರಮಹಂಸಪರಿವ್ರಾಜಕನಾಗಿ** (ಎಂದರ್ಥ). ದೇಹವು ಬದುಕಿರಬೇಕೆಂಬುದರಲ್ಲಿಕೂಡ ನನ್ನದೆಂಬ ಭಾವನೆಯಿಲ್ಲದವನಾಗಿ ನಿರ್ಮಮನಾದವನು; ಆದ್ದರಿಂದಲೇ **ಶಾಂತನಾಗಿ** ಉಪರತನಾಗಿ ಯಾವ ಹರ್ಷಾಯಾಸವೂ ಇಲ್ಲದ ಜ್ಞಾನನಿಷ್ಠನಾದ ಯತಿಯು **ಬ್ರಹ್ಮಭೂಯಕ್ಕೆ,** ಬ್ರಹ್ಮವೇ(ತಾನಾ)ಗುವದಕ್ಕೆ ತಕ್ಕವನಾಗುತ್ತಾನೆ, ಸಮರ್ಥನಾಗುತ್ತಾನೆ.

---

1. 'ಸಂಹೃತಾಯಾಸಃ' ಪಾ॥

2. 'ಕಾಮರಾಗಗಳಿಂದೊಡಗೂಡಿದ' ಎಂದು ಮ॥ಪಾಠಕ್ಕೆ ಅರ್ಥ. ಅಷ್ಟೇ ಇದ್ದರೂ ಸಾಕೆಂದು ತೋರುತ್ತದೆ.

## ಜ್ಞಾನನಿಷ್ಠೆಯ ಫಲ

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಙ್ಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥೫೪॥**

೫೪. ಬ್ರಹ್ಮವಾಗಿ ಪ್ರಸನ್ನಾತ್ಮನಾದವನು ಶೋಕಿಸುವದಿಲ್ಲ, ಕಾಂಕ್ಷಿಸುವದಿಲ್ಲ; ಸರ್ವಭೂತಗಳಲ್ಲಿಯೂ ಸಮನಾಗಿ ಪರವಾದ ಮದ್ಭಕ್ತಿಯನ್ನು ಪಡೆದುಕೊಳ್ಳುತ್ತಾನೆ.

(ಭಾಷ್ಯ)

೫೬೩. ಅನೇನ ಕ್ರಮೇಣ ಬ್ರಹ್ಮಭೂತಃ ಬ್ರಹ್ಮಪ್ರಾಪ್ತಃ ಪ್ರಸನ್ನಾತ್ಮಾ ಲಬ್ಧಾಧ್ಯಾತ್ಮಪ್ರಸಾದಃ ನ ಶೋಚತಿ । ಕಿಂಚಿತ್ ಅರ್ಥವೈಕಲ್ಯಮ್ ಆತ್ಮನಃ ವೈಗುಣ್ಯಂ ವಾ ಉದ್ದಿಶ್ಯ ನ ಶೋಚತಿ ನ ಸಂತಪ್ಯತೇ । ನ ಕಾಙ್ಕ್ಷತಿ । ಬ್ರಹ್ಮಭೂತಸ್ಯ ಅಯಂ ಸ್ವಭಾವಃ ಅನೂದ್ಯತೇ ' ನ ಶೋಚತಿ ನ ಕಾಙ್ಕ್ಷತಿ ' ಇತಿ । ನ ಹಿ ಅಪ್ರಾಪ್ತವಿಷಯಾಕಾಙ್ಕ್ಷಾ ಬ್ರಹ್ಮವಿದಃ ಉಪಪದ್ಯತೇ[1] । ನ ಹೃಷ್ಯತಿ ಇತಿ ವಾ ಪಾಠಃ[2] । ಸಮಃ ಸರ್ವೇಷು ಭೂತೇಷು । ಆತ್ಮೌಪಮ್ಯೇನ ಸರ್ವೇಷು ಭೂತೇಷು[3] ಸುಖಂ ದುಃಖಂ ವಾ ಸಮಮೇವ ಪಶ್ಯತಿ ಇತ್ಯರ್ಥಃ । ನಾತ್ಮಸಮದರ್ಶನಮ್ ಇಹ । ತಸ್ಯ ವಕ್ಷ್ಯಮಾಣತ್ವಾತ್ " ಭಕ್ತ್ಯಾ ಮಾಮ್ ಅಭಿಜಾನಾತಿ " (೧೮-೫೫) ಇತಿ । ಏವಂಭೂತಃ[4] ಜ್ಞಾನನಿಷ್ಠಃ ಮದ್ಭಕ್ತಿಂ ಮಯಿ ಪರಮೇಶ್ವರೇ ಭಕ್ತಿಂ ಭಜನಮ್ ಪರಾಮ್ ಉತ್ತಮಾಂ ಜ್ಞಾನಲಕ್ಷಣಾಂ ಚತುರ್ಥೀಂ ಲಭತೇ । ಚತುರ್ವಿಧಾ ಭಜನ್ತೇ ಮಾಮ್ " (೭-೧೬) ಇತಿ ಹಿ ಉಕ್ತಮ್ ॥

(ಭಾಷ್ಯಾರ್ಥ)

ಈ ಕ್ರಮದಿಂದ ಬ್ರಹ್ಮವಾಗಿ ಬ್ರಹ್ಮವನ್ನು ಸೇರಿ ಪ್ರಸನ್ನಾತ್ಮನಾದವನು ತನ್ನೊಳಗೆ ಪ್ರಸನ್ನತೆಯನ್ನು ಹೊಂದಿದವನು ಶೋಕಿಸುವದಿಲ್ಲ, ಯಾವದಾದರೊಂದು ಪದಾ

---

1. ಮ॥ಮೈ॥ಗಳಲ್ಲಿ " ನ ಹಿ ಅಪ್ರಾಪ್ತವಿಷಯಾಕಾಙ್ಕ್ಷಾ ಬ್ರಹ್ಮವಿದಃ ಉಪಪದ್ಯತೇ ಅತಃ ಬ್ರಹ್ಮಭೂತಸ್ಯ ಅಯಂ ಸ್ವಭಾವಃ ಅನೂದ್ಯತೇ ‹ನ ಶೋಚತಿ ನ ಕಾಙ್ಕ್ಷತಿ' ಇತಿ " ಎಂದು ವಾಕ್ಯಗಳ ಅನುಕ್ರಮ.

2. ‹ ಪಾಠಾನ್ತರಮ್ ' ಮ॥ ಮೈ॥

3. ‹ ಸರ್ವಭೂತೇಷು ' ಮೈ॥ ; ಮ॥ದಲ್ಲಿ ಇದು ಬಿಟ್ಟುಹೋಗಿದೆ.

4. ‹ ಯಃ ಏವಂಭೂತಃ ' ಎಂಬ ಮ॥ ಮೈ॥ ಪಾಠದಲ್ಲಿ ‹ಸ ಮದ್ಭಕ್ತಿಂ' ಎಂದಿರಬೇಕಾಗುವದು.

ರ್ಥವ ಕೊರತೆಯನ್ನಾಗಲೀ ತನ್ನಲ್ಲಿ ಯಾವದಾದರೊಂದು ಕುಂದನ್ನಾಗಲಿ ಕುರಿತು ಶೋಕಿಸುವದಿಲ್ಲ, ಕುದಿಯುವದಿಲ್ಲ; ಬಯಸುವದೂ ಇಲ್ಲ. "ಶೋಕಿಸುವದಿಲ್ಲ, ಬಯಸುವದೂ ಇಲ್ಲ" ಎಂಬಿದು ಬ್ರಹ್ಮವಾದವನ ಸ್ವಭಾವವನ್ನೇ ಅನುವಾದಮಾಡಿದ್ದು[1]. ಏಕೆಂದರೆ ಬ್ರಹವನ್ನರಿತವನಿಗೆ ಪಡೆದುಕೊಳ್ಳದೆ ಇರುವ ವಸ್ತುವಿನ ಬಯಕೆಯು (ಉಂಟಾಗುವದೆಂಬುದು) ಹೊಂದುವದಿಲ್ಲ.[2] ಅಥವಾ "ನ ಹೃಷ್ಯತಿ" (ಹರ್ಷಗೊಳ್ಳುವದಿಲ್ಲ) ಎಂದಾದರೂ ಪಾಠ(ವಿರಬಹುದು)[3]. ಸರ್ವಭೂತಗಳಲ್ಲಿಯೂ ಸಮನಾಗಿ; ತನ್ನಂತೆಯೇ ಎಲ್ಲಾ ಪ್ರಾಣಿಗಳಲ್ಲಿಯೂ ಸುಖವನ್ನಾಗಲೀ ದುಃಖವನ್ನಾಗಲಿ ಸಮವಾಗಿ ಕಾಣುವನು ಎಂದರ್ಥ. ಇಲ್ಲಿ ಆತ್ಮ(ಸ್ವರೂಪವೆಂಬ) ಸಮವನ್ನು ಕಾಣುವದನ್ನು (ಹೇಳಿರು) ವದಿಲ್ಲ; ಏಕೆಂದರೆ (ಮುಂದೆ) "ಭಕ್ತಿಯಿಂದ ನನ್ನನ್ನು ಗುರುತಿಸುತ್ತಾನೆ" (೧೮-೫೫) ಎಂದು ಅದನ್ನು ಹೇಳಿರುತ್ತದೆ. ಹೀಗಿರುವ ಜ್ಞಾನನಿಷ್ಠನು ಮದ್ಭಕ್ತಿಯನ್ನು ಪರಮೇಶ್ವರನಾದ ನನ್ನಲ್ಲಿ ಭಕ್ತಿಯನ್ನು ಭಜನವನ್ನು, **ಪರವಾದ (ಭಕ್ತಿಯನ್ನು) ಉತ್ತಮವಾದ ಜ್ಞಾನರೂಪವಾದ ನಾಲ್ಕನೆಯ ಭಕ್ತಿಯನ್ನು ಪಡೆಯುತ್ತಾನೆ.** "ನನ್ನನ್ನು ನಾಲ್ಕು ವಿಧವಾದ (ಭಕ್ತರು) ಭಜಿಸುತ್ತಾರೆ". (೭-೧೬) ಎಂದಲ್ಲವೆ, ಹಿಂದೆ ಹೇಳಿರುವದು ?[4]

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್ ॥೫೫॥**

೫೫. ಭಕ್ತಿಯಿಂದ ನಾನು ಎಷ್ಟು, ಮತ್ತು ಯಾವನು (ಆಗಿರುವೆನೋ ಆ) ನನ್ನನ್ನು ತತ್ತ್ವದಿಂದ ಗುರುತಿಸುತ್ತಾನೆ. ಅದರಿಂದ ನನ್ನನ್ನು ತತ್ತ್ವದಿಂದ ಅರಿತುಕೊಂಡು ಆ ಅನಂತರದಲ್ಲಿಯೇ ಪ್ರವೇಶಿಸುತ್ತಾನೆ.

(ಭಾಷ್ಯ)

**೫೬೪. ತತಃ ಜ್ಞಾನಲಕ್ಷಣಯಾ ಭಕ್ತ್ಯಾ ಮಾಮ್ ಅಭಿಜಾನಾತಿ**

---

1. ಹೊಸದಾಗಿ ಹೇಳಿದ್ದೇನೂ ಇರುವದಿಲ್ಲ.

2. ಎರಡನೆಯ ವಸ್ತು ನಿಜವಾಗಿಯೂ ಜ್ಞಾನಿಯ ದೃಷ್ಟಿಯಲ್ಲಿದೆ, ಆದರೆ ಅವನು ಅದನ್ನು ಬಯಸುವದಿಲ್ಲ—ಎಂದು ಹೇಳುವದಕ್ಕೆ ಬರುವದಿಲ್ಲ. ಏಕೆಂದರೆ ಜ್ಞಾನವೆಂದರೇ ಅದ್ವೈತಾತ್ಮನನ್ನು ಅರಿತುಕೊಳ್ಳುವದು.

3. ಆ ಪಾಠದಲ್ಲಿ ಎರಡನೆಯ ವಸ್ತುವಿದೆ ಎಂಬರ್ಥವೇ ಹೊರಡುವದಿಲ್ಲ.

4. ಆರ್ತಾದಿಗಳೂ ಭಕ್ತರೇ ಆದರೂ ಜ್ಞಾನಿಯೊಬ್ಬನೇ ಪರಮಾತ್ಮನ ಅನನ್ಯಭಕ್ತನು—ಎಂದು ಆ ಶ್ಲೋಕದ ಮುಂದಿನ ಭಾಗದಲ್ಲಿ ಹೇಳಿದೆ.

ಯಾವಾನ್ ಅಹಮ್ ಉಪಾಧಿಕೃತವಿಸ್ತರಭೇದೈಃ,[1] ಯಶ್ಚ ಅಹಮ್ ಅಸ್ಮಿ[2] ವಿಧ್ವಸ್ತ ಸರ್ವೋಪಾಧಿಭೇದಃ ಉತ್ತಮಪುರುಷಃ ಆಕಾಶಕಲ್ಪಃ । ತಂ ಮಾಮ್ ಅದ್ವೈತಂ ಚೈತನ್ಯಮಾತ್ರೈಕರಸಂ ಅಜಮ್[3] ಅಜರಮ್ ಅಮರಮ್[4] ಅಭಯಮ್ ಅನಿಧನಂ ತತ್ತ್ವತಃ ಅಭಿಜಾನಾತಿ । ತತಃ ಮಾಮ್ ಏವಂ ತತ್ತ್ವತಃ ಜ್ಞಾತ್ವಾ ವಿಶತೇ ತದನನ್ತರಂ ಮಾಮೇವ[5]। ನಾತ್ರ ಜ್ಞಾನಾನನ್ತರಪ್ರವೇಶಕ್ರಿಯೇ[6] ಭಿನ್ನೇ ವಿವಕ್ಷಿತೇ ಜ್ಞಾತ್ವಾ ವಿಶತೇ ತದನನ್ತರಮ್ ಇತಿ । ಕಿಂ ತರ್ಹಿ, ಫಲಾನ್ತರಾಭಾವಾತ್ ಜ್ಞಾನಮಾತ್ರಮೇವ । "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ" (೧೩-೨) ಇತ್ಯುಕ್ತತ್ವಾತ್ ॥

(ಭಾಷ್ಯಾರ್ಥ)

ಆಮೇಲೆ ಈ ಜ್ಞಾನರೂಪವಾದ ಭಕ್ತಿಯಿಂದ ನನ್ನನ್ನು ಗುರುತಿಸುತ್ತಾನೆ; ಉಪಾಧಿಯಿಂದಾಗಿರುವ ಬೇರೆಬೇರೆಯ ವಿಭೂತಿಗಳಿಂದ ನಾನು ಎಷ್ಟುರಮಟ್ಟಿನವನಾಗಿವೆನೋ, ಮತ್ತು ಯಾವ ಉಪಾಧಿವಿಶೇಷವೂ ಇಲ್ಲದ, ಆಕಾರದಂತಿರುವ ಉತ್ತಮಪುರುಷನಾದ ನಾನು ಯಾವನಾಗಿರುವೆನೋ ಆ ಅದ್ವೈತನೂ ಚೈತನ್ಯವೊಂದೇ ರಸವಾಗಿರುವ ಅಜನೂ ಅಜರನೂ ಅಮರನೂ ಅಭಯನೂ ನಾಶರಹಿತನೂ ಆಗಿರುವ ನನ್ನನ್ನು ನಿಜವಾಗಿ ಗುರುತಿಸಿ (ತಿಳಿಯು)ತ್ತಾನೆ. ಆದರಿಂದ[7] ನನ್ನನ್ನು ಹೀಗೆ[8] ನಿಜವಾಗಿ ಅರಿತುಕೊಂಡು ಆದರ ಅನಂತರದಲ್ಲಿ[9] ನನ್ನನ್ನೇ ಸೇರುತ್ತಾನೆ.

**ಇಲ್ಲಿ ಜ್ಞಾನ, ಅನಂತರ ಪ್ರವೇಶ – (ಹೀಗೆ ಎರಡು) ಬೇರೆಬೇರೆಯ ಕ್ರಿಯೆಗಳನ್ನು 'ಅರಿತು ತದನಂತರದಲ್ಲಿ ಪ್ರವೇಶಿಸುತ್ತಾನೆ' ಎಂಬುದರಿಂದ ಹೇಳ ಹೊರಟಿರುವದಿಲ್ಲ; ಮತ್ತೇನೆಂದರೆ ಮತ್ತೊಂದು ಫಲವು (ಆಗಬೇಕಾ**

---

1. 'ಭೇದಃ' ಆ||ನಿ||ವಾ॥
2. ಆ||ನಿ|| ಗಳಲ್ಲಿ ಬಿಟ್ಟುಹೋಗಿದೆ.
3. ಮ|| ಮೈ॥ ವಾ||ಗಳಲ್ಲಿಲ್ಲ.
4. ಮ॥ ಮೈ|| ವಾ||ಗಳಲ್ಲಿಲ್ಲ.
5. 'ಜ್ಞಾನಾನನ್ತರಮ್' ಎಂದು ಹೆಚ್ಚಾಗಿ ಮ॥ ಮೈ||.
6. 'ಜ್ಞಾನಪ್ರವೇಶಕ್ರಿಯೇ' ಮ|| ಮೈ|| ವಾ||
7. ಭಕ್ತಿಯಿಂದ.
8. ಸೋಪಾಧಿಕರೂಪದಿಂದಲೂ ನಿರುಪಾಧಿಕರೂಪದಿಂದಲೂ ಪರಭಕ್ತಿಯಿಂದಲೇ ಅರಿತುಕೊಳ್ಳುತ್ತಾನೆ.
9. ನಡುವೆ ಕಾಲವನ್ನು ಕಳೆಯದೆ, ಜ್ಞಾನಸಮಕಾಲದಲ್ಲಿಯೇ ಎಂದರ್ಥ.

**ದದ್ದು) ಇಲ್ಲವಾದ್ದರಿಂದ ಜ್ಞಾನಮಾತ್ರವನ್ನೇ (ಹೇಳಹೊರಟಿರುತ್ತದೆ).**[1] ಏಕೆಂದರೆ " ಕ್ಷೇತ್ರಜ್ಞನನ್ನೂ ನನ್ನನ್ನಾಗಿ ತಿಳಿ " (೧೩-೨) ಎಂದು ಹಿಂದೆ ಹೇಳಿರುತ್ತದೆ.[2]

## ಜ್ಞಾನನಿಷ್ಠೆ ಎಂದರೆ ಏನು ?

(ಭಾಷ್ಯ)

೫೬೫. ನನು ವಿರುದ್ಧಮ್ ಇದಮುಕ್ತಮ್ ' ಜ್ಞಾನಸ್ಯ ಯಾ ಪರಾ ನಿಷ್ಠಾ ತಯಾ ಮಾಮ್ ಅಭಿಜಾನಾತಿ ' ಇತಿ । ಕಥಂ ವಿರುದ್ಧಮ್ ಇತಿ ಚೇತ್ ಉಚ್ಯತೇ- ಯದೈವ ಯಸ್ಮಿನ್ ವಿಷಯೇ ಜ್ಞಾನಮ್ ಉತ್ಪದ್ಯತೇ ಜ್ಞಾತುಃ ತದೈವ ತಂ ವಿಷಯಮ್ ಅಭಿಜಾನಾತಿ ಜ್ಞಾತಾ ಇತಿ ನ ಜ್ಞಾನನಿಷ್ಠಾಂ ಜ್ಞಾನಾವೃತ್ತಿಲಕ್ಷಣಾಮ್ ಅಪೇಕ್ಷತೇ ಇತಿ । ಅತಶ್ಚ ಜ್ಞಾನೇನ ನಾಭಿಜಾನಾತಿ ಜ್ಞಾನಾವೃತ್ತ್ಯಾ ತು ಜ್ಞಾನನಿಷ್ಠಯಾ ಅಭಿಜಾನಾತಿ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :—" ಜ್ಞಾನದ ಹೆಚ್ಚಿನ ನಿಷ್ಠೆಯಿದೆಯಲ್ಲ, ಅದರಿಂದ ನನ್ನನ್ನು ಗುರುತಿಸಿ ಅರಿತುಕೊಳ್ಳುತ್ತಾನೆ " ಎಂದು ವಿರುದ್ಧವಾಗಿ ಹೇಳಿದಂತೆ ಆಯಿತಲ್ಲ !

(ಪ್ರಶ್ನೆ) :—ಹೇಗೆ ವಿರುದ್ಧವು ?

(ಉತ್ತರ) :—ಹೇಳುತ್ತೇವೆ. ಅರಿಯುವಾತನಿಗೆ ಯಾವ ವಿಷಯದಲ್ಲಿ ಯಾವಾಗಲೇ ಜ್ಞಾನವುಂಟಾಗುವದೋ ಆಗಲೇ ಆ ವಿಷಯವನ್ನು ಜ್ಞಾತೃವು ಅರಿತುಕೊಂಡುಬಿಡುತ್ತಾನೆ ; ಆದ್ದರಿಂದ ಜ್ಞಾನದ ಆವೃತ್ತಿಯ ರೂಪದ ಜ್ಞಾನನಿಷ್ಠೆಯನ್ನು ಬಯಸುವದಿಲ್ಲ. ಹೀಗಿರುವದರಿಂದ ಜ್ಞಾನದಿಂದ ಗುರುತಿಸಿ ಅರಿಯುವದಿಲ್ಲ, ಜ್ಞಾನವನ್ನು ಆವೃತ್ತಿಮಾಡುವ ಜ್ಞಾನನಿಷ್ಠೆಯಿಂದ ಅರಿಯುತ್ತಾನೆ ಎಂದು (ಹೇಳಿದ್ದು ವಿರುದ್ಧವಾಯಿತು).[3]

---

1. ' ಜ್ಞಾತ್ವಾ ವಿಶತೇ' ಅರಿತು ಪ್ರವೇಶಿಸುತ್ತಾನೆ ಎಂಬುದು ಕಣ್ಣುಬಿಟ್ಟು ನೋಡುತ್ತಾನೆ, ಉಂಡು ತೃಪ್ತನಾಗುತ್ತಾನೆ-ಎಂಬಂತೆ ಸಮಕಾಲದ ಫಲವನ್ನೇ ಹೇಳುತ್ತದೆ ಎಂದು ಭಾವ.

2. ಆದ್ದರಿಂದ ಜೀವನು ಸೇರಬೇಕಾದ ಭಗವಂತನು ಬೇರೆ ಇಲ್ಲ.

3. ಜ್ಞಾನವು ಶಾಸ್ತ್ರೋಪದೇಶದಿಂದ ಹುಟ್ಟಿದರೂ ಅಜ್ಞಾನವನ್ನು ಕಳೆಯುವದಿಲ್ಲ ; ಅದನ್ನು ಮತ್ತೆ ಮತ್ತೆ ಅಭ್ಯಾಸಮಾಡುವದರಿಂದ ಸಾಕ್ಷಾತ್ಕಾರವೆಂಬ ಜ್ಞಾನವು ಹುಟ್ಟಿ ಅಜ್ಞಾನವನ್ನು ಕಳೆಯುತ್ತದೆ ಎಂದು ಹೇಳುವ ವೇದಾಂತಿಗಳ ಮೇಲಿನ ಆಕ್ಷೇಪಣೆಯಿದು. ಜ್ಞಾನವು ಅಜ್ಞಾನವನ್ನು ಕಳೆದರೂ ಮತ್ತೆ ಅನಾದಿಯಾದ ಅಜ್ಞಾನದ ಪ್ರಾಬಲ್ಯದಿಂದ ಅದು ಬಾಧಿತವಾಗುತ್ತದೆ. ಜ್ಞಾನದ ಆವೃತ್ತಿಯಿಂದಲೇ ಅದು ನಿಶ್ಶೇಷವಾಗಿ ಹೋಗುತ್ತದೆ-ಎನ್ನುತ್ತಿದ್ದ ಪ್ರಸಂಖ್ಯಾನವಾದಿಗಳಿಗೂ ಇದು ಅನ್ವಯಿಸುತ್ತದೆ.

(ಭಾಷ್ಯ)

೫೬೬. ನೈಷ ದೋಷಃ । ಜ್ಞಾನಸ್ಯ ಸ್ವಾತ್ಮೋತ್ಪತ್ತಿಪರಿಪಾಕಹೇತುಯುಕ್ತಸ್ಯ ಪ್ರತಿಪಕ್ಷವಿಹೀನಸ್ಯ ಯತ್ ಆತ್ಮಾನುಭವನಿಶ್ಚಯಾವಸಾನತ್ವಂ ತಸ್ಯ ನಿಷ್ಠಾಶಬ್ದಾಭಿಲಾಪಾತ್ । ಶಾಸ್ತ್ರಾಚಾರ್ಯೋಪದೇಶೇನ ಜ್ಞಾನೋತ್ಪತ್ತಿಪರಿಪಾಕಹೇತು[2]ಸಹಕಾರಿಕಾರಣಂ ಬುದ್ಧಿವಿಶುದ್ಧತ್ವಾದಿ[3] ಅಮಾನಿತ್ವಾದಿ[4] ಚ ಅಪೇಕ್ಷ್ಯ ಜನಿತಸ್ಯ ಕ್ಷೇತ್ರಜ್ಞಪರಮಾತ್ಮೈಕತ್ವಜ್ಞಾನಸ್ಯ ಕರ್ತೃತ್ವಾದಿಕಾರಕಭೇದಬುದ್ಧಿನಿಬನ್ಧನಸರ್ವಕರ್ಮಸಂನ್ಯಾಸಸಹಿತಸ್ಯ ಸ್ವಾತ್ಮಾನುಭವನಿಶ್ಚಯರೂಪೇಣ ಯತ್ ಅವಸ್ಥಾನಮ್ ಸಾ ಪರಾ ಜ್ಞಾನನಿಷ್ಠಾ ಇತ್ಯುಚ್ಯತೇ । ಸೇಯಂ ಜ್ಞಾನನಿಷ್ಠಾ ಆರ್ತಾದಿಭಕ್ತಿತ್ರಯಾಪೇಕ್ಷಯಾ ಪರಾ ಚತುರ್ಥೀ ಭಕ್ತಿಃ ಇತ್ಯುಕ್ತಾ । ತಯಾ ಪರಯಾ ಭಕ್ತ್ಯಾ ಭಗವನ್ತಂ ತತ್ತ್ವತಃ ಅಭಿಜಾನಾತಿ । ಯದನನ್ತರಮೇವ ಈಶ್ವರಕ್ಷೇತ್ರಜ್ಞಭೇದಬುದ್ಧಿಃ ಅಶೇಷತೋ ನಿವರ್ತತೇ । ಅತಃ ಜ್ಞಾನನಿಷ್ಠಾಲಕ್ಷಣಯಾ ಭಕ್ತ್ಯಾ ಮಾಮ್ ಅಭಿಜಾನಾತಿ ಇತಿ ವಚನಂ ನ ವಿರುಧ್ಯತೇ

(ಭಾಷ್ಯಾರ್ಥ)

(ಪರಿಹಾರ):—ಇದು ತಪ್ಪಲ್ಲ. ಏಕೆಂದರೆ ಜ್ಞಾನವು ಉಂಟಾಗಿ ಪರಿಪಕ್ವವಾಗುವದಕ್ಕೆ (ಬೇಕಾದ) ಕಾರಣದಿಂದೊಡಗೂಡಿ[5] ಪ್ರತಿಪಕ್ಷವಿಲ್ಲದ[6] ಜ್ಞಾನವು ಆತ್ಮಾನುಭವನಿಶ್ಚಯರೂಪವಾಗಿ ಕೊನೆಗಾಣುವದಿದೆಯಲ್ಲ, ಅದನ್ನು ಇಲ್ಲಿ **ನಿಷ್ಠೆ** ಎಂಬ ಮಾತಿನಿಂದ ಕರೆದಿರುತ್ತದೆ. **ಶಾಸ್ತ್ರದ ಮತ್ತು ಆಚಾರ್ಯರ ಉಪದೇಶದಿಂದ ಜ್ಞಾನವುಂಟಾಗಿ ಪರಿಪಕ್ವವಾಗುವದಕ್ಕೆ ಬೇಕಾಗುವ ಸಹಕಾರಿಕಾರಣವಾದ ಚಿತ್ತಶುದ್ಧಿಯೇ ಮುಂತಾದದ್ದನ್ನೂ ಅಮಾನಿತ್ವವೇ ಮುಂತಾದದ್ದನ್ನೂ ಬಯಸಿ ಉಂಟಾಗುವ ಕ್ಷೇತ್ರಜ್ಞಪರಮಾತ್ಮೈಕ್ಯಜ್ಞಾನವು ಕರ್ತೃತ್ವವೇ ಮುಂತಾದ ಕಾರಕಗಳು ಬೇರೆಬೇರೆ ಎಂಬ ಬುದ್ಧಿಯಿಂದ (ಆಗುವ) ಸರ್ವಕರ್ಮಗಳನ್ನೂ ಸಂನ್ಯಾಸಮಾಡುವದನ್ನೊಡಗೂಡಿ[6] ಸ್ವಾತ್ಮಾನುಭವನಿಶ್ಚಯರೂಪದಿಂದ ಕೊನೆಗಾಣುವದಿದೆಯಲ್ಲ, ಅದನ್ನು**

1. 'ಹೇತುಂ' ಅ|| ನಿ|| ವಾ||
2. 'ಬುದ್ಧಿವಿಶುದ್ಧ್ಯಾದಿ' ನಿ||
3. 'ಅಮಾನಿತ್ವಾದಿ ಗುಣಂ' ಮು|| ಮೈ|| ವಾ||
4. ಜ್ಞಾನವು ಯಾವ ಅಡ್ಡಿಯೂ ಇಲ್ಲದೆ ಸ್ಫುಟವಾಗುವದೇ ಪರಿಪಾಕವು.
5. ಅಜ್ಞಾನದ ಅಥವಾ ಅದರ ಕಾರ್ಯದ ಅಡಚಣೆಯಿಲ್ಲದೆ.
6. ಸರ್ವಕರ್ಮಸಂನ್ಯಾಸಸಹಿತವಾದ ಜ್ಞಾನವೇ ಫಲಕಾರಿ ಎಂದು ಭಾವ.

**ಹೆಚ್ಚಿನ ಜ್ಞಾನನಿಷ್ಠೆ ಎಂದು ಕರೆದಿರುತ್ತದೆ.** ಈ ಜ್ಞಾನನಿಷ್ಠೆಯು ಆರ್ತ (ಭಕ್ತಿಯೇ) ಮುಂತಾದ ಮೂರು ಭಕ್ತಿಗಳಿಗಿಂತ ಹೆಚ್ಚಿನದಾದ **ನಾಲ್ಕನೆಯ ಭಕ್ತಿ** ಯೆಂದು (ಹಿಂದೆ)[1] ಹೇಳಿರುತ್ತಯೆ. ಆ ಪರಭಕ್ತಿಯಿಂದ ಭಗವಂತನನ್ನು ನಿಜವಾಗಿ ಗುರುತಿಸಿ ಅರಿಯುತ್ತಾನೆ, ಅದು ಉಂಟಾದ ಕೂಡಲೇ ಈಶ್ವರನೂ ಕ್ಷೇತ್ರಜ್ಞನೂ ಬೇರೆ (ಬೇರೆ) ಎಂಬ ತಿಳಿವಳಿಕೆಯು ಸ್ವಲ್ಪವೂ ಉಳಿಯದಂತೆ ತೊಲಗುತ್ತದೆ. ಆದ್ದರಿಂದ "ಜ್ಞಾನನಿಷ್ಠೆ ಎಂಬ ಭಕ್ತಿಯಿಂದ ಗುರುತಿಸಿ ಅರಿಯುತ್ತಾನೆ" ಎಂದು ಹೇಳಿದ್ದು ವಿರುದ್ಧವಾಗಿಲ್ಲ.

## ಜ್ಞಾನನಿಷ್ಠೆಯು ಸರ್ವಕರ್ಮಸಂನ್ಯಾಸಪೂರ್ವಕವಾಗಿರಬೇಕು

(ಭಾಷ್ಯ)

೫೬೭. ಅತ್ರ ಚ ಸರ್ವಂ ನಿವೃತ್ತಿವಿಧಾಯಿ ಶಾಸ್ತ್ರಂ ವೇದಾನ್ತೇತಿಹಾಸ ಪುರಾಣಸ್ಮೃತಿಲಕ್ಷಣಂ ನ್ಯಾಯಪ್ರಸಿದ್ಧಮ್ ಅರ್ಥವತ್ ಭವತಿ । "ವಿದಿತ್ವಾ...... ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ" (ಬೃ. ೩-೫-೧) "ತಸ್ಮಾನ್ನ್ಯಾಸಮೇಷಾಂ ತಪಸಾಮತಿರಿಕ್ತಮಾಹುಃ" (ತೈ. ನಾ. ೭೯), "ನ್ಯಾಸ ಏವಾತ್ಯರೇಚಯತ್" (ತೈ. ನಾ. ೭೮), "ಸಂನ್ಯಾಸಃ ಕರ್ಮಣಾಂ ನ್ಯಾಸಃ" (?), "ವೇದಾನಿಮಂ ಚ ಲೋಕಮಮುಂ ಚ ಪರಿತ್ಯಜ್ಯ" (ಆ. ಧ. ೨-೨೩-೧೩), "ತ್ಯಜ ಧರ್ಮಮಧರ್ಮಂ ಚ" (ಮೋ. ಧ. ೩೨೯-೪೦) ಇತ್ಯಾದಿ । ಇಹ ಚ ಪ್ರದರ್ಶಿತಾನಿ ವಾಕ್ಯಾನಿ । ನ ಚ ತೇಷಾಂ ವಾಕ್ಯಾನಾಮ್ ಆನರ್ಥಕ್ಯಂ ಯುಕ್ತಮ್ । ನ ಚಾರ್ಥವಾದತ್ವಮ್ । ಸ್ವಪ್ರಕರಣತ್ವಾತ್ ಪ್ರತ್ಯಗಾತ್ಮಾವಿಕ್ರಿಯಸ್ವರೂಪನಿಷ್ಠಾತ್ವಾಚ್ಚ[2] ಮೋಕ್ಷಸ್ಯ । ನ ಹಿ ಪೂರ್ವಸಮುದ್ರಂ ಜಿಗಮಿಷೋಃ ಪ್ರಾತಿಲೋಮ್ಯೇನ ಪ್ರತ್ಯಕ್ಸಮುದ್ರಂ ಜಿಗಮಿಷುಣಾ ಸಮಾನಮಾರ್ಗತ್ವಂ ಸಮ್ಭವತಿ । ಪ್ರತ್ಯಗಾತ್ಮವಿಷಯಪ್ರತ್ಯಯಸನ್ತಾನಕರಣಾಭಿನಿವೇಶಶ್ಚ ಜ್ಞಾನನಿಷ್ಠಾ । ಸಾ ಚ ಪ್ರತ್ಯಕ್ಸಮುದ್ರಗಮನವತ್ ಕರ್ಮಣಾ ಸಹಭಾವಿತ್ವೇನ ವಿರುಧ್ಯತೇ । ಪರ್ವತಸರ್ಷಪಯೋರಿವ ಅನ್ತರವಾನ್ ವಿರೋಧಃ ಪ್ರಮಾಣವಿದಾಂ ನಿಶ್ಚಿತಃ । ತಸ್ಮಾತ್ ಸರ್ವಕರ್ಮಸಂನ್ಯಾಸೇನೈವ ಜ್ಞಾನನಿಷ್ಠಾ ಕಾರ್ಯಾ ಇತಿ ಸಿದ್ಧಮ್ ॥

---

1. ೭-೧೭.

2. 'ನಿಷ್ಠತ್ವಾಚ್ಚ' ಎಂಬ ಅಚ್ಚಿನ ಪಾಠವು 'ನಿಷ್ಠಾತ್ವಾಚ್ಚ' ಎಂದಿರಬೇಕೆಂದು ಕಲ್ಪಿಸಿದೆ.

(ಭಾಷ್ಯಾರ್ಥ)

ಮತ್ತು ಈ ಪಕ್ಷದಲ್ಲಿಯೇ[1] ಉಪನಿಷತ್ತುಗಳು, ಇತಿಹಾಸ, ಪುರಾಣಗಳು, ಸ್ಮೃತಿಗಳು–(ಇವುಗಳಿಂದ) ತಿಳಿದುಬರುವ (ಕರ್ಮ) ನಿವೃತ್ತಿಯನ್ನು ವಿಧಿಸುವ ಯುಕ್ತಿಯುಕ್ತವಾದ ಶಾಸ್ತ್ರವೆಲ್ಲವೂ ಸಾರ್ಥಕವಾಗುತ್ತದೆ.[2] (ಅದು ಯಾವದೆಂದರೆ): "(ಆತ್ಮನನ್ನು) ಅರಿತುಕೊಂಡು (ಬಯಕೆಗಳನ್ನು) ಬಿಟ್ಟಿದ್ದು ಭಿಕ್ಷಾಚರ್ಯೆಯನ್ನು ಮಾಡುವರು" (ಬೃ. ೩-೫-೧), "ಆದ್ದರಿಂದ ಈ ತಪಸ್ಸುಗಳಲ್ಲೆಲ್ಲ ಸಂನ್ಯಾಸವೇ ಹೆಚ್ಚಿನದೆನ್ನುವರು" (ತೈ. ನಾ. ೭೮), 'ಸಂನ್ಯಾಸವೇ ಹೆಚ್ಚಿನದಾಯಿತು' (ತೈ. ನಾ. ೭೮). "ಸಂನ್ಯಾಸವೆಂದರೆ ಕರ್ಮಗಳನ್ನು ಬಿಡುವದು" (?), "ವೇದಗಳನ್ನೂ ಈ ಲೋಕವನ್ನೂ ಆ (ಲೋಕವನ್ನೂ) ಬಿಟ್ಟು" (ಆ. ಧ. ೨-೨೨-೧೩), "ಧರ್ಮವನ್ನೂ ಅಧರ್ಮವನ್ನೂ ಬಿಡು" (ಮೋ. ಧ. ೩೨೯-೪೦) ಮುಂತಾದದ್ದು. ಇಲ್ಲಿಯೂ[3] (ಇಂಥ) ವಾಕ್ಯಗಳನ್ನು ತೋರಿಸಿದ್ದಾಗಿದೆ. ಆ ವಾಕ್ಯಗಳು ಅರ್ಥವಿಲ್ಲದವೆಂದು (ಕಲ್ಪಿಸುವದೂ) ಯುಕ್ತವಲ್ಲ[4], (ಅವು) ಅರ್ಥವಾದವೆಂಬುದೂ ಸರಿಯಲ್ಲ; ಏಕೆಂದರೆ (ಅವು) ತಮ್ಮ ಪ್ರಕರಣದಲ್ಲಿಯೇ ಬಂದಿರುತ್ತವೆ.[5] ಒಳಗಿರುವ ಆತ್ಮನ ವಿಕಾರರಹಿತವಾದ ಸ್ವರೂಪದಲ್ಲಿ ನಿಲ್ಲುವದೇ ಮೋಕ್ಷವಾಗಿರುವದರಿಂದಲೂ[6] (ಈ

---

1. ಜ್ಞಾನನಿಷ್ಠೆ ಎಂದರೆ ಸರ್ವಕರ್ಮಸಂನ್ಯಾಸಪೂರ್ವಕವಾಗಿ ಅಮಾನಿತ್ವಾದಿಗಳನ್ನು ಅಭ್ಯಾಸಮಾಡಿ ಪಡೆಯತಕ್ಕ ಆತ್ಮಜ್ಞಾನಪರಿಪಾಕವು ಎಂಬ ಪಕ್ಷದಲ್ಲಿಯೇ.

2. ಶಾಸ್ತ್ರವು ನಿವೃತ್ತಿಯನ್ನು ವಿಧಿಸಿರುವದು ಬೇರೊಂದು ರೀತಿಯಿಂದ ಹೊಂದುವದಿಲ್ಲವೆಂಬ ಅರ್ಥಾಪತ್ತಿಯು ನಾವು ಹೇಳಿದ ನಿಷ್ಠಾಶಬ್ದದ ಅರ್ಥವೇ ಸರಿ ಎಂಬುದಕ್ಕೆ ಪ್ರಮಾಣವು. ನಿಷ್ಠೆಗೆ ಸಂನ್ಯಾಸವು ಬೇಕೆಂಬುದು ಯುಕ್ತಿಯುಕ್ತವಾಗಿರುವದರಿಂದ ಯುಕ್ತಿಸಹಿತವಾದ ಶಾಸ್ತ್ರಕ್ಕೆ ಮತ್ತಷ್ಟು ಬೆಂಬಲವು ಬರುತ್ತದೆ–ಎಂದು ಭಾವ.

3. ಸರ್ವಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ–ಮುಂತಾದ ವಾಕ್ಯಗಳನ್ನು ಹಿಂದೆಯೇ ಉದಾಹರಿಸಿದೆ.

4. ಪ್ರಮಾಣವಾದ ವೇದವನ್ನು ನಿಷ್ಕಾರಣವಾಗಿ ಅಪ್ರಮಾಣವೆಂದೆಣಿಸುವದು ಸರಿಯಲ್ಲ.

5. ಮತ್ತೆ ಯಾವದೋ ಒಂದನ್ನು ಹೊಗಳುವದಕ್ಕೆ ಬಂದಿರುವದಿಲ್ಲ. ಸಂನ್ಯಾಸವನ್ನು ವಿಧಾನಮಾಡುವದಕ್ಕೇ ಬಂದಿದೆ.

6. ಪ್ರತ್ಯಗಾತ್ಮಸ್ವರೂಪವು ಅಕರ್ತೃವಾಗಿರುತ್ತದೆ; ಅದರಲ್ಲಿ ನೆಲೆನಿಲ್ಲುವದಕ್ಕೆ ಕರ್ಮವು ವಿರುದ್ಧವಾಗಿರುತ್ತದೆ ಎಂಬುದು ಸ್ಪಷ್ಟ. ತೈ. ಭಾ. ೩, ೧೧ ನೋಡಿ.

ಪಕ್ಷವೇ ಸರಿ). ಪೂರ್ವಸಮುದ್ರಕ್ಕೆ ಹೋಗಬೇಕೆಂದಿರುವವನಿಗೆ (ಅದಕ್ಕೆ) ವಿರುದ್ಧವಾಗಿ ಪಶ್ಚಿಮಸಮುದ್ರಕ್ಕೆ ಹೋಗುವವನ ದಾರಿಯೇ ಇರಲಾರದಷ್ಟೆ. ಜ್ಞಾನನಿಷ್ಠೆ ಎಂಬುದು ಒಳಗಿನ ಆತ್ಮನ ವಿಷಯವಾದ ಪ್ರತ್ಯಯವನ್ನು ಒಂದೇ ಸಮನೆ ನಡೆಯಿಸುವದರಲ್ಲಿಯೇ ಇರುವ ಅಭಿನಿವೇಶವಾಗಿರುತ್ತದೆ.[1] ಅದು ಪಶ್ಚಿಮಸಮುದ್ರಕ್ಕೆ ಹೋಗುವ (ದಾರಿಯಂತಿರುವ) ಕರ್ಮದೊಡನೆ ಇರುವದೆಂಬುದಕ್ಕೆ ವಿರುದ್ಧವಾಗಿರುತ್ತದೆ.[2] (ಈ ಎರಡು ನಿಷ್ಠೆಗಳಿಗೂ) ಪರ್ವತಕ್ಕೂ ಸಾಸುವೆಗೂ ಇರುವಷ್ಟು ತಾರತಮ್ಯವುಳ್ಳ ವಿರೋಧವಿರುವದೆಂದೇ ಪ್ರಮಾಣಜ್ಞರ ನಿಶ್ಚಯವು. ಆದ್ದರಿಂದ ಸರ್ವಕರ್ಮಸಂನ್ಯಾಸದೊಡನೆಯೇ ಜ್ಞಾನನಿಷ್ಠೆಯನ್ನು ಮಾಡಿಕೊಳ್ಳಬೇಕು ಎಂದು ಸಿದ್ಧವಾಯಿತು.

## ಭಕ್ತಿಯೋಗದ ಹೊಗಳಿಕೆ

(ಭಾಷ್ಯ)

೫೭೮. ಸ್ವಕರ್ಮಣಾ ಭಗವತೋಽಭ್ಯರ್ಚನಭಕ್ತಿಯೋಗಸ್ಯ ಸಿದ್ಧಿಪ್ರಾಪ್ತಿಃ ಫಲಂ ಜ್ಞಾನನಿಷ್ಠಾಯೋಗ್ಯತಾ । ಯನ್ನಿಮಿತ್ತಾ ಜ್ಞಾನನಿಷ್ಠಾ ಮೋಕ್ಷಫಲಾವಸಾನಾ ಸ ಭಗವದ್ಭಕ್ತಿಯೋಗಃ ಅಧುನಾ ಸ್ತೂಯತೇ ಶಾಸ್ತ್ರಾರ್ಥೋಪಸಂಹಾರಪ್ರಕರಣೇ ಶಾಸ್ತ್ರಾರ್ಥನಿಶ್ಚಯದಾರ್ಢ್ಯಾಯ—

(ಭಾಷ್ಯಾರ್ಥ)

**ತನ್ನ ಕರ್ಮದಿಂದ ಭಗವಂತನನ್ನು ಅಭ್ಯರ್ಚನಮಾಡುವದೆಂಬ ಭಕ್ತಿಯೋಗಕ್ಕೆ ಜ್ಞಾನನಿಷ್ಠೆಗೆ (ತಕ್ಕ) ಯೋಗ್ಯತೆ ಎಂಬ ಸಿದ್ಧಿಯನ್ನು ಪಡೆದುಕೊಳ್ಳುವದೇ ಫಲವು. ಅದರಿಂದಾದ ಜ್ಞಾನನಿಷ್ಠೆಯು ಮೋಕ್ಷದಲ್ಲಿ ಪರ್ಯವಸಾನವಾಗುತ್ತದೆ.** ಶಾಸ್ತ್ರಾರ್ಥದ ನಿಶ್ಚಯವನ್ನು ಗಟ್ಟಿಗೊಳಿಸುವದಕ್ಕಾಗಿ (ಈ) ಶಾಸ್ತ್ರಾರ್ಥೋಪಸಂಹಾರದ ಪ್ರಕರಣದಲ್ಲಿ ಈಗ ಆ ಭಗವದ್ಭಕ್ತಿಯೋಗವನ್ನು ಹೊಗಳುತ್ತಾನೆ :—

---

1. ಆತ್ಮನನ್ನೇ ಚಿಂತಿಸುತ್ತಿರುವದೆಂದರೆ ಮನಸ್ಸಿನಲ್ಲಿ ಭಾವಿಸಿಕೊಳ್ಳುವದಲ್ಲ, ಆತ್ಮಸ್ವರೂಪವನ್ನೇ, ರತ್ನಪರೀಕ್ಷಕನು ರತ್ನವನ್ನು ನಿಟ್ಟಿಸುವಂತೆ, ಮನಸ್ಸಿಟ್ಟು ನೋಡಿ ಅರಿತುಕೊಳ್ಳುವದು.

2. ಏಕೆಂದರೆ ಕರ್ಮಕ್ಕೆ ಆತ್ಮನಲ್ಲಿಲ್ಲದ ಕರ್ತೃತ್ವವನ್ನು ಅಂಗೀಕರಿಸುವದು ಆವಶ್ಯ.

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಮ್ ಪದಮವ್ಯಯಮ್ ॥ ೫೬ ॥**

೫೬. ಎಲ್ಲಾ ಕರ್ಮಗಳನ್ನೂ ಯಾವಾಗಲೂ ಮಾಡುತ್ತಿದ್ದರೂ ಮದ್ವ್ಯಪಾಶ್ರಯನು ಮತ್ಪ್ರಸಾದದಿಂದ ಶಾಶ್ವತವಾದ ಅವ್ಯಯವಾದ ಪದವನ್ನು ಪಡೆಯುತ್ತಾನೆ.

(ಭಾಷ್ಯ)

೫೬. ಸರ್ವಕರ್ಮಾಣ್ಯಪಿ ಪ್ರತಿಷಿದ್ಧಾನಪಿ [1] ಸದಾ ಕುರ್ವಾಣಃ ಅನುತಿಷ್ಠನ್ ಮದ್ವ್ಯಪಾಶ್ರಯಃ ಅಹಂ ವಾಸುದೇವಃ ಈಶ್ವರಃ ವ್ಯಪಾಶ್ರಯಃ ವ್ಯಪಾಶ್ರಯಣಂ [2] ಯಸ್ಯ ಸ ಮದ್ವ್ಯಪಾಶ್ರಯಃ ಮಯ್ಯರ್ಪಿತಸರ್ವಾತ್ಮಭಾವಃ ಇತ್ಯರ್ಥಃ। ಸೋಽಪಿ ಮತ್ಪ್ರಸಾದಾತ್ ಮಮ ಈಶ್ವರಸ್ಯ ಪ್ರಸಾದಾತ್ ಅವಾಪ್ನೋತಿ ಶಾಶ್ವತಂ ನಿತ್ಯಂ ವೈಷ್ಣವಂ ಪದಮ್ ಅವ್ಯಯಮ್ ॥

(ಭಾಷ್ಯಾರ್ಥ)

ಎಲ್ಲಾ ಕರ್ಮಗಳನ್ನೂ ಪ್ರತಿಷಿದ್ಧಕರ್ಮಗಳನ್ನುಕೂಡ [3] ಯಾವಾಗಲೂ ಮಾಡುತ್ತಿದ್ದರೂ ಮದ್ವ್ಯಪಾಶ್ರಯನು (ನನ್ನನ್ನೇ ಆಶ್ರಯಿಸಿದವನು)–ವಾಸುದೇವನಾದ ನಾನು, ಈಶ್ವರನು, ಯಾವನಿಗೆ ವ್ಯಪಾಶ್ರಯವೋ ಆಶ್ರಯಸ್ಥಾನವೋ ಅವನು ಮದ್ವ್ಯಪಾಶ್ರಯನು–ನನ್ನಲ್ಲಿಯೇ ಸರ್ವಾತ್ಮಭಾವವನ್ನು ಅರ್ಪಿಸಿದಾತನು [4] ಎಂದರ್ಥ. ಆತನುಕೂಡ ಮತ್ಪ್ರಸಾದದಿಂದ ಈಶ್ವರನಾದ ನನ್ನ ಪ್ರಸಾದದಿಂದ ಶಾಶ್ವತವಾದ ನಿತ್ಯವಾದ ನಾಶವಿಲ್ಲದ ವೈಷ್ಣವಪದವನ್ನು ಪಡೆಯುತ್ತಾನೆ.

## ಅರ್ಜುನನಿಗೆ ಉಪದೇಶ

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥೫೭ ॥**

೫೭ ಚಿತ್ತದಿಂದ ಸರ್ವಕರ್ಮಗಳನ್ನೂ ನನ್ನಲ್ಲಿ ಸಂನ್ಯಾಸಮಾಡಿ ಮತ್ಪರನಾಗಿ ಬುದ್ಧಿಯೋಗವನ್ನವಲಂಭಿಸಿ ಯಾವಾಗಲೂ ಮಚ್ಚಿತ್ತನಾಗಿರು.

---

1. ಮು॥ ಮೈ॥ ವಾ॥ ಗಳ ಪಾಠ; ಅಪಿ ಎಂಬುದು ನಿ॥ ಅ॥ಗಳಲ್ಲಿ ಬಿಟ್ಟುಹೋಗಿದೆ.
2. ಮು॥ ಮೈ॥ ವಾ॥ ಗಳಲ್ಲಿ ಮಾತ್ರ ಇದೆ.
3. ೯-೩೦ರ ಅಭಿಪ್ರಾಯವೇ ಇದು.
4. ವಾಸುದೇವನೇ ಎಲ್ಲವೂ ಎಂಬ ಭಾವದಿಂದ ಕರ್ಮವನ್ನು ಮಾಡುವಾತನು.

(ಭಾಷ್ಯ)

೫೭೦. ಯಸ್ಮಾದೇವಮ್,[1] ಚೇತಸಾ ವಿವೇಕಬುದ್ಧ್ಯಾ ಸರ್ವಕರ್ಮಾಣಿ ದೃಷ್ಟಾದೃಷ್ಟಾರ್ಥಾನಿ ಮಯಿ ಈಶ್ವರೇ ಸಂನ್ಯಸ್ಯ "ಯತ್ ಕರೋಷಿ ಯದಶ್ನಾಸಿ" (೯-೨೭) ಇತ್ಯುಕ್ತನ್ಯಾಯೇನ ಮತ್ಪರಃ ಅಹಂ ವಾಸುದೇವಃ ಪರಃ ಯಸ್ಯ ತವ ಸ ತ್ವಂ ಮತ್ಪರಃ ಮಯ್ಯರ್ಪಿತಸರ್ವಾತ್ಮಭಾವಃ[2] ಸನ್ ಬುದ್ಧಿಯೋಗಂ ಸಮಾಹಿತಬುದ್ಧಿತ್ವಂ ಬುದ್ಧಿಯೋಗಃ ತಂ ಬುದ್ಧಿಯೋಗಮ್ ಅಪಾಶ್ರಿತ್ಯ[3] । ಅಪಾಶ್ರಯಃ ಅನನ್ಯಶರಣತ್ವಮ್ । ಮಚ್ಚಿತ್ತಃ ಮಯ್ಯೇವ ಚಿತ್ತಂ ಯಸ್ಯ ತವ ಸ ತ್ವಂ ಮಚ್ಚಿತ್ತಃ ಸತತಂ ಸರ್ವದಾ ಭವ ॥

(ಭಾಷ್ಯಾರ್ಥ)

ಹೀಗಿರುವದರಿಂದ, ಚಿತ್ತದಿಂದ ವಿವೇಕದರಿವಿನಿಂದ ಕಂಡ(ಈ ಲೋಕದ) ಮತ್ತು ಕಾಣದ(ಪರಲೋಕದ)ಫಲಕ್ಕಾಗಿ ಮಾಡುವ ಸರ್ವಕರ್ಮಗಳನ್ನೂ ಈಶ್ವರನಾದ ನನ್ನಲ್ಲಿ ಸಂನ್ಯಾಸಮಾಡಿ "ಯಾವದನ್ನು ಮಾಡುತ್ತೀಯೋ ಯಾವದನ್ನು ತಿನ್ನುವೆಯೋ....(ಅದನ್ನು ನನಗೆ ಅರ್ಪಣೆಮಾಡು)" (೯-೨೭) ಎಂದು ಹೇಳಿದ ರೀತಿಯಿಂದ(ನನಗೆ ಅರ್ಪಿಸಿ) ಮತ್ಪರನಾಗಿ-ವಾಸುದೇವನಾದ ನಾನೇ ಯಾವ ನಿನಗೆ ಹೆಚ್ಚೋ ಅಂಥ ನೀನು ಮತ್ಪರನು ; (ಅಂಥವನಾಗಿ)–ನನ್ನಲ್ಲಿ ಸರ್ವಾತ್ಮಭಾವವನ್ನು ಅರ್ಪಿಸಿದವನಾಗಿ ಬುದ್ಧಿಯೋಗವನ್ನು–ಬುದ್ಧಿಯನ್ನು (ನನ್ನಲ್ಲಿಯೇ)ಸಮಾಧಾನಗೊಳಿಸಿಕೊಂಡಿರುವದು ಬುದ್ಧಿಯೋಗವು, ಆ ಬುದ್ಧಿಯೋಗವನ್ನು–ಅಪಾಶ್ರಯಿಸಿ : ಇಲ್ಲಿ ಅಪಾಶ್ರಯವೆಂದರೆ ಮತ್ತೊಬ್ಬರು ಶರಣಲ್ಲವೆಂದಿರುವದು–ಮಚ್ಚಿತ್ತನಾಗಿ : ನನ್ನಲ್ಲಿಯೇ ಚಿತ್ತವು ಯಾವನಿಗುಂಟೋ ಅಂಥ ನೀನು ಮಚ್ಚಿತ್ತನು ; (ಅಂಥವನಾಗಿ)–ಯಾವಾಗಲೂ ಎಂದೆಂದಿಗೂ ಇರು.

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ ತರಿಷ್ಯಸಿ ।**
**ಅಥ ಚೇತ್ ತ್ವಮಹಙ್ಕಾರಾನ್ನ ಶ್ರೋಷ್ಯಸಿ ವಿನಙ್ಕ್ಷ್ಯಸಿ ॥ ೫೮ ॥**

೫೮. ಮಚ್ಚಿತ್ತನಾಗಿದ್ದರೆ ಸರ್ವದುರ್ಗಗಳನ್ನೂ ನನ್ನ ಪ್ರಸಾದ

---

1. 'ತಸ್ಮಾತ್' ಎಂದು ಹೆಚ್ಚಾಗಿ ಆ|| ನಿ||

2. ಮು|| ಮೈ||ಗಳಲ್ಲಿಲ್ಲ.

3. 'ಉಪಾಶ್ರಿತ್ಯ' ಎಂದೇ ಭಾರತಪಾಠವು; ಭಾಷ್ಯದಲ್ಲಿಯೂ 'ಉಪಾಶ್ರಯಣವಮ್' ಎಂದೇ ಕೆಲವು ಪುಸ್ತಕಗಳಲ್ಲಿ ಪಾಠವಿದೆಯಂತೆ. ಗು|| ದಲ್ಲಿ ಹೀಗೆಯೇ ಇದೆ.

ದಿಂದಲೇ ದಾಟುವೆ, ಹಾಗಿಲ್ಲದೆ ನೀನು ಅಹಂಕಾರದಿಂದ ಕೇಳದೆಹೋದು ನಾಶವಾಗುವೆ.

(ಭಾಷ್ಯ)

೫೭೧. ಮಚ್ಚಿತ್ತಃ ಸರ್ವದುರ್ಗಾಣಿ ಸರ್ವಾಣಿ ದುಸ್ತರಾಣಿ ಸಂಸಾರಹೇತಂ ಜಾತಾನಿ ಮತ್ಪ್ರಸಾದಾತ್ ತರಿಷ್ಯಸಿ ಅತಿಕ್ರಮಿಷ್ಯಸಿ । ಅಥ ಚೇತ್ ಯದಿ ತ್ವರೆ ಮದುಕ್ತಮ್ ಅಹಙ್ಕಾರಾತ್ ಪಣ್ಡಿತೋಽಹಮ್ ಇತಿ ನ ಶ್ರೋಷ್ಯಸಿ ನ ಗ್ರಹೀಷ್ಯಸಿ ತತಃ ತ್ವಂ ವಿನಙ್ಕ್ಷ್ಯಸಿ ವಿನಾಶಂ ಗಮಿಷ್ಯಸಿ ॥

(ಭಾಷ್ಯಾರ್ಥ)

ನನ್ನಲ್ಲಿಯೇ ಚಿತ್ತವಿಟ್ಟವನಾದರೆ ಸರ್ವದುರ್ಗಗಳನ್ನೂ ದಾಟುವದಕ್ಕಾಗದ ಸಂಸಾರಹೇತುಗಳ ಸಮೂಹಗಳೆಲ್ಲವನ್ನೂ ನನ್ನ ಪ್ರಸಾದದಿಂದ ದಾಟುವೆ. ಮೀರಿ ಹೋಗುವೆ. ಹಾಗಿಲ್ಲದೆ ನೀನು ನಾನು ಹೇಳುವದನ್ನು ನಾನು ಪಂಡಿತನು ಎಂಬ ಅಹಂಕಾರದಿಂದ ಕೇಳದೆ ಇರುವೆಯಾದರೆ ಸ್ವೀಕರಿಸದೆ ಇದ್ದರೆ ಅದರಿಂದ ನೀನು ನಾಶವಾಗುವೆ, ನಾಶವನ್ನು ಹೊಂದುವೆ.

(ಭಾಷ್ಯ)

೫೭೨. ಇದಂ ಚ ತ್ವಯಾ ನ ಮನ್ತವ್ಯಂ ಸ್ವತನ್ತ್ರೋಽಹಮ್, ಕಿಮರ್ಥಂ ಪರೋಕ್ತಂ ಕರಿಷ್ಯಾಮಿ ಇತಿ—

(ಭಾಷ್ಯಾರ್ಥ)

“ನಾನು ಸ್ವತಂತ್ರನು, ಮತ್ತೊಬ್ಬರು ಹೇಳಿದ್ದನ್ನು ಏತಕ್ಕಾಗಿ ಮಾಡಲಿ ?” ಎಂದು ಈ (ರೀತಿಯಲ್ಲಿಯೂ) ನೀನು ಭಾವಿಸಬಾರದು :—

**ಯದ್ಯಹಙ್ಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

೫೯. ಅಹಂಕಾರವನ್ನು ಆಶ್ರಯಿಸಿ ಕಾದುವದಿಲ್ಲ ಎಂದು ಎಣಿಸುವೆ ಯಾದರೆ ಈ ನಿನ್ನ ವ್ಯವಸಾಯವು ವ್ಯರ್ಥವು ; ಪ್ರಕೃತಿಯು ನಿನ್ನನ್ನು ಕಟ್ಟು ಮಾಡುವದು.

(ಭಾಷ್ಯ)

೫೭೩. ಯದಿ ಚೇತ್ ತ್ವಮ್ ಅಹಙ್ಕಾರಮ್ ಆಶ್ರಿತ್ಯ ನ ಯೋತ್ಸ್ಯೇ ಇತಿ ನ ಯುದ್ಧಂ ಕರಿಷ್ಯಾಮಿ ಇತಿ ಮನ್ಯಸೇ ಚಿನ್ತಯಸಿ ನಿಶ್ಚಯಂ ಕರೋಷಿ

ಮಿಥ್ಯಾ ಏಷಃ ವ್ಯವಸಾಯಃ ನಿಶ್ಚಯಃ ತೇ ತವ ಯಸ್ಮಾತ್ ಪ್ರವೃತ್ತಿಃ ಕ್ಷತ್ರಿಯ ಸ್ವಭಾವಃ ತ್ವಾಂ ನಿಯೋಕ್ಷ್ಯತಿ ||

(ಭಾಷ್ಯಾರ್ಥ)

ನೀನು ಅಹಂಕಾರವನ್ನು ಆಶ್ರಯಿಸಿಕೊಂಡು (ನಾನು)ಕಾದುವದಿಲ್ಲ, ಯುದ್ಧವನ್ನು ಮಾಡುವದಿಲ್ಲ–ಎಂದು ಎಣಿಸುವೆಯಾದರೆ, ಯೋಚಿಸಿಕೊಳ್ಳುವೆಯಾದರೆ, ನಿಶ್ಚಯವನ್ನು ಮಾಡಿಕೊಳ್ಳುವೆಯಾದರೆ ಈ (ತೇ = ತವ)ನಿನ್ನ ವ್ಯವಸಾಯವು, ನಿಶ್ಚಯವು ವ್ಯರ್ಥವು. ಏಕೆಂದರೆ ಪ್ರಕೃತಿಯು ಕ್ಷತ್ರಿಯಸ್ವಭಾವವು ನಿನ್ನನ್ನು (ಯುದ್ಧದಲ್ಲಿ ತೊಡಗುವಂತೆ) ಕಟ್ಟುಮಾಡುವದು.

**ಸ್ವಭಾವಜೇನ ಕೌನ್ತೇಯ ನಿಬದ್ಧಃ ಸ್ವೇನ ಕರ್ಮಣಾ |**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್||೬೦||**

೬೦. ಕೌಂತೇಯನೆ, ಸ್ವಭಾವಜವಾದ ನಿನ್ನ ಕರ್ಮದಿಂದ ನಿಬದ್ಧನಾಗಿ ಮೋಹದಿಂದ ಯಾವದನ್ನು (ಈಗ) ಮಾಡಲೊಲ್ಲೆನೆನ್ನುತ್ತಿರುವೆಯೋ ಅದನ್ನು ಅವಶನಾಗಿಯಾದರೂ ಮಾಡುವೆ.

(ಭಾಷ್ಯ)

೫೭೪. ಯಸ್ಮಾಚ್ಚ ಸ್ವಭಾವಜೇನ ಶೌರ್ಯಾದಿನಾ ಯಥೋಕ್ತೇನ ಕೌನ್ತೇಯ ನಿಬದ್ಧಃ ನಿಶ್ಚಯೇನ ಬದ್ಧಃ ಸ್ವೇನ ಆತ್ಮೀಯೇನ ಕರ್ಮಣಾ ಕರ್ತುಂ ನೇಚ್ಛಸಿ ಯತ್ ಕರ್ಮ ಮೋಹಾತ್ ಅವಿವೇಕತಃ, ಕರಿಷ್ಯಸಿ ಅವಶೋಽಪಿ ಪರವಶ ಏವ ತತ್ ಕರ್ಮ ||

(ಭಾಷ್ಯಾರ್ಥ)

ಮತ್ತು ಏಕೆಂದರೆ ಕೌಂತೇಯನೆ, ಹಿಂದೆ ಹೇಳಿದಂತೆ[1] ಸ್ವಭಾವಜವಾಗಿರುವ ಶೌರ್ಯವೇ ಮುಂತಾದ ನಿನ್ನ ನಿನಗೆ ಸೇರಿರುವ ಕರ್ಮದಿಂದ ನಿಬದ್ಧನಾಗಿ ನಿಶ್ಚಯವಾಗಿ ಕಟ್ಟುವಡೆದವನಾಗಿ, ಯಾವ ಕರ್ಮವನ್ನು ಮೋಹದಿಂದ ಅವಿವೇಕದಿಂದ (ಈಗ) ಮಾಡಲೊಲ್ಲೆನೆನ್ನುತ್ತಿರುವೆಯೋ, ಆ ಕರ್ಮವನ್ನು ಅವಶನಾಗಿಯಾದರೂ ಪರವಶನಾಗಿಯೇ ಮಾಡುವೆ.

---

1. ೧೮-೪೩ರಲ್ಲಿ

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥೬೧॥**

೬೧. ಅರ್ಜುನನೆ, ಯಂತ್ರಾರೂಢವಾಗಿರುವ ಸರ್ವಭೂತಗಳನ್ನೂ ಮಾಯೆಯಿಂದ ತಿರುಗಿಸುತ್ತಾ ಈಶ್ವರನು ಸರ್ವಭೂತಗಳ ಹೃದ್ದೇಶದಲ್ಲಿಯೂ ಇದ್ದು ಕೊಂಡಿರುವನು.

(ಭಾಷ್ಯ)

೫೭೫. ಯಸ್ಮಾತ್ **ಈಶ್ವರಃ** ಈಶನಶೀಲಃ **ನಾರಾಯಣಃ**[1] **ಸರ್ವಭೂತಾನಾಂ** ಸರ್ವಪ್ರಾಣಿನಾಂ **ಹೃದ್ದೇಶೇ** ಹೃದಯದೇಶೇ **ಅರ್ಜುನ** ಶುಕ್ಲಾನ್ತರಾತ್ಮಸ್ವಭಾವ, ವಿಶುದ್ಧಾನ್ತಃಕರಣ । "ಅಹಶ್ಚ ಕೃಷ್ಣಮಹರರ್ಜುನಂ ಚ" (ಋ. ಮಂ. ೬-೧-೯-೧) ಇತಿ ದರ್ಶನಾತ್ । **ತಿಷ್ಠತಿ** ಸ್ಥಿತಿಂ ಲಭತೇ । ತೇಷು ಸ ಕಥಂ ತಿಷ್ಠತಿ ಇತಿ? ಆಹ–**ಭ್ರಾಮಯನ್** ಭ್ರಮಣಂ ಕಾರಯನ್ **ಸರ್ವಭೂತಾನಿ ಯನ್ತ್ರಾರೂಢಾನಿ**[2] ಯನ್ತ್ರಾಣಿ ಆರೂಢಾನಿ ಅಧಿಷ್ಠಿತಾನಿ[3] ಇವ ಇತಿ ಇವಶಬ್ದೋ[4] ದ್ರಷ್ಟವ್ಯಃ । ಯಥಾ ದಾರುಕೃತಪುರುಷಾದೀನಿ ಯನ್ತ್ರಾರೂಢಾನಿ **ಮಾಯಯಾ** ಛದ್ಮನಾ ಭ್ರಾಮಯನ್ ತಿಷ್ಠತಿ ಇತಿ ಸಮ್ಬನ್ಧಃ ॥

(ಭಾಷ್ಯಾರ್ಥ)

ಏಕೆಂದರೆ ಈಶ್ವರನು ಆಳುವ ಸ್ವಭಾವದವನಾದ ನಾರಾಯಣನು ಸರ್ವಭೂತಗಳ ಸರ್ವಪ್ರಾಣಿಗಳ ಹೃದ್ದೇಶದಲ್ಲಿ ಹೃದಯದೊಳಗೆ,–ಎಲೈ **ಅರ್ಜುನನೆ,** ಶುಕ್ಲವಾದ ಅಂತರಾತ್ಮಸ್ವಭಾವವುಳ್ಳವನೆ, ವಿಶುದ್ಧವಾದ ಅಂತಃಕರಣವುಳ್ಳವನೆ (ಎಂದರ್ಥ). "ಅಹಶ್ಚ ಕೃಷ್ಣಮಹರರ್ಜುನಂ ಚ" (ಋ. ಮಂ. ೬-೧-೯-೧) ಎಂದು (ಬೆಳ್ಳಗೆ ಎಂಬ ಅರ್ಥದಲ್ಲಿ ಅರ್ಜುನಶಬ್ದವನ್ನು ಪ್ರಯೋಗಿಸಿರುವದು) ಕಂಡುಬರುವದರಿಂದ (ಹೀಗೆ ಅರ್ಥಮಾಡಿಕೊಳ್ಳಬೇಕು).–ಇದ್ದುಕೊಂಡಿರುವನು, ಇರವನ್ನು ಪಡೆದುಕೊಂಡಿರುವನು. ಆ (ಪ್ರಾಣಿಗಳಲ್ಲಿ) ಆ (ಈಶ್ವರನು) ಹೇಗೆ ಇದ್ದುಕೊಂಡಿರುವನು ? ಎಂದರೆ ಹೇಳುತ್ತಾನೆ. ಯಂತ್ರಾರೂಢವಾಗಿರುವ ಯಂತ್ರಗಳನ್ನು

---

1. ಮ॥ ಮೈ॥ ಗಳಲ್ಲಿಲ್ಲ.
2. 'ಯನ್ತ್ರಾರೂಢಾನೀವ' ಮ॥ ಮೈ॥
3. ಮ॥ ಮೈ॥ ಗಳಲ್ಲಿಲ್ಲ.
4. "ಇವಶಬ್ದಃ ಅತ್ರ" ಮ॥ ಮೈ॥ ವಾ॥

ಆರೂಢವಾಗಿರುವಂತೆ ಏರಿರುವಂತೆ (ದೇಹಗಳಲ್ಲಿ ಸೇರಿರುವ) ಎಂದು ಇವಶಬ್ದ ವನ್ನು ಅಧ್ಯಾಹಾರಮಾಡಿಕೊಳ್ಳಬೇಕು ; ಎಲ್ಲಾ ಭೂತಗಳನ್ನೂ 'ಭ್ರಾಮಯನ್' ತಿರುಗಿಸುತ್ತಾ (ಇರುತ್ತಾನೆ). ಹೇಗೆ ಮರದಿಂದ ಮಾಡಿರುವ ಮನುಷ್ಯರ (ಗೊಂಬೆ ಗಳೇ) ಮುಂತಾದವು (ಯಂತ್ರಗಳನ್ನು ಏರಿರುವವೋ) ಹಾಗೆ ಯಂತ್ರಾರೂಢವಾಗಿ ರುವ (ಪ್ರಾಣಿಗಳನ್ನು) ಮಾಯೆಯಿಂದ ಕಪಟದಿಂದ[1] ತಿರುಗಿಸುತ್ತಾ ಇರುತ್ತಾನೆ ಎಂದು ಸಂಬಂಧವನ್ನು (ಮಾಡಿಕೊಳ್ಳಬೇಕು).

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥೬೨॥**

೬೨. ಎಲೈ ಭಾರತನೆ, ಸರ್ವಭಾವದಿಂದಲೂ ಆತನನ್ನೇ ಶರಣು ಹೊಂದು. ಆತನ ಪ್ರಸಾದದಿಂದ ಪರಮಶಾಂತಿಯನ್ನೂ ಶಾಶ್ವತವಾದ ಸ್ಥಾನವನ್ನೂ ಪಡೆಯುವೆ.

(ಭಾಷ್ಯ)

೫೭೬. ತಮೇವ ಈಶ್ವರಂ ಶರಣಮ್ ಆಶ್ರಯಂ ಸಂಸಾರಾರ್ತಿಹರಣಾರ್ಥಂ ಗಚ್ಛ ಆಶ್ರಯ ಸರ್ವಭಾವೇನ ಸರ್ವಾತ್ಮನಾ ಹೇ ಭಾರತ[2] । ತತಃ ತತ್ಪ್ರಸಾದಾತ್ ಈಶ್ವರಾನುಗ್ರಹಾತ್ ಪರಾಂ ಪ್ರಕೃಷ್ಟಾಂ ಶಾನ್ತಿಮ್ ಉಪರತಿಂ ಸ್ಥಾನಂ ಚ ಮಮ ವಿಷ್ಣೋಃ ಪರಮಂ ಪದಮ್ ಅವಾಪ್ಸ್ಯಸಿ ಶಾಶ್ವತಂ ನಿತ್ಯಮ್ ॥

(ಭಾಷ್ಯಾರ್ಥ)

ಅದೇ ಈಶ್ವರನನ್ನು ಸಂಸಾರದ ಸಂಕಟವನ್ನು ತೊಲಗಿಸುವದಕ್ಕೆ ಶರಣವನ್ನಾಗಿ ಆಶ್ರಯವಾಗಿ. ಸೇರಿಕೊ. ಎಲೈ ಭಾರತನೆ, ಸರ್ವಭಾವದಿಂದಲೂ ಎಲ್ಲಾ ಬಗೆ ಯಿಂದಲೂ ಆಶ್ರಯಿಸು. ಬಳಿಕ ಆತನ ಪ್ರಸಾದದಿಂದ ಈಶ್ವರನ ಅನುಗ್ರಹದಿಂದ ಪರಮಶಾಂತಿಯನ್ನು ಹೆಚ್ಚಿನ ಉಪರತಿಯನ್ನು ಶಾಶ್ವತವಾದ ನಿತ್ಯವಾದ ಸ್ಥಾನ ವನ್ನು ವಿಷ್ಣುವಾದ ನನ್ನ ಪರಮಪದವನ್ನು[3] ಪಡೆಯುವೆ.

---

1. ಅಜ್ಞಾನನಿಮಿತ್ತವಾಗಿಯೇ ಸಂಸಾರವಾಗಿರುವವೆಂಬುದನ್ನು 'ಮಾಯೆಯಿಂದ' ಎಂಬ ಮಾತು ಸೂಚಿಸುವದು.

2. 'ಭರತಾನ್ವಯ' ಎಂದು ಹೆಚ್ಚಾಗಿ ಮ॥

3. ಕ. ೧-೩-೯ ರ ಸೂಚನೆ.

# ಉಪಸಂಹಾರ

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥೬೩॥**

೬೩. ಹೀಗೆ ಗುಹ್ಯಕ್ಕಿಂತಲೂ ಗುಹ್ಯತರವಾದ ಜ್ಞಾನವು ನನ್ನಿಂದ ಹೇಳಲ್ಪಟ್ಟಿರುತ್ತದೆ. ಇದನ್ನು ಅಶೇಷವಾಗಿ ವಿಮರ್ಶೆಮಾಡಿ ನಿನಗೆ ಹೇಗೆ ಇಚ್ಛೆಯಾಗುವದೋ ಹಾಗೆ ಮಾಡು.

(ಭಾಷ್ಯ)

೫೭೭. ಇತಿ ಏತತ್ ತೇ ತುಭ್ಯಂ ಜ್ಞಾನಮ್ ಆಖ್ಯಾತಂ ಕಥಿತಂ ಗುಹ್ಯಾತ್ ಗೋಪ್ಯಾತ್ ಗುಹ್ಯತರಮ್ ಅತಿಶಯೇನ ಗುಹ್ಯಂ ರಹಸ್ಯಮ್ ಇತ್ಯರ್ಥಃ ಮಯಾ ಸರ್ವಜ್ಞೇನ ಈಶ್ವರೇಣ । ವಿಮೃಶ್ಯ ವಿಮರ್ಶನಮ್ ಆಲೋಚನಂ ಕೃತ್ವಾ ಏತತ್ ಯಥೋಕ್ತಂ ಶಾಸ್ತ್ರಮ್ ಅಶೇಷೇಣ ಸಮಸ್ತಂ ಯಥೋಕ್ತಂ ಚ ಅರ್ಥ ಜಾತಂ ಯಥಾ ಇಚ್ಛಸಿ ತಥಾ ಕುರು ॥

(ಭಾಷ್ಯಾರ್ಥ)

ಹೀಗೆ ನಿನಗೆ ಈ ಜ್ಞಾನವು ನನ್ನಿಂದ ಸರ್ವಜ್ಞನಾದ ಈಶ್ವರನಿಂದ, ಹೇಳಲ್ಪಟ್ಟಿರುತ್ತದೆ, ತಿಳಿಸಲ್ಪಟ್ಟಿರುತ್ತದೆ. (ಇದು) ಗುಹ್ಯಕ್ಕಿಂತಲೂ ಗುಟ್ಟಿಗಿಂತಲೂ ಗುಹ್ಯತರವು ಹೆಚ್ಚು ಗುಹ್ಯವು, ಗುಟ್ಟು ಎಂದರ್ಥ.[1] ಇದನ್ನು ಮೇಲೆ ಹೇಳಿರುವ ಶಾಸ್ತ್ರವನ್ನು ಅಶೇಷವಾಗಿ ಸಂಪೂರ್ಣವಾಗಿ (ಈ) ಮೇಲೆ ಹೇಳಿದ ಅರ್ಥಸಮೂಹವನ್ನು ವಿಮರ್ಶಿಸಿ ವಿಮರ್ಶನವನ್ನು ಆಲೋಚನೆಯನ್ನು ಮಾಡಿ ನಿನಗೆ ಹೇಗೆ ಇಚ್ಛೆಯಾಗುವದೋ ಹಾಗೆ ಮಾಡು.

(ಭಾಷ್ಯ)

೫೭೮. ಭೂಯೋಽಪಿ ಮಯಾ ಉಚ್ಯಮಾನಂ ಶೃಣು—

(ಭಾಷ್ಯಾರ್ಥ)

ಮತ್ತೂ ನಾನು ಹೇಳುವದನ್ನು ಕೇಳು :—

---

1. ಅಧಿಕಾರಿಗಳಿಗೆ ಮಾತ್ರ ತಿಳಿಯತಕ್ಕದ್ದು.

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥೬೪॥**

೬೪. ಸರ್ವಗುಹ್ಯತಮವಾದ ನನ್ನ ಪರಮವಚನವನ್ನು ಮತ್ತೊಮ್ಮೆ ಕೇಳು. ನೀನು ದೃಢವಾಗಿ ಇಷ್ಟನಾಗಿರುವೆ, ಆದ್ದರಿಂದ ನಿನಗೆ ಹಿತವನ್ನು ಹೇಳುವೆನು.

(ಭಾಷ್ಯ)

೫೭೯. ಸರ್ವಗುಹ್ಯತಮಂ ಸರ್ವಗುಹ್ಯೇಭ್ಯಃ ಅತ್ಯನ್ತಗುಹ್ಯತಮಮ್ ಅತ್ಯನ್ತರಹಸ್ಯಮ್ ಉಕ್ತಮಪಿ ಅಸಕೃತ್ ಭೂಯಃ ಪುನಃ ಶೃಣು ಮೇ ಮಮ ಪರಮಂ ಪ್ರಕೃಷ್ಟಂ ವಚಃ ವಾಕ್ಯಮ್ । ನ ಭಯಾತ್ ನಾಪಿ ಅರ್ಥಕಾರಣಾತ್ ವಾ ವಕ್ಷ್ಯಾಮಿ । ಕಿಂ ತರ್ಹಿ ಇಷ್ಟಃ ಪ್ರಿಯಃ ಅಸಿ ಮೇ ಮಮ ದೃಢಮ್ ಅವ್ಯಭಿಚಾರೇಣ ಇತಿ ಕೃತ್ವಾ ತತಃ ತೇನ ಕಾರಣೇನ ವಕ್ಷ್ಯಾಮಿ ಕಥಯಿಷ್ಯಾಮಿ ತೇ ಹಿತಂ ಪರಂ ಜ್ಞಾನಪ್ರಾಪ್ತಿಸಾಧನಮ್ । ತದ್ ಹಿ ಸರ್ವಹಿತಾನಾಂ ಹಿತತಮಮ್॥

(ಭಾಷ್ಯಾರ್ಥ)

ಸರ್ವಗುಹ್ಯತಮವಾದ ಗುಟ್ಟಾಗಿರುವವುಗಳಲ್ಲೆಲ್ಲ ಹೆಚ್ಚಿನ ಗುಟ್ಟಾದ ಅತ್ಯಂತ ರಹಸ್ಯವನ್ನು, ಎಷ್ಟೋ ಸಲ ಹೇಳಿರುವೆನಾದರೂ ಮತ್ತೂ ಒಮ್ಮೆ (ಹೇಳುವೆನು) ಕೇಳು. (ಇದು ಮೇ = ಮಮ) ನನ್ನ ಪರಮವಾದ ಹೆಚ್ಚಿನ ವಚನವು, ವಾಕ್ಯವು. ಅಂಜಿಕೆಯಿಂದಲಾಗಲಿ ಪ್ರಯೋಜನ(ವಾಗಬೇಕೆಂಬ) ಕಾರಣದಿಂದಲಾಗಲಿ ಹೇಳುವದಿಲ್ಲ; ಮತ್ತೇನೆಂದರೆ (ಮೇ = ಮಮ) ನನಗೆ ದೃಢವಾಗಿ ತಪ್ಪದೆ ಇಷ್ಟನು, ಪ್ರಿಯನು ಎಂದಿಟ್ಟುಕೊಂಡು, ಆದ್ದರಿಂದ ಆ ಕಾರಣದಿಂದ, ನಿನಗೆ ಹಿತವಾದದ್ದನ್ನು ಜ್ಞಾನವನ್ನು ಪಡೆದುಕೊಳ್ಳುವದಕ್ಕೆ ಬೇಕಾದ ಹೆಚ್ಚಿನ ಸಾಧನವನ್ನು ಹೇಳುವೆನು, ತಿಳಿಸುವೆನು; ಏಕೆಂದರೆ ಅದೇ ಹಿತಗಳಲ್ಲೆಲ್ಲ ಹೆಚ್ಚು ಹಿತವಾಗಿರುವದು.[1]

(ಭಾಷ್ಯ)

೫೮೦. ಕಿಂ ತತ್ ಇತಿ? ಆಹ—

(ಭಾಷ್ಯಾರ್ಥ)

ಅದು ಯಾವದು? ಎಂದರೆ ಹೇಳುತ್ತಾನೆ:—

1. ಕೌ. ಉ. ೨-೧ ರ ಸೂಚನೆ.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥೬೫॥**

೬೫. ನನ್ನಲ್ಲಿಯೇ ಮನಸ್ಸಿರುವವನಾಗಿರು, ನನ್ನ ಯಾಗವನ್ನೇ ಮಾಡುತ್ತಿರು, ನನ್ನನ್ನು ನಮಸ್ಕರಿಸು, ನನ್ನನ್ನೇ ಸೇರುವೆ. ಸತ್ಯವಾಗಿ ಪ್ರತಿಜ್ಞೆ ಮಾಡುತ್ತೇನೆ, ನೀನು ನನಗೆ ಪ್ರಿಯನಾಗಿರುತ್ತೀಯೆ.

(ಭಾಷ್ಯ

೫೮೧. ಮನ್ಮನಾ ಭವ ಮಚ್ಚಿತ್ತೋ ಭವ । ಮದ್ಭಕ್ತೋ ಭವ ಮದ್ಭಜನೋ ಭವ । ಮದ್ಯಾಜೀ ಮದ್ಯಜನಶೀಲೋ ಭವ । ಮಾಂ ನಮಸ್ಕುರು, ನಮಸ್ಕಾರಮಪಿ ಮಮೈವ ಕುರು । ತತ್ರ ಏವಂ ವರ್ತಮಾನಃ ವಾಸುದೇವೇ ಏವ ಸಮರ್ಪಿತಸಾಧ್ಯಸಾಧನಪ್ರಯೋಜನಃ ಮಾಮೇವ ಏಷ್ಯಸಿ ಆಗಮಿಷ್ಯಸಿ । ಸತ್ಯಂ ತೇ ತವ ಪ್ರತಿಜಾನೇ ಸತ್ಯಾಂ ಪ್ರತಿಜ್ಞಾಂ ಕರೋಮಿ ಏತಸ್ಮಿನ್ ವಸ್ತುನಿ ಇತ್ಯರ್ಥಃ । ಯತಃ ಪ್ರಿಯಃ ಅಸಿ ಮೇ । ಏವಂ ಭಗವತಃ ಸತ್ಯಪ್ರತಿಜ್ಞತ್ವಂ ಬುದ್ಧ್ವಾ ಭಗವದ್ಭಕ್ತೇಃ ಅವಶ್ಯಂಭಾವಿಮೋಕ್ಷಫಲಮ್ ಅವಧಾರ್ಯ ಭಗವಚ್ಛರಣೈಕಪರಾಯಣೋ ಭವೇತ್ ಇತಿ ವಾಕ್ಯಾರ್ಥಃ ॥

(ಭಾಷ್ಯಾರ್ಥ)

ನನ್ನಲ್ಲಿ ಮನಸ್ಸಿರುವವನಾಗು, ನನ್ನಲ್ಲಿಯೇ ಚಿತ್ತವುಳ್ಳವನಾಗಿರು ; ನನ್ನ ಭಕ್ತನಾಗಿರು, ನನ್ನನ್ನೇ ಭಜನೆಮಾಡುತ್ತಿರುವನಾಗು ; ಮದ್ಯಾಜಿಯಾಗಿರು, ನನ್ನ ಯಾಗವವನ್ನು ಮಾಡುವ ಸ್ವಭಾವದವನಾಗಿರು ; ನನ್ನನ್ನೇ ನಮಸ್ಕರಿಸು, ನಮಸ್ಕಾರವನ್ನೂ ನನಗೇ ಮಾಡು. ಇಲ್ಲಿ ಹೀಗೆ ಇರುವವನಾಗಿ **ವಾಸುದೇವನಲ್ಲಿಯೇ** ಸಾಧ್ಯವನ್ನೂ ಸಾಧನವನ್ನೂ ಪ್ರಯೋಜನವನ್ನೂ ಸಮರ್ಪಿಸುತ್ತಿದ್ದರೆ ನನ್ನನ್ನೇ ಸೇರುವೆ, (ನನ್ನ ಬಳಿಗೇ) ಬರುವೆ. ಈ ವಿಷಯದಲ್ಲಿ ಸತ್ಯವಾಗಿ ನಿನಗೆ (ಪ್ರತಿಜಾನೇ) ಪ್ರತಿಜ್ಞೆ ಮಾಡಿ (ಹೇಳುತ್ತೇನೆ) ಎಂದರ್ಥ. ಏಕೆಂದರೆ ನನಗೆ ಪ್ರಿಯನಾಗಿರುವೆ. **ಈ ರೀತಿಯಲ್ಲಿ ಭಗವಂತನು ಸತ್ಯವಾಗಿ ಹೇಳಿರುತ್ತಾನೆಂದು ಅರಿತುಕೊಂಡು ಭಗವದ್ಭಕ್ತಿಗೆ ಮೋಕ್ಷಫಲವು ಅವಶ್ಯವಾಗಿ ಆಗಿಯೇ ತೀರುವದೆಂದು ನಿಶ್ಚಯಿಸಿ ಭಗವಂತನನ್ನು ಶರಣುಹೊಗುವದೊಂದರಲ್ಲಿಯೇ ತತ್ಪರನಾಗಿರಬೇಕು ಎಂದು ವಾಕ್ಯಾರ್ಥವು.**

(ಭಾಷ್ಯ)

೫೮೨. ಕರ್ಮಯೋಗನಿಷ್ಠಾಯಾಃ ಪರಮರಹಸ್ಯಮ್ ಈಶ್ವರಶರಣ

ತಾಮ್ ಉಪಸಂಹೃತ್ಯ ಅಥ ಇದಾನೀಂ ಕರ್ಮಯೋಗನಿಷ್ಠಾಫಲಂ ಸಮ್ಯಗ್ದರ್ಶನಮ್ ಸರ್ವವೇದಾನ್ತವಿಹಿತಂ[1] ವಕ್ತವ್ಯಮ್ ಇತ್ಯಾಹ—

(ಭಾಷ್ಯಾರ್ಥ)

ಕರ್ಮಯೋಗನಿಷ್ಠೆಯ ಪರಮರಹಸ್ಯವಾದ ಈಶ್ವರಶರಣತ್ವವನ್ನು ಉಪಸಂಹಾರಮಾಡಿ ಇನ್ನು ಈಗ ಕರ್ಮಯೋಗನಿಷ್ಠೆಯ ಫಲವಾದ ಸರ್ವವೇದಾಂತಗಳಲ್ಲಿಯೂ ಹೇಳಿರುವ ಸಮ್ಯಗ್ಜ್ಞಾನವನ್ನು ಹೇಳಬೇಕೆಂದು (ಈ ವಾಕ್ಯವನ್ನು) ಹೇಳುತ್ತಾನೆ :—

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ
|| ೬೬ ||

೬೬. ಸರ್ವಧರ್ಮಗಳನ್ನೂ ಬಿಟ್ಟು ನನ್ನೊಬ್ಬನನ್ನೇ ಶರಣು ಹೊಂದು, ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡುಗಡೆಮಾಡಿಸುವೆನು, ಶೋಕಿಸಬೇಡ.

(ಭಾಷ್ಯ)

೫೮೩. ಸರ್ವಧರ್ಮಾನ್ । ಸರ್ವೇ ಚ ತೇ ಧರ್ಮಾಶ್ಚ ಸರ್ವಧರ್ಮಾಃ । ತಾನ್ । ಧರ್ಮಶಬ್ದೇನ ಅತ್ರ ಅಧರ್ಮೋಽಪಿ ಗೃಹ್ಯತೇ । ನೈಷ್ಕರ್ಮ್ಯಸ್ಯ ವಿವಕ್ಷಿತತ್ವಾತ್ । "ನಾವಿರತೋ ದುಶ್ಚರಿತಾತ್" (ಕ. ೧-೨-೨೪) "ತ್ಯಜ ಧರ್ಮಮಧರ್ಮಂ ಚ" (ಮೋ. ಧ. ೩೨೯-೪೦) ಇತ್ಯಾದಿಶ್ರುತಿಸ್ಮೃತಿಭ್ಯಃ । ಸರ್ವಧರ್ಮಾನ್ ಪರಿತ್ಯಜ್ಯ । ಸಂನ್ಯಸ್ಯ ಸರ್ವಕರ್ಮಾಣಿ ಇತ್ಯೇತತ್ । ಮಾಮ್ ಏಕಂ ಸರ್ವಾತ್ಮಾನಂ ಸಮಂ ಸರ್ವಭೂತಸ್ಥಮ್ ಈಶ್ವರಮ್ ಅಚ್ಯುತಂ ಗರ್ಭಜನ್ಮಜರಾಮರಣವರ್ಜಿತಂ[2] ಅಹಮೇವ ಇತ್ಯೇವಂ ಶರಣಂ ವ್ರಜ । ನ ಮತ್ತೋಽನ್ಯದಸ್ತಿ ಇತ್ಯವಧಾರಯ ಇತ್ಯರ್ಥಃ । ಅಹಂ ತ್ವಾ ತ್ವಾಮ್ ಏವಂ ನಿಶ್ಚಿತಬುದ್ಧಿಂ ಸರ್ವಪಾಪೇಭ್ಯಃ ಸರ್ವಧರ್ಮಾಧರ್ಮಬನ್ಧನರೂಪೇಭ್ಯಃ ಮೋಕ್ಷಯಿಷ್ಯಾಮಿ ಸ್ವಾತ್ಮಭಾವಪ್ರಕಾಶೀಕರಣೇನ ।[3] ಉಕ್ತಂ ಚ "ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ" (೧೦-೧೧) ಅತಃ ಮಾ ಶುಚಃ, ಶೋಕಂ ಮಾ ಕಾರ್ಷೀಃ ಇತ್ಯರ್ಥಃ ||

---

1. 'ಸರ್ವವೇದಾಂತಸಾರವಿಹಿತಮ್' ಎಂಬ ಅ||ಮು||ಮೈ||ಗಳಲ್ಲಿ 'ಸಾರ' ಹೆಚ್ಚು.
2. ಮು||ಮೈ||ಗಳಲ್ಲಿಲ್ಲ.
3. 'ಪ್ರಕಾಶಕರಣೇನ' ಮು||

(ಭಾಷ್ಯಾರ್ಥ)

ಸರ್ವಧರ್ಮಗಳನ್ನೂ : ಸರ್ವಧರ್ಮಗಳು ಎಂದರೆ ಎಲ್ಲಾ ಧರ್ಮಗಳು. **ಇಲ್ಲಿ ಧರ್ಮವೆಂಬ ಮಾತಿನಿಂದ ಅಧರ್ಮವನ್ನೂ ತೆಗೆದುಕೊಳ್ಳಬೇಕು; ಏಕೆಂದರೆ (ಇಲ್ಲಿ) ನೈಷ್ಕರ್ಮ್ಯವನ್ನು ಹೇಳಬೇಕೆಂದು ಹೊರಟಿರುತ್ತದೆ.**[1] "ಕೆಟ್ಟ ನಡತೆಯನ್ನು ಬಿಟ್ಟವನಲ್ಲದವನು ...(ಪ್ರಜ್ಞಾನದಿಂದ ಈ ಆತ್ಮನನ್ನು ಪಡೆಯಲಾರನು)" (ಕ. ೧-೨-೨೫), "ಧರ್ಮವನ್ನು ಬಿಡು, ಅಧರ್ಮವನ್ನೂ (ಬಿಡು)" (ಮೋ.ಧ. ೩೨೯-೪೦) ಮುಂತಾದ ಶ್ರುತಿಸ್ಮೃತಿಗಳು (ಇದಕ್ಕೆ ಆಧಾರವು. ಹೀಗೆ) ಸರ್ವಧರ್ಮಗಳನ್ನೂ ಬಿಟ್ಟು, ಸರ್ವಕರ್ಮಗಳನ್ನೂ ಸಂನ್ಯಾಸಮಾಡಿ[2] ಎಂದು ಅಭಿಪ್ರಾಯ.

**ನನ್ನೊಬ್ಬನನ್ನೇ ಸರ್ವರ ಆತ್ಮನೂ (ಎಲ್ಲರಲ್ಲಿಯೂ) ಸಮನೂ ಸರ್ವಭೂತಗಳಲ್ಲಿಯೂ ಇರುವವನೂ ಈಶ್ವರನೂ ಅಚ್ಯುತನೂ, ಗರ್ಭ, ಜನ್ಮ, ಮುಪ್ಪು, ಸಾವು- ಇವುಗಳಿಲ್ಲದವನೂ ಆಗಿರುವ ನನ್ನೊಬ್ಬನನ್ನೇ 'ನಾನೇ ಆತನು' ಎಂದು ಶರಣವನ್ನು ಹೊಂದು. ನನಗಿಂತ ಬೇರೆ(ಯಾವದೂ) ಇಲ್ಲ ಎಂದು ನಿಶ್ಚಯಿಸಿಕೊ ಎಂದರ್ಥ.**[3]

ಹೀಗೆ ಬುದ್ಧಿಯಲ್ಲಿ ನಿಶ್ಚಯಿಸಿಕೊಂಡಿರುವ (ತ್ವಾ = ತ್ವಾಮ್) ನಿನ್ನನ್ನು ನಾನು ಸರ್ವಪಾಪಗಳಿಂದಲೂ ಎಲ್ಲಾ ಧರ್ಮಗಳ ಮತ್ತು ಅಧರ್ಮಗಳ ಬಂಧನರೂಪವಾದ ಎಲ್ಲಾ ಪಾಪಗಳಿಂದಲೂ[4] ನಿನ್ನ ಆತ್ಮಸ್ವರೂಪವನ್ನು ಬೆಳಗಿಸಿಕೊಡುವದರಿಂದ, ಬಿಡುಗಡೆಮಾಡಿಸುವೆನು. "ಅವರ ಆತ್ಮಭಾವಸ್ಥನಾಗಿ ಬೆಳಗುವ ಜ್ಞಾನದೀಪದಿಂದ (ಅಜ್ಞಾನಜವಾದ ತಮಸ್ಸನ್ನು) ನಾಶಗೊಳಿಸುವೆನು" (೧೦-೧೧) ಎಂದು (ಹಿಂದೆ) ಹೇಳಿಯೂ ಇರುತ್ತದೆ. ಆದ್ದರಿಂದ ಶೋಕಿಸಬೇಡ ಶೋಕವನ್ನು ಮಾಡಬೇಡ ಎಂದರ್ಥ.

---

1. ಧರ್ಮಗಳನ್ನು ಬಿಡು ಎಂದು ಅಕ್ಷರಾರ್ಥವಷ್ಟನ್ನೇ ಹಿಡಿದರೆ ಅಧರ್ಮವನ್ನು ಮಾಡಿದರೂ ಚಿಂತೆಯಿಲ್ಲ ಎಂಬ ಅನಿಷ್ಟವಾದ ಅರ್ಥವು ಹೊರಡುವದು. ಆದ್ದರಿಂದ ಮುಂದೆ ಉದಾಹರಿಸಿರುವ ವಚನಗಳಿಗೂ ಸರ್ವಕರ್ಮಾಣಿ ಮನಸಾ ಮುಂತಾದವಕ್ಕೂ ಅನುಗುಣವಾಗಿ ಅಧರ್ಮಗಳನ್ನು ಬಿಡು ಎಂದು ಸೇರಿಸಿಕೊಳ್ಳಬೇಕು ಎಂದು ಭಾವ.

2. ಸರ್ವಕರ್ಮಸಂನ್ಯಾಸಪೂರ್ವಕವಾದ ಜ್ಞಾನನಿಷ್ಠೆಯಿಂದಲೇ ಮುಕ್ತಿ ಎಂಬುದನ್ನು ಉಪಸಂಹಾರಮಾಡಿದೆ ಎಂದು ಭಾವ. ಬೃ. ಭಾ. ಅವತರಣಿಕೆ ೨-೪

3. ಅಕರ್ತ್ರಾತ್ಮಜ್ಞಾನವಾದ ಬಳಿಕ ಉಪಾಸ್ಯೋಪಾಸಕಭಾವವಿರುವದಿಲ್ಲವಾದ್ದರಿಂದ 'ಶರಣಂ ವ್ರಜ' ಎಂಬುದಕ್ಕೆ ಇದೇ ಅರ್ಥ.

4. ಧರ್ಮವನ್ನೂ ಪಾಪವೆಂದು ಕರೆಯಬಹುದು. ಛಾಂ.೮-೪.೧ನ್ನು ನೋಡಿ.

# ಗೀತಾರ್ಥವಿಷಯಕವಾಗಿ ಚರ್ಚೆ

## ವಿಚಾರದ ವಿಷಯ

(ಭಾಷ್ಯ)

೫೮೪. ಅಸ್ಮಿನ್[1] ಗೀತಾಶಾಸ್ತ್ರೇ ಪರಮನಿಃಶ್ರೇಯಸಸಾಧನಂ ನಿಶ್ಚಿತಂ ಕಿಂ ಜ್ಞಾನಂ ಕರ್ಮ ವಾ,[2] ಆಹೋಸ್ವಿತ್ ಉಭಯಮಿತಿ[3] । ಕುತಃ ಸಂಶಯಃ ?[4] "ಯಜ್ಜ್ಞಾತ್ವಾಮೃತಮಶ್ನುತೇ" (೧೩-೧೨) "ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತರಮ್" (೧೮-೫೫) ಇತ್ಯಾದೀನಿ ವಾಕ್ಯಾನಿ ಕೇವಲಾತ್ ಜ್ಞಾನಾತ್ ನಿಃಶ್ರೇಯಸಪ್ರಾಪ್ತಿಂ ದರ್ಶಯನ್ತಿ । "ಕರ್ಮಣ್ಯೇವಾಧಿಕಾರಸ್ತೇ" (೨-೪೭) "ಕುರು ಕರ್ಮೈವ" (೪-೧೫) ಇತ್ಯೇವಮಾದೀನಿ[5] ಕರ್ಮಣಾಮ್ ಅವಶ್ಯಕರ್ತವ್ಯತಾಂ ದರ್ಶಯನ್ತಿ । ಏವಂ ಜ್ಞಾನಕರ್ಮಣೋಃ ಕರ್ತವ್ಯತೋಪದೇಶಾತ್ ಸಮುಚ್ಚಿತಯೋರಪಿ ನಿಃಶ್ರೇಯಸಹೇತುತ್ವಂ ಸ್ಯಾತ್ ಇತಿ ಭವೇತ್ ಸಂಶಯಃ ಕಸ್ಯಚಿತ್[6] । ಕಿಂ ಪುನರತ್ರ ಮೀಮಾಂಸಾಫಲಮ್ ? ನನ್ವೇತದೇವ ಏಷಾಮನ್ಯತಮಸ್ಯ ಪರಮನಿಃಶ್ರೇಯಸಸಾಧನತ್ವಾವಧಾರಣಮ್ । ಅತಃ ವಿಸ್ತೀರ್ಣತರಂ[7] ಮೀಮಾಂಸ್ಯಮ್ ಏತತ್ ॥

(ಭಾಷ್ಯಾರ್ಥ)

(ಸಂಶಯ):–ಈ ಗೀತಾಶಾಸ್ತ್ರದಲ್ಲಿ[8] ಪರಮನಿಃಶ್ರೇಯಸಕ್ಕೆ ಸಾಧನವೆಂದು ನಿಶ್ಚಯವಾದದ್ದು ಜ್ಞಾನವೊ, ಅಥವಾ ಕರ್ಮವೊ, ಅಥವಾ ಈ ಎರಡೂ (ಸೇರಿದ್ದೊ)?

(ಪ್ರಶ್ನೆ) :—(ಈ) ಸಂಶಯ ಏತರಿಂದ (ಬಂತು)?

---

1. 'ಕಿಮಸ್ಮಿನ್' ಮ॥
2. 'ಕಿಂ ಕರ್ಮ' ನಿ॥
3. 'ಉಭಯಮಪೀತಿ' ಮ॥
4. 'ಸನ್ದೇಹಃ' ನಿ॥
5. 'ಕರ್ಮೈವ ತಸ್ಮಾತ್ ತ್ವಮ್' ಇತ್ಯಾದೀನಿ ಮ॥
6. ಮ॥ಮೈ॥ಗಳಲ್ಲಿಲ್ಲ
7. 'ವಿಸ್ತೀರ್ಣತಮಮ್' ನು॥
8. 'ಕಿಮಸ್ಮಿನ್....ನಿಶ್ಚಿತಮ್' ಎಂಬ ಮ॥ ಪಾಠಕ್ಕೆ "ಈ ಗೀತಾಶಾಸ್ತ್ರದಲ್ಲಿ ನಿಶ್ಚಯವಾದದ್ದು ಯಾವದು ?" ಎಂದು ಅನುವಾದ.

(ಉತ್ತರ):—"ಇದನ್ನು ಅರಿತರೆ ಅಮೃತವನ್ನು ಹೊಂದುತ್ತಾನೆ" (೧೩-೧೨) "ಆದರಿಂದ ನನ್ನನ್ನು ತತ್ತ್ವದಿಂದ ಅರಿತುಕೊಂಡು ಅನಂತರದಲ್ಲಿಯೇ ನನ್ನನ್ನು ಪ್ರವೇಶಿಸುತ್ತಾನೆ" (೧೮-೫೫) ಮುಂತಾದ ವಾಕ್ಯಗಳು ಬರಿಯ ಜ್ಞಾನದಿಂದ ನಿಃಶ್ರೇಯಸವು ದೊರೆಯುವದೆಂದು ತಿಳಿಸುತ್ತವೆ. "ನಿನಗೆ ಕರ್ಮದಲ್ಲಿಯೇ ಅಧಿಕಾರವು"(೨-೪೭), "ಕರ್ಮವನ್ನೇ ಮಾಡು" (೪-೧೫) ಎಂಬಿವೇ ಮುಂತಾದವು ಕರ್ಮವನ್ನು ಅವಶ್ಯವಾಗಿ ಮಾಡಬೇಕೆಂದು ತಿಳಿಸುತ್ತವೆ. ಹೀಗೆ ಜ್ಞಾನಕರ್ಮಗಳೆರಡನ್ನೂ, ಮಾಡತಕ್ಕದ್ದೆಂದು ಹೇಳಿರುವದರಿಂದ (ಇವೆರಡನ್ನೂ) ಸೇರಿಸಿ ಮಾಡುವದೂ ನಿಃಶ್ರೇಯಸಕ್ಕೆ ಕಾರಣವಾಗಿರಬಹುದು ಎಂದು ಯಾವನಾದರೊಬ್ಬನಿಗೆ ಸಂಶಯವುಂಟಾಗಬಹುದು.

(ಪ್ರಶ್ನೆ):—ಇನ್ನು ಈ (ವಿಷಯದಲ್ಲಿ) ವಿಚಾರಮಾಡಿದ್ದರಿಂದ(ಆಗುವ)ಫಲವು ಯಾವದು [1]?

(ಉತ್ತರ):—ಇದೇ ಅಲ್ಲವೆ, (ಪ್ರಯೋಜನವು), ಇವುಗಳಲ್ಲಿ ಇಂಥಾದ್ದೊಂದು ಪರಮನಿಃಶ್ರೇಯಸಕ್ಕೆ ಸಾಧನವು ಎಂದು ಗೊತ್ತುಪಡಿಸುವದು? ಆದ್ದರಿಂದ ಇದನ್ನು ಬಹಳ ವಿಸ್ತಾರವಾಗಿ ವಿಚಾರಮಾಡಬೇಕು.[2]

## ಸಿದ್ಧಾಂತ: ಜ್ಞಾನದಿಂದ ಮುಕ್ತಿ

(ಭಾಷ್ಯ)

೫೮೫. ಆತ್ಮಜ್ಞಾನಸ್ಯ ತು ಕೇವಲಸ್ಯ ನಿಃಶ್ರೇಯಸಹೇತುತ್ವಮ್ ಭೇದಪ್ರತ್ಯಯನಿವರ್ತಕತ್ವೇನ ಕೈವಲ್ಯಫಲಾವಸಾಯಿತ್ವಾತ್ [3] । ಕ್ರಿಯಾಕಾರಕಫಲಭೇದಬುದ್ಧಿರವಿದ್ಯಾ [4] ಆತ್ಮನಿ ನಿತ್ಯಪ್ರವೃತ್ತಾ [5] । "ಮಮ ಕರ್ಮ, ಅಹಂ [6] ಕರ್ತಾ

---

1. ಸಂದಿಗ್ಧವಾಗಿದ್ದು ನಿರ್ಣಯದಿಂದ ಪ್ರಯೋಜನವುಂಟಾಗುವಂತೆ ಯಾವದು ಇರುವದೋ ಅದನ್ನು ವಿಚಾರಮಾಡಬೇಕು. ಪ್ರಕೃತದಲ್ಲಿ ಮೋಕ್ಷದಿಂದ ಸಾಧನವು ಯಾವದೆಂಬುದು ಸಂದಿಗ್ಧವಾಗಿದೆ ಎಂದಾಯಿತು ; ಇದರ ವಿಚಾರದಿಂದ ಆಗುವ ಪ್ರಯೋಜವವೇನು?—ಎಂದು ಪ್ರಶ್ನೆ.

2. ಈ ವಿಚಾರವನ್ನು ತೈ. ಶೀಕ್ಷಾವಲ್ಲಿಯ ಉಪಸಂಹಾರಭಾಷ್ಯದಲ್ಲಿಯೂ ಬೃ.ಭಾ. ಭುಜ್ಯುಪ್ರಶ್ನೆಯ ಅವತರಣಿಕೆ. ೪-೫ರ ಉಪಸಂಹಾರ—ಇವುಗಳಲ್ಲಿಯೂ ಮಾಡಿದೆ.

3. 'ಅವಸಾನತ್ವಾತ್' ಸಿ|| ವಾ||

4. 'ಅವಿದ್ಯಯಾ' ಎಂಬ ಅಚ್ಚಿನಪಾಠವನ್ನು ಹೀಗೆ ತಿದ್ದಿಕೊಂಡಿದೆ.

5. 'ನಿತ್ಯಪ್ರತತಾ' ಮ|| ಮೈ||

6. 'ಅಸ್ಯ ಅಹಂ' ಮ||

ಅಮುಷ್ಮೈ ಫಲಾಯ ಇದಂ ಕರ್ಮ ಕರಿಷ್ಯಾಮಿ" ಇತಿ ಇಯಮ್ ಅವಿದ್ಯಾ ಅನಾದಿಕಾಲಪ್ರವೃತ್ತಾ । ಅಸ್ಯಾ ಅವಿದ್ಯಾಯಾಃ ನಿವರ್ತಕಮ್ "ಅಯಮಹಮಸ್ಮಿ ಕೇವಲಃ ಅಕರ್ತಾ ಅಕ್ರಿಯಃ ಅಫಲಃ ನ ಮತ್ತಃ ಅನ್ಯೋಽಸ್ತಿ ಕಶ್ಚಿತ್" ಇತ್ಯೇವಂ ರೂಪಮ್ ಆತ್ಮವಿಷಯಂ ಜ್ಞಾನಮ್ ಉತ್ಪದ್ಯಮಾನಮ್ । ಕರ್ಮಪ್ರವೃತ್ತಿಹೇತುಭೂತಾಯಾಃ ಭೇದಬುದ್ಧೇರ್ನಿವರ್ತಕತ್ವಾತ್ । (ತುಶಬ್ದಃ ಪಕ್ಷದ್ವಯವ್ಯಾವೃತ್ತ್ಯರ್ಥಃ[1] । ನ ಕೇವಲೇಭ್ಯಃ ಕರ್ಮಭ್ಯಃ, ನ ಚ ಜ್ಞಾನಕರ್ಮಭ್ಯಾಂ ಸಮುಚ್ಚಿತಾಭ್ಯಾಂ ನಿಃಶ್ರೇಯಸಪ್ರಾಪ್ತಿಃ-ಇತಿ ಪಕ್ಷದ್ವಯಂ ನಿವರ್ತಯತಿ[2] ।) ಅಕಾರ್ಯತ್ವಾಚ್ಚ ನಿಃಶ್ರೇಯಸಸ್ಯ ಕರ್ಮಸಾಧನತ್ವಾನುಪಪತ್ತಿಃ । ನ ಹಿ ನಿತ್ಯಂ ವಸ್ತು ಕರ್ಮಣಾ ಜ್ಞಾನೇನ ವಾ ಕ್ರಿಯತೇ ||

(ಭಾಷ್ಯಾರ್ಥ)

ಬರಿಯ ಆತ್ಮಜ್ಞಾನವೇ ಮುಕ್ತಿಗೆ ಕಾರಣವು ; ಏಕೆಂದರೆ ಅದು ಭೇದಪ್ರತ್ಯಯವನ್ನು ತೊಲಗಿಸಿ ಕೈವಲ್ಯವೆಂಬ ಫಲದಲ್ಲಿ ಕೊನೆಗಾಣುತ್ತದೆ. ಕ್ರಿಯಾಕಾರಕಫಲಭೇದಬುದ್ಧಿ ಎಂಬ ಅವಿದ್ಯೆಯು ಆತ್ಮನಲ್ಲಿ ಯಾವಾಗಲೂ ನಡೆದುಕೊಂಡು ಬಂದಿರುತ್ತದೆ. **"ನನಗೆ ಕರ್ಮವುಂಟು ; ನಾನು (ಅದಕ್ಕೆ) ಕರ್ತನು ; ಈ ಫಲಕ್ಕೋಸ್ಕರ ಕರ್ಮವನ್ನು ಮಾಡುವೆನು" ಎಂಬೀ ಅವಿದ್ಯೆಯು ಅನಾದಿಕಾಲದಿಂದ ಬಂದಿರುತ್ತದೆ.**[3] ಈ ಅವಿದ್ಯೆಯನ್ನು ತೊಲಗಿಸುವದು "(ಇಗೊ) ಈ ನಾನು ಕೇವಲನಾಗಿ ಅಕರ್ತನಾಗಿ ಅಕ್ರಿಯನಾಗಿ ಅಫಲನಾಗಿರುವೆನು ; ನನಗಿಂತ ಬೇರೆ ಯಾವನೂ ಇಲ್ಲ" ಎಂಬೀ ರೂಪದಲ್ಲಿ ಹುಟ್ಟುವ ಆತ್ಮವಿಷಯವಾದ ಜ್ಞಾನವೇ ; ಏಕೆಂದರೆ (ಆ ಜ್ಞಾನವು) ಕರ್ಮದಲ್ಲಿ ತೊಡಗುವದಕ್ಕೆ ಕಾರಣವಾದ ಭೇದಬುದ್ಧಿಯನ್ನು ತೊಲಗಿಸುತ್ತದೆ. [(ಆತ್ಮಜ್ಞಾನಸ್ಯ ತು ಎಂಬ ಭಾಷ್ಯದಲ್ಲಿರುವ) ತುಶಬ್ದವು ಮಿಕ್ಕೆರಡು ಪಕ್ಷಗಳನ್ನೂ ತಳ್ಳಿಹಾಕುವದಕ್ಕೆ (ಪ್ರಯುಕ್ತವಾಗಿರುತ್ತದೆ). ಬರಿಯ ಕರ್ಮಗಳಿಂದಲೂ ಮೋಕ್ಷಪ್ರಾಪ್ತಿಯಿಲ್ಲ, ಜ್ಞಾನಕರ್ಮಗಳ ಸಮುಚ್ಚಯದಿಂದಲೂ

---

1. 'ಪಕ್ಷವ್ಯಾವೃತ್ತ್ಯರ್ಥಂ' ಮು|| ಮೈ|| ವಾ||

2. ಕಂಸದಲ್ಲಿಟ್ಟಿರುವ ವಾಕ್ಯವು ಯಾವದೋ ವ್ಯಾಖ್ಯಾನದಿಂದ ಬಂದು ಇಲ್ಲಿಗೆ ಸೇರಿರಬೇಕೆಂದು ನಮಗೆ ತೋರುತ್ತದೆ. ಆ|| ವ್ಯಾಖ್ಯಾನದಲ್ಲಿ ಈ ವಾಕ್ಯಕ್ಕೂ ವಿವರಣೆಯಿರುವದರಿಂದ ಅವರ ಕಾಲಕ್ಕೂ ಈ ಭಾಷ್ಯಪಾಠವಿತ್ತೆಂದು ಹೇಳಬೇಕಾಗಿದೆ,

3. ಕ್ರಿಯಾಕಾರಕಫಲಭೇದಬುದ್ಧಿಯೇ ಅವಿದ್ಯೆ ಎಂದು ಈ ವಿವರಣವಾಕ್ಯದಲ್ಲಿರುವದರಿಂದ ಇದರ ಹಿಂದಿನ ಸಂಗ್ರಹವಾಕ್ಯದಲ್ಲಿಯೂ "ಕ್ರಿಯಾ......ಬುದ್ಧಿರವಿದ್ಯಾ" ಎಂಬ ಮು|| ಮೈ|| ಪಾಠವೇ ಹೊಂದುತ್ತದೆ.

ಇಲ್ಲ–ಎಂದು (ಈ) ಎರಡು ಪಕ್ಷಗಳನ್ನೂ ತಳ್ಳಿಹಾಕಿರುತ್ತದೆ.] ಮೋಕ್ಷವು ಕಾರ್ಯವಲ್ಲವಾದ್ದರಿಂದಲೂ[1] (ಅದಕ್ಕೆ) ಕರ್ಮವು ಸಾಧನವೆಂಬುದು ಹೊಂದುವದಿಲ್ಲ. ನಿತ್ಯವಾದ ವಸ್ತು ಕರ್ಮದಿಂದಲಾಗಲಿ ಜ್ಞಾನದಿಂದಲಾಗಲಿ[2] ಉಂಟಾಗಲಾರದಷ್ಟೆ.

(ಭಾಷ್ಯ)

೫೮೬. ಕೇವಲಜ್ಞಾನಮಪಿ ಅನರ್ಥಕಂ ತರ್ಹಿ । ನ । ಅವಿದ್ಯಾನಿವರ್ತಕತ್ವೇ ಸತಿ ದೃಷ್ಟಕೈವಲ್ಯಫಲಾವಸಾನತ್ವಾತ್ । ಅವಿದ್ಯಾತಮೋನಿವರ್ತಕಸ್ಯ ಜ್ಞಾನಸ್ಯ ದೃಷ್ಟಂ ಕೈವಲ್ಯಫಲಾವಸಾನತ್ವಮ್ । ರಜ್ಜ್ವಾದಿವಿಷಯೇ ಸರ್ಪಾದ್ಯಜ್ಞಾನತಮೋನಿವರ್ತಕಪ್ರದೀಪಪ್ರಕಾಶಫಲವತ್[3] । ವಿನಿವೃತ್ತಸರ್ಪಾದಿವಿಕಲ್ಪ[4] ರಜ್ಜುಕೈವಲ್ಯಾವಸಾನಂ ಹಿ ಪ್ರಕಾಶಫಲಮ್ । ತಥಾ ಜ್ಞಾನಮ್[5] ।ದೃಷ್ಟಾರ್ಥಾನಾಂ ಚ ಛಿದಿಕ್ರಿಯಾಗ್ನಿಮನ್ಥನಾದೀನಾಂ ವ್ಯಾಪೃತಕರ್ತ್ರಾದಿಕಾರಕಾಣಾಂ ದ್ವೈಧೀಭಾವಾಗ್ನಿದರ್ಶನಾದಿಫಲಾತ್ ಅನ್ಯಫಲೇ ಕರ್ಮಾನ್ತರೇ[6] ವ್ಯಾಪಾರಾನುಪಪತ್ತಿರ್ಯಥಾ ತಥಾ ದೃಷ್ಟಾರ್ಥಾಯಾಂ ಜ್ಞಾನನಿಷ್ಠಾಕ್ರಿಯಾಯಾಂ ವ್ಯಾಪೃತಸ್ಯ ಜ್ಞಾತ್ರಾದಿಕಾರಕಸ್ಯ ಆತ್ಮಕೈವಲ್ಯಫಲಾತ್ ಅನ್ಯಫಲೇ ಕರ್ಮಾನ್ತರೇ ಪ್ರವೃತ್ತಿರನುಪಪನ್ನಾ ಇತಿ ನ ಜ್ಞಾನನಿಷ್ಠಾ ಕರ್ಮಸಹಿತಾ ಉಪಪದ್ಯತೇ । ಭುಜ್ಯಗ್ನಿಹೋತ್ರಾದಿಕ್ರಿಯಾವತ್ ಇತಿ ಸ್ಯಾತ್ ಚೇತ್ । ನ । ಕೈವಲ್ಯಫಲೇ ಜ್ಞಾನೇ ಕ್ರಿಯಾಫಲಾರ್ಥಿತ್ವಾನುಪಪತ್ತೇಃ । ಕೈವಲ್ಯಫಲೇ ಹಿ ಜ್ಞಾನೇ ಪ್ರಾಪ್ತೇ ಸರ್ವತಃ ಸಮ್ಪ್ಲುತೋದಕೇ ಫಲೇ ಕೂಪತಡಾಗಾದಿ[7] ಫಲಾರ್ಥಿತ್ವಾಭಾವವತ್, ಫಲಾನ್ತರೇ ತತ್ಸಾಧನಭೂತಾಯಾಂ ವಾ ಕ್ರಿಯಾಯಾಮ್ ಅರ್ಥಿತ್ವಾನುಪಪತ್ತಿಃ। ನ ಹಿ ರಾಜ್ಯಪ್ರಾಪ್ತಿಫಲೇ ಕರ್ಮಣಿ ವ್ಯಾಪೃತಸ್ಯ ಕ್ಷೇತ್ರಮಾತ್ರಪ್ರಾಪ್ತಿಫಲೇ[8] ವ್ಯಾಪಾರಃ ಉಪಪದ್ಯತೇ[9], ತದ್ವಿಷಯಂ ವಾ ಅರ್ಥಿ

---

1. ಮೋಕ್ಷವು ಕಾರ್ಯವಾದರೆ ಅನಿತ್ಯವಾಗುತ್ತದೆ ಎಂಬ ಯುಕ್ತಿಯು ತೈ. ಭಾ. ಭಾ. ೭೩ ; ಬೃ. ಭಾ. ೩-೩-೧೩ ಇವುಗಳಲ್ಲಿಯೂ ಉಪಯೋಗಿಸಿದೆ.
2. ಜ್ಞಾನವು ಹೊಸದಾಗಿ ಮುಕ್ತಿಯನ್ನುಂಟುಮಾಡುವದಿಲ್ಲ ; ಇದ್ದದ್ದನ್ನೇ ತಿಳಿಸುತ್ತದೆ. ಇದನ್ನೇ ಮುಂದಿನ ಆಕ್ಷೇಪಸಮಾಧಾನಗಳಿಂದ ಸ್ಪಷ್ಟಗೊಳಿಸಲಾಗುತ್ತದೆ.
3. ' ಪ್ರಕಾಶವತ್ ' ಮ॥ಮೈ॥
4. ' ಸರ್ಪವಿಕಲ್ಪ' ಮ॥
5. ಮ॥ ಮೈ॥ ಗಳಲ್ಲಿಲ್ಲ.
6. ವಾ ಶಬ್ದವು ಬೇಕಿಲ್ಲ.
7. ಇದರ ಮುಂದಿರುವ ' ಕ್ರಿಯಾ ' ಬೇಕಿಲ್ಲ.
8. ' ಕ್ಷೇತ್ರಪ್ರಾಪ್ತಿಫಲೇ' ಎ॥
9. 'ವ್ಯಾಪಾರೋಪಪತ್ತಿಃ' ಎಂಬ ಪ॥ಗ॥ ಆ॥ ಪಾಠಕ್ಕಿಂತ ಇದು ಮೇಲು.

ತ್ವಮ್ । ತಸ್ಮಾತ್ ನ ಕರ್ಮಣೋಽಸ್ತಿ ನಿಃಶ್ರೇಯಸಸಾಧನತ್ವಮ್ । ನ ಚ ಜ್ಞಾನ ಕರ್ಮಣೋಃ ಸಮುಚ್ಚಿತಯೋಃ[1] । ನಾಪಿ ಜ್ಞಾನಸ್ಯ ಕೈವಲ್ಯಫಲಸ್ಯ ಕರ್ಮಸಹಾಯಾಪೇಕ್ಷಾ । ಅವಿದ್ಯಾನಿವರ್ತಕತ್ವೇನ ವಿರೋಧಾತ್ । ನ ಹಿ ತಮಸ್ತಮಸೋ ನಿವರ್ತಕಮ್[2] । ಅತಃ ಕೇವಲಮೇವ ಜ್ಞಾನಂ ನಿಃಶ್ರೇಯಸಸಾಧನಮ್ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ):—ಹಾಗಾದರೆ ಬರಿಯ ಜ್ಞಾನವೂ ವ್ಯರ್ಥವೆಂದಾಯಿತು !

(ಪರಿಹಾರ):—ಹಾಗಲ್ಲ, ಏಕೆಂದರೆ ಅದು ಅವಿದ್ಯೆಯನ್ನು ತೊಲಗಿಸಲಾಗಿ ದೃಷ್ಟವಾದ ಕೈವಲ್ಯವೆಂಬ ಫಲದಲ್ಲಿ ಕೊನೆಗಾಣುತ್ತದೆ.[3] ಇದರ ವಿವರ): **ಅವಿದ್ಯೆಯೆಂಬ ಕತ್ತಲೆಯನ್ನು ತೊಲಗಿಸುವ ಜ್ಞಾನವು ಕೈವಲ್ಯವೆಂಬ ಫಲದಲ್ಲಿ ಕೊನೆಗಾಣುವದೆಂಬುದು (ಅನುಭವದಲ್ಲಿ) ಕಂಡುಬರುತ್ತದೆ.**[4] ಹಗ್ಗವೇ ಮುಂತಾದ ಅಜ್ಞಾನದ ಕತ್ತಲೆಯ (ಕಾರ್ಯ) ವನ್ನು ತೊಲಗಿಸುವ ದೊಡ್ಡದೀಪವೆಂದಾಗುವ ಪ್ರಕಾಶವೆಂಬ ಫಲದಂತೆ(ಯೇ ಇದು. ಅಲ್ಲಿ) ಪ್ರಕಾಶವೆಂಬ ಫಲವು ಹಾವೇ ಮುಂತಾದ ವಿಕಲ್ಪಗಳನ್ನು ತೊಲಗಿಸಿ ಹಗ್ಗವೆಂಬುದೊಂದೇ ಉಳಿಯುವದರಲ್ಲಿ ಕೊನೆಗಾಣುವದಲ್ಲವೆ? ಜ್ಞಾನವೂ ಇದರಂತೆಯೇ[5] ದೃಷ್ಟವಾದ ಫಲವುಳ್ಳ ಕಡಿಯುವದೆಂಬ ಕ್ರಿಯೆ, ಬೆಂಕಿಯನ್ನು ಕಡೆಯುವದು–ಮುಂತಾದವುಗಳಲ್ಲಿ ವ್ಯಾಪೃತವಾಗಿರುವ ಕರ್ತೃವೇ ಮುಂತಾದ ಕಾರಕಗಳಿಗೆ ಎರಡು ಪಾಲಾಗುವದು, ಬೆಂಕಿಯನ್ನು ಕಾಣುವದು–ಮುಂತಾದ ಫಲಕ್ಕಿಂತ ಬೇರೆಯಾದ ಫಲವುಳ್ಳ ಮತ್ತೊಂದು

---

1. " ತಸ್ಮಾತ್ ನ ನಿಃಶ್ರೇಯಸಸಾಧನಂ ಕರ್ಮ । ನ ಚ ಜ್ಞಾನಕರ್ಮಣೋಃ ಸಮುಚ್ಚಯಃ " ಮು||ಮೈ||

2. "ತಮೋಽನ್ತರಂ ನಿವರ್ತಯತಿ । ಏವಂ ನ ಕರ್ಮ ಅಜ್ಞಾನನಿವರ್ತಕಮ್" ಮು||

3. ಜ್ಞಾನವು ಅಜ್ಞಾನವನ್ನು ತೊಲಗಿಸುವದೆಂಬುದು ಕಂಡಿದೆ; ಅದರಿಂದ ಆತ್ಮಸ್ವರೂಪದಲ್ಲಿ ನಿಲ್ಲುವದೆಂಬ ಫಲವಾಗುವದೂ ಕಂಡಿದೆ. ಹೀಗಿರುವಲ್ಲಿ ಜ್ಞಾನವೂ ವ್ಯರ್ಥವೆಂಬ ಶಂಕೆಯು ಹೊಂದುವದಿಲ್ಲ ಎಂದು ಭಾವ. ಜ್ಞಾನವು ಮುಕ್ತಿಯನ್ನು ಹೊಸದಾಗಿ ಉಂಟುಮಾಡುವದಿಲ್ಲವೆಂದು ಹೇಳಿದ್ದರಿಂದ ಅದು ವ್ಯರ್ಥವಾಯಿತೆಂಬ ಶಂಕೆಯು ಹುಟ್ಟಿತ್ತು. ಆಶಂಕೆಗೆ ಅಜ್ಞಾನವನ್ನು ಕಳೆಯುವದೊಂದೇ ಅದರ ಕೆಲಸವೆಂಬ ಸಮಾಧಾನವನ್ನು ಹೇಳಿದೆ.

4. ಜ್ಞಾನವು ಅವಿದ್ಯೆಯನ್ನು ತೊಲಗಿಸುವದೆಂಬುದೂ ಉತ್ಪತ್ತಿಮಾತ್ರದಿಂದಲೇ; ಅದು ಯಾವದಾದರೊಂದು ಕೆಲಸವನ್ನು ಮಾಡಿ ತೊಲಗಿಸಬೇಕಾಗಿಲ್ಲ. ಬೃ.ಭಾ. ೧-೪-೭ರಲ್ಲಿ " ಯದೈವ ಆತ್ಮಪ್ರತಿಪಾದಕವಾಕ್ಯಶ್ರವಣಾತ್ ಆತ್ಮವಿಷಯಂ ವಿಜ್ಞಾನಮ್ ಉತ್ಪದ್ಯತೇ.." ಎಂಬ ವಾಕ್ಯವನ್ನು ನೋಡಿ.

5. ಅದ್ದರಿಂದ ವ್ಯರ್ಥವಲ್ಲ.

ಕರ್ಮದಲ್ಲಿ ವ್ಯಾಪಾರವಿರುವದೆಂಬುದು ಹೇಗೆ ಹೊಂದುವದಿಲ್ಲವೋ ಆದರಂತೆ ದೃಷ್ಟಾರ್ಥವಾದ ಜ್ಞಾನನಿಷ್ಠೆ ಎಂಬ ಕ್ರಿಯೆಯಲ್ಲಿ ವ್ಯಾಪೃತವಾಗಿರುವ ಜ್ಞಾತೃವೇ ಮುಂತಾದ ಕಾರಕವು ಆತ್ಮಕೈವಲ್ಯವೆಂಬ ಫಲಕ್ಕಿಂತ ಬೇರೆಯಾದ ಫಲವುಳ್ಳ ಮತ್ತೊಂದು ಕರ್ಮದಲ್ಲಿ ತೊಡಗುವದೆಂಬುದು ಹೊಂದುವದಿಲ್ಲ.[1] ಆದ್ದರಿಂದ ಜ್ಞಾನನಿಷ್ಠೆಯು ಕರ್ಮಸಹಿತವಾಗಿರುವದೆಂಬುದು ಯುಕ್ತವಲ್ಲ.

(ಆಕ್ಷೇಪ):—ಊಟಮಾಡುವ ಕ್ರಿಯೆ, ಅಗ್ನಿಹೋತ್ರವೇ ಮುಂತಾದ ಕ್ರಿಯೆ–ಇವುಗಳಂತೆ (ಮತ್ತೊಂದು ಕರ್ಮದಲ್ಲಿಯೂ ತೊಡಗ)ಬಹುದಲ್ಲ ![2]

(ಪರಿಹಾರ):—ಹಾಗಲ್ಲ. ಏಕೆಂದರೆ ಕೈವಲ್ಯವೆಂಬ ಫಲವುಳ್ಳ ಜ್ಞಾನ(ವಿರುವಲ್ಲಿ) ಕರ್ಮದ ಫಲವನ್ನು ಬಯಸುವದೆಂಬುದು ಹೊಂದುವದಿಲ್ಲ. **ಕೈವಲ್ಯಫಲವನ್ನು (ಕೊಡುವ) ಜ್ಞಾನವು ದೊರಕಿದ ಮೇಲೆ–ಎಲ್ಲೆಲ್ಲಿಯೂ ನೀರಿರುವ ದೊಡ್ಡ ಜಲಾಶಯದ ಫಲವುಂಟಾದಾಗ ಕೆರೆ, ಕುಂಟೆ, ಮುಂತಾದವುಗಳಿಂದುಂಟಾಗುವ ಫಲವನ್ನು ಬಯಸದೆ ಇರುವಂತೆ[3]–ಮತ್ತೊಂದು ಫಲವನ್ನಾಗಲಿ ಅದಕ್ಕೆ ಸಾಧನವಾದ ಕ್ರಿಯೆಯನ್ನಾಗಲಿ ಬಯಸುವನೆಂಬುದು ಹೊಂದುವದಿಲ್ಲ.[4]** ರಾಜ್ಯವನ್ನು ಪಡೆಯುವ ಫಲವುಳ್ಳ ಕರ್ಮದಲ್ಲಿ ತೊಡಗಿರುವಾತನು ಬರಿಯದೊಂದು ಹೊಲವನ್ನು ಪಡೆಯುವ ಕ್ರಿಯೆಯಲ್ಲಿ ತೊಡಗಿರುವದೆಂಬುದಾಗಲಿ ಅದರ ವಿಷಯವಾದ ಬಯಕೆಯುಳ್ಳನಾಗಿರುವನೆಂಬುದಾಗಲಿ, ಹೊಂದುವ ಹಾಗಿಲ್ಲವಷ್ಟೆ. ಆದ್ದರಿಂದ ಕರ್ಮವು ಮುಕ್ತಿಗೆ ಸಾಧನವೆಂಬುದು ಇಲ್ಲ. ಜ್ಞಾನಕರ್ಮಗಳು

---

1. ಜ್ಞಾನವು ತನ್ನ ಫಲವನ್ನು ಕೊಟ್ಟರೂ ಆದರ ಜೊತೆಗೆ ಕರ್ಮವಿದ್ದ ಹೊರತು ಮುಕ್ತಿಯಾಗಲಾರದು_ಎಂದು ಶಂಕೆಗೆ ಅಭಿಪ್ರಾಯವನ್ನು ಕಲ್ಪಿಸಿ ಈ ಪರಿಹಾರವನ್ನು ಹೇಳಿದೆ. ದೃಷ್ಟಫಲವುಳ್ಳ ಕ್ರಿಯೆಯು ಫಲವಾಗುತ್ತಲೂ ನಿಂತುಹೋಗುತ್ತದೆ ; ಆ ಫಲಕ್ಕಾಗಿಯೇ ಕ್ರಿಯೆಯನ್ನು ಮಾಡುತ್ತಾರಾದ್ದರಿಂದ ಮತ್ತೊಂದು ಕ್ರಿಯೆಯು ಬೇಕೆಂಬ ಇಚ್ಛೆಯುಂಟಾಗಲು ಕಾರಣವಿಲ್ಲ ಎಂದು ಭಾವ.

2. ತೃಪ್ತಿಫಲವುಳ್ಳ ಊಟದಲ್ಲಿ ತೊಡಗಿರುವವನು ಸ್ವರ್ಗಾಧಿಫಲವುಳ್ಳ ಅಗ್ನಿಹೋತ್ರದಲ್ಲಿಯೂ ತೊಡಗಿರಬಹುದು. ಹೀಗೆಯೇ ಜ್ಞಾನನಿಷ್ಠೆಯಲ್ಲಿ ತೊಡಗಿರುವವನು ಕರ್ಮದಲ್ಲಿಯೂ ತೊಡಗಿರಬಹುದಲ್ಲ !_ಎಂದು ಶಂಕೆ.

3. ೨-೪೬ರ ಭಾಷ್ಯವನ್ನು ನೋಡಿ.

4. ಮುಮುಕ್ಷುವಾದವನಿಗೆ ಜ್ಞಾನಪ್ರಾಪ್ತಿಗೆ ಬೇಕಾದ ಅಭ್ಯಾಸವೊಂದಲ್ಲದೆ ಮತ್ತೊಂದು ಬೇಕಾಗುವದಿಲ್ಲ ; ಏಕೆಂದರೆ ಜ್ಞಾನಫಲದಲ್ಲಿ ಮಿಕ್ಕದ್ದೆಲ್ಲವೂ ಅಡಕವಾಗಿರುತ್ತದೆ ಎಂದು ಭಾವ.

ಸೇರಿ (ಮುಕ್ತಿಗೆ ಸಾಧನವೆಂಬುದೂ) ಇಲ್ಲ. **ಜ್ಞಾನಕ್ಕೆ ಕೈವಲ್ಯವೆಂಬ ಫಲವನ್ನು ಕೊಡುವದಕ್ಕೆ ಕರ್ಮದ ಸಹಾಯವು ಬೇಕಾಗಿಯೂ ಇರುವದಿಲ್ಲ; ಏಕೆಂದರೆ (ಅದು) ಅವಿದ್ಯೆಯನ್ನು ತೊಲಗಿಸುವದಾದ್ದರಿಂದ (ಅವೆರಡಕ್ಕೂ) ವಿರೋಧವಿರುತ್ತದೆ.**[1] ಕತ್ತಲೆಯು ಕತ್ತಲೆಯನ್ನು ತೊಲಗಿಸಲಾರದಷ್ಟೆ[2]. ಆದ್ದರಿಂದ ಬರಿಯ ಜ್ಞಾನವೇ ಮುಕ್ತಿಗೆ ಸಾಧನವು.

## ಪೂರ್ವಪಕ್ಷ: ಕರ್ಮಮಾತ್ರದಿಂದ ಮೋಕ್ಷ

(ಭಾಷ್ಯ)

೫೮೭. ನ । ನಿತ್ಯಾಕರಣೇ ಪ್ರತ್ಯವಾಯಪ್ರಾಪ್ತೇಃ । ಕೈವಲ್ಯಸ್ಯ ಚ ನಿತ್ಯತ್ವಾತ್ । ಯತ್ ತಾವತ್ ಕೇವಲಜ್ಞಾನಾತ್ ಕೈವಲ್ಯಪ್ರಾಪ್ತಿಃ ಇತಿ । ಏತತ್ ಅಸತ್[3] । ಯತಃ ನಿತ್ಯಾನಾಂ ಕರ್ಮಣಾಂ ಶ್ರುತ್ಯುಕ್ತಾನಾಮ್ ಅಕರಣೇ ಪ್ರತ್ಯವಾಯಃ ನರಕಾದಿಪ್ರಾಪ್ತಿಲಕ್ಷಣಃ ಸ್ಯಾತ್ । ನನು ಏವಂ ತರ್ಹಿ ಕರ್ಮಭ್ಯೋ ಮೋಕ್ಷೋ ನಾಸ್ತಿ ಇತಿ ಅನಿರ್ಮೋಕ್ಷ ಏವ । ನೈಷ ದೋಷಃ । ನಿತ್ಯತ್ವಾತ್ ಮೋಕ್ಷಸ್ಯ । ನಿತ್ಯಾನಾಂ ಕರ್ಮಣಾಮ್ ಅನುಷ್ಠಾನಾತ್ ಪ್ರತ್ಯವಾಯಸ್ಯ ಅಪ್ರಾಪ್ತಿಃ । ಪ್ರತಿಷಿದ್ಧಸ್ಯ ಚ ಅಕರಣಾತ್ ಅನಿಷ್ಟಶರೀರಾನುಪಪತ್ತಿಃ । ಕಾಮ್ಯಾನಾಂ ಚ ವರ್ಜನಾತ್ ಇಷ್ಟಶರೀರಾನುಪಪತ್ತಿಃ । ವರ್ತಮಾನಶರೀರಾರಮ್ಭಕಸ್ಯ ಚ ಕರ್ಮಣಃ ಫಲೋಪಭೋಗಕ್ಷಯೇ ಪತಿತೇ ಅಸ್ಮಿನ್ ಶರೀರೇ ದೇಹಾನ್ತರೋತ್ಪತ್ತೌ[4] ಚ ಕಾರಣಾಭಾವಾತ್ ಆತ್ಮನಃ, ರಾಗಾದೀನಾಂ ಚ ಅಕರಣಾತ್[5] ಸ್ವರೂಪಾವಸ್ಥಾನಮ್ ಇತಿ ಅಯತ್ನಸಿದ್ಧಂ ಕೈವಲ್ಯಮಿತಿ[6] ॥

(ಭಾಷ್ಯಾರ್ಥ)

(ಪೂರ್ವಪಕ್ಷಿ):—ಹಾಗಲ್ಲ. ಏಕೆಂದರೆ ನಿತ್ಯ(ಕರ್ಮವನ್ನು) ಮಾಡದಿದ್ದರೆ

---

1. ಜ್ಞಾನವು ಅವಿದ್ಯೆಯನ್ನು ತೊಲಗಿಸತಕ್ಕದ್ದು, ಕರ್ಮವು ಅವಿದ್ಯೆಯನ್ನೇ ಅವಲಂಬಿಸಿರತಕ್ಕದ್ದು. ಆದ್ದರಿಂದ ಅವೆರಡಕ್ಕೂ ವಿರೋಧ. ೨-೨೧ರ ಭಾ. ಭಾ. ೨೫ನ್ನು ನೋಡಿ.

2. ಕರ್ಮವೂ ಅವಿದ್ಯೆಯನ್ನು ತೊಲಗಿಸುವದೆಂದು ಒಪ್ಪಿದರೆ ವಿರೋಧವಿರುವದಿಲ್ಲವಲ್ಲ !—ಎಂಬ ಶಂಕೆಗೆ ಪರಿಹಾರವಿದು. ಕರ್ಮವು ಅವಿದ್ಯೆಯ ಕಾರ್ಯವು; ಅದು ಅವಿದ್ಯೆಯನ್ನು ತೊಲಗಿಸುವದು ಅಸಂಭವ ಎಂದು ಭಾವ.

3. "ಇತ್ಯೇತತ್ । ತತ್ ಅಸತ್'' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿದೆ.

4. " ಶರೀರೇ ಶರೀರಾನ್ತರೋತ್ಪತ್ತೌ ' ನಿ॥; ' ದೇಹೇ ದೇಹಾನ್ತರೋತ್ಪತ್ತೌ ' ಮು॥

5. ' ಅಕರಣೇ' ಮು॥ಮೈ॥ವಾ॥

6. " ಸ್ವರೂಪಾವಸ್ಥಾನಮೇವ ಕೈವಲ್ಯಮಿತಿ ಅಯತ್ನಸಿದ್ಧಂ ಕೈವಲ್ಯಮ್" ನಿ॥ ಅ॥ "ಸ್ವರೂಪಾವಸ್ಥಾನಮ್ ಅಯತ್ನಸಿದ್ಧಂ ಕೈವಲ್ಯಮ್'' ಮು॥ಮೈ॥ ವಾ॥—ಇವನ್ನು ಹೀಗೆ ತಿದ್ದಿದೆ.

ಪ್ರತ್ಯವಾಯವು ಬರುತ್ತದೆ, ಮತ್ತು ಕೈವಲ್ಯವು ನಿತ್ಯವಾಗಿರುತ್ತದೆ.

(ಇದರ ವಿವರವು): ಮೊದಲನೆಯದಾಗಿ ಬರಿಯ ಜ್ಞಾನದಿಂದಲೇ ಮುಕ್ತಿಯಾಗುವದೆಂದು (ಹೇಳಿದಿ)ರಲ್ಲ, ಇದು ಸರಿಯಲ್ಲ. ಏಕೆಂದರೆ ಶ್ರುತಿಯಲ್ಲಿ ಹೇಳಿರುವ ನಿತ್ಯಕರ್ಮಗಳನ್ನು ಮಾಡದೆ ಇದ್ದರೆ ನರಕವೇ ಮುಂತಾದದ್ದನ್ನು ಪಡೆಯುವದೆಂಬ ಪ್ರತ್ಯವಾಯವುಂಟಾಗುತ್ತದೆ.[1]

(ಸಿದ್ಧಾಂತಿ):—ಹೀಗಾದರೆ ಕರ್ಮಗಳಿಂದ ಮೋಕ್ಷ (ವಾಗುವ)ದಿಲ್ಲವಾಗಿ ಮೋಕ್ಷವು (ಆಗುವದೇ) ಇಲ್ಲವೆಂದಾಯಿತಲ್ಲ[2] !

(ಪೂರ್ವಪಕ್ಷಿ):—ಈ ದೋಷವು (ನಮ್ಮ ಪಕ್ಷದಲ್ಲಿಲ್ಲ). ಏಕೆಂದರೆ ಮೋಕ್ಷವು ನಿತ್ಯವಾಗಿರುತ್ತದೆ.[3] ನಿತ್ಯಕರ್ಮಗಳನ್ನು ಮಾಡುವದರಿಂದ ಪ್ರತ್ಯವಾಯವು ಒದಗುವದಿಲ್ಲ. ಪ್ರತಿಷಿದ್ಧ (ಕರ್ಮವನ್ನು) ಮಾಡದೆ ಇರುವದರಿಂದ ಬೇಡದ ಶರೀರವು (ಉಂಟಾಗುವ) ಹಾಗಿಲ್ಲ, ಮತ್ತು ಕಾಮ್ಯ(ಕರ್ಮ)ಗಳನ್ನು ಬಿಡುವದರಿಂದ ಬೇಕಾದ ಶರೀರವು (ಉಂಟಾಗುವ) ಹಾಗಿಲ್ಲ. (ಈಗ) ಇರುವ ಶರೀರವನ್ನುಂಟುಮಾಡಿರುವ ಕರ್ಮದ ಫಲವನ್ನು ಅನುಭವಿಸು(ವದರಿಂದ ಅದು) ಸವೆದರೆ ಈ ಶರೀರವು ಬಿದ್ದ ಬಳಿಕ ಆತ್ಮನಿಗೆ ಮತ್ತೊಂದು ಶರೀರವುಂಟಾಗಲು (ಯಾವ) ಕಾರಣವೂ ಇಲ್ಲದ್ದರಿಂದ ರಾಗವೇ ಮುಂತಾದವುಗಳನ್ನು ಮಾಡದೆ ಇರುವದರಿಂದ ತನ್ನ ರೂಪದಲ್ಲಿಯೇ ನಿಂತು ಬಿಡುವದೆಂಬ ಕೈವಲ್ಯವು (ಮತ್ತೆ ಯಾವ) ಪ್ರಯತ್ನವೂ ಇಲ್ಲದೆ ಸಿದ್ಧವಾಗುತ್ತದೆ.

(ಭಾಷ್ಯ)

೫೮೮. ಅತಿಕ್ರಾನ್ತಾನೇಕಜನ್ಮಾನ್ತರಕೃತಸ್ಯ ಸ್ವರ್ಗನರಕಾದಿಪ್ರಾಪ್ತಿಫಲಸ್ಯ

---

1. ನಿತ್ಯಕರ್ಮವನ್ನು ಮಾಡದೆ ಇದ್ದರೆ ಪ್ರತ್ಯವಾಯವಾಗಲಾರದೆಂದು ಹಿಂದೆ ೩-೧ರ ಭಾ. ಭಾ. ೧೪೩ ರಲ್ಲಿ ತೋರಿಸಿದೆಯಾದರೂ ಅದನ್ನು ಹೇಳಿಲ್ಲವೆಂದಿಟ್ಟುಕೊಂಡೇ ಈ ಪೂರ್ವಪಕ್ಷವು ಹೊರಟಿದೆ.

2. ಮೋಕ್ಷವು ಕರ್ಮದಿಂದ ಆಗುವ ಕಾರ್ಯವಲ್ಲ. ಜ್ಞಾನದಿಂದಲೂ ಅದು ದೊರಕದಿದ್ದರೆ ಅದು ಹೇಗೆ ಸಿದ್ಧಿಸಬೇಕು ?—ಎಂದು ಪ್ರಶ್ನೆ.

3. ಮೋಕ್ಷವು ನಿತ್ಯವಾಗಿದೆಯಾದರೂ ಅದಕ್ಕೆ ಇರುವ ಪ್ರತಿಬಂಧವನ್ನು ತೊಲಗಿಸುವದು ಅವಶ್ಯ—ಎಂದು ಪೂರ್ವಪಕ್ಷಿಯ ಭಾವ.

4. ತೈ. ಭಾ. ಭಾ. ೪, ಸೂ. ಭಾ. ೪-೬-೧೦ ರಲ್ಲಿಯೂ ಈ ಪೂರ್ವಪಕ್ಷವನ್ನು ಖಂಡಿಸಿದೆ. ಇಲ್ಲಿ ಕೆಲವು ಹೊಸ ಯುಕ್ತಿಗಳಿಂದ ಪೂರ್ವಪಕ್ಷವನ್ನು ಬಲಪಡಿಸಿ ಖಂಡಿಸಿರುತ್ತದೆ.

ಅನಾರಬ್ಧಕಾರ್ಯಸ್ಯ ಉಪಭೋಗಾನುಪಪತ್ತೇಃ ಕ್ಷಯಾಭಾವಃ ಇತಿ ಚೇತ್। ನ। ನಿತ್ಯಕರ್ಮಾನುಷ್ಠಾನಾಯಾಸದುಃಖೋಪಭೋಗಸ್ಯ ತತ್ಫಲೋಪಭೋಗತ್ವೋಪಪತ್ತೇಃ ಪ್ರಾಯಶ್ಚಿತ್ತವದ್ ವಾಪೂರ್ವೋಪಾತ್ತ[1]ದುರಿತಕ್ಷಯಾರ್ಥತ್ವಾತ್ ನಿತ್ಯಕರ್ಮಣಾಮ್ । ಆರಬ್ಧಾನಾಂ ಚ ಕರ್ಮಣಾಂ ಉಪಭೋಗೇನೈವ[2] ಕ್ಷೀಣತ್ವಾತ್ ಅಪೂರ್ವಾಣಾಂ ಚ ಕರ್ಮಣಾಮ್ ಅನಾರಮ್ಭೇ ಅಯತ್ನಸಿದ್ಧಂ[3] ಕೈವಲ್ಯಮ್ ಇತಿ॥

(ಭಾಷ್ಯಾರ್ಥ)

(ಆಕ್ಷೇಪ):—ಕಳೆದುಹೋಗಿರುವ ಬೇರೆಯ ಅನೇಕ ಜನ್ಮಗಳಲ್ಲಿ ಮಾಡಿರುವ ಸ್ವರ್ಗ, ನರಕ ಮುಂತಾದವುಗಳನ್ನು ಪಡೆಯುವದೆಂಬ ಫಲವುಳ್ಳ, ಇನ್ನೂ (ತನ್ನ) ಕಾರ್ಯವನ್ನುಂಟುಮಾಡದೆ ಇರುವ (ಕರ್ಮವನ್ನು) ಉಪಭೋಗಿಸುವದು ಆಗಲಾರದಾದ್ದರಿಂದ (ಅದು) ನಾಶವಾಗಲಾರದಲ್ಲ[4]!

(ಪರಿಹಾರ):—ಹಾಗಲ್ಲ. ಏಕೆಂದರೆ ನಿತ್ಯಕರ್ಮವನ್ನು ಮಾಡುವ ಆಯಾಸ(ದಿಂದಾಗುವ) ದುಃಖವನ್ನು ಅನುಭವಿಸುವದೇ ಆ (ಅನಾರಬ್ಧಕಾರ್ಯ) ಕರ್ಮದ ಫಲವನ್ನು ಉಪಭೋಗಿಸುವದು (ಎನ್ನಬಹುದಾಗಿದೆ). ಅಥವಾ ನಿತ್ಯಕರ್ಮಗಳು ಪ್ರಾಯಶ್ಚಿತ್ತ(ಕರ್ಮಗಳಂತೆ) ಹಿಂದೆ ಕೂಡಿಹಾಕಿರುವ ಪಾಪಗಳನ್ನು ಸವೆಯಿಸುಸುವದಕ್ಕೇ[5] (ಉಪಯುಕ್ತವಾಗುತ್ತವೆಯೆಂದೂ ಹೇಳಬಹುದು.) ಪ್ರಾರಬ್ಧಕರ್ಮಗಳನ್ನು ಉಪಭೋಗಿಸುವದರಿಂದಲೇ (ಅವು) ಕ್ಷಯವಾಗುವದರಿಂದ ಹೊಸ ಕರ್ಮಗಳನ್ನು ಮತ್ತೆ ಮಾಡದೆ ಇದ್ದರೆ ಕೈವಲ್ಯವು (ಯಾವ) ಯತ್ನವೂ ಇಲ್ಲದೆ (ತಾನೇ) ಸಿದ್ಧ(ವಾಗುತ್ತದೆ.)

## ಸಿದ್ಧಾಂತ: ಕರ್ಮದಿಂದಲೇ ಮೋಕ್ಷವಾಗಲಾರದು

(ಭಾಷ್ಯ)

೫೮೯. ನ । " ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽ

---

1. " ಪೂರ್ವೋಪಚಿತದುರಿತಕ್ಷಯಾರ್ಥಂ ನಿತ್ಯಕರ್ಮ " ಮೈ॥ ಮ॥
2. 'ಉಪಭೋಗೇನೈವ ಕರ್ಮಣಾಂ' ನಿ॥; 'ಕರ್ಮಣಾಂ ಚೋಪಭೋಗೇನೈವ' ಮ॥
3. 'ಭವತಿ' ಮ॥
4. ಪ್ರಾರಬ್ಧಕರ್ಮವನ್ನು ಉಪಯೋಗಿಸಿ ಸವೆಯಿಸಿದರೂ ಸಂಚಿತ, ಆಗಾಮಿ—ಇವುಗಳು ಉಳಿದೇ ಇರುವವಲ್ಲ!—ಎಂದು ಆಕ್ಷೇಪ.
5. ಹಿಂದೆ ನಿತ್ಯಕರ್ಮಕ್ಕೆ ಫಲವಿಲ್ಲ ಎಂದು ಹೇಳಿದೆ; ಬಳಿಕ ಅದರ ಆಯಾಸ ದುಃಖದ ಅನುಭವವು ಸಂಚಿತಕರ್ಮದ ಫಲದ ಉಪಭೋಗ ಎಂದು ಹೇಳಿದೆ. ಈಗ ಅದು ಪಾಪವನ್ನು ಪರಿಹರಿಸುತ್ತದೆ ಎಂದಿದೆ. ಹೀಗೆ ಪೂರ್ವಪಕ್ಷದಲ್ಲಿ ಮೂರು ವಿಕಲ್ಪಗಳಿವೆ.

ಯನಾಯ '' (ಶ್ವೇ. ೩-೮) ಇತಿ ವಿದ್ಯಾಯಾ [1] ಅನ್ಯಃ ಪನ್ಥಾ ಮೋಕ್ಷಾಯ ನ ವಿದ್ಯತೇ ಇತಿ ಶ್ರುತೇಃ । ಚರ್ಮವದಾಕಾಶವೇಷ್ಟನಾಸಮ್ಭವವತ್ ಅವಿದುಷೋ ಮೋಕ್ಷಾಸಮ್ಭವಶ್ರುತೇಃ) "ಜ್ಞಾನಾತ್ ಕೈವಲ್ಯಮಾಪ್ನೋತಿ" (?) ಇತಿ ಚ ಪುರಾಣಸ್ಮೃತೇಃ । ಅನಾರಬ್ಧಫಲಾನಾಂ ಪುಣ್ಯಾನಾಂ ಕರ್ಮಣಾಂ ಕ್ಷಯಾನುಪಪತ್ತೇಶ್ಚ । ಯಥಾ ಪೂರ್ವೋಪಾತ್ತಾನಾಂ ದುರಿತಾನಾಮ್ ಅನಾರಬ್ಧಫಲಾನಾಂ ಸಮ್ಭವಃ[2] ತಥಾ ಪುಣ್ಯಾನಾಮಪಿ ಅನಾರಬ್ಧಫಲಾನಾಂ ಸ್ಯಾತ್ ಸಮ್ಭವಃ । ತೇಷಾಂ ಚ ದೇಹಾನ್ತರಮ್ ಅಕೃತ್ವಾ ಕ್ಷಯಾನುಪಪತ್ತೌ ಮೋಕ್ಷಾನುಪಪತ್ತಿಃ । ಧರ್ಮಾಧರ್ಮಹೇತೂನಾಂ ಚ ರಾಗದ್ವೇಷಮೋಹಾನಾಮ್ ಅನ್ಯತ್ರ ಆತ್ಮಜ್ಞಾನಾತ್ ಉಚ್ಛೇದಾನುಪಪತ್ತೇಃ ಧರ್ಮಾಧರ್ಮೋಚ್ಛೇದಾನುಪಪತ್ತಿಃ । ನಿತ್ಯಾನಾಂ ಚ ಕರ್ಮಣಾಂ ಪುಣ್ಯಲೋಕಫಲತ್ವಶ್ರುತೇಃ[3] । "ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ'' (ಗೌ. ಧ. ಸೂ. ೨-೨-೨೯) ಇತ್ಯಾದಿಸ್ಮೃತೇಶ್ಚ ಕರ್ಮಕ್ಷಯಾನುಪಪತ್ತಿಃ ॥

(ಭಾಷ್ಯಾರ್ಥ)

ಹಾಗಲ್ಲ, ಏಕೆಂದರೆ "ಆತನನ್ನೇ ಅರಿತುಕೊಂಡರೆ ಅತಿಮೃತ್ಯುವನ್ನು[4] ಹೊಂದುತ್ತಾನೆ, (ಅದನ್ನು) ಹೊಂದುವದಕ್ಕೆ ಬೇರೆಯ ಹಾದಿಯಿಲ್ಲ'' (ಶ್ವೇ. ೩-೮) ಎಂದು ಮೋಕ್ಷಕ್ಕೆ ವಿದ್ಯೆಗಿಂತ ಬೇರೆಯ ಹಾದಿಯು ಇರುವದಿಲ್ಲವೆಂದು ಶ್ರುತಿ (ಯಿದೆ) ;[5] "ಜ್ಞಾನದಿಂದ ಕೈವಲ್ಯವನ್ನು ಹೊಂದುತ್ತಾನೆ". ಎಂದು ಪುರಾಣಸ್ಮೃತಿ [6] (ಯಿದೆ).

ಫಲವನ್ನುಂಟುಮಾಡದೆ ಇರುವ ಪುಣ್ಯಕರ್ಮಗಳು ಕ್ಷಯವಾಗಲಾರವಾದ್ದರಿಂದಲೂ (ಪೂರ್ವಪಕ್ಷವು ಸರಿಯಲ್ಲ) : ಫಲವನ್ನು ಕೊಡದೆ ಇರುವ ಹಿಂದೆ ಮಾಡಿರುವ ಪಾಪಗಳು ಹೇಗೆ ಇರಬಹುದೋ ಹಾಗೆಯೇ ಫಲವನ್ನು ಕೊಡದೆ ಇರುವ ಪುಣ್ಯಕರ್ಮಗಳೂ ಇರಬಹುದಾಗಿದೆ ; ಅವು ಮತ್ತೊಂದು ದೇಹವನ್ನುಂಟುಮಾಡದೆ

---

1. ಮ॥ ಮ್ಯೆ॥ಗಳಲ್ಲಿಲ್ಲ.

2. 'ಸ್ಯಾತ್ ಸಮ್ಭವಃ' ಮ್ಯೆ॥ ; 'ಸಮ್ಭವಃ ಸ್ಯಾತ್' ಮ॥

3. ಈ ನಿ॥ ಪಾಠವೇ ಉತ್ತಮವೆಂದು ತೋರುತ್ತದೆ.

4. ಮೃತ್ಯುವನ್ನು ದಾಟಿರುವ ಮೋಕ್ಷವನ್ನು.

5. ಶ್ವೇ. ೬-೨೦ರ ಅರ್ಥ ; ಹಿಂದಿನ ಶ್ರುತಿಯನ್ನೂ ಅರ್ಥರೂಪದಿಂದಲೇ ಆಚಾರ್ಯರು ಉದಾಹರಿಸಿದ್ದು ಲೇಖಕರು ಶ್ರುತಿಯನ್ನೇ ಬರೆದಿರುವರೆಂದು ಊಹಿಸುವದಕ್ಕೂ ಅವಕಾಶವಿದೆ.

6. ಈ ಸ್ಮೃತಿ ಯಾವದೆಂಬುದು ಗೊತ್ತಾಗಲಿಲ್ಲ.

ಸವೆಯಲಾರವಾದ್ದರಿಂದ[1] ಮೋಕ್ಷವು ದೊರಕಲಾರದು. ಧರ್ಮಾಧರ್ಮಗಳಿಗೆ ಕಾರಣವಾಗಿರುವ ರಾಗದ್ವೇಷಮೋಹಗಳು ಆತ್ಮಜ್ಞಾನಕ್ಕಿಂತ ಬೇರೆಯಾದ (ಯಾವ ಕಾರಣದಿಂದಲೂ) ನಾಶವಾಗಲಾರವಾದ್ದರಿಂದ[2] ಧರ್ಮಾಧರ್ಮಗಳೂ ನಾಶವಾಗ ಲಾರವು. ನಿತ್ಯಕರ್ಮಗಳಿಗೆ ಪುಣ್ಯಲೋಕವೆಂಬ ಫಲವಾಗುವದೆಂದು)[3] ಶ್ರುತಿ(ಯಲ್ಲಿ ರುವದರಿಂದಲೂ) "ಸ್ವಕರ್ಮನಿಷ್ಠರಾದ ವರ್ಣಗಳೂ ಆಶ್ರಮಿಗಳೂ (ಮತ್ತೆ ಹುಟ್ಟು ವರು)" (ಗೌ.ಧ.ಸೂ. ೬-೨-೨೯) ಮುಂತಾಗಿ (ಹೇಳುವ) ಸ್ಮೃತಿಯಿರುವದರಿಂದಲೂ ಕರ್ಮವು ಕ್ಷಯವಾಗಲಾರದು.

## ನಿತ್ಯಕರ್ಮಗಳ ಆಯಾಸವು ಕರ್ಮಾಂತರದ ಫಲವಲ್ಲ

(ಭಾಷ್ಯ)

೫೯೦. ಯೇ[4] ತು ಆಹುಃ-ನಿತ್ಯಾನಿ ಕರ್ಮಾಣಿ ದುಃಖರೂಪತ್ವಾತ್ ಪೂರ್ವ ಕೃತದುರಿತಕರ್ಮಣಾಂ ಫಲಮೇವ । ನ ತು ತೇಷಾಂ ಸ್ವರೂಪವ್ಯತಿರೇಕೇಣ ಅನ್ಯತ್ ಫಲಮ್ ಅಸ್ತಿ । ಅಶ್ರುತತ್ವಾತ್, ಜೀವನಾದಿನಿಮಿತ್ತೇ ಚ ವಿಧಾನಾತ್ ಇತಿ । ನ । ಅಪ್ರವೃತ್ತಾನಾಂ ಕರ್ಮಣಾಂ[5] ಫಲದಾನಾಸಮ್ಭವಾತ್ । ದುಃಖಫಲವಿಶೇಷಾನುಪ ಪತ್ತಿಶ್ಚ ಸ್ಯಾತ್[6] । ಯದುಕ್ತಂ ಪೂರ್ವಜನ್ಮಕೃತದುರಿತಾನಾಂ[7] ಕರ್ಮಣಾಂ ಫಲಂ ನಿತ್ಯಕರ್ಮಾನುಷ್ಠಾನಾಯಾಸದುಃಖಂ[8] ಭುಜ್ಯತೇ ಇತಿ । ತತ್ ಅಸತ್ । ನ ಹಿ ಮರಣಕಾಲೇ ಫಲದಾನಾಯ ಅನಙ್ಕುರೀಭೂತಸ್ಯ ಕರ್ಮಣಃ ಫಲಮ್ ಅನ್ಯಕರ್ಮಾ

---

1. ಪಾಪಕರ್ಮಗಳು ನಿತ್ಯಕರ್ಮಾನುಷ್ಠಾನದಿಂದ ನಾಶವಾಗುವದೆಂದಿಟ್ಟುಕೊಂಡರೂ ಪುಣ್ಯಕರ್ಮಗಳು ನಾಶವಾಗುವದಕ್ಕೆ ಕಾರಣವಿಲ್ಲ ಎಂದು ಭಾವ.

2. ರಾಗಾದಿಗಳನ್ನು ಮಾಡದೆ ಇರುವದರಿಂದ ಆಗಾಮಿಕರ್ಮಗಳುಂಟಾಗದಂತೆ ಮಾಡಿಕೊಳ್ಳಬಹುದು_ಎಂದು ಭಾ. ಭಾ. ೫೮೭ರಲ್ಲಿ ಪೂರ್ವಪಕ್ಷಿ ಹೇಳಿದ್ದನು. ಅದಕ್ಕೆ ಪ್ರತ್ಯುಕ್ತಿಯಿದು.

3. "ಕರ್ಮದಿಂದ ಪಿತೃಲೋಕವು" (ಶತ. ಬ್ರಾ.) "ಇವರೆಲ್ಲರೂ ಪುಣ್ಯಲೋಕ ವನ್ನು (ಪಡೆಯುವ)ರಾಗುವರು" (ಛಾಂ. ೨-೨೩-೧) ಎಂಬ ಶ್ರುತಿಗಳು ನಿತ್ಯಕರ್ಮಗಳಿಗೆ ಪುಣ್ಯಲೋಕವು ಫಲವೆಂದು ಹೇಳುತ್ತವೆ.

4. ಇದು 'ಯತ್ ತು' ಎಂದಿರಬೇಕೆಂದು ತೋರುತ್ತದೆ.

5. ಪಿ||ದಲ್ಲಿಲ್ಲ.

6. ಈ ವಾಕ್ಯವು ಬರೆದವರ ತಪ್ಪಿನಿಂದ ಏನೋ ಹೆಚ್ಚು ಕಡಿಮೆಯಾಗಿರುವಂತೆ ಕಾಣುತ್ತದೆ. 'ದುಃಖಫಲವಿಶೇಷಾನುಪಪತ್ತೇಶ್ಚ' ಎಂದಿದ್ದರೆ ಆಗುತ್ತಿತ್ತು.

7. 'ಕೃತಾನಾಂ ದುರಿತಾನಾಂ' ಮ||

8. "ನಿತ್ಯಕರ್ಮಾನುಷ್ಠಾಯಾಸಸಿದ್ಧಂ ದುಃಖಂ" ಮ||

ರಬ್ಧೇ ಜನ್ಮನಿ ಉಪಭುಜ್ಯತೇ ಇತಿ ಉಪಪತ್ತಿಃ । ಅನ್ಯಥಾ ಸ್ವರ್ಗಫಲೋಪಭೋಗಾಯ ಅಗ್ನಿಹೋತ್ರಾದಿಕರ್ಮಾರಬ್ಧೇ ಜನ್ಮನಿ ನರಕಫಲೋಪಭೋಗಾನುಪಪತ್ತಿರ್ನಸ್ಯಾತ್[1] । ತಸ್ಯ ದುರಿತಸ್ಯ[2] ದುಃಖವಿಶೇಷಫಲತ್ವಾನುಪಪತ್ತೇಶ್ಚ । ಅನೇಕೇಷು ಹಿ ದುರಿತೇಷು[3] ಸಮ್ಭವತ್ಸು ಭಿನ್ನದುಃಖಸಾಧನಫಲೇಷು ನಿತ್ಯಕರ್ಮಾನುಷ್ಠಾನಾಯಾಸದುಃಖಮಾತ್ರಫಲೇಷು ಕಲ್ಪ್ಯಮಾನೇಷು ದ್ವಂದ್ವರೋಗಾದಿಬಾಧನಂ ನಿರ್ನಿಮಿತ್ತಂ[4] ನ ಹಿ ಶಕ್ಯತೇ ಕಲ್ಪಯಿತುಮ್ ನಿತ್ಯಕರ್ಮಾನುಷ್ಠಾಯಾಸದುಃಖಮೇವ ಪೂರ್ವೋಪಾತ್ತದುರಿತಫಲಂ[5] ನ ಶಿರಸಾ ಪಾಷಾಣವಹನಾದಿದುಃಖಮ್ ಇತಿ॥

(ಭಾಷ್ಯಾರ್ಥ)

ಆದರೆ ನಿತ್ಯಕರ್ಮಗಳು ದುಃಖರೂಪವಾಗಿರುವದರಿಂದ (ಅವು) ಹಿಂದೆ ಮಾಡಿರುವ ಕೆಟ್ಟಕರ್ಮಗಳ ಫಲವೇ ಹೊರತು ಅವುಗಳಿಗೆ (ತಮ್ಮ) ಸ್ವರೂಪಕ್ಕಿಂತ ಬೇರೆಯಾದ (ಯಾವ) ಫಲವೂ ಇರುವದಿಲ್ಲ; ಏಕೆಂದರೆ (ಅವಕ್ಕೆ ಯಾವ ಫಲವನ್ನೂ) ಶ್ರುತಿಯಲ್ಲಿ(ಹೇಳಿ)ಲ್ಲ, ಮತ್ತು (ಅವುಗಳನ್ನು) ಜೀವಿಸಿರುವವರೇ ಮುಂತಾದ ನಿಮಿತ್ತವಾಗಿ ವಿಧಿಸಿರುತ್ತದೆ[6]–ಎಂದು ಯಾರೋ (ಕೆಲವರು) ಹೇಳುವರಷ್ಟೆ[7], (ಅದು ಸರಿ)ಯಲ್ಲ. ಏಕೆಂದರೆ (ಫಲವನ್ನು ಕೊಡುವದಕ್ಕೆ) ಹೊರಡದೆ ಇರುವ ಕರ್ಮಗಳು ಫಲವನ್ನು ಕೊಡುವ ಸಂಭವವಿಲ್ಲ; ಮತ್ತು ದುಃಖಫಲವಿಶೇಷವೂ (ಅವುಗಳಿಗೆ) ಸಂಭವಿಸುವದಿಲ್ಲ.

(ಇದರ ವಿವರ): ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪಕರ್ಮಗಳಿಗೆ ಫಲ(ವಾಗಿ) ನಿತ್ಯಕರ್ಮವನ್ನು ಮಾಡುವ ಆಯಾಸದ ದುಃಖವು ಅನುಭವಕ್ಕೆ ಬರುತ್ತದೆ

---

1. 'ಫಲೋಪಭೋಗೋಪಪತ್ತಿಃ' ಮ॥
2. 'ದುರಿತದುಃಖ' ಎಂಬ ಪಾಠಕ್ಕಿಂತ ಈ ಅ॥ ವಾ॥ ಪಾಠವೇ ಮೇಲು.
3. 'ಅನೇಕೇಷು ಭಿನ್ನದುರಿತೇಷು' ಮ॥
4. 'ಬಾಧಾನಿಮಿತ್ತಂ' ನಿ॥ ; ಬಾಧನಮ್ ಅನಿಮಿತ್ತಮ್' ಮ॥
5. 'ಪೂರ್ವಕೃತದುರಿತಫಲಂ' ನಿ॥ಗು
6. 'ಬದುಕಿರುವವರೆಗೂ ಅಗ್ನಿಹೋತ್ರವನ್ನು ಮಾಡಬೇಕು' 'ಕರ್ಮವನ್ನು ಮಾಡುತ್ತಲೇ ಬದುಕಿರಲಿಚ್ಛಿಸಬೇಕು' ಮುಂತಾದ ಶ್ರುತಿಗಳಲ್ಲಿ ಜೀವನವೇ ನಿಮಿತ್ತವೆಂದು ಹೇಳಿದೆ, ಮತ್ತೆ ಯಾವ ನಿಮಿತ್ತದಿಂದಲೂ ನಿತ್ಯಕರ್ಮಾನುಷ್ಠಾನವನ್ನು ವಿಧಿಸಿಲ್ಲ–ಎಂದು ಭಾವ. ಇಲ್ಲಿ 'ಜೀವನಾದಿನಿಮಿತ್ತೇ' ಎಂಬಲ್ಲಿ ಆದಿ ಎಂದಿರುವದರಿಂದ ಕಾರ್ಯಕರಣಸಂಸ್ಕಾರವನ್ನೂ ಹಿಡಿಯಬಹುದು. ಬೃ.ಭಾ. ೪-೪ರ ಸಂಬಂಧಭಾಷ್ಯ; ಗೀ.ಭಾ. ೧೮-೫ ಇವುಗಳನ್ನು ನೋಡಿ.
7. 'ಯತ್ತು ಆಹುಃ' ಎಂದು ಪಾಠವಿದ್ದರೆ 'ಎಂದು (ಕೆಲವರು) ಹೇಳುವರಲ್ಲ' ಎಂದು ಕನ್ನಡಿಸಬೇಕು.

ಎಂದು ಹೇಳಿದಿರಲ್ಲ, ಅದು ಸರಿಯಲ್ಲ. ಏಕೆಂದರೆ ಸಾಯುವ ಕಾಲದಲ್ಲಿ ಫಲವನ್ನು ಕೊಡುವದಕ್ಕೆ ಮೊಳಕೆಯಾಗದಿರುವ[1] ಕರ್ಮದ ಫಲವು ಮತ್ತೊಂದು ಕರ್ಮದಿಂದ ಉಂಟಾಗಿರುವ ಜನ್ಮದಲ್ಲಿ ಉಪಭುಕ್ತವಾಗುತ್ತದೆ ಎಂಬುದು ಹೊಂದುವದೇ ಇಲ್ಲ, ಹೀಗಲ್ಲದೆ ಹೋದರೆ ಸ್ವರ್ಗಫಲವನ್ನನುಭವಿಸುವದಕ್ಕೆ ಅಗ್ನಿಹೋತ್ರವೇ ಮುಂತಾದ ಕರ್ಮಗಳಿಂದ ಉಂಟಾಗಿರುವ ಜನ್ಮದಲ್ಲಿ[2] ನರಕಫಲವನ್ನು ಉಪಭೋಗಿಸುವದಾಗಲಾರದೆಂಬುದು ಇಲ್ಲದೆ ಹೋಗಬೇಕು.[3]

(ಅ) ಪಾಪಕ್ಕೆ (ಈ) ದುಃಖವಿಶೇಷವೇ ಫಲವೆಂಬುದು ಹೊಂದುವದಿಲ್ಲವಾದ್ದರಿಂದಲೂ (ಹೀಗೆಂದು ತಿಳಿಯಬೇಕು).[4] ಬೇರೆಬೇರೆಯ ದುಃಖಗಳನ್ನುಂಟುಮಾಡುವ ಫಲವುಳ್ಳ ಅನೇಕ ಪಾಪಗಳು ಇರಬಹುದಾ(ದರೂ ಅವೆಲ್ಲಕ್ಕೂ) ನಿತ್ಯಕರ್ಮವನ್ನು ಮಾಡುವ ಆಯಾಸದ ದುಃಖವೇ ಫಲವೆಂದು ಕಲ್ಪಿಸಿದರೆ ದ್ವಂದ್ವಗಳಿಂದಲೂ[5] ರೋಗಾದಿಗಳಿಂದಲೂ ಆಗುವ ಸಂಕಟವು ಯಾವ ನಿಮಿತ್ತವೂ ಇಲ್ಲದೆ ಆಗುವದೆಂದು– ನಿತ್ಯಕರ್ಮವನ್ನು ಮಾಡುವ ಆಯಾಸದ ದುಃಖವೇ ಹಿಂದೆ ಮಾಡಿರುವ ಪಾಪಗಳ ಫಲವು, ತಲೆಯಮೇಲೆ ಕಲ್ಲನ್ನು ಹೊರುವದೇ ಮುಂತಾದ್ದ(ರಿಂದಾಗುವ) ದುಃಖವು (ಆ ಪಾಪಗಳ ಫಲ) ವಲ್ಲ ಎಂದು–ಕಲ್ಪಿಸುವದಕ್ಕೆ ಆಗಲಾರದಷ್ಟೆ.[6]

(ಭಾಷ್ಯ)

೫೯೧. ಅಪ್ರಕೃತಂ ಚ ಇದಮುಚ್ಯತೇ ನಿತ್ಯಕರ್ಮಾನುಷ್ಠಾನಾಯಾಸದುಃಖಂ ಪೂರ್ವಕೃತದುರಿತಕರ್ಮಫಲಮ್ ಇತಿ । ಕಥಮ್? ಅಪ್ರಸೂತಫಲಸ್ಯ ಹಿ

---

1. ಸಾಯುವಾಗ ಯಾವ ಭಾವವಿರುವದೋ ಅದಕ್ಕನುಗುಣವಾದ ಜನ್ಮವು ಬಂದು ಆ ಮೊಳಕೆಯಾದ ಕರ್ಮವು ಫಲವನ್ನು ಕೊಡುತ್ತದೆ, ಮಿಕ್ಕ ಕರ್ಮಗಳು ಫಲವನ್ನು ಕೊಡುವದಕ್ಕೆ ಕಾರಣವಿಲ್ಲ ಎಂದು ಭಾವ.

2. ಸ್ವರ್ಗದ ಫಲವನ್ನನುಭವಿಸುವ ದೇಹದಲ್ಲಿ ಎಂದರ್ಥ.

3. ಎಲ್ಲಾ ಕರ್ಮಗಳೂ ಒಂದೇ ಸಲ ಫಲಕೊಡುವವೆಂದರೆ ಈ ಅನಿಷ್ಟಬರುವದು. ಆದ್ದರಿಂದ ಶುಭರೂಪವಾದ ನಿತ್ಯಕರ್ಮವನ್ನು ಮಾಡುತ್ತಿರುವಾಗ ಹಿಂದಿನ ಪಾಪದ ಫಲವನ್ನನುಭವಿಸುತ್ತಾನೆಂಬುದು ಸರಿಯಲ್ಲ.

4. ಫಲವನ್ನು ಕೊಡುವದಕ್ಕೆ ಆರಂಭಿಸದೆ ಇರುವ ಕರ್ಮಗಳು ಫಲವನ್ನು ಕೊಡಲಾರವು ಎಂಬ ಸಂಗ್ರಹವಾಕ್ಯವನ್ನು ವಿವರಿಸಿದ್ದಾಯಿತು. ದುಃಖವೆಂಬ ಫಲವು ಇಂಥದ್ದೇ ಎಂಬುದು ಹೊಂದುವದಿಲ್ಲ ಎಂಬ ವಾಕ್ಯವನ್ನು ಈಗ ವಿವರಿಸುತ್ತಾರೆ.

5. ಶೀತ, ಉಷ್ಣ– ಮುಂತಾದವುಗಳಿಂದಲೂ.

6. ಬಗೆಬಗೆಯ ಕರ್ಮಗಳಿವೆ, ಬಗೆಬಗೆಯ ದುಃಖಗಳಿವೆ; ನಿತ್ಯಕರ್ಮದ ಅನುಷ್ಠಾನದ ದುಃಖವೇ ಎಲ್ಲಕ್ಕೂ ಫಲವೆಂಬುದು ಹೇಗೆ ಗೊತ್ತು ?–ಎಂದು ಭಾವ.

ಪೂರ್ವಕೃತದುರಿತಸ್ಯ ಕ್ಷಯಃ ನೋಪಪದ್ಯತೇ ಇತಿ ಪ್ರಕೃತಮ್ । ತತ್ರ ಪ್ರಸೂತ ಫಲಸ್ಯ ಕರ್ಮಣಃ ಫಲಂ ನಿತ್ಯಕರ್ಮಾನುಷ್ಠಾನಾಯಾಸದುಃಖಮ್ ಆಹ ಭವಾನ್ । ನಾಪ್ರಸೂತಫಲಸ್ಯ[1] ಇತಿ । ಅಥ ಸರ್ವಮೇವ ಪೂರ್ವಕೃತಂ ದುರಿತಂ ಪ್ರಸೂತಫಲಮೇ ವೇತಿ ಮನ್ಯತೇ ಭವಾನ್ । ತತಃ ನಿತ್ಯಕರ್ಮಾನುಷ್ಠಾನಾಯಾಸದುಃಖಮೇವ ಫಲಂ ಇತಿ ವಿಶೇಷಣಮ್ ಅಯುಕ್ತಮ್ । ನಿತ್ಯಕರ್ಮವಿಧ್ಯಾನರ್ಥಕ್ಯಪ್ರಸಙ್ಗಶ್ಚ । ಉಪ ಭೋಗೇನೈವ ಪ್ರಸೂತಫಲಸ್ಯ ದುರಿತಕರ್ಮಣಃ ಕ್ಷಯೋಪಪತ್ತೇಃ ॥

(ಭಾಷ್ಯಾರ್ಥ)

ಮತ್ತು ನಿತ್ಯಕರ್ಮಗಳನ್ನು ಮಾಡುವದರಿಂದ ಆಯಾಸದ ದುಃಖವು ಹಿಂದೆ ಮಾಡಿದ ಪಾಪಕರ್ಮಗಳ ಫಲವೆಂದು (ನೀವು) ಹೇಳುತ್ತಿರುವದು ಅಪ್ರಕೃತವೂ ಆಗಿರುತ್ತದೆ. ಹೇಗೆಂದರೆ, ಫಲವನ್ನು ಹಡೆಯದೆ ಇರುವ ಹಿಂದೆ ಮಾಡಿದ ಪಾಪವು ಕ್ಷಯವಾಗಲಾರದು ಎಂಬುದು ಪ್ರಕೃತ(ದಲ್ಲಿ ನಮ್ಮ ಆಕ್ಷೇಪ). ಹೀಗಿರುವಲ್ಲಿ ಫಲ ವನ್ನು ಹಡೆದಿರುವ ಕರ್ಮದ ಫಲವು ನಿತ್ಯಕರ್ಮವನ್ನು ಮಾಡುವ ಆಯಾಸದ ದುಃಖವು ಎಂದು ನೀನು ಹೇಳುತ್ತಿರುವೆಯೇ ಹೊರತು ಫಲವನ್ನು ಹಡೆಯದೆ (ಇರುವ ಕರ್ಮದ ಫಲವೆನ್ನುತ್ತಿಲ್ಲ). ಹಾಗಿಲ್ಲದೆ ಹಿಂದೆ ಮಾಡಿದ ಪಾಪವೆಲ್ಲವೂ ಫಲವನ್ನು ಹಡೆದೇ ಇರುತ್ತದೆ ಎಂದು ನೀನು ಎಣಿಸಿರುವೆಯಾದರೆ, ಆಗ ನಿತ್ಯಕರ್ಮ ವನ್ನು ಮಾಡುವ ಆಯಾಸದ ದುಃಖವೊಂದೇ (ಅದರ) ಫಲವೆಂದು ವಿಶೇಷ(ರೂಪ ದಿಂದ ಹೇಳುವದು)ಸರಿಯಾಗುವದಿಲ್ಲ. (ಆ ಪಕ್ಷದಲ್ಲಿ) ನಿತ್ಯಕರ್ಮವನ್ನು(ಶ್ರುತಿಯಲ್ಲಿ) ವಿಧಿಸಿರುವದು ವ್ಯರ್ಥವೂ ಆಗುತ್ತದೆ; ಏಕೆಂದರೆ ಫಲವನ್ನು ಹಡೆದಿರುವ ಪಾಪ ಕರ್ಮವನ್ನು ಅನುಭವಿಸುವದರಿಂದಲೇ (ಅದು) ಸವೆಯಬಹುದಾಗಿರುತ್ತದೆ.

(ಭಾಷ್ಯ)

೫೯೨. ಕಿಂಚ ಶ್ರುತಸ್ಯ ನಿತ್ಯಸ್ಯ ಕರ್ಮಣಃ ದುಃಖಂ ಚೇತ್ ಫಲಮ್[2] ನಿತ್ಯಕರ್ಮಾನುಷ್ಠಾನಾಯಾಸಾದೇವ ತತ್ ದೃಶ್ಯತೇ ವ್ಯಾಯಾಮಾದಿವತ್ । ತದನ್ಯಸ್ಯ ಇತಿ ಕಲ್ಪನಾನುಪಪತ್ತಿಃ । ಜೀವನಾದಿನಿಮಿತ್ತೇ ಚ ವಿಧಾನಾತ್ ನಿತ್ಯಾನಾಂ ಕರ್ಮಣಾಂ ಪ್ರಾಯಶ್ಚಿತ್ತವತ್ ಪೂರ್ವಕೃತದುರಿತಫಲತ್ವಾನುಪಪತ್ತಿಃ । ಯಸ್ಮಿನ್

---

1. ' ನ ಪ್ರಸೂತಫಲಂ ' ಎಂಬ ಮು॥ ಮೈ॥ ಪಾಠವು ತಪ್ಪು.

2. ''ದುಃಖಂ ಕರ್ಮಣಶ್ಚೇತ್ ಫಲಮ್'' ಆ॥ ನಿ॥; ''ಶ್ರುತಫಲಸ್ಯ ಕರ್ಮಣಃ ದುಃಖಂ ಚೇತ್ ಫಲಮ್'' ಮು॥; ಶ್ರುತಸ್ಯ....ದುಃಖಂ ಚೇತ್ ಫಲಮ್'' ಮೈ॥ ಎಂಬ ಅಚ್ಚಿನ ಪಾಠಗಳನ್ನು ಹೀಗೆ ತಿದ್ದಿಕೊಂಡಿದೆ.

ಪಾಪಕರ್ಮಣಿ ನಿಮಿತ್ತೇ ಯದ್ವಿಹಿತಂ ಪ್ರಾಯಶ್ಚಿತ್ತಂ ನ ತು ತಸ್ಯ ಪಾಪಸ್ಯ ತತ್[1] ಫಲಮ್ । ಅಥ ತಸ್ಯೈವ ಪಾಪಸ್ಯ ನಿಮಿತ್ತಸ್ಯ ಪ್ರಾಯಶ್ಚಿತ್ತದುಃಖಂ ಫಲಮ್ ಜೀವನಾದಿನಿಮಿತ್ತೇಽಪಿ ನಿತ್ಯಕರ್ಮಾನುಷ್ಠಾನಾಯಾಸದುಃಖಂ ಜೀವನಾದಿ ನಿಮಿತ್ತಸ್ಯೈವ ತತ್ ಫಲಂ ಪ್ರಸಜ್ಯೇತ । ನಿತ್ಯಪ್ರಾಯಶ್ಚಿತ್ತಯೋಃ ನೈಮಿತ್ತಿಕತ್ವಾವಿಶೇಷಾತ್ ॥

(ಭಾಷ್ಯಾರ್ಥ)

ಇದೂ ಅಲ್ಲದೆ ಶ್ರುತಿಯಲ್ಲಿ (ಹೇಳಿರುವ) ನಿತ್ಯಕರ್ಮಕ್ಕೆ ದುಃಖವು ಫಲವಾದರೆ ವ್ಯಾಯಾಮವೇ ಮುಂತಾದದ್ದರಿಂದ (ಕಾಣಬರುವ ದುಃಖ) ದಂತೆ ಅದು ನಿತ್ಯಕರ್ಮವನ್ನು ಮಾಡುವ ಆಯಾಸದಿಂದಲೇ ಕಂಡುಬರುತ್ತಿರುವಲ್ಲಿ ಅದೇ ಮತ್ತೊಂದು (ಕರ್ಮದ ಫಲವು) ಎಂದು ಕಲ್ಪಿಸುವದೂ ಯುಕ್ತವಲ್ಲ. ಬದುಕಿರುವದೇ ಮುಂತಾದ್ದ ನಿಮಿತ್ತ(ವನ್ನಿಟ್ಟುಕೊಂಡು) ನಿತ್ಯಕರ್ಮಗಳನ್ನು ವಿಧಿಸಿರುವದರಿಂದ ಪ್ರಾಯಶ್ಚಿತಗಳಂತೆಯೇ ಇದು ಹಿಂದೆ ಮಾಡಿದ ಪಾಪಗಳ ಫಲವೆಂದು (ಹೇಳುವದೂ) ಹೊಂದುವದಿಲ್ಲ. ಯಾವ ಪಾಪಕರ್ಮವನ್ನು ನಿಮಿತ್ತ(ವಾಗಿಟ್ಟುಕೊಂಡು) ಯಾವ ಪ್ರಾಯಶ್ಚಿತ್ತವನ್ನು ವಿಧಿಸಿರುತ್ತದೆಯೋ ಆ (ಪ್ರಾಯಶ್ಚಿತ್ತವು) ಆ ಪಾಪದ ಫಲವಲ್ಲವೇ ಅಲ್ಲ; ಹಾಗಿಲ್ಲದೆ ಆ ನಿಮಿತ್ತವಾದ ಪಾಪದ ಪ್ರಾಯಶ್ಚಿತ್ತದುಃಖವು ಫಲವೇ ಎನ್ನುವದಾದರೆ ಜೀವನಾದಿನಿಮಿತ್ತದಿಂದ ವಿಧಿಸಿರುವ ನಿತ್ಯಕರ್ಮವನ್ನು ಮಾಡುವ ಆಯಾಸದ ಆ ದುಃಖವು ಜೀವನವೇ ಮುಂತಾದ ನಿಮಿತ್ತದ ಫಲವೇ ಎಂದಾಗಬೇಕಾಗುವದು. ಏಕೆಂದರೆ (ಒಂದಾನೊಂದು) ನಿಮಿತ್ತದಿಂದ ವಿಹಿತವಾಗಿರುವದೆಂಬುದು ನಿತ್ಯಕರ್ಮ, ಪ್ರಾಯಶ್ಚಿತ್ತ (ಈ ಎರಡಕ್ಕೂ) ಸಮಾನವಾಗಿರುತ್ತದೆ.[2]

(ಭಾಷ್ಯ)

೫೯೩. ಕಿಂಚಾನ್ಯತ್ । ನಿತ್ಯಸ್ಯ ಕಾಮ್ಯಸ್ಯ ಚ ಅಗ್ನಿಹೋತ್ರಾದೇಃ ಅನುಷ್ಠಾನಾಯಾಸದುಃಖಸ್ಯ ತುಲ್ಯತ್ವಾತ್ ನಿತ್ಯಾನುಷ್ಠಾನಾಯಾಸದುಃಖಮೇವ ಪೂರ್ವಕೃತದುರಿತಸ್ಯ ಫಲಮ್, ನ ತು ಕಾಮ್ಯಾನುಷ್ಠಾನಾಯಾಸದುಃಖಮ್ ಇತಿ ವಿಶೇಷೋ ನಾಸ್ತೀತಿ ತದಪಿ ಪೂರ್ವಕೃತದುರಿತಫಲಂ ಪ್ರಸಜ್ಯೇತ ತಥಾ ಚ ಸತಿ

---

1. ಮ॥ ದಲ್ಲಿಲ್ಲ; ಇಲ್ಲದಿದ್ದರೂ ಆಗುತ್ತದೆ.

2. ನಿತ್ಯಕರ್ಮವನ್ನು ಜೀವಿಸಿರುವದೇ ಮುಂತಾದ ನಿಮಿತ್ತದಿಂದ ವಿಧಿಸಿರುತ್ತದೆ; ಪ್ರಾಯಶ್ಚಿತ್ತವನ್ನು ಹಿಂದೆ ಮಾಡಿರುವ ಪಾಪಪರಿಹಾರಕ್ಕಾಗಿ ವಿಧಿಸಿರುತ್ತನೆ.

ನಿತ್ಯಾನಾಂ ಫಲಾಶ್ರವಣಾತ್ ತದ್ವಿಧಾನಾನ್ಯಥಾನುಪಪತ್ತೇಶ್ಚ ನಿತ್ಯಾನುಷ್ಠಾನಾಯಾಸದುಃಖಂ ಪೂರ್ವಕೃತದುರಿತಫಲಮ್ ಇತ್ಯರ್ಥಾಪತ್ತಿಕಲ್ಪನಾ ಚ ಅನುಪಪನ್ನಾ । ಏವಂ ವಿಧಾನಾನ್ಯಥಾನುಪಪತ್ತೇಃ ಅನುಷ್ಠಾನಾಯಾಸದುಃಖವ್ಯತಿರಿಕ್ತಫಲತ್ವಾನುಮಾನಾಚ್ಚ ನಿತ್ಯಾನಾಮ್। ವಿರೋಧಾಚ್ಚ[1]। ನಿತ್ಯಕರ್ಮಣಾ ಅನುಷ್ಠೀಯಮಾನೇನ ಅನ್ಯಸ್ಯ ಕರ್ಮಣಃ ಫಲಂ ಭುಜ್ಯತೇ ಇತ್ಯಭ್ಯುಪಗಮ್ಯಮಾನೇ ಸ ಏವೋಪಭೋಗಃ ನಿತ್ಯಸ್ಯ ಕರ್ಮಣಃ ಫಲಮಿತಿ ನಿತ್ಯಸ್ಯ ಕರ್ಮಣಃ ಫಲಾಭಾವಃ ಇತಿ ಚ ವಿರುದ್ಧಮ್ ಉಚ್ಯತೇ । ಕಿಂ ಚ ಕಾಮ್ಯಾಗ್ನಿಹೋತ್ರಾದೌ ಅನುಷ್ಠೀಯಮಾನೇ ನಿತ್ಯಮಪಿ ಅಗ್ನಿಹೋತ್ರಾದಿ ತನ್ತ್ರೇಣೈವ ಅನುಷ್ಠಿತಂ ಭವತೀತಿ ತದಾಯಾಸದುಃಖೇನೈವ ಕಾಮ್ಯಾಗ್ನಿಹೋತ್ರಾದಿಫಲಮ್ ಉಪಕ್ಷೀಣಂ ಸ್ಯಾತ್ । ತತ್ತನ್ತ್ರತ್ವಾತ್ । ಅಥ ಕಾಮ್ಯಾಗ್ನಿಹೋತ್ರಾದಿಫಲಮ್ ಅನ್ಯದೇವ ಸ್ವರ್ಗಾದಿ, ತದನುಷ್ಠಾನಾಯಾಸದುಃಖಮಪಿ ಭಿನ್ನಂ ಪ್ರಸಜ್ಯೇತ । ನ ಚ ತದಸ್ತಿ । ದೃಷ್ಟವಿರೋಧಾತ್ । ನ ಹಿ ಕಾಮ್ಯಾನುಷ್ಠಾಯಾಸದುಃಖಾತ್ ಕೇವಲನಿತ್ಯಾನುಷ್ಠಾಯಾಸದುಃಖಂ ಭಿನ್ನಂ ದೃಶ್ಯತೇ[2] ॥

(ಭಾಷ್ಯಾರ್ಥ)

ಇನ್ನೂ ಒಂದು (ವಿಷಯ): ನಿತ್ಯ ಮತ್ತು ಕಾಮ್ಯ ಅಗ್ನಿಹೋತ್ರಾದಿಗಳನ್ನು ಮಾಡುವ ಆಯಾಸದ ದುಃಖವು ಸಮಾನವಾಗಿರುವದರಿಂದ ನಿತ್ಯ (ಕರ್ಮ)ವನ್ನು ಮಾಡುವ ಆಯಾಸದ ದುಃಖವೇ ಹಿಂದೆ ಮಾಡಿದ ಪಾಪದ ಫಲವೇ ಹೊರತು ಕಾಮ್ಯವನ್ನು ಮಾಡುವ ಆಯಾಸದ ದುಃಖವಲ್ಲ ಎಂದು (ಹೇಳುವದಕ್ಕೆ) ವಿಶೇಷವು (ಯಾವದೂ) ಇಲ್ಲದಿರುವದರಿಂದ ಅದೂ ಹಿಂದೆ ಮಾಡಿದ ಪಾಪದ ಫಲವೆಂದಾಗಬೇಕಾಗುವದು. ಹಾಗಾದರೆ ನಿತ್ಯ(ಕರ್ಮ)ಗಳಿಗೆ ಶ್ರುತಿಯಲ್ಲಿ ಫಲವನ್ನು ಹೇಳದೆ ಇರುವದರಿಂದಲೂ ಅವನ್ನು ವಿಧಿಸಿರುವದು ಬೇರೊಂದು ಬಗೆಯಿಂದ[3] ಹೊಂದುವ ಹಾಗಿಲ್ಲವಾದ್ದರಿಂದಲೂ ನಿತ್ಯ(ಕರ್ಮ)ವನ್ನು ಮಾಡುವ ಆಯಾಸದ ದುಃಖವು ಹಿಂದೆ ಮಾಡಿದ ಪಾಪದ ಫಲವು ಎಂದು ಅರ್ಥಾಪತ್ತಿಯನ್ನು ಕಲ್ಪಿಸು

---

1. 'ವಿರುದ್ಧಂ ಚೇದಮುಚ್ಯತೇ' ಎಂಬ ಮಾತುಗಳು ಬೇಕಿಲ್ಲವೆಂದು ಬಿಟ್ಟುಬಿಟ್ಟಿದೆ.

2. 'ದುಃಖಾತ್ ನಿತ್ಯಾನುಷ್ಠಾನಾಯಾಸದುಃಖಂ ಭಿನ್ನಂ ದೃಶ್ಯತೇ' ಮು||ಮೈ||

3. ಈ ದುಃಖವು ಹಿಂದಿನ ಪಾಪದ ಫಲವು ಎಂದು ಕಲ್ಪಿಸಿದ ಹೊರತು.

ವದು[1] ಹೊಂದಲಾರದು. ಹೀಗೆ ವಿಧಿಸಿರುವದು ಬೇರೊಂದು ಬಗೆಯಲ್ಲಿ[2] ಹೊಂದುವದಿಲ್ಲವಾದ್ದರಿಂದ (ಕರ್ಮ)ವನ್ನು ಮಾಡುವ ಆಯಾಸದ ದುಃಖಕ್ಕಿಂತ ಬೇರೆಯಾದ ಫಲವೇ ನಿತ್ಯ(ಕರ್ಮಗಳಿಗೆ) ಇರುವದೆಂದು **ಅನುಮಾನ**[3] (ಮಾಡಬೇಕಾಗಿರುವದರಿಂದಲೂ ಪೂರ್ವಪಕ್ಷವು ಸರಿಯಲ್ಲ). ವಿರುದ್ಧವಾಗಿರುವದರಿಂದಲೂ (ಪೂರ್ವಪಕ್ಷವು ಸರಿಯಲ್ಲ). ನಿತ್ಯಕರ್ಮವನ್ನು ಮಾಡಿದರೆ ಮತ್ತೊಂದು ಕರ್ಮದ ಫಲವನ್ನು ಉಪಭೋಗಿಸದಂತಾಗುತ್ತದೆ ಎಂದು ಒಪ್ಪಿ, ಅದೇ ಉಪಭೋಗವು ನಿತ್ಯಕರ್ಮದ ಫಲವೆಂದೂ ನಿತ್ಯಕರ್ಮಕ್ಕೆ ಫಲವೇ ಇಲ್ಲವೆಂದೂ ಹೇಳುವದು ವಿರುದ್ಧವಾಗಿರುತ್ತದೆ.[4] ಮತ್ತು ಕಾಮ್ಯಾಗ್ನಿಹೋತ್ರವೇ ಮುಂತಾದದ್ದನ್ನು ಮಾಡಿದರೆ ನಿತ್ಯವಾದ ಅಗ್ನಿಹೋತ್ರವೇ ಮುಂತಾದದ್ದನ್ನೂ ತಂತ್ರದಿಂದ[5] ಮಾಡಿದಂತೆ ಆಗುವದರಿಂದ ಆ (ನಿತ್ಯಕರ್ಮದ) ಆಯಾಸದ ದುಃಖದಿಂದಲೇ ಕಾಮ್ಯಾಗ್ನಿಹೋತ್ರವೇ ಮುಂತಾದದ್ದರ ಫಲವೂ ಮುಗಿದುಹೋಗಬೇಕಾದೀತು. ಏಕೆಂದರೆ ಅದು ಅದರ ಅಧೀನವಾಗಿರುತ್ತದೆ. ಹಾಗಿಲ್ಲದೆ ಕಾಮ್ಯಾಗ್ನಿಹೋತ್ರವೇ ಮುಂತಾದದ್ದಕ್ಕೆ ಸ್ವರ್ಗವೇ ಮುಂತಾದ ಬೇರೆಯ ಫಲವೇ (ಆಗುವದು ಎನ್ನುವದಾದರೆ), ಅದನ್ನು (ಮಾಡುವ) ಆಯಾಸದ ದುಃಖವೂ ಬೇರೆಯಾಗಬೇಕಾಗುವದು ; ಆದರೆ ಹಾಗಿಲ್ಲ. ಏಕೆಂದರೆ (ಅದು ಬೇರೆಯೆನ್ನುವದು) ಕಂಡಿರುವ (ಅನುಭವಕ್ಕೆ) ವಿರುದ್ಧವಾಗುತ್ತದೆ. ಕಾಮ್ಯ (ಕರ್ಮವನ್ನು ಮಾಡಿದ) ಆಯಾಸದ ದುಃಖಕ್ಕಿಂತ ಕೇವಲ ನಿತ್ಯ (ಕರ್ಮವನ್ನು) ಮಾಡಿದ ಆಯಾಸದ ದುಃಖವು ಬೇರೆಯಾಗಿರುವದು (ಅನುಭವದಲ್ಲಿ) ಕಂಡಿರುವದಿಲ್ಲ.

---

1. ಶ್ರುತವಾದ ವಿಧಾನವು ಬೇರೆ ವಿಧದಿಂದ ಉಪಪನ್ನವಾಗುವದಿಲ್ಲವೆಂದು ಕಲ್ಪಿಸುವದು.

2. ಅದೃಷ್ಟವಾದ ಫಲವೂ ನಿತ್ಯಕರ್ಮಗಳಿಗೆ ಇದೆ ಎಂದು ಕಲ್ಪಿಸಿದ ಹೊರತು ವಿಧಾನವು ಹೊಂದುವದಿಲ್ಲ; ಹಿಂದಿನ ಪಾಪದ ಫಲವು ದುಃಖವೆಂದು ಕಲ್ಪಿಸಿದರೂ ವಿಧಾನವು ಹೊಂದುವದಿಲ್ಲವೆಂಬುದನ್ನು ಆಗಲೆ ತೋರಿಸಿರುತ್ತದೆ. ಆದ್ದರಿಂದ ಅದೃಷ್ಟಫಲವನ್ನೇ ಕಲ್ಪಿಸಬೇಕು ಎಂದು ಭಾವ.

3. ನೈಯಾಯಿಕರು ಅರ್ಥಾಪತ್ತಿಪ್ರಮಾಣವನ್ನು ಅನುಮಾನದಲ್ಲಿಯೇ ಅಡಕಮಾಡುತ್ತಾರೆ. ಆಚಾರ್ಯರಿಗೆ ಅರ್ಥಾಪತ್ತಿಯನ್ನು ಅವಶ್ಯವಾಗಿ ಒಪ್ಪಲೇಬೇಕೆಂಬುದರಲ್ಲಿ ನಿರ್ಭರವಿಲ್ಲವೆಂಬುದಕ್ಕೆ ಇಲ್ಲಿರುವ ಅನುಮಾನವೆಂಬ ಮಾತು ಗಮಕವಾಗಿರುತ್ತದೆ.

4. ನಿತ್ಯಕರ್ಮಕ್ಕೆ ಫಲವುಂಟು, ಫಲವಿಲ್ಲ-ಎಂಬುದು ವ್ಯಾಹತವು.

5. ನಿತ್ಯಕರ್ಮವನ್ನೇ ಕಾಮದಿಂದ ಮಾಡಿದರೆ ಕಾಮ್ಯವಾಗುತ್ತದೆ ; ಹೀಗೆ ಎರಡನ್ನೂ ಒಟ್ಟಿಗೆ ಮಾಡುವದನ್ನು ತಂತ್ರದಿಂದ ಮಾಡಿದ್ದೆನ್ನುವರು.

(ಭಾಷ್ಯ)

೫೯೪. ಕಿಂಚಾನ್ಯತ್ । ಅವಿಹಿತಮ್ ಅಪ್ರತಿಷಿದ್ಧಂ ಚ ಕರ್ಮ ತತ್ಕಾಲ ಫಲಮ್ । ನ ತು ಶಾಸ್ತ್ರಚೋದಿತಮ್ ಪ್ರತಿಷಿದ್ಧಂ ವಾ ತತ್ಕಾಲಫಲಮ್ ಭವೇತ್ । ತದಾ ಸ್ವರ್ಗಾದಿಷ್ವಪಿ ಅದೃಷ್ಟಫಲಾಶಾಸನೇನ ಉದ್ಯಮೋ ನ ಸ್ಯಾತ್ । ಅಗ್ನಿಹೋತ್ರಾದೀನಾಮೇವ ಕರ್ಮಸ್ವರೂಪಾವಿಶೇಷೇ ಅನುಷ್ಠಾನಾಯಾಸದುಃಖ ಮಾತ್ರೇಣ ಉಪಕ್ಷಯೋ ನಿತ್ಯಾನಾಮ್ ಸ್ವರ್ಗಾದಿಮಹಾಫಲತ್ವಂ ಕಾಮ್ಯಾನಾಮ್ ಅಙ್ಗೇತಿಕರ್ತವ್ಯತಾದ್ಯಾಧಿಕ್ಯೇ ತು ಅಸತಿ ಫಲಕಾಮಿತ್ವಮಾತ್ರೇಣ ಇತಿ ನ ಶಕ್ಯಂ ಕಲ್ಪಯಿತುಮ್ [1] । ತಸ್ಮಾತ್ [2] ನ ನಿತ್ಯಾನಾಂ ಕರ್ಮಣಾಮ್ ಅದೃಷ್ಟಫಲಾಭಾವಃ ಕದಾಚಿದಪಿ ಉಪಪದ್ಯತೇ ॥

(ಭಾಷ್ಯಾರ್ಥ)

ಮತ್ತೊಂದು (ವಿಷಯವೇನೆಂದರೆ), ಶಾಸ್ತ್ರದಲ್ಲಿ ವಿಧಿಸದೆಯೂ ಪ್ರತಿಷೇಧ ಮಾಡದೆಯೂ (ಇರುವ) ಕರ್ಮಕ್ಕೆ ಆ ಕಾಲದಲ್ಲಿಯೇ ಫಲ(ವುಂಟಾಗುವದೇ) ಹೊರತು ಶಾಸ್ತ್ರದಲ್ಲಿ ವಿಹಿತವಾಗಿರುವ ಅಥವಾ ಪ್ರತಿಷಿದ್ಧವಾಗಿರುವ (ಕರ್ಮಕ್ಕೆ) ಆ ಕಾಲದಲ್ಲಿಯೇ ಫಲವುಂಟಾಗಲಾರದು. ಹಾಗೆ (ಉಂಟಾಗುವದಾದರೆ) ಸ್ವರ್ಗಾದಿಗಳಲ್ಲಿಯೂ ಅದೃಷ್ಟಫಲ (ವುಂಟಾಗುವದೆಂಬ) ಆಶೆಯಿಂದ (ಜನರು) ಉದ್ಯೋಗ ಮಾಡದೆ (ಹೋಗಬೇಕಾ) ದೀತು. (ಎಲ್ಲವೂ) ಕರ್ಮದ ಸ್ವರೂಪ (ವುಳ್ಳದ್ದೆಂಬುದು) ಸಮಾನವಾಗಿದ್ದರೂ ಅಗ್ನಿಹೋತ್ರವೇ ಮುಂತಾದ ನಿತ್ಯಕರ್ಮವು ಮಾತ್ರ ಅದನ್ನು ಮಾಡಿದ ಆಯಾಸದ ದುಃಖಮಾತ್ರದಿಂದಲೇ ಕ್ಷಯವಾಗುವದೆಂತಲೂ ಅಂಗವೂ ಇತಿಕರ್ತವ್ಯತೆಯೂ ಹೆಚ್ಚಾಗಿಲ್ಲದಿದ್ದರೂ [3] ಕಾಮ್ಯಾದಿಗಳು (ಅಧಿಕಾರಿಯು) ಫಲವನ್ನು ಬಯಸುತ್ತಾನೆಂಬುದೊಂದರಿಂದಲೇ ಸ್ವರ್ಗವೇ ಮುಂತಾದ ಮಹಾಫಲ ವುಳ್ಳವಾಗಿರುವವೆಂತಲೂ ಕಲ್ಪಿಸುವದಕ್ಕೆ ಆಗಲಾರದು. ಆದ್ದರಿಂದ ನಿತ್ಯಕರ್ಮ ಗಳಿಗೆ ಅದೃಷ್ಟಫಲವು ಇಲ್ಲವೆಂಬುದು ಎಂದಿಗೂ ಯುಕ್ತವಾಗುವದಿಲ್ಲ.

---

1. "ನ ಶಕ್ಯಂ ಕಲ್ಪಯಿತುಂ'' ಎಂಬುದು ನಿ॥ ಗು॥ಗಳಲ್ಲಿ ಮಾತ್ರ ಇದೆ ; ಇರುವದು ಅವಶ್ಯ.

2. 'ತಸ್ಮಾಚ್ಚ' ಮು॥ಮೈ॥

3. ಅಂಗವೆಂದರೆ ಮುಖ್ಯಕರ್ಮಕ್ಕಾಗಿ ಮಾಡಬೇಕಾಗಿರುವ ಒಳಗಿನ ಕರ್ಮ; ಇತಿ ಕರ್ತವ್ಯತೆ ಎಂದರೆ ಹೀಗೆಹೀಗೆ ಮಾಡಬೇಕೆನ್ನುವ ಕ್ರಮ.

4. ಈ ಮಾತು ಇಲ್ಲಿರಬೇಕೆಂದು ತೋರುತ್ತದೆ.

# ಕರ್ಮವು ಆವಿದ್ಯಕವಾಗಿರುವದರಿಂದ ಜ್ಞಾನದಿಂದಲೇ ನಾಶವಾಗುತ್ತದೆ

(ಭಾಷ್ಯ)

೫೯೫. ಅತಶ್ಚ ಅವಿದ್ಯಾಪೂರ್ವಕಸ್ಯ ಕರ್ಮಣಃ ವಿದ್ಯೈವ ಶುಭಸ್ಯ ಅಶುಭಸ್ಯ ವಾ ಕ್ಷಯಕಾರಣಮ್ ಅಶೇಷತಃ, ನ ನಿತ್ಯಕರ್ಮಾನುಷ್ಠಾನಮ್। ಅವಿದ್ಯಾಕಾಮಬೀಜಂ ಹಿ ಸರ್ವಮೇವ ಕರ್ಮ। ತಥಾ ಚ[1] ಉಪಪಾದಿತಮ್ ಅವಿದ್ವದ್ವಿಷಯಂ ಕರ್ಮ। ವಿದ್ವದ್ವಿಷಯಾ ಚ ಸರ್ವಕರ್ಮಸಂನ್ಯಾಸಪೂರ್ವಿಕಾ ಜ್ಞಾನನಿಷ್ಠಾ (ಇತಿ)[1] "ಉಭೌ ತೌ ನ ವಿಜಾನೀತಃ" (೨-೧೯) "ವೇದಾವಿನಾಶಿನಂ ನಿತ್ಯಮ್" (೨-೨೧), "ಜ್ಞಾನಯೋಗೇನ ಸಾಙ್ಖ್ಯಾನಾಂ ಕರ್ಮಯೋಗೇನ ಯೋಗಿನಾಮ್" (೩-೩) "ಅಜ್ಞಾನಾಂ ಕರ್ಮಸಙ್ಗಿನಾಮ್"(೩-೨೬), "ತತ್ತ್ವವಿತ್ತು ಗುಣಾ ಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ" * (೩-೨೮), "ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ" (೫-೧೩), "ನೈವ ಕಿಂಚಿತ್ ಕರೋಮಿತಿ ಯುಕ್ತೋ ಮನ್ಯೇತ ತತ್ತ್ವವಿತ್" (೫-೮), ಅರ್ಥಾತ್ ಅಜ್ಞಃ ಕರೋಮೀತಿ "ಆರುರುಕ್ಷೋಃ ಕರ್ಮ ಕಾರಣಮ್ ಆರೂಢಸ್ಯ[2] ಯೋಗಸ್ಥಸ್ಯ ಶಮ ಏವ ಕಾರಣಮ್" * (೬-೩), ಉದಾರಾಸ್ತ್ರಯೋಽಪ್ಯಜ್ಞಾಃ, ಜ್ಞಾನೀ ತ್ವಾತ್ಮೈವ ಮೇ ಮತಮ್" * (೭-೧೮), ಅಜ್ಞಾಃ ಕರ್ಮಿಣಃ ಗತಾಗತಂ ಕಾಮಕಾಮಾ ಲಭನ್ತೇ"[3] (೯-೨೧), "ಅನನ್ಯಾಶ್ಚಿನ್ತಯನ್ತೋ ಮಾಂ ನಿತ್ಯಯುಕ್ತಾ ಯಥೋಕ್ತಮಾತ್ಮಾನಮ್ ಆಕಾಶಕಲ್ಪಮಕಲ್ಮಷ[3]ಮುಪಾಸತೇ" (೯-೨೨)* "ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ" (೧೦-೧೦), ಅರ್ಥಾನ್ನ ಕರ್ಮಿಣೋಽಜ್ಞಾ ಉಪಯಾನ್ತಿ। ಭಗವತ್ಕರ್ಮಕಾರಿಣಃ ಯೇ ಯುಕ್ತತಮಾ ಅಪಿ ಕರ್ಮಿಣಃ ಅಜ್ಞಾಃ, ತೇ ಉತ್ತರೋತ್ತರಹೀನಫಲತ್ಯಾಗಾವಸಾನ ಸಾಧನಾಃ। ಅನಿರ್ದೇಶ್ಯಾಕ್ಷರೋಪಾಸಕಾಸ್ತು "ಅದ್ವೇಷ್ಟಾ ಸರ್ವಭೂತಾನಾಮ್" (೧೨-೧೩) ಇತಿ ಆ ಅಧ್ಯಾಯಪರಿಸಮಾಪ್ತಿ ಉಕ್ತಸಾಧನಾಃ ಕ್ಷೇತ್ರಾಧ್ಯಾಯಾದ್ಯಧ್ಯಾಯತ್ರಯೋಕ್ತಜ್ಞಾನಸಾಧನಾಶ್ಚ। ಅಧಿಷ್ಠಾನಾಧಿಪಞ್ಚಹೇತುಕಸರ್ವಕರ್ಮ

---

1. ಮ|| ಮೈ|| ಗಳಲ್ಲಿಲ್ಲ
2. 'ಯೋಗಾರೂಢಸ್ಯ' ಮ||
3. 'ಅಕಲ್ಮಷಮ್' ಎಂಬ ಮಾತು ಮ|| ಮೈ|| ಗಳಲ್ಲಿಲ್ಲ.

* ನಕ್ಷತ್ರಚಿಹ್ನೆ ಹಾಕಿರುವ ವಾಕ್ಯಗಳು ಆಯಾ ಶ್ಲೋಕಗಳ ಅರ್ಥ ಮಾತ್ರವಾಗಿದೆ.

ಸಂನ್ಯಾಸಿನಾಮ್ ಆತ್ಮೈಕತ್ವಾಕರ್ತೃತ್ವಜ್ಞಾನವತಾಂ ಪರಸ್ಯಾಂ ಜ್ಞಾನನಿಷ್ಠಾಯಾಂ ವರ್ತಮಾನಾನಾಂ ಭಗವತ್ತತ್ತ್ವವಿದಾಮ್ ಅನಿಷ್ಟಾದಿಕರ್ಮಫಲತ್ರಯಂ ಪರಮಹಂಸಪರಿವ್ರಾಜಕಾನಾಮೇವ ಲಬ್ಧಭಗವತ್ಸ್ವರೂಪಾತ್ಮೈಕತ್ವಶರಣಾನಾಂ ನ ಭವತಿ ಭವತ್ಯೇವ ಅನ್ಯೇಷಾಮ್ ಅಜ್ಞಾನಾಂ ಕರ್ಮಿಣಾಮ್ ಅಸಂನ್ಯಾಸಿನಾಮ್,*ಇತ್ಯೇಷ ಗೀತಾಶಾಸ್ತ್ರೋಕ್ತಸ್ಯ[1] ಕರ್ತವ್ಯಾಕರ್ತವ್ಯಾರ್ಥಸ್ಯ ವಿಭಾಗಃ ॥

(ಭಾಷ್ಯಾರ್ಥ)

ಆದ್ದರಿಂದಲೂ ಅವಿದ್ಯೆಯಿಂದುಂಟಾಗಿರುವ ಕರ್ಮವು ಒಳ್ಳೆಯದಾಗಿರಲಿ, ಕೆಟ್ಟದ್ದಾಗಿರಲಿ (ಅದಕ್ಕೆ) ವಿದ್ಯೆಯೇ ಸ್ವಲ್ಪವೂ ಉಳಿಯದಂತೆ[2] ನಾಶಪಡಿಸುವ ಕಾರಣವಾಗುವದೇ ಹೊರತು (ಬರಿಯ) ನಿತ್ಯಕರ್ಮಗಳನ್ನು ಮಾಡುವದು (ಕಾರಣ) ವಾಗಲಾರದು.[3] **ಯಾವ ಕರ್ಮವೇ ಆಗಲಿ ಅವಿದ್ಯಾಕಾಮಗಳೆಂಬ ಬೀಜದಿಂದ ಆಗಿರುತ್ತದೆ.** ಆದ್ದರಿಂದಲೇ ಕರ್ಮವು ಅಜ್ಞಾನಿಗಳ ವಿಷಯವೆಂದೂ ಸರ್ವಕರ್ಮಸಂನ್ಯಾಸಪೂರ್ವಕವಾದ ಜ್ಞಾನನಿಷ್ಠೆಯು ಜ್ಞಾನಿಗಳ ವಿಷಯವೆಂದೂ (ಹಿಂದೆ) ತೋರಿಸಿಕೊಟ್ಟಿರುತ್ತದೆ. "ಅವರಿಬ್ಬರೂ ಅರಿಯರು" (೨-೧೯) "(ಈತನು) ಅವಿನಾಶಿಯೆಂದೂ ನಿತ್ಯನೆಂದೂ (ಯಾವನು) ಅರಿತುಕೊಳ್ಳುವನೋ" (೨-೨೧) "ಸಾಂಖ್ಯರಿಗೆ ಜ್ಞಾನಯೋಗದಿಂದ (ಆಗುವ ನಿಷ್ಠೆ), ಯೋಗಿಗಳಿಗೆ ಕರ್ಮಯೋಗದಿಂದ (ಆಗುವ ನಿಷ್ಠೆ)" (೩-೩), "ಕರ್ಮದಲ್ಲಿ ಸಂಗವುಳ್ಳ ಅಜ್ಞರಿಗೆ (ಬುದ್ಧಿಭೇದವನ್ನು ಮಾಡಬಾರದು)" (೩-೨೬) "ಆದರೆ ತತ್ತ್ವವನ್ನು ಅರಿತವನು ಗುಣಗಳು ಗುಣಗಳಲ್ಲಿ ಪ್ರವರ್ತಿಸುವವೆಂದು ತಿಳಿದು ಸಕ್ತನಾಗದೆ ಇರುತ್ತಾನೆ" (೩-೨೮), "ಸರ್ವಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ ಕುಳಿತಿರುವನು" (೫-೧೩) "ತತ್ತ್ವವನ್ನು ಬಲ್ಲವನು (ನಾನು) ಏನೂ ಮಾಡುತ್ತಿಲ್ಲ ಎಂದು ತಿಳಿದಿರುವನು" (೫-೮). ಅರ್ಥವಶದಿಂದ ಅಜ್ಞನು ಮಾಡುತ್ತೇನೆಂದು (ತಿಳಿದಿರುತ್ತಾನೆ ಎಂದಂತಾಯಿತು); "ಆರುರುಕ್ಷುವಾದವನಿಗೆ ಕರ್ಮವು ಕಾರಣವು, ಆರೂಢನಾಗಿ ಯೋಗದಲ್ಲಿರುವವನಿಗೆ ಶಮವೇ ಕಾರಣವು" (೬-೩), "ಅಜ್ಞರಾದ ಮೂವರೂ ಉದಾರರೇ, ಆದರೆ ಜ್ಞಾನಿಯು ನನ್ನ ಆತ್ಮನೇ ಎಂದು ನನ್ನ ಮತವು" (೭-೧೮), ಅಜ್ಞರಾದ ಕರ್ಮಿಗಳು "ಕಾಮಕಾಮರಾದ್ದರಿಂದ ಹೋಗೀಬಂದೂ ಮಾಡುವ (ಗತಿಯನ್ನು) ಪಡೆಯುತ್ತಾರೆ" (೯-೨೧) "ಅನನ್ಯರಾಗಿ ನನ್ನನ್ನೇ ಚಿಂತಿಸುತ್ತಿರುವ ನಿತ್ಯ

1. 'ಗೀತಾಶಾಸ್ತ್ರೋಕ್ತಕರ್ತವ್ಯಾಕರ್ತವ್ಯ' ಮ|| ಮೈ|| ವಾ||
2. ಫಲೋಪಭೋಗದಿಂದಾಗಲಿ, ಪ್ರಾಯಶ್ಚಿತ್ತದಿಂದಾಗಲಿ ಕರ್ಮವು ಹೋದರೂ ಸ್ವಲ್ಪವೂ ಉಳಿಯಿದಂತೆ ಹೋಗುವದಿಲ್ಲ.
3. ಏಕೆಂದರೆ ನಿತ್ಯಕರ್ಮಕ್ಕೂ ಅದೃಷ್ಟಫಲವುಂಟು.

ಯುಕ್ತರು ಆಕಾಶದಂತೆ ಅಕಲ್ಮಷನಾಗಿರುವ ನನ್ನನ್ನೇ ಉಪಾಸನೆಮಾಡುತ್ತಾರೆ" (೯-೨೨), "ಅವರಿಗೆ ಆ ಬುದ್ಧಿಯೋಗವನ್ನು ಕೊಡುವೆನು, ಅದರಿಂದ ಅವರು ನನ್ನನ್ನು ಹೊಂದುವರು " (೧೮-೧೭). "(ಆದ್ದರಿಂದ)ಕರ್ಮಿಗಳಾದ ಅಜ್ಞರು (ಭಗವಂತನನ್ನು) ಸೇರುವದಿಲ್ಲ(ವೆಂದು ಹೇಳಿದಂತಾಯಿತು)." ಭಗವತ್ಕರ್ಮವನ್ನು ಮಾಡುವ, ಯುಕ್ತತಮರಾದರೂ ಅಜ್ಞರಾದ ಕರ್ಮಿಗಳಿರುವರಲ್ಲ, ಅವರು ಮುಂದುಮುಂದಕ್ಕೆ (ಒಂದಕ್ಕಿಂತ ಒಂದು)ಕಡಿಮೆಯ ಫಲವುಳ್ಳ ತ್ಯಾಗಾಂತವಾದ ಸಾಧನವುಳ್ಳವರು (೧೨-೨, ೧೨-೮ ರಿಂದ ೧೨); ಆದರೆ ಅನಿರ್ದೇಶ್ಯವಾದ ಅಕ್ಷರವನ್ನು ಉಪಾಸನೆಮಾಡುವವರು '' ಯಾವ ಭೂತಗಳನ್ನೂ ದ್ವೇಷಿಸದೆ '' (೧೨-೧೩) ಎಂಬುದರಿಂದ ಹಿಡಿದು (ಆ) ಅಧ್ಯಾಯವು ಮುಗಿಯುವವರೆಗೂ ಹೇಳಿರುವ ಸಾಧನವುಳ್ಳವರು, ಮತ್ತು ಕ್ಷೇತ್ರಾಧ್ಯಾಯವೇ ಮೊದಲಾದ ಮೂರು ಅಧ್ಯಾಯಗಳಲ್ಲಿ ಹೇಳಿರುವ ಸಾಧನವುಳ್ಳವರು.[1] ಅಧಿಷ್ಠಾನವೇ ಮುಂತಾದ ಐದು ಕಾರಣಗಳಿಂದಾಗಿರುವ ಸರ್ವಕರ್ಮಗಳನ್ನೂ ಸಂನ್ಯಾಸಮಾಡಿ ಆತ್ಮನು ಒಬ್ಬನೇ, (ಅವನು) ಅಕರ್ತೃ-ಎಂಬ ಜ್ಞಾನವನ್ನು ಹೊಂದಿ ಹೆಚ್ಚಿನ ಜ್ಞಾನನಿಷ್ಠೆಯಲ್ಲಿಯೇ ಇದ್ದುಕೊಂಡು, ಭಗವಂತನ ತತ್ತ್ವವನ್ನು ಅರಿತುಕೊಂಡು ಪರಮಹಂಸಪರಿವ್ರಾಜಕರಾಗಿ ಭಗವಂತನ ಸ್ವರೂಪವಾಗಿರುವ ತಮ್ಮ ಆತ್ಮನ ಏಕತ್ವವನ್ನು ಶರಣುಹೊಂದಿರುವವರಿಗೆ ಮಾತ್ರ ಅನಿಷ್ಟವೇ ಮುಂತಾದ ಮೂರು ಬಗೆಯ ಕರ್ಮಫಲವು ಆಗುವದಿಲ್ಲ, ಮಿಕ್ಕ ಅಜ್ಞರಾದ ಸಂನ್ಯಾಸಿಗಳಲ್ಲದ ಕರ್ಮಿಗಳಿಗೆ ಆಗಿಯೇ ತೀರುತ್ತದೆ (೧೮-೧೨, ೧೪, ೪೯, ೫೦, ೫೪, ೫೫). ಹೀಗೆಂಬ ಇದೇ ಗೀತಾಶಾಸ್ತ್ರದಲ್ಲಿ ಹೇಳಿರುವ ಕರ್ತವ್ಯಾಕರ್ತವ್ಯದ ವಿಂಗಡವು.[2]

## ಕರ್ತೃತ್ವವು ಅವಿದ್ಯಕ, ಗೌಣವಲ್ಲ

೫೯೬. ಅವಿದ್ಯಾಪೂರ್ವಕತ್ವಂ ಸರ್ವಸ್ಯ ಕರ್ಮಣಃ ಅಸಿದ್ಧಮ್ ಇತಿ ಚೇತ್ । ನ । ಬ್ರಹ್ಮಹತ್ಯಾದಿವತ್[3] । ಯದ್ಯಪಿ ಶಾಸ್ತ್ರಾವಗತಂ ನಿತ್ಯಂ ಕರ್ಮ ತಥಾಪಿ

---

1. ಹದಿಮೂರನೆಯ ಅಧ್ಯಾಯದಲ್ಲಿ ಹೇಳಿರುವ ಅಮಾನಿತ್ವಾದಿಗಳು, ಹದಿನಾಲ್ಕನೆಯ ಅಧ್ಯಾಯದಲ್ಲಿ ಹೇಳಿರುವ ಗುಣಾತೀತನಾಗುವ ಸಾಧನಗಳು, ಹದಿನೈದನೆಯ ಅಧ್ಯಾಯದಲ್ಲಿ ಹೇಳಿರುವ ಅಸಂಗತ್ವನಿರ್ಮಾನಮೋಹತ್ವಾದಿ ಸಾಧನಗಳು—ಇವೆಲ್ಲ ಅಕ್ಷರೋಪಾಸಕರಿಗೆ ಹೇಳಿದವು.

2. ಅಜ್ಞರಿಗೆ ಕರ್ಮ, ಆತ್ಮಜ್ಞಾನಿಗಳಿಗೆ ಜ್ಞಾನನಿಷ್ಠೆ—ಎಂಬುದೇ ವಿಂಗಡ.

3. ಇಲ್ಲಿ ಒಂದು ಹೇತುವಚನವು ಬಿಟ್ಟುಹೋಗಿದೆ ಎಂದು ತೋರುತ್ತದೆ.

ಅವಿದ್ಯಾವತ ಏವ ಭವತಿ । ಯಥಾ ಪ್ರತಿಷೇಧಶಾಸ್ತ್ರಾವಗತಮಪಿ ಬ್ರಹ್ಮಹತ್ಯಾದಿ ಲಕ್ಷಣಂ ಕರ್ಮ ಅನರ್ಥಕಾರಣಮ್ ಅವಿದ್ಯಾಕಾಮಾದಿದೋಷವತೋ ಭವತಿ । ಅನ್ಯಥಾ ಪ್ರವೃತ್ತ್ಯನುಪಪತ್ತೇಃ ತಥಾ ನಿತ್ಯನೈಮಿತ್ತಿಕಕಾಮ್ಯಾನ್ಯಪಿ ಇತಿ । ದೇಹವ್ಯತಿರಿಕ್ತಾತ್ಮನಿ ಅಜ್ಞಾತೇ ಪ್ರವೃತ್ತಿರ್ನಿತ್ಯಾದಿಕರ್ಮಸು ಅನುಪಪನ್ನಾ ಇತಿ ಚೇತ್ । ನ । ಚಲನಾತ್ಮಕಸ್ಯ ಕರ್ಮಣಃ ಅನಾತ್ಮಕರ್ತೃಕಸ್ಯ ' ಅಹಂ ಕರೋಮಿ ' ಇತಿ ಪ್ರವೃತ್ತಿ ದರ್ಶನಾತ್ ॥

(ಭಾಷ್ಯಾರ್ಥ)

(ಆಕ್ಷೇಪ) :—ಕರ್ಮವೆಲ್ಲವೂ ಅವಿದ್ಯೆಯಿಂದಲೇ (ಆಗಿರುವದೆಂಬುದು) ಸಿದ್ಧ ವಾಗಿರುವದಿಲ್ಲ.[1]

(ಪರಿಹಾರ) :—ಹಾಗಲ್ಲ. ಬ್ರಹ್ಮಹತ್ಯವೇ ಮುಂತಾದವುಗಳಂತೆ (ಎಲ್ಲವೂ ಅವಿದ್ಯಕವಾಗಿರಬಹುದಾಗಿದೆ). ನಿತ್ಯಕರ್ಮವು ಶಾಸ್ತ್ರದಿಂದಲೇ ತಿಳಿದುಬರತಕ್ಕದ್ದೆಂಬುದು (ನಿಜ) ವೇ ; ಆದರೂ (ಅದೂ) ಅವಿದ್ಯಾವಂತನಿಗೇ ಆಗಿರುತ್ತದೆ. ಹೇಗೆ ಪ್ರತಿಷೇಧಶಾಸ್ತ್ರದಿಂದ ತಿಳಿಯಬಂದಿರುವದಾದರೂ ಬ್ರಹ್ಮಹತ್ಯೆಯೇ ಮುಂತಾದ ಕರ್ಮವು ಅನರ್ಥಕಾರಕವಾಗಿರುವದರಿಂದ ಅವಿದ್ಯೆ, ಕಾಮ–ಮುಂತಾದ ದೋಷ ಗಳುಳ್ಳವನಿಗೇ ಆಗುವದೋ ಹಾಗಿಲ್ಲದಿದ್ದರೆ (ಅದರಲ್ಲಿ ಜನರು) ತೊಡಗುವದೆಂಬುದು ಹೊಂದಲಾರದೋ ಅದರಂತೆಯೇ ನಿತ್ಯ, ನೈಮಿತ್ತಿಕ, ಕಾಮ್ಯ (ಎಂಬ ಕರ್ಮಗಳೂ) ಅವಿದ್ಯಾದೋಷವುಳ್ಳವರಿಗೇ ಆಗುತ್ತವೆ).[2]

(ಆಕ್ಷೇಪ) :—ದೇಹಕ್ಕಿಂತ ಬೇರೆಯಾದ ಆತ್ಮನನ್ನು ಅರಿತುಕೊಳ್ಳದೆ ಇದ್ದರೆ ನಿತ್ಯವೇ ಮುಂತಾದ ಕರ್ಮಗಳಲ್ಲಿ ತೊಡಗುವದು ಹೊಂದುವಹಾಗಿಲ್ಲವಲ್ಲ ![3]

(ಪರಿಹಾರ) :—ಹಾಗಲ್ಲ. ಚಲನರೂಪವಾದ ಕರ್ಮವು ಅನಾತ್ಮಕರ್ತೃಕ[4] ವಾಗಿದ್ದರೂ ' ನಾನು ಮಾಡುತ್ತಿದೇನೆ ' ಎಂದು ತೊಡಗುವದು ಕಂಡುಬಂದಿದೆ.

---

1. ಅಶಾಸ್ತ್ರೀಯವಾದ ಕರ್ಮವು ಅವಿದ್ಯಕವಾಗಲಿ, ಶಾಸ್ತ್ರೋಕ್ತವಾದ ಕರ್ಮವು ಹೇಗೆ ಅವಿದ್ಯಕ ?_ಎಂದು ಆಕ್ಷೇಪ.

2. ದೋಷವಿಲ್ಲದೆ ಕರ್ಮದಲ್ಲಿ ತೊಡಗುವದಾಗಲಾರದೆಂಬುದೇ ಇಲ್ಲಿ ಹೇತು. ನಿತ್ಯಕರ್ಮವೂ ಅವಿದ್ಯಕವೆಂಬುದಕ್ಕೆ ಬೃ. ಭಾ. ೧-೩-೧ ನೋಡಿ.

3. ಲೋಕಾಂತರಕ್ಕೆ ಸಂಬಂಧಪಟ್ಟ ದೇಹವ್ಯತಿರಿಕ್ತನಾದ ಆತ್ಮನನ್ನು ಅರಿತುಕೊಂಡ ವನು ಅಜ್ಞಾನಿ ಹೇಗೆ ?

4. ದೇಹದ ಕರ್ಮವನ್ನು ತನ್ನದು ಎಂದು ತಿಳಿದುಕೊಂಡವನು ಅಜ್ಞಾನಿಯೆಂಬುದು ಸಿದ್ಧ. ದೇಹವ್ಯತಿರಿಕ್ತನಾದ ಅಹಂಪ್ರತ್ಯಯಗಮ್ಯನಾದ ಆತ್ಮನನ್ನು ತಿಳಿದುಕೊಂಡರೂ ಕೂಟಸ್ಥ ವಾದ ನಿರ್ವಿಶೇಷವಾದ ಬ್ರಹ್ಮವೆಂಬ ತನ್ನ ಆತ್ಮನನ್ನು ತಿಳಿಯದ್ದರಿಂದ ಅವನೂ ಅಜ್ಞಾನೇ ಎಂಬ ಯುಕ್ತಿಯನ್ನು ಸೇರಿಸಿಕೊಳ್ಳಬೇಕು.

(ಭಾಷ್ಯ)

೫೯೭. ದೇಹಾದಿಸಙ್ಘಾತೇ ಅಹಂಪ್ರತ್ಯಯೋ ಗೌಣಃ ನ ಮಿಥ್ಯಾ ಇತಿ ಚೇತ್ । ನ । ತತ್ಕಾರ್ಯೇಷ್ವಪಿ ಗೌಣತ್ವೋಪಪತ್ತೇಃ । ಆತ್ಮೀಯೇ ದೇಹಾದಿ ಸಙ್ಘಾತೇ ಅಹಂಪ್ರತ್ಯಯೋ ಗೌಣಃ। ಯಥಾ ಆತ್ಮೀಯೇ ಪುತ್ರೇ "ಆತ್ಮಾವೈ ಪುತ್ರ ನಾಮಾಸಿ" (ತೈ. ಆ. ೧೨-೧೧) ಇತಿ, ಲೋಕೇ ಚಾಪಿ "ಮಮ ಪ್ರಾಣ ಏವಾಯಂ ಗೌಃ" ಇತಿ, ತದ್ವತ್ । ನೈವಾಯಂ ಮಿಥ್ಯಾಪ್ರತ್ಯಯಃ। ಮಿಥ್ಯಾಪ್ರತ್ಯಯಸ್ತು ಸ್ಥಾಣುಪುರುಷಯೋಃ ಅಗೃಹ್ಯಮಾಣವಿಶೇಷಯೋಃ । ನ[1] ಗೌಣಪ್ರತ್ಯಯಸ್ಯ ಮುಖ್ಯಕಾರ್ಯಾರ್ಥತ್ವಮ್ । ಅಧಿಕರಣಸ್ತುತ್ಯರ್ಥತ್ವಾತ್ ಲುಪ್ತೋಪಮಾಶಬ್ದೇನ । ಯಥಾ 'ಸಿಂಹೋ ದೇವದತ್ತಃ' 'ಅಗ್ನಿರ್ಮಾಣವಕಃ' ಇತಿ ಸಿಂಹ ಇವ, ಅಗ್ನಿರಿವ, ಕ್ರೌರ್ಯಪೈಙ್ಗಲ್ಯಾದಿಸಾಮಾನ್ಯವತ್ತ್ವಾತ್[2] ದೇವದತ್ತಮಾಣವಕಾಧಿಕರಣ ಸ್ತುತ್ಯರ್ಥಮೇವ । ನ ತು ಸಿಂಹಕಾರ್ಯಮ್ ಅಗ್ನಿಕಾರ್ಯಂ ವಾ ಗೌಣಶಬ್ದ ಪ್ರತ್ಯಯನಿಮಿತ್ತಂ ಕಿಂಚಿತ್ ಸಾಧ್ಯತೇ । ಮಿಥ್ಯಾಪ್ರತ್ಯಯಕಾರ್ಯಂ ತು ಅನರ್ಥಮ್ ಅನುಭವತಿ ಇತಿ । ಗೌಣಪ್ರತ್ಯಯವಿಷಯಂ ಚ ಜಾನಾತಿ 'ನೈಷ ಸಿಂಹೋ ದೇವ ದತ್ತಃ',[3] 'ನಾಯಮಗ್ನಿರ್ಮಾಣವಕಃ'[4] ಇತಿ । ತಥಾ ಗೌಣೇನ ದೇಹಾದಿಸಙ್ಘಾತೇನ ಆತ್ಮನಾ ಕೃತಂ ಕರ್ಮ ನ ಮುಖ್ಯೇನ ಅಹಂಪ್ರತ್ಯಯವಿಷಯೇಣ ಆತ್ಮನಾ ಕೃತಂ ಸ್ಯಾತ್ । ನ ಹಿ ಗೌಣಸಿಂಹಾಗ್ನಿಭ್ಯಾಂ ಕೃತಂ ಕರ್ಮ ಮುಖ್ಯಸಿಂಹಾಗ್ನಿಭ್ಯಾಂ ಕೃತಂ ಸ್ಯಾತ್ । ನ ಚ ಕ್ರೌರ್ಯೇಣ ಪೈಙ್ಗಲ್ಯೇನ ವಾ ಮುಖ್ಯಸಿಂಹಾಗ್ನ್ಯೋಃ ಕಾರ್ಯಂ ಕಿಂಚಿತ್ ಕ್ರಿಯತೇ । ಸ್ತುತ್ಯರ್ಥತ್ವೇನ ಉಪಕ್ಷೀಣತ್ವಾತ್ । ಸ್ತೂಯಮಾನೌ ಚ ಜಾನೀತಃ 'ನಾಹಂ ಸಿಂಹಃ', 'ನಾಹಮ್ ಅಗ್ನಿಃ' ಇತಿ । 'ನ[5] ಸಿಂಹಸ್ಯ ಕರ್ಮ ಮಮ ಅಗ್ನೇಶ್ಚ' ಇತಿ । ತಥಾ ನ ಸಙ್ಘಾತಸ್ಯ ಕರ್ಮ ಮಮ ಮುಖ್ಯಸ್ಯ ಆತ್ಮನಃ ಇತಿ ಪ್ರತ್ಯಯೋ ಯುಕ್ತತರಃ ಸ್ಯಾತ್ । ನ ಪುನಃ 'ಅಹಂ ಕರ್ತಾ' 'ಮಮ ಕರ್ಮ' ಇತಿ ॥

(ಭಾಷ್ಯಾರ್ಥ)

(ಆಕ್ಷೇಪ):—ದೇಹವೇ ಮುಂತಾದವುಗಳ ಸಂಘಾತದಲ್ಲಿ ನಾನೆಂಬ ಅರಿವು ಗೌಣವೇ ಹೊರತು ಮಿಥ್ಯೆಯಲ್ಲ.

---

1. ಮ॥ ದಲ್ಲಿಲ್ಲ; ಇರಬೇಕು. 'ನ । ನ ಗೌಣಪ್ರತ್ಯಯಸ್ಯ ಮುಖ್ಯಕಾರ್ಯಾರ್ಥತ್ವಮ್' ಎಂದಿದ್ದರೆ ಇನ್ನೂ ಒಳ್ಳೆಯದು.

2. 'ಸಾಮಾನ್ಯಾತ್' ಮ॥ ಮೈ॥

3. 'ದೇವದತ್ತಃ ಸ್ಯಾತ್' ಆ॥

4. 'ನೈಷ ಸಿಂಹಃ' 'ನಾಯಮಗ್ನಿಃ' ಇತಿ–ಎಂದಿಷ್ಟೇ ಮ॥ ಮೈ॥

5. 'ನ ಹಿ' ಮ॥ ಮೈ॥

(ಪರಿಹಾರ):— ಹಾಗಲ್ಲ. (ಅದು ನಿಜವಾದರೆ) ಅದರ ಕಾರ್ಯಗಳೂ ಗೌಣವೆಂದಾಗಬೇಕಾಗುವದು.

(ಆಕ್ಷೇಪದ ವಿವರ):—ತನ್ನದಾಗಿರುವ[1] ದೇಹಾದಿಸಂಘಾತದಲ್ಲಿ ನಾನೆಂಬ ಅರಿವು (ಉಂಟಾಗುವದರಿಂದ ಅದು) ಗೌಣವು. "ನನ್ನ ಆತ್ಮನೇ ಪುತ್ರನೆಂಬುವನಾಗಿದ್ದೀಯೆ" (ತೈ. ಆ. ೧೨-೧೧). ಎಂದು (ವೈದಿಕಪ್ರಯೋಗವಿದೆಯಲ್ಲವೆ?) ಲೋಕದಲ್ಲಿಯೂ "ಈ ಎತ್ತು ನನ್ನ ಪ್ರಾಣವೇ" (ಎನ್ನುವದಿಲ್ಲವೆ?) ಹಾಗೆಯೇ (ಇದು). ಇದು ಮಿಥ್ಯಾಪ್ರತ್ಯಯವಲ್ಲವೇ ಅಲ್ಲ. ಮಿಥ್ಯಾಪ್ರತ್ಯಯವಾದರೋ (ಇದು ಇಂಥದ್ದೆಂದು) ವಿಶೇಷವು ಗೊತ್ತಾಗದೆ ಇರುವ ಮೋಟುಮರ, ಮನುಷ್ಯ[2]-(ಇವರ ವಿಷಯದಲ್ಲಿ ಆಗುತ್ತದೆ)

ಹಾಗಲ್ಲ[3]. ಗೌಣಪ್ರತ್ಯಯವು ಮುಖ್ಯಕಾರ್ಯವೆಂಬ ಪ್ರಯೋಜನವುಳ್ಳದ್ದಾಗಿರುವದಿಲ್ಲ. ಏಕೆಂದರೆ (ಗೌಣಪ್ರತ್ಯಯವನ್ನು ತಿಳಿಸುವ ವಾಕ್ಯದಲ್ಲಿ) ಉಪಮಾನವನ್ನು ಹೇಳುವ ಮಾತು ಲೋಪವಾಗಿರುವದರಿಂದ (ಅದು) ಆಯಾ ಆಶ್ರಯ (ವಾದ ವಿಷಯವನ್ನು) ಹೊಗಳುವದಕ್ಕೆ ಬಂದಿರುತ್ತದೆ. ಹೇಗೆಂದರೆ 'ದೇವದತ್ತನು ಸಿಂಹವು', 'ಈ ಹುಡುಗನು ಅಗ್ನಿಯು' ಎಂಬುದು ಸಿಂಹದಂತೆ, ಬೆಂಕಿಯಂತೆ ಕ್ರೂರನಾಗಿರುವದು, ಹಳದಿಯಾಗಿರುವದು-ಮುಂತಾದ ಹೋಲಿಕೆಯಿಂದ ದೇವದತ್ತ, ಹುಡುಗ (ಎಂಬ ಉಪಮೇಯ) ವಿಷಯವನ್ನು ಹೊಗಳುವದಕ್ಕೇ (ಬಂದಿರುತ್ತದೆಯೇ) ಹೊರತು ಸಿಂಹದ ಕಾರ್ಯವಾಗಲಿ ಬೆಂಕಿಯ ಕಾರ್ಯವಾಗಲಿ ಯಾವದೊಂದೂ ಗೌಣಶಬ್ದಪ್ರತ್ಯಯಗಳ ಕಾರಣದಿಂದ ಆಗುವದಿಲ್ಲ. ಆದರೆ ಮಿಥ್ಯಾಪ್ರತ್ಯಯದ ಕಾರ್ಯವಾದ ಅನರ್ಥವನ್ನಾದರೋ (ಸ್ಫುಟವಾಗಿ) ಅನುಭವಿಸುತ್ತಿರುತ್ತಾರೆ.[4] (ಇದಲ್ಲದೆ) ಗೌಣಪ್ರತ್ಯಯಕ್ಕೆ ವಿಷಯವಾಗಿರುವ (ಪದಾರ್ಥದ

---

1. ತನ್ನದನ್ನು ತಾನೆಂದು ಬಗೆಯುವದೂ, ಕರೆಯುವದೂ ಗೌಣವು.

2. ಇಲ್ಲಿ 'ಅಗೃಹ್ಯಮಾಣವಿಶೇಷಯೋಃ' ಆದಮೇಲೆ ಇತಿ ಎಂದಿದ್ದರೆ ಪೂರ್ವಪಕ್ಷವು ಇಲ್ಲಿಗೆ ಮುಗಿಯಿತೆಂದು ಸ್ಪಷ್ಟವಾಗಿ ತಿಳಿಯುಬರುತ್ತಿತ್ತು. ಅಥವಾ "ನ | ನ ಗೌಣಪ್ರತ್ಯಯಸ್ಯ'' ಎಂದಾದರೂ ಇದ್ದಿದ್ದರೆ ಸಿದ್ಧಾಂತವು ಪ್ರಾರಂಭವಾಯಿತೆಂದು ಸ್ಪಷ್ಟವಾಗಿ ತಿಳಿಯುತ್ತಿತ್ತು.

3. ಇಲ್ಲಿ 'ನ । ನ ಗೌಣಪ್ರತ್ಯಯಸ್ಯ' ಎಂದಿದ್ದರೆ ಹೇಗೋ ಹಾಗೆ ಕನ್ನಡಿಸಿದೆ.

4. ದಾರ್ಷ್ಟಾಂತಿಕದಲ್ಲಿ ಅನರ್ಥದ ಅನುಭವವಿರುವದರಿಂದ ಅಲ್ಲಿ ಗೌಣತ್ವವನ್ನು ಕಲ್ಪಿಸುವದು ಯುಕ್ತವಲ್ಲ ಎಂದು ಭಾವ.

ಸ್ವರೂಪ)ವನ್ನೂ 'ಈ ದೇವದತ್ತನು ಸಿಂಹವಲ್ಲ', 'ಈ ಹುಡುಗನು ಬೆಂಕಿಯಲ್ಲ' ಎಂದು ತಿಳಿದುಕೊಂಡು ಇರುತ್ತಾರೆ.[1] ಹಾಗೆ ದೇಹಾದಿಸಂಘಾತವೆಂಬ ಗೌಣ ಆತ್ಮನು ಮಾಡಿದ ಕರ್ಮವು ಮುಖ್ಯನಾದ ಆ ಅಹಂಪ್ರತ್ಯಯವಿಷಯನಾದ ಆತ್ಮನು[2] ಮಾಡಿದ್ದು ಆಗಲಾರದು. ಗೌಣವಾದ ಸಿಂಹ, ಬೆಂಕಿ ಇವುಗಳು ಮಾಡಿದ ಕರ್ಮವು ಮುಖ್ಯವಾದ ಸಿಂಹಬೆಂಕಿಗಳು ಮಾಡಿದ್ದಾಗಲಾರದಷ್ಟೆ. ಕ್ರೌರ್ಯದಿಂದಲಾಗಲಿ ಹಳದಿ ಬಣ್ಣದಿಂದಲಾಗಲಿ ಮುಖ್ಯ ಸಿಂಹಾಗ್ನಿಗಳ ಕಾರ್ಯವು ಯಾವದೂ ಆಗುವದೂ ಇಲ್ಲ; ಏಕೆಂದರೆ (ಆ ಸಿಂಹಾಗ್ನಿಶಬ್ದಗಳು) ಹೊಗಳುವದರಲ್ಲಿಯೇ ಕೊನೆಗಂಡಿರುತ್ತವೆ. ಹೊಗಳಿಸಿಕೊಳ್ಳುವವರಿಗೂ 'ನಾನು ಸಿಂಹವಲ್ಲ', 'ನಾನು ಅಗ್ನಿಯಲ್ಲ' 'ಸಿಂಹದ ಕರ್ಮವು ನನ್ನದಲ್ಲ', 'ಬೆಂಕಿಯ ಕರ್ಮವು ನನ್ನದಲ್ಲ' ಎಂದು ತಿಳಿದಿರುತ್ತದೆ. ಇದರಂತೆಯೇ (ದೇಹಾದಿಗಳಲ್ಲಿ ನಾನೆಂಬ ಅರಿವು ಗೌಣವಾದರೆ) "ಸಂಘಾತದ ಕರ್ಮವು ಮುಖ್ಯಾತ್ಮನಾದ ನನ್ನದಲ್ಲ ಎಂಬ ಅರಿವು (ಉಂಟಾಗುವದು) ಹೆಚ್ಚು ಯುಕ್ತವಾದೀತೇ ಹೊರತು 'ನಾನು ಕರ್ತನು, ಕರ್ಮವು ನನ್ನದು' ಎಂಬ (ಅರಿವುಂಟಾಗುವದು ಯುಕ್ತ) ವಾಗಲಾರದು.

(ಭಾಷ್ಯ)

೫೯೮. ಯಚ್ಚ ಆಹುಃ ಆತ್ಮೀಯೈಃ ಸ್ಮೃತೀಚ್ಛಾಪ್ರಯತ್ನೈಃ ಕರ್ಮಹೇತುಭಿಃ ಆತ್ಮಾ ಕರ್ಮ ಕರೋತಿ ಇತಿ । (ತತ್)[3] ನ। ತೇಷಾಂ ಮಿಥ್ಯಾಪ್ರತ್ಯಯಪೂರ್ವಕತ್ವಾತ್ । ಮಿಥ್ಯಾಪ್ರತ್ಯಯನಿಮತ್ತೇಷ್ಟಾನಿಷ್ಟಾನುಭೂತಕ್ರಿಯಾಫಲಜನಿತಸಂಸ್ಕಾರಪೂರ್ವಿಕಾ ಹಿ ಸ್ಮೃತೀಚ್ಛಾಪ್ರಯತ್ನಾದಯಃ[4] । ಯಥಾ ಅಸ್ಮಿನ್ ಜನ್ಮನಿ ದೇಹಾದಿಸಙ್ಘಾತಾಭಿಮಾನರಾಗದ್ವೇಷಾದಿಕೃತೌ ಧರ್ಮಾಧರ್ಮೌ ತತ್ಫಲಾನುಭವಶ್ಚ ತಥಾ ಅತೀತೇ ಅತೀತತರೇಽಪಿ ಜನ್ಮನಿ ಇತಿ ಅನಾದಿಃ ಅವಿದ್ಯಾಕೃತಃ ಸಂಸಾರಃ ಅತೀತೋಽನಾಗತಶ್ಚ ಅನುಮೇಯಃ । ತತಶ್ಚ ಸರ್ವಕರ್ಮಸಂನ್ಯಾಸಸಹಿತಜ್ಞಾನನಿಷ್ಠಯಾ ಆತ್ಯನ್ತಿಕಃ ಸಂಸಾರೋಪರಮಃ ಇತಿ ಸಿದ್ಧಮ್ । ಅವಿದ್ಯಾತ್ಮಕತ್ವಾಚ್ಚ

---

1. ಆದರೆ ಪ್ರಕೃತದಲ್ಲಿ ದೇಹಾದಿಗಳೇ ತಾನೆಂದುಕೊಂಡಿರುವದೇ ಹೊರತು ನಾನು ದೇಹಾದಿಗಳಲ್ಲ, ಅವುಗಳ ಕರ್ಮವು ನನ್ನದಲ್ಲ ಎಂದೇನೂ ತಿಳಿದುಕೊಂಡಿರುವದಿಲ್ಲ.

2. ಸಿದ್ಧಾಂತದಲ್ಲಿ ಆತ್ಮನು ವಿಷಯಿಯೇ ಹೊರತು ವಿಷಯನಲ್ಲವಾದರೂ ಪೂರ್ವಪಕ್ಷಿಯ ಮತದಲ್ಲಿ ಅಹಂಪ್ರತ್ಯಯವಿಷಯನೆಂಬ ಕಾರಣದಿಂದ ಅಹಂಪ್ರತ್ಯಯವಿಷಯನಾದ ಆತ್ಮನನ್ನು ಮುಖ್ಯಾತ್ಮನೆಂದಿದೆ.

3. ಈ ಮಾತಿದ್ದರೆ ಒಳ್ಳೆಯದು.

4. 'ಸ್ಮೃತೀಚ್ಛಾಪ್ರಯತ್ನಾಃ' ಎಂದೋ 'ಸ್ಮೃತೀಚ್ಛಾದಯಃ' ಎಂದೋ ಇರಬೇಕೆಂದು ತೋರುತ್ತದೆ.

ದೇಹಾಭಿಮಾನಸ್ಯ ತನ್ನಿವೃತ್ತೌ ದೇಹಾನುಪಪತ್ತೇಃ ಸಂಸಾರಾನುಪಪತ್ತಿಃ । ದೇಹಾದಿ ಸಙ್ಘಾತೇ ಆತ್ಮಾಭಿಮಾನಃ ಅವಿದ್ಯಾತ್ಮಕಃ । ನ ಹಿ ಲೋಕೇ ಗವಾದಿಭ್ಯೋಽನ್ಯೋಽಹಮ್, ಮತ್ತಶ್ಚ ಅನ್ಯೇ ಗವಾದಯಃ' ಇತಿ ಜಾನನ್ ತಾನ್ ಅಹಮ್ ಇತಿ ಮನ್ಯತೇ ಕಶ್ಚಿತ್ । ಅಜಾನಂಸ್ತು ಸ್ಥಾಣೌ ಪುರುಷವಿಜ್ಞಾನವತ್ ಅವಿವೇಕತಃ ದೇಹಾದಿಸಙ್ಘಾತೇ ಕುರ್ಯಾತ್ ಅಹಮ್ ಇತಿ ಪ್ರತ್ಯಯಮ್ ನ ವಿವೇಕತೋ ಜಾನನ್ । ಯಸ್ತು "ಆತ್ಮಾ ವೈ ಪುತ್ರನಾಮಾಸಿ" (ತೈ. ಆ. ೧೨-೧೧) ಇತಿ ಪುತ್ರೇ ಅಹಂಪ್ರತ್ಯಯಃ ಸ ತು ಜನ್ಯಜನಕಸಮ್ಬನ್ಧನಿಮಿತ್ತೋ ಗೌಣಃ । ಗೌಣೇನ ಚ ಆತ್ಮನಾ ಭೋಜನಾದಿವತ್ ಪರಮಾರ್ಥಾತ್ಮಕಾರ್ಯಂ[1] ನ ಶಕ್ಯತೇ ಕರ್ತುಮ್ । ಗೌಣಸಿಂಹಾಗ್ನಿಭ್ಯಾಂ ಮುಖ್ಯಸಿಂಹಾಗ್ನಿಕಾರ್ಯವತ್ ॥

(ಭಾಷ್ಯಾರ್ಥ)

ಮತ್ತು ತನ್ನದಾಗಿರುವ ಸ್ಮೃತಿ, ಇಚ್ಛೆ, ಪ್ರಯತ್ನ-ಎಂಬ ಕರ್ಮಹೇತುಗಳಿಂದ ಆತ್ಮನು ಕರ್ಮವನ್ನು (ನಿಜವಾಗಿ) ಮಾಡುತ್ತಾನೆ ಎಂದು ಹೇಳುವರಲ್ಲ, ಅದು ಸರಿಯಲ್ಲ, ಏಕೆಂದರೆ ಅವು ಮಿಥ್ಯಾಪ್ರತ್ಯಯಪೂರ್ವಕವಾಗಿರುತ್ತವೆ. ಮಿಥ್ಯಾಪ್ರತ್ಯಯನಿಮಿತ್ತದಿಂದ ಬೇಕಾದ ಅಥವಾ ಬೇಕಿಲ್ಲದ ಕ್ರಿಯಾಫಲವನ್ನು ಅನುಭವಿಸಿದ್ದರಿಂದುಂಟಾದ ಸಂಸ್ಕಾರದಿಂದಲೇ ಅಲ್ಲವೆ, ಸ್ಮೃತಿ, ಇಚ್ಛೆ, ಪ್ರಯತ್ನ-ಇವುಗಳುಂಟಾಗುತ್ತವೆ? ಹೇಗೆ ಈ ಜನ್ಮದಲ್ಲಿ ದೇಹಾದಿಸಂಘಾತದಲ್ಲಿ (ತಾನೆಂಬ) ಅಭಿಮಾನ, ರಾಗದ್ವೇಷ-ಇವೇ ಮುಂತಾದವುಗಳಿಂದ ಧರ್ಮಾಧರ್ಮಗಳೂ ಅವುಗಳ ಫಲದ ಅನುಭವವೂ ಉಂಟಾಗುವವೋ ಹಾಗೇಯೇ (ಇದರ) ಹಿಂದಿನ ಮತ್ತು ಅದಕ್ಕೂ ಹಿಂದಿನ ಜನ್ಮದಲ್ಲಿಯೂ (ಆಗುವ)ವಾದ್ದರಿಂದ, ಅವಿದ್ಯಾಕೃತವಾದ ಸಂಸಾರವು ಹಿಂದಿನಿಂದಲೂ (ಬಂದಿದೆಯೆಂದೂ) ಮುಂದೆಯೂ ಬರುತ್ತಿರುವದೆಂದೂ ಅನುಮಾನದಿಂದ (ಊಹಿಸಬಹುದಾ)ಗಿದೆ.[2] ಆದ್ದರಿಂದಲೂ ಸರ್ವಕರ್ಮಸಂನ್ಯಾಸಸಹಿತವಾದ ಜ್ಞಾನನಿಷ್ಠೆಯಿಂದ ಸಂಸಾರವು ಅತ್ಯಂತವಾಗಿ ನಾಶವಾಗುತ್ತದೆ ಎಂದು ಏರ್ಪಡುತ್ತದೆ.

ದೇಹಾಭಿಮಾನವು ಅವಿದ್ಯಾತ್ಮಕವಾಗಿರುವದರಿಂದಲೂ[3] ಅದು

---

1. 'ಪರಮಾರ್ಥಕಾರ್ಯಂ' ಎಂಬ ಆ|| ನಿ|| ವಾ|| ಪಾಠಕ್ಕಿಂತ ಈ ಮು|| ಮೈ|| ಪಾಠವು ಮೇಲು.

2. ಕಾಲದಲ್ಲಿ ಅನಾದಿಯೂ ಅನಂತವೂ ಆಗಿದ್ದರೂ ಅವಿದ್ಯಾಕೃತವಾಗಿರುವದರಿಂದ ವಿದ್ಯೆಯಿಂದ ನಾಶವಾಗಬಹುದು ಎಂದು ಭಾವ.

3. ತಪ್ಪುತಿಳಿವಳಿಕೆಯಿಂದ ಆಗಿರುವದರಿಂದಲೂ ಎಂದರ್ಥ. ನಿಜವಾಗಿ ಶರೀರವೇ ಇಲ್ಲವೆಂದು ಶ್ರುತಿಯು ಹೇಳುತ್ತದೆ. ಸೂ.ಭಾ. ೧-೧-೪ನ್ನು ನೋಡಿ.

**ಹೋದರೆ ದೇಹವೇ ಇಲ್ಲವಾಗುವದರಿಂದ ಸಂಸಾರವು (ಮುಂದೆ) ಉಂಟಾಗಲಾರದು.** ದೇಹಾದಿಸಂಘಾತದಲ್ಲಿ ತಾನೆಂಬ ಅಭಿಮಾನವು ಅವಿದ್ಯಾತ್ಮಕವಾಗಿರುತ್ತದೆ. ಲೋಕದಲ್ಲಿ 'ನಾನು ಎತ್ತು ಮುಂತಾದವುಗಳಿಗಿಂತ ಬೇರೆ, ಮತ್ತು ಎತ್ತು ಮುಂತಾದವುಗಳು ನನಗಿಂತ ಬೇರೆ' ಎಂದು ಅರಿತುಕೊಂಡವನು ಯಾವನೂ ಅದನ್ನು ತಾನೆಂದು ಬಗೆಯಲಾರನಷ್ಟೆ. (ನಿಜವನ್ನು) ಅರಿಯದವನಾದರೆ ಮೋಟು ಮರವನ್ನು ಮನುಷ್ಯನೆಂದುಕೊಳ್ಳುವಂತೆ ವಿವೇಕವಿಲ್ಲದ್ದರಿಂದ ದೇಹಾದಿಗಳ ಸಂಘಾತದಲ್ಲಿ (ಅದೇ) ತಾನೆಂಬ ತಿಳಿವಳಿಕೆಯನ್ನು ಮಾಡಿಕೊಳ್ಳಬಹುದಾಗಿದೆ; ವಿಂಗಡಿಸಿ ಅರಿತುಕೊಂಡವನು (ಮಾಡಿಕೊಳ್ಳಲಾರನು.[1] ಇನ್ನು) "ಆತ್ಮನೇ ಪುತ್ರನೆಂಬವನಾಗಿರುವೆ" (ತೈ. ಆ. ೧೨-೧೧) ಎಂದು ಮಗನಲ್ಲಿ ನಾನೆಂದು ಆಗುವ ಅರಿವು ಇದೆಯಲ್ಲ, ಅದಾದರೋ ಜನ್ಯಜನಕಸಂಬಂಧನಿಮಿತ್ತದಿಂದ ಆಗಿರುವ ಗೌಣ (ಪ್ರತ್ಯಯ)ವು. ಗೌಣಾತ್ಮನಿಂದ ಮುಖ್ಯಾತ್ಮನ ಭೋಜನಾದಿಗಳಂಥ ಕಾರ್ಯವನ್ನು ಮಾಡುವದು ಆಗಲಾರದು.[2] ಗೌಣಸಿಂಹಾಗ್ನಿಗಳಿಂದ ಮುಖ್ಯಸಿಂಹಾಗ್ನಿಗಳ ಕಾರ್ಯ (ವನ್ನು ಹೇಗೆ ಮಾಡುವದು ಆಗಲಾರದೋ) ಹಾಗೆಯೇ (ಇದು).

(ಭಾಷ್ಯ)

೫೯. ಅದೃಷ್ಟವಿಷಯಚೋದನಾಪ್ರಾಮಣ್ಯಾತ್ ಆತ್ಮಕರ್ತವ್ಯಂ ಗೌಣದೇಹೇನ್ದ್ರಿಯಾದ್ಯಾತ್ಮಭಿಃ[3] ಕ್ರಿಯತೇ ಚ ಇತಿ ಚೇತ್ । ನ । ಅವಿದ್ಯಾಕೃತಾತ್ಮತ್ವಾತ್[4] ತೇಷಾಮ್ । ನ ಚ ಗೌಣಾ ಆತ್ಮಾನೋ[5] ದೇಹೇನ್ದ್ರಿಯಾದಯಃ ಕಿಂ ತರ್ಹಿ? ಮಿಥ್ಯಾಪ್ರತ್ಯಯೇನೈವ ಅನಾತ್ಮಾನಃ ಸನ್ತಃ ಆತ್ಮತ್ವಮ್ ಆಪದ್ಯನ್ತೇ[6] । ತದ್ಭಾವೇ ಭಾವಾತ್ ತದಭಾವೇ ಚ ಅಭಾವಾತ್ । ಅವಿವೇಕಿನಾಂ

---

1. 'ನ ವಿವೇಕತೋ ಜಾನನ್' ಎಂಬುದರ ಅರ್ಥವಿದು. ಈ ವಾಕ್ಯವು ಇಲ್ಲದಿದ್ದರೂ ಸಾಗುತ್ತಿತ್ತೆಂದು ತೋರುವದು.

2. ತಂದೆಗಾಗಿ ಮಗನು ಊಟಮಾಡಿ ತೃಪ್ತಿಯನ್ನು ತಂದುಕೊಡಲಾರನು.

3. 'ದೇಹೇನ್ದ್ರಿಯಾತ್ಮಭಿಃ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

4. 'ಅವಿದ್ಯಾಕೃತಾತ್ಮಕತ್ವಾತ್' ಎಂಬ ಆ|| ನಿ|| ಪಾಠಕ್ಕಿಂತ ಇದು ಮೇಲು.

5. 'ಆತ್ಮನಃ' ಎಂಬ ನಿ|| ಆ|| ಗು|| ವಾ|| ಪಾಠಕ್ಕಿಂತ ಈ ಮೈ|| ಪಾಠವು ಮೇಲು. 'ನ ಚ ಗೌಣಾತ್ಮನೋ' ಎಂಬ ಮ|| ಪಾಠವು ಅಚ್ಚಿನ ತಪ್ಪು.

6. 'ಅಸಙ್ಗಸ್ಯ ಆತ್ಮನಃ ಸಙ್ಗತ್ಯಾ ಆತ್ಮತ್ವಮ್ ಆಪಾದ್ಯನ್ತೇ' ಎಂಬ ನಿ|| ಗು|| ಪಾಠಕ್ಕಿಂತ ಇದೇ ಉತ್ತಮ. 'ಅನಾತ್ಮನಾಂ ಸತಾಮ್ ಆತ್ಮತ್ವಮ್ ಆಪಾದ್ಯತೇ' ಮ|| ಮೈ||

ಹಿ ಅಜ್ಞಾನಕಾಲೇ ಬಾಲಾನಾಂ ದೃಶ್ಯತೇ 'ದೀರ್ಘೋಽಹಮ್' 'ಗೌರೋಽಹಮ್' ಇತಿ ದೇಹಾದಿಸಙ್ಘಾತೇ ಅಹಂಪ್ರತ್ಯಯಃ ನ ತು ವಿವೇಕಿನಾಂ ಹಿ ಅನ್ಯೋಽಹಂ ದೇಹಾದಿಸಙ್ಘಾತಾತ್ ಇತಿ ಜ್ಞಾನವತಾಂ ತತ್ಕಾಲೇ ದೇಹಾದಿಸಙ್ಘಾತೇ ಅಹಂ ಪ್ರತ್ಯಯೋ ಭವತಿ । ತಸ್ಮಾತ್ ಮಿಥ್ಯಾಪ್ರತ್ಯಯಾಭಾವೇ ಅಭಾವಾತ್ ತತ್ಕೃತ ಏವ ನ ಗೌಣಃ । ಪೃಥಗ್ಗೃಹ್ಯಮಾಣವಿಶೇಷಸಾಮಾನ್ಯಯೋಃ ಹಿ ಸಿಂಹದೇವ ದತ್ತಯೋಃ ಅಗ್ನಿಮಾಣವಕಯೋರ್ವಾ ಗೌಣಪ್ರತ್ಯಯಃ ಶಬ್ದಪ್ರಯೋಗೋ ವಾ ಸ್ಯಾತ್। ನ ಅಗೃಹ್ಯಮಾಣವಿಶೇಷಸಾಮಾನ್ಯಯೋಃ[1] । ಯತ್ ತು ಉಕ್ತಂ ಶ್ರುತಿಪ್ರಾಮಾಣ್ಯಾತ್ ಇತಿ। ತತ್ ನ[2] । ತತ್ಪ್ರಾಮಾಣ್ಯಸ್ಯ ಅದೃಷ್ಟವಿಷಯತ್ವಾತ್ । ಪ್ರತ್ಯಕ್ಷಾದಿಪ್ರಮಾಣಾನುಪಲಬ್ಧೇ ಹಿ ವಿಷಯೇ ಅಗ್ನಿಹೋತ್ರಾದಿಸಾಧ್ಯಸಾಧನ ಸಂಬನ್ಧೇ ಶ್ರುತೇಃ ಪ್ರಾಮಾಣ್ಯಮ್ ನ ಪ್ರತ್ಯಕ್ಷಾದಿವಿಷಯೇ । ಅದೃಷ್ಟದರ್ಶನಾರ್ಥ ವಿಷಯತ್ವಾತ್ ಪ್ರಾಮಾಣ್ಯಸ್ಯ । ತಸ್ಮಾತ್ ನ ದೃಷ್ಟಮಿಥ್ಯಾಜ್ಞಾನನಿಮಿತ್ತಸ್ಯ ಅಹಂಪ್ರತ್ಯಯಸ್ಯ ದೇಹಾದಿಸಙ್ಘಾತೇ ಗೌಣತ್ವಂ ಕಲ್ಪಯಿತುಂ ಶಕ್ಯಮ್ । ನ ಹಿ ಶ್ರುತಿಶತಮಪಿ ' ಶೀತಃ ಅಗ್ನಿಃ, ಅಪ್ರಕಾಶೋ ವಾ ' ಇತಿ ಬ್ರುವತ್ ಪ್ರಾಮಾಣ್ಯಮ್ ಉಪೈತಿ । ಯದಿ ಬ್ರೂಯಾತ್ 'ಶೀತಃ ಅಗ್ನಿಃ ಅಪ್ರಕಾಶೋ ವಾ' ಇತಿ ತಥಾಪಿ ಅರ್ಥಾನ್ತರಂ ಶ್ರುತೇಃ ವಿವಕ್ಷಿತಂ ಕಲ್ಪ್ಯಮ್ । ಪ್ರಾಮಾಣ್ಯಾನ್ಯಥಾನುಪಪತ್ತೇಃ । ನ ತು ಪ್ರಮಾಣಾನ್ತರವಿರುದ್ಧಂ ಸ್ವವಚನವಿರುದ್ಧಂ ವಾ[4] ॥

(ಭಾಷ್ಯ)

(ಆಕ್ಷೇಪ):—ಅದೃಷ್ಟವಾದ (ಸ್ವರ್ಗಾದಿಗಳ) ವಿಷಯದಲ್ಲಿ (ಕರ್ಮವನ್ನು) ವಿಧಿಸುವ (ಶಾಸ್ತ್ರದ) ಪ್ರಾಮಾಣ್ಯದಿಂದ ತಾನು ಮಾಡಬೇಕಾದದ್ದನ್ನು ಗೌಣವಾದ ದೇಹೇಂದ್ರಿಯಾದ್ಯಾತ್ಮರು ಮಾಡಬಹುದಲ್ಲ !

(ಪರಿಹಾರ):—ಹಾಗಲ್ಲ. ಏಕೆಂದರೆ ಅವು ಅವಿದ್ಯೆಯಿಂದ[4] ಕಲ್ಪಿತವಾದ ಆತ್ಮರುಗಳಾಗಿವೆ. ದೇಹ, ಇಂದ್ರಿಯ-ಮುಂತಾದವು ಗೌಣವಾದ ಆತ್ಮರುಗಳಲ್ಲ; ಮತ್ತೇನೆಂದರೆ ಅನಾತ್ಮಗಳಾಗಿರುವವಾಗಿ (ದ್ದರೂ ಅವು) ಮಿಥ್ಯಾಪ್ರತ್ಯಯದಿಂದಲೇ

---

1. 'ಸಾಮಾನ್ಯವಿಶೇಷಯೋಃ' ಶಿ|| ಅ||
2. ' ನ ತತ್ ' ಮ||
3. ' ಕಲ್ಪ್ಯಮ್' ಎಂದು ಹೆಚ್ಚಾಗಿ ಮ|| ಮೈ||
4. ಈ ಪ್ರಕರಣದಲ್ಲಿ ಅವಿದ್ಯೆ, ಮಿಥ್ಯಾಪ್ರತ್ಯಯ, ಅಜ್ಞಾನ, ಮಿಥ್ಯಾಜ್ಞಾನ–ಇಷ್ಟು ಶಬ್ದಗಳನ್ನೂ ಒಂದೇ ಅರ್ಥದಲ್ಲಿ ಉಪಯೋಗಿಸಿರುವದನ್ನು ಲಕ್ಷಿಸಬೇಕು.

ಆತ್ಮನಾಗಿ ಮಾಡಲ್ಪಟ್ಟಿರುತ್ತದೆ. ಏಕೆಂದರೆ ಆ (ಮಿಥ್ಯಾಪ್ರತ್ಯಯವಿದ್ದರೆ ಅವು) ಇರುತ್ತವೆ, ಮತ್ತು ಅದಿಲ್ಲದಿದ್ದರೆ ಇರುವದಿಲ್ಲ. **ಅವಿವೇಕಿಗಳಾದ ಬಾಲಕರಿಗೇ ಅಜ್ಞಾನ**(ವಿರುವ) **ಕಾಲದಲ್ಲಿ 'ನಾನು ಉದ್ದವಾಗಿದ್ದೇನೆ,' 'ನಾನು ಬೆಳ್ಳಗಿದೇನೆ' ಎಂದು ದೇಹವೇ ಮುಂತಾದವುಗಳ ಸಂಘಾತದಲ್ಲಿ ನಾನೆಂಬ ಅರಿವು** (**ಉಂಟಾಗುತ್ತದೆ**). ಆದರೆ '**ದೇಹಾದಿಗಳ ಸಂಘಾತಕ್ಕಿಂತ ನಾನು ಬೇರೆ' ಎಂಬ ಅರಿವುಳ್ಳ** ವಿವೇಕಿಗಳಿಗೆ ಆ **ಕಾಲದಲ್ಲಿ**[1] **ದೇಹಾದಿಗಳ ಸಂಘಾತದಲ್ಲಿ ನಾನೆಂಬ ಅರಿವು ಉಂಟಾಗುವದಿಲ್ಲ.** ಆದ್ದರಿಂದ **ಮಿಥ್ಯಾ ಪ್ರತ್ಯಯವಿಲ್ಲದಾಗ** ಇಲ್ಲದಿರುವದರಿಂದ (**ಅದು**) **ಆ** (**ತಪ್ಪು ತಿಳಿವಳಿಕೆ**) **ಯಿಂದಾದದ್ದೇ ಹೊರತು ಗೌಣವಲ್ಲ.** ವಿಶೇಷವೂ ಸಾಮಾನ್ಯವೂ ಬೇರೆಬೇರೆ ಯಾಗಿ ಗೊತ್ತಾಗಿರುವದಾದರೆ ಮಾತ್ರ[2] ಸಿಂಹ, ದೇವದತ್ತ, ಅಥವಾ ಅಗ್ನಿ, ಹುಡುಗ– ಇವುಗಳ ವಿಷಯದಲ್ಲಿ ಗೌಣಪ್ರತ್ಯಯವಾಗಲಿ (ಗೌಣ) ಶಬ್ದಪ್ರಯೋಗವಾಗಲಿ ಆದೀತೇ ಹೊರತು ವಿಶೇಷಸಾಮಾನ್ಯಗಳು (**ಬೇರೆಬೇರೆಯಾಗಿ**) ಗೊತ್ತಾಗದಿರುವಲ್ಲಿ ಆಗಲಾರದು.

ಇನ್ನು ಶ್ರುತಿಪ್ರಾಮಾಣ್ಯದಿಂದ (ಮುಖ್ಯಾತ್ಮನ ಕಾರ್ಯವು ಗೌಣಾತ್ಮದಿಂದ ಮಾಡಲ್ಪಡುತ್ತದೆ) ಎಂದಿರಲ್ಲ, ಅದು ಸರಿಯಲ್ಲ. ಏಕೆಂದರೆ ಶ್ರುತಿಪ್ರಾಮಾಣ್ಯವು ಅದೃಷ್ಟವಿಷಯಕ(ವಾಗಿರುತ್ತದೆ). **ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಿಗೆ ತೋರದ ವಿಷಯವಾದ ಅಗ್ನಿಹೋತ್ರವೇ ಮುಂತಾದ ಸಾಧ್ಯಸಾಧನಗಳ ಸಂಬಂಧ**(**ದ ವಿಷಯದಲ್ಲಿ**)[3] **ಶ್ರುತಿಯು ಪ್ರಮಾಣವಾಗಿರುವದೇ ಹೊರತು ಪ್ರತ್ಯಕ್ಷಾದಿಗಳಿಗೆ ವಿಷಯವಾದದ್ದರಲ್ಲಲ್ಲ. ಏಕೆಂದರೆ ಪ್ರಮಾಣವು**

---

1. ವಿವೇಕಕಾಲದಲ್ಲಿ ಎಂದರ್ಥ. ವಿವೇಕವಿಲ್ಲದಾಗ ದೇಹಾದಿಗಳು ನಾನು ಎಂಬ ಜ್ಞಾನವಾಗುತ್ತದೆ, ಅದಿರುವಾಗ ಆಗುವದಿಲ್ಲ. ಅವಿವೇಕದಿಂದಾಗುವ ಜ್ಞಾನವು ಮಿಥ್ಯಾ ಜ್ಞಾನವೆಂಬುದು ಸ್ಪಷ್ಟ.

2. ಸಿಂಹದೇವದತ್ತರಿಗೆ ಇರುವ ಹೋಲಿಕೆಯ ಸಾಮಾನ್ಯಧರ್ಮವನ್ನು ಸಾಮಾನ್ಯ ವೆಂದೂ ಒಂದೊಂದರ ಅಸಾಧಾರಣಧರ್ಮವನ್ನು ವಿಶೇಷವೆಂದೂ ಇಲ್ಲಿ ಕರೆದಿದೆ.

3. ಅಗ್ನಿಹೋತ್ರವೆಂಬ ಸಾಧನದಿಂದ ಸ್ವರ್ಗವೆಂಬ ಸಾಧ್ಯವು ದೊರಕುವದೆಂಬುದು ಪ್ರತ್ಯಕ್ಷಕ್ಕಾಗಲಿ ಅನುಮಾನಕ್ಕಾಗಲಿ ಗೋಚರವಾಗುವದಲ್ಲ. 'ಕಾರೀರಿ' ಎಂಬ ಯಾಗದಿಂದ ಮಳೆ ಬರುವದೆಂದು ವೇದದಲ್ಲಿದೆ (ತೈ. ಸಂ. ೨-೪-೯); ಅಲ್ಲಿ ಮಳೆಯು ಪ್ರತ್ಯಕ್ಷವಾಗಿದ್ದರೂ ಸಾಧ್ಯಸಾಧನಸಂಬಂಧವು ಪ್ರತ್ಯಕ್ಷ ಗೋಚರವಲ್ಲ.

**(ಮತ್ತೊಂದಕ್ಕೆ) ಕಾಣದಿರುವ ವಿಷಯವನ್ನೇ (ತಿಳಿಸುತ್ತದೆ)[1]. ಆದ್ದರಿಂದ ದೇಹಾದಿಗಳ ಗುಂಪಿನಲ್ಲಿ ನಾನು ಎಂದಾಗುವ ಅರಿವು ಮಿಥ್ಯಾಜ್ಞಾನನಿಮಿತ್ತವಾಗಿ (ಆಗುವದೆಂದು) ಕಂಡುಬಂದಿರುವಾಗ ಅದನ್ನು ಗೌಣವೆಂದು (ಶ್ರುತಿಯ ಪ್ರಮಾಣದಿಂದ) ಕಲ್ಪಿಸುವದಕ್ಕೆ ಆಗಲಾರದು.[2] ಬೆಂಕಿಯು ತಣ್ಣಗಿದೆಯೆಂದಾಗಲಿ ಬೆಳಗುವದಿಲ್ಲವೆಂದಾಗಲಿ ನೂರು ಶ್ರುತಿಗಳು ಹೇಳಿದರೂ ಪ್ರಮಾಣವಾಗಲೇ ಆರವು.** ಒಂದು ವೇಳೆ ಬೆಂಕಿಯು ತಣ್ಣಗಿದೆಯೆಂದಾಗಲಿ ಬೆಳಗುವದಿಲ್ಲವೆಂದಾಗಲಿ (ಶ್ರುತಿಯು) ಹೇಳಿದರೆ ಆಗಲೂ ಶ್ರುತಿಗೆ ಬೇರೊಂದು ಅರ್ಥವೇ ವಿವಕ್ಷಿತವೆಂದು ಕಲ್ಪಿಸಬೇಕು. ಏಕೆಂದರೆ ಹಾಗಿಲ್ಲದಿದ್ದರೆ (ಅದಕ್ಕೆ) ಪ್ರಾಮಾಣ್ಯವೇ ಹೊಂದುಗಡೆಯಾಗುವದಿಲ್ಲ. (ಅಷ್ಟೇ) ಹೊರತು ಬೇರೊಂದು ಪ್ರಮಾಣಕ್ಕೆ ವಿರುದ್ಧವಾಗಿ ಅಥವಾ ತನ್ನ ಮಾತಿಗೇ ವಿರುದ್ಧವಾಗಿ (ಅರ್ಥವನ್ನು ಎಂದಿಗೂ ಕಲ್ಪಿಸ) ಬಾರದು.

## ಶಾಸ್ತ್ರಪ್ರಾಮಾಣ್ಯವಿಚಾರ

(ಭಾಷ್ಯಾರ್ಥ)

೬೦೦. ಕರ್ಮಣಃ ಮಿಥ್ಯಾಪ್ರತ್ಯಯವತ್ಕರ್ತೃಕತ್ವಾತ್ ಕರ್ತುರಭಾವೇ ಶ್ರುತೇಃ ಅಪ್ರಾಮಾಣ್ಯಮ್ ಇತಿ ಚೇತ್ । ನ । ಬ್ರಹ್ಮವಿದ್ಯಾಯಾಮ್ ಅರ್ಥವತ್ತ್ವೋಪಪತ್ತೇಃ। ಕರ್ಮವಿಧಿಶ್ರುತಿವತ್ ಬ್ರಹ್ಮವಿದ್ಯಾವಿಧಿಶ್ರುತೇರಪಿ ಅಪ್ರಾಮಾಣ್ಯಪ್ರಸಙ್ಗಃ ಇತಿ ಚೇತ್ । ನ । ಬಾಧಕಪ್ರತ್ಯಯಾನುಪಪತ್ತೇಃ । ಯಥಾ ಬ್ರಹ್ಮವಿದ್ಯಾವಿಧಿಶ್ರುತ್ಯಾ ಆತ್ಮನಿ ಅವಗತೇ ದೇಹಾದಿಸಙ್ಘಾತೇ ಅಹಂಪ್ರತ್ಯಯೋ ಬಾಧ್ಯತೇ ತಥಾ ಆತ್ಮನ್ಯೇವ ಆತ್ಮಾವಗತಿರ್ನ ಕದಾಚಿತ್ ಕೇನಚಿತ್ ಕಥಂಚಿದಪಿ ಬಾಧಿತುಂ ಶಕ್ಯಾ। ಫಲಾವ್ಯತಿರೇಕಾತ್ ಅವಗತೇಃ। ಯಥಾ ಅಗ್ನಿರುಷ್ಣಃ ಪ್ರಕಾಶಶ್ಚ ಇತಿ। ನ ಚೈವಂ ಕರ್ಮವಿಧಿಶ್ರುತೇಃ ಅಪ್ರಾಮಾಣ್ಯಮ್ । ಪೂರ್ವಪೂರ್ವಪ್ರವೃತ್ತಿನಿರೋಧೇನ ಉತ್ತರೋತ್ತರಾಪೂರ್ವಪ್ರವೃತ್ತಿಜನನಸ್ಯ ಪ್ರತ್ಯಗಾತ್ಮಾಭಿಮುಖ್ಯೇನ ಪ್ರವೃತ್ತ್ಯುಪಾದಾನಾರ್ಥತ್ವಾತ್ । ಮಿಥ್ಯಾತ್ವೇಽಪಿ ಉಪಾಯಸ್ಯ ಉಪೇಯಸತ್ಯತಯಾ ಸತ್ಯತ್ವಮೇವ ಸ್ಯಾತ್। ಯಥಾ ಅರ್ಥವಾದಾನಾಂ ವಿಧಿಶೇಷಾಣಾಮ್। ಲೋಕೇಽಪಿ ಬಾಲೋನ್ಮತ್ತಾ

1. ಪ್ರಮಾಣಾಂತರಗೋಚರವಾದದ್ದನ್ನೇ ತಿಳಿಸಿದರೆ ಅನುವಾದವಾಗುತ್ತದೆ, ಅದಕ್ಕೆ ವಿರುದ್ಧವಾದದ್ದನ್ನೇ ತಿಳಿಸಿದರೆ ಅಪ್ರಮಾಣವೇ ಆಗುತ್ತದೆ.

2. ಪ್ರತ್ಯಕ್ಷವಾಗಿ ಮಿಥ್ಯೆಯೆಂದು ನಿರ್ಣಯವಾದದ್ದನ್ನು ಶಾಸ್ತ್ರವೂ ಗೌಣವಾಗಿ ಮಾಡಲಾರದು ; ಏಕೆಂದರೆ ಶಾಸ್ತ್ರಕ್ಕೆ ಇದು ವಿಷಯವೇ ಅಲ್ಲ_ಎಂದರ್ಥ. ಇಲ್ಲಿ ಪ್ರತ್ಯಕ್ಷವೆಂದರೆ ನಿರೂಪಿತಪ್ರತ್ಯಕ್ಷವು.

ದೀನಾಂ ಪಯ ಆದೌ ಪಾಯಯಿತವ್ಯೇ ಚೂಡಾವರ್ಧನಾದಿವಚನಸ್ಯ[1] । ಪ್ರಕಾರಾನ್ತರಸ್ಥಾನಾಂ ಚ ಸಾಕ್ಷಾದೇವ ವಾ ಪ್ರಾಮಾಣ್ಯಂ ಸಿದ್ಧಮ್[2] ಪ್ರಾಕ್ ಆತ್ಮಜ್ಞಾನಾತ್ ದೇಹಾಭಿಮಾನನಿಮಿತ್ತಪ್ರತ್ಯಕ್ಷಾದಿಪ್ರಾಮಾಣ್ಯವತ್ ||

(ಭಾಷ್ಯಾರ್ಥ)

(ಆಕ್ಷೇಪ):–ಕರ್ಮವನ್ನು ಅವಿದ್ಯಾವಂತನಾಗಿರುವವನೇ ಮಾಡುವನಾದ್ದರಿಂದ ಕರ್ತೃವಿಲ್ಲದಾಗ[3] ಶ್ರುತಿಯು ಅಪ್ರಮಾಣವಾಗುವದಲ್ಲ !

(ಸಮಾಧಾನ):—ಹಾಗಲ್ಲ. ಏಕೆಂದರೆ (ಆಗ ಅದಕ್ಕೆ) ಬ್ರಹ್ಮವಿದ್ಯೆಯಲ್ಲಿ ಸಾರ್ಥಕ್ಯವಿರುತ್ತದೆ.[4]

(ಆಕ್ಷೇಪ):—ಕರ್ಮವನ್ನು ವಿಧಿಸುವ ಶ್ರುತಿಯಂತೆ ಬ್ರಹ್ಮವಿದ್ಯೆಯನ್ನು ಅರುಹುವ ಶ್ರುತಿಯೂ ಅಪ್ರಮಾಣವಾಗಬೇಕಾಗುವದಲ್ಲ ![5]

(ಸಮಾಧಾನ):—ಹಾಗಲ್ಲ. ಏಕೆಂದರೆ (ಅದರ ಪ್ರಾಮಾಣ್ಯವನ್ನು) ಬಾಧಿಸುವ ಪ್ರತ್ಯಯವೇ ಆಗುವ ಹಾಗಿಲ್ಲ. ಹೇಗೆ ಬ್ರಹ್ಮವಿದ್ಯೆಯನ್ನು ಅರುಹುವ ಶ್ರುತಿಯಿಂದ ಆತ್ಮನನ್ನು ಅರಿತುಕೊಂಡರೆ ದೇಹವೇ ಮುಂತಾದವುಗಳ ಸಂಘಾತದಲ್ಲಿ(ಉಂಟಾಗಿದ್ದ) ನಾನೆಂಬ ಪ್ರತ್ಯಯವು ಬಾಧಿತವಾಗುವದೋ ಹಾಗೆ ಆತ್ಮನಲ್ಲಿಯೇ ಆತ್ಮನೆಂದು (ಆದ) ಅರಿವನ್ನು ಎಂದಿಗೂ ಯಾವ (ಪ್ರತ್ಯಯ) ದಿಂದಲೂ ಹೇಗೂ ಬಾಧಿಸುವದಕ್ಕೆ ಆಗಲಾರದು ಏಕೆಂದರೆ (ಆ) ಅರಿವು ಫಲಕ್ಕಿಂತ ಬೇರೆಯಾಗಿರುವದಿಲ್ಲ. ಹೇಗೆ ಬೆಂಕಿಯು ಬಿಸಿಯಾಗಿ ಬೆಳಕಿನ ರೂಪವಾಗಿರುತ್ತದೆಯೋ ಹಾಗೆಯೇ ಇದು.[6]

---

1. 'ವಚನಮ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. 'ಪ್ರಾಮಾಣ್ಯಸಿದ್ಧಿಃ' ಎಂದು ನಿ॥ ಗು॥

3. ವಿದ್ಯೆಯಿಂದ ಕರ್ತೃತ್ವವು ಬಾಧಿತವಾದಾಗ ಎಂದರ್ಥ. ಈ ಪೂರ್ವಪಕ್ಷಸಿದ್ಧಾಂತವನ್ನು ತೈ. ಭಾ. ಭಾ ೭೮, ೭೯ಕ್ಕೆ ಹೋಲಿಸಿನೋಡಿ.

4. ಕರ್ಮಕಾಂಡಶ್ರುತಿಯು ಅಪ್ರಮಾಣವೆಂದೊಪ್ಪಿದರೂ ಜ್ಞಾನಕಾಂಡಶ್ರುತಿಯು ಪ್ರಮಾಣವಾಗುತ್ತದೆ ; ಸರ್ವವೇದಗಳೂ ಬ್ರಹ್ಮವನ್ನೇ ತಿಳಿಸುವವು ಎಂದು ಶ್ರುತಿಯಿರುವದರಿಂದ ಕರ್ಮಕಾಂಡಕ್ಕೂ ಆತ್ಮಜ್ಞಾನದಲ್ಲಿಯೇ ಮಹಾತಾತ್ಪರ್ಯವಿರುತ್ತದೆ ಎಂದು ಭಾವ.

5 ಎರಡೂ ಶ್ರುತಿಯೇ ಆದಮೇಲೆ ಒಂದು ಶ್ರುತಿಯ ಹೆಚ್ಚುಗಾರಿಕೆಯೇನು ?

6. 'ಬೆಂಕಿಯು ಬಿಸಿ' ಎಂಬ ಅರಿವು ಬಾಧಿತವಾಗಲಾರದು ; ಏಕೆಂದರೆ ಬೆಂಕಿಗೂ ಬಿಸಿಗೂ ಯಾವ ಭೇದವೂ ಇರುವದಿಲ್ಲ. ಬೆಂಕಿಯೇ ಬಿಸಿಯ ರೂಪವಾಗಿರುತ್ತದೆ. ಇದರಂತೆ ಆತ್ಮನಲ್ಲಿ ಆತ್ಮನೆಂಬ ಅರಿವು ಉಂಟಾಗುವದಾದರೆ ಆ ಅರಿವು ಆತ್ಮಸ್ವರೂಪವೇ ಆಗಿರುವದರಿಂದ ಅದೂ ಬಾಧಿತವಾಗುವಂತಿಲ್ಲ ಎಂದು ಭಾವ. ಅದ್ವೈತಾತ್ಮಜ್ಞಾನವುಂಟಾಗುವಲ್ಲಿ ಬಾಧ್ಯಬಾಧಕರೂಪವಾದ ದ್ವೈತವೇ ಇರುವದಿಲ್ಲವಾದ್ದರಿಂದಲೂ ಅರಿವಿಗೆ ಬಾಧಕವಿಲ್ಲವೆಂದು ತಿಳಿಯಬೇಕು.

ಹಾಗಾದರೆ ಕರ್ಮವಿಧಿಶ್ರುತಿಯು ಅಪ್ರಮಾಣವೇ ಎಂದಾಯಿತಲ್ಲ![1] (ಎನ್ನುವಂ)ತಿಲ್ಲ. ಏಕೆಂದರೆ ಹಿಂದುಹಿಂದಿನ ಪ್ರವೃತ್ತಿಯನ್ನು ಕಳೆದುಹಾಕಿ ಮುಂದುಮುಂದಿನ ಹೊಸ ಪ್ರವೃತ್ತಿಯನ್ನುಂಟುಮಾಡುವದು ಪ್ರತ್ಯಗಾತ್ಮನ ಕಡೆಗೆ ಹೋಗುವ ಪ್ರವೃತ್ತಿಯನ್ನು ಸ್ವೀಕರಿಸುವದಕ್ಕೇ ಆಗಿರುತ್ತದೆ.[2] ಉಪಾಯವು ಮಿಥ್ಯೆಯಾದರೂ ಉಪೇಯವಾದದ್ದು ಸತ್ಯವಾಗಿರುವದರಿಂದ (ಅದೂ) ಸತ್ಯವೇ ಆಗುವದು.[3] ವಿಧಿಗೆ ಅಂಗವಾಗಿರುವ ಅರ್ಥವಾದಗಳು ಇದಕ್ಕೆ ಉದಾಹರಣೆ. ಲೋಕದಲ್ಲಿಯೂ ಹುಡುಗರು, ಹುಚ್ಚರು–ಮುಂತಾದವರಿಗೆ ಹಾಲು ಮುಂತಾದದ್ದನ್ನು ಕುಡಿಸಬೇಕಾಗಿರುವಲ್ಲಿ 'ಜುಟ್ಟು ಬೆಳೆಯುತ್ತದೆ' ಎಂದು ಮುಂತಾಗಿ ಹೇಳುವ ವಚನಕ್ಕೆ (ಹೇಗೋ ಹಾಗೆಯೇ ಈ ವಚನಕ್ಕೂ ಪ್ರಾಮಾಣ್ಯ ವಿರುವದು.)[4] ಮತ್ತು ಆತ್ಮಜ್ಞಾನವಾಗುವ ಮೊದಲು ದೇಹಾಭಿಮಾನದಿಂದಾಗಿರುವ ಪ್ರತ್ಯಕ್ಷವೇ ಮುಂತಾದವು ಪ್ರಮಾಣವಾಗಿರುವಂತೆಯೇ ಇನ್ನೊಂದು ಪ್ರಕಾರದಿಂದ (ಅವಕ್ಕೆ) ನೇರಾಗಿಯೇ ಪ್ರಾಮಾಣ್ಯವು ಸಿದ್ಧವಾಗಿರುತ್ತದೆ.[5]

## ಆತ್ಮನಿಗೆ ಸನ್ನಿಧಿಮಾತ್ರದಿಂದಲೂ ನಿಜವಾದ ಕರ್ತೃತ್ವವಿಲ್ಲ

(ಭಾಷ್ಯ)

೬೦೧. ಯತ್ ತು ಮನ್ಯತೇ[6]–ಸ್ವಯಮ್ ಅವ್ಯಾಪ್ರಿಯಮಾಣೋಽಪಿ ಆತ್ಮಾ ಸನ್ನಿಧಿಮಾತ್ರೇಣ ಕರೋತಿ । ತದೇವ ಚ ಮುಖ್ಯಂ ಕರ್ತೃತ್ವಮಾತ್ಮನಃ । ಯಥಾ ರಾಜಾ ಯುಧ್ಯಮಾನೇಷು ಯೋಧೇಷು ಯುಧ್ಯತೇ ಇತಿ ಪ್ರಸಿದ್ಧಮ್ ಸ್ವಯಮ್ ಅಯುಧ್ಯಮಾನೋಽಪಿ ಸನ್ನಿಧಾನಾದೇವ ಜಿತಃ ಪರಾಜಿತಶ್ಚ ಇತಿ । ತಥಾ ಸೇನಾ

---

1. ಈಗ ಕರ್ಮಕಾಂಡಶ್ರುತಿಯು ಅಪ್ರಮಾಣವೆಂದು ಒಪ್ಪಿದ್ದದ್ದನ್ನು ಬಿಡುವದಕ್ಕಾಗಿ ಈ ಶಂಕೆಯನ್ನು ಎತ್ತಿರುತ್ತದೆ.

2. ಲೌಕಿಕ ಪ್ರವೃತ್ತಿಯನ್ನು ಕಳೆದು ಕರ್ಮಕಾಂಡದ ಶ್ರುತಿಯಿಂದ ವೈದಿಕಕರ್ಮದಲ್ಲಿ ಪ್ರವೃತ್ತಿಯುಂಟಾಗುತ್ತದೆ. ಆ ಪ್ರವೃತ್ತಿಯು ಮುಂದೆ ಆತ್ಮನ ಕಡೆಗೆ ಪ್ರವೃತ್ತಿಯಾಗುವದಕ್ಕೆ ಸಾಧಕವಾಗುತ್ತದೆ. ಆ ರೂಪದಿಂದ ಕರ್ಮವಿಧಿಶ್ರುತಿಗೆ ಪ್ರಾಮಾಣ್ಯವುಂಟಾಗುವದು ಎಂದು ಅಭಿಪ್ರಾಯ.

3. ಕರ್ಮವನ್ನು ವಿಧಿಸುವ ರೂಪದಿಂದ ಮಿಥ್ಯೆಯಾದರೂ ಸತ್ಯವಾದ ಆತ್ಮಜ್ಞಾನವನ್ನುಂಟುಮಾಡುವದರಿಂದ ಫಲಮೂಲಕವಾಗಿ ಸತ್ಯತ್ವವುಂಟು ಎಂದು ಅಭಿಪ್ರಾಯ.

4. ಯಾವ ವಚನದ ಅರ್ಥವನ್ನು ಪುಷ್ಟಿಗೊಳಿಸುವದಕ್ಕಾಗಿ ಬಂದಿರುವದೋ ಅದನ್ನು ಪುಷ್ಟಿಗೊಳಿಸುವದರಿಂದ ಜುಟ್ಟು ಬೆಳೆಯುತ್ತದೆ– ಎಂಬ ವಾಕ್ಯಕ್ಕೆ ಪ್ರಾಮಾಣ್ಯವಾಗುತ್ತದೆ. ಅದರಂತೆ ಇಲ್ಲಿಯೂ ಉಪೇಯವಾದ ಪ್ರತ್ಯಗಾತ್ಮಜ್ಞಾನಕ್ಕೆ ಸಹಾಯಕವಾಗಿರುವದರಿಂದ ಕರ್ಮವಚನವೂ ಪ್ರಮಾಣವಾಗುತ್ತದೆ ಎಂದು ಭಾವ.

5. ಅಜ್ಞಾನಸ್ಥಿತಿಯಲ್ಲಿ ಕರ್ತೃತ್ವವು ಸತ್ಯವಾಗಿರುವದರಿಂದ ಅದು ನೇರಾಗಿಯೇ ಪ್ರಮಾಣವಾಗಿರುತ್ತದೆ.

6. ಯತ್ತು ಮನ್ಯಸೇ ಎಂಬ ಅಚ್ಚಿನ ಪಾಠಕ್ಕಿಂತ ಇದು ಮೇಲು.

ಪತಿಃ ವಾಚೈವ ಕರೋತಿ । ಕ್ರಿಯಾಫಲಸಮ್ಬನ್ಧಶ್ಚ ರಾಜ್ಞಃ ಸೇನಾಪತೇಶ್ಚ ದೃಷ್ಟಃ । ಯಥಾ ಋತ್ವಿಕ್ಕರ್ಮ ಯಜಮಾನಸ್ಯ ತಥಾ ದೇಹಾದೀನಾಂ ಕರ್ಮ ಆತ್ಮಕೃತಂ ಸ್ಯಾತ್ ಫಲಸ್ಯ ಆತ್ಮಗಾಮಿತ್ವಾತ್ । ಯಥಾ ವಾ ಭ್ರಾಮಕಸ್ಯ ಲೋಹಭ್ರಾಮಯಿತೃತ್ವಾತ್ ಅವ್ಯಾಪೃತಸ್ಯೈವ ಮುಖ್ಯಮೇವ ಕರ್ತೃತ್ವಮ್ । ತಥಾ ಚಾತ್ಮನಃ ಇತಿ । ತತ್ ಅಸತ್ । ಅಕುರ್ವತಃ ಕಾರಕತ್ವಪ್ರಸಙ್ಗಾತ್ । ಕಾರಕಮ್ ಅನೇಕಪ್ರಕಾರಮ್ ಇತಿ ಚೇತ್ । ನ । ರಾಜಪ್ರಭೃತೀನಾಂ ಮುಖ್ಯಸ್ಯಾಪಿ ಕರ್ತೃತ್ವಸ್ಯ ದರ್ಶನಾತ್ । ರಾಜಾ ತಾವತ್ ಸ್ವವ್ಯಾಪಾರೇಣಾಪಿ ಯುಧ್ಯತೇ।ಯೋಧಾನಾಂ ಚ ಯೋಧಯಿತೃತ್ವೇ ಧನದಾನೇ ಚ ಮುಖ್ಯಮೇವ ಕರ್ತೃತ್ವಮ್ । ತಥಾ ಜಯಪರಾಜಯಫಲೋಪಭೋಗೇ । ತಥಾ ಯಜಮಾನಸ್ಯಾಪಿ ಪ್ರಧಾನತ್ಯಾಗೇ ದಕ್ಷಿಣಾದಾನೇ ಚ ಮುಖ್ಯಮೇವ ಕರ್ತೃತ್ವಮ್ । ತಸ್ಮಾತ್ ಅವ್ಯಾಪೃತಸ್ಯ ಕರ್ತೃತ್ವೋಪಚಾರೋ ಯಃ ಸ ಗೌಣಃ ಇತ್ಯವಗಮ್ಯತೇ।ಯದಿ ಮುಖ್ಯಂ ಕರ್ತೃತ್ವಂ [1] ಸ್ವವ್ಯಾಪಾರಲಕ್ಷಣಂ ನೋಪಲಭ್ಯೇತ [2] ರಾಜಯಜಮಾನಪ್ರಭೃತೀನಾಮ್,ತದಾಸನ್ನಿಧಿಮಾತ್ರೇಣಾಪಿ ಕರ್ತೃತ್ವಂ ಮುಖ್ಯಂ ಪರಿಕಲ್ಪ್ಯೇತ । ಯಥಾ ಭ್ರಾಮಕಸ್ಯ ಲೋಹಭ್ರಮಣೇನ । ನ ತಥಾ ರಾಜಯಜಮಾನಾದೀನಾಂ ಸ್ವವ್ಯಾಪಾರೋ ನೋಪಲಭ್ಯತೇ । ತಸ್ಮಾತ್ ಸನ್ನಿಧಿಮಾತ್ರೇಣ ಕರ್ತೃತ್ವಂ ಗೌಣಮೇವ। ತಥಾ ಚ ಸತಿ ತತ್ಫಲಸಮ್ಬನ್ಧೋಽಪಿ ಗೌಣ ಏವ ಸ್ಯಾತ್ । ನ ಗೌಣೇನ ಮುಖ್ಯಂ ಕಾರ್ಯಂ ನಿರ್ವರ್ತ್ಯತೇ । ತಸ್ಮಾತ್ ಅಸದೇವೈತದ್ ಗೀಯತೇ [3] ದೇಹಾದೀನಾಂ ವ್ಯಾಪಾರೇಣ ಅವ್ಯಾಪೃತ ಆತ್ಮಾ [4] ಕರ್ತಾ ಭೋಕ್ತಾ ಚ ಸ್ಯಾತ್ ಇತಿ । ಭ್ರಾನ್ತಿನಿಮಿತ್ತಂ ತು ಸರ್ವಮ್ ಉಪಪದ್ಯತೇ । ಯಥಾ ಸ್ವಪ್ನೇ ಮಾಯಾಯಾಂ [5] ಚ ಏವಮ್ । ನ ಚ ದೇಹಾದ್ಯಾತ್ಮಪ್ರತ್ಯಯಭ್ರಾನ್ತಿಸನ್ತಾನವಿಚ್ಛೇದೇಷು ಸುಷುಪ್ತಿಸಮಾಧ್ಯಾದಿಷು ಕರ್ತೃತ್ವಭೋಕ್ತೃತ್ವಾದ್ಯನರ್ಥಃ ಉಪಲಭ್ಯತೇ। ತಸ್ಮಾತ್ ಭ್ರಾನ್ತಿಪ್ರತ್ಯಯನಿಮಿತ್ತ ಏವಾಯಂ ಸಂಸಾರಭ್ರಮಃ ನ ತು ಪರಮಾರ್ಥಃ [6] ಇತಿ ಸಮ್ಯಗ್ದರ್ಶನಾತ್ ಅತ್ಯನ್ತಮೇವ ಉಪರಮಃ [7] ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಆದರೆ (ಕೆಲವರು ಹೀಗೆಂದು) ಅಭಿಪ್ರಾಯಪಡುವರು [8]: ಆತ್ಮನು ತಾನು

1. ' ಮುಖ್ಯಮ್ ಅನ್ಯತ್ ಕರ್ತೃತ್ವಮ್ ' ಮ॥ ಮೈ॥
2. ಈ ಮ॥ ಮೈ॥ ಪಾಠವೇ ನೋಪಲಭ್ಯತೇ ಎಂಬ ಪಾಠಕ್ಕಿಂತ ಮೇಲು.
3. ' ನಿಶ್ಚೀಯತೇ ' ಎಂಬ ಮ॥ ಪಾಠಕ್ಕಿಂತ ಇದು ಮೇಲು
4. ಅವ್ಯಾಪೃತ ಏವಾತ್ಮಾ ' ಮ॥
5. ' ಯಥಾ ಮಾಯಾಯಾಂ ' ಮ॥
6. 'ಪರಮಾರ್ಥತಃ' ಮ॥
7. ' ಆತ್ಯನ್ತೋಪರಮಃ' ಮ॥, ಅತ್ಯನ್ತ ಏವೋಪರಮಃ ' ಮೈ॥
8. ಈ ಅಭಿಪ್ರಾಯವು ಶ್ಲೋಕವಾರ್ತಿಕದಲ್ಲಿದೆ.

ವ್ಯಾಪಾರವನ್ನು ಮಾಡದಿದ್ದರೂ (ತನ್ನ) ಸನ್ನಿಧಿಯಿಂದಲೇ ಮಾಡುತ್ತಾನೆ, ಅದೇ ಆತ್ಮನ ಮುಖ್ಯವಾದ ಕರ್ತೃತ್ವವು. ಹೇಗೆ ಭಟರು ಯುದ್ಧಮಾಡುತ್ತಿರುವಲ್ಲಿ ರಾಜನು ತಾನೇ ಯುದ್ಧವನ್ನು ಮಾಡದಿದ್ದರೂ ಯುದ್ಧಮಾಡುತ್ತಿದಾನೆಂದೂ ಗೆದ್ದನೆಂದೂ ಸೋತನೆಂದೂ (ಅವನ) ಸನ್ನಿಧಾನಮಾತ್ರದಿಂದ ಪ್ರಸಿದ್ಧವಾಗುವದೋ, ಮತ್ತು ಹೇಗೆ ಸೇನಾಪತಿಯು ಮಾತಿನಿಂದಲೇ(ಯುದ್ಧ)ಮಾಡುತ್ತಿರುತ್ತಾನೋ, (ಆದರೂ ಈ) ಕ್ರಿಯಾಫಲದ ಸಂಬಂಧವು ರಾಜನಿಗೂ ಸೇನಾಪತಿಗೂ ಆಗುವದು (ಹೇಗೆ) ಕಂಡು ಬರುತ್ತದೆಯೋ, (ಮತ್ತು) ಹೇಗೆ ಋತ್ವಿಜರ ಕರ್ಮವು ಯಜಮಾನನದಾಗುವದೋ, ಹಾಗೆಯೇ ದೇಹಾದಿಗಳ ಕರ್ಮವು ಆತ್ಮನದಾಗುತ್ತದೆ ; ಏಕೆಂದರೆ ಫಲವು ಆತ್ಮನನ್ನೇ ಸೇರುತ್ತದೆ. ಅಥವಾ (ಇನ್ನೂ ಒಂದು ದೃಷ್ಟಾಂತ): ಹೇಗೆ ಅಯಸ್ಕಾಂತಶಿಲೆಯು ಕಬ್ಬಿಣವನ್ನು ತಿರುಗಿಸುವದರಿಂದ (ತಾನು ಯಾವ) ವ್ಯಾಪಾರವನ್ನೂ ಮಾಡದಿದ್ದರೂ ಮುಖ್ಯವಾಗಿಯೇ (ಅದಕ್ಕೆ) ಕರ್ತೃತ್ವ(ವುಂಟಾಗುವದೋ), ಹಾಗೆಯೇ ಆತ್ಮನಿಗೂ ಉಂಟಾಗುತ್ತದೆ) ಎಂದು (ಅವರು ಅಭಿಪ್ರಾಯಪಡುತ್ತಾರಷ್ಟೆ).

ಇದು ಸರಿಯಲ್ಲ. ಏಕೆಂದರೆ (ಹೀಗಾದರೆ) ಮಾಡದೆ ಇರುವದಕ್ಕೂ ಕಾರಕತ್ವ ವುಂಟಾಗಬೇಕಾದೀತು. ಕಾರಕವು ಅನೇಕಪ್ರಕಾರವಾಗಿರಬಹುದು [1]–ಎಂದರೆ ಹಾಗಲ್ಲ. ಏಕೆಂದರೆ ರಾಜನೇ ಮುಂತಾದವರಲ್ಲಿ ಮುಖ್ಯಕರ್ತೃತ್ವವೂ ಕಂಡುಬರುತ್ತದೆ. ಮೊದಲನೆಯದಾಗಿ ರಾಜನು ತನ್ನ ವ್ಯಾಪಾರದಿಂದಲೂ ಯುದ್ಧವನ್ನು ಮಾಡುತ್ತಿರುತ್ತಾನೆ; ಯೋಧರನ್ನು ಯುದ್ಧಮಾಡುವಂತೆ (ಪ್ರೇರಿಸು)ವದು, ಅವರಿಗೆ ಹಣವನ್ನು ಕೊಡುವದು–ಇವುಗಳಲ್ಲಿ (ಅವನಿಗೆ) ಮುಖ್ಯಕರ್ತೃತ್ವವೇ (ಇರುತ್ತದೆ); ಹಾಗೂ ಗೆಲವುಸೋಲುಗಳನ್ನು ಅನುಭವಿಸುವದರಲ್ಲಿಯೂ (ಅವನಿಗೆ ಮುಖ್ಯಕರ್ತೃತ್ವವಿರುತ್ತದೆ). ಇದರಂತೆ ಯಜಮಾನನಿಗೂ ಪ್ರಧಾನಹೋಮವನ್ನು ಮಾಡುವದು,(ಋತ್ವಿಜರಿಗೆ) ದಕ್ಷಿಣೆಯನ್ನು ಕೊಡುವದು–ಇವುಗಳಲ್ಲಿ ಮುಖ್ಯಕರ್ತೃತ್ವವೇ ಇರುತ್ತದೆ. ಆದ್ದರಿಂದ ವ್ಯಾಪಾರವಿಲ್ಲದವನನ್ನು ಕರ್ತೃವೆಂದು ಕರೆಯುವದಿದೆಯಲ್ಲ, ಅದು ಗೌಣವೆಂದು ನಿಶ್ಚಯವಾಯಿತು. ರಾಜ, ಯಜಮಾನ–ಮುಂತಾದವರಿಗೆ ತಮ್ಮ ತಮ್ಮ ವ್ಯಾಪಾರರೂಪವಾದ ಮುಖ್ಯಕರ್ತೃತ್ವವಿರುವದು ಕಂಡುಬಾರದೆ ಇದ್ದರೆ ಆಗ ಬರಿಯ ಸನ್ನಿಧಿಯಿಂದಲೇ ಅಯಸ್ಕಾಂತಕ್ಕೆ ಕಬ್ಬಿಣವನ್ನು ತಿರುಗಿಸುವ ಕರ್ತೃತ್ವವಿರುವಂತೆ ಮುಖ್ಯಕರ್ತೃತ್ವವು (ಅವರಿಗೂ ಇರುವದೆಂದು) ಕಲ್ಪಿಸಬಹುದಾಗಿತ್ತು. ಆದರೆ ಆ (ಅಯಸ್ಕಾಂತಾದಿಗಳಂತೆ) ರಾಜಯಜಮಾನರೇ ಮುಂತಾದವರಲ್ಲಿ ಅವರವರ ವ್ಯಾಪಾರವು ಕಾಣಬರುವದಿಲ್ಲವೆಂದೇನೂ ಇಲ್ಲ. ಆದ್ದರಿಂದ ಸನ್ನಿಧಿಮಾತ್ರದಿಂದ

---

1. ತಾನು ಮಾಡುತ್ತಿರುವ ಕರ್ತೃಕಾರಕ, ಮಾಡದೆಯೇ ಸನ್ನಿಧಿಯಿಂದ ಕಾರ್ಯವನ್ನಾಗಿಸುವ ಕಾರಕ–ಎಂದು ಎರಡು ಬಗೆಯಾಗಿಯೂ ಇರಬಹುದು ಎಂದು ಭಾವ.

(ಆಗುವ) ಕರ್ತೃತ್ವವು (ಗೌಣವೇ). ಅದು (ನಿಜ)ವಾದರೆ ಆ(ಕರ್ಮದ) ಫಲ ಸಂಬಂಧವೂ ಗೌಣವೇ ಎಂದಾಗುವದು. **ಗೌಣದಿಂದ ಮುಖ್ಯದ ಕಾರ್ಯವು ಆಗುವದೇ ಇಲ್ಲ**, ಆದ್ದರಿಂದ ದೇಹವೇ ಮುಂತಾದವುಗಳ ವ್ಯಾಪಾರದಿಂದ ತಾನು ವ್ಯಾಪಾರವಿಲ್ಲದವನಾದರೂ ಆತ್ಮನು ಕರ್ತೃವೂ ಭೋಕ್ತೃವೂ ಆಗಿರಬಹುದೆಂದು ಹೇಳಿದ್ದು ಸರಿಯಲ್ಲ.

ಆದರೆ ಇದೆಲ್ಲವೂ ಕನಸಿನಲ್ಲಿ ಅಥವಾ ಮಾಯೆಯಲ್ಲಿ ಆಗುವಂತೆ ಭ್ರಾಂತಿಯ ನಿಮಿತ್ತದಿಂದ ಆಗುವದೆಂದರೆ ಹೊಂದುತ್ತದೆ. **ದೇಹಾದಿಗಳೇ ತಾನೆಂಬ ಅರಿವಿನ ಭ್ರಾಂತಿಸಂತತಿಯು ಕಡಿದುಹೋಗಿರುವ ಸುಷುಪ್ತಿ, ಸಮಾಧಿ-ಮುಂತಾದ (ಅವಸ್ಥೆಗಳಲ್ಲಿ)** [1] **ಕರ್ತೃತ್ವಭೋಕ್ತೃತ್ವವೇ ಮುಂತಾದ ಅನರ್ಥವು ಕಂಡುಬರುವದೂ ಇಲ್ಲ. ಆದ್ದರಿಂದ ಈ ಸಂಸಾರ ಭ್ರಮೆಯು ಭ್ರಾಂತಿಪ್ರತ್ಯಯದ ನಿಮಿತ್ತದಿಂದಲೇ ಉಂಟಾಗಿರುತ್ತದೆಯೇ ಹೊರತು ಪರಮಾರ್ಥವಲ್ಲ. ಆದ್ದರಿಂದ ಇದು ಸರಿಯಾದ ತಿಳಿವಳಿಕೆಯಿಂದ ಅತ್ಯಂತವಾಗಿ ನಾಶವಾಗುತ್ತದೆ ಎಂದು ಸಿದ್ಧವಾಯಿತು.**

## ಶಾಸ್ತ್ರಸಂಪ್ರದಾಯವಿಧಿ

(ಭಾಷ್ಯ)

೬೦೨, ಸರ್ವಗೀತಾಶಾಸ್ತ್ರಾರ್ಥಮ್ ಉಪಸಂಹೃತ್ಯ ಅಸ್ಮಿನ್ ಅಧ್ಯಾಯೇ, ವಿಶೇಷತಶ್ಚಾನ್ತೇ ಇಹ,ಶಾಸ್ತ್ರಾರ್ಥದಾರ್ಢ್ಯಾಯ ಸಙ್ಕ್ಷೇಪತಃ ಉಪಸಂಹಾರಂ ಕೃತ್ವಾ ಅಥ ಇದಾನೀಂ ಶಾಸ್ತ್ರಸಂಪ್ರದಾಯ [2] ವಿಧಿಮ್ ಆಹ—

(ಭಾಷ್ಯಾರ್ಥ)

ಈ ಅಧ್ಯಾಯದಲ್ಲಿ ಅದರಲ್ಲಿಯೂ ಈ (ಅಧ್ಯಾಯದ) ಕೊನೆಯಲ್ಲಿ, ಶಾಸ್ತ್ರಾರ್ಥವು ದೃಢವಾಗಲೆಂದು ಗೀತಾಶಾಸ್ತ್ರವೆಲ್ಲವನ್ನೂ ಉಪಸಂಹಾರಮಾಡಿ, ಇನ್ನು ಈಗ (ಭಗವಂತನು) ಶಾಸ್ತ್ರಸಂಪ್ರದಾಯವಿಧಿಯನ್ನು ಹೇಳುತ್ತಾನೆ:—

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥೬೭॥**

---

1. ಮುಂತಾದ ಎಂಬ ಮಾತಿನಿಂದ ಮದ, ಮೂರ್ಛೆ—ಮುಂತಾದ ದ್ವೈತಶೂನ್ಯಾವಸ್ಥೆಗಳನ್ನು ತಿಳಿಯಬೇಕು. ಇಲ್ಲಿ ಅವಿದ್ಯೆಯನ್ನೇ ಭ್ರಾಂತಿಪ್ರತ್ಯಯವೆಂದು ಕರೆದಿದೆ.

2. "ಸರ್ವಶಾಸ್ತ್ರಸಂಪ್ರದಾಯ" ಮ॥

೬೭. ಇದನ್ನು ನಿನಗೆ (ಹೇಳಿರುತ್ತೇನೆ). ಅತಪಸ್ಕನಿಗೆ (ಇದನ್ನು) ಹೇಳಬಾರದು ; ಅಭಕ್ತನಿಗೆ ಎಂದಿಗೂ (ಹೇಳಬಾರದು); ಅಶುಶ್ರೂಷುವಿಗೆ (ಹೇಳಬಾರದು) ; ನನ್ನಲ್ಲಿ ಅಸೂಯೆಮಾಡುವವನಿಗೂ (ಹೇಳಬಾರದು).

(ಭಾಷ್ಯ)

೬೦೩. ಇದಂ ಶಾಸ್ತ್ರಂ ತೇ ತವ ಹಿತಾಯ ಮಯಾ ಉಕ್ತಂ ಸಂಸಾರ ವಿಚ್ಛಿತ್ತಯೇ ಅತಪಸ್ಕಾಯ ತಪೋರಹಿತಾಯ ನ ವಾಚ್ಯಮ್ ಇತಿ ವ್ಯವಹಿತೇನ ಸಂಬಧ್ಯತೇ । ತಪಸ್ವಿನೇಽಪಿ ಅಭಕ್ತಾಯ ಗುರುದೇವ[1]ಭಕ್ತಿರಹಿತಾಯ ಕದಾಚನ ಕಸ್ಯಾಂಚಿದಪಿ ಅವಸ್ಥಾಯಾಂ ನ ವಾಚ್ಯಮ್। ಭಕ್ತಃ ತಪಸ್ವ್ಯಪಿ ಸನ್ ಅಶುಶ್ರೂಷುಃ ಯೋ ಭವತಿ ತಸ್ಮೈ ಅಪಿ ನ ವಾಚ್ಯಮ್ । ನ ಚ ಯೋ ಮಾಂ ವಾಸುದೇವಂ ಪ್ರಾಕೃತಂ ಮನುಷ್ಯಂ ಮತ್ವಾ ಅಭ್ಯಸೂಯತಿ ಆತ್ಮಪ್ರಶಂಸಾದಿದೋಷಾಧ್ಯಾರೋಪಣೇನ ಮಮ ಈಶ್ವರತ್ವಮ್ ಅಜಾನನ್ ನ ಸಹತೇ । ಅಸಾವಪಿ ಅಯೋಗ್ಯಃ । ತಸ್ಮೈ ಅಪಿ ನ ವಾಚ್ಯಮ್ ! ಅನಸೂಯಾಯುಕ್ತಾಯ ತಪಸ್ವಿನೇ ಭಕ್ತಾಯ ಶುಶ್ರೂಷವೇ ಚ[2] ವಾಚ್ಯಂ ಶಾಸ್ತ್ರಮ್ ಇತಿ ಸಾಮರ್ಥ್ಯಾತ್ ಗಮ್ಯತೇ । ತತ್ರ "ಮೇಧಾವಿನೇ ತಪಸ್ವಿನೇ ವಾ"(ಯಾಸ್ಕ. ನಿ. ೨-೧-೩) ಇತ್ಯನಯೋಃ ವಿಕಲ್ಪದರ್ಶನಾತ್ ಶುಶ್ರೂಷಾಭಕ್ತಿಯುಕ್ತಾಯ ತಪಸ್ವಿನೇ ತದ್ಯುಕ್ತಾಯ ಮೇಧಾವಿನೇ ವಾ ವಾಚ್ಯಮ್ । ಶುಶ್ರೂಷಾಭಕ್ತಿವಿಯುಕ್ತಾಯ ನ ತಪಸ್ವಿನೇ ನಾಪಿ ಮೇಧಾವಿನೇ ವಾಚ್ಯಮ್ । ಭಗವತಿ ಅಸೂಯಾಯುಕ್ತಾಯ ಸಮಸ್ತಗುಣವತೇಽಪಿ ನ ವಾಚ್ಯಮ್ ಗುರುಶುಶ್ರೂಷಾಭಕ್ತಿಮತೇ ಚ ವಾಚ್ಯಮ್ ಇತ್ಯೇಷಃ ಶಾಸ್ತ್ರಸಂಪ್ರದಾಯವಿಧಿಃ ॥

(ಭಾಷ್ಯಾರ್ಥ)

ನಿನ್ನ ಹಿತಕ್ಕಾಗಿ, ಸಂಸಾರವು ನಾಶವಾಗುವದಕ್ಕೋಸ್ಕರ ನಾನು ಹೇಳಿರುವ ಈ ಶಾಸ್ತ್ರವನ್ನು ಅತಪಸ್ಕನಿಗೆ, ತಪಸ್ಸಿಲ್ಲದವನಿಗೆ 'ಹೇಳತಕ್ಕದ್ದಲ್ಲ.' 'ನ ವಾಚ್ಯಮ್' ಎಂದು ದೂರವಾಗಿರುವ (ಮಾತಿಗೆ) ಸಂಬದ್ಧವಾಗಿರುತ್ತದೆ. ತಪಸ್ವಿಯಾಗಿದ್ದರೂ ಅಭಕ್ತನಾಗಿದ್ದರೆ ಗುರುವಿನಲ್ಲಿಯೂ, ದೇವರಲ್ಲಿಯೂ, ಭಕ್ತಿಯಿಲ್ಲದವನಿಗೆ[3] (ಯಾರಿಗೂ) ಯಾವಾಗಲೂ ಯಾವ ಅವಸ್ಥೆಯಲ್ಲಿಯೂ ಹೇಳತಕ್ಕದ್ದಲ್ಲ. ಭಕ್ತನೂ ತಪಸ್ವಿಯೂ ಆಗಿದ್ದು ಯಾವನು ಶುಶ್ರೂಷುವಲ್ಲದೆ ಇರುವನೋ ಅವನಿಗೂ

---

1. 'ಗುರೌ ದೇವೇ ಚ' ಮ॥ ಮೈ॥
2. 'ಭಗವತಿ ಭಕ್ತಾಯ ತಪಸ್ವಿನೇ ಶುಶ್ರೂಷವೇ ಅನಸೂಯವೇ ಚ' ನಿ॥ ಗು॥
3. ಶ್ಲೋ. ೮ ೬-೨೩ ರ ಸೂಚನೆ.

ಹೇಳತಕ್ಕದ್ದಲ್ಲ. ಮತ್ತು ಯಾವನು ವಾಸುದೇವನಾದ ನನ್ನನ್ನು ಪ್ರಾಕೃತನಾದ ಮನುಷ್ಯನೆಂದೆಣಿಸಿ ಅಸೂಯೆಪಡುವನೋ ನಾನು ಈಶ್ವರನೆಂಬುದನ್ನು ಅರಿಯದೆ ತನ್ನನ್ನೇ ತಾನು ಹೊಗಳಿಕೊಂಡನು ಎಂದು ಮುಂತಾಗಿ ದೋಷವನ್ನು ಹೊರಿಸಿ ನನ್ನ ಮಾತನ್ನು ತಾಳಲಾರದೆ ಇರುವನೋ ಅವನೂ (ಇದಕ್ಕೆ) ತಕ್ಕವನಲ್ಲ; ಅವನಿಗೂ ಹೇಳತಕ್ಕದ್ದಲ್ಲ. ಭಗವಂತನಲ್ಲಿ ಅಸೂಯೆಯಿಲ್ಲದವನಾಗಿ ತಪಸ್ವಿಯಾಗಿ ಭಕ್ತನಾಗಿ ಶುಶ್ರೂಷುವಾಗಿರುವವನಿಗೆ (ಈ) ಶಾಸ್ತ್ರವನ್ನು ಹೇಳಬೇಕು ಎಂದು (ಅರ್ಥದ) ಸಾಮರ್ಥ್ಯದಿಂದ ನಿಶ್ಚಯವಾಗುತ್ತದೆ.

ಇಲ್ಲಿ "ಮೇಧಾವಿನೇ ತಪಸ್ವಿನೇ ವಾ" (ಯಾಸ್ಕ. ನಿ. ೨-೧-೪ ಮೇಧಾವಿಗೆ ಅಥವಾ ತಪಸ್ವಿಗೆ ಹೇಳಬೇಕು) ಎಂದು ಇವೆರಡನ್ನೂ ವಿಕಲ್ಪಿಸಿ (ಹೇಳಿರುವದು) ಕಂಡುಬರುವದರಿಂದ ಶುಶ್ರೂಷಾಭಕ್ತಿಗಳಿಂದ ಕೂಡಿರುವ ತಪಸ್ವಿಗಾಗಲಿ, ಅವುಗಳಿಂದೊಡಗೂಡಿದ ಮೇಧಾವಿಗಾಗಲಿ ಹೇಳಬೇಕು; ಶುಶ್ರೂಷೆಯೂ ಭಕ್ತಿಯೂ ಇಲ್ಲದ ತಪಸ್ವಿಗೇ ಆಗಲಿ ಮೇಧಾವಿಗೇ ಆಗಲಿ ಹೇಳಬಾರದು. ಭಗವಂತನಲ್ಲಿ ಅಸೂಯೆಯಿಂದೊಡಗೂಡಿದವನು ಸಮಸ್ತ ಗುಣವುಳ್ಳವನಾದರೂ ಹೇಳಬಾರದು; ಗುರುಶುಶ್ರೂಷಾಭಕ್ತಿಗಳುಳ್ಳವನಿಗೂ ಹೇಳಬೇಕು-ಎಂಬಿದೇ ಶಾಸ್ತ್ರವನ್ನು (ಹೇಳುವ) ಸಂಪ್ರದಾಯ ಕ್ರಮವು.

## ಹೇಳುವವನಿಗೂ ಓದುವವನಿಗೂ ಕೇಳುವವನಿಗೂ ಫಲ

(ಭಾಷ್ಯ)

೬೦೪. ಸಂಪ್ರದಾಯಸ್ಯ ಕರ್ತುಃ ಫಲಮ್ ಇದಾನೀಮ್ ಆಹ—

(ಭಾಷ್ಯಾರ್ಥ)

ಸಂಪ್ರದಾಯವನ್ನು ಮಾಡುವಾತನಿಗೆ[1] ಫಲವನ್ನು ಈಗ ಹೇಳುತ್ತಾನೆ:—

**ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥**

೬೮. ಯಾವನು ಈ ಪರಮಗುಹ್ಯವನ್ನು ನನ್ನಲ್ಲಿ ಪರಭಕ್ತಿಯನ್ನು ಮಾಡಿ ನನ್ನ ಭಕ್ತರಲ್ಲಿ ಹೇಳುವನೋ (ಅವನು) ನನ್ನನ್ನೇ ಹೊಂದುತ್ತಾನೆ ಇದರಲ್ಲಿ ಸಂಶಯವಿಲ್ಲ.

---

1. ಶಾಸ್ತ್ರವನ್ನು ಮತ್ತೊಬ್ಬರಿಗೆ ಹೇಳಿಕೊಡುವವನಿಗೆ.

(ಭಾಷ್ಯ)

೬೦೫. ಯಃ ಇಮಂ ಯಥೋಕ್ತಂ ಪರಮಂ ನಿಃಶ್ರೇಯಸಾರ್ಥಂ ಕೇಶವಾರ್ಜುನಯೋಃ ಸಂವಾದರೂಪಂ ಗ್ರನ್ಥಂ ಗುಹ್ಯಂ ಗೋಪ್ಯಂ ಮದ್ಭಕ್ತೇಷು ಮಯಿ ಭಕ್ತಿಮತ್ಸು ಅಭಿಧಾಸ್ಯತಿ ವಕ್ಷ್ಯತಿ । ಗ್ರಂಥತಃ ಅರ್ಥತಶ್ಚ ಸ್ಥಾಪಯಿಷ್ಯತಿ ಇತ್ಯರ್ಥಃ । ಯಥಾ ತ್ವಯಿ ಮಯಾ । ಭಕ್ತೇಃ ಪುನಃ ಗ್ರಹಣಾತ್ ಭಕ್ತಿಮಾತ್ರೇಣ ಕೇವಲೇನ ಶಾಸ್ತ್ರಸಮ್ಪ್ರದಾನೇ ಪಾತ್ರಂ ಭವತಿ ಇತಿ ಗಮ್ಯತೇ । ಕಥಮ್ ಅಭಿಧಾಸ್ಯತಿ ಇತಿ? ಉಚ್ಯತೇ । ಭಕ್ತಿಂ ಮಯಿ ಪರಾಂ ಕೃತ್ವಾ ಭಗವತಃ ಪರಮಗುರೋಃ ಅಚ್ಯುತಸ್ಯ ಶುಶ್ರೂಷಾ ಮಯಾ ಕ್ರಿಯತೇ ಇತಿ ಏವಂ ಕೃತ್ವಾ ಇತ್ಯರ್ಥಃ । ತಸ್ಯ ಇದಂ ಫಲಮ್-ಮಾಮೇವ ಏಷ್ಯತಿ ಮುಚ್ಯತೇ ಏವ। ಅಸಂಶಯಃ ಅತ್ರ ಸಂಶಯೋ ನ ಕರ್ತವ್ಯಃ ॥

(ಭಾಷ್ಯಾರ್ಥ)

ಯಾವನು ಈ ಮೇಲೆ ಹೇಳಿರುವ ಹೆಚ್ಚಿನ ಮೋಕ್ಷಸಾಧನವಾದ ಕೇಶವಾರ್ಜುನರ ಸಂವಾದರೂಪವಾದ ಗ್ರಂಥವೆಂಬ ಗುಹ್ಯವನ್ನು ರಹಸ್ಯವನ್ನು ನನ್ನ ಭಕ್ತರಲ್ಲಿ ನನ್ನಲ್ಲಿ ಭಕ್ತಿಯಿರುವವರಲ್ಲಿ ಹೇಳುವನೋ ತಿಳಿಸುವನೋ ಗ್ರಂಥರೂಪದಿಂದಲೂ ಅರ್ಥರೂಪದಿಂದಲೂ ನಾನು ನಿನ್ನಲ್ಲಿ ಹೇಳಿ (ನಿಲ್ಲಿಸಿ)ರುವಂತೆ (ಭಕ್ತರಲ್ಲಿ) ನೆಲೆನಿಲ್ಲಿಸುತ್ತಾನೋ ಎಂದರ್ಥ. ಭಕ್ತಿಯನ್ನು (ಇಲ್ಲಿ) ಮತ್ತೊಮ್ಮೆ ತೆಗೆದುಕೊಂಡು (ಹೇಳಿರುವ)ದರಿಂದ ಬರಿಯ ಭಕ್ತಿಯೊಂದರಿಂದಲೇ ಶಾಸ್ತ್ರವನ್ನು ಕೊಡುವದಕ್ಕೆ ತಕ್ಕವನಾಗುತ್ತಾನೆ ಎಂದು ನಿಶ್ಚಯವಾಗುತ್ತದೆ. ಹೇಗೆ ಹೇಳುವನು? ಎಂದರೆ (ಭಗವಂತನು) ಹೇಳುತ್ತಾನೆ: 'ನನ್ನಲ್ಲಿ ಪರಭಕ್ತಿಯನ್ನು ಮಾಡಿ' ಎಂದರೆ ಪರಮಗುರುವಾದ ಅಚ್ಯುತಭಗವಂತನ ಸೇವೆಯನ್ನೇ ನಾನು ಮಾಡುತ್ತಿದೇನೆ ಎಂದು ಭಾವಿಸಿಕೊಂಡು ಎಂದರ್ಥ. (ಹೀಗೆ ಯಾವನು ಈ ಸಂವಾದವನ್ನು ಭಕ್ತರಲ್ಲಿ ಹೇಳುವನೋ) ಅವನಿಗೆ ಇದು ಫಲವು; ಅವನು ನನ್ನನ್ನೇ ಹೊಂದುತ್ತಾನೆ, ಮುಕ್ತನಾಗಿಯೇ ತೀರುತ್ತಾನೆ. ಈ ವಿಷಯದಲ್ಲಿ ಸಂಶಯವನ್ನು ಮಾಡತಕ್ಕದ್ದಲ್ಲ.

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥**

೬೯. ಮತ್ತು ಮನುಷ್ಯರಲ್ಲಿ ಅವನಿಗಿಂತಲೂ ನನಗೆ ಪ್ರಿಯವನ್ನು ಮಾಡುವವನು ಮತ್ತೆ ಯಾವನೂ ಇಲ್ಲ; ಅವನಿಗಿಂತ ನನಗೆ ಪ್ರಿಯತರನಾದವನು ಭೂಮಿಯಮೇಲೆ ಯಾವನೂ ಹುಟ್ಟುವದೂ ಇಲ್ಲ.

(ಭಾಷ್ಯ)

೬೦೬. ಕಿಂಚ ನ ಚ ತಸ್ಮಾತ್ ಶಾಸ್ತ್ರಸಮ್ಪ್ರದಾಯಕೃತಃ ಮನುಷ್ಯೇಷು ಮನುಷ್ಯಾಣಾಂ ಮಧ್ಯೇ ಕಶ್ಚಿತ್ ಮೇ ಮಮ ಪ್ರಿಯಕೃತ್ತಮಃ ಅತಿಶಯೇನ ಪ್ರಿಯಕೃತ್ ತತೋಽನ್ಯಃ ಪ್ರಿಯಕೃತ್ತಮಃ ನಾಸ್ತ್ಯೇವ ಇತ್ಯರ್ಥಃ ವರ್ತಮಾನೇಷು । ನ ಚ ಭವಿತಾ ಭವಿಷ್ಯತ್ಯಪಿ ಕಾಲೇ ತಸ್ಮಾತ್ ದ್ವಿತೀಯೋಽನ್ಯಃ ಪ್ರಿಯತರಃ ಪ್ರಿಯಕೃತ್ತರಃ ಭುವಿ ಲೋಕೇ ಅಸ್ಮಿನ್ ॥

(ಭಾಷ್ಯಾರ್ಥ)

ಮತ್ತು ಶಾಸ್ತ್ರವನ್ನು ಆ (ಭಕ್ತರಿಗೆ) ಹೇಳಿ ಕೊಡುವವನಿಗಿಂತಲೂ ಯಾರೊಬ್ಬನೂ ಮನುಷ್ಯರಲ್ಲಿ ಮನುಷ್ಯರೊಳಗೆ (ಮೇ= ಮಮ) ನನಗೆ ಪ್ರಿಯಕೃತ್ತಮನು, ಹೆಚ್ಚು ಪ್ರಿಯವನ್ನುಂಟುಮಾಡುವವನು, ಭೂಮಿಯಲ್ಲಿ ಈ ಲೋಕದಲ್ಲಿ ಎರಡನೆಯವನು ಮತ್ತೊಬ್ಬನು ಇಲ್ಲ.

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**

೭೦. ಈ ಧರ್ಮ್ಯವಾದ ನಮ್ಮ ಸಂವಾದವನ್ನು ಯಾವನು ಅಧ್ಯಯನಮಾಡುವನೋ ಅವನಿಂದ ನಾನು ಜ್ಞಾನಯಜ್ಞದಿಂದ ಇಷ್ಟನಾಗುವೆನು, ಎಂದು ನನ್ನ ಮತಿಯು.

(ಭಾಷ್ಯ)

೬೦೭. ಯೋಽಪಿ ಅಧ್ಯೇಷ್ಯತೇ ಚ ಪಠಿಷ್ಯತಿ ಚ[1] ಯಃ ಇಮಂ ಧರ್ಮ್ಯಂ ಧರ್ಮಾದನಪೇತಂ ಸಂವಾದರೂಪಂ[2] ಗ್ರನ್ಥಮ್ ಆವಯೋಃ। ತೇನ ಇದಂ ಕೃತಂ ಸ್ಯಾತ್[3] ಜ್ಞಾನಯಜ್ಞೇನ । ವಿಧಿಜಪೋಪಾಂಶುಮಾನಸಾನಾಂ ಯಜ್ಞಾನಾಂ ಜ್ಞಾನಯಜ್ಞಃ ಮಾನಸತ್ವಾತ್ ವಿಶಿಷ್ಟತಮಃ ಇತ್ಯತಃ ತೇನ ಜ್ಞಾನಯಜ್ಞೇನ ಗೀತಾಶಾಸ್ತ್ರಸ್ಯ ಅಧ್ಯಯನಂ ಸ್ತೂಯತೇ । ಫಲವಿಧಿರೇವ ವಾ ದೇವತಾದಿವಿಷಯಜ್ಞಾನಯಜ್ಞಫಲತುಲ್ಯಮ್ ಅಸ್ಯ ಫಲಂ[4] ಭವತಿ ಇತಿ । ತೇನ ಅಧ್ಯಯನೇನ ಅಹಮ್ ಇಷ್ಟಃ ಪೂಜಿತಃ ಸ್ಯಾಂ ಭವೇಯಮ್ ಇತಿ ಮೇ ಮಮ ಮತಿಃ ನಿಶ್ಚಯಃ ॥

---

1. ಮು|| ಮೈ||ಗಳಲ್ಲಿಲ್ಲ.
2. ‘ಸಂವಾದಂ ಸಂವಾದರೂಪಂ’ ಎಂದಿದ್ದರೆ ಮೂಲಾನುಸಾರಿಯಾಗಿತ್ತು.
3. ‘ಕಿಂ ಕೃತಂ ಸ್ಯಾತ್ ಇತ್ಯತ್ರ ಆಹ’ ಎಂದು ಹೆಚ್ಚಾಗಿ ಮು||
4. ಮು|| ಮೈಗಳಲ್ಲಿಲ್ಲ.

(ಭಾಷ್ಯಾರ್ಥ)

ಇನ್ನು ಯಾವನು-ಯಾವ ಈ ಧರ್ಮ್ಯವಾದ ಧರ್ಮವನ್ನು ಬಿಟ್ಟುಹೋಗದ ನಮ್ಮಿಬ್ಬರ (ಸಂವಾದವನ್ನು) ಸಂವಾದರೂಪವಾದ ಗ್ರಂಥವನ್ನು ಅಧ್ಯಯನಮಾಡುವನೋ ಓದುವನೋ ಅವನು ಇದನ್ನು ಮಾಡಿದಂತೆ ಆಗುವದು ; ಜ್ಞಾನಯಜ್ಞದಿಂದ **ವಿಧಿ, ಜಪ, ಉಪಾಂಶು, ಮಾನಸ-ಎಂಬ ಯಜ್ಞಗಳಲ್ಲಿ ಜ್ಞಾನಯಜ್ಞವು ಮಾನಸವಾಗಿರುವದರಿಂದ ಎಲ್ಲಕ್ಕೂ ಹೆಚ್ಚಿನದು.**[1] ಆದ್ದರಿಂದ ಆ ಜ್ಞಾನಯಜ್ಞಕ್ಕೆ (ಸಮಾನವೆಂದು) ಗೀತಾಶಾಸ್ತ್ರದ ಅಧ್ಯಯನವನ್ನು ಹೊಗಳುತ್ತಾನೆ. ಅಥವಾ ದೇವತೆಗಳೇ ಮುಂತಾದ ವಿಷಯುವಾಗಿರುವ ಜ್ಞಾನಯಜ್ಞಕ್ಕೆ ಸಮನಾದ ಫಲವು ಇದಕ್ಕೆ ಆಗುತ್ತದೆ-ಎಂದು (ಇಲ್ಲಿ) ಫಲವನ್ನೇ (ಹೇಳಿದೆ) ಎಂದಾದರೂ (ಹೇಳಬಹುದು). ಅಂಥ (ಜ್ಞಾನಯಜ್ಞರೂಪವಾದ) ಅಧ್ಯಯನದಿಂದ ನಾನು ಇಷ್ಟನಾಗುವೆನು, ಪೂಜಿಸಲ್ಪಟ್ಟವನು ಆಗುವೆನು (ಸ್ಯಾಮ್ = ಭವೇಯಮ್) ಎಂದು ನನ್ನ (ಮೇ = ಮಮ) ಮತಿಯು ನಿಶ್ಚಯವು.

(ಭಾಷ್ಯ)

೬೦೮. ಅಥ ಶ್ರೋತುಃ ಇದಂ ಫಲಮ್—

(ಭಾಷ್ಯಾರ್ಥ)

ಇನ್ನು (ಇದನ್ನು) ಕೇಳುವವನಿಗೆ ಇದು ಫಲವು :—

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾಲ್ಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮಣಾಮ್ ॥ ೭೧ ॥**

೭೧. ಶ್ರದ್ಧಾವಂತನೂ ಅಸೂಯೆಯಿಲ್ಲದವನೂ ಆಗಿ ಯಾವ ನರನು ಕೇಳುವನೋ ಅವನು ಮುಕ್ತನಾಗಿ ಪುಣ್ಯಕರ್ಮದವರ ಶುಭವಾದ ಲೋಕಗಳನ್ನು ಪಡೆಯುವನು.

(ಭಾಷ್ಯ

೬೦೯. ಶ್ರದ್ಧಾವಾನ್ ಶ್ರದ್ದಧಾನಃ ಅನಸೂಯಶ್ಚ ಅಸೂಯಾವರ್ಜಿತಃ ಸನ್ ಇಮಮ್ ಗ್ರನ್ಥಂ ಶೃಣುಯಾದಪಿ ಯೋ ನರಃ ಅಪಿಶಬ್ದಾತ್ ಕಿಮುತ ಅರ್ಥ

1. ಮನು. ೨-೮೫ ನೋಡಿ.

ಜ್ಞಾನವಾನ್,[1] ಸೋಽಪಿ ಪಾಪಾತ್ ಮುಕ್ತಃ[2] ಶುಭಾನ್ ಪ್ರಶಸ್ತಾನ್ ಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮಣಾಮ್ ಅಗ್ನಿಹೋತ್ರಾದಿಕರ್ಮವತಾಮ್ ||

(ಭಾಷ್ಯಾರ್ಥ)

ಶ್ರದ್ಧಾವಂತನಾಗಿ ಶ್ರದ್ಧೆಯನ್ನು ಮಾಡುತ್ತಾ ಮತ್ತು ಅನಸೂಯನಾಗಿ ಅಸೂಯೆಯಿಲ್ಲದವನಾಗಿ ಈ ಗ್ರಂಥವನ್ನು ಯಾವ ನರನು ಸುಮ್ಮನೆ ಕೇಳು ತ್ತಾನೋ-(ಇಲ್ಲಿ) ಅಪಿ ಎಂದಿರುವದರಿಂದ (ಕೇಳಿದರೆಕೂಡ ಈ ಫಲ ವಾಗುವದು), ಇನ್ನು ಅರ್ಥಜ್ಞಾನವುಳ್ಳವನಾದರೆ (ಹೇಳತಕ್ಕ)ದ್ದೇನು? (ಎಂದರ್ಥವಾಗುತ್ತದೆ). ಅವನುಕೂಡ ಪಾಪದಿಂದ ಬಿಡುಗಡೆಹೊಂದಿ ಪುಣ್ಯಕರ್ಮದವರ ಅಗ್ನಿಹೋತ್ರವೇ ಮುಂತಾದ ಕರ್ಮವುಳ್ಳವರ ಶುಭ ವಾದ ಪ್ರಶಸ್ತವಾದ ಲೋಕಗಳನ್ನು ಪಡೆಯುವನು.

## ಅರ್ಜುನನಿಗೆ ಮೋಹವು ಹೋಗಿ ಆದ ಕೃತಕೃತ್ಯತೆ

(ಭಾಷ್ಯ)

೬೧೦. ಶಿಷ್ಯಸ್ಯ ಶಾಸ್ತ್ರಾರ್ಥಗ್ರಹಣಾಗ್ರಹಣವಿವೇಕಬುಭುತ್ಸಯಾ ಪೃಚ್ಛತಿ। ತದಗ್ರಹಣೇ ಜ್ಞಾತೇ ಪುನಃ ಗ್ರಾಹಯಿಷ್ಯಾಮಿ ಉಪಾಯಾನ್ತರೇಣಾಪಿ ಇತಿ ಪ್ರಷ್ಟುರಭಿ ಪ್ರಾಯಃ। ಯತ್ನಾನ್ತರಮಾಸ್ಥಾಯ ಶಿಷ್ಯಃ ಕೃತಾರ್ಥಃ ಕರ್ತವ್ಯಃ ಇತಿ ಆಚಾರ್ಯ ಧರ್ಮಃ ಪ್ರದರ್ಶಿತೋ ಭವತಿ ||

(ಭಾಷ್ಯಾರ್ಥ)

ಶಿಷ್ಯ(ನಾದ ಅರ್ಜುನ)ನಿಗೆ ಶಾಸ್ತ್ರದ ಅರ್ಥವು ತಿಳಿಯಿತೋ ತಿಳಿಯಲಿಲ್ಲವೋ ಎಂಬುದನ್ನು ವಿಂಗಡಿಸಿ ತಿಳಿಯಲಿಚ್ಛೆಯಿಂದ ಹೀಗೆಂದು ಕೇಳುತ್ತಾನೆ. ಅವನಿಗೆ ತಿಳಿಯಲಿಲ್ಲವೆಂದು ಗೊತ್ತಾದರೆ ಮತ್ತೆ ಬೇರೊಂದು ಉಪಾಯದಿಂದಾದರೂ ತಿಳಿಸಿ ಕೊಡುವೆನು-ಎಂಬುದು ಕೇಳುವ (ಶ್ರೀಕೃಷ್ಣನ) ಅಭಿಪ್ರಾಯವು. ಬೇರೊಂದು ಯತ್ನದಿಂದಲಾದರೂ ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡಬೇಕು-ಎಂಬ ಆಚಾರ್ಯನ ಧರ್ಮವನ್ನು (ಇದರಿಂದ) ತಿಳಿಸಿಕೊಟ್ಟಂತೆ ಆಯಿತು.

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ।**
**ಕಚ್ಚಿದಜ್ಞಾನಸಮ್ಮೋಹಃ ಪ್ರಣಷ್ಟಸ್ತೇ ಧನಞ್ಜಯ ॥ ೭೨ ॥**

---

1. 'ಪ್ರಜ್ಞಾವಾನ್' ಮು||
2. 'ಮುಕ್ತಃ ಪಾಪಾತ್' ಮು||

೭೨. ಪಾರ್ಥನೆ, ನಿನ್ನಿಂದ ಇದು ಏಕಾಗ್ರಚಿತ್ತದಿಂದ ಕೇಳಲ್ಪಟ್ಟಿತೇನು? ಧನಂಜಯನೆ, ನಿನ್ನ ಅಜ್ಞಾನಸಂಮೋಹವು ಪ್ರಣಷ್ಟವಾಯಿತೆ?

(ಭಾಷ್ಯ)

೬೧೧. ಕಚ್ಚಿತ್ ಕಿಮ್ ಏತತ್ ಮಯಾ ಉಕ್ತಂ ಶ್ರುತಂ ಶ್ರವಣೇನ ಅವಧಾರಿತಂ ಪಾರ್ಥ[1] ತ್ವಯಾ ಏಕಾಗ್ರೇಣ ಚೇತಸಾ ಚಿತ್ತೇನ, ಕಿಂವಾ ಪ್ರಮಾದತಃ[2]? ಕಚ್ಚಿತ್ ಅಜ್ಞಾನಸಮ್ಮೋಹಃ ಅಜ್ಞಾನನಿಮಿತ್ತಃ ಸಮ್ಮೋಹಃ ವಿಚಿತ್ತಭಾವಃ ಅವಿವೇಕಃ ಸ್ವಾಭಾವಿಕಃ ಕಿಂ ಪ್ರಣಷ್ಟಃ? ಯದರ್ಥೋಽಯಂ ಶಾಸ್ತ್ರಶ್ರವಣಾಯಾಸಸ್ತವ, ಮಮ ಚ ಉಪದೇಷ್ಟೃತ್ವಾಯಾಸಃ ಪ್ರವೃತ್ತಃ। ತೇ ತವ ಧನಞ್ಜಯ ॥

(ಭಾಷ್ಯಾರ್ಥ)

ಎಲೈ ಪಾರ್ಥನೆ, ನಾನು ಹೇಳಿದ್ದು ನಿನ್ನಿಂದ ಏಕಾಗ್ರವಾದ ಚೇತಸ್ಸಿನಿಂದ, ಚಿತ್ತದಿಂದ, ಕೇಳಲ್ಪಟ್ಟಿತೇನು? (ಇದನ್ನು) ಕೇಳಿ ನಿಶ್ಚಯಿಸಿದೆಯ? ಅಥವಾ ಪ್ರಮಾದದಿಂದ (ಕೇಳಲ್ಪಟ್ಟಿತೊ)? ಧನಂಜಯನೆ, ನಿನ್ನ ಅಜ್ಞಾನಸಮ್ಮೋಹವು, ಅಜ್ಞಾನನಿಮಿತ್ತದಿಂದಾಗಿದ್ದ ಹೆಚ್ಚಿನ ಮೋಹವು, ವಿಚಿತ್ತನಾಗಿರುವಿಕೆಯು, ಸ್ವಾಭಾವಿಕವಾದ ಅವಿವೇಕವು ಪ್ರಣಷ್ಟವಾಯಿತೆ? ಆ (ಅವಿವೇಕದ ನಾಶ)ಕ್ಕೇ ಅಲ್ಲವೆ, ಶಾಸ್ತ್ರವನ್ನು ಶ್ರವಣಮಾಡಿದ ಈ ನಿನ್ನ ಆಯಾಸವು, ಮತ್ತು (ನಿನಗೆ) ಉಪದೇಶಮಾಡುವ ನನ್ನ ಆಯಾಸವೂ ಆಗಿರುವದು?

ಅರ್ಜುನ ಉವಾಚ—

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।
ಸ್ಥಿತೋಽಸ್ಮಿ ಗತಸನ್ದೇಹಃ ಕರಿಷ್ಯೇ ವಚನಂ ತವ ॥ ೭೩ ॥

೭೩. ಅರ್ಜುನನಿಂತೆಂದನು: ಅಚ್ಯುತನೆ, ಮೋಹವು ನಷ್ಟವಾಯಿತು, ನಿನ್ನ ಪ್ರಸಾದದಿಂದ ಸ್ಮೃತಿಯು ದೊರಕಿತು. ಗತಸಂದೇಹನಾಗಿ ಇರುವೆನು, ನಿನ್ನ ವಚನದಂತೆ ಮಾಡುವೆನು.

---

1. ಇವರ ಮುಂದೆ ‘ಕಿಂ’ ಎಂದು ಹೆಚ್ಚಾಗಿ ನಿ॥ ಗು॥ ವಾ॥

2. ‘ಅಪ್ರಮಾದತಃ’ ಎಂಬ ಪಾಠವನ್ನು ಹೀಗೆ ತಿದ್ದಿದೆ. ‘ಪ್ರಮಾದಿತಮ್’ ಎಂದು ನಿ॥

(ಭಾಷ್ಯ)

೬೧೨. ನಷ್ಟೋ ಮೋಹಃ ಅಜ್ಞಾನಜಃ ಸಮಸ್ತಸಂಸಾರನಾರ್ಥಹೇತುಃ ಸಾಗರ ಇವ ದುಸ್ತರಃ[1] । ಸ್ಮೃತಿಶ್ಚ ಆತ್ಮತತ್ತ್ವವಿಷಯಾ ಲಬ್ಧಾ ಯಸ್ಯಾ ಲಾಭಾತ್ ಸರ್ವಗ್ರನ್ಥೀನಾಂ ವಿಪ್ರಮೋಕ್ಷಃ[2] ತ್ವತ್ಪ್ರಸಾದಾತ್ ತವ ಪ್ರಸಾದಾತ್ ಮಯಾ ತ್ವತ್ಪ್ರಸಾದಾಶ್ರಿತೇನ । ಅಚ್ಯುತ । ಅನೇನ ಮೋಹನಾಶಪ್ರಶ್ನಪ್ರತಿವಚನೇನ ಸರ್ವ ಶಾಸ್ತ್ರಾರ್ಥ-ಜ್ಞಾನಫಲಮ್ ಏತಾವದೇವ ಇತಿ ನಿಶ್ಚಿತಂ ದರ್ಶಿತಂ ಭವತಿ ಯತ್[3] ಜ್ಞಾನಾತ್ ಮೋಹನಾಶಃ ಆತ್ಮಸ್ಮೃತಿಲಾಭಶ್ಚ ಇತಿ । ತಥಾ ಚ ಶ್ರುತೌ ಅನಾತ್ಮ ವಿತ್ 'ಶೋಚಾಮಿ' ಇತಿ ಉಪನ್ಯಸ್ಯ ಆತ್ಮಜ್ಞಾನೇನ ಸರ್ವಗ್ರನ್ಥೀನಾಂ ವಿಪ್ರ ಮೋಕ್ಷ ಉಕ್ತಃ । "ಭಿದ್ಯತೇ ಹೃದಯಗ್ರನ್ಥಿಃ" (ಮುಂ. ೨-೨-೮), "ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" (ಈ. ೭) ಇತಿ ಚ ಮನ್ತ್ರವರ್ಣಃ । ಅಥ ಇದಾನೀಂ ತ್ವಚ್ಛಾಸನೇ ಸ್ಥಿತೋಽಸ್ಮಿ ಗತಸನ್ದೇಹಃ ಮುಕ್ತಸಂಶಯಃ । ಕರಿಷ್ಯೇ ವಚನಂ ತವ । ಅಹಂ ತ್ವತ್ಪ್ರಸಾದಾತ್ ಕೃತಾರ್ಥಃ, ನ ಮಮ ಕರ್ತವ್ಯಮ್ ಅಸ್ತಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಅಜ್ಞಾನದಿಂದುಂಟಾಗಿ ಸಂಸಾರದ ಅನರ್ಥಗಳಿಗೆಲ್ಲ ಕಾರಣವಾಗಿದ್ದ, ಸಾಗರದಂತೆ ದಾಟಲಸದಳವಾಗಿದ್ದ ಮೋಹವು ನಷ್ಟವಾಯಿತು. ಅಚ್ಯುತನೆ, ನಿನ್ನ ಪ್ರಸಾದದಿಂದ ನಿನ್ನ ಪ್ರಸಾದವನ್ನು ಆಶ್ರಯಿಸಿರುವ ನನಗೆ ಆತ್ಮತತ್ತ್ವ ವಿಷಯವಾದ ಸ್ಮೃತಿಯೂ ದೊರಕಿತು; ತನ್ನ ಲಾಭದಿಂದ ಸರ್ವಗ್ರಂಥಿ ಗಳೂ ಬಿಚ್ಚಿಕೊಳ್ಳುವವಲ್ಲ, (ಆ ಸ್ಮೃತಿಯೂ ದೊರಕಿತು).

ಹೀಗೆ ಮೋಹನಾಶದ (ವಿಷಯವಾದ) ಪ್ರಶ್ನೆ ಮತ್ತು ಉತ್ತರ— ಇವುಗಳಿಂದ ಜ್ಞಾನದಿಂದ ಮೋಹವು ನಾಶವಾಗುವದು, ಆತ್ಮಸ್ಮೃತಿಯು ದೊರಕುವದು-ಎಂಬುದಿಷ್ಟೇ ಇಡಿಯ ಶಾಸ್ತ್ರದ ಅರ್ಥವನ್ನು ಅರಿತುಕೊಳ್ಳು ವದರ ಫಲವು ಎಂದು ನಿಶ್ಚಿತವಾಗಿ ತೋರಿಸಿಕೊಟ್ಟಂತೆ ಆಯಿತು. ಆದ್ದರಿಂದಲೇ ಶ್ರುತಿಯಲ್ಲಿ "ಆತ್ಮನನ್ನರಿಯದೆ ಶೋಕಿಸುತ್ತಿರುವೆನು" (ಛಾಂ. ೭-೨ ೬-೨) ಎಂದು ಹೇಳಿರುತ್ತದೆ. "ಹೃದಯಗ್ರಂಥಿಯು ಬಿಚ್ಚಿಕೊಳ್ಳುತ್ತದೆ" (ಮುಂ. ೨-೨-೮) "ಏಕತ್ವವನ್ನು ಕಂಡುಕೊಂಡವನಿಗೆ ಆಗ ಯಾವ ಮೋಹವು, ಯಾವ ಶೋಕವು?" (ಈ. ೭) ಎಂದೂ ಮಂತ್ರವರ್ಣವು( ಹೇಳುತ್ತದೆ).

1. "ದುರುತ್ತಾರಃ" ಮ॥ ಮೈ॥
2. "ಸರ್ವಗ್ರನ್ಥಿವಿಪ್ರಮೋಕ್ಷಃ' ಸ॥ ಗು॥ ವಾ॥
3. 'ಯತಃ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಇನ್ನು ಈಗ ಗತಸಂದೇಹನಾಗಿ ಸಂಶಯಗಳನ್ನು ಬಿಡುಗಡೆಮಾಡಿಕೊಂಡು ನಿನ್ನ ಅಪ್ಪಣೆಯಲ್ಲಿಯೇ ನಿಂತಿರುತ್ತೇನೆ. ನಿನ್ನ ಮಾತನ್ನು ನಡೆಸುವೆನು; **ನಾನು ನಿನ್ನ ಪ್ರಸಾದದಿಂದ ಕೃತಾರ್ಥನಾಗಿರುತ್ತೇನೆ. ನನಗೆ ಯಾವದೊಂದು ಕರ್ತವ್ಯವೂ ಇಲ್ಲ**-ಎಂದು ಅಭಿಪ್ರಾಯ.[1]

## ಕಥಾಸಂಬಂಧ

(ಭಾಷ್ಯ)

೭೧೩. ಪರಿಸಮಾಪ್ತಃ ಶಾಸ್ತ್ರಾರ್ಥಃ। ಅಥ ಇದಾನೀಂ ಕಥಾಸಮ್ಬನ್ಧಪ್ರದರ್ಶನಾರ್ಥಂ ಸಞ್ಜಯ ಉವಾಚ—

(ಭಾಷ್ಯಾರ್ಥ)

ಶಾಸ್ತ್ರಾರ್ಥವು ಮುಗಿಯಿತು. ಇನ್ನು ಈಗ ಕಥೆಯ ಸಂಬಂಧವನ್ನು ತಿಳಿಸುವದಕ್ಕಾಗಿ ಸಂಜಯನು ಇಂತೆಂದನು :—

**ಸಞ್ಜಯ ಉವಾಚ—**

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥ ೭೪ ॥**

೭೪. ಸಂಜಯನಿಂತೆಂದನು : ಹೀಗೆ ನಾನು ವಾಸುದೇವನ ಮತ್ತು ಮಹಾತ್ಮನಾದ ಪಾರ್ಥನ ಈ ಅದ್ಭುತವಾದ ರೋಮಹರ್ಷಣವಾದ ಸಂವಾದವನ್ನು ಕೇಳಿದೆನು.

(ಭಾಷ್ಯ)

೭೧೪. ಇತಿ ಏವಮ್ ಅಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ಸಂವಾದಮ್ ಇಮಂ ಯಥೋಕ್ತಂ ಅಶ್ರೌಷಂ ಶ್ರುತವಾನ್ ಅಸ್ಮಿ ಅದ್ಭುತಮ್ ಅತ್ಯನ್ತವಿಸ್ಮಯಕರಂ ರೋಮಹರ್ಷಣಮ್ ರೋಮಾಞ್ಚಕರಮ್ ॥

(ಭಾಷ್ಯಾರ್ಥ)

ಹೀಗೆ ಈ ರೀತಿಯಲ್ಲಿ ವಾಸುದೇವನಿಗೂ ಮಹಾತ್ಮನಾದ ಪಾರ್ಥನಿಗೂ ನಡೆದ ಈ ಮೇಲೆ ಹೇಳಿದ ಸಂವಾದವನ್ನು ಕೇಳಿದೆನು, ಕೇಳಿದವನಾಗಿರುತ್ತೇನೆ, (ಅದು)

---

1. ಜ್ಞಾನಿಯು ಕೃತಕೃತ್ಯನು. ವ್ಯವಹಾರದೃಷ್ಟಿಯಿಂದ ಅವನು ಆಯಾ ಕಾಲಕ್ಕೆ ಒದಗಿದ್ದನ್ನು ಮಾಡುತ್ತಿರುತ್ತಾನೆ.

ಅದ್ಭುತವಾದದ್ದು ಅತ್ಯಂತವಾಗಿ ವಿಸ್ಮಯಕರವಾದದ್ದು, ರೋಮಹರ್ಷಣವಾದದು ಮೈಕೂದಲನ್ನು ನಿಮಿರಿಸತಕ್ಕದ್ದು.

**ವ್ಯಾಸಪ್ರಸಾದಾಚ್ಛ್ರುತವಾನಿಮಂ ಗುಹ್ಯತಮಂ ಪರಮ್ ।**
**ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ಕಥಯತಃ**
**ಸ್ವಯಮ್ ॥ ೭೫ ॥**

೭೫. ವ್ಯಾಸಪ್ರಸಾದದಿಂದ ಈ ಗುಹ್ಯತಮವಾದ ಪರಯೋಗವನ್ನು ಯೋಗೇಶ್ವರನಾದ ಕೃಷ್ಣನು ಸಾಕ್ಷಾತ್ತಾಗಿ ತಾನೇ ಹೇಳಿದ್ದನ್ನು ಕೇಳಿದೆನು.

(ಭಾಷ್ಯ)

೬೧೫. ತಂ ಚ ಇಮಂ ವ್ಯಾಸಪ್ರಸಾದಾತ್ ತತಃ ದಿವ್ಯಚಕ್ಷುರ್ಲಾಭಾತ್ ಶ್ರುತವಾನ್ ಇಮಂ ಸಂವಾದಂ ಗುಹ್ಯತಮಂ ಪರಂ ಯೋಗಂ ಯೋಗಾರ್ಥತ್ವಾತ್ ಗ್ರನ್ಥೋಽಪಿ ಯೋಗಃ ಸಂವಾದಮ್ ಇಮಂ ಯೋಗಮೇವ ವಾ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ ಕಥಯತಃ ಸ್ವಯಂ ನ ಪರಮ್ಪರಯಾ ॥

(ಭಾಷ್ಯಾರ್ಥ)

ಅಂಥ ಈ (ಯೋಗವನ್ನು), ವ್ಯಾಸರ ಪ್ರಸಾದದಿಂದ ಅವರಿಂದ ದಿವ್ಯಚಕ್ಷುಸ್ಸನ್ನು ಪಡೆದು[1] ಈ ಸಂವಾದವನ್ನು ಕೇಳಿದೆನು ; ಗುಹ್ಯತಮವಾದ ಹೆಚ್ಚಿನ ಯೋಗವನ್ನು–ಗ್ರಂಥವು ಯೋಗವನ್ನು ತಿಳಿಸುವದರಿಂದ ಅದಕ್ಕೂ ಯೋಗವೆಂದೇ ಹೆಸರು. ಅಥವಾ ಈ ಸಂವಾದವೆಂಬ ಯೋಗವನ್ನೇ (ಎಂದಾದರೂ ಅರ್ಥಮಾಡಬಹುದು.)[2] ಯೋಗೇಶ್ವರನಾದ ಕೃಷ್ಣನು ತಾನೇ ನೇರಾಗಿ ಹೇಳುತ್ತಿದ್ದ ಪರಂಪರೆಯಿಂದ (ಹೇಳಿದ್ದನ್ನಲ್ಲ. ಅಂಥ) ಯೋಗವನ್ನು–ಕೇಳಿದೆನು.

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥೭೬॥**

೭೬. ರಾಜನೆ, ಕೇಶವಾರ್ಜುನರ ಈ ಅದ್ಭುತವಾದ ಪುಣ್ಯಸಂವಾದವನ್ನು ನೆನೆಸಿಕೊಂಡು ಮತ್ತೆಮತ್ತೆ ಹರ್ಷಗೊಳ್ಳುತ್ತಿದ್ದೇನೆ.

---

1. ದಿವ್ಯಚಕ್ಷುಸ್ಸಿನಿಂದ ಯುದ್ಧವನ್ನೆಲ್ಲ ನೋಡಿದ್ದಲ್ಲದೆ ಶ್ರೀಕೃಷ್ಣನ ವಚನವೂ ನನಗೆ ಕೇಳಿಸಿತು ಎಂದು ಭಾವ.

2. ಯೋಗವೆಂದರೆ ಜ್ಞಾನವು : ಈ ಗ್ರಂಥವು ಅಥವಾ ಸಂವಾದವು ಯೋಗವನ್ನು ತಿಳಿಸುವದರಿಂದ ಇದಕ್ಕೂ ಯೋಗವೆಂಬ ಹೆಸರು ಬಂದಿದೆ.

(ಭಾಷ್ಯ)

೭೧೬. ಹೇ ರಾಜನ್ ಧೃತರಾಷ್ಟ್ರ, ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮ್ ಇಮಮ್ ಅದ್ಭುತಂ ಕೇಶವಾರ್ಜುನಯೋಃ ಪುಣ್ಯಮ್ ಇಮಂ ಶ್ರವಣಾದಪಿ[1] ಪಾಪ ಹರಂ ಶ್ರುತ್ವಾ ಹೃಷ್ಯಾಮಿ ಚ ಮುಹುರ್ಮುಹುಃ ಪ್ರತಿಕ್ಷಣಮ್[2] ||

(ಭಾಷ್ಯಾರ್ಥ)

ಎಲೈ ರಾಜನೆ, ಧೃತರಾಷ್ಟ್ರರಾಜನೆ, ಈ ಕೇಶವಾರ್ಜುನರ ಅದ್ಭುತವಾದ, ಪುಣ್ಯವಾದ ಕೇಳಿದ ಮಾತ್ರದಿಂದ ಪಾಪವನ್ನು ತೊಲಗಿಸುವ ಸಂವಾದವನ್ನು ನೆನೆನೆನೆದು ಮತ್ತೆ ಮತ್ತೆ ಪ್ರತಿಕ್ಷಣವೂ ನನಗೆ ರೋಮಾಂಚವಾಗುತ್ತಿದೆ.

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ**
**|| ೭೭ ||**

೭೭. ಮತ್ತು ಆ ಹರಿಯ ಅದ್ಭುತವಾದ ರೂಪವನ್ನು ನೆನೆನೆನೆದು ನನಗೆ ಮಹಾ ವಿಸ್ಮಯವಾಗುತ್ತಿದೆ, ಮತ್ತೆಮತ್ತೆ ಹರ್ಷಗೊಳ್ಳುತ್ತಿರುತ್ತೇನೆ.

(ಭಾಷ್ಯ)

೭೧೭. ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮ್ ಅತ್ಯದ್ಭುತಂ ಹರೇಃ ವಿಶ್ವರೂಪಂ ವಿಸ್ಮಯಃ ಮೇ ಮಹಾನ್ ಹೇ ರಾಜನ್ ಹೃಷ್ಯಾಮಿ ಚ ಪುನಃ ಪುನಃ ||

(ಭಾಷ್ಯಾರ್ಥ)

ಆ ಹರಿಯ ಅತ್ಯದ್ಭುತವಾದ ರೂಪವನ್ನು ವಿಶ್ವರೂಪವನ್ನು ನೆನೆನೆನೆದು, ಎಲೈ ರಾಜನೆ, ನನಗೆ ಮಹಾ ವಿಸ್ಮಯವಾಗುತ್ತಿದೆ, ಮತ್ತೆ ಮತ್ತೆ ರೋಮಾಂಚವಾಗುತ್ತಿದೆ.

(ಭಾಷ್ಯ)

೭೧೮. ಕಿಂ ಬಹುನಾ ?

(ಭಾಷ್ಯಾರ್ಥ)

ಹೆಚ್ಚು ಹೇಳಿದ್ದರಿಂದೇನು ?

---

1. ‘ ಪುಣ್ಯಂ ಶ್ರವಣಾದಪಿ ’ ಸಿ|| ; ‘ ಪುಣ್ಯಮಿಮಂ ಶ್ರವಣೇನಾಪಿ’ ಮ||
2. ಮ|| ದಲ್ಲಿಲ್ಲ.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ ೭೮ ॥**

೭೮. ಎಲ್ಲಿ ಯೋಗೇಶ್ವರನಾದ ಕೃಷ್ಣನೋ, ಎಲ್ಲಿ ಧನುರ್ಧರನಾದ ಪಾರ್ಥನೋ ಅಲ್ಲಿ ಶ್ರೀ, ವಿಜಯ, ಭೂತಿ, ಧ್ರುವ ನೀತಿ–ಇವುಗಳು (ಇರುವವು) ಎಂದು ನನ್ನ ಮತವು.

(ಭಾಷ್ಯ)

೬೧೯. ಯತ್ರ ಯಸ್ಮಿನ್ ಪಕ್ಷೇ ಯೋಗೇಶ್ವರಃ ಸರ್ವಯೋಗಾನಾಮ್ ಈಶ್ವರಃ । ತತ್ಪ್ರಭವತ್ವಾತ್ ಸರ್ವಯೋಗಬೀಜಸ್ಯ[1] । ಕೃಷ್ಣಃ[2] ।ಯತ್ರ ಪಾರ್ಥಃ ಯಸ್ಮಿನ್ ಪಕ್ಷೇ ಧನುರ್ಧರಃ ಗಾಣ್ಡೀವಧನ್ವಾ ತತ್ರ ಶ್ರೀಃ ತಸ್ಮಿನ್ ಪಾಣ್ಡವಾನಾಂ ಪಕ್ಷೇ ವಿಜಯಃ । ತತ್ರೈವ ಭೂತಿಃ ಶ್ರಿಯೋ ವಿಶೇಷೋ ವಿಸ್ತಾರಃ ಭೂತಿಃ । ಧ್ರುವಾ ಅವ್ಯಭಿಚಾರಣೀ ನೀತಿಃ ನಯಃ । ಇತಿ ಏವಂ ಮತಿಃ ಮಮ ಇತಿ ॥

(ಭಾಷ್ಯಾರ್ಥ)

ಎಲ್ಲಿ ಯಾವ ಪಕ್ಷದಲ್ಲಿ, ಯೋಗೇಶ್ವರನಾದ ಸರ್ವಯೋಗಗಳಿಗೂ ಒಡೆಯನಾದ–ಏಕೆಂದರೆ ಎಲ್ಲಾ ಯೋಗಗಳ ಬೀಜವೂ ಆತನಿಂದಲೇ ಹುಟ್ಟುವದು. (ಅಂಥ) ಕೃಷ್ಣನು (ಇರುವನೋ), ಎಲ್ಲಿ ಯಾವ ಪಕ್ಷದಲ್ಲಿ, ಧನುರ್ಧರನಾದ ಗಾಂಡೀವವೆಂಬ ಧನುಸ್ಸನ್ನು (ಹಿಡಿದಿರುವ) ಪಾರ್ಥನು (ಇರುವನೋ), ಅಲ್ಲಿ ಶ್ರೀಯು, ಆ ಪಾಂಡವರ ಪಕ್ಷದಲ್ಲಿಯೇ (ಶ್ರೀಯು), ವಿಜಯವು; ಅಲ್ಲಿಯೇ ಭೂತಿಯು–ಶ್ರೀಯವಿಶೇಷವಾದ ವಿಸ್ತಾರಕ್ಕೆ ಭೂತಿ (ಎಂದು ಹೆಸರು)–ಧ್ರುವವಾದ ತಪ್ಪದ ನೀತಿಯು (ರಾಜ) ನೀತಿಯು–ಎಂದು ಹೀಗೆಂದು ನನ್ನ ಮತವು.

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯಸ್ಯ ಶ್ರೀಗೋವಿನ್ದಭಗವತ್ಪೂಜ್ಯಪಾದಶಿಷ್ಯಸ್ಯ

ಶ್ರೀಮಚ್ಛಂಕರಭಗವತಃ ಕೃತೌ ಶ್ರೀಮದ್ಭಗವದ್ಗೀತಾಭಾಷ್ಯೇ

ಅಷ್ಟಾದಶೋಧ್ಯಾಯಃ

**ಓಂ ತತ್ ಸತ್**



---

1. 'ಬೀಜಸ್ಯ ಕೃಷ್ಣಃ' ನಿ॥
2. 'ಸ ಕೃಷ್ಣಃ ಸರ್ವಯೋಗೇಶ್ವರಃ' ಮ॥

# ಹದಿನೆಂಟನೆಯ ಅಧ್ಯಾಯದ ಸಾರ

---

೧–೧೨. ಅರ್ಜುನನು "ಎಲೈ ಹೃಷೀಕೇಶನೆ, ಮಧುಸೂದನನೆ, ಸಂನ್ಯಾಸತ್ಯಾಗಗಳ ತತ್ತ್ವವನ್ನು ವಿಂಗಡಿಸಿ ಹೇಳು" ಎಂದು ಕೇಳಿಕೊಳ್ಳಲು ಶ್ರೀ ಭಗವಂತನಿಂತೆಂದನು: "ಅರ್ಜುನನೆ, ಕಾಮ್ಯಕರ್ಮಗಳನ್ನು ಬಿಡುವದನ್ನು ಸಂನ್ಯಾಸವೆಂದೂ ಸರ್ವಕರ್ಮಫಲತ್ಯಾಗವನ್ನು ತ್ಯಾಗವೆಂದೂ ಕರೆಯುತ್ತಾರೆ. ಸಂನ್ಯಾಸ, ತ್ಯಾಗ–ಎಂಬ ಎರಡು ಶಬ್ದಗಳಿಗೂ ಬಿಡುವದೆಂಬ ಒಂದೇ ಅರ್ಥವಿರುವದು. ಆತ್ಮಜ್ಞಾನಿಯಲ್ಲದ ಮುಮುಕ್ಷುವೂ ಕರ್ಮವನ್ನು ಬಿಡಲೇಬೇಕೆಂದು ಕೆಲವರು ಹೇಳುತ್ತಾರೆ; ಯಜ್ಞದಾನತಪೋದಾನರೂಪವಾದ ನಿತ್ಯಕರ್ಮವನ್ನು ಬಿಡಬಾರದೆಂದು ಮತ್ತೆ ಕೆಲವರೆನ್ನುತ್ತಾರೆ. ಇಲ್ಲಿ ನನ್ನ ನಿಶ್ಚಯವೇನೆಂದರೆ, ಯಜ್ಞದಾನತಪಸ್ಸುಗಳನ್ನು ಬಿಡಬಾರದು; ಅವುಗಳನ್ನು ಸಂಗತ್ಯಾಗಫಲತ್ಯಾಗಪೂರ್ವಕವಾಗಿ ಮಾಡಿದರೆ ಚಿತ್ತಶುದ್ಧಿಯಾಗುತ್ತದೆ. ಆ ಕರ್ಮಗಳನ್ನು ಅವಿವೇಕದಿಂದ ಬಿಟ್ಟರೆ ತಾಮಸತ್ಯಾಗವಾಗುತ್ತದೆ; ಅವು ಕ್ಲೇಶದಾಯಕವೆಂದು ಬಿಟ್ಟರೆ ರಾಜಸತ್ಯಾಗವಾಗುತ್ತದೆ; ಅವುಗಳನ್ನು ಮಾಡುತ್ತಾ ಸಂಗಫಲಗಳನ್ನು ಬಿಟ್ಟರೆ ಸಾತ್ತ್ವಿಕತ್ಯಾಗವಾಗುತ್ತದೆ. ಈ ಸಾತ್ತ್ವಿಕತ್ಯಾಗವನ್ನು ಮಾಡಿದವನು ಕ್ರಮಕ್ರಮವಾಗಿ ಜ್ಞಾನವನ್ನು ಹೊಂದುತ್ತಾನೆ; ದೇಹಾಭಿಮಾನಿಯಾದವನಿಗೆ ಸಂಪೂರ್ಣವಾಗಿ ಕರ್ಮತ್ಯಾಗವನ್ನು ಮಾಡುವದು ಅಶಕ್ಯವಾದ್ದರಿಂದ ಸಾತ್ತ್ವಿಕತ್ಯಾಗಿಯೇ ನಿಜವಾದ ತ್ಯಾಗಿಯೆನಿಸುತ್ತಾನೆ. ಏಕೆಂದರೆ ಅವನಿಗೆ ಜ್ಞಾನವು ಬಂದಬಳಿಕ ಪರಮಾರ್ಥಸಂನ್ಯಾಸವು ದೊರಕಿ ಅನಿಷ್ಟ, ಇಷ್ಟ, ಮಿಶ್ರ–ಎಂಬ ಮೂರುಬಗೆಯ ಕರ್ಮಫಲಗಳೂ ಒಂದಿಷ್ಟೂ ಅಂಟದೆ ಹೋಗುತ್ತವೆ.

೧೩–೧೭. ಯಾವ ಕರ್ಮಕ್ಕಾದರೂ ಶರೀರ, ಕರ್ತೃ, ಕರಣ, ಪ್ರಾಣವ್ಯಾಪಾರ, ದೈವ–ಇವೈದೂ ಕಾರಣವಾಗಿರುತ್ತವೆ. ಆತ್ಮನು ಶುದ್ಧನಾಗಿ ಅಸಂಗನಾಗಿರುವದರಿಂದ ಅವನಿಗೆ ಕರ್ಮದ ಸಂಬಂಧವು ಇರುವದೇ ಇಲ್ಲ. ಅಜ್ಞನು ಇದನ್ನು ಅರಿಯನು. ಆದರೆ ಅಹಂಕಾರವನ್ನು ಮೀರಿದ ಜ್ಞಾನಿಯು ಇದನ್ನು ಅರಿತಿರುವನಾದ್ದರಿಂದ ಅವನು ವ್ಯವಹಾರದೃಷ್ಟಿಯಿಂದ ಯಾವ ಕರ್ಮವನ್ನು ಮಾಡಿದರೂ ಅವನಿಗೆ ಅದರ ಲೇಪವಾಗುವದಿಲ್ಲ. ಆದ್ದರಿಂದಲೇ ಅವನಿಗೆ ಕರ್ಮಬಂಧವಿರುವದಿಲ್ಲ.

೧೮–೩೯. ಕರ್ಮಕ್ಕೆ ಜ್ಞಾತೃ, ಜ್ಞೇಯ, ಜ್ಞಾನ, ಕರ್ತೃ, ಕರ್ಮ, ಕರಣ–ಎಂಬ ತ್ರಿಪುಟಿಯ ಅರಿವು ಅವಶ್ಯವು. ಜ್ಞಾನವಾಗಲಿ, ಕರ್ತೃವಾಗಲಿ, ಕರ್ಮವಾಗಲಿ ತ್ರಿಗುಣಾತ್ಮಕವಾಗಿರುವದರಿಂದ ವಿವೇಕಿಯಾದವನು ಸಾತ್ತ್ವಿಕಜ್ಞಾನವನ್ನು ಪಡೆದು, ಸಾತ್ತ್ವಿಕಕರ್ತೃವಾಗಿ ಸಾತ್ತ್ವಿಕಕರ್ಮವನ್ನೇ ಮಾಡಬೇಕು. ಎಲ್ಲೆಲ್ಲಿಯೂ ಒಬ್ಬ ಪರಮೇಶ್ವರನೇ ಇರುವನೆಂಬುದು ಸಾತ್ತ್ವಿಕಜ್ಞಾನವು; ಸಂಗವಿಲ್ಲದೆ, ಅಹಂಕಾರವಿಲ್ಲದೆ, ಧೃತ್ಯುತ್ಸಾಹಗಳಿಂದ ಕೂಡಿರುವವನು ಸಾತ್ತ್ವಿಕಕರ್ತೃವು; ಸಂಗವಿಲ್ಲದೆ ಫಲಾಸಕ್ತಿಯಿಲ್ಲದೆ, ರಾಗದ್ವೇಷಗಳಿಲ್ಲದೆ ಮಾಡುವದು ಸಾತ್ತ್ವಿಕಕರ್ಮವು. ಇದರಂತೆ ಅಂತಃಕರಣ, ಧೃತಿ–ಇವುಗಳೂ ಸಾತ್ತ್ವಿಕವಾಗಿರಬೇಕು. ತಾನು

ಬಯಸುವ ಸುಖವೂ ಸಾತ್ತ್ವಿಕವಾಗಿರಬೇಕು. ಪ್ರವೃತ್ತಿನಿವೃತ್ತಿಗಳು, ಕಾರ್ಯಾಕಾರ್ಯಗಳು, ಭಯಾಭಯಗಳು—ಇವನ್ನು ವಿಂಗಡಿಸಿ ಅರಿಯಬಲ್ಲ ಬುದ್ಧಿಯು ಸಾತ್ತ್ವಿಕವು; ಮನಃಪ್ರಾಣೇಂದ್ರಿಯಗಳ ವ್ಯಾಪಾರವನ್ನು ತಪ್ಪದೆ ಯೋಗದಿಂದ ಹಿಡಿತದಲ್ಲಿಟ್ಟುಕೊಂಡಿರುವ ಧೃತಿಯು ಸಾತ್ತ್ವಿಕವು; ಮೊದಮೊದಲು ದುಃಖವಾಗಿ ತೋರಿ ಕೊನೆಗೆ ಆನಂದವಾಗಿ ನಿಲ್ಲುವ ಅಭ್ಯಾಸದಿಂದಲೇ ದೊರಕುವ ಮನಃಪ್ರಸನ್ನತೆಯ ಸುಖವೇ ಸಾತ್ತ್ವಿಕವು. ಅಂತೂ ಮನುಷ್ಯನು ತನ್ನ ಶರೀರ, ಕರಣ, ಹೊರಗಿನ ವಿಷಯ—ಇವೆಲ್ಲವೂ ತ್ರಿಗುಣಾತ್ಮಕವಾಗಿರುವವೆಂದೂ ತ್ರಿಗುಣಗಳಲ್ಲಿ ಅಡಕವಾಗದ್ದೇ ಈ ಲೋಕದಲ್ಲಿಲ್ಲವೆಂದೂ ನಂಬಿ ಸಾತ್ತ್ವಿಕವಾದದ್ದನ್ನೇ ಅವಲಂಬಿಸುವದಕ್ಕೆ ಹವಣಿಸುತ್ತಿರಬೇಕು.

೪೦—೪೮. ಶಾಸ್ತ್ರದಲ್ಲಿ ಸಾತ್ತ್ವಿಕಕರ್ಮಗಳನ್ನು ಚಾತುರ್ವರ್ಣ್ಯವಿಭಾಗದಿಂದ ತಿಳಿಸಿಕೊಟ್ಟಿರುತ್ತದೆ. ಶಮದಮಾದಿಗಳು ಬ್ರಾಹ್ಮಣನಿಗೂ, ಶೌರ್ಯಾದಿಗಳು ಕ್ಷತ್ರಿಯನಿಗೂ, ಕೃಷಿಗೋರಕ್ಷಣಾದಿಗಳು ವೈಶ್ಯನಿಗೂ, ಪರಿಚರ್ಯೆಯು ಶೂದ್ರನಿಗೂ ಗುಣಕರ್ಮಗಳಿಗೆ ತಕ್ಕಂತೆ ಶಾಸ್ತ್ರದಲ್ಲಿ ಉಕ್ತವಾಗಿವೆ. ಸರ್ವವ್ಯಾಪಕನೂ, ಸರ್ವಪ್ರವೃತ್ತಿಕಾರಣನೂ ಆಗಿರುವ ಪರಮೇಶ್ವರನ ಅರ್ಚನೆಯೆಂಬ ಭಾವದಿಂದ ತಮ್ಮ ತಮ್ಮ ಕರ್ಮಗಳನ್ನು ಮಾಡುವವರಿಗೆ ಸಿದ್ಧಿಯುಂಟಾಗುತ್ತದೆ. ಆದ್ದರಿಂದ ಮುಮುಕ್ಷುವಾದವನು ಸ್ವಕರ್ಮವನ್ನು ಬಿಡದೆ ಈ ರೀತಿಯಲ್ಲಿ ಮಾಡಬೇಕು.

೪೯—೫೫. ಕರ್ಮದಿಂದ ಆಗುವ ಸಿದ್ಧಿಯು ಚಿತ್ತಶುದ್ಧಿಯು. ಆ ಚಿತ್ತಶುದ್ಧಿಯಿಂದ ನೈಷ್ಕರ್ಮ್ಯವೆಂಬ ಪರಮಸಿದ್ಧಿಯು ಸಂನ್ಯಾಸದ ಮೂಲಕ ದೊರಕುತ್ತದೆ. ಕರ್ಮದ ಸಿದ್ಧಿಯನ್ನು ಪಡೆದುಕೊಂಡವನು ಧೃತಿಯಿಂದ ಮನಸ್ಸನ್ನು ಬಿಗಿಹಿಡಿದುಕೊಂಡು ಹೊರಗಿನ ವಿಷಯಗಳಿಂದ ಮನಸ್ಸನ್ನು ಹಿಂದಕ್ಕೆಳೆದುಕೊಂಡು ರಾಗದ್ವೇಷಗಳಿಲ್ಲದವನಾಗಿ ಆಹಾರವಿಹಾರಗಳಲ್ಲಿ ಯುಕ್ತನಾಗಿ ಏಕಾಂತದಲ್ಲಿಯಾವಾಗಲೂ ಧ್ಯಾನಯೋಗಪರನಾಗಿದ್ದುಕೊಂಡು ಅಹಂಕಾರ ಮಮಕಾರವಿಲ್ಲದವನಾಗಿ ಬ್ರಹ್ಮಸ್ವರೂಪವನ್ನೇ ಪಡೆಯುವದಕ್ಕೆ ಅರ್ಹನಾಗುತ್ತಾನೆ. ಇದಕ್ಕೇ ಜ್ಞಾನನಿಷ್ಠೆಯೆಂದು ಹೆಸರು. ಜ್ಞಾನನಿಷ್ಠನಿಗೆ ಸರ್ವಭೂತಗಳಲ್ಲಿಯೂ ಸಮಬುದ್ಧಿಯುಂಟಾಗುತ್ತದೆ, ಪರಮೇಶ್ವರನ ನಿಜವು ಗೊತ್ತಾಗುತ್ತದೆ, ಆತನ ಸ್ವರೂಪವೇ ಸಿಕ್ಕುತ್ತದೆ.

೫೬—೬೨. "ಇದೆಲ್ಲಕ್ಕೂ ಭಕ್ತಿಯೇ ಕಾರಣವು. ಎಂಥ ದುರಾಚಾರಿಯಾಗಿದ್ದರೂ ಭಗವಂತನ ಆಶ್ರಯದಿಂದ ಸದ್ಗತಿಯನ್ನು ಪಡೆಯುತ್ತಾನೆ. ಆದ್ದರಿಂದ ಸರ್ವಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿ ಯಾವಾಗಲೂ ನನ್ನಲ್ಲಿಯೇ ಚಿತ್ತವನ್ನಿಟ್ಟುಕೊ. ಇದರಿಂದ ಎಲ್ಲಾ ಬಗೆಯ ಕಷ್ಟಗಳನ್ನೂ ದಾಟುವೆ. ಹಾಗಲ್ಲದೆ ನನ್ನ ಮಾತನ್ನು ಕೇಳದೆಹೋಗುವೆಯಾದರೆ ಹಾಳಾಗಿ ಹೋಗುತ್ತೀಯೆ. ನಾನು ಕರ್ಮವನ್ನು ಮಾಡುವದಿಲ್ಲವೆಂದರೂ ಕ್ಷತ್ರಿಯಪ್ರಕೃತಿಯು ನಿನ್ನಿಂದ ಮಾಡಿಸಿಯೇ ತೀರುತ್ತದೆ. ಇದು ಸರ್ವರ ಹೃದಯದಲ್ಲಿಯೂ ಇರುವ ಈಶ್ವರನ ಮಾಯಾವಿಲಾಸವು; ಆದ್ದರಿಂದ ಸರ್ವಭಾವದಿಂದಲೂ ಆತನನ್ನೇ ಶರಣುಹೊಂದು; ಆಗ ಆವನ ಅನುಗ್ರಹದಿಂದ ಶಾಂತಿಯನ್ನೂ ನಿತ್ಯಪದವನ್ನೂ ಪಡೆದುಕೊಳ್ಳುವೆ.

೬೩—೬೬. ಇಗೊ, ನಿನಗೆ ಅತ್ಯಂತ ರಹಸ್ಯವಾದ ಜ್ಞಾನವನ್ನು ಹೇಳಿರುತ್ತೇನೆ. ಇದನ್ನು ಆಲೋಚಿಸಿ ನಿನಗೆ ಹೇಗೆ ತೋರುತ್ತದೆಯೋ ಹಾಗೆ ಮಾಡು. ಪರಮ ರಹಸ್ಯವನ್ನು ಮತ್ತೂ ಒಮ್ಮೆ ಹೇಳುತ್ತೇನೆ ಕೇಳು; ನಿನಗೆ ಇದರಿಂದ ಹಿತವಾಗುತ್ತದೆ. ಯಾವಾಗಲೂ

ನನ್ನಲ್ಲಿಯೇ ಚಿತ್ತವಿಟ್ಟು ನನ್ನ ಕರ್ಮವನ್ನೇ ಮಾಡುತ್ತಾ ನನ್ನ ಭಕ್ತನಾಗಿರು ; ಇದರಿಂದ ನಿನಗೆ ನನ್ನ ಪ್ರಾಪ್ತಿಯೇ ಆಗುವದೆಂದು ಆಣೆಮಾಡಿ ಹೇಳುತ್ತೇನೆ. ಸರ್ವಕರ್ಮಗಳನ್ನೂ ಸಂನ್ಯಾಸ ಮಾಡಿ ನನ್ನೊಬ್ಬನನ್ನೇ ಶರಣುಹೊಂದು ; ನಾನು ನಿನ್ನನ್ನು ಸರ್ವಪಾಪಗಳಿಂದಲೂ ಬಿಡುಗಡೆ ಮಾಡಿಸುವೆನು. ಶೋಕಿಸಬೇಡ.

೬೭. "ಅರ್ಜುನ, ಈ ಶಾಸ್ತ್ರವನ್ನು ತಪಸ್ಸುಮಾಡದವನಿಗಾಗಲಿ, ಭಕ್ತನಲ್ಲದವನಿಗಾಗಲಿ, ಗುರುಶುಶ್ರೂಷೆಯನ್ನು ಮಾಡದಿರುವವನಿಗಾಗಲಿ, ಹೇಳದಿರು. ನನ್ನನ್ನು ಕಂಡರೆ ಅಸೂಯೆಯನ್ನು ತೋರಿಸುವವನಿಗಂತೂ ಹೇಳಲೇಬೇಡ.

೬೮–೭೧. "ಯಾವನು ಈ ಪರಮರಹಸ್ಯವನ್ನು ನನ್ನ ಭಕ್ತರಿಗೆ ತಿಳಿಸುವನೋ ಅವನು ನನ್ನಲ್ಲಿ ಪರಭಕ್ತಿಯನ್ನು ಮಾಡಿದವನಾಗಿರುತ್ತಾನೆ, ನನ್ನನ್ನೇ ನಿಶ್ಚಯವಾಗಿ ಪಡೆಯುತ್ತಾನೆ. ಅಂಥವನಿಗಿಂತ ನನಗೆ ಪ್ರಿಯನಾದವನೇ ಇರುವದಿಲ್ಲ. ಈ ಪುಣ್ಯಕರವಾದ ಸಂವಾದವನ್ನು ಯಾವನು ಓದುವನೋ ಅವನು ಜ್ಞಾನಯಜ್ಞದಿಂದ ನನ್ನನ್ನು ಪೂಜಿಸಿದವನಾಗುವನು. ಯಾವನು ನನ್ನಲ್ಲಿ ಅಸೂಯೆಯಿಲ್ಲದೆ ಶ್ರದ್ಧೆಯಿಂದ ಈ ಸಂವಾದವನ್ನು ಕೇಳುವನೋ ಅವನು ಕೂಡ ಮುಕ್ತನಾಗಿ ಶುಭಲೋಕಗಳನ್ನು ಪಡೆಯುವನು."

೭೨–೭೩. "ಅರ್ಜುನನೆ, ಇದನ್ನೆಲ್ಲ ಚಿತ್ತವಿಟ್ಟು ಕೇಳಿದೆಯಾ ? ಅಜ್ಞಾನದ ಮಬ್ಬು ಹರಿಯಿತೆ ?" ಎಂದು ಭಗವಂತನು ಕೊನೆಯಲ್ಲಿ ಕೇಳಿದ್ದಕ್ಕೆ ಅರ್ಜುನನು ಇಂತೆಂದನು : "ಅಚ್ಯುತನೆ, ನಿನ್ನ ಅನುಗ್ರಹದಿಂದ ಮೋಹವು ತೊಲಗಿತು. ನನಗೆ ಯಾವ ಸಂದೇಹವೂ ಈಗ ಇರುವದಿಲ್ಲ. ಇನ್ನು ನಿನ್ನ ಮಾತಿನಂತೆ ನಡೆಯುವೆನು.''

೭೪–೭೮. ಇಷ್ಟನ್ನೂ ಧೃತರಾಷ್ಟ್ರನಿಗೆ ತಿಳಿಸಿದ ಬಳಿಕ ಸಂಜಯನಿಂತೆಂದನು : ''ಧೃತರಾಷ್ಟ್ರನೆ, ಶ್ರೀಕೃಷ್ಣನಿಗೂ ಅರ್ಜುನನಿಗೂ ನಡೆದ ಈ ಅದ್ಭುತವಾದ ಸಂವಾದವನ್ನು ವ್ಯಾಸರ ಅನುಗ್ರಹದಿಂದ ನಾನು ಕೇಳಿದೆನು. ಅದನ್ನೂ ಆ ಭಗವಂತನ ಅದ್ಭುತವಾದ ವಿಶ್ವರೂಪವನ್ನೂ ನೆನೆಸಿಕೊಂಡರೆ ನನಗೆ ಅಡಿಗಡಿಗೂ ರೋಮಾಂಚವಾಗುತ್ತದೆ. ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣನಿರುವನೋ ಎಲ್ಲಿ ಧನುರ್ಧರನಾದ ಪಾರ್ಥನಿರುವನೋ, ಅಲ್ಲಿ ಸಿರಿಯೂ ಗೆಲವೂ ಏಳಿಗೆಯೂ ಉತ್ತಮವಾದ ರಾಜನೀತಿಯೂ ನೆಲಸಿರುವವೆಂದು ನನ್ನ ಮತವು.''

# ಶ್ಲೋಕಾನುಕ್ರಮಣಿಕೆ

# ಶಬ್ದಾನುಕ್ರಮಣಿಕೆ.

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯಭಾಗದ ಸಂಖ್ಯೆಗಳು. ಬಹಳ ಸಂಖ್ಯೆಗಳಿರುವಲ್ಲಿ ಕೆಲವನ್ನು ಮಾತ್ರ ಕೊಟ್ಟಿದೆ. II ಎಂದರೆ ಎರಡನೆಯ ಸಂಪುಟವೆಂದರ್ಥ. ಅರ್ಧವಿರಾಮದ ಮುಂದೆ ಬರೆದಿರುವ ಸಂಖ್ಯೆಗಳೂ ಎರಡನೆಯ ಸಂಪುಟಕ್ಕೆ ಸೇರಿರುತ್ತವೆ.

---

೩೪೬, ೩೪೭, ೩೪೯, ೩೫೦, ೪೬೧, ೫೦೪ ; ೭೪, ೨೪೫, ೨೮೯, ೩೯೦, ೪೦೪, ೪೦೫, ೪೭೩, ೬೧೧, ೬೧೨.

(2) ಜ್ಞಾನವು ಹುಟ್ಟುವದಕ್ಕೆ ಅಡ್ಡಿಯಾಗಿರುವ ಮನಸ್ಸಿನ ಕಲ್ಮಷ ; ಮಾನಿತ್ವ, ದಂಭಿತ್ವ ಮುಂತಾದದ್ದು, ೨೪೫.

**೧೩. ಅತದ್ಧರ್ಮಾಧ್ಯಾರೋಪಣಮ್ ಅತದ್ಧರ್ಮಾರೋಪಃ**—
ಆತ್ಮನಲ್ಲಿಲ್ಲದ ಧರ್ಮವನ್ನು ಹುಟ್ಟಿ ಹಾಕುವ ಭ್ರಾಂತಿ, ೨೯ ; ೨೭.

**೧೪. ಅದ್ವೈತಾತ್ಮ**—
ತನಗೆರಡನೆಯದಿಲ್ಲದ ಆತ್ಮನು, II ೫೦೨

**೧೫. ಅಧಿಕೃತಃ**—
ಅಧಿಕಾರಿ, ಅನುಷ್ಠಾನಮಾಡಲು ಅರ್ಹನು, ೧೫೦, ೧೬೦, ೧೬೪, ೧೬೯, ೧೭೨, ೧೭೩, ೧೯೫ ; ೪೬೩, ೪೬೪, ೪೭೨, ೪೭೮, ೪೮೦, ೪೮೧.

**೧೬. ಅಧಿಷ್ಠಾನಮ್**—
ಆಶ್ರಯ ೨೧೬ ; ಇಚ್ಛಾದಿಗಳು ತೋರಿಕೊಳ್ಳುವಪಕ್ಕೆ ಆಶ್ರಯವಾದ ಶರೀರ, ೪೮೭.

**೧೭. ಅಧ್ಯಾತ್ಮವಿದ್ಯಾ, ಅಧ್ಯಾತ್ಮಜ್ಞಾನಮ್**—
ಆತ್ಮಸ್ವರೂಪವನ್ನು ಗೊತ್ತುಪಡಿಸುವ ವಿದ್ಯೆ, II ೯೭, ೧೮೯, ೨೪೫.

**೧೮. ಅಧ್ಯಾತ್ಮಶಾಸ್ತ್ರಮ್**—
ಆತ್ಮಸ್ವರೂಪವನ್ನು ತಿಳಿಸುವ ಶಾಸ್ತ್ರ, ೧೦೨.

**೧೯. ಅಧ್ಯಾತ್ಮಮ್**—
(1) ಪ್ರತ್ಯಗಾತ್ಮನಾಗಿರುವ ಬ್ರಹ್ಮಸ್ವರೂಪ, ೪೯೧, ೪೯೫ ; ೩೫೩.
(2) ಶರೀರಕ್ಕೆ ಸಂಬಂಧಪಟ್ಟ II ೨೪೨.

**೨೦. ಅಧ್ಯಾಸಃ**—
ಅದಲ್ಲದ್ದನ್ನು ಅದೆಂದು ತಿಳಿಯುವದು, II ೨೮೩.

**೨೧. ಅನಾತ್ಮಾಧ್ಯಾರೋಪಣಮ್**—
ಆತ್ಮನಲ್ಲದ್ದನ್ನು ಹುಟ್ಟುಗಟ್ಟುವದು, II ೫೫೬.

**೨೨. ಅನಾವರಣಜ್ಞಾನಶಕ್ತಿಃ**—
ಮುಸುಕಿಲ್ಲದ ಜ್ಞಾನಶಕ್ತಿಯುಳ್ಳ ಈಶ್ವರ, ೨೨೯.

**೨೩. ಅನೇಕಚನ್ದ್ರದರ್ಶೀ**—
ಇಬ್ಬರು ಚಂದ್ರರನ್ನು ಕಾಣುವ ಪರೆಗಣ್ಣಿನವ, II ೮೬.

**೨೪. ಅನ್ತಃಕರಣಮ್**—
ಮನಸ್ಸು, ಬುದ್ಧಿ-ಮುಂತಾದ ಹೆಸರಿನ ಒಳಗಿನ ಕರಣ, ೯೭, ೯೯, ೨೬೮, ೨೫೬, ೩೮೭, ೪೨೧, ೪೩೮, ೪೭೮, ೪೯೩, ೫೫೨.

**೨೫. ಅನ್ತರಙ್ಗಮ್**—
ಒಳಗಿನ ಅಂಗ, ಹತ್ತಿರದ ಸಾಧನ, ೩೬೫, ೩೬೯.

**೨೬. ಅನ್ತ್ಯಭಾವವಿಕಾರಃ, ಅನ್ತ್ಯವಿಕ್ರಿಯಾ**—
ವಸ್ತುವಿನ ಮಾರ್ಪಾಡುಗಳಲ್ಲಿ ಕೊನೆಯದು, ನಾಶ, ೩೪, ೩೭ ; ೨೮೫.

**೨೭. ಅನ್ತ್ಯಂ ಪ್ರಮಾಣಮ್**—
ಕೊನೆಯ ಪ್ರಮಾಣ, ಪ್ರಮಾಣವ್ಯವಹಾರವೇ ಸುಳ್ಳೆಂದು ತಿಳಿಸುವ ಶಾಸ್ತ್ರ, ೨೯, ೧೨೯.

**೨೮ ಅನ್ತ್ಯ ವಿಶೇಷಾಃ**—
ನಿತ್ಯವಸ್ತುಗಳಾದ ಆತ್ಮರೇ ಮುಂತಾದವುಗಳಲ್ಲಿ ಪರಸ್ಪರಭೇದವನ್ನು ತಿಳಿಸುವವೆಂದು ವೈಶೇಷಿಕರು ಕಲ್ಪಿಸಿರುವ ಪದಾರ್ಥಗಳು, ೩೫೩.

**೨೯. ಅನ್ಯಾಪೋಹಃ**—
ಅದಕ್ಕಿಂತ ಬೇರೆಯಾದದ್ದನ್ನು ಅಲ್ಲಗಳೆಯುವದು, II ೨೭೧.

**೩೦. ಅಪಕ್ಷಯಃ**—
ಸವೆಯುವದೆಂಬ ಮಾರ್ಪಾಡು, ೩೪, ೩೭.

**೧೬೩. ಜ್ಞಾನಾಙ್ಗಮ್—**
ಜ್ಞಾನವುಂಟಾಗುವದಕ್ಕೆ ಅವಶ್ಯವಾಗಿ ಬೇಕಾದದ್ದು (ಸಂನ್ಯಾಸ), ೧೪೦.

**೧೬೪. ಜ್ಞಾನೈಶ್ವರ್ಯಶಕ್ತಿಬಲವೀರ್ಯತೇಜಾಂಸಿ—**
ಭಗವಂತನ ಗುಣಗಳು, ೧; ೭೦, ೭೮, ೧೧೧, ೪೪೬.

**೧೬೫. ಜ್ಞಾಪಕಮ್—**
ಇದ್ದದ್ದನ್ನು ತಿಳಿಸುವ ಶಾಸ್ತ್ರವಚನ, ೮, ೧೪೨.

**೧೬೬. ಜ್ಞೇಯಮ್—**
(1) ಪರಮಾರ್ಥವಾಗಿ ತಿಳಿಯಬೇಕಾದ ಬ್ರಹ್ಮ, II ೨೪೭, ೨೪೯, ೨೫೦, ೨೫೩, ೨೫೫, ೨೫೬, ೨೫೭, ೨೫೯, ೨೬೦, ೩೪೯. (2) ಅರಿಯಲ್ಪಡತಕ್ಕದ್ದು, II ೪೯೮.

**೧೬೭. ತತ್ತ್ವಜ್ಞಾನಮ್, ತತ್ತ್ವದರ್ಶನಮ್—**
ಪರಮಾರ್ಥವನ್ನು ಅರಿಯುವದು, ೧೪, ೨೯೫ ; ೨೧೦, ೨೪೫, ೩೪೯.

**೧೬೮. ತತ್ತ್ವವಿತ್, ತತ್ತ್ವಜ್ಞಾನೀ-**
ಪರಮಾರ್ಥವನ್ನು ಬಲ್ಲವನು, ೧೩, ೩೯, ೧೯೩, ೨೪೮, ೩೩೫, ೪೬೮, ೪೭೯; ೨೧೦, ೨೬೨.

**೧೬೯. ತನ್ತ್ರೇಣಾನುಷ್ಠಾನಮ್—**
ಒಂದು ಸಾಧನವನ್ನು ಮಾಡಿದ್ದರಿಂದಲೇ ಇನ್ನೊಂದನ್ನು ಮಾಡಿದಂತೆ ಆಗುವದು, II ೫೯೩.

**೧೭೦. ತನ್ಮಾತ್ರಮ್—**
ಒಂದೊಂದೇ ಇರುವ, ಮತ್ತೊಂದರೊಡನೆ ಬೆರೆಯದಿರುವ, ಸೂಕ್ಷ್ಮಭೂತ, ೪೫೧ ; ೩೪೯.

**೧೭೧. ತಿಮಿರದೃಷ್ಟಿಃ, ತೈಮಿರಿಕಃ—**
ಕಣ್ಣುಪರೆಯಿರುವವನು, ಮಿಥ್ಯಾಜ್ಞಾನಿಗೆ ದೃಷ್ಟಾಂತ, II ೨೮೩, ೪೯೧, ೫೫೦.

**೧೭೨. ತ್ರಿಗುಣಾತ್ಮಿಕಾ ಮಾಯಾ, ತ್ರಿಗುಣಾತ್ಮಿಕಾ ಪ್ರಕೃತಿಃ—**
ಮೂರುಗುಣಗಳಿಂದ ಆಗಿರುವ ಅವಿದ್ಯಾಕಲ್ಪಿತವಾದ ಪ್ರಕೃತಿ, ೨, ೩೯; ೨೧೧.

**೧೭೩. ದಮಃ—**
ಹೊರಗಿನ ಇಂದ್ರಿಯಾದಿಗಳನ್ನು ಬಿಗಿಹಿಡಿಯುವದು, ೪೦; ೩೮೬, ೫೩೨.

**೧೭೪. ದೃಷ್ಟನಷ್ಟ—**
ಕಂಡ ಸ್ವಲ್ಪ ಹೊತ್ತಿನಲ್ಲಿಯೇ ನಾಶವಾಗುವ, ಹುಸಿಯಾದ ೫೬; ೩೫೪.

**೧೭೫. ದೃಷ್ಟಾದೃಷ್ಟ—**
ಕಾಣುವ ಈ ಲೋಕದ ಮತ್ತು ಕಾಣದ ಪರಲೋಕದ, ೨೬೭, ೨೬೮, ೨೭೦, ೪೦೪, ೪೨೦, ೫೬೧, ೫೭೦; ೩೧೩, ೩೧೭, ೩೪೩, ೩೬೭, ೪೩೮.

**೧೭೬. ದೇವಯಜ್ಞಃ—**
ಗೃಹಸ್ಥನು ಮಾಡಬೇಕಾದ ಪಂಚಮಹಾಯಜ್ಞಗಳಲ್ಲಿ ಒಂದು, ೧೬೮.

**೧೭೭. ದೇವಾದಿಸ್ಥಾನಮ್—**
ಪ್ರವೃತ್ತಿಧರ್ಮದಿಂದ ಪಡೆಯುವ ದೇವತಾಸಾಯುಜ್ಯವೇ ಮುಂತಾದದ್ದು, ೫.

**೧೭೮. ದೇಹಾನ್ತರಸಮ್ಬನ್ಧಃ—**
ಜೀವನಿಗೆ ಆಗುವ ಮತ್ತೊಂದು ದೇಹದ ಸಂಬಂಧ, ೪೦.

**೧೭೯. ದೇಹೇನ್ದ್ರಿಯಸಙ್ಘಾತಃ, ದೇಹಾದಿಸಙ್ಘಾತಃ—**
ದೇಹವೂ ಇಂದ್ರಿಯಗಳೂ ಒಟ್ಟುಗೂಡಿ ಆತ್ಮನಿಗಾಗಿ ಕೆಲಸಮಾಡುವ ಗುಂಪಾಗಿರುವದು, ೩೪೩, ೩೫೩, ೫೯೭, ೫೯೮, ೫೯೯, ೬೦೦.

**೧೮೦. ದ್ವಂದ್ವಾನಿ—**
ಸುಖದುಃಖಕ್ಕೆ ಕಾರಣವಾದ ಪರಸ್ಪರ ವಿರುದ್ಧವಾದ ಪದಾರ್ಥಗಳು,

ಇಚ್ಛಾದ್ವೇಷಗಳು, ೧೯, ೨೪, ೭೬, ೮೩, ೨೭೨, ೩೨೪, ೪೮೭, ೪೮೮, ೪೮೯.

**೧೮೧. ದ್ವಿಚನ್ದ್ರಾದಿಃ, ಅನೇಕ ಶ್ಚನ್ದ್ರಃ—**
ಇಬ್ಬರು ಚಂದ್ರರೇ ಮುಂತಾದ ಹುಸಿ ತೋರಿಕೆ, II ೨೮೬, ೪೯೧, ೫೫೦.

**೧೮೨. ದ್ವಾದಶಕರಣಾನಿ—**
ಹತ್ತು ಇಂದ್ರಿಯಗಳು, ಮನಸ್ಸು, ಬುದ್ಧಿ, II ೪೮೮.

**೧೮೩. ಧರ್ಮದ್ವಯಮ್—**
ಪ್ರವೃತ್ತಿ, ನಿವೃತ್ತಿ ಎಂಬ ಎರಡು ವೇದೋಕ್ತಧರ್ಮಗಳು, ೨.

**೧೮೪. ಧರ್ಮಾಧರ್ಮೌ—**
ಪಾಪಪುಣ್ಯಗಳು, ೭, ೯, ೪೧, ೧೯೦, ೨೨೯, ೨೩೦, ೨೭೦; ೧೩, ೨೧೧, ೩೪೯, ೩೫೦, ೩೫೧, ೩೯೬, ೪೮೪, ೪೮೯, ೬೮೩, ೫೮೯.

**೧೮೫. ಧಾರಣಾಯೋಗಃ—**
ಪ್ರಾಣವನ್ನು ಮೂರ್ಧಪ್ರದೇಶದಲ್ಲಿ ಧಾರಣೆಮಾಡುವ ಯೋಗ, II ೧.

**೧೮೬ ನಾಡೀ—**
ಕ್ರಮಮುಕ್ತಿಯನ್ನು ಪಡೆಯುವದಕ್ಕೆ ಹೋಗುವ ದ್ವಾರವಾದ ಸುಷುಮ್ನಾ ನಾಡಿ, ೫೦೫, ೫೦೯; ೧.

**೧೮೭. ಧ್ಯಾನಮ್, ಧ್ಯಾನಯೋಗಃ—**
ಜ್ಞಾನಕ್ಕೆ ಬೇಕಾದ ನಿದಿಧ್ಯಾಸನ, ೩೬೫, ೩೬೯, ೩೭೦, ೩೭೩, ೩೭೭: ೭೪, ೧೯೮, ೨೭೮, ೨೭೯, ೫೬೧.

**೧೮೮. ನಿತ್ಯಕರ್ಮ, ನಿಯತಂ ಕರ್ಮ—**
ಶಾಸ್ತ್ರದಲ್ಲಿ ಮಾಡಲೇಬೇಕೆಂದು ವಿಧಿಸಿರುವ ಅಗ್ನಿಹೋತ್ರಾದಿ, ೧೬೧, ೨೫೯, ೨೬೦, ೨೬೨, ೩೭೪, ೪೬೦, ೪೬೧, ೪೭೧, ೪೭೩, ೪೭೬, ೪೭೮, ೫೮೭, ೫೯೦, ೫೯೧, ೫೯೪.

**೧೮೯. ನಿತ್ಯಮುಕ್ತಃ—**
ಯಾವಾಗಲೂ ಮುಕ್ತನು, ಬದ್ಧನಾಗಿ ಮುಕ್ತನಾಗುವ ಸಂಸಾರಿಯಲ್ಲ, ೨೪೪.

**೧೯೦. ನಿತ್ಯಶುದ್ಧಬುದ್ಧಮುಕ್ತ ಸ್ವಭಾವಃ—**
ಯಾವಾಗಲೂ ಕರ್ಮದ ಸೋಂಕಿಲ್ಲದ, ಚೈತನ್ಯಸ್ವರೂಪನಾದ, ಯಾವಾಗಲೂ ಮುಕ್ತನೇ ಆಗಿರುವ, ೨, ೨೨೯, ೪೬೧; ೧೮, ೩೭೭.

**೧೯೧. ನಿತ್ಯೇಶ್ವರಃ—**
ಯಾವಾಗಲೂ ಸ್ವತಂತ್ರನಾಗಿ ಎಲ್ಲರನ್ನೂ ಆಳುವವನು, II ೨೪೪.

**೧೯೨. ನಿರಸ್ತಸರ್ವೋಪಾಧಿಭೇದ, ನಿರುಪಾಧಿಕ—**
ಯಾವದೊಂದು ಉಪಾಧಿಯೂ ಇಲ್ಲದ, ೨೮೨; ೧೮೨, ೨೧೪, ೩೭೫.

**೧೯೩. ನಿರಾಸ್ಪದಾಃ—**
ಯಾವ ಸತ್ಯವಾದ ಆಧಾರವೂ ಇಲ್ಲದ ಹುಸಿತೋರಿಕೆಗಳು, II ೨೫೬.

**೧೯೪. ನಿರ್ಗುಣಃ—**
ಯಾವ ಗುಣವೂ ಇಲ್ಲದ, ಗುಣಿಗುಣಭಾವವಿಲ್ಲದೆ ಚಿನ್ಮಾತ್ರನಾಗಿರುವ, ೪೬೧; ೨೯೧, ೨೯೫.

**೧೯೫. ನಿರ್ವಿಕಲ್ಪ, ನಿರ್ವಿಶೇಷ—**
ಇಂಥದ್ದೆಂಬ ವಿಶೇಷವಿಲ್ಲದ ಆತ್ಮವಸ್ತು, II ೨೮೫, ೨೯೧, ೨೯೫, ೩೪೬.

**೧೯೬. ನಿವೃತ್ತಿಲಕ್ಷಣ—**
ಜ್ಞಾನವೈರಾಗ್ಯರೂಪವಾದ ಧರ್ಮ, ಸಂನ್ಯಾಸ, ೧, ೨೨೧.

**೧೯೭. ನಿಃಶ್ರೇಯಸಮ್—**
ಹೆಚ್ಚಿನ ಶ್ರೇಯಸ್ಸು, ಮುಕ್ತಿ, ೧, ೪, ೬, ೧೫೦, ೨೩೩, ೩೧೫, ೩೨೨, ೩೨೬; ೮೧, ೫೮೫, ೫೮೬,